ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿಯವರ
ಸಮಗ್ರ ಕೃತಿ ಸಂಪುಟ ಮಾಲೆ

೨

ಸಂಪುಟ : ೨

# ಕಥಾಂಜಲಿ – ಚಿಂತನಾಂಜಲಿ – ಸ್ಮರಣಾಂಜಲಿ

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ



ಪ್ರಸಾದ ಪ್ರಕಾಶನ
ಕಲ್ಯಾಣ ನಗರ, [illegible],
ಧಾರವಾಡ -೫೮೦ ೦೦೭

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿಯವರ
ಸಮಗ್ರ ಕೃತಿ ಸಂಪುಟ ಮಾಲೆ

ಸಂಪುಟ : ೩

# ಕಥಾಂಜಲಿ – ಚಿಂತನಾಂಜಲಿ – ಸ್ಮರಣಾಂಜಲಿ

ಲೇಖಕರು

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ

ಸಂಪಾದಕರು

ಡಾ. ಶಾಂತಾ ಇಮ್ರಾಪೂರ
ಪ್ರಾಧ್ಯಾಪಕರು
ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

ಪ್ರಕಾಶಕರು

ಪ್ರಸಾದ ಪ್ರಕಾಶನ
ಕಲ್ಯಾಣ ನಗರ
ಲನೇಕ್ರಾಸ್ ಧಾರವಾಡ – ೫೮೦ ೦೦೭
೨೦೦೯

COMPLETE WORKS OF PROF. LALITAMBA VRUSHABHENDRA SWAMY
VOLUME - 3 : KATHANJALI - CHINTANANJALI - SMARANANJALI

Edited by : PROF. SHANTA IMRAPUR

Published by :
PRASAD PRAKASHAN
Kalyananagar 8th Cross,
Dharawad - 580 007.

Edition : 2009
Copies : 500
Price : Rs. 300
Pages : xl + 510



■■

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿಯವರ
ಸಮಗ್ರ ಕೃತಿ ಸಂಪುಟ ಮಾಲೆ – ೩

ಸಂಪುಟ : ೩ ಕಥಾಂಜಲಿ – ಚಿಂತನಾಂಜಲಿ – ಸ್ಮರಣಾಂಜಲಿ

ಸಂಪಾದಕರು : ಡಾ. ಶಾಂತಾ ಇಮ್ರಾಪೂರ

ಪ್ರಕಾಶಕರು
ಪ್ರಸಾದ ಪ್ರಕಾಶನ
ಕಲ್ಯಾಣ ನಗರ
೮ನೇಕ್ರಾಸ್, ಧಾರವಾಡ –೫೮೦ ೦೦೭

ಮುದ್ರಣ :೨೦೦೯
ಪ್ರತಿಗಳು : ೫೦೦
ಬೆಲೆ : ರೂ. ೩೦೦
ಪುಟಗಳು : xl + 510



■■

ಅಕ್ಷರ ಸಂಯೋಜನೆ ಮತ್ತುಮುದ್ರಣ:
ಪ್ರಿಂಟ್ ಪಾರ್ಕ್
ನಂ. ೧೪೯೬/೪, ಮೂರನೆಯ ಅಡ್ಡರಸ್ತೆ, ಎರಡನೆಯ ಮುಖ್ಯರಸ್ತೆ
ಮರಿಯಪ್ಪನ ಪಾಳ್ಯ, ಮಹಾಕವಿ ಕುವೆಂಪು ರಸ್ತೆ
ಶ್ರೀರಾಂಪುರಂ ಪೋಸ್ಟ್
ಬೆಂಗಳೂರು - ೫೬೦ ೦೨೧.
ದೂರವಾಣಿ : ೦೮೦ - ೨೩೪೨೨೮೩೮

# ೧. ನುಡಿ ನಮನ

ಕಳೆದೆರಡು ದಶಕಗಳ ನಿರ್ವ್ಯಾಜ ಸ್ನೇಹ ಸಂಬಂಧದಲ್ಲಿ ನನಗೆ ಹಿರಿಯರಾಗಿ. ಹಿತೈಷಿಯಾಗಿ, ಪ್ರೀತಿ-ವಾತ್ಸಲ್ಯವನ್ನು ಧಾರೆಯೆರೆದ ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿಯವರ ವ್ಯಕ್ತಿತ್ವ ಮತ್ತು ಕರ್ತೃತ್ವದ ಸ್ಮರಣೆ ನನ್ನ ಪಾಲಿನ ಭಾಗ್ಯ. ಸ್ವಾತಂತ್ರ್ಯಪೂರ್ವದ ದಟ್ಟ ದೇಸೀ ಪರಿಸರದಲ್ಲಿ ಹುಟ್ಟಿ, ಸ್ವಾತಂತ್ರ್ಯೋತ್ತರದ ಆಧುನಿಕ ಭಾರತದ ಆರು ದಶಕಗಳನ್ನು ಕಂಡ ಅವರು ಕಳೆದ ಶತಮಾನದ ವಿಪ್ಲವ ವಿಜಯೋತ್ಸವಗಳಿಗೆ, ಸಮಸ್ಯೆ-ಸವಾಲುಗಳಿಗೆ ಸಾಕ್ಷಿಯಾಗಿದ್ದವರು. ಹೊಸಿಲೊಳಗಿನ ಬದುಕ ಬೆಳಕಿಂಡಿಯ ಮಬ್ಬಿನಲ್ಲಿ, ಕನಸು-ಕಲ್ಪನೆಗಳ ಚಿತ್ತ ಚಿತ್ತಾರಗಳ ಬಣ್ಣವಿಲ್ಲದೆ ಬದುಕು ಸವೆಸಿದ ಅಜ್ಜಿ – ಅವ್ವಂದಿರ ನಿಟ್ಟುಸಿರುಗಳನ್ನು ಕೇಳಿಸಿಕೊಳ್ಳುತ್ತ, ಬಾಲ್ಯ ಕಳೆದ ಲಲಿತಾಂಬಾ ಅವರು ಸಂಪ್ರದಾಯ, ಆಧುನಿಕತೆಯ ಬದುಕು, ಸಂಕ್ರಮಣ ಕಾಲದ ತಲ್ಲಣಗಳಿಗೆ ಸಾಕ್ಷಿಯಾಗಿದ್ದವರು, ಹೊಗೆತುಂಬಿದ ಅಡಿಗೆ ಮನೆಯ ಕತ್ತಲೆಯಿಂದ ಮೊದಲ ಬಾರಿಗೆ ಹೊಸಿಲಾಚೆಯ ನೀಲಿಮೆಗೆ ಮುಖಮಾಡುತ್ತ ನಕ್ಷತ್ರಗಳೊಂದಿಗೆ ಮಾತನಾಡುತ್ತ, ಬದುಕಿನಂಗಳಕ್ಕೆ ಹೆಜ್ಜೆ ಹಾಕಿದ ಆಧುನಿಕ ಸ್ತ್ರೀ ಸಮಾಜದ ಸಾಧನೆ- ಸಂಕಷ್ಟಗಳನ್ನು ಹತ್ತಿರದಿಂದ ಕಂಡವರು. ಉನ್ನತ ಶಿಕ್ಷಣ ಮತ್ತು ಉದ್ಯೋಗದ ಕನಸು, ಹೆಣ್ಣು ಮಕ್ಕಳಿಗೆ ಅಸಾಧ್ಯವಾಗಿದ್ದ ಕಾಲದಲ್ಲಿ ಪದವೀಧರೆಯಾಗಿ, ಉದ್ಯೋಗಸ್ಥೆಯಾಗಿ ಆಧುನಿಕ ಸುಧಾರಣಾವಾದಿ ಆಶಯಗಳಿಗೆ ತಮ್ಮ ಬರವಣಿಗೆಯ ಮೂಲಕ ದನಿನೀಡಿದರು. ತಾವು ಪಡೆದ ಶಿಕ್ಷಣ ಮತ್ತು ಸ್ವಾವಲಂಬನೆಯ ಕಾರಣವಾಗಿ, ಜೀವನಾನುಭವದ ನಿರ್ಭೀತ ಚಿಂತನಶೀಲ ಮಹಿಳೆಯಾಗಿ ಬೆಳೆದರು. ನಿಷ್ಠುರ ಸತ್ಯವನ್ನು ನಿರ್ದಾಕ್ಷಿಣ್ಯವಾಗಿ ಹೇಳಬಲ್ಲ ನೈತಿಕ ಧೈರ್ಯ, ಹಳೆಯದೆಲ್ಲ ಹೊನ್ನಲ್ಲ ಎನ್ನುವ ವೈಚಾರಿಕ ಸ್ಪಷ್ಟತೆ, ಪರಂಪರೆಯನ್ನು ಪರಾಮರ್ಶಿಸುವ ವಿಮರ್ಶನ ಪ್ರಜ್ಞೆಯುಳ್ಳ ಜಾಗೃತ ಮಹಿಳೆಯಾಗಿದ್ದ ಅವರು ತಮ್ಮನ್ನು ತೀವ್ರವಾಗಿ ಕಾಡಿದ ಸಾಮಾಜಿಕ –ಸಾಂಸ್ಕೃತಿಕ ಸಂಗತಿಗಳನ್ನು ಕಥೆ- ಕವನ- ಪ್ರಬಂಧಗಳನ್ನಾಗಿಸಿದರು. ಈವರೆಗೆ ಅವರು ಪ್ರಕಟಿಸಿರುವ ಕೃತಿಗಳು ಹನ್ನೆರಡು. ಬಿಡಿಬಿಡಿಯಾಗಿ ಹಲವಾರು ಪತ್ರಿಕೆ, ಸ್ಮರಣ ಗ್ರಂಥ, ಅಭಿನಂದನ ಗ್ರಂಥಗಳಲ್ಲಿ ಪ್ರಕಟವಾಗಿರುವ ಲೇಖನಗಳು ಇಪ್ಪತ್ತಕ್ಕಿಂತ ಹೆಚ್ಚು, ಸಂಖ್ಯಾ ದೃಷ್ಟಿಯಿಂದ ಪ್ರಕಟಿತ ಕೃತಿಗಳ ಪ್ರಮಾಣ ಕಡಿಮೆಯಾಗಿದ್ದರೂ ಗುಣಾತ್ಮಕ ಸಾಹಿತ್ಯ ರಚನೆಯ

ಮೂಲಕ ಅವರು ಸ್ಮರಣೀಯರಾಗಿದ್ದಾರೆ. ಮೌಲ್ಯ ಶ್ರದ್ಧೆ, ಸಾಮಾಜಿಕ ಕಾಳಜಿ, ಶಿಕ್ಷಣ ಪ್ರೀತಿ, ಸ್ತ್ರೀಪರತೆ, ಅವರ ಸಾಹಿತ್ಯದ ವಿಶೇಷ ಗುಣ. ನಾಗರಿಕ ಸಮಾಜದಲ್ಲಿ ಹೆಚ್ಚುತ್ತಿರುವ ಅಶಿಸ್ತು. ಅನೈತಿಕತೆ. ಅಪ್ರಾಮಾಣಿಕತೆ, ಅಪರಾಧಿ ಪ್ರವೃತ್ತಿಗಳಿಂದ ವಿಚಲಿತರಾಗಿರುವ ಅವರು ಈ ಅಪಾಯಗಳ ಬಗೆಗೆ ಗಂಭೀರವಾಗಿ ಚಿಂತಿಸಿದ್ದಾರೆ. ಪರಿಹಾರಗಳ ಬಗೆಗೆ ಚರ್ಚಿಸಿದ್ದಾರೆ. ಮೂರೂವರೆ ದಶಕಗಳ ತಮ್ಮ ಶಿಕ್ಷಕ ವೃತ್ತಿಯಲ್ಲಿ ಹತ್ತಿರದಿಂದ ಕಂಡ ಸಾಮಾಜಿಕ–ಶೈಕ್ಷಣಿಕ ಪಲ್ಲಟಗಳ ಬಗೆಗೆ ವೈಚಾರಿಕವಾಗಿ ಪ್ರತಿಕ್ರಿಯಿಸಿದ್ದಾರೆ. ದೇಶದ ಅಭಿವೃದ್ಧಿ, ಸಾಮಾಜಿಕ ನೆಮ್ಮದಿ ಮತ್ತು ಯುವ ಜನಾಂಗದ ಕ್ಷೇಮವನ್ನು ಕುರಿತ ಲೇಖನಗಳ ಮೂಲಕ ಜಾಗೃತಿ ಮೂಡಿಸಲು ಪ್ರಯತ್ನಿಸಿದ್ದಾರೆ. ಮಕ್ಕಳ ವ್ಯಕ್ತಿತ್ವ ನಿರ್ಮಾಣದಲ್ಲಿ ಗುಣಾತ್ಮಕ–ನೈತಿಕ ಶಿಕ್ಷಣದ ಅಗತ್ಯ ಮತ್ತು ಸಾಧ್ಯತೆಗಳನ್ನು ಮನಗಾಣಿಸುವ 'ಶಿಕ್ಷಣ ಸಾಹಿತ್ಯ' ರಚನೆ ಅವರ ವಿಶೇಷ ಕೊಡುಗೆ.

ವಿದ್ಯಾಭ್ಯಾಸವನ್ನು ಇಂಗ್ಲೀಷ್ ಮಾಧ್ಯಮದಲ್ಲಿ ಪಡೆದುಕೊಂಡ ಲಲಿತಾಂಬಾ ಅವರು ಕನ್ನಡ ಬರವಣಿಗೆಯನ್ನು ಆಸಕ್ತಿಯಿಂದ ರೂಢಿಸಿಕೊಂಡರೆನ್ನುವುದು ಅವರ ಕನ್ನಡ ಪ್ರೀತಿಗೆ ಉದಾಹರಣೆ. ೭೦ರ ದಶಕದಿಂದ ಕರ್ಮವೀರ, ಸುಧಾ, ಮಯೂರ, ಪ್ರಜಾವಾಣಿ, ಮಲ್ಲಿಗೆ, ತುಷಾರ ಇತ್ಯಾದಿ ಪತ್ರಿಕೆಗಳಲ್ಲಿ ವೈಚಾರಿಕ ಲೇಖನಗಳನ್ನು ಪ್ರಕಟಿಸುವ ಮೂಲಕ ಲೇಖಕಿಯಾಗಿ ರೂಪುಗೊಂಡರು. ಶಾಲೆ ಕಾಲೇಜು ದಿನಗಳಿಂದಲೂ ಕಥೆ–ಕವನಗಳ ಓದು, ರಚನೆಯಲ್ಲಿ ತೊಡಗಿಸಿಕೊಂಡಿದ್ದ ಅವರು ತಮ್ಮ ಬರಹಗಳನ್ನು ಪ್ರಕಟಿಸಿದುದು ತಡವಾಗಿ. 'ಹಸಿರು ಸೀರೆ' ಕಾಲೇಜು ದಿನಗಳಲ್ಲಿ ಬರೆದ ಕಥೆ. ವಿಶ್ವಕನ್ನಡ ಸಾಹಿತ್ಯ ಸಮ್ಮೇಳನ.(೧೯೮೫)ದ ಪ್ರಕಟನೆ 'ಮಹಿಳೆಯರ ಸಣ್ಣ ಕತೆಗಳು' ಸಂಕಲನದಲ್ಲಿ ಪ್ರಕಟವಾಗಿದೆ. ಆಕಾಶವಾಣಿಯಿಂದ ಬಿತ್ತರಗೊಂಡಿರುವ ಕಥೆ, ಕವನ, ಪ್ರಬಂಧ ರೂಪಕಗಳಲ್ಲಿ ಕೆಲವು ಪ್ರಕಟವಾಗಿವೆ. ಪ್ರೊ. ಲಲಿತಾಂಬಾ ಅವರ ಪ್ರಕಟಿತ ಕೃತಿಗಳು. ಒಟ್ಟು ೧೨. ವೈಚಾರಿಕ ಪ್ರಬಂಧ ಸಂಕಲನಗಳು (೨), ವಚನಸಾಹಿತ್ಯ (೨), ಕವನಸಂಕಲನಗಳು (೨), ಸಣ್ಣಕಥಾಸಂಕಲನ (೧), ಮಕ್ಕಳ ಶಿಕ್ಷಣ (೩), ಚರಿತ್ರೆ (೨), ವಚನ ಸಾಹಿತ್ಯ ಮತ್ತು ಶಿವಶರಣರನ್ನು ಕುರಿತು ಬೇರೆ ಬೇರೆ ಗ್ರಂಥಗಳಲ್ಲಿ ಪ್ರಕಟಿಸಿರುವ ಕೆಲವು ಬಿಡಿ ಲೇಖನಗಳು ಲಭ್ಯವಿವೆ.

ಪ್ರೊ. ಲಲಿತಾಂಬಾ ಅವರ ಪುಣ್ಯಸ್ಮರಣೆಯ ನಿಮಿತ್ತ ಅವರ ಪ್ರಕಟಿತ ಸಾಹಿತ್ಯದ ಮೂರು ಸಂಪುಟಗಳು ಪ್ರಕಟಗೊಳ್ಳುತ್ತಿರುವುದು ಅಭಿನಂದನೀಯವಾಗಿದೆ. ಕನ್ನಡದ ಶ್ರೇಷ್ಠ ವಿದ್ವಾಂಸರೂ ನಿವೃತ್ತ ಪ್ರಾಧ್ಯಾಪಕರೂ ಆಗಿರುವ ಪ್ರೊ. ಎಸ್.ಎಂ. ವೃಷಭೇಂದ್ರಸ್ವಾಮಿಯವರು ತಮ್ಮ ಬಾಳಸಂಗಾತಿ ಪ್ರೊ. ಲಲಿತಾಂಬಾ ಅವರ ಸೃಜನಶೀಲತೆ ಮತ್ತು ಸಾಹಿತ್ಯಾಸಕ್ತಿಯನ್ನು ನಿರಂತರ ಪೋಷಿಸಿ ಮಾರ್ಗದರ್ಶನ

ನೀಡಿ ಲೇಖಕಿ ಲಲಿತಾಂಬಾ ಅವರನ್ನು ಬೆಳೆಸಿದವರು. ನಿಜವಾದ ಅರ್ಥದಲ್ಲಿ ಸಂಗಾತಿಯಾಗಿ ಅವರ ಕನಸು-ಆದರ್ಶಗಳಿಗೆ ಜೀವ ತುಂಬಿದ ಅವರು ಈಗ ಲಲಿತಾಂಬಾ ಅವರ ಸಮಗ್ರ ಸಾಹಿತ್ಯ ಪ್ರಕಟಣೆಯ ಮೂಲಕ ಸಲ್ಲಿಸುತ್ತಿರುವ 'ಸಾಹಿತ್ಯ ಸ್ಮರಣಾಂಜಲಿ' ಅನನ್ಯ ಅರ್ಥಪೂರ್ಣ.

ಪ್ರೊ. ಲಲಿತಾಂಬಾ ಅವರ ಸ್ಮರಣಾಂಜಲಿಯಾಗಿ ಪ್ರಕಟಣೆಗೊಳ್ಳುತ್ತಿರುವ ಮೂರು ಸಂಪುಟಗಳು ಅವರ ವೈವಿಧ್ಯಮಯವಾದ ಜೀವನಾಸಕ್ತಿಯನ್ನು, ಅನುಭವದ ಸಮಗ್ರತೆ ಅಭಿವ್ಯಕ್ತಿಯ ಸ್ವಂತಿಕೆ ಮತ್ತು ಸೃಜನಶೀಲತೆಯ ವಿಶಿಷ್ಟತೆಗೆ ನಿದರ್ಶನಗಳಾಗಿವೆ.

ಸಂಪುಟ ೧ ವಚನಾಂಜಲಿ-ಕಾವ್ಯಾಂಜಲಿ
ಸಂಪುಟ ೨ ಚರಿತ್ರ-ಶಿಕ್ಷಣಾಂಜಲಿ
ಸಂಪುಟ ೩ ಕಥಾಂಜಲಿ-ಚಿಂತನಾಂಜಲಿ
(ಸ್ಮರಣಾಂಜಲಿ-ಶ್ರದ್ಧಾಂಜಲಿ)

ಮೊದಲ ಸಂಪುಟ 'ವಚನಾಂಜಲಿ-ಕಾವ್ಯಾಂಜಲಿ'ಯಲ್ಲಿ ಲಲಿತಾಂಬಾ ಅವರ ವಚನಗಳ ವ್ಯಾಖ್ಯಾನ ಕೃತಿ 'ವಚನಾಂಜಲಿ'(೧೯೬೫) ಮತ್ತು ಹತ್ತು (೧೦) ಶಿವಶರಣೆಯರನ್ನು ಕುರಿತ ವಿಮರ್ಶಾತ್ಮಕ ಕೃತಿ, 'ಶಿವಶರಣೆಯರು' (೧೯೯೭). ಎರಡು ಕವನಸಂಕಲನಗಳು 'ಮುನಿದೆ ಏಕಮ್ಮಾ ನೆಲದಾಯಿ'(೧೯೬೫) ಹಣತೆ ಹಚ್ಚಿ ಹುಡುಕುತಿರುವೆ (೨೦೦೩) ಜೊತೆಗೆ, ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಬಿಡಿ ಲೇಖನಗಳು ಮತ್ತು ಕೆಲವು ಅಪ್ರಕಟಿತ ಕವನಗಳು ಮುಕ್ತಕದಂತಹ 'ಮೊಟಕು'ಗಳು ಸಮಾವೇಶಗೊಂಡಿವೆ. 'ರಸಿಕ ದಂಪತಿಯ ಪ್ರೇಮ ಪತ್ರ'ಗಳು ಇನ್ನೂ ಪ್ರಕಟವಾಗಬೇಕಾದ ಕೃತಿ.

ವಚನ ಸಾಹಿತ್ಯವನ್ನು ಅದರ ಉದಾರ ಮಾನವೀಯ ಮೌಲ್ಯಗಳಿಗಾಗಿ ಮೆಚ್ಚಿಕೊಂಡಿದ್ದ ಲಲಿತಾಂಬಾ ಅವರು ವಚನಗಳ ಸಾಮಾಜಿಕ-ಸಾಂಸ್ಕೃತಿಕ ಜೀವಪರ ಆಶಯಗಳನ್ನು ಮತ್ತು ಆಧ್ಯಾತ್ಮಿಕ ಆಯಾಮಗಳನ್ನು ಗಂಭೀರವಾಗಿ ಅಧ್ಯಯನ ಮಾಡಿ ರಚಿಸಿರುವ ಕೆಲವು ಬಿಡಿ ಲೇಖನಗಳು ಬೇರೆ ಬೇರೆ ಸ್ಮರಣಸಂಚಿಕೆ ಅಭಿನಂದನ ಗ್ರಂಥಗಳಲ್ಲಿ ಪ್ರಕಟವಾಗಿವೆ. ಶಿವಶರಣರ ಸಮಾಜಮುಖಿ ಆದರ್ಶಗಳು ದೈನಂದಿನ ಬದುಕಿನಲ್ಲಿ ಸಾಕಾರವಾಗಬೇಕಾದರೆ ವಚನಗಳ ತಾತ್ಪರ್ಯವನ್ನು ತಿಳಿಯಾದ ಭಾಷೆಯಲ್ಲಿ ಮನಮುಟ್ಟುವಂತೆ ಜನಸಾಮಾನ್ಯರಿಗೆ ತಲುಪಿಸುವ ಬರಹಗಳ ಅಗತ್ಯವಿರುವುದನ್ನು ಮನಗಂಡಿದ್ದ ಅವರು, ಶಿವಶರಣರ ಆಯ್ದುವಚನಗಳನ್ನು ಸರಳ ವಿವರಣೆ-ವಿಶ್ಲೇಷಣೆಯೊಂದಿಗೆ ರಚಿಸಿದ ಕೃತಿ 'ವಚನಾಂಜಲಿ'. ೧೭೪ ವಚನಗಳ ಅಂತರಂಗವನ್ನು ಪ್ರವೇಶಿಸಿ, ಅರ್ಥ-ಭಾವ-

-ಆದರ್ಶದ ಲೋಕವನ್ನು ಅನಾವರಣಗೊಳಿಸಿದ್ದಾರೆ. ಲಲಿತಾಂಬಾ ಅವರ ವಚನಾಭ್ಯಾಸದ ಗಂಭೀರ ಕಾಳಜಿಗಳನ್ನು, ಪ್ರತಿನಿಧಿಸುವ ಈ ಕೃತಿ ಹಲವು ಪ್ರಶಸ್ತಿಗಳಿಗೆ ಪಾತ್ರವಾಗಿದೆ. ಶಿವಶರಣರ ಸ್ತ್ರೀಪರ ಮಾನವತಾವಾದಿ ವೈಚಾರಿಕತೆಗೆ ಸಾಕ್ಷಿಯಾಗಿದ್ದ ೧೦ ಶಿವಶರಣೆಯರ ಸಾಧನೆಯನ್ನು ಪರಾಮರ್ಶಿಸುವ ಕೃತಿ "ಶಿವಶರಣೆಯರು".

ಕವಯಿತ್ರಿ ಲಲಿತಾಂಬಾ ಅವರ ಸಾಮಾಜ ಪ್ರತಿಸ್ಪಂದನೆಗಳನ್ನೂ ಮಹಿಳಾಪರತೆ, ಮೌಲ್ಯ ಚಿಂತನೆಗಳನ್ನೂ ಪ್ರತಿನಿಧಿಸುವ ಕವನಸಂಕಲನಗಳು 'ಮುನಿದೆ ಏಕಮ್ಮಾ ನೆಲದಾಯಿ' ಮತ್ತು 'ಹಣತೆ ಹಚ್ಚಿ ಹುಡುಕುತಿರುವೆ.' ಸಮಕಾಲೀನ ಸಾಮಾಜಿಕ ತಲ್ಲಣಗಳಿಗೆ, ಸಾಂಸ್ಕೃತಿಕ ಪಲ್ಲಟಗಳಿಗೆ ತೀವ್ರವಾಗಿ ಪ್ರತಿಕ್ರಿಯಿಸುವ ಕವನಗಳಲ್ಲಿ, ಭೂಕಂಪ, ಬರಗಾಲ, ಭ್ರಷ್ಟರಾಜಕೀಯ, ಮೌಲ್ಯಪತನ ಕುರಿತು ಲಲಿತಾಂಬಾ ಅವರ ನೋವು-ಹತಾಶೆಗಳು ಕೆಲವೊಮ್ಮೆ ವ್ಯಂಗ್ಯ ವಿಡಂಬನೆಯ ರೂಪದಲ್ಲಿ ವ್ಯಕ್ತವಾಗಿವೆ.

ಪ್ರೊ. ಲಲಿತಾಂಬಾ ಅವರ ಸಾಹಿತ್ಯ ಸಂಪುಟಗಳ ಸಂಪಾದನೆಯ ಕೆಲಸದಲ್ಲಿ ಕೈಜೋಡಿಸುವ ಅವಕಾಶ ನನಗೆ ನೀಡಿದವರು ನನ್ನ ವಿದ್ಯಾಗುರುಗಳಾದ ಪ್ರೊ. ಎಸ್. ಎಂ. ವೃಷಭೇಂದ್ರಸ್ವಾಮಿಯವರು. ಲಲಿತಾಂಬಾ ಅವರ ಮಾತೃವಾತ್ಸಲ್ಯಕ್ಕೆ ಕೃತಜ್ಞತೆ ಸಲ್ಲಿಸುವ ಸದವಕಾಶ ದೊರಕಿಸಿ ಸ್ಮರಣಾಂಜಲಿಯ ಸಂಪುಟಗಳನ್ನು ಸಿದ್ಧಪಡಿಸಲು ಮಾರ್ಗದರ್ಶನ ನೀಡಿದ ಗುರುಗಳ ಶಿಷ್ಯವಾತ್ಸಲ್ಯಕ್ಕೆ ನಾನು ಋಣಿಯಾಗಿದ್ದೇನೆ. ಲಲಿತಾಂಬಾ ಅವರೊಂದಿಗಿನ ಒಡನಾಟದಲ್ಲಿ ಅವರಿಂದ ಕೇಳಿ ತಿಳಿದ ಮಾಹಿತಿಗಳು, ಅವರ ಲೌಕಿಕದ ಹೆಜ್ಜೆಗಳನ್ನು ಗುರುತಿಸುವ ಅಧಿಕೃತ ಆಕರಗಳಾಗಿದ್ದರೆ, ಅವರ ವ್ಯಕ್ತಿತ್ವ ಮತ್ತು ಸೃಜನಶೀಲತೆಯ ಲಯಗಳನ್ನು ಅರಿಯುವಲ್ಲಿ ಅವರ ಕೃತಿಗಳೇ ಪ್ರಮಾಣ. ಈ ಎಲ್ಲವನ್ನು ಸಾಧ್ಯವಾಗಿಸಿದ ಪೂಜ್ಯರಾದ ಪ್ರೊ. ಲಲಿತಾಂಬಾ – ಪ್ರೊ. ವೃಷಭೇಂದ್ರಸ್ವಾಮಿ ದಂಪತಿಗಳ ಪ್ರೀತಿ – ವಾತ್ಸಲ್ಯಕ್ಕೆ ಆದರದ ನಮನಗಳು.

೨೨-೦೭-೨೦೦೯ ಶಾಂತಾ ಇಮ್ರಾಪೂರ

ಧಾರವಾಡ.

■

## 'ಶಬ್ದ............ ನಿಶ್ಯಬ್ದದ ನಡುವೆ'

## ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ............ ಅವರ ಜೀವನ-ಸಾಹಿತ್ಯ ಸಾಧನೆ (೧೯೩೦-೨೦೦೭)

### ಪಕ್ಷಿನೋಟ

ಕಳೆದ ಶತಮಾನದುದ್ದಕ್ಕೂ ಕನ್ನಡದ ಬೌದ್ಧಿಕ ಲೋಕವನ್ನು ಕಾಡಿದ ಪರಂಪರೆ ಮತ್ತು ಆಧುನಿಕತೆಯ ಸಂಧಿಕಾಲದ ಸಾಂಸ್ಕೃತಿಕ ಬಿಕ್ಕಟ್ಟುಗಳಿಗೆ ತಮ್ಮ ಬರಹಗಳ ಮೂಲಕ ಪ್ರತಿಕ್ರಿಯಿಸಿದ ಪ್ರಗತಿಶೀಲ ಲೇಖಕಿ ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ. ೧೯೬೦ರ ದಶಕದಲ್ಲಿ ಬರಹ ಪ್ರಾರಂಭಿಸಿ, ಮುಂದಿನ ನಾಲ್ಕೂವರೆ ದಶಕಗಳಲ್ಲಿ ಕವನ -ಕತೆ- ಪ್ರಬಂಧ-ಚರಿತ್ರೆ-ನಾಟಕ-ರೂಪಕ-ವಚನ ವ್ಯಾಖ್ಯಾನ- ಮಕ್ಕಳ ಸಾಹಿತ್ಯ- ವೈಚಾರಿಕ ಲೇಖನಗಳ ಮೂಲಕ ಮಕ್ಕಳು-ಮಹಿಳೆ-ಸಮಾಜ ಮತ್ತು ದೇಶದ ಅಭಿವೃದ್ಧಿಯ ತಮ್ಮ ಕನಸುಗಳನ್ನು ಹಂಚಿಕೊಳ್ಳುತ್ತ ಬದುಕಿದ ಸಮಷ್ಠಿ ಕಾಳಜಿಯ ಸೃಜನಶೀಲ ಚೇತನ. ನಾಲ್ಕು ದಶಕಗಳವರೆಗೆ ಶಿಕ್ಷಕಿಯಾಗಿ ಸೇವೆ ಸಲ್ಲಿಸಿದ ಅವರು, ಮಕ್ಕಳ ವ್ಯಕ್ತಿತ್ವ ವಿಕಸನ ಮತ್ತು ಆದರ್ಶ, ಯುವ ಜನಾಂಗದ ನಿರ್ಮಾಣದಲ್ಲಿ ಶಿಕ್ಷಣದ ಪಾತ್ರವನ್ನು ಗಂಭೀರವಾಗಿ ಯೋಚಿಸಿದ ಶಿಕ್ಷಣತಜ್ಞೆ. ಹಳತು - ಹೊಸದರ ಸಂಧಿಕಾಲದ ಸುಳಿಯಲ್ಲಿರುವ ಆಧುನಿಕ ಸ್ತ್ರೀ ಸಮಾಜದ-ಕೌಟುಂಬಿಕ ಸಾಮಾಜಿಕ ತಲ್ಲಣಗಳನ್ನು ಕುರಿತು ಪ್ರಗತಿಶೀಲರಾಗಿ ಯೋಚಿಸಿ ಸೃಜನಾತ್ಮಕವಾಗಿ ಪ್ರತಿಕ್ರಿಯಿಸಿದ ಅವರು ಮಹಿಳಾಪರ ಕಾಳಜಿಯುಳ್ಳ ಆಧುನಿಕ ಪ್ರಜ್ಞೆಯ ಲೇಖಕಿಯಾಗಿ ಗಮನ ಸೆಳೆಯುತ್ತಾರೆ.

ಉತ್ತಮ ಜೀವನಪಾಠಗಳಾಗಿರುವ ಮೌಲಿಕ ಸಾಹಿತ್ಯವನ್ನು ರಚಿಸಿದ ಪ್ರೊ.ಲಲಿತಾಂಬಾ ಅವರು ಆಧುನಿಕತೆಯ ಅಬ್ಬರದಲ್ಲಿ ಕೊಚ್ಚಿಹೋಗುತ್ತಿರುವ ಭಾರತದ ಕುಟುಂಬ ಸಂಸ್ಕೃತಿಯ ರಚನಾತ್ಮಕ ಮೌಲ್ಯಗಳ ಉಳಿವಿಗೆ ದನಿ ಎತ್ತಿದ ಪ್ರಬುದ್ಧ ಚಿಂತಕರಾಗಿಯೂ ಆದರಣೀಯರಾಗಿದ್ದಾರೆ.

ಪ್ರೊ. ಲಲಿತಾಂಬಾ ಅವರ ಲೆಕ್ಕಣಿಕೆ ಈಗ ಸ್ತಬ್ಧವಾಗಿದೆ, ಮಾತು ಮೌನವಾಗಿದೆ.

ಆದರೆ ಅವರು ತಮ್ಮ ಬರಹಗಳಲ್ಲಿ ಬದುಕಿದ್ದಾರೆ. ತಮ್ಮ ಚಿಂತನಶೀಲ ಬರಹಗಳ ಮೂಲಕ ಪ್ರಜ್ಞಾವಂತ ಮನಸ್ಸುಗಳಲ್ಲಿ, ಅವರು ಮೂಡಿಸಿದ ವೈಚಾರಿಕ ಸಂಚಲನಗಳು ತಮ್ಮ ಪರಿಧಿಯನ್ನು ವಿಸ್ತರಿಸಿಕೊಳ್ಳಬಲ್ಲ ಜೀವಂತಿಕೆಯಿಂದ ಇಂದಿಗೂ ಪ್ರಸ್ತುತವಾಗಿವೆ. ಪ್ರೊ.ಲಲಿತಾಂಬಾ ಅವರು ದೈವಾಧೀನರಾಗಿ (೧೩-೮-೨೦೦೭) ಎರಡು ವರ್ಷ ಗತಿಸಿವೆ. ಕರ್ತಾರನ ಕಮ್ಮಟದಲ್ಲಿ 'ಅಪರಂಜಿ'ಯಾಗಿ ಮಹಾದೇವನ ಮಹಾಮನೆಗೆ ಎದ್ದು ಹೋಗಿದ್ದಾರೆ. ಅವರ ಸಾರ್ಥಕ ಬದುಕಿನ ಸ್ಮರಣೆಯ ರೂಪದಲ್ಲಿ ಅವರ ಸಮಗ್ರ ಪ್ರಕಟಿತ ಸಾಹಿತ್ಯದ ಮೂರು ಸಂಪುಟಗಳು ಪ್ರಕಟವಾಗುತ್ತಲಿವೆ. ಕೃತಿದರ್ಶನಕ್ಕೆ ಹಿನ್ನೆಲೆಯಾಗಿದೆ ಕೃತಿಚೈತನ್ಯದ ದರ್ಶನ.

**ಮನೆತನದ ಹಿನ್ನಲೆ:**

೧೯ನೆಯ ಶತಮಾನದ ಉತ್ತರಾರ್ಧ, ವಸಾಹತು ಆಡಳಿತದ ಕಾಲವದು. ಆಧುನಿಕತೆಯ ತಿಳಿಗಾಳಿ ಆಗೊಮ್ಮೆ-ಈಗೊಮ್ಮೆ ಬೀಸಲಾರಂಭಿಸಿದ ಪರಿವರ್ತನೆಯ ಪ್ರಾರಂಭದ ಸಂದರ್ಭ. ಆಂಗ್ಲ ಸರಕಾರದ ಕ್ಷಣಿಕ ಧೋರಣೆಗಳು ಸ್ತ್ರೀಸಮಾಜ ಸುಧಾರಣೆಯ ಪ್ರಯತ್ನಗಳು ನಿಧಾನವಾಗಿ ಮೇಲ್ವರ್ಗದವರ ಮನಸ್ಸಿನಲ್ಲಿ ಪ್ರವೇಶ ಪಡೆಯಲಾರಂಭಿಸಿದ್ದವು. ಹೆಣ್ಣು ಮಕ್ಕಳಿಗಾಗಿ ಪ್ರಾಥಮಿಕ - ಮಾಧ್ಯಮಿಕ ಶಾಲೆಗಳು ದೊಡ್ಡ ದೊಡ್ಡ ಊರುಗಳಲ್ಲಿ ಪ್ರಾರಂಭವಾಗುತ್ತಿದ್ದ ಸಂದರ್ಭ. ಕೃಷಿ-ವಾಣಿಜ್ಯ-ವ್ಯಾಪಾರ ಜನಜೀವನದ ಮುಖ್ಯ ವೃತ್ತಿಗಳಾಗಿದ್ದು ಸಾರಿಗೆ-ಸಂಪರ್ಕ ನಾಡಿನ ಒಳಭಾಗಗಳಲ್ಲಿ ವಿರಳವಾಗಿದ್ದವು. ನಗರಗಳ ವಿದ್ಯಮಾನಗಳಿಗೂ ಒಳನಾಡಿನ ಬದುಕಿಗೂ ವಿಶೇಷ ಸಂವಹನ-ಸಂಪರ್ಕವಿಲ್ಲದಿದ್ದ ಪರಿಸರದಲ್ಲಿ ಲಲಿತಾಂಬಾ ಅವರ ಮನೆತನದ ಹಿರಿಯರು ಚಿಕ್ಕಮಂಗಳೂರು ಜಿಲ್ಲೆಯ ಕಡೂರು ತಾಲೂಕಿನ ಪುಟ್ಟ ಗ್ರಾಮ ಬೀರೂರಿನಲ್ಲಿ ನೆಲೆಸಿದ್ದರು. ಬೀರೂರಿನ ಶಿವಲಿಂಗಪ್ಪಯ್ಯ ಉಬ್ರಾಣಿಮಠ ಅವರದು ಒಂದು ಪ್ರತಿಷ್ಠಿತ ಸಂಪ್ರದಾಯಸ್ಥ ಆರಾಧ್ಯ ಜಂಗಮ ಕುಟುಂಬ. ದಾನ-ಧರ್ಮ-ದಾಸೋಹ-ಆಚಾರ-ವಿಚಾರ ಸಂಪನ್ನತೆಯಿಂದ ಸಮಾಜದ ಗಣ್ಯವ್ಯಕ್ತಿಗಳಾಗಿ ಜನಾನುರಾಗಿಗಳಾಗಿದ್ದ ಶಿವಲಿಂಗಪ್ಪಯ್ಯನವರು ಶ್ರೀಮತಿ ಲಲಿತಾಂಬಾ ಅವರ ಅಜ್ಜಂದಿರು. (ತಂದೆಯ ತಂದೆ) ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಕಾಲದಲ್ಲಿ ೧೪ವರ್ಷಗಳ ಕಾಲ ಮೈಸೂರು ಅಸೆಂಬ್ಲಿಯ ಸದಸ್ಯರಾಗಿ, ಬೀರೂರಿನ ನಗರಸಭೆಯ ಅಧ್ಯಕ್ಷರಾಗಿ, ನ್ಯಾಯ ನಿರ್ಣಯ ಸಮಿತಿಯ ಸದಸ್ಯರಾಗಿ ಸಾರ್ವಜನಿಕ ಜೀವನದಲ್ಲಿ ಗಣ್ಯರೆನಿಸಿದ್ದರು. ತಮ್ಮ ಸಚ್ಚಾರಿತ್ರ್ಯ, ಪರೋಪಕಾರ ಗುಣದಿಂದ ಬ್ರಿಟಿಶ್ ಸರಕಾರದ ವಿಶ್ವಾಸವನ್ನು ಸಂಪಾದಿಸಿದ್ದ ಅವರಿಗೆ, ಸೊಲ್ಲಾಪುರದ ವಾರದ ಮಲ್ಲಪ್ಪನವರು ಮತ್ತು ಬಳ್ಳಾರಿಯ ಅಲ್ಲಂ ಕರಿಬಸಪ್ಪನವರು ಸ್ನೇಹಿತರು. ಶಿಕ್ಷಣ ಪ್ರೇಮಿಗಳಾಗಿದ್ದ ಶಿವಲಿಂಗಪ್ಪಯ್ಯನವರು ಬಡವಿದ್ಯಾರ್ಥಿಗಳಿಗೆ ಮನೆಯಲ್ಲಿ

ವಾರಾನ್ನ-ವಸತಿ ವ್ಯವಸ್ಥೆಯನ್ನು ಒದಗಿಸಿ, ಸಮಾಜದ ಪ್ರಗತಿಗೆ ಕೈಜೋಡಿಸಿ ತಮ್ಮ ಔದಾರ್ಯ-ಸರಳತೆ ಸಜ್ಜನಿಕೆಯಿಂದ ಹೆಸರು ಮಾಡಿದ್ದರು. ಅಡಿಕೆ, ತೆಂಗು ತೋಟದ ಮಾಲೀಕರಾಗಿ, ಆ ನಾಡಿನ ಗಣ್ಯ ಮನೆತನದ ಹಿರಿಯರಾಗಿದ್ದ ಶಿವಲಿಂಗಪ್ಪನವರದು ತುಂಬಿದ ಅವಿಭಕ್ತ ಕುಟುಂಬ. ಮಡದಿ ನಂಜುಂಡಮ್ಮ (ಲಲಿತಾಂಬಾ ಅವರ ಅಜ್ಜಿ) ದೊಡ್ಡ ಕುಟುಂಬದ ಹೊಣೆಯನ್ನು ನಗುನಗುತ್ತ ನಿರ್ವಹಿಸುತ್ತಿದ್ದ ಸಾತ್ವಿಕ ಜೀವ. ಶಿವಲಿಂಗಪ್ಪಯ್ಯನವರ ಮಗ ಶ್ರೀಕಂಠಶರ್ಮರು ಲಲಿತಾಂಬಾ ಅವರ ತಂದೆ. ಮನೆತನದ ಉನ್ನತ ಸಂಸ್ಕಾರದ ಪ್ರತಿನಿಧಿಯಂತಿದ್ದ ಶ್ರೀಕಂಠ ಶರ್ಮರು ಶಿಕ್ಷಣ ಪ್ರೇಮಿಗಳು. ತಮ್ಮ ತಂದೆಯಂತೆಯೆ ದಾನ-ಧರ್ಮ ಆಚಾರಶುದ್ಧಿಯುಳ್ಳ ಲಿಂಗಪೂಜಾನಿಷ್ಠರು. ಲಲಿತಾಂಬಾ ಅವರ ತಾಯಿ ಗಿರಿಜಾಂಬಾ ಸದ್ಗೃಹಿಣಿ. ಎಂಟು ಮಕ್ಕಳ ತುಂಬು ಕುಟುಂಬದ ಜವಾಬ್ದಾರಿಗಳನ್ನು ನಿಷ್ಠೆಯಿಂದ ನಿರ್ವಹಿಸುತ್ತಲೇ, ಓದಿನ ಹವ್ಯಾಸವನ್ನು ರೂಢಿಸಿಕೊಂಡಿದ್ದ ಸದಭಿರುಚಿಯ ಸುಸಂಸ್ಕೃತ ಮಹಿಳೆ. ಮೂರು ಗಂಡು ಐದು ಹೆಣ್ಣು ಮಕ್ಕಳ ಪರಿವಾರದಲ್ಲಿ ಲಲಿತಾಂಬಾ ಎರಡನೆಯ ಮಗಳು, ಹುಟ್ಟಿದ್ದು ಬೀರೂರಿನಲ್ಲಿ (೨೩-೮-೧೯೩೦) ಗೌರಿ ಹುಣ್ಣಿಮೆಯ ದಿನ.

## ಜಾಣ ಮಗಳು- ಯೋಗ್ಯ ಶಿಕ್ಷಣ:

ಲಲಿತಾಂಬಾ ಅವರ ಕೌಟುಂಬಿಕ ಪರಿಸರವು ಅವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಮಹತ್ವದ ಪಾತ್ರವಾಡಿದೆ. ಸ್ತ್ರೀ ಶಿಕ್ಷಣದ ಬಗೆಗೆ ಸಾಮಾಜಿಕ ಪರಿಸರದಲ್ಲಿ ವಿಶೇಷ ಒಲವಿರದಿದ್ದ ಕಳೆದ ಶತಮಾನದ ಪೂರ್ವಾರ್ಧದ ಕಾಲವದು. ಸಂಪ್ರದಾಯಗಳ ಹಿಡಿತ ಪ್ರಬಲವಾಗಿದ್ದು, 'ಹೆಣ್ಣುಮಕ್ಕಳು ಒಳ್ಳೆಯ ಗೃಹಿಣಿಯಾದರೆ ಸಾಕು' ಎನ್ನುವ ನಂಬಿಕೆ ಬಲವಾಗಿದ್ದ ಸಂದರ್ಭ; ಮಧ್ಯದ ಮನೆಯ ನಾಲ್ಕು ಗೋಡೆಗಲ್ಲಿಯೇ ಮಹಿಳೆಯರ ಬದುಕು ಕಳೆದುಹೋಗುತ್ತಿದ್ದ ಅಂದಿನ ಪರಿಸರದಲ್ಲಿ, ಶಾಲೆ ಕಾಲೇಜುಗಳಿಗಾಗಿ ಹೆಣ್ಣು ಮಕ್ಕಳು ಹೊರಗೆ ಹೋಗುವುದು, ಉದ್ಯೋಗ ಮಾಡುವುದು ಅಸಹಜ-ಅವಮಾನವೆಂದು ಭಾವಿಸಲಾಗುತ್ತಿತ್ತು! ಆಧುನಿಕತೆಯ ಮಾತ್ರವಲ್ಲ ಎಲ್ಲ ಪ್ರವೇಶಗಳು ಗಂಡಸರಿಗೆ ಮೀಸಲಾಗಿದ್ದು, ಹೆಣ್ಣು ಮಕ್ಕಳಿಗೆ ಹೊರಜಗತ್ತಿನ ಸಂಪರ್ಕ ಅನಗತ್ಯ ಮತ್ತು ಅಸಾಧ್ಯವಾಗಿತ್ತು. ಸ್ವತಃ ಹೆಣ್ಣು ಮಕ್ಕಳಲ್ಲಿಯೂ ಸಂಪ್ರದಾಯದ ಒಲವು ಹೆಪ್ಪುಗಟ್ಟಿದ್ದರಿಂದ ಮಹಿಳೆಯರು ಶಿಕ್ಷಣ ಮತ್ತು ಆಧುನಿಕತೆಯ ಬಗೆಗೆ ವಿಶೇಷ ಆಸಕ್ತಿ ಹೊಂದಿರಲಿಲ್ಲ. ಮನೆಗೆಲಸಗಳ ನಿರ್ವಹಣೆಗೆ ಮತ್ತು ತಮ್ಮ ಗಂಡಂದಿರಿಗೆ ಉತ್ತಮ ಸಂಗಾತಿಗಳಾಗಲು ಅಗತ್ಯವಾದ ಗೃಹವಿಜ್ಞಾನದ ಓದು ಸಾಕು ಎನ್ನುವಷ್ಟು ಸ್ತ್ರೀ ಶಿಕ್ಷಣದ ಮಹತ್ವವನ್ನು ಸಮಾಜವು ಒಪ್ಪಿಕೊಂಡಿದ್ದ ಸ್ವಾತಂತ್ರ್ಯಪೂರ್ವದ ಅಂದಿನ ದಿನಗಳಲ್ಲಿ, ಸ್ತ್ರೀಯರ ಉನ್ನತ

ಶಿಕ್ಷಣಕ್ಕೆ, ಓದು ಬರಹಕ್ಕೆ ಪ್ರೋತ್ಸಾಹಕರ ವಾತಾವರಣವಿರಲಿಲ್ಲ. ಅಂಥ ಕಾಲದಲ್ಲಿ ಲಲಿತಾಂಬಾ ಅವರ ತಾಯಿ ಗಿರಿಜಾಂಬಾ ಅವರು ಸ್ವಾಧ್ಯಾಯದಿಂದ ಓದನ್ನು ರೂಢಿಸಿಕೊಂಡು ಧಾರ್ಮಿಕ ಸಾಹಿತ್ಯವನ್ನು ಅಧ್ಯಯನ ಮಾಡುತ್ತಿದ್ದರು. ಮಾತ್ರವಲ್ಲ ತಮ್ಮ ೯೭ ವರ್ಷದ ದೀರ್ಘಾಯುಷ್ಯದಲ್ಲಿ ಓದನ್ನು ತಮ್ಮ ಸಂಗಾತಿಯಾಗಿಸಿಕೊಂಡಿದ್ದರೆನ್ನುವುದು ವಿಶೇಷ. ಧರ್ಮಶ್ರದ್ಧೆಯುಳ್ಳ ಗಿರಿಜಾಂಬಾ ಅವರು ರಾಮಾಯಣ-ಮಹಾಭಾರತದ ಕತೆಗಳನ್ನು ಮಕ್ಕಳಿಗೆ ಹೇಳುತ್ತ ಮಕ್ಕಳಲ್ಲಿ ಉತ್ತಮ ಗುಣ-ಸಂಸ್ಕಾರಗಳನ್ನು ಬಿತ್ತಿ ಬೆಳೆಸಿದ ಸುಸಂಸ್ಕೃತ ತಾಯಿಯಾಗಿದ್ದರು. ಲಲಿತಾಂಬಾ ಅವರ ತಂದೆ ಶ್ರೀಕಂಠ ಶರ್ಮರು ಬೆಂಗಳೂರಿನಲ್ಲಿ ಇಂಗ್ಲೀಷ್ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ. ಪಾಸು ಮಾಡಿ, ನಂತರ ತಂದೆಯೊಂದಿಗೆ ಬೀರೂರಿನಲ್ಲಿ ತಾವು ಕೃಷಿ ವ್ಯಾಪಾರದಲ್ಲಿ ತೊಡಗಿಕೊಂಡಿದ್ದರೂ, ತಮ್ಮ ಎಲ್ಲ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಿದರು. ಹೆಣ್ಣು ಮಕ್ಕಳೆಲ್ಲರಿಗೂ ಕಡ್ಡಾಯವಾಗಿ ಲೋಯರ್ ಸೆಕೆಂಡರಿವರೆಗೆ ಶಿಕ್ಷಣ ಕೊಡಿಸಿದರು. ಆದರೆ ಓದಿನಲ್ಲಿ ಉಳಿದೆಲ್ಲರಿಗಿಂತ ಚುರುಕಾಗಿದ್ದ ಲಲಿತಾಂಬಾ ಅವರು ಪ್ರಥಮ ಪ್ರಯತ್ನದಲ್ಲಿಯೇ ಲೋಯರ ಸೆಕೆಂಡರಿಯನ್ನು ಮುಗಿಸಿದರು. ನಂತರ ವಿದ್ಯಾಭ್ಯಾಸದ ಬಗೆಗೆ ವಿಶೇಷ ಆಸಕ್ತಿ ತೋರದೆ ಆಟ-ವಿನೋದದಲ್ಲಿ ಮಗ್ನಳಾಗಿರುತ್ತಿದ್ದ ಲಲಿತಾಂಬಾ ಅವರು ಉನ್ನತ ಶಿಕ್ಷಣದತ್ತ ಹೆಜ್ಜೆ ಹಾಕಿದ್ದು ಅವರ ಜೀವನದ ಮಹತ್ವದ ತಿರುವು. ತಮ್ಮೂರಿನ ಟೂರೀಂಗ್ ಟಾಕೀಜನಲ್ಲಿ ಬಾಲ್ಯದಲ್ಲಿ ನೋಡುತ್ತಿದ್ದ ಪೌರಾಣಿಕ-ಸಾಮಾಜಿಕ ಚಲನಚಿತ್ರಗಳ ಕಥೆಯನ್ನು ಮನೆಗೆ ಬಂದು, ಸಂಭಾಷಣೆ ಸಹಿತ ಭಾವಾಭಿನಯದೊಂದಿಗೆ ನಿರೂಪಿಸುತ್ತಿದ್ದರಂತೆ! ಚುರುಕುಬುದ್ಧಿಯ ಈ ಪ್ರತಿಭಾವಂತ ಮಗಳ ಬಗೆಗೆ ಹೆತ್ತವರಿಗೆ ಅತೀವ ಪ್ರೀತಿ. ಆಟದ ಆಸಕ್ತಿ ಅತಿಯಾಗಿದ್ದರೂ ಓದಿನಲ್ಲಿ ಎಂದಿಗೂ ಹಿಂದೆ ಬೀಳದ ಮಗಳ ಜಾಣತನವನ್ನು ಗುರುತಿಸಿದ ತಂದೆ ಶ್ರೀಕಂಠ ಶರ್ಮರು ಲಲಿತಾಂಬಾ ಅವರ ವಿದ್ಯಾಭ್ಯಾಸವನ್ನು ಮುಂದುವರಿಸುವ ನಿರ್ಣಯಮಾಡಿ ಹೈಸ್ಕೂಲಿಗೆ ಪ್ರವೇಶ ಕೊಡಿಸಿದರಂತೆ. ಸ್ವತಃ ಲಲಿತಾಂಬಾ ಅವರು ಹೆಚ್ಚಿನ ಓದನ್ನು ಬಯಸದಿದ್ದರೂ ತಂದೆಯ ಪ್ರೋತ್ಸಾಹದಿಂದ ವಿದ್ಯಾಭ್ಯಾಸ ಮುಂದುವರೆಸಿ ೭ನೆಯ ತರಗತಿ ಪಾಸು ಮಾಡಿ ಓದನ್ನು ಮುಕ್ತಾಯಗೊಳಿಸಲು ಹವಣಿಸಿದಾಗ, ಮತ್ತೆ ತಂದೆಯವರೇ ಮಗಳನ್ನು ಎಂಟನೆಯ ತರಗತಿಗೆ ಒತ್ತಾಯದಿಂದ ಸೇರಿಸಿದ್ದು ಅವರ ಮಾಧ್ಯಮಿಕ ಶಿಕ್ಷಣಕ್ಕೆ ನಾಂದಿಯಾಯಿತು. ಕಥೆ-ಕಾದಂಬರಿ ಓದುತ್ತ ಹಾಯಾಗಿ ಮನೆಯಲ್ಲಿರಬೇಕೆಂದು ಬಯಸಿದ್ದ ಲಲಿತಾಂಬಾ, ತಂದೆಯವರ ನಿರಂತರ ಒತ್ತಡದಿಂದ ಹನ್ನೊಂದನೆಯ ಕ್ಲಾಸಿನವರೆಗೆ ಇಂಗ್ಲೀಷ ಮಾಧ್ಯಮದಲ್ಲಿ ತಮ್ಮ ಊರಿನ ಕೆ.ಎಲ್.ಕೆ. ಹೈಸ್ಕೂಲಿನಲ್ಲಿ ಶಿಕ್ಷಣವನ್ನು ಪೂರೈಸಿದರು. ಮಗಳನ್ನು ವಕೀಲಳನ್ನಾಗಿ ಮಾಡಬೇಕೆನ್ನುವ ಉತ್ಕಟ ಆಸೆಯಿದ್ದ

ತಂದೆ ಶ್ರೀಕಂಠಶರ್ಮರು ತಮ್ಮ ಮಗಳನ್ನು ಆಧುನಿಕತೆಯ ಹೊಸ ಪ್ರಪಂಚಕ್ಕೆ ಕೈ ಹಿಡಿದು ಕರೆತಂದರೆನ್ನುವುದು ಅವರ ಬದುಕಿನ ಸ್ಮರಣೀಯ ಸಂಗತಿ. ಬರಿಗಾಲಿನಿಂದ ಹಾಯಸ್ಕೂಲಿಗೆ ಹೋಗಿ ಬರುತ್ತಿದ್ದ ಮಗಳಿಗೆ ಮೊಟ್ಟಮೊದಲು ಚಪ್ಪಲಿ ತಂದುಕೊಟ್ಟು, ಊರವರ ಅಣಕಕ್ಕೆ ಹೆದರಿದ್ದ ಮಗಳಲ್ಲಿ ಧೈರ್ಯತುಂಬಿ, ಒತ್ತಾಯದಿಂದ ಚಪ್ಪಲಿ ಮೆಟ್ಟಿಕೊಂಡು ಶಾಲೆಗೆ ಹೋಗುವುದನ್ನು ರೂಢಿಸಿದರಂತೆ.! ಹೆಣ್ಣು ಮಕ್ಕಳು ಚಪ್ಪಲಿ ಮೆಟ್ಟುವುದು ಛತ್ರಿ ಹಿಡಿಯುವುದು ಅಪರಾಧ-ಅಸಹಜವೆನ್ನುವ ಸಮಾಜದ ಪ್ರತಿಕ್ರಿಯೆಗಳಿಗೆ ಕಿವಿಗೊಡದಂತೆ ಮಗಳಿಗೆ ನೈತಿಕ ಬೆಂಬಲ ಕೊಟ್ಟ ತಂದೆಯವರು  ಲಲಿತಾಂಬಾ ಅವರಿಗೆ ಸಂಸ್ಕೃತ ಭಾಷೆಯ ಅಧ್ಯಯನ ಮಾಡುವಂತೆ ಪ್ರೇರೇಪಿಸಿದರು. ಎಸ್.ಎಸ್.ಎಲ್.ಸಿಯಲ್ಲಿ ಹಿಂದಿ ಭಾಷೆಯನ್ನು ಕಲಿಯುವಂತೆ ಪ್ರೋತ್ಸಾಹಿಸಿ ಹಿಂದಿ ಪರೀಕ್ಷೆಗೆ (ಬಾಹ್ಯ) ಕೂಡಿಸಿದ್ದು, ಸಂಗೀತಾಭ್ಯಾಸ ಮಾಡಿಸಿದ್ದು ಲಲಿತಾಂಬಾ ಅವರು ವ್ಯಕ್ತಿತ್ವದ ಬೆಳವಣಿಗೆಗೆ ಗಟ್ಟಿಯಾದ ವೇದಿಕೆಯಾದವು. ಹೀಗೆ ಗುರುವಾಗಿ, ಹಿತೈಷಿಯಾಗಿ, ಮಾರ್ಗದರ್ಶಕರಾಗಿದ್ದ ತಂದೆ ಶ್ರೀಕಂಠ ಶರ್ಮರು ಲಲಿತಾಂಬಾ ಅವರ ಉನ್ನತ ಶಿಕ್ಷಣದ ಕನಸನ್ನು ಕಂಡು ಅವರಿಗೆ ಕಾಲೇಜು  ವಿದ್ಯಾಭ್ಯಾಸಕ್ಕಾಗಿ ಒತ್ತಡ ಹೇರಿದರು. ಸ್ವತಃ ಉನ್ನತ ಶಿಕ್ಷಣದ ಬಗೆಗೆ ಅಥವಾ ಉದ್ಯೋಗದ ಬಗೆಗೆ ಆಸಕ್ತಿ ಇರದಿದ್ದ ಲಲಿತಾಂಬಾ ಅವರು ತಮ್ಮ ತಂದೆಯವರ ಶಿಕ್ಷಣ ಪ್ರೀತಿ, ವಾತ್ಸಲ್ಯ ಮತ್ತು ಪ್ರಗತಿಪರ ವ್ಯಕ್ತಿತ್ವದಿಂದ ಪ್ರಭಾವಿತರಾಗಿ, ಕಾಲೇಜು ವಿದ್ಯಾಭ್ಯಾಸಕ್ಕೆ ಮನಸ್ಸು ಮಾಡಿ, ಶಿವಮೊಗ್ಗೆಯ ಸಹ್ಯಾದ್ರಿ ಕಾಲೇಜಿನಲ್ಲಿ ಇಂಟರ್‌ಮೀಡಿಯೆಟ್ ಓದು ಮುಂದುವರಿಸಿದರು. ಪ್ರತಿದಿನ ನಸುಕಿನಲ್ಲಿ ಬೀರೂರಿನಿಂದ ರೈಲು ಹತ್ತಿ ಶಿವಮೊಗ್ಗೆಗೆ ಬಂದು, ಕಾಲೇಜು ಪಾಠ ಮುಗಿಸಿ, ಮತ್ತೆ ಸಂಜೆ ರೈಲು ಹತ್ತಿ ಊರಿಗೆ ಮರಳಬೇಕಾಗಿದ್ದ ದಿನಚರಿಯಲ್ಲಿ ತಂದೆಯೇ ಅವರ ಸಂಗಾತಿ. ನಿತ್ಯವೂ ರೈಲು ನಿಲ್ದಾಣದವರೆಗೆ ಮಗಳನ್ನು ಕಳಿಸಲು ಮತ್ತು ಕರೆತರಲು ಸ್ವತಃ ತಂದೆಯವರೇ ಬರುತ್ತಿದ್ದರಂತೆ! ಇಂಟರ್ ಮೀಡಿಯೇಟ್‌ನಲ್ಲಿ ಪ್ರಥಮ ವರ್ಗದಲ್ಲಿ ಉತ್ತೀರ್ಣರಾದ ನಂತರ, ಮೈಸೂರಿನಲ್ಲಿ ವಿದ್ಯಾರ್ಥಿನಿಯರ ವಸತಿ ನಿಲಯದಲ್ಲಿದ್ದುಕೊಂಡು ಮಹಾರಾಜಾ ಕಾಲೇಜಿನಲ್ಲಿ ಪದವಿ ಅಧ್ಯಯನ ಮಾಡಿ ಬಿ.ಎ. ಪದವಿಯನ್ನು ಪಡೆದ ಲಲಿತಾಂಬಾ ಅವರು ಚಿಕ್ಕಮಂಗಳೂರು ಜಿಲ್ಲೆಯಲ್ಲಿ ಪದವೀಧರೆಯಾದ ಮೊದಲ ವೀರಶೈವ ಮಹಿಳೆಯೆನ್ನುವ ದಾಖಲೆಯನ್ನು ತಮ್ಮದಾಗಿಸಿಕೊಂಡರು. ಪ್ರತಿಭಾವಂತ ವೀರಶೈವ ವಿದ್ಯಾರ್ಥಿಗಳಿಗೆ ಮೀಸಲಾಗಿದ್ದ ಅನೇಕ ಶಿಷ್ಯವೇತನಗಳನ್ನು, ಪಾರಿತೋಷಕಗಳನ್ನು ಪಡೆದುಕೊಂಡರು; ಆಧುನಿಕ ಅರ್ಥಶಾಸ್ತ್ರ, ಮನಃಶಾಸ್ತ್ರ, ಸಂಸ್ಕೃತದ ಅಭ್ಯಾಸ ಅವರ ವ್ಯಕ್ತಿತ್ವ ವಿಶಾಲವಾಗಲು ನೆರವಾದವು. ಜಗತ್ ಪ್ರಸಿದ್ಧ ಮನಃಶಾಸ್ತ್ರಜ್ಞ ಪ್ರೊ. ಗೋಪಾಲ ಸ್ವಾಮಿ, ಡಾ. ಕೃಷ್ಣನ್ ಮತ್ತು ಮಹಾಕವಿ ಕುವೆಂಪು, ಸಂಸ್ಕೃತ ಪ್ರೊಫೆಸರ್ ಶ್ರೀ ತಿರುನಾರಾಯಣ

ಅಯ್ಯಂಗಾರ್, ಶ್ರೀಮತಿ ತ್ರಿವೇಣಿ, ಪ್ರೊ. ಪಾರ್ವತಮ್ಮ ಮುಂತಾದ 'ಮಹಾಗುರು'ಗಳ ಬೋಧನೆ-ಸಾಧನೆ ಆದರ್ಶ ಜೀವನಕ್ಕೆ ಪ್ರೇರಣೆ ನೀಡಿದಂತೆ, ಶೀಎಸ್.ಎಂ.ಕೃಷ್ಣ(ಮಾಜಿ. ಮುಖ್ಯಮಂತ್ರಿ), ಶೀ ತುಳಸೀದಾಸಪ್ಪ, ಎಂ.ವಿ.ರಾಜಶೇಖರನ್, ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ತಿಪ್ಪೇರುದ್ರಸ್ವಾಮಿ, ಗೊ.ರು. ಚನ್ನಬಸಪ್ಪ ಮುಂತಾದ ಸಹಪಾಠಿ-ಸಹಯಾತ್ರಿಕರ ಒಡನಾಟ, "ಮುಜಗರ-ಆತಂಕ-ಆನಂದ" ಭಾವನೆಗಳನ್ನು ಅನುಭವಿಸುವಂತೆ ಮಾಡಿದ ಅತ್ಯಾಧುನಿಕ ನಾಗರಿಕ ಪರಿಸರ, ಗ್ರಾಮೀಣ ಭಾಗದ ಸಂಪ್ರದಾಯಸ್ಥ ಕುಟುಂಬದಿಂದ ಬಂದ ಲಲಿತಾಂಬಾ ಅವರಿಗೆ ವಿಶಾಲ-ವಿಚಿತ್ರ-ಜಗತ್ತಿನ ಪರಿಚಯ ಮಾಡಿಸಿದುವಂತೆ.!!

ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹಿಸಿದ ತಂದೆಯವರು ಉದ್ಯೋಗಕ್ಕಾಗಿ ಬೆಳೆದ ಮಗಳನ್ನು ಒಂಟಿಯಾಗಿ ಹೊರಗೆ ಕಳಿಸಲು ಒಪ್ಪದಿದ್ದಾಗ ಲಲಿತಾಂಬಾ ಹಟಹಿಡಿದು ತಂದೆಯವರ ಮನವೊಲಿಸಿ ಶಿಕ್ಷಕಿಯಾಗಿ ವೃತ್ತಿಜೀವನ ಪ್ರಾರಂಭಿಸಿದರು (೧೯೫೧) ಬೀರೂರಿನಿಂದ ನಾಲ್ಕು ಮೈಲು ದೂರವಿರುವ ಕಡೂರಿನ ಮಿಡ್ಲ್ ಸ್ಕೂಲಿನಲ್ಲಿ ಮುಖ್ಯೋಪಾಧ್ಯಾಯಿನಿಯಾಗಿ ಸೇವೆ ಪ್ರಾರಂಭಿಸಿದ ಅನುಭವವನ್ನು ಲಲಿತಾಂಬಾ ಅವರು ಹೀಗೆ ಹೇಳಿಕೊಂಡಿದ್ದಾರೆ. "ದಿನವೂ ಬಸ್‌ನಲ್ಲಿ ಶಾಲೆಗೆ ಹೋಗಿಬರುತ್ತಿದ್ದೆ. ಆಗ ಬಸ್‌ಗಳ ಓಡಾಟ ಬಹಳ ವಿರಳವಾಗಿತ್ತು. ಆ ಬಸ್‌ಗಳು ವೇಳೆಗೆ ಸರಿಯಾಗಿ ಬರುತ್ತಿರಲಿಲ್ಲ, ಶಾಲೆ ಮುಗಿದ ಮೇಲೆ ರಸ್ತೆ ಬದಿಯ ಬಸ್ ಸ್ಟಾಪ್‌ನಲ್ಲಿ ಗಂಟೆಗಟ್ಟಲೆ ಕಾಯುತ್ತಾ ಬೀದಿಯ ಕಾಮಣ್ಣಗಳ ಕಪಿಚೇಷ್ಟೆಯ ಮಾತುಗಳಿಗೆ ಗುರಿಯಾಗಬೇಕಾಗುತ್ತಿತ್ತು.- "(ನನ್ನ ಬಾಳಸಂಗಾತಿ-'ಸಹೃದಯಿ' ಡಾ. ವೃಷಭೇಂದ್ರಸ್ವಾಮಿ ಅಭಿನಂದನ ಗ್ರಂಥ)

ಹೀಗೆ ಕಡೂರಿನ ಮಿಡಲ್ ಶಾಲೆಯಲ್ಲಿ ಶಿಕ್ಷಕಿಯಾಗಿ ಸೇವೆ ಪ್ರಾರಂಭಿಸಿ ನಂತರ ಮದುವೆಯಾದ ಕಾರಣ ಬಳ್ಳಾರಿಯ ಸರಕಾರೀ ಹೆಣ್ಣು ಮಕ್ಕಳ ಹಾಯ್‌ಸ್ಕೂಲಿನಲ್ಲಿ ಶಿಕ್ಷಕಿಯಾಗಿ ಕೆಲಕಾಲ ಸೇವೆ ಸಲ್ಲಿಸಿದರು. ೧೯೫೭ರಲ್ಲಿ ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘದ ವೀರಶೈವ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದ ಬಳ್ಳಾರಿ ಜಿಲ್ಲೆಯ ಅಯ್ಯನ ಹಳ್ಳಿಯ ಪ್ರೊ. ವೃಷಭೇಂದ್ರಸ್ವಾಮಿಯವರೊಂದಿಗೆ ವಿವಾಹವಾಗಿ ೧೯೬೧ರಲ್ಲಿ ಧಾರವಾಡಕ್ಕೆ ಬಂದ ಅವರು ಕರ್ನಾಟಕ ವಿಶ್ವವಿದ್ಯಾಲಯದಿಂದ ೧೯೬೩ರಲ್ಲಿ ಬಿ.ಎಡ್. ೧೯೬೪ರಲ್ಲಿ ಎಂ.ಎಡ್, ಪದವಿಗಳನ್ನು ಪ್ರಥಮ ವರ್ಗದಲ್ಲಿ ಪಡೆದು, ಕರ್ನಾಟಕ ವಿಶ್ವವಿದ್ಯಾಲಯಕ ಶಿಕ್ಷಣ ಕಾಲೇಜಿನಲ್ಲಿ ಅಧ್ಯಾಪಕಿಯಾಗಿ ಸೇವೆ ಪ್ರಾರಂಭಿಸಿದರು.(೧೯೬೬)ನಂತರ ಹೈದರಾಬಾದಿನಲ್ಲಿರುವ ಇಂಗ್ಲೀಷ ಶಿಕ್ಷಣ ಕೇಂದ್ರದಿಂದ ಡಿಪ್ಲೋಮಾ ಇನ್ ಇಂಗ್ಲೀಷ ಟೀಚಿಂಗ್ (DiP.E.T.) ತರಬೇತಿ ಪಡೆದುಕೊಂಡರು. ಧಾರವಾಡ ಧಾರವಾಡದ

ವಿಶ್ವವಿದ್ಯಾಲಯ ಶಿಕ್ಷಣ ಕಾಲೇಜಿನಲ್ಲಿ ಪ್ರವಾಚಕರಾಗಿ ಸುಮಾರು ಮೂರು ದಶಕಗಳ ಕಾಲ ಸೇವೆ ಸಲ್ಲಿಸಿ ನಿವೃತ್ತರಾದರು. ಬಾಲ್ಯದಲ್ಲಿಯೇ ಕಥೆ ಓದುವ, ಬರೆಯುವ ಹವ್ಯಾಸ ಬೆಳೆಸಿಕೊಂಡ ಪ್ರೊ.ಲಲಿತಾಂಬಾ ಶಿಕ್ಷಣಶಾಸ್ತ್ರವನ್ನು ಕುರಿತು ಲೇಖನ-ಪುಸ್ತಕಗಳನ್ನು ಬರೆದು ಪ್ರಸಿದ್ಧರಾದರು, ಮನೆಯ ಶರಣ ಸಾಹಿತ್ಯ ಪರಿಸರದಿಂದ ಪ್ರಭಾವಿತರಾಗಿ ವಚನ ಸಾಹಿತ್ಯ ಮತ್ತು ಲೌಕಿಕ ಸಾಹಿತ್ಯ ರಚನೆಯನ್ನು ಮುಂದುವರಿಸಿದರು, ಪ್ರತಿಭಾವಂತ ವಿಜ್ಞಾನಿಯಾಗಿರುವ ಡಾ.ಎಸ್. ಎಂ. ಶಿವಪ್ರಸಾದ, ಲಲಿತಾಂಬಾ ಅವರ ಏಕೈಕ ಪುತ್ರರು. ಸೊಸೆ ಅನುಪಮ ಮೊಮ್ಮಗಳು ಶರ್ವಾಣಿ ಅವರ ವಂಶದ ಕುಡಿಗಳು. ಈಗ ಬೆಂಗಳೂರಿನಲ್ಲಿ ನೆಲೆಸಿದ್ದಾರೆ.

**ಸಾರ್ವಜನಿಕ ಬದುಕಿನಲ್ಲಿ :**

ವೃತ್ತಿ ಮಾತ್ರವಲ್ಲ ಪ್ರವೃತ್ತಿಯಿಂದಲೂ ಶಿಕ್ಷಕಿಯಾಗಿದ್ದ ಅವರು, ತಮ್ಮ ವೃತ್ತಿ ಜೀವನದುದ್ದಕ್ಕೂ ವಿದ್ಯಾರ್ಥಿಗಳೊಂದಿಗೆ ಅತ್ಯಂತ ಸ್ನೇಹಮಯ ಬಾಂಧವ್ಯವನ್ನು ಹೊಂದಿದ್ದು, ಆದರ್ಶ ಶಿಕ್ಷಕಿಯಾಗಿ ಹೆಸರು ಪಡೆದರು. ಸಮಕಾಲೀನ ವಿದ್ಯಮಾನಗಳಿಗೆ ಸ್ಪಂದಿಸುವ ತಮ್ಮ ಸಮಾಜಮುಖಿ ಆಸಕ್ತಿಯಿಂದಾಗಿ, ಸಾರ್ವಜನಿಕ ಜೀವನದಲ್ಲಿಯೂ ಸಕ್ರಿಯವಾಗಿದ್ದರು. ಧಾರವಾಡದ ಜಯದೇವಿ ತಾಯಿ ಲಿಗಾಡೆ ಪೌಢಶಾಲೆಯ 'ಸುಧಾರಣಾ ಸಮಿತಿ'ಯ ಸದಸ್ಯರಾಗಿ, ಧಾರವಾಡ ಅಕ್ಕನಬಳಗದ ಸದಸ್ಯರಾಗಿ, 'ಅಖಿಲ ಕರ್ನಾಟಕ ಲೇಖಕಿ'ಯರ ಸಂಘದ ಸದಸ್ಯರಾಗಿ, 'ಉತ್ತರ ಕರ್ನಾಟಕ ಲೇಖಕಿ'ಯರ ಸಂಘದ ಸಂಸ್ಥಾಪಕ ಸದಸ್ಯರೂ, ಅಧ್ಯಕ್ಷರೂ ಆಗಿ, ಸಲಹಾ ಸಮಿತಿಯ ಸದಸ್ಯರಾಗಿ ಸ್ತ್ರೀ ಸಮಾಜದ ಪ್ರಗತಿಗಾಗಿ ಕ್ರಿಯಾಶೀಲರಾಗಿ ದುಡಿದರು.

**ಸಾಹಿತ್ಯ ಸೇವೆ:**

೧೯೬೦-೭೦ರ ದಶಕವು ಜನಪ್ರಿಯ ಸಾಹಿತ್ಯದ ಸುವರ್ಣಕಾಲ. ಹೆಣ್ಣು ಮಕ್ಕಳು ಕಥೆ ಕಾದಂಬರಿಗಳ ಮೂಲಕ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದ ಅಂದಿನ ಕಾಲದಲ್ಲಿ ಲಲಿತಾಂಬಾ ಅವರು ಸಣ್ಣಕತೆ ಮತ್ತು ಪ್ರಮುಖವಾಗಿ ವೈಚಾರಿಕ ಪ್ರಬಂಧಗಳ ಮೂಲಕ ಬರವಣಿಗೆ ಪ್ರರಂಭಿಸಿದರು. ಓದು ಲಲಿತಾಂಬಾ ಅವರಿಗೆ ಬಾಲ್ಯದಿಂದಲೇ ಅಂಟಿಕೊಂಡು ಬಂದ ಪ್ರೀತಿಯ ಹವ್ಯಾಸ. ಕನ್ನಡ, ಇಂಗ್ಲೀಷ, ಹಿಂದಿ ಭಾಷೆಗಳನ್ನು ಬಲ್ಲ ಅವರು ಸಂಸ್ಕೃತವನ್ನು ಡಿಗ್ರಿ ತರಗತಿಯಲ್ಲಿ ಮುಖ್ಯ ಭಾಷೆಯಾಗಿ ಕಲಿತವರು. ಚಿಕ್ಕವರಾಗಿದ್ದಾಗ ಕತೆ, ಕಾದಂಬರಿಗಳನ್ನು ಓದುತ್ತಿದ್ದ ಅವರಿಗೆ ಸಾಹಿತ್ಯದಲ್ಲಿ ಸಹಜವಾದ ಪ್ರೀತಿಯಿತ್ತು. ಆದರೆ ಸಾಹಿತ್ಯದ ಆಸಕ್ತಿಯನ್ನು ಪೋಷಿಸುವ ವಾತಾವರಣ ಅವರಿಗೆ ಸಿಕ್ಕಿದ್ದು ಧಾರವಾಡದ ನೆಲದಲ್ಲಿ, ಬಾಳಸಂಗಾತಿ ಪ್ರೊ. ವೃಷಭೇಂದ್ರ ಸ್ವಾಮಿಯವರ ಸಂಸಾರ-ಸಂಬಂಧ-ಪಾಂಡಿತ್ಯ-ಸ್ವಾಧ್ಯಾಯದ

ಪರಿಸರದಲ್ಲಿ. ಕಾಲೇಜು ದಿನಗಳಿಂದಲೂ ಕತೆ ಕವನಗಳನ್ನು ಬರೆದರೂ ಪ್ರಕಟಣೆಯಲ್ಲಿ ಅಷ್ಟಾಗಿ ಆಸಕ್ತಿ ತೋರದ ಕಾರಣ ಅವರ ಬಹುಪಾಲು ಬರಹಗಳು ಪುಸ್ತಕರೂಪದಲ್ಲಿ ಒಂದೆಡೆಗೆ ಬೆಳಕು ಕಾಣದೆ ಉಳಿದುಬಿಟ್ಟಿವೆ.

ಗದ್ಯ ಮತ್ತು ಪದ್ಯ ಎರಡೂ ಪ್ರಕಾರಗಳಲ್ಲಿ ತಮ್ಮದೇ ಆದ ವಿಶಿಷ್ಟ ಲೇಖನ ಕಲೆಯನ್ನು ರೂಢಿಸಿಕೊಂಡ ಲಲಿತಾಂಬಾ ಅವರದು ಹೃದಯಂಗಮವೆನಿಸುವ ನಿರಾಡಂಬರ ಗದ್ಯ ಶೈಲಿ. ಸರಳತೆ ಸಂವಹನಶೀಲತೆ ಅವರ ಬರಹದ ಚೈತನ್ಯಶಕ್ತಿ.

ಹವ್ಯಾಸವಾಗಿ ಪ್ರಾರಂಭಿಸಿದ್ದ ಪ್ರಬಂಧ ರಚನೆಯಲ್ಲಿ ಗಂಭೀರವಾಗಿ ತೊಡಗಿಸಿಕೊಂಡ ಪರಿಣಾಮವಾಗಿ, ಅವರ ವೈಚಾರಿಕ ಲೇಖನಗಳು ೧೯೭೦ರ ದಶಕದ ಅಂದಿನ ಜನಪ್ರಿಯ ಪತ್ರಿಕೆಗಳಾಗಿದ್ದ ಪ್ರಜಾಮತ, ಕರ್ಮವೀರ, ಮಂಜುವಾಣಿ, ತರಂಗ , ಸುಧಾ, ವನಿತಾ, ವಿನೋದ ಸಂಯುಕ್ತ ಕರ್ನಾಟಕಗಳಲ್ಲಿ ಪ್ರಕಟವಾದವು. ಸರ್ವಜ್ಞನ ವಚನಗಳಿಂದ ಪ್ರಭಾವಿತರಾಗಿ ವಚನ ರಚನೆಗೂ ಪ್ರಯತ್ನಿಸಿರುವುದು ವಿಶೇಷ. ಧರ್ಮಶ್ರದ್ಧೆ, ಅಧ್ಯಾತ್ಮದ ಪ್ರೀತಿಯುಳ್ಳ ಲಲಿತಾಂಬಾ ಅವರು ಈಶ್ವರೀಯ ವಿಶ್ವವಿದ್ಯಾಲಯದ ಚಟುವಟಿಕೆಗಳಲ್ಲಿ, ರಾಮಕೃಷ್ಣ ಪರಮಹಂಸರ ಸಂಸ್ಥೆಯೊಂದಿಗೆ ಒಡನಾಟ ಹೊಂದಿದ್ದರು. ವೀರಶೈವ ಧರ್ಮ, ಶರಣ ಸಾಹಿತ್ಯದ ಗಂಭೀರ ಅಧ್ಯಯನದಲ್ಲಿ ತೊಡಗಿಕೊಂಡಿದ್ದ ಅವರು ರಚಿಸಿದ ಪ್ರಬಂಧಗಳು(ವೀರಶೈವ ಮತಗಳಿಗೊಂದು ನೀಲನಕ್ಷೆ) ವೀರಶೈವ ಪತ್ರಿಕೆಯಲ್ಲಿ ಪ್ರಕಟವಾಗಿವೆ. ವಚನಗಳ ಅಧ್ಯಯನದ ಫಲ ಅವರು ರಚಿಸಿರುವ 'ವಚನಾಂಜಲಿ'.

**ಶರಣ ಸಂಸ್ಕೃತಿ– ಸಾಹಿತ್ಯದ ಅನುಸಂಧಾನ :**

ಲಿಂಗಸಮಾನತೆ, ವೃತ್ತಿಗೌರವ, ನೈತಿಕತೆಯನ್ನು ಎತ್ತಿಹಿಡಿದು ಇಹ–ಪರ, ಸ್ವರ್ಗ–ಮರ್ತ್ಯವೆಂಬ ಉಭಯಭಾವದ ದಂದುಗವನ್ನು ಶರಣರು ನಿರಾಕರಿಸಿದರು. ಇಲ್ಲಿ–ಅಲ್ಲಿ ಸಲ್ಲಬಲ್ಲ ಸಮನ್ವಯ ಸೂತ್ರವನ್ನು ಬೋಧಿಸಿದ ಶರಣರ ಜೀವನ ಶ್ರದ್ಧೆ ಲಲಿತಾಂಬಾ ಅವರನ್ನು ಆಕರ್ಷಿಸಿದ ಅನುಪಮ ಗುಣ. ಜನಸಾಮಾನ್ಯರ ಭಾಷೆಯಲ್ಲಿ ಆಪ್ತವಾದ ಶೈಲಿಯಲ್ಲಿ, ಉದಾತ್ತವಾದ ಜೀವನಸತ್ಯಗಳನ್ನು ನಿರೂಪಿಸುವ ವಚನಸಾಹಿತ್ಯ ಅವರು ವಿಶೇಷವಾಗಿ ಮೆಚ್ಚಿಕೊಂಡ ಸಾಹಿತ್ಯ ಪ್ರಕಾರ. ಶರಣರ ವಚನ ಸಾಹಿತ್ಯ, ಅದರ ಕಾಳಜಿ, ನೈತಿಕಶಕ್ತಿ, ಅಧ್ಯಾತ್ಮಿಕ ಚಿಂತನೆಗಳನ್ನು ಗಂಭೀರವಾಗಿ ಅಧ್ಯಯನ ಮಾಡಿದ್ದ ಅವರು, ಶರಣರ ಸಂದೇಶವನ್ನು ಹಲವಾರು ಉಪನ್ಯಾಸ ಪ್ರಬಂಧಗಳ ಮೂಲಕ, ಆಕಾಶವಾಣಿಯಲ್ಲಿ ರೂಪಕ–ನಾಟಕಗಳ ಮೂಲಕ ಸಮಾಜಕ್ಕೆ ಮುಟ್ಟಿಸಲು ಕ್ರಿಯಾಶೀಲವಾಗಿ ಸ್ಪಂದಿಸಿದ್ದರು. ಶರಣರ ವಿಚಾರಗಳ ಪ್ರಸ್ತುತತೆಯನ್ನು ಆಧುನಿಕ ವೈಚಾರಿಕತೆಯ ಹಿನ್ನಲೆಯಲ್ಲಿ ವಿಶ್ಲೇಷಿಸಿದ ಅವರು, ವಚನಗಳ ವಿಶ್ವಾತ್ಮಕ

ಸಂದೇಶಗಳನ್ನು ಮೆಚ್ಚಿಕೊಂಡಿದ್ದರು. ಜಾತಿ-ಧರ್ಮ ಕಾಲ ನಿರಪೇಕ್ಷವಾಗಿ ಸಕಲಜೀವಾತ್ಮರಿಗೆ ಲೇಸಬಯಸುವ ವಚನಗಳ ವಿಶ್ವಮಾನವತೆಯ ತುಡಿತವನ್ನು ಜನಸಾಮಾನ್ಯರಿಗೆ ತಲುಪಿಸುವ ಕಾಳಜಿಯಿಂದ ಅವರು ರಚಿಸಿರುವ ಪ್ರಬಂಧಗಳು, ವಚನ ವ್ಯಾಖ್ಯಾನಗಳು ಅವರ ಜೀವಪರ ವೈಚಾರಿಕತೆಗೆ ನಿದರ್ಶನಗಳು. ಶರಣರ ಸಮಷ್ಠಿ ಕಾಳಜಿ, ಅವರ ಒಟ್ಟು ಸಾಹಿತ್ಯದ ಕೇಂದ್ರ ಆಶಯವಾಗಿದೆಯೆನ್ನುವುದು ಗಮನಾರ್ಹ ಸಂಗತಿ. ವಚನ ಸಾಹಿತ್ಯ ಕುರಿತು ದಶಕಗಳವರೆಗೆ ಅವರು ನಡೆಸಿದ ಚಿಂತನ ಮಂಥನಗಳ ಫಲ 'ವಚನಾಂಜಲಿ'. ೧೭೪ ವಚನಗಳ ವ್ಯಾಖ್ಯಾನ ಕೃತಿ. ಪ್ರಸಿದ್ಧ 'ಕಾವ್ಯಾನಂದ' ಪ್ರಶಸ್ತಿ ಪಡೆದು ಕರ್ನಾಟಕದ ಎಲ್ಲ ಅಕ್ಕನ ಬಳಗಗಳಲ್ಲಿ ನಿತ್ಯ ಓದಿನ ಚಿಂತನೆಯ ಗ್ರಂಥವಾಗಿ ಜನಪ್ರಿಯವಾಗಿದೆ. ಮಡಿಕೇರಿಯ ಆಕಾಶವಾಣಿ ಕೇಂದ್ರವು ಬೆಳಗಿನ ಚಿಂತನ- ಪ್ರಾರ್ಥನೆ ಕಾರ್ಯಕ್ರಮದಲ್ಲಿ ಪ್ರತಿದಿನ ಧಾರಾವಾಹಿಯಾಗಿ ಈ ಕೃತಿಯ ಪ್ರಸಾರ ಮಾಡಿದುದು ಒಂದು ವಿಶೇಷ ದಾಖಲೆ.

'ಸಜ್ಜಲಗುಡ್ಡದ ಶರಣಮ್ಮನವರು' ಅನುಭಾವಿ ಶರಣಮ್ಮನವರ ಜೀವನ ಸಾಧನೆ ಸಂದೇಶಗಳನ್ನು ಪ್ರತಿಬಿಂಬಿಸುವ ಕೃತಿಯಾದರೆ, 'ಶಿವಶರಣೆಯರು' ಹನ್ನೆರಡನೆಯ ಶತಮಾನದ ವಚನಕಾರ್ತಿಯರ ಆಧ್ಯಾತ್ಮಿಕ, ಸಾಮಾಜಿಕ ಚಿಂತನೆಗಳನ್ನು ಸಾಹಿತ್ಯಿಕ ಸಾಧನೆಯನ್ನು ನಿರೂಪಿಸುವ ಗ್ರಂಥ. 'ಶಿವಶರಣೆ ನೀಲಾಂಬಿಕೆ-ನಾಗಲಾಂಬಿಕೆಯರ ವ್ಯಕ್ತಿತ್ವ ಕುರಿತು ವಿವಾದಾಸ್ಪದ ಬರಹಗಳು ಕನ್ನಡಿಗರ ಮನಸ್ಸನ್ನು ಕಲಕಿದ ಪ್ರಸಂಗದಲ್ಲಿ ಪ್ರೊ. ಲಲಿತಾಂಬಾ ಮಹಿಳೆಯರ ಗೌರವವನ್ನು ಎತ್ತಿಹಿಡಿದು, ವೈಚಾರಿಕ ಲೇಖನಗಳ ಪರಂಪರೆಯನ್ನೇ ಸೃಷ್ಟಿಸಿದರು. 'ಪತ್ರೆ ಚನ್ನವೀರಪ್ಪನವರು' ವೀರಶೈವ ಪುಣ್ಯ ಪುರುಷರ ಮಾಲಿಕೆಗಾಗಿ ರಚಿಸಿದ ಕೃತಿ.

**ಚಿಂತನಶೀಲೆ :**

ದೇಶ-ಧರ್ಮ-ಸಮಾಜ-ಮಹಿಳೆ-ಶಿಕ್ಷಣ-ಮಕ್ಕಳು ಹೀಗೆ ಹತ್ತು ಹಲವಾರು ಕ್ಷೇತ್ರಗಳಲ್ಲಿ ಆಸಕ್ತಿ ಹೊಂದಿದ್ದ ಲಲಿತಾಂಬಾ ಅವರು ತಮ್ಮ ವೃತ್ತಿ - ನಿವೃತ್ತಿಯ ಜೀವನದುದ್ದಕ್ಕೂ ಈ ಕ್ಷೇತ್ರಗಳ ಸಂಪರ್ಕವಿರಿಸಿಕೊಂಡು, ಕಾಲಕಾಲಕ್ಕೆ ಲೇಖನಗಳನ್ನು ಕಥೆ, ಕವನಗಳನ್ನು, ಶಿಕ್ಷಣ ಚಿಂತನೆಗಳನ್ನು ಬರೆದು ಪ್ರಕಟಿಸಿದರು. ಆಕಾಶವಾಣಿಯ "ಚಿಂತನ"ಕ್ಕಾಗಿ ಮಕ್ಕಳು-ಮಹಿಳೆ, ಶಿಕ್ಷಣ-ಧರ್ಮ ಕುರಿತು ಬರೆದ ಅನೇಕ ಭಾಷಣಗಳು ಮತ್ತು ರೂಪಕಗಳು ಪ್ರಸಾರಗೊಂಡಿದ್ದರೂ, ಅವರ ಬಹುತೇಕ ರಚನೆಗಳು ಅಪ್ರಕಟಿತವಾಗಿ ಉಳಿದುಕೊಂಡಿದ್ದು ದುರ್ದೈವ. ಶಿಕ್ಷಣ ಕುರಿತ ಅವರ ಸಂಶೋಧನಾ ಲೇಖನಗಳು, ಇಂಗ್ಲೀಷ್ ಬೋಧನೆಯ ಕೈಪಿಡಿಗಳೂ, "ವೀರಶೈವರ ಸಂಪ್ರ ದಾಯ ವಿಧಿ ವಿಧಾನ ಆಚರಣೆಗಳನ್ನು ಕುರಿತ ಚಿತ್ರಮಯ ಲೇಖನಗಳು, ಧರ್ಮಸ್ಥಳದ ಪ್ರಕಟನೆಯಾದ "ಮಂಜುವಾಣಿ" ಮತ್ತು "ವಿನೋದ" ಪತ್ರಿಕೆಯ

ಹಾಸ್ಯ ಲೇಖನಗಳು, "ಇಂಗ್ಲೀಷ ಭಾಷೆ ಕಲಿಸುವುದು ಯಾರಿಗೆ? ಎಷ್ಟು? ಹೇಗೆ? ಮುಂತಾದ ಚಿಂತನಪರ ಬರಹಗಳು ಅಂದಂದಿಗೆ ಪ್ರಕಟವಾಗಿ, ಸ್ಪಂದನ ಉಂಟು ಮಾಡಿದುದನ್ನು ಮರೆಯುವಂತಿಲ್ಲ. ಅಲ್ಲೆಲ್ಲ ಪ್ರೊ।ಲಲಿತಾಂಬಾ 'ವಿಚಾರಶೀಲ ಲೇಖಕಿ', 'ಸಂಸ್ಕೃತಿ ಪ್ರೇಮಿ' ಅಪ್ಪಟ ಭಾರತೀಯರಾಗಿ ಪ್ರಕಟವಾದುದು ಇಂದು ಇತಿಹಾಸ.

**ಸೃಜನಶೀಲ ಲೇಖಕಿ :**

ಸೃಜನಶೀಲ ಲೇಖಕಿಯಾಗಿಯೂ ಲಲಿತಾಂಬಾ ಅವರು ಸಾಹಿತ್ಯಸೇವೆಯಲ್ಲಿ ತೊಡಗಿಸಿಕೊಂಡಿದ್ದರು. 'ಮುನಿದೆ ಏಕಮ್ಮ ನೆಲದಾಯಿ' (೧೯೯೫) ಹಣತೆ ಹಚ್ಚಿ ಹುಡುಕುತಿರುವೆ (೨೦೦೨) ಎರಡು ಕವನ ಸಂಕಲನಗಳನ್ನು 'ಬೇರೊಂದು ಮರವೆರಡು' (೨೦೦೧) ಕಥಾಸಂಕಲನ ಲಲಿತಾಂಬಾ ಅವರೊಳಗಿನ ಸಂವೇದನಾಶೀಲ ಸಮಾಜಮುಖಿ ಕವಯಿತ್ರಿ ಮತ್ತು ಕತೆಗಾರ್ತಿಯನ್ನು ಪರಿಚಯಿಸುವ ಕೃತಿಗಳು. 'ರಸಿಕ ದಂಪತಿಯ ಪ್ರೇಮ ಪತ್ರಗಳು' ಇನ್ನೂ ಪ್ರಕಟವಾಗಬೇಕಾದ ಗ್ರಂಥ.

**ಶಿಕ್ಷಣ ತಜ್ಞೆ:**

ವೃತ್ತಿಯಿಂದ ಶಿಕ್ಷಣ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಲಲಿತಾಂಬಾ ಅವರು ವೃತ್ತಿ-ಪ್ರವೃತ್ತಿಗಳೆರಡರಲ್ಲಿಯೂ ಶಿಕ್ಷಕಿಯಾಗಿದ್ದರು. ಮಕ್ಕಳನ್ನು ಸುಸಂಸ್ಕೃತ ವ್ಯಕ್ತಿಗಳಾಗಿ ನಿರ್ಮಾಣ ಮಾಡುವ ಶಿಕ್ಷಣವನ್ನು ಆಧುನಿಕ ಮೌಲ್ಯಾಧಾರಿತ ದೇಶವನ್ನು ಕಟ್ಟುವ ಪ್ರಬಲ ಶಕ್ತಿಯಾಗಿ ಭಾವಿಸಿದ್ದರು. ಅಂತೆಯೇ ಅವರು ಶಿಕ್ಷಣದ ಅಗತ್ಯ ಸ್ವರೂಪ ಕುರಿತು ತಾವು ನಡೆಸಿದ ಚಿಂತನೆ -ಮಂಥನಗಳನ್ನು ಕೃತಿರೂಪದಲ್ಲಿ ರಚಿಸಿದರು. ಮಕ್ಕಳ ಶಿಕ್ಷಣದಲ್ಲಿ ವಿಶೇಷ ತಜ್ಞತೆಯುಳ್ಳ ಅವರು ಮಕ್ಕಳ ಶಿಕ್ಷಣ ಕುರಿತು ರಚಿಸಿದ ಕೃತಿಗಳು ಮೂರು. 'ಮಕ್ಕಳ ಶಿಕ್ಷಣ ಚಿಂತನೆಗಳು' ೧೯೯೬ 'ಪುಟ್ಟನಿಗೆ ಹಿತೈಷಿಯ ಪತ್ರಗಳು' (೧೯೯೮)', 'ಕಿವಿಗೊಟ್ಟು ಕೇಳಿ ಮನಸ್ಸಿಟ್ಟು ಮಾಡು ಮಗುವೇ' (೨೦೦೨). ಪತ್ರಗಳ ಮೂಲಕ ಮಕ್ಕಳಿಗೆ ಶೈಕ್ಷಣಿಕ ವಿಚಾರಗಳನ್ನು ನಿರೂಪಿಸುವ ಕಥನ ತಂತ್ರದಲ್ಲಿರುವ ಈ ಕೃತಿಗಳು ಮಕ್ಕಳ ಮನಸ್ಸನ್ನು ಪ್ರಭಾವಿಸಬಲ್ಲ ಮೌಲಿಕ ರಚನೆಗಳಾಗಿವೆ.

ಲಲಿತಾಂಬಾ ಅವರದು ಮೂಲತಃ ಜಿಜ್ಞಾಸೆಯ ಪ್ರವೃತ್ತಿ, ವಿಮರ್ಶನ ಪ್ರತಿಭೆ. ಸಮಷ್ಟಿಕಾಳಜಿಯುಳ್ಳ ಲೇಖಕಿ. ಕತೆ- ಕವನ-ಪ್ರಬಂಧ ಮಕ್ಕಳ ಶಿಕ್ಷಣ ಸಾಹಿತ್ಯ - ಹೀಗೆ ಅವರು ಬರೆದ ಎಲ್ಲ ಕೃತಿಗಳಲ್ಲಿ ಅವರ ವೈಚಾರಿಕ ಮನಸ್ಸು ಪ್ರತಿಫಲಿಸಿದೆ. ಸಮಾಜ -ದೇಶ- ಮಕ್ಕಳು - ಮಹಿಳೆ-ಶಿಕ್ಷಣ ಅವರ ಮುಖ್ಯ ಕಾಳಜಿಗಳಾಗಿದ್ದು, ಸಾಮಾಜಿಕ ಉನ್ನತಿ ವ್ಯಕ್ತಿತ್ವ ವಿಕಾಸ ಸಮಷ್ಟಿ ಬದುಕಿನ ಸರ್ವಾಂಗೀಣ ಬೆಳವಣಿಗೆಗೆ

ಅಗತ್ಯವಾದ ಮೌಲಿಕ ವಿಚಾರಗಳ ಬಗೆಗೆ ಅವರು ನಿರಂತರವಾಗಿ ಚಿಂತನೆ ನಡೆಸಿದ್ದಾರೆ. ಸಹಕಾರ, ದಾನ, ಜೀವನದ ಗುಟ್ಟು, ರಾಷ್ಟ್ರಪ್ರೇಮ, ಮಾನವೀಯತೆ, ರಚನಾತ್ಮಕ ಧರ್ಮ ಇತ್ಯಾದಿ ವೈಚಾರಿಕ ಲೇಖನಗಳ ಮೂಲಕ ಆಧುನಿಕ ಸಮಾಜದಲ್ಲಿ ಕಣ್ಮರೆಯಾಗುತ್ತಿರುವ ಜೀವನ ಮೌಲ್ಯಗಳನ್ನು ಕುರಿತು ಪರಿಚಯಿಸಿದ್ದಾರೆ. ವೈಚಾರಿಕ ಲೇಖನಗಳ ಎರಡು ಸಂಕಲನಗಳು ಮನದ ಮಲ್ಲಿಗೆ (೧೯೯೪)ರಚನಾತ್ಮಕ ಚಿಂತನೆಗಳು(೨೦೦೦) ಅವರ ಸಮಾಜಮುಖಿ ವ್ಯಕ್ತಿತ್ವವನ್ನು ಪ್ರತಿಫಲಿಸುವ ಉತ್ತಮ ಕೃತಿಗಳು.

**ಬದುಕಿನ ಬಯಕೆ – ಹೆಬ್ಬಯಕೆ :**

ಸ್ತ್ರೀ ಶಿಕ್ಷಣ, ಸ್ತ್ರೀ ಸಮಾಜ, ಸ್ತ್ರೀ ಸ್ವಾತಂತ್ರ್ಯ– ಸ್ವಾವಲಂಬನೆ ಇತ್ಯಾದಿ ಆಧುನಿಕ ಮಹಿಳಾ ಸಮಾಜಕ್ಕೆ ಸಂಬಂಧಿಸಿರುವ ಪ್ರೊ. ಲಲಿತಾಂಬಾ ಅವರ ಲೇಖನಗಳಲ್ಲಿ ಅವರ ಮಹಿಳಾಪರ ಕಾಳಜಿ ಸ್ಪಷ್ಟವಾಗಿದೆ. ಕುಟುಂಬ ಮತ್ತು ಉದ್ಯೋಗದ ಇಬ್ಬಗೆಯ ಹೊಣೆಗಾರಿಕೆಗಳ ದ್ವಂದ್ವದಲ್ಲಿ ನಲಗುವ ದುಡಿವ ಮಹಿಳೆಯರ ಸಮಸ್ಯೆಗಳನ್ನು ಕುರಿತು ಚಿಂತನೆ ನಡೆಸಿರುವ ಅವರು ಸ್ತ್ರೀಯರಿಗೆ ಶಿಕ್ಷಣ ಮತ್ತು ಉದ್ಯೋಗದ ಅಗತ್ಯವನ್ನು ಬೆಂಬಲಿಸಿದ್ದಾರೆ. ಯುವಜನಾಂಗದಲ್ಲಿ ನೈತಿಕತೆ, ಮೌಲ್ಯನಿಷ್ಠೆ, ಶ್ರಮ ಸಂಸ್ಕೃತಿಯನ್ನು ಪ್ರತಿಪಾದಿಸಿದ್ದಾರೆ. ಹೆಣ್ಣಿನ ಪ್ರತಿಭೆ ಸೃಜನಶೀಲತೆಗಳು ಮನೆಗೆಲಸದಲ್ಲಿ ಮುರುಟದೆ, ಸಶಕ್ತ–ಪ್ರಜ್ಞಾವಂತ ನವಜನಾಂಗದ ನಿರ್ಮಾಣಕ್ಕೆ ವಿನಿಯೋಗವಾಗಬೇಕೆನ್ನುವ ಆಶಯ ಹೊಂದಿದ್ದ ಅವರು ಪರಿಸರ ರಕ್ಷಣೆ, ಪ್ರಜಾಪ್ರಭುತ್ವ, ರಾಷ್ಟ್ರಪ್ರೇಮ, ವಿಶ್ವಸಮಾಜ, ಸಾಮಾಜಿಕ ಶಾಂತಿ ಕುರಿತು ಬರೆದಿರುವ ಲೇಖನ–ಕವಿತೆಗಳಲ್ಲಿ ಅವರ ಸಾಮಾಜಿಕ ಸಂವೇದನೆ, ಮೌಲ್ಯನಿಷ್ಠೆ ವ್ಯಕ್ತವಾಗಿದೆ. ಸರ್ವರಿಗೂ ಶಿಕ್ಷಣ ಲಭ್ಯವಾಗಬೇಕೆನ್ನುವುದು ಅವರ ಬಯಕೆ. ಶಾಂತಿಯುತ ಸಮಾಜ–ಬಲಿಷ್ಠರಾಷ್ಟ್ರ ಅವರ ಹೆಬ್ಬಯಕೆ.

ಯೋಚಿಸಿದ್ದು ಬಹಳ; ಆದರೆ ಬರೆದದ್ದು ಕಡಿಮೆ ಎನ್ನುವ ತಮ್ಮ ಮನದಾಳದ ವೇದನೆಯನ್ನು ಹಂಚಿಕೊಳ್ಳುತ್ತಲಿದ್ದ ಅವರು ಗಟ್ಟಿಯಾಗಿ ನಿಲ್ಲಬಲ್ಲ ಸತ್ವಪೂರ್ಣ ವೈಚಾರಿಕ ಸಾಹಿತ್ಯವನ್ನು, ಕತೆ– ಕವನ ಚರಿತ್ರೆ, ಶಿಕ್ಷಣ ಚಿಂತನೆಗಳನ್ನು, ವ್ಯಾಖ್ಯಾನ – ವಿಮರ್ಶೆಯ ಕೃತಿಗಳನ್ನು ಬಿಟ್ಟುಹೋಗಿದ್ದಾರೆ. ಸ್ವಭಾವತಃ ನಿರ್ಭೀತ ಅಷ್ಟೇ ಸ್ವತಂತ್ರ ಪ್ರವೃತ್ತಿಯ ಲಲಿತಾಂಬಾ ಅವರು ಬರವಣಿಗೆಯಲ್ಲಿಯೂ ತಮ್ಮ ಸ್ವಂತಿಕೆಯನ್ನು ಚಿಂತನ–ಮಂಥನದ ಜಿಜ್ಞಾಸೆಯ ಗುಣವನ್ನು ಪ್ರದರ್ಶಿಸಿದ್ದಾರೆ. ಸಂವೇದನಾಶೀಲ ಸ್ವಭಾವದ ಪ್ರೊ.ಲಲಿತಾಂಬ ವ್ಯಕ್ತಿ–ಸಮಾಜ–ಮನೆತನ–ರಾಜಕೀಯ–ಸಮಕಾಲೀನ ಬದುಕು–ಭಾವನೆಗಳನ್ನು ತಮ್ಮ ವೈವಿಧ್ಯಮಯ ಶೈಲಿಯಿಂದ ಕವನ–ರೂಪಕ–

ಲೇಖನಗಳಲ್ಲಿ ನಿರೂಪಿಸಿರುವುದು ಒಂದು ವಿಶೇಷ. ಮುಖ್ಯವಾಗಿ ಮನೆತನದ ಪ್ರೀತಿ–ಒಡಕು–ಅಂಧಾನುಕರಣೆಗಳನ್ನು ಕುರಿತ ಕತೆ ಕವನಗಳು ಜನಪ್ರಿಯತೆ ಗಳಿಸಿವೆ. ಮಹಿಳೆಯರು ವಿಶೇಷವಾಗಿ ತೊಡಗಿಕೊಳ್ಳದಿದ್ದ ವಚನ ವ್ಯಾಖ್ಯಾನ–ವಿಮರ್ಶೆ, ಶಿಕ್ಷಣ ಚಿಂತನೆ, ಮಕ್ಕಳ ಸಾಹಿತ್ಯ ರಚನೆಯ ವಿಶಿಷ್ಟ ಪ್ರಯತ್ನಗಳಿಂದ ಗಮನ ಸೆಳೆದ ಅವರು ಹಲವಾರು ಪ್ರಶಸ್ತಿಪುರಸ್ಕಾರಗಳನ್ನು ಪಡೆದಿದ್ದಾರೆ. 'ವಚನಾಂಜಲಿ' (೧೭೪ ವಚನಗಳ ವ್ಯಾಖ್ಯಾನ ಕೃತಿ)ಗೆ 'ಕಾವ್ಯಾನಂದ' ಪ್ರಶಸ್ತಿ, 'ಮಕ್ಕಳ ಶಿಕ್ಷಣ ಚಿಂತನೆಗಳು' ಕೃತಿಗೆ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ 'ರತ್ನಮ್ಮ ಹೆಗ್ಗಡೆ' ಗ್ರಂಥ ಬಹುಮಾನವನ್ನು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನಿಂದ 'ಕದಳಿಶ್ರೀ' ಪುರಸ್ಕಾರವನ್ನು (೨೦೦೧)ಪಡೆದರು. ತಮ್ಮ ಬರಹಗಳುದ್ದಕ್ಕೂ ಪ್ರತಿಪಾದಿಸುತ್ತಲೇ ಬಂದ ಸಮಾಜಮುಖಿ ಆದರ್ಶಗಳನ್ನು ತಮ್ಮ ಬದುಕಿನಲ್ಲಿಯೂ ಪ್ರದರ್ಶಿಸಿದರೆನ್ನುವುದು ಅವರ ವ್ಯಕ್ತಿತ್ವದ ಅನನ್ಯತೆ. 'ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ' ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಬೇಡಿದವರುಂಟೆ' ಎನ್ನುವ ಅನುಭವ ಆದರ್ಶಗಳು ಸಮಕಾಲೀನ ಬದುಕಿನಲ್ಲಿ ಮೌಲ್ಯಕಳೆದುಕೊಂಡಿರುವುದನ್ನು ಕುರಿತು ಸ್ವತಃ ಕತೆ –ಕವನ ಬರೆದ ಲಲಿತಾಂಬಾ, ನಿಜ ಜೀವನದಲ್ಲಿ ಮಾತ್ರ ಧರ್ಮಶ್ರದ್ಧೆ, ಮೌಲ್ಯನಿಷ್ಠೆ, ತತ್ವನಿಷ್ಠೆಯನ್ನು ಗಾಢವಾಗಿ ಕಾಯ್ದುಕೊಂಡು ಬಂದರು. ತಮ್ಮ ದುಡಿಮೆಯ ಫಲವನ್ನು ಕಷ್ಟದಲ್ಲಿದ್ದವರೊಂದಿಗೆ ಹಂಚಿಕೊಂಡರು. ಬಂಧು–ಬಾಂಧವರಿಗೆ ಉದಾರ ರೀತಿಯ ಸಹಾಯ ಹಸ್ತನೀಡಿದರು. ಮಾತ್ರವಲ್ಲ ಹತ ಭಾಗ್ಯ ಮಕ್ಕಳ ಶೈಕ್ಷಣಿಕ ನೆರವಿಗಾಗಿಯೂ ವಿನಿಯೋಗಿಸಿದರು. ಅನಾಥ ಮಕ್ಕಳ ವಸತಿ ಶಾಲೆಗಾಗಿ ಮೈಸೂರು ಜಿಲ್ಲೆಯ ಸುತ್ತೂರಿನ ಜೆ.ಎಸ್.ಎಸ್. ಮಹಾವಿದ್ಯಾಪೀಠಕ್ಕೆ ೧ಲಕ್ಷ ರೂಪಾಯಿ ದೇಣಿಗೆ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತು, ಉತ್ತರ ಕರ್ನಾಟಕ ಲೇಖಕಿಯರ ಸಂಘಗಳಿಗೆ ದತ್ತಿನಿಧಿಯನ್ನು, ಧಾರವಾಡದ ಎಚ್.ಎಫ್. ಕಟ್ಟೀಮನಿ ಪುಸ್ತಕ ಓದು ನೆರವು ನಿಧಿ'ಗೆ, ಹೊಸಪೇಟೆಯ ಶ್ರೀ ಕೊಟ್ಟೂರು ಸ್ವಾಮಿ ಮಠಕ್ಕೆ "ಶರಣ ಸಾಹಿತ್ಯ ಪ್ರಸಾರ ನಿಧಿ" ಧಾರವಾಡದ ಜಂಗಮ ಸಂಸ್ಥೆಯ ನಿವೇಶನ ನಿಧಿಗೆ ಉದಾರವಾಗಿ ದಾನ ನೀಡಿದ್ದಾರೆ. ಧಾರವಾಡ ಕರ್ನಾಟಕ ಕಾಲೇಜು, ಆಕಾಶವಾಣಿ ವೃತ್ತದಲ್ಲಿರುವ ವಿದ್ಯಾಗಣಪತಿ ದೇವಸ್ಥಾನಕ್ಕೆ ವಿಶೇಷ "ಭಕ್ತಿಕಾಣಿಕೆ" ನೀಡಿರುವುದು ಅವರ ಧರ್ಮ–ಭಕ್ತಿ ಸಾಮಾಜಿಕ ನಿಷ್ಠೆಯ ಪ್ರತೀಕ. ಹೀಗೆ ಸಾಹಿತ್ಯ ಸಂಸ್ಕೃತಿಯ ಪೋಷಣೆಗೆ, ಅಶಕ್ತರ ನೆರವಿಗೆ ಉದಾರವಾಗಿ ನೆರವು ನೀಡಿದರು ಮಾತ್ರವಲ್ಲ. ಪ್ರತಿ ವರ್ಷ

ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಪ್ರೊ. ಲಲಿತಾಂಬ ವೃ.ಸ್ವಾಮಿ ಹೆಸರಿನಲ್ಲಿ "ಸಾಹಿತಿ ದಂಪತಿ" ಪುರಸ್ಕಾರ ದತ್ತಿ ನೀಡಲು ದೇಣಿಗೆ ನೀಡಿದ್ದಾರೆ.

**ಮಾತಾಡಿದರೆ ಮಲ್ಲಿಗೆ – ನಡೆದರೆ ದಾರಿದೀಪ :**

ನಿರಂತರವಾಗಿ ಚಿಂತನಶೀಲರಾದ ಲಲಿತಾಂಬಾ ತಮ್ಮ ಮನಸ್ಸಿನಲ್ಲಿ ಸಮೃದ್ಧವಾದ ಅನುಭವ ಪ್ರಪಂಚದ ಗಂಟನ್ನು ಕಟ್ಟಿಕೊಂಡಿದ್ದರು. ಗಂಟನ್ನು ಬಿಚ್ಚಿ ಅದರೊಳಗಿನ ಚಿತ್ತ ಚಿತ್ತಾರದ ಪ್ರಪಂಚವನ್ನು ಕಥೆ, ಕವನಗಳಾಗಿಸುವ ಜೀವನೋತ್ಸಾಹವನ್ನೂ ಹೊಂದಿದ್ದರು. ಆದರೆ ಉದ್ಯೋಗಸ್ಥ ಜೀವನದ ಒತ್ತಡ, ವೃತ್ತಿ ಪರಿಸರದಲ್ಲಿಯ ಸಮಸ್ಯೆಗಳು, ಕೌಟುಂಬಿಕ ಜವಾಬ್ದಾರಿಗಳಿಂದಾದ ಅಡೆತಡೆಗಳು ಸಮಯದ ಅಭಾವ, ಆರೋಗ್ಯದ ಸಮಸ್ಯೆಯಿಂದಾಗಿ ಆ ಅನುಭವದ ಬುತ್ತಿಯ ಗಂಟನ್ನು ಪೂರ್ಣವಾಗಿ ಹಂಚಲು ಸಾಧ್ಯವಾಗದಿರುವ ಬಗೆಗಿನ ವಿಷಾದವನ್ನು ಅವರು ಮತ್ತೆ ಮತ್ತೆ ತಮ್ಮ ಕೃತಿಗಳ 'ಅರಿಕೆ'ಯಲ್ಲಿ ಹೇಳಿಕೊಂಡಿದ್ದಾರೆ. ವ್ಯವಧಾನವಿಲ್ಲದ ಬದುಕಿನ ಒತ್ತಡದಲ್ಲಿಯೂ ಚಿಮ್ಮಿ ಬಂದ ಕಥೆ – ಕವನ ಲೇಖನಗಳನ್ನು ವ್ಯವಸ್ಥಿತವಾಗಿ ಸಂಯೋಜಿಸಿ ಪ್ರಕಟಿಸಲಾಗಲಿಲ್ಲವೆನ್ನುವ ಕೊರಗನ್ನೂ ವ್ಯಕ್ತಪಡಿಸಿದ್ದಾರೆ. ಆದರೆ ಸರಸ ಸಂಸಾರ, ಸಾಹಿತ್ಯೋಪಾಸಕ, ಸಮರ್ಥ ಸಂಶೋಧಕ ಲೇಖಕ, ವಿದ್ವಾಂಸ, ಪ್ರಾಧ್ಯಾಪಕ ಪತಿ ಡಾ. ವೃಷಭೇಂದ್ರ ಸ್ವಾಮಿಯವರ "ನೆರಳಿನಲ್ಲಿ ನೆರಳಾಗದೆ" ಸ್ವಂತಿಕೆಯ ಅರಳಾದ ಪ್ರೊ. ಲಲಿತಾಂಬ ತಮ್ಮ ಬದುಕು ಬರಹಗಳಲ್ಲಿ ತಮ್ಮ ಅನನ್ಯತೆ ಮತ್ತು ವ್ಯಕ್ತಿ ವಿಶಿಷ್ಟತೆಯನ್ನು ಕಾಯ್ದುಕೊಂಡಿರುವುದು ಒಂದು ಮಹತ್ವದ ಸಂಗತಿ.

**ಜೀವನೋತ್ಸೋಹದ ಸವಿ ಸೆಲೆ :**

ಈ ಎಲ್ಲ ಬಿಕ್ಕಟ್ಟಿನಲ್ಲಿಯೂ ಜೀವನೋತ್ಸಾಹ ಕಳೆದುಕೊಳ್ಳದ ಅವರೊಳಗಿನ ಛಲಗಾತಿ ಲೇಖಕಿ ಅವರನ್ನು ನಿರಂತರವಾಗಿ ಕಾಡಿದ್ದಾಳೆ. ಸಾವಿನ ಮಂಚದ ಮೇಲೆ ಮಲಗಿ ಕೊನೆಗಾಲದಲ್ಲಿ ಅನಾರೋಗ್ಯದ ಹಿಂಸೆಯನ್ನು ಅನುಭವಿಸುತ್ತ ದಿನವನೆಣಿಸುತ್ತಿದ್ದಾಗಲೂ ಅವರೊಳಗಿನ ಕವಯಿತ್ರಿ ಪಿಸುಗುಡುತ್ತಲೇ ಇದ್ದಳೆನ್ನುವುದಕ್ಕೆ ಸಾಕ್ಷಿಯಾದ, ಅನಾರೋಗ್ಯದ ನಿದ್ರಾಹೀನ ರಾತ್ರಿಯಲ್ಲಿ ಬರೆದ ಅವರ ಕವನ (ಬಹುಶಃ ಅವರ ಕೊನೆಯ ಕವನ) ಇಲ್ಲಿದೆ.

ಸದ್ದು ಮಾಡಬೇಡಿ ನಿದ್ದೆ ಬಂದಿದೆ ನಿದ್ದೆ,
ನಿದ್ದೆ ಬಂದಾಗ ಹೆಚ್ಚು ಕಡಿಮೆಯಾದರೆ
ಆಗುವ ಪರಿಯ ಅನುಭವಿಕರನ್ನೇ ಕೇಳಿ
ಬಂದು ನಿದ್ದೆ, ನಿದ್ದೆ ಮಾಡಬೇಕೆನಿಸಿದರೂ

ಮುಚ್ಚಿಬರುತ್ತಿದ್ದರೂ ಕಣ್ಣು, ಬಾರದು ನಿದ್ದೆ
ಆಗಾಗುವ ಹಿಂಸೆ ಅನುಭವಿಸಿದವನೇ ಬಲ್ಲ
ಅದಕ್ಕಾಗಿ ನಿದ್ದೆ ಬಂದಾಗ ಅಡ್ಡಿಮಾಡಬೇಡಿ

ಹೀಗೆ ಸಾಗುವ ಕವನ ಒಳ್ಳೆಯ, 'ನಿದ್ದೆ'ಯ ಸುಖವನ್ನು, ಕೆಟ್ಟನಿದ್ದೆಯ ಕಾಟವನ್ನು, ನಿದ್ರೆಯಿಲ್ಲದೆ ಚಡಪಡಿಸುವವರ ಚಿತ್ರಹಿಂಸೆಯನ್ನು ವಿವರವಾಗಿ ನಿರೂಪಿಸುತ್ತ ಹೋಗಿದೆ. 'ಶರಣರ ಮಹಿಮೆಯ ಮರಣದಲ್ಲಿ ನೋಡು' ಎನ್ನುವ ಅನುಭವ ಮಾತಿದೆ. ಜೀವನದ ಚಿರನಿದ್ರೆಗೆ ಸಾಗುವ ಮುನ್ನ, ಪ್ರೊ. ಲಲಿತಾಂಬ ಮಗ-ಸೊಸೆ- ಮೊಮ್ಮಗಳನ್ನು ಕರೆಯಿಸಿಕೊಂಡು, ಎಲ್ಲ ಬಂಧು-ಮಿತ್ರ-ಬಾಂಧವರನ್ನು ಬರಮಾಡಿಕೊಂಡು, ಮಗನ ಹಸ್ತದಲ್ಲಿ ತಲೆಯಿಟ್ಟು, ಮೊಮ್ಮಗಳು ಸೊಸೆಯ ಕೈಯಿಂದ 'ನೀರು ಕುಡಿಸಿಕೊಂಡು, ಪತಿಯ ಬೆನ್ನಿನ ಮೇಲೆ ಕೈಯಿಟ್ಟು, ಶಿವಶಿವ ಶಂಭುಲಿಂಗ-ಶ್ರೀ ವೀರಭದ್ರ-ಬಸವ-ಅಕ್ಕರನ್ನು ಮೇಲುದನಿಯಲ್ಲಿ ಸ್ಮರಿಸುತ್ತ, ತಾವು ಕಟ್ಟಿದ ಧಾರವಾಡದ ಕಲ್ಯಾಣನಗರದ 'ಶಿವಪ್ರಸಾದ'ದಲ್ಲಿ ಶ್ರಾವಣ ಸೋಮವಾರ, ಮುತ್ತೈದೆಯಾಗಿ ಪ್ರಶಾಂತವಾಗಿ ಕೊನೆಯುಸಿರೆಳೆದು ಚಿರಶಾಂತಿಯ ಚಿರನಿದ್ರೆಗೆ ಸಂದುದು ಪುಣ್ಯ ವಿಶೇಷ. (೧೪-೮-೨೦೦೭) ಸ್ವಾತಂತ್ರ್ಯೋತ್ಸವದ ಮುನ್ನಾ ದಿನ, ಸಾವಿರಾರು ಶಿಷ್ಯರು, ಬಂಧುಗಳು, ಅಭಿಮಾನಿಗಳು, ಅವರ ಅಂತಿಮ ಯಾತ್ರೆಯಲ್ಲಿ ಪಾಲ್ಗೊಂಡು, ವಿಶ್ವವಿದ್ಯಾಲಯದ ಪುಣ್ಯಭೂಮಿಯಲ್ಲಿ ವಿಧ್ಯುಕ್ತವಾದ ಸಂಸ್ಕಾರ ಮಾಡಿ ಅವರ ಗುಣಗಾನ ಮಾಡಿದ ದೃಶ್ಯ ಮನಕಲಕುವಂತಿತ್ತು. ಪ್ರೊ. ಲಲಿತಾಂಬಾ ಜೀವನದಲ್ಲಿ ಸಾರ್ಥಕತೆ ಪಡೆದಂತೆ ಸಾವಿನಲ್ಲಿಯೂ ಸಾರ್ಥಕತೆ ಸಾಧಿಸಿದರು. ೨-೯-೨೦೦೭ರ ಅವರ "ಪುಣ್ಯಸ್ಮರಣೋತ್ಸವ." ಅಭಿಮಾನಿಗಳ ಶ್ರದ್ಧಾಂಜಲಿ ಭಾಷಣಗಳು ಶ್ರೀಸುತ್ತೂರು ಶ್ರೀಗಳು, ಶ್ರೀವಿ.ಎಸ್. ಮಳೀಮಠ, ಶ್ರೀವೀರೇಂದ್ರ ಹೆಗ್ಗಡೆ ಮುಂತಾದ ಗಣ್ಯ ಮಾನ್ಯರ ಶ್ರದ್ಧಾಂಜಲಿ ಸಂದೇಶಗಳು ಅವರ ಪುಸ್ತಕ ಭಾವಚಿತ್ರಗಳ ಪ್ರದರ್ಶನ (ಅನುಬಂಧ ನೋಡಿರಿ) ಸರ್ವರಿಗೆ ಪ್ರಸಾದ ವಿತರಣೆ, ಒಂದು ಅನನ್ಯ ರೀತಿಯ ಶ್ರದ್ಧೆಯ ಉತ್ಸವವಾದುದು ಪ್ರೊ॥ಲಲಿತಾಂಬಾ ಅವರ "ಶರಣ ಜೀವನ"ದ ಪುಣ್ಯ ವಿಶೇಷ.

ಪ್ರೊ॥ಲಲಿತಾಂಬಾ ಮತ್ತು ಡಾ॥ ವೃಷಭೇಂದ್ರಸ್ವಾಮಿಯವರ ದಾಂಪತ್ಯದ ರಜತ-ಸುವರ್ಣವರ್ಷಗಳು ಸಾಹಿತ್ಯ ಉತ್ಸವಗಳಾಗಿ ಆಚರಿಸಿದ್ದು ಸ್ಮರಣೀಯ. ವಿವಾಹದ 'ಸುವರ್ಣ' ಉತ್ಸವದ, ಅದರ ನೆನಪಾಗಿ ಮಕ್ಕಳಿಗಾಗಿ ಕಿವಿಗೊಟ್ಟು ಕೇಳಿ. ಮನಸ್ಸಿಟ್ಟು ಮಾಡು ಮಗುವೇ ಎಂಬ ಕಿರುಪುಸ್ತಕ ಪ್ರಕಟಿಸಿ, ಮಕ್ಕಳೆಲ್ಲರಿಗೆ ಪುಕ್ಕಟೆಯಾಗಿ ಹಂಚಿದರು ಪ್ರೊ. ಲಲಿತಾಂಬಾ.

೭೭ವರ್ಷಗಳ ಸಾರ್ಥಕ -ಸಂತೃಪ್ತ ಬಾಳನ್ನು ಅನುಭವಿಸಿ ಎದ್ದು ಹೋಗಿರುವ ಮಾತೃಶ್ರೀ ಲಲಿತಾಂಬಾ ಅವರು ತಮ್ಮ ಬದುಕಿನ ಬಹುದೊಡ್ಡ ಭಾಗವನ್ನು ಧಾರವಾಡದಲ್ಲಿ ಕಳೆದರು. ಇಲ್ಲಿಯ ಶಿಕ್ಷಣ-ಸಾಹಿತ್ಯ-ಸಾಂಸ್ಕೃತಿಕ ಪರಿಸರದ ಸತ್ವವನ್ನು ಹೀರಿಕೊಂಡು, ತಮ್ಮಲ್ಲಿನ ಸೃಜಶೀಲತೆಯನ್ನು ಉದ್ದೀಪಿಸಿ ಆದರ್ಶ ಮಹಿಳೆಯಾದರು. ಆದರ್ಶ ಮನುಷ್ಯರಾದವರು ಮಾತ್ರ ಆದರ್ಶ ಶಿಕ್ಷಕರಾಗಬಲ್ಲರೆನ್ನುವುದಕ್ಕೆ ಲಲಿತಾಂಬಾ ಜ್ವಲಂತ ನಿದರ್ಶನ. ಆದರ್ಶ ಶಿಕ್ಷಕಿಯಾಗಿ, ಪತ್ನಿಯಾಗಿ, ಆದರ್ಶ ತಾಯಿಯಾಗಿ, ಆದರ್ಶ ಗೃಹಿಣಿಯಾಗಿ ಪ್ರೊ।ಲಲಿತಾಂಬಾ ನೆನದವರ 'ಮನದಲ್ಲಿಗೆಯಾಗಿ ಪರಿಮಳಿಸುವ ಪುಣ್ಯ ಸ್ಮರಣೆಯಾಗಿ, ತಮ್ಮ ಬರಹಗಳಲ್ಲಿ ಜೀವಂತವಾಗಿದ್ದಾರೆ. ಶಿಷ್ಯರಲ್ಲಿ ಚೇತನವಾಗಿದ್ದಾರೆ. ನಾಡು-ನುಡಿ, ಸಮಾಜ-ಮಕ್ಕಳು-ಮಹಿಳೆಯರ ಅಭ್ಯುದಯದ ಕನಸುಗಳನ್ನು ಹಂಚುತ್ತ ಭರವಸೆಯ ಹಣತೆ ಹಚ್ಚುತ್ತ ಬದುಕಿದ್ದಾರೆ; ಭೌತಿಕವಾಗಿಯಲ್ಲ; ಭಾವನೆ ತುಂಬಿದ ಓದುಗರ ಮನಮಂದಿರದಲ್ಲಿ, ಆತ್ಮೀಯತೆಯಿಂದ ಸ್ಮರಿಸಿಕೊಳ್ಳುವ ಬಂಧು-ಬಾಂಧವ-ಶಿಷ್ಯ-ಮಿತ್ರೆಯರ ಪುಣ್ಯ ಸ್ವರಣೆಯಲ್ಲಿ. ಅವರ ಪುಣ್ಯಸ್ಮರಣೋತ್ಸವದ ಕುರುಹಾಗಿ, ಪ್ರಕಟವಾಗಿತ್ತಿರುವ ಪ್ರೊ।ಲಲಿತಾಂಬಾ ಸಮಗ್ರ ಕೃತಿ ಸಂಪುಟ-೧, ೨, ೩ ಇದಕ್ಕೆ ಸಾಕ್ಷಿ. ಇದಲ್ಲವೆ ಸಾರ್ಥಕ ಬದುಕು! ಇದಲ್ಲವೆ ಸಾರ್ಥಕ ಬರಹ!

'ಸತಿ-ಪತಿಗಳೊಂದಾದ ಭಕ್ತಿ, ಹಿತವಾಗಿಪ್ಪುದು ಶಿವಂಗೆ' ಎಂಬ ಶರಣರ ಉಕ್ತಿಗೆ ಈ 'ದಾಂಪತ್ಯ-ದಂಪತಿಗಳು' ಒಂದು ಜೀವಂತ ಉದಾಹರಣೆ, ಈ ಕೃತಿ ಸಂಪುಟಗಳೇ ಅದಕ್ಕೆ ಸಾಕ್ಷಿ. ಒಬ್ಬ 'ಹೆಣ್ಣುಮಗಳು'- ಇಂದಿನ ವಿಷಮ ಪರಿಸ್ಥಿತಿಯಲ್ಲಿಯೂ ಏನೆಲ್ಲ ಸಾಧನೆ, ಎಂತೆಂಥ ಜನರ ಮೆಚ್ಚುಗೆ, ಗೌರವ ಸಾಧನೆ ಮಾಡಿದುದು ಸ್ಮರಣೀಯ ಆದರ್ಶ. ಇದಕ್ಕೆ ಈ ಮೂರು ಸಂಪುಟಗಳೇ ಮೂಕ ಸಾಕ್ಷಿಗಳು. ಪ್ರೊ. ಲಲಿತಾಂಬವೃಷಭೇಂದ್ರಸ್ವಾಮಿ ಅವರು ಈ ಲೋಕದಲ್ಲಿ 'ನಿಶ್ಯಬ್ದ'ವಾದರೂ, ಸಹೃದಯ ಲೋಕದ ಸ್ಮರಣಿಯಲ್ಲಿ 'ಶಬ್ದ'ವಾಗಿ, ಅಕ್ಷರ ರೂಪದಲ್ಲಿ ಚಿರಂತನವಾಗಿ ಉಳಿದಿರುವರೆಂಬುದು ಸಮಾಧಾನದ ಸಂಗತಿ,

ಶರಣು.....

– ಶಾಂತಾ ಇಮ್ರಾಪೂರ

'ಚಿತ್ತಾರ'
ನಿರ್ಮಲ ನಗರ, ೧೩ನೆಯ ಅಡ್ಡರಸ್ತೆ
ಧಾರವಾಡ-೫೮೦ ೦೦೩

## ಪ್ರಾಸ್ತಾವಿಕ

## ಕಥಾಂಜಲಿ – ಚಿಂತನಾಂಜಲಿ

ವೈಚಾರಿಕ ಬರಹಗಳ ಮೂಲಕ ಸಾಹಿತ್ಯ ಕೃಷಿ ಆರಂಭಿಸಿದ ಲಲಿತಾಂಬಾ ಅವರು ಮುಂದಿನ ದಿನಗಳಲ್ಲಿ ಕಥೆ ಕವನ ಶಿಕ್ಷಣ–ಚಿಂತನೆ–ಚುಟುಕು–ರೂಪಕ ಹೀಗೆ ಹಲವಾರು ಪ್ರಕಾರಗಳಲ್ಲಿ ತಮ್ಮ ಸೃಜನಶೀಲತೆಯನ್ನು ಪ್ರಕಟಿಸಿದ್ದಾರೆ. ಸಮಾಜಪರವಾದ, ಸಮಷ್ಟಿ ಚಿಂತನೆಯ ಪ್ರವೃತ್ತಿಯುಳ್ಳ ಲಲಿತಾಂಬಾ ಅವರು ಸಹಜವಾಗಿಯೇ ತಮ್ಮ ಸುತ್ತಲಿನ ಸಮಾಜವನ್ನು ಕುತೂಹಲದಿಂದ ಗಮನಿಸಿದ್ದಾರೆ. ನೆರೆ–ಹೊರೆಯ ಪರಿಸರದಿಂದ, ಉದ್ಯೋಗ ನಿಮಿತ್ತವಾಗಿ ಸಾರ್ವಜನಿಕ ಕ್ಷೇತ್ರದಿಂದ ಪಡೆದ ಜೀವನಾನುಭವಗಳಿಂದ ತಾವು ಗ್ರಹಿಸಿದ ಬದುಕಿನ ವಾಸ್ತವ ಮತ್ತು ವೈಪರೀತ್ಯಗಳನ್ನು ಕಥೆಯಾಗಿಸಿದ್ದಾರೆ. ಮಧ್ಯಮ ವರ್ಗದ ಅವಿಭಕ್ತ ಕುಟುಂಬದ ಸುಸಂಸ್ಕೃತ ಪರಿಸರದಲ್ಲಿ ಹುಟ್ಟಿ ಬೆಳೆದ ಲೇಖಕಿ ತಾವು ತೀರ ಹತ್ತಿರದಿಂದ ಕಂಡು ಕೇಳಿದ ಮನಸ್ಸನ್ನು ತಟ್ಟಿ ಮುಟ್ಟಿ–ಕಾಡಿದ ಹೆಣ್ಣಿನ ಕೌಟುಂಬಿಕ ಬದುಕಿನ ಸಂದಿಗ್ಧತೆಗಳಿಗೆ ಅವಿಭಕ್ತ ಕುಟುಂಬದ ಒಳಯಾತನೆಗಳಿಗೆ ಕಥೆಯ ಹಂದರದಲ್ಲಿ ಜೀವ ತುಂಬಿದ್ದಾರೆ. ಮನುಷ್ಯ ಗುಣ ಸ್ವಭಾವಗಳ ಸೂಕ್ಷ್ಮದರ್ಶನ, ವಿವರಣಾತ್ಮಕವಾದರೂ ಸಂವೇದನಾಶೀಲವೆನಿಸುವ ಹೃದ್ಯವಾದ ನಿರೂಪಣಾ ಶೈಲಿಯಲ್ಲಿರುವ ಅವರ ಹಲವಾರು ಕತೆಗಳು ಲಲಿತಾಂಬ ಅವರ ವಿಸ್ತೃತ ಲೋಕಾನುಭವ ಮತ್ತು ಸಮಾಜದ ಸೂಕ್ಷ್ಮ ನಿರೀಕ್ಷಣೆ, ಪ್ರಬುದ್ಧ ಚಿಂತನೆ, ಮನುಷ್ಯ ಸ್ವಭಾವದ ವಾಸ್ತವ ತಿಳುವಳಿಕೆಗಳಿಗೆ ನಿದರ್ಶನಗಳಾಗಿವೆ.

**ಬೇರೊಂದು ಮರವೆರಡು (೨೦೦೧) :**

'ಬೇರೊಂದು ಮರವೆರಡು' ಲಲಿತಾಂಬಾ ಅವರ ಆಯ್ದ ಹನ್ನೆರಡು ಕಥೆಗಳ ಮೊದಲ ಸಂಕಲನ. ಮನುಷ್ಯ ಸ್ವಭಾವದ ವೈಚಿತ್ರ್ಯಗಳನ್ನು ಮತ್ತು ಕೌಟುಂಬಿಕ ಸಂಬಂಧಗಳ ವಿಕ್ಷಿಪ್ತತೆಗಳನ್ನು ಕಥೆಯಾಗಿಸಲಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿಯ ಸ್ತ್ರೀ ಸಮಾಜದ ಬಿಕ್ಕಟ್ಟುಗಳನ್ನು, ತಲೆಮಾರುಗಳ ಅಂತರದಲ್ಲಿ ಹುಟ್ಟಿಕೊಳ್ಳುವ ವಿಭಿನ್ನ ಕೌಟುಂಬಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಚಿತ್ರಿಸುವ

ಹಲವಾರು ಕಥೆಗಳು ಸ್ವಕೇಂದ್ರಿತ ಧೋರಣೆಗಳಿಂದ ಛಿದ್ರಗೊಳ್ಳುತ್ತಿರುವ ಮಾನವೀಯ ಸಂಬಂಧಗಳ ಶಿಥಿಲತೆಯನ್ನು ಅನಾವರಣಗೊಳಿಸುತ್ತವೆ.

ಔದಾರ್ಯ–ಸಹನೆ–ಸಹಬಾಳ್ವೆಯ ಸುಭದ್ರ ಅಡಿಪಾಯದ ಮೇಲೆ ಸಾಗಿ ಬಂದಿರುವ ಭಾರತದ ಕುಟುಂಬ ಸಂಸ್ಕೃತಿಯ ಆದರ್ಶಗಳಲ್ಲಿ ಅಪಾರ ಶ್ರದ್ಧೆಯುಳ್ಳ ಲೇಖಕಿ, ಮನುಷ್ಯನ ಸ್ವಾರ್ಥ–ಸಣ್ಣತನಗಳಿಂದಾಗಿ ಕೌಟುಂಬಿಕ ಸಾಮರಸ್ಯವು ಕಣ್ಮರೆಯಾಗುತ್ತಿರುವ ದುರಂತವನ್ನು ಇಲ್ಲಿಯ ಅನೇಕ ಕಥೆಗಳಲ್ಲಿ ಚಿತ್ರಿಸಿದ್ದಾರೆ. ತಂದೆ–ಮಕ್ಕಳ ರಕ್ತ ಸಂಬಂಧಗಳು ವ್ಯಾವಹಾರಿಕವಾಗುವ ಬಗೆ, ಮಕ್ಕಳಿಗಾಗಿ ಬದುಕನ್ನೆಲ್ಲ ಸವೆಸಿದ ತಾಯಿಯು ಕೊನೆಗಾಲದಲ್ಲಿ ಮಕ್ಕಳ ತಿರಸ್ಕಾರ ಅನಾದರಕ್ಕೆ ಗುರಿಯಾಗಿ ಹತಾಶೆಯಲ್ಲಿ ಕೊನೆಯುಸಿರೆಳೆಯುವ ಅಮಾನವೀಯ ಬದುಕಿನ ವಾಸ್ತವಗಳು, ಒಟ್ಟಾರೆ ಕೌಟುಂಬಿಕ ಬಾಂಧವ್ಯಗಳು ಶಿಥಿಲಗೊಳ್ಳುತ್ತಿರುವ ದುರಂತವನ್ನು ಯೋಚಿಸುವಂತೆ ಮಾಡುತ್ತದೆ. ಕಥಾ ಸಂಕಲನದ ಶೀರ್ಷಿಕೆಯ ಕಥೆ, 'ಬೇರೊಂದು ಮರವೆರಡು' ಒಂದು ಕೌಟುಂಬಿಕ ಕಥೆ. ಹಂಬಲಿಸಿ ಹೆತ್ತು ಕಣ್ಣರೆಪ್ಪೆಯಲ್ಲಿಟ್ಟು ಕಾಪಾಡಿ ಬೆಳೆಸಿ ಬುದ್ಧಿವಂತರನ್ನಾಗಿ ಮಾಡಿದ ತಾಯಿಗೆ ಆಕೆಯ ವೃದ್ಧಾಪ್ಯದಲ್ಲಿ ಆಸರೆ ನೀಡದೆ ಒಂಟಿಯಾಗಿ ಬಿಟ್ಟು ಹೋದ ಸ್ವಾರ್ಥಿ ಮಕ್ಕಳ ಕೃತಘ್ನತೆ ಮತ್ತು ಅಸಹಾಯಕ ತಾಯಿಯ ಮನೋವೇದನೆಯ ಕಥೆಯಿದು. ಪಾತ್ರಗಳ (ತಾಯಿ–ಮಗ) ಸ್ವಗತಗಳ ಮೂಲಕ ಕಥೆಯನ್ನು ನಿರೂಪಿಸುವ ವಿಶಿಷ್ಟ ತಂತ್ರವಿದೆ. 'ತೀರ್ಪು' ಕಥೆ ತಂದೆ ಮಕ್ಕಳ ಸಂಬಂಧದ ಬಿರುಕುಗಳನ್ನು ಶೋಧಿಸುವ ಕಥೆ. ತಂದೆಯ ಸಂಪತ್ತಿನ ವಾರಸುದಾರಿಕೆಯನ್ನು ಹಕ್ಕು ಎಂದು ಚಲಾಯಿಸುವ ಗಂಡು ಮಕ್ಕಳು (ಸೊಸೆಯಂದಿರು) ವೃದ್ಧ ತಂದೆಯ ಪಾಲನೆಯನ್ನು ಹೊರೆಯಾಗಿ ಭಾವಿಸುತ್ತಾರೆ. ಹೆತ್ತವರನ್ನು ಅವರ ಬಾಳಸಂಧ್ಯೆಯಲ್ಲಿ ಅನಾಥರನ್ನಾಗಿಸುವ ಈ ವಿದ್ಯಾವಂತ ಹೊಣೆಗೇಡಿ ಕೃತಘ್ನ ಮಕ್ಕಳಿಗೆ–ಸೊಸೆಯಂದಿರಿಗೆ ತಂದೆಯಾದವನು ಪಾಠಕಲಿಸುವ ವಿನೂತನ ಕಥೆ ತೀರ್ಪು ಹೆತ್ತವರನ್ನು ಅನಾರೋಗ್ಯದ–ಅಸಹಾಯಕ ಸ್ಥಿತಿಗೆ ದೂಡಿ, ಅನಾದರಿಸಿದ ಮಕ್ಕಳನ್ನು ತಾನೂ ಉಪೇಕ್ಷಿಸುವ ಮೂಲಕ ತಂದೆಯಾದವನು ತನ್ನೆಲ್ಲ ಆಸ್ತಿಯನ್ನು ತನ್ನ ಸೇವೆ ಮಾಡಿದ ಬಡ ಹುಡುಗಿಗೆ ಕಾನೂನು ಪ್ರಕಾರ ನೀಡುತ್ತಾನೆ. ಮಕ್ಕಳೊಂದಿಗೆ ತನ್ನೆಲ್ಲ ಸಂಬಂಧಗಳನ್ನು ಕಡಿದುಕೊಳ್ಳುವ ಮೂಲಕ ಬೇರಿನ ಸಂಬಂಧ ಕಡಿದುಕೊಂಡ ರೆಂಬೆ–ಕೊಂಬೆಗಳಿಗೆ ಮರದ ಜೀವಸಾರ ದಕ್ಕಲಾರದೆನ್ನುವ ಪ್ರಕೃತಿಯ ತಿರ್ಪನ್ನು ಎತ್ತಿಹಿಡಿಯುತ್ತಾನೆ.

ಆದರ್ಶಗಳ ಗುಂಗಿನಲ್ಲಿ ವಾಸ್ತವಕ್ಕೆ ವಿಮುಖರಾಗಿ ಅಪಾಯಗಳನ್ನು ಮೈಮೇಲೆ ಹಾಕಿಕೊಳ್ಳುವ ಅಸಹಜ ಬದುಕಿನ ಕಥೆ 'ಔದಾರ್ಯ.' ಜೀವನಾನುಭವದ ಬೆಳಕು ನೀಡುವ ಯಶಸ್ವಿ ಕಥೆ. ಅರ್ಥವಿಲ್ಲದ ಸಂಪ್ರದಾಯಗಳಿಗಾಗಿ ವಿವೇಕವಿಲ್ಲದ

ದುಂದುಗಾರಿಕೆಯಿಂದ ದಾನ ಔದಾರ್ಯದ ಹೆಸರಿನಲ್ಲಿ ಹಿರಿಯರ ದುಡಿಮೆಯನ್ನು ಕರಗಿಸಿ ಕೊರಗುವ ಅವಿವೇಕದ ಫಲವನ್ನು ಈ ಕಥೆಯ ಮೂಲಕ ಮನಗಾಣಿಸಲಾಗಿದೆ. "ಕುಳಿತು ಉಂಡರೆ ಕುಡಿಕೆ ಹೊನ್ನು ಸಾಲದು" ಎನ್ನುವ ಅನುಭವೋಕ್ತಿಗೆ ಭಾಷ್ಯವಾಗಿ ನಿಲ್ಲುತ್ತದೆ ಈ ಕಥೆ.

ಲಿಂಗ ತಾರತಮ್ಯದ ಫಲಿತವಾಗಿ ಪುರುಷ ಪ್ರಧಾನ ಸಂಸ್ಕೃತಿಯು ಹುಟ್ಟು ಹಾಕಿರುವ ಹೆಣ್ಣಿನ ಬಗೆಗಿನ ಉಪೇಕ್ಷೆ ತಿರಸ್ಕಾರಗಳು ವಿದ್ಯಾವಂತರೂ ಕೂಡ ಕಳಚಿಕೊಳ್ಳಲಾಗದ ಮಾನಸಿಕ ಮಿತಿಯಾಗಿ, ಹೆಣ್ಣು ಮಕ್ಕಳ ಬದುಕನ್ನು ದುರಂತವಾಗಿಸುವುದನ್ನು ನಿರೂಪಿಸುವ ಕಥೆ 'ಗಂಡು ಮಗುವೇ ಬೇಕು'. ಕಥಾ ನಾಯಕಿ ಕುಶಲೆ ಮುಗ್ಧೆ, ಹೆಣ್ಣು ಮಗುವಿನ ತಾಯಿ. ಗಂಡ-ಮಾವ-ಅತ್ತೆಯ ನಿರೀಕ್ಷೆಯಂತೆ ಗಂಡು ಮಗುವನ್ನು ಹೆತ್ತು ಕೊಡಲಾಗದ್ದಕ್ಕಾಗಿ ಅವರಿಂದ ತೂರಿಬರುವ ಚುಚ್ಚು ಮಾತುಗಳಿಂದ ನೊಂದು, ಅನಾರೋಗ್ಯಕ್ಕೆ ಬಲಿಯಾಗುತ್ತಾಳೆ. ಎರಡನೆಯ ಹೆರಿಗೆಯಲ್ಲಿಯೂ ಹೆಣ್ಣು ಮಗು ಜನಿಸಿದಾಗ ಆಘಾತಗೊಂಡು ರಕ್ತಸ್ರಾವದಿಂದ ಸಾವನ್ನಪ್ಪುತ್ತಾಳೆ. ಗಂಡು ಮಕ್ಕಳ ಮೋಹ ಹೆಣ್ಣಿನ ಅಸ್ತಿತ್ವವನ್ನು ಅಳಿಸಿಹಾಕುವ ಕ್ರೌರ್ಯದ ದರ್ಶನವಿದೆ ಇಲ್ಲಿ.

ಅನೀತಿ-ಅನ್ಯಾಯ-ಅಧರ್ಮವಾದರೂ ಸರಿ, ದುಡ್ಡು ಸಂಪಾದಿಸಬೇಕು. ಮೋಜು ಮಾಡಬೇಕೆನ್ನುವ ಮನುಷ್ಯನ ದುರಾಸೆಯು ಕಲ್ಪನಾತೀತವೆನಿಸುವ ದುರಂತಗಳಿಗೆ ಜಾಲವಾಗುತ್ತದೆ ಎನ್ನುವುದನ್ನು 'ಹೀಗೂ ನಡ್ಯೊದುಂಟೆ' ಎನ್ನುವ ಕಥೆಯು ಸಾಬೀತು ಪಡಿಸುತ್ತದೆ. ಜೊತೆಗೆ ಮನುಷ್ಯ ಮೃಗೀಯ ಲಕ್ಷಣದ ಪರಿಚಯಮಾಡಿಸುತ್ತದೆ. ಸಂಪತ್ತಿನಾಸೆಗಾಗಿ ಸೊಸೆಯನ್ನು ಕೊಲ್ಲುವುದು ಸಾಮಾಜಿಕ ರೂಢಿಯಾಗಿರುವ ಪ್ರಪಂಚದಲ್ಲಿ, ಹೆತ್ತವರು ಹಣದಾಸೆಗಾಗಿ ಅಳಿಯನನ್ನು ಕೊಂದು ಮಗಳ ಬಾಳಿಗೆ ಬೆಂಕಿಯಿಡುವ ಕ್ರೌರ್ಯದ ಮುಖವು ಮನುಷ್ಯ ಸಮಾಜದ ವಿಕೃತಿಗೆ ನಿದರ್ಶನವಾಗಿ ಕಾಡುತ್ತದೆ. ಒಟ್ಟಾರೆ, 'ಬೇರೊಂದು ಮರವೆರಡು' ಸಂಕಲನದ ಕಥೆಗಳು ಭಾರತದ ಸಹಬಾಳ್ವೆಯ ಸಂಸ್ಕೃತಿಯ ಮೂಲಬೇರುಗಳನ್ನು ಕಳಚಿಕೊಳ್ಳುತ್ತಿರುವ ಆಧುನಿಕತೆಯ ಅವಿವೇಕತನಕ್ಕೆ ಎಚ್ಚರದ ಗಂಟೆಯಂತಿವೆ.

**ಮನದ ಮಲ್ಲಿಗೆ (೧೯೫೪) :**

೨೦ನೆಯ ಶತಮಾನದ ಪೂರ್ವಾರ್ಧದಿಂದಲೂ ಕತೆ, ಕಾದಂಬರಿಗಳಂತಹ ಭಾವ ಪ್ರಧಾನ ಕಥನ ಕಲೆಗೆ ಒಲಿದ ಮೊದಲ ತಲೆಮಾರಿನ ಕನ್ನಡ ಲೇಖಕಿಯರು ಬದುಕನ್ನು ಗಂಭೀರವಾಗಿ ಗ್ರಹಿಸಿ ವೈಚಾರಿಕವಾಗಿ ವಿಶ್ಲೇಷಿಸುವಲ್ಲಿ ತೋರಿದ ಕಾಳಜಿ ಕಡಿಮೆಯೆಂದೇ ಹೇಳಬೇಕು. ಹೆಣ್ಣು ಮಕ್ಕಳ ಬೌದ್ಧಿಕ-ತಾರ್ಕಿಕ ಶಕ್ತಿ ಪೂರಣಕ್ಕೆ ಅಗತ್ಯವಾದ ಶಿಕ್ಷಣ, ಸಾಮಾಜಿಕ ಪರಿಸರದ ಕೊರತೆಯಿಂದ ಹೆಣ್ಣು

ಮಕ್ಕಳು ಅಲ್ಪ ತೃಪ್ತರಾಗಿ ಕುಟುಂಬ ಕೇಂದ್ರಿತ ಪ್ರಪಂಚವನ್ನು ತಮ್ಮ ಜಗತ್ತಾಗಿಸಿಕೊಳ್ಳುತ್ತ ಬಂದಿದ್ದಾರೆ. ಸತಿಯಾಗಿ, ತಾಯಿಯಾಗಿ, ಗಂಡಿನ ಆಸೆ ನಿರೀಕ್ಷೆಗಳನ್ನು ಸಾಕಾರಗೊಳಿಸುವಲ್ಲಿಯೇ ತನ್ನ ಅಸ್ತಿತ್ವವನ್ನು ಸಾರ್ಥಕತೆಯನ್ನು ಒಪ್ಪಿಕೊಂಡು ಬಂದ ಕಾರಣ ತನಗೆ ದಕ್ಕಿದ ಸೀಮಿತ ಅನುಭವ ಲೋಕದಲ್ಲಿ ಪಡೆದುಕೊಂಡ ತನ್ನ ಗ್ರಹಿಕೆಯ ಚೂರುಪಾರುಗಳಿಗೆ ತೇಪೆ ಹಾಕುತ್ತ ಸಿದ್ಧಪಡಿಸಿಕೊಂಡ ಅನುಭವದ ಹಾದಿಗೆ ಕಥೆ ಕಾದಂಬರಿಗಳಲ್ಲಿ ಜೀವ ತುಂಬಿದ್ದಾರೆ. ಶಿಕ್ಷಣದ ಸೌಲಭ್ಯ ಲಭ್ಯವಾದ ನಂತರ ಸುಶಿಕ್ಷಿತರಾದ ಮಹಿಳೆಯರು ಕೌಟುಂಬಿಕ ಬದುಕಿನ ಅನುಭವಗಳನ್ನು ಸಾಮಾಜಿಕ-ಸಾಂಸ್ಕೃತಿಕ ತೊಡರುಗಳನ್ನು ಕತೆ ಕಾದಂಬರಿಯಾಗಿಸಿದ್ದಾರೆ. ಹೀಗೆ ಕತೆ-ಕಾದಂಬರಿಗಳು ಲೇಖಕಿಯರ ಆಸ್ಥೆಯ ಪ್ರಕಾರಗಳಾಗಿದ್ದ ಕಾಲದಲ್ಲಿ, ತಿರುಮಲಾಂಭಾ, ಕಲ್ಯಾಣಮ್ಮ, ಶ್ಯಾಮಲಾದೇವಿ ಬೆಳಗಾಂವಕರ ಮುಂತಾದ ಸ್ವಾತಂತ್ರ್ಯ ಪೂರ್ವದ ಲೇಖಕಿಯರು ಕೆಲವು ವೈಚಾರಿಕ ಲೇಖನಗಳನ್ನು ರಚಿಸಿ ಸಮಕಾಲೀನ ಸಾಮಾಜಿಕ ಸಂಗತಿಗಳ ಬಗೆಗೆ ಪ್ರತಿಕ್ರಿಯಿಸಿದರೆನ್ನುವುದು ವಿಶೇಷ ಸಂಗತಿ. ಆದರೂ ಶತಮಾನದ (೧೯೦೦-೨೦೦೦) ಮಹಿಳಾ ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ ಮಹಿಳೆಯರು ವೈಚಾರಿಕ ಸಾಹಿತ್ಯದ ಬಗೆಗೆ ಆಸಕ್ತಿ ತೋರಿದ್ದು ಕಡಿಮೆಯೆಂದೇ ಹೇಳಬೇಕು. ಈ ಹಿನ್ನೆಲೆಯಲ್ಲಿ ಲಲಿತಾಂಬ ಅವರ ವೈಚಾರಿಕ ಸಾಹಿತ್ಯವನ್ನು ಗಮನಿಸುವುದು ಅಗತ್ಯ.

೧೯೬೦ರ ದಶಕದಿಂದ ಮುಂದಿನ ನಾಲ್ಕು ದಶಕಗಳವರೆಗೆ ವೈಚಾರಿಕ ಸಾಹಿತ್ಯ ರಚಿಸಿರುವ ಲಲಿತಾಂಬಾ ಅವರ ಪ್ರಕಟಿತ ವೈಚಾರಿಕ ಲೇಖನಗಳು ಸು. ೧೦೦ರಷ್ಟು, ವಿವಿಧ ಪತ್ರಿಕೆಗಳಲ್ಲಿ ಬಿಡಿಬಿಡಿಯಾಗಿ ಪ್ರಕಟಗೊಂಡು, ಸಂಕಲನದಲ್ಲಿ ಸೇರದಿರುವ ಲೇಖನಗಳೂ ಸಾಕಷ್ಟಿವೆ. ಸಂಕಲನ ರೂಪದಲ್ಲಿ ಲಭ್ಯವಿರುವ ಲೇಖನಗಳು ಸು.೭೦. ಸಾಮಾಜಿಕ ಆಸಕ್ತಿ ಮತ್ತು ಓದಿನ ಪ್ರೀತಿಯುಳ್ಳ ಲಲಿತಾಂಬಾ ಸಮಕಾಲೀನ ಬದುಕಿನ ಮಹತ್ವದ ಸಂಗತಿಗಳನ್ನು ಕುರಿತು, ಸಾಮಾಜಿಕ-ರಾಜಕೀಯ-ಧಾರ್ಮಿಕ ಬದುಕಿನಲ್ಲಾದ ಪಲ್ಲಟಗಳ ಬಗೆಗೆ ಪ್ರತಿಕ್ರಿಯಿಸುತ್ತಲೇ ಬಂದಿರುವ ಜಾಗೃತ ಮಹಿಳೆ. ಆಧುನಿಕ ಪ್ರಪಂಚದ ಬೆಳವಣಿಗೆಗಳನ್ನು ಸೂಕ್ಷ್ಮವಾಗಿ ಗ್ರಹಿಸುತ್ತ ಸಮಾಜವನ್ನು ಗಾಢವಾಗಿ ಪ್ರಭಾವಿಸುವ ಗುಣಾತ್ಮಕ ಋಣಾತ್ಮಕ ವಿಚಾರಗಳ ಬಗೆಗೆ ಚರ್ಚಿಸಿದ್ದಾರೆ. 'ಕುಟುಂಬ ಕೇಂದ್ರಿತ' ಚಿಂತನೆಗಳಿಂದ ದಟ್ಟವಾಗಿದ್ದ ಮಹಿಳಾ ಸಾಹಿತ್ಯವನ್ನು 'ಅಡಿಗೆ ಮನೆಯ ಸಾಹಿತ್ಯ'ವೆಂದು ಲೇವಡಿ ಮಾಡಿದ ೬೦-೭೦ರ ದಶಕದ ಕನ್ನಡ ವಿಮರ್ಶಕರು ಸೂಚ್ಯವಾಗಿ ಎತ್ತಿ ತೋರಿದ ಮಹಿಳಾ ಸಾಹಿತ್ಯದ ವೈಚಾರಿಕತೆಯ ಕೊರತೆಯನ್ನು ತುಂಬಿಕೊಡುವ ದಿಕ್ಕಿನಲ್ಲಿ ಮಹಿಳೆಯರ ಪ್ರಬಂಧ ಸಾಹಿತ್ಯ ವಿಶೇಷವಾಗಿ ಶ್ರಮಿಸಿದೆ. ನಗರ ಪರಿಸರದಲ್ಲಿ ಉನ್ನತ ಶಿಕ್ಷಣ ಪಡೆದ ಲೇಖಕಿಯರು ವೈಚಾರಿಕ ಸಾಹಿತ್ಯ ರಚನೆಯಲ್ಲಿ ವಿಶೇಷವಾಗಿ ತೊಡಗಿದ್ದ ೧೯೬೦ರ

ದಶಕದಲ್ಲಿ ವೈಚಾರಿಕ ಪ್ರಬಂಧ ಸಂಕಲನಗಳನ್ನು ಪ್ರಕಟಿಸಿರುವ ಸರೋಜಿನಿ ಮಹಿಷಿ, ಸರೋಜಿನಿ ಶಿಂತ್ರಿ, ಸರಸ್ವತಿದೇವಿ ಗೌಡರ, ಶಾಂತಾದೇವಿ ಮಾಳವಾಡ ಮುಂತಾದ ಲೇಖಕಿಯರ ಸಾಲಿನಲ್ಲಿ ಹೆಸರಿಸಬೇಕಾದವರು ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ. ನಾಡು –ನುಡಿ–ಸಮಾಜ–ಕುಟುಂಬ ದೇಶ–ಮಹಿಳೆ–ಮಾನವೀಯತೆ ಹೀಗೆ ವೈವಿಧ್ಯಮಯವಾದ ವಿಚಾರಲೋಕವನ್ನು ಪ್ರತಿನಿಧಿಸುವ ಲಲಿತಾಂಬಾ ಅವರು ಮನುಷ್ಯ ಜನಾಂಗದ ಅಭಿವೃದ್ಧಿಯ ಮೂಲ ಕಾಳಜಿಯನ್ನು ಪ್ರತಿಫಲಿಸುವ ವೈಚಾರಿಕ ಲೇಖನಗಳ ಮೂಲಕ ಸಾಹಿತ್ಯ ಜಗತ್ತಿಗೆ ಪ್ರವೇಶಿಸಿದರು. ವ್ಯಾಪಕ ಅಧ್ಯಯನ ಲೋಕಾನುಭವ, ಸೂಕ್ಷ್ಮ ನಿರೀಕ್ಷಣೆ ಬಹುಶ್ರುತ ಪ್ರತಿಭೆಯುಳ್ಳವರಿಗೆ ಮಾತ್ರ ಸಾಧ್ಯವಾಗಬಹುದಾದ ವೈಚಾರಿಕ ಸಾಹಿತ್ಯ ರಚನೆಯಲ್ಲಿ ಗಂಭೀರವಾಗಿ ತೊಡಗಿಸಿಕೊಳ್ಳುತ್ತಿದ್ದ ಲೇಖಕಿಯರು ವಿರಳವಾಗಿದ್ದ ಸಂದರ್ಭದಲ್ಲಿ ಲಲಿತಾಂಬಾ ಬರಹವನ್ನು ಪ್ರಾರಂಭಿಸಿದರು. ಬದಲಾವಣೆಯ ನಿತ್ಯ ಗತಿಗಳನ್ನು ಗಮನಿಸುತ್ತ, ತಮ್ಮ ಆಸಕ್ತಿಯ ಶಿಕ್ಷಣ ಕ್ಷೇತ್ರವನ್ನು, ಮಹಿಳೆ–ಮಕ್ಕಳು–ದೇಶವನ್ನು ಕುರಿತು ತಮ್ಮ ಚಿಂತನೆಯ ಹುತ್ತವನ್ನು ಕಟ್ಟಿಕೊಳ್ಳುತ್ತ ಕಂಡುಕೊಂಡ ಒಳನೋಟಗಳನ್ನು ಜೀವನಾನುಭವದಲ್ಲಿ ಪಾಕವಾಗಿಸಿ ಲೇಖನಗಳನ್ನಾಗಿಸಿದ್ದಾರೆ. ತಮ್ಮನ್ನು ಕಾಡಿದ ತಾತ್ವಿಕ ವಿಚಾರಗಳನ್ನು ಸಮಷ್ಟಿಯ ಸಂದಿಗ್ಧತೆಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಸರಳವಾದ ಆಕರ್ಷಕವಾದ ಶೈಲಿಯಲ್ಲಿ ಉದ್ದೇಶಿತ ವಿಷಯವನ್ನು ಭಾವಗಮ್ಯವಾಗಿಸುವ ರೀತಿ, ಪ್ರಬುದ್ಧ ವಿಶ್ಲೇಷಣೆ, ಲೌಕಿಕ ವಿಮರ್ಶೆಯ ವಿಧಾನದಿಂದ ಅವರ ವೈಚಾರಿಕ ಪ್ರಬಂಧಗಳು ಓದುಗರ ಬುದ್ಧಿ–ಭಾವನೆಗೆ ಚುರುಕು ಮುಟ್ಟಿಸಿ, ಚಿಂತನೆಗೆ ದೂಡುತ್ತವೆ. 'ಮನದ ಮಲ್ಲಿಗೆ' (೧೯೬೪) ಲಲಿತಾಂಬಾ ಅವರ ವೈಚಾರಿಕ ಲೇಖನಗಳ ಮೊದಲ ಸಂಕಲನ. ಇಲ್ಲಿ ವೈಚಾರಿಕ ಪ್ರಬಂಧಗಳಲ್ಲಿ ಮಹಿಳೆ–ಮಕ್ಕಳು–ಶಿಕ್ಷಣ–ಜೀವನದ ಮೌಲ್ಯ ಸಮಾಜ–ದೇಶ ಮತ್ತು ಮನುಷ್ಯ ಪ್ರವೃತ್ತಿಗಳು ಚರ್ಚೆಯ ವಿಷಯಗಳಾಗಿವೆ.

ವೃತ್ತಿಯಿಂದ ಶಿಕ್ಷಣ ಕಾಲೇಜಿನ ಪ್ರಾಧ್ಯಾಪಕರಾಗಿದ್ದ ಲಲಿತಾಂಬಾ ಅವರು ದೇಶದ ಅಭಿವೃದ್ಧಿ, ವ್ಯಕ್ತಿತ್ವ ನಿರ್ಮಾಣ ಒಟ್ಟಾರೆ ಮಾನವ ಶಕ್ತಿಯ ಉತ್ಪಾದನೆಯ ಮೂಲಕ ದೇಶದ ಸರ್ವಾಂಗೀಣ ಉನ್ನತಿಗೆ ಶಿಕ್ಷಣದ ಅಗತ್ಯವನ್ನು ಮನಗಂಡವರು. ಅಂತೆಯೇ ಮನುಷ್ಯನ ರಾಗ ದ್ವೇಷಗಳನ್ನು ನಿಯಂತ್ರಿಸಿ ದೈವೀಗುಣಗಳನ್ನು ಪೋಷಿಸುವಲ್ಲಿ ನೈತಿಕ ಶಿಕ್ಷಣದ ಪಾತ್ರವನ್ನು ಚರ್ಚಿಸಿದ್ದಾರೆ. ಆಧುನಿಕ ಜಗತ್ತಿಗೆ ಅಗತ್ಯವಾದ ಶಿಕ್ಷಣದ ಸ್ವರೂಪ, ಗುರಿಯನ್ನು ಕುರಿತು ವಿಶ್ಲೇಷಿಸುವ ಲೇಖನಗಳು ಇಲ್ಲಿವೆ. ಶಿಕ್ಷಣವು ಸುಪ್ತ ಪ್ರತಿಭೆಗಳ ವಿಕಾಸಕ್ಕೆ ಕಾರಣವಾಗಬೇಕು. ದೈಹಿಕ–ಮಾನಸಿಕ ಆರೋಗ್ಯವನ್ನು ಸಾಧ್ಯವಾಗಿಸುವ ಶಿಕ್ಷಣದಿಂದ ಬಲಿಷ್ಠ ರಾಷ್ಟ್ರ ನಿರ್ಮಾಣಗೊಳ್ಳುತ್ತದೆ ಎನ್ನುವ ವಿಚಾರಗಳು ಮನನೀಯವಾಗಿವೆ.

ಬಾಲ್ಯದಲ್ಲಿಯೇ ಮಕ್ಕಳಲ್ಲಿ ಉತ್ತಮ ಗುಣ ಸಂಸ್ಕಾರಗಳನ್ನು ಶಿಸ್ತು–ಸ್ವಂತಿಕೆ–ಸ್ವಾವಲಂಬನೆಯ ಪ್ರವೃತ್ತಿಯನ್ನು ಬೆಳೆಸಬೇಕೆನ್ನುವ ಲೇಖಕಿ ಮಕ್ಕಳನ್ನು ಸತ್ಪ್ರಜೆಗಳನ್ನಾಗಿ ಪ್ರಜ್ಞಾವಂತ ನಾಗರಿಕನ್ನಾಗಿಸುವಲ್ಲಿ ಹೆತ್ತವರ ಕರ್ತವ್ಯ, ಕೌಟುಂಬಿಕ ಪರಿಸರದ ಪ್ರಭಾವವನ್ನು "ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ?" ಲೇಖನದಲ್ಲಿ ವಿವರಿಸಿದ್ದಾರೆ. ಪ್ರತಿಯೊಬ್ಬ ತಾಯ್ತಂದೆಯರು ಓದಬೇಕಾದ ಲೇಖನವಿದು.

ನಾಗರಿಕ ಜೀವನದಲ್ಲಿ 'ಶಿಸ್ತು' ಎಲ್ಲರಿಗೂ ಬೇಕಾದ ಮೂಲ ಸಂಸ್ಕಾರ ಎನ್ನವುದನ್ನು 'ಶಿಸ್ತು' ಲೇಖನದಲ್ಲಿ ಚರ್ಚಿಸಲಾಗಿದೆ. ಸ್ವಪ್ರೇರಣೆಯಿಂದ ಸ್ವವಿವೇಚನೆಯಲ್ಲಿ ಮುಕ್ತ ವಾತಾವರಣದಲ್ಲಿಯೂ ಕಂಡು ಬರುವ ವ್ಯವಸ್ಥಿತವಾದ ನಡವಳಿಕೆಯನ್ನು 'ಶಿಸ್ತು' ಎಂದು ವ್ಯಾಖ್ಯಾನಿಸುವ ಲೇಖಕಿ, ಸಮಾಜ ಜೀವನದ ಬುನಾದಿಯಾದ 'ಸಹಕಾರ' ಕಣ್ಮರೆಯಾಗಿ ಸಾರ್ವಜನಿಕ ಜೀವನದಲ್ಲಿ ಹೆಚ್ಚುತ್ತಿರುವ ಅಸಹಕಾರಕ್ಕೆ ಕಾರಣಗಳನ್ನು 'ಸಹಕಾರ' ಲೇಖನದಲ್ಲಿ ಚರ್ಚಿಸಿದ್ದಾರೆ. ಅತೃಪ್ತಿಯೇ ಅಸಹಕಾರದ ಮೂಲವೆನ್ನುವ ಲೇಖಕಿ ಮನಃಶಾಸ್ತ್ರದ ಹಿನ್ನೆಲೆಯಲ್ಲಿ ಅಸಹಕಾರದ ಸ್ವಭಾವಕ್ಕೆ ಕಾರಣಗಳನ್ನು ಪರಿಣಾಮಗಳನ್ನು ವಿಶ್ಲೇಷಿಸಿರುವುದು ವಿಶೇಷ.

'ಆಟದ ಬಯಲು ಅನಾಚ್ಛಾದಿತ ಶಾಲೆ' ಮಕ್ಕಳ ವ್ಯಕ್ತಿತ್ವ ವಿಕಸನಕ್ಕೆ ಕ್ರೀಡೆಯಿಂದಾಗುವ ಪ್ರಯೋಜನಗಳನ್ನು ಚರ್ಚಿಸುವ ಲೇಖನವಿದು. ದೃಢಕಾಯದೊಡನೆ, ಧೈರ್ಯ ಆತ್ಮವಿಶ್ವಾಸ, ಹೋರಾಟ ಸಹಕಾರ ರಾಷ್ಟ್ರಪ್ರೇಮ ಗುಣಗಳನ್ನು ಮಕ್ಕಳು ಆಟದಬಯಲಿನಲ್ಲಿ ಕಲಿಯಲು ಸಾದ್ಯವಿದೆ. ಎನ್ನುವ ಲೇಖಕಿ ಸ್ವ–ಇಚ್ಛೆಯಿಂದ ಇತರರಿಗೆ ಸಹಾಯ ಮಾಡುವ ಗುಣ ನಾಯಕತ್ವದ ಸಾಮರ್ಥ್ಯವನ್ನು ಬೆಳೆಸುವ ಆಟದ ಬಯಲು ಅನಾಚ್ಛಾದಿತ ಶಾಲೆಯಾಗುವುದನ್ನು ಎತ್ತಿತೋರಿದ್ದಾರೆ.

ನಿತ್ಯ ಬದಲಾಗುತ್ತಿರುವ ಆಧುನಿಕ ಸಮಾಜದ ವಿದ್ಯಮಾನಗಳ ಸೂಕ್ಷ್ಮ ಅವಲೋಕನದ ಫಲವಾಗಿ ಮೂಡಿ ಬಂದಿರುವ ಹಲವಾರು ವೈಚಾರಿಕ ಲೇಖನಗಳಲ್ಲಿ 'ದಲಿತರು ಯಾರು?', 'ವರ್ಗ ಹೋರಾಟ ಬೇಡ', 'ಸಾಮಾಜಿಕ ಬದಲಾವಣೆ', 'ಸಾಮಾಜಿಕ ಪಿಡುಗುಗಳನ್ನು ತೊಡೆದು ಹಾಕುವುದು ಹೇಗೆ?' ಇತ್ಯಾದಿ ಲಲಿತಾಂಬಾ ಅವರ ಸಾಮಾಜಿಕ ಸಂವೇದನೆಯನ್ನು ಹಿಡಿದಿಟ್ಟಿರುವ ಲೇಖನಗಳು ಇಲ್ಲಿವೆ.

ಶೋಷಣೆ ಅನ್ಯಾಯದಿಂದ ತುಳಿತಕ್ಕೊಳಗಾಗಿರುವವರು 'ದಲಿತರು' ಎಂದು ವ್ಯಾಖ್ಯಾನಿಸುವ ಲೇಖಕಿ, ಅಧಿಕಾರ ಸಂಪತ್ತು, ಜಾತಿ ಬಲದಿಂದ ಅಸಹಾಯಕರನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವವರೆಲ್ಲರೂ ಶೋಷಕರೆಂದೂ, ಅಸಹಾಯಕರಾಗಿ ಶೋಷಣೆಗೆ ಒಳಗಾಗುವವರೆಲ್ಲರೂ 'ದಲಿತ'ರು ಎಂದು ನಿರ್ಣಯಿಸುತ್ತಾರೆ. 'ದಲಿತ' ಎನ್ನುವದು ಜಾತಿ ವರ್ಗದ್ಯೋತಕವಾಗಿರದೆ ಅದು ಶೋಷಿತ ಜನಸಮುದಾಯವನ್ನು ಉದ್ದೇಶಿಸಿರುವ ಪದ ಎಂದು ನಿರ್ಣಯಿಸುತ್ತಾರೆ. ಜಾತಿಯ ಹೆಸರಿನಲ್ಲಿ ಓಟಿಗಾಗಿ

ಜನರನ್ನು ಒಡೆದು ಆಳುವ ಸ್ವಾರ್ಥ ರಾಜಕೀಯದಿಂದ ಭಾರತೀಯರ ಐಕ್ಯತೆಗೆ ಭಂಗವಾಗಿದೆ., ಇದು ವಿನಾಶಕ್ಕೆ ಆಹ್ವಾನ. ಆದ್ದರಿಂದ ಶಿಕ್ಷಣದ ಮೂಲಕ ಮಕ್ಕಳಲ್ಲಿ ಸಮಾನತೆ, ಸಹಾಕ್ಯ, ಪ್ರಾಮಾಣೀಕತೆ ಸಹೋದರತ್ವವನ್ನು ಬೆಳೆಸುವ ಮೂಲಕ ಮಕ್ಕಳನ್ನು ಉತ್ತಮ ಪ್ರಜೆಗಳಾಗಿಸಬೆಕು ಎನ್ನುವುದು ಲಲಿತಾಂತಾ ಅವರ ಸಂದೇಶ. ಭಾರತದಲ್ಲಿ ಹೆಚ್ಚುತ್ತಿರುವ ಸ್ವಾರ್ಥ, ಮೋಸ, ಭ್ರಷ್ಟಾಚಾರ, ಅನೀತಿ, ಮೋಜುಗಾರಿಕೆಗೆ ಸಮಾಜದ ಜೆನ್ಯೈತಿಕತೆಯ ಅಧಃಪತನವೆನ್ನುತ್ತಾರೆ. ಬದಲಾವಣೆ ಚಲನಶೀಲ ಸಮಾಜದ ಲಕ್ಷಣ. ಇತ್ಯಾತ್ಮಕ ಸಂಗತಿಗಳನ್ನು ಆದರ್ಶ ವ್ಯಕ್ತಿತ್ವಗಳನ್ನೂ, ಗುರುತಿಸಿ ಗೌರವಿಸುವುದು ಅಗತ್ಯ. ಒಳಿತನ್ನು ಪ್ರೋತ್ಸಾಹಿಸಿ ಅನಿಷ್ಟವಾದುದನ್ನು ಖಂಡಿಸಿ ಒಕ್ಕಟ್ಟಾಗಿ ತಿರಸ್ಕರಿಸಬೇಕು. ಆಗ ಸಮಾಜದಲ್ಲಿ ಕೆಡಕು ಕಳೆಗುಂದಿ, ಒಳಿತು ಬೇರೂರುತ್ತದೆ. ಸಾಮಾಜಿಕ ಬದಲಾವಣೆಗೆ ಎಲ್ಲರೂ ಸಕಾರಾತ್ಮಕವಾಗಿ ಸ್ಪಂದಿಸಬೇಕು ಎನ್ನುವುದು ಲೇಖಕಿಯ ಆಶಯ.

ಆಧುನಿಕ ಮಹಿಳೆಯ ಸಮಸ್ಯೆ ಸಂದಿಗ್ಧತೆಗಳನ್ನು ಕುರಿತ ಚಿಂತನೆಗಳು ಇಲ್ಲಿಯ ಹಲವಾರು ಲೇಖನಗಳಿಗೆ ವಸ್ತುವಾಗಿವೆ. 'ಹೆಣ್ಣಿನ ನೋವಿಗೆ ಕಾರಣ ಯಾರು? ಎಂದು ಪ್ರಶ್ನಿಸಿರುವ ಲೇಖಕಿ ಸ್ತ್ರೀ ಸಮಾಜ 'ಕಲಿಯಬೇಕಾದುದು ಬೇಡವಾದುದು' ಕುರಿತು ವಿವರವಾಗಿ ಚರ್ಚಿಸಿದ್ದಾರೆ. ಸೀತೆ–ಮಹಾಮಾತೆ–ದ್ರೌಪದಿ ಇತ್ಯಾದಿ ಲೇಖನಗಳಲ್ಲಿ ಆಧುನಿಕ ಸ್ತ್ರೀ ಸಮಾಜದ ಸಮಸ್ಯೆಗಳ ವಿಶ್ಲೇಷಣೆಯಿದೆ. ಜೊತೆಗೆ ಸ್ತ್ರೀ ಸಂಸ್ಕೃತಿಗೆ ಪೌರಣಿಕ ಪ್ರತಿಮೆಗಳಾದ ಈ ಸ್ತ್ರೀ ಪಾತ್ರಗಳು ತಮ್ಮ ತ್ಯಾಗ–ತಾಳ್ಮೆ–ಕಷ್ಟ ಸಹಿಷ್ಣುತೆ, ನೀತಿ ನಿಷ್ಠೆ–ಶೀಲ–ಸಚ್ಚಾರಿತ್ರ್ಯಗಳಿಂದ ಮನುಕುಲಕ್ಕೆ ಮಾದರಿಯಾದುದನ್ನು ವಿವರಿಸಿದ್ದಾರೆ.

ಅತ್ತೆ–ಸೊಸೆಯ ಕೌಟುಂಬಿಕ ಕಲಹಗಳಿಗೆ ಹೆಣ್ಣುಮಕ್ಕಳ ಸಂಕುಚಿತತನ, ಸ್ವಾರ್ಥ, ಪೈಪೋಟಿಗಳು ಕಾರಣವಾಗುವುದನ್ನು ವಿವರವಾಗಿ ಪರಿಶೀಲಿಸುವ ಲೇಖನ 'ಹೆಣ್ಣಿನ ನೋವಿಗೆ ಯಾರು ಕಾರಣ'? ಪಾಶ್ಚಾತ್ಯರಿಂದ ಪಡೆದಿರುವ ಆಧುನಿಕತೆಯನ್ನು ಕಣ್ಮುಚ್ಚಿ ಅನುಕರಿಸುವ, ಸ್ವಸಂಸ್ಕೃತಿಯನ್ನು ಅನಾದರಿಸುವುದರಿಂದಾಗುವ ಪ್ರತಿಕೂಲ ಪರಿಣಾಮಗಳನ್ನು ವಿಶ್ಲೇಷಿಸುವ ಲೇಖನ 'ಕಲಿಯಬೇಕಾದುದು–ಬೇಡವಾದುದು'. ವಿದ್ಯೆ–ಸ್ವಾವಲಂಬನೆ ಹೆಣ್ಣಿನ ಮೊದಲ ಅಗತ್ಯವೆಂದು ಅಭಿಪ್ರಾಯಪಡುವ ಲೇಖಕಿ ಆಧುನಿಕತೆಯ ಹೆಸರಿನಲ್ಲಿ ಭಾರತದ ಸ್ತ್ರೀ ಸಂಸ್ಕೃತಿಯ ಅನನ್ಯತೆಯನ್ನು ಸಾರಾಸಗಟಾಗಿ ತಿರಸ್ಕರಿಸಿ, ಬಳೆ–ಕುಂಕುಮ, ಸೀರೆಯನ್ನು ಉಪಯೋಗಿಸದಿರುವುದು, ವರದಕ್ಷಿಣೆ, ವಿವಾಹ ವಿಚ್ಛೇದನೆ ಪುನರ್ವಿವಾಹಗಳಿಂದ ಕುಟುಂಬ ವ್ಯವಸ್ಥೆಯು ಅನುಭವಿಸುವ ಅಘಾತಗಳನ್ನು ಚರ್ಚಿಸಿರುವುದು, ಉಪಯುಕ್ತವಾಗಿದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿರುವ ಹೆಣ್ಣಿನ ಆಧೀನತೆ, ಅಸಹಾಯಕತೆ, ವರದಕ್ಷಿಣೆ, ಬಾಲ್ಯವಿವಾಹ, ಅತ್ತೆ-ಸೊಸೆಯ ಮಧ್ಯೆ ಅಧಿಕಾರದ ಪೈಪೋಟಿಗಳೂ ಹುಟ್ಟಿಸುವ ಬಿರುಕುಗಳ ಕುಟುಂಬದ ಸ್ವಾಸ್ಥ್ಯವನ್ನು ಹಾಳು ಮಾಡುತ್ತಿವೆ ಎನ್ನುತ್ತಾರೆ. ಹೆಣ್ಣಿನ ಸುಖ ದುಃಖಗಳಿಗೆ ಹೆಣ್ಣೇ ಕಾರಣಳಾಗುವ ಕೌಟುಂಬಿಕ ಸಂದಿಗ್ಧತೆಗಳನ್ನು ಪರಿಶೀಲಿಸಿ ಔದಾರ್ಯ ವಿವೇಕ ಪರಸ್ಪರರ ಬಗೆಗೆ ಗೌರವಾದರಗಳ ಮೂಲಕ ಮಧುರ ಸಂಬಂಧದ ಮೂಲಕ ಕೌಟುಂಬಿಕ ಸುಖ-ಶಾಂತಿಗೆ ಕೈಜೋಡಿಸಬೇಕೆನ್ನುತ್ತಾರೆ.

ರಾಷ್ಟ್ರೀಯತೆ ಮತ್ತು ದೇಶದ ಅಭಿವೃದ್ಧಿಯ ಕಾಳಜಿಗಳನ್ನು ಬಿಂಬಿಸುವ ಸ್ವಾತಂತ್ರ್ಯಯುವ ಶಕ್ತಿ ರಾಷ್ಟ್ರಶಕ್ತಿ ಭಾರತದ ರಾಷ್ಟ್ರೀಯ ಐಕ್ಯ, ದೇಶದ ರಕ್ಷಣೆ, ಸಹಕಾರ ಇತ್ಯಾದಿ ಲೇಖನಗಳಲ್ಲಿ ಲಲಿತಾಂಬಾ ಅವರ ಸ್ಪಷ್ಟ ಪ್ರಬುದ್ಧ ವೈಚಾರಿಕ ಮನಸ್ಸು ಪ್ರತಿಫಲಿಸಿದೆ. 'ಸ್ವಾತಂತ್ರ್ಯ' ಕುರಿತ ಎರಡು ಲೇಖನಗಳು ವ್ಯಕ್ತಿ ಸ್ವಾತಂತ್ರ್ಯದ ಮಿತಿಗಳನ್ನು ಸ್ವತಂತ್ರ್ಯ ಭಾರತದ ಸಾಧನೆಗಳನ್ನು ಪರಿಶೀಲಿಸುತ್ತದೆ. ದಾಸ್ಯದ ಭೂತದಿಂದ ಹೊರಬಮದು, ಅಭಿವೃದ್ಧಿಯತ್ತ ಮುನ್ನಡೆಯಬೇಕಾಗಿದ್ದ ಸ್ವತಂತ್ರ ಭಾರತದಲ್ಲಿ ಜಾತಿ-ಭಾಷೆ-ನೆಲ-ಜಲದ ಜಗಳಗಳು ಅನೈತಿಕತೆಗೆ ಕಾರಣವಾಗುತ್ತಿರುವುದನ್ನು ವಿಷಾದದಿಂಧ ಗಮನಿಸಿರುವ ಲೇಖಕಿ, ಸಮಕಾಲೀನ ಸಾಮಾಜಿಕ-ಸಾಂಸ್ಕೃತಿಕ ಮೌಲ್ಯಗಳ ಪಲ್ಲಟಗಳಿಂದ ಕಳವಳಗೊಂಡಿದ್ದಾರೆ. ಭಾವೈಕ್ಯತೆಯನ್ನು ಕಲಕುವ ವಿಚ್ಛಿದ್ರಕಾರಕ ಶಕ್ತಿಗಳ ನಿರ್ಮೂಲನೆಯತ್ತ ನಾಗರಿಕರ ಗಮನ ಸೆಳೆಯುತ್ತವೆ ಒಟ್ಟಾರೆ ಇಲ್ಲಿನ ಲೇಖನಗಳು.

"ವಿಶ್ವವೇ ಒಂಧು ಕುಟುಂಬ ಇಡೀ ಜನಾಂಗವೇ ಅದರ ಸದಸ್ಯರು" ಎಂಬ ಈ ಪ್ರಬಂಧದಲ್ಲಿ ವಿಶ್ವಭ್ರಾತೃತ್ವವನ್ನು ಬೆಳೆಸಿಕೊಳ್ಳಬಾಕಾದ ಅಗತ್ಯವನ್ನು ಎತ್ತಿತೋರಿಸುತ್ತಾರೆ. ಜನರ ಮನಸ್ಸನ್ನು ಕಟ್ಟುವ ಕೆಲಸಕ್ಕೆ ಸರಕಾರ ಸಮಾಜ ಕಾನೂನುಗಳು ಸನ್ನದ್ಧವಾಗಬೇಕೆನ್ನುವ "ಸತ್ಯಕ್ಕೆ ಧರ್ಮಕ್ಕೆ ಕರ್ತವ್ಯಕ್ಕೆ ಮಾನ್ಯತೆ ದೊರಕಬೇಕು" ಆಗ ಪ್ರಗತಿ ಸಾಧ್ಯವೆಂದಿರುವುದು ಯೋಚಿಸಬೇಕಾದ ಸಂಗತಿ. "ಭಾರತದ ರಾಷ್ಟ್ರೀಯ ಐಕ್ಯವು ಅಂತರಿಕವಾಗಿ ಶಿಥಿಲಗೊಳ್ಳುತ್ತಿರುವುದನ್ನು ಪ್ರಸ್ತಾಪಿಸಿ, ಅದರ ಕಾರಣ ಪರಿಣಾಮಗಳನ್ನು ಚರ್ಚಿಸಿರುವುದು ಗಮನಾರ್ಹ. "ಪ್ರಜಾರಾಜ್ಯ ಬಂದ ಮೇಲೆ ಭಾರತೀಯರು ಕುರಿಗಳಾಗುತ್ತಿದ್ದಾರೆ" ಎಂದು ಪಾಶ್ಚಾತ್ಯ ವ್ಯಾಮೋಹಕ್ಕೆ ಬಲಿಯಾಗುತ್ತಿರುವ ಭಾರತೀಯರ ಅಂಧಾನುಕರಣೆಯನ್ನು ಛೇಡಿಸಿದ್ದಾರೆ.

ಸಮಾಜ ಜೀವಿಯಾದ ಮನುಷ್ಯ ಸಹಕಾರ-ಸಾಮರಸ್ಯದ ಶಾಂತಿಯುತ ಬದುಕಿನಿಂದ ಲಭ್ಯವಾಗುವ ಸುಖ ಸಮೃದ್ಧಿಯನ್ನು ತನ್ನ ದುರ್ಗುಣಗಳಿಂದ ಹಾಳು ಮಾಡಿಕೊಳ್ಳುತ್ತಾನೆ ಎನ್ನುವ ತಮ್ಮ ನೋವನ್ನು ಇಲ್ಲಿನ ಅನೇಕ ಲೇಖನಗಳಲ್ಲಿ

ವಿಶ್ಲೇಷಣೆಗೊಳಪಡಿಸಿದ್ದಾರೆ. ಹೊಟ್ಟೆಯ ಕಿಚ್ಚು, ಅಧಿಕಾರ ಅಹಂಕಾರ ಮೇಲು-ಕೀಳೆಂಬ ತಾರತಮ್ಯ ನೀತಿಗಳು ಮಾನವೀಯ ಸಂಬಂಧಗಳನ್ನು ಐಕ್ಯತೆಯನ್ನು ಹಾಳುಮಾಡಿ ಅಶಾಂತಿಗೆ ಕಾರಣವಾಗುವುದನ್ನು ವಿವರಿಸುವ ಲೇಖನಗಳು 'ನೀತಿ ಶಿಕ್ಷಣ'ದ ಅಗತ್ಯವನ್ನು, ಸಹಕಾರ-ಸಮಾನತೆ-ಸಜ್ಜನಿಕೆ-ಕ್ಷಮೆಯ ಮಹತ್ವವನ್ನು ಮನಗಾಣಿಸುತ್ತವೆ.'ಇವನು ಹೀಗೇಕೆ?' ಲೇಖನದಲ್ಲಿ ಲೇಖಕಿ ಮನುಷ್ಯರ ಗುಣ ಸ್ವಭಾವಗಳನ್ನು ರೂಪಿಸುವಲ್ಲಿ ಸಾಮಾಜಿಕ, ಕೌಟುಂಬಿಕ ಪರಿಸರದ ಪ್ರಭಾವವನ್ನು ಚರ್ಚಿಸಿದ್ದಾರೆ. ಮಕ್ಕಳಲ್ಲಿ ಒಳಿತು ಕೆಡುಕಿನ ವಿವೇಚನೆಯನ್ನು ಬೆಳೆಸುವಲ್ಲಿ ಮನೆಯ ಪರಿಸರ, ಹೆತ್ತವರ ಸಂಸ್ಕಾರ, ಸ್ನೇಹಿತರ ಶಿಕ್ಷಕರ ಪಾತ್ರದೊಂದಿಗೆ 'ನೀತಿ ಶಿಕ್ಷಣ'ದ ಅಗತ್ಯವಿದೆ ಎನ್ನುವ ಅವರ ಬೇವು-ಬೆಲ್ಲ ಜೀವನದ ಅವಿಭಾಜ್ಯ ಸಂಗತಿಗಳಾಗಿದ್ದು ಕೆಡುಕಿನ ವಿರುದ್ಧ ನಿರಂತರ ಹೋರಾಟ ಅನಿವಾರ್ಯವೆನ್ನುತ್ತಾರೆ. 'ಕ್ಷಮೆ' ಎನ್ನುವುದು ಸಹಜ ಸಾಧ್ಯವಲ್ಲದ ಅಪೂರ್ಣ ಗುಣ ಸಂಪತ್ತು. ಮಾನವತೆಯಲ್ಲಿ ಅತಿಮಾನವತೆಯ ಬೆಳಕಾಗಿ ಕಾಣಿಸಿಕೊಳ್ಳುವ 'ಕ್ಷಮೆ'ಯ ಮಹತ್ವವನ್ನು ತಿಳಿಸುವ ಲೇಖನದಲ್ಲಿ 'ಕ್ಷಮೆ' ಗಿರುವ ಅಸಾಮಾನ್ಯ ಶಕ್ತಿಯನ್ನು ವಿವರಿಸಲಾಗಿದೆ. "ಕ್ಷಮೆಯ ಗುಣವಿರುವ ಮನಸ್ಸಿನಲ್ಲಿ ದ್ವೇಷದ ಭಾವನೆಯಾಗಲಿ, ಸೇಡುತೀರಿಸಿಕೊಳ್ಳುವ ಮನೋಭಾವವಾಗಲಿ ಇರುವುದಿಲ್ಲ. ದ್ವೇಷ-ಸೇಡು-ಪ್ರತೀಕಾರ ಮುಂತಾದ ದುಷ್ಟ ಗುಣಗಳು ಕ್ಷಮೆಯ ಅಭಾವದಿಂದ ಹುಟ್ಟಿದವುಗಳಾಗಿವೆ. ಕ್ಷಮಾಗುಣವನ್ನು ಬೆಳೆಸಿಕೊಳ್ಳಬೇಕಾದರೆ ಅಂತಹ ಗುಣಕ್ಕೆ ಮನ್ನಣೆ ಸಿಗುವ ಸನ್ನಿವೇಶಗಳು ಇರಬೇಕಾಗುತ್ತದೆ" ಎಂದು ಕ್ಷಮಾ ಗುಣವನ್ನು ಪೋಷಿಸಲು ತಿಳಿಸುತ್ತಾರೆ. "ಮೇಲು ಕೀಳು ಭಾವನೆ ಅಳಿಸಬೇಕು" ಎಂದು ಹೃದಯ ವೈಶಾಲ್ಯದ ಬದುಕಿಗಾಗಿ ಹಂಬಲಿಸುತ್ತಾರೆ. ಸಮಾಜ ಮತ್ತು ವ್ಯಕ್ತಿಯ ಪ್ರಗತಿಗೆ ಕಂಟಕವೆನಿಸುವ 'ಹೊಟ್ಟೆಯ ಕಿಚ್ಚೆ'ನಿಂದ ಹೊರಬರುವಂತೆ ವಿವೇಕ ನೀಡುತ್ತಾರೆ. ನೈತಿಕ ಅಧಃಪತನವನ್ನು ಕಂಡು ನೊಂದುಕೊಳ್ಳುವ ಅವರು ಉತ್ತಮ ಸಮಾಜ ಕಟ್ಟುವಲ್ಲಿ ಪ್ರತಿಯೊಬ್ಬರ ಕರ್ತವ್ಯವನ್ನು ಎಚ್ಚರಿಸುತ್ತಾರೆ. ಹೀಗೆ ಕಣ್ಣೆಟ್ಟಲ್ಲೆಲ್ಲ ತಾಂಡವವಾಡುತ್ತಿರುವ ಅನೀತಿ ಸ್ವಾರ್ಥ ಸ್ವೇಚ್ಛೆಗಳಿಂದ ಪತನಗೊಳ್ಳುತ್ತಿರುವ ಭಾರತೀಯರ ಅಂತಃಸಾಕ್ಷಿಯನ್ನು ಅಂತಃಸತ್ವವನ್ನು ಎಚ್ಚರಿಸುವ ಸಂಕಲನದ ೩೨ ಲೇಖನಗಳು ಲಲಿತಾಂಬಾ ಅವರ ವೈಚಾರಿಕತೆ ಮತ್ತು ಸಾಹಿತ್ಯದ ಮೂಲ ಸ್ಥಾಯಿಯನ್ನು ಅರ್ಥಪೂರ್ಣವಾಗಿ ಪ್ರತಿನಿಧಿಸುತ್ತವೆ.

**ರಚನಾತ್ಮಕ ಚಿಂತನೆಗಳು (೨೦೦೦) :**

ಧಾರ್ಮಿಕ ಶ್ರದ್ಧೆ ಮೌಲ್ಯ ಪ್ರಜ್ಞೆಯನ್ನು ಮನೆತನದ ಸಂಸ್ಕಾರವಾಗಿಯೂ, ಆಧುನಿಕ ಶಿಕ್ಷಣದ ಫಲವಾಗಿ ವೈಚಾರಿಕತೆಯನ್ನೂ ಮೈಗೂಡಿಸಿಕೊಂಡಿದ್ದ ಲಲಿತಾಂಬಾ ಅವರು ಸಮಷ್ಠಿ ಸಂಸ್ಕೃತಿಯ ಉದಾರ ಆದರ್ಶವನ್ನು ತಮ್ಮ ಬದುಕು-

ಬರಹಗಳಲ್ಲಿ ಪೋಷಿಸಿದ್ದಾರೆ. ಪ್ರಗತಿಪರರಾಗಿದ್ದ ತಮ್ಮ ತಂದೆಯವರ ಮಾರ್ಗದರ್ಶನದಲ್ಲಿ ಉನ್ನತ ಶಿಕ್ಷಣ ಪಡೆದು ವಿಚಾರವಂತ ಮಹಿಳೆಯಾಗಿ ರೂಪುಗೊಂಡ ಅವರು ಸ್ವಭಾವತಃ ಸ್ವತಂತ್ರ ಪ್ರವೃತ್ತಿಯವರು, ಚಿಂತನಶೀಲರು. ನಾಡು-ನುಡಿ-ಸಮಾಜ ದೇಶದ ವಿದ್ಯಮಾನಗಳನ್ನು ಆಸಕ್ತಿಯಿಂದ ಪರಿಶೀಲಿಸುವ ಸಂವೇದನಾಶೀಲತೆಯುಳ್ಳ ಅವರು ತಾವು ಗ್ರಹಿಸಿದ ಲೋಕಚೇಷ್ಟೆಗಳನ್ನು, ತಮ್ಮ ಜೀವನಾನುಭವದ ಮೂಸೆಯಲ್ಲಿ ಪಾಕಗೊಳಿಸಿ ಕಂಡುಕೊಂಡ ಅನುಭವಗಳನ್ನು ಬರಹಗಳಾಗಿಸಿದ್ದಾರೆ. ಮಾತ್ರವಲ್ಲ ಓದುಗರನ್ನು ಚಿಂತನೆಗೆ ಗೊಡಗಿಸಿದ್ದಾರೆ. ಸ್ಪಷ್ಟ ಸರಳವಾದ ಪರಿಣಾಮಕಾರಿಯಾದ ನಿರೂಪಣೆ, ವಿಷಯದ ಒಳ-ಹೊರಗನ್ನು ಸಮಚಿತ್ತದಿಂದ ವಿಶ್ಲೇಷಿಸಬಲ್ಲ ಪ್ರಬುದ್ಧತೆ,ಲೋಕಾನುಭವ ಸಮೃದ್ಧಿ ಗುಣಗ್ರಹಣ ಸಾಮರ್ಥ್ಯದಿಂದ ಕೂಡಿದ 'ರಚನಾತ್ಮಕ ಚಿಂತನೆಗಳು' ಲಲಿತಾಂಬಾ ಅವರ ವೈಚಾರಿಕ ಲೇಖನಗಳ ಎರಡನೆಯ ಕೃತಿ. ೩೦ ಲೇಖನಗಳ ಸಂಕಲನ.

ಸಾಹಿತ್ಯವು ಸಮಾಜದ ಜಾಗೃತಿಗೆ ಪೂರಕವಾಗಬೇಕು. ಓದುಗರಿಗೆ ಬದುಕಿನ ವಿಸ್ತೃತವಾದ ಅವಲೋಕನವನ್ನು ಸಾಧ್ಯವಾಗಿಸಬೇಕು. ಸಂಸ್ಕೃತಿ ಮೌಲ್ಯಪ್ರಜ್ಞೆಯನ್ನು ಉಚಿರಾನುಚಿತ ವಿಮರ್ಶೆಯನ್ನು ಎಚ್ಚರಿಸಬೇಕು ಎನ್ನುವ ಸಮಾಜಮುಖಿಯಾದ ಕಾಳಜಿ ಇಲ್ಲಿನ ಪ್ರತಿಯೊಂದು ಲೇಖನದಲ್ಲಿ ಜಾಗೃತವಾಗಿದೆ.

ಮನುಷ್ಯ ಸಹಜ ಪ್ರವೃತ್ತಿಗಳಾಗಿರುವ ಅನುಕಂಪ ಮಾನವೀಯತೆ ಪ್ರಾಮಾಣಿಕತೆ ಛಲ-ಸಾಹಸ ಇತ್ಯಾದಿಗಳು ವ್ಯಕ್ತಿನಿಷ್ಠ ನೆಲೆಯಿಂದ ಸಮಾಜ ಮುಖಿಯಾಗಿ ಚಾಚಿಕೊಳ್ಳಬೇಕಾದರೆ, ಮನಸ್ಸಿಗೆ ಸೂಕ್ತ ಸಂಸ್ಕಾರದ ಅಗತ್ಯವಿದೆ. ಭಾವಸಂಸ್ಕಾರವನ್ನು ಹೃದಯವೈಶಾಲ್ಯವನ್ನು ವಿವೇಕವನ್ನು ಮೂಡಿಸುವಲ್ಲಿ ಸಾಹಿತ್ಯದ ಪಾತ್ರ ಹಿರಿದಾಗಿದೆ ಎನ್ನುವ ನಂಬಿಗೆಯಿಂದ ಬರೆದಿರುವ 'ರಚನಾತ್ಮಕ ಚಿಂತನೆ'ಗಳಲ್ಲಿ ಸಮಾಜ-ದೇಶ-ಮಕ್ಕಳನ್ನು ಉದ್ದೇಶಿಸಿ ಬರೆದ ಲೇಖನಗಳಿವೆ. ಜೊತೆಗೆ ಮಾನವ ಪ್ರವೃತ್ತಿಗಳನ್ನು ಕುರಿತು ಜಿಜ್ಞಾಸೆಯನ್ನು ನಡೆಸುವ ಲೇಖನಗಳಿವೆ. ರಾಷ್ಟ್ರೀಯ ಭಾವೈಕ್ಯತೆ, ಪ್ರಜಾಪ್ರಭುತ್ವದ ಕಾಳಜಿಗಳು, ದೇಶದ ಅಭಿವೃದ್ಧಿ ಮುಂತಾದ ಲೇಖನಗಳು ಲಲಿತಾಂಬಾ ಅವರ ನಾಗರಿಕ ಪ್ರಜ್ಞೆ, ಮೌಲ್ಯಾಧಾರಿತ ಆಶಯಗಳನ್ನು ಸೂಚಿಸುತ್ತವೆ. 'ಮಹಿಳೆ' ಲಲಿತಾಂಬಾ ಅವರ ತೀವ್ರ ಆಸಕ್ತಿ ಮತ್ತು ಕಾಳಜಿಯ ವಿಷಯ. ಮಹಿಳಾ ಪರ ಚಳುವಳಿ, ಉದ್ಯೋಗಸ್ಥ ಮಹಿಳೆ, ಪತಿತಪಾವನೆಯರು, ಗೃಹಣೀ ಗೃಹಮುಚ್ಯತೇ ಮುಂತಾದ ಲೇಖನಗಳಲ್ಲಿ ವೇಶ್ಯಾಪದ್ಧತಿಯನ್ನು ಕುರಿತು ಚಿಂತಿಸಿರುವ ಪತಿತ ಪಾವನೆಯರು ಅವರು ದೇವದಾಸಿ ಪದ್ಧತಿಯ ನಿರ್ಮೂಲನೆಗೆ ಮಹಿಳಾ ಸಮಾಜದ ಜಾಗೃತಿಗೆ ಪೂರಕವಾದ ಅನೇಕ ಉಪಯುಕ್ತ ಸಲಹೆಗಳನ್ನು ನೀಡಿರುವುದು ವಿಶೇಷ. ಆಧುನಿಕತೆಯ ಭರಾಟೆಯಲ್ಲಿ ಅನಿವಾರ್ಯವೆನಿಸಿರುವ ಹೆಣ್ಣು ಮಕ್ಕಳ ಹೊರದುಡಿಮೆಯ ಗುಣಾತ್ಮಕ-ಋಣಾತ್ಮಕ ಪರಿಣಾಮಗಳನ್ನು ಚರ್ಚಿಸಿರುವ ಲೇಖನ 'ಉದ್ಯೋಗಸ್ಥ ಮಹಿಳೆ ಕೌಟುಂಬಿಕ ಹಿತಾಸಕ್ತಿ'. ಉದ್ಯೋಗಸ್ಥ

ಮಹಿಳೆಯರ ಬದುಕು-ಬವಣೆಗಳನ್ನು ಸಹಾನುಭೂತಿಯಿಂದ ಪರಿಶೀಲಿಸುವ ಲೇಖಕಿ, ಉದ್ಯೋಗವನ್ನು ಕುಟುಂಬಕೇಂದ್ರಿತವಾಗಿ ವ್ಯಾಖ್ಯಾನಿಸುವದರಿಂದಾಗಿ ಉದ್ಯೋಗದ ಅಗತ್ಯವನ್ನು ಆರ್ಥಿಕತೆಗೆ ಮಿತಿಗೊಳಿಸುತ್ತಾರೆ. ಸ್ವಾವಲಂಬನೆಯನ್ನು ವ್ಯಕ್ತಿತ್ವದ ಸಬಲೀಕರಣದ ಸಾಧನವಾಗಿ, ಸ್ತ್ರೀವಿಮೋಚನೆಯ ಶಕ್ತಿಯಾಗಿ ವ್ಯಾಖ್ಯಾನಿಸಿರುವ ಆಧುನಿಕ ಸ್ತ್ರೀವಾದಿ ವಿಚಾರಗಳಿಗಿಂತ ಭಿನ್ನವಾದ ನಿಲುವನ್ನು ತಾಳುತ್ತಾರೆ. ಹೆಣ್ಣಿನ ಸೃಜನಶೀಲತೆಯನ್ನು ಮನೆಗೆ ಮಿತಗೊಳಿಸುವ ಸಾಂಪ್ರದಾಯಿಕತೆಯಲ್ಲಿ ಒಲವುಳ್ಳ ಅವರು "ಗೃಹಿಣಿಯಾಗಿ ಮಕ್ಕಳನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸುವುದನ್ನು, ಕುಟುಂಬದ ಹಿತರಕ್ಷಣೆಯನ್ನು ಹೆಣ್ಣಿನ ಮೊದಲ ಕರ್ತವ್ಯ"ವೆಂದೇ ಭಾವಿಸುತ್ತಾರೆ. ಆದರೆ 'ಗೃಹಿಣೀ ಗೃಹಮುಚ್ಯತೇ ಲೇಖನದಲ್ಲಿ ಹೆಣ್ಣನ್ನು ಮನೆಗೆಲಸಕ್ಕೆ ನಿರ್ಬಂಧಿಸುವ ಪುರುಷಪರ ವ್ಯವಸ್ಥೆಯನ್ನು ಖಂಡಿಸುವ ಅವರು , ಕುಟುಂಬದಲ್ಲಿ ಸ್ತ್ರೀ ಪುರುಷರ ಸ್ಥಾನಮಾನಗಳಲ್ಲಿರುವ ತಾರತಮ್ಯವನ್ನು ಚರ್ಚಿಸುತ್ತಾರೆ. ಕುಟುಂಬದ ಸುಖ-ಶಾಂತಿ, ಒಳಿತು-ಕೆಡಕುಗಳಿಗೆ ಹೆಣ್ಣನ್ನು ಹೊಣೆಗಾರಳನ್ನಾಗಿಸುವ ಸಾಂಪ್ರದಾಯಿಕ ಧೋರಣೆಗಳನ್ನು ವಿವರವಾಗಿ ವಿಶ್ಲೇಷಿಸಿದ್ದಾರೆ. "ಮಹಿಳಾ ಪರ ಚಳುವಳಿಗಳು" ಲೇಖನದಲ್ಲಿ ಪುರುಷ ದ್ವೇಷವನ್ನು, ಶೋಷಣೆಗೆ ಪ್ರತಿ ಶೋಷಣೆ ಎನ್ನುವ ಪ್ರತೀಕಾರದ ಭಾವನೆಯನ್ನು ಮಹಿಳೆಯರಲ್ಲಿ ಬೆಳೆಸದೆ, ಸ್ತ್ರೀಪರವಾದ ಜಾಗೃತಿಗಾಗಿ ಕ್ರಿಯಾಶೀಲವಾಗಬೇಕೆಂದು ಕಳಕಳಿಯ ಕರೆನೀಡುತ್ತಾರೆ.

ಸಂಪ್ರದಾಯಗಳ ದೂಷಣೆಗಿಂತ ಪರಿಹಾರದ ಚಿಂತನೆಯಲ್ಲಿ ತೊಡಗುವಂತೆ ಮಹಿಳೆಯರಿಗೆ ಕಿವಿಮಾತು ಹೇಳುವ ಅವರು ಪಾಶ್ಚಾತ್ಯ ಮಹಿಳಾ ಚಳುವಳಿಗಳ ಅಂಧಾನುಕರಣೆಗಳು ಕೌಟುಂಬಿಕ ವಿಘಟನೆಗೆ ಸಾಮಾಜಿಕ ಅಶಾಂತಿಗೆ ಕಾರಣವಾಗುವುದನ್ನು ಎತ್ತಿತೋರಿಸಿದ್ದಾರೆ. ಸಮಾಜದಲ್ಲಿ ಸ್ತ್ರೀಪರವಾದ ಚಿಂತನೆಗಳು ಬೆಳೆದು ಸ್ತ್ರೀ ಪುರುಷರಲ್ಲಿ ಪರಸ್ಪರ ಸಹಕಾರ, ಕುಟುಂಬ ಗೌರವದ ಸಹೃದಯದ ಸಂಬಂಧಗಳು ಸಾಧ್ಯವಾದರೆ ಸ್ತ್ರೀಯರ ಶೋಷಣೆಗೆ ಪರಿಹಾರ ಸಾಧ್ಯ ಎಂದಿರುವುದು ಗಮನಾರ್ಹ.

ಪ್ರೊ. ಲಲಿತಾಂಬಾ ಅವರ ಪ್ರಬುದ್ಧ ವೈಚಾರಿಕತೆಯನ್ನು ಪರಿಚಯಿಸುವ ಲೇಖನ 'ವಿಶ್ವಸಮುದಾಯ ಸೃಷ್ಟಿ'. ಆಧುನಿಕ ಸಮಾಜದಲ್ಲಿ ಉಲ್ಬಣಗೊಳ್ಳುತ್ತಿರುವ ಜಾತೀಯತೆ-ಸ್ವಹಿತಾಸಕ್ತಿ ಗುಂಪುಗಾರಿಕೆ-ಭೋಗಪ್ರವೃತ್ತಿ-ಅತೃಪ್ತಿಗಳು ಕೊಲೆ-ಸುಲಿಗೆಗಳಂಥ ಪೈಶಾಚಿಕ ಪ್ರವೃತ್ತಿಗಳಿಗೆ ಕಾರಣವಾಗುತ್ತಿರುವುದನ್ನು ಕಂಡು ನೊಂದಿರುವ ಲೇಖಕಿ, ಆಧುನಿಕ ಯಂತ್ರಮಾನವನ ಹೃದಯ ದಾರಿದ್ರಕ್ಕೆ ನೈತಿಕ ಸ್ತ್ರೀಯ ಕೊರತೆಯನ್ನು ತುಂಬಲು ನೈತಿಕ ಶಿಕ್ಷಣದ ಅಗತ್ಯವನ್ನು ಪ್ರತಿಪಾದಿಸುತ್ತಾರೆ ಮೌಲ್ಯಾಧಾರಿತ ಭಾರತೀಯ ಸಂಸ್ಕೃತಿ ಸಮಾಜದಲ್ಲಿ ಮೌಲ್ಯಗಳು ನಾಶವಾಗುತ್ತಿರುವ

ಕಟುವಾಸ್ತವವನ್ನುವಿಶ್ಲೇಷಿಸುವ ಲೇಖಕಿ, ಮಕ್ಕಳಲ್ಲಿ ಬಾಲ್ಯದಿಂದಲೇ ಸನ್ನಡತೆ, ಸರಳತೆ ಸದ್ಗುಣಗಳನ್ನು ಬೆಳೆಸಲು ಪೂರಕವಾಗುವ ಹಬ್ಬ, ಉತ್ಸವ, ಸಂಪ್ರದಾಯಗಳ ಸಾಮಾಜಿಕ-ಧಾರ್ಮಿಕ, ಸಾಂಸ್ಕೃತಿಕ ಹಿನ್ನೆಲೆಗಳನ್ನು ವೈಜ್ಞಾನಿಕವಾಗಿ ವಿವರಿಸಿ "ಭಾರತದ ಹಳೆಯ ಮೌಲ್ಯಗಳು" ರಕ್ಷಿಸಿಕೊಂಡು ಬಂದಿರುವ ಜೀವನಾನುಭವದ ಸಾರವನ್ನು, ಲೋಕಾನುಭವದ ಬೆಳಕನ್ನು ತೆರೆದು ತೋರಿಸಿದ್ದಾರೆ. ಧರ್ಮಶ್ರದ್ಧೆಯುಳ್ಳ ಲಲಿತಾಂಬಾ ಅವರು ಭಾರತದ ಸನಾತನ ಪರಂಪರೆಯಲ್ಲಿರುವ ಆಧ್ಯಾತ್ಮಿಕ ಆದರ್ಶಗಳನ್ನು ಕುರಿತು ಚಿಂತಿಸಿದ್ದಾರೆ. ಬಹು ಸಂಸ್ಕೃತಿ, ಬಹುಧರ್ಮಗಳ ದೇಶವಾದ ಭಾರತದಲ್ಲಿ ಶತಮಾನಗಳಿಂದ ಪೋಷಿಸಿಕೊಂಡು ಬಂದಿರುವ ಅಹಿಂಸೆ, ಸಂಯಮ, ಸಾಮರಸ್ಯ ಸಂಸ್ಕೃತಿಯ ಶ್ರೇಷ್ಠ ಧರ್ಮವು ನಾಶವಾಗುತ್ತಿರುವುದಕ್ಕೆ 'ರಚನಾತ್ಮಕ ಧರ್ಮ', ಲೇಖನವು ಪ್ರತಿಕ್ರಿಯಿಸಿದೆ. ದೇಶವನ್ನು ಗೊಂದಲದ ಗೂಡಾಗಿಸಿ ಹಿಂಸೆಯನ್ನು ಹುಟ್ಟುಹಾಕುವದು ಜೀವ ವಿರೋಧಿ ಧರ್ಮವು ಅಧರ್ಮವೆನ್ನುವುದನ್ನು ಸ್ಪಷ್ಟಪಡಿಸುವ ಲೇಖನವು, ಧರ್ಮ ಅಧರ್ಮದ ಸರಿಯಾದ ಅರಿವು ಮೂಡಿಸಲು ಪ್ರಯತ್ನಿಸುತ್ತದೆ. ಸಮಕಾಲೀನತೆಗೆ ಸ್ಪಂದಿಸುವ ವೈಚಾರಿಕ ಎಚ್ಚರದೊಂದಿಗೆ ತೀವ್ರ ಸಾಮಾಜಿಕ ಕಾಳಜಿಯುಳ್ಳ ಪ್ರಜ್ಞಾವಂತ ಲೇಖಕಿಯಾಗಿ ಲಲಿತಾಂಬಾ ಅವರನ್ನು ವಿಶಿಷ್ಟರನ್ನಾಗಿಸುವ "ಪರಿಸರಮಾಲಿನ್ಯ ತಡೆಗಟ್ಟುವುದೆಂತು?" ಲೇಖನವು ಗಂಭೀರ ಪ್ರಶ್ನೆಗಳನ್ನು ಎತ್ತಿ ಉತ್ತರಗಳನ್ನು ಹುಡುಕಲು ಪ್ರಯತ್ನಿಸುತ್ತದೆ. ಪರಿಸರ ಮಾಲಿನ್ಯಕ್ಕೆ ಕಾರಣವಾಗಿರುವ ಜನಸಂಖ್ಯೆಯ ಆಧಿಕ್ಯ, ಯಂತ್ರ ನಾಗರಿಕತೆ, ಮೋಜಿನ ಜೀವನ, ನೈರ್ಮಲ್ಯದ ಪರಿಸರ, ಪ್ರಜ್ಞೆಯ ಅಭಾವವನ್ನು ಚರ್ಚಿಸಿ ಸ್ವಯಂಕೃತ ಅಪರಾಧಗಳಿಗೆ ತೆರಬೇಕಾದ ಬೆಲೆಯನ್ನು ಲೇಖಕಿ ಎಚ್ಚರಿಸುತ್ತಾರೆ.

ಕಲುಷಿತವಾಗಿರುವ ಸಮಾಜವು ಆರೋಗ್ಯಕರ ಆಯಾಮಗಳಲ್ಲಿ ಅರಳಿಕೊಳ್ಳಬೇಕು; ಭೌತಿಕವಾಗಿ-ನೈತಿಕವಾಗಿ ಸಮಾಜ ಜೀವನದಲ್ಲಿ ಸಮೃದ್ಧಿ ಕಾಣಿಸಿಕೊಳ್ಳಬೇಕು ಎನ್ನುವ ತೀವ್ರ ಕಾಳಜಿಯನ್ನು ಪ್ರಕಟಿಸುವ 'ರಚನಾತ್ಮಕ ಚಿಂತನೆಗಳು' ಸಮಸ್ಯೆಗಳನ್ನು ಪರಿಹಾರಗಳನ್ನು ಏಕಕಾಲಕ್ಕೆ ತೆರೆದಿಡುವ ಸಾಂಸ್ಕೃತಿಕ ಜವಾಬ್ದಾರಿಯನ್ನು ಅರ್ಥಪೂರ್ಣವಾಗಿ ನಿರ್ವಹಿಸಿರುವುದು ಗಮನಾರ್ಹ. ಅಂತೆಯೇ ಸಮಸ್ಯೆಗಳನ್ನು ಮುಕ್ತವಾಗಿ, ಹಲವು ನಿಟ್ಟುಗಳಿಂದ ವಿಶ್ಲೇಷಿಸಿ, ಪರಿಹಾರದ ಮಾರ್ಗೋಪಾಯಗಳನ್ನು ಸೂಚಿಸುವ ಲೇಖನಗಳು ಶುಷ್ಕ ಚಿಂತನೆಗಳಾಗದೇ ರಚನಾತ್ಮಕ ಜೀವನ ಪಾಠಗಳಾಗುತ್ತವೆ. ಲಲಿತಾಂಬಾ ಅವರ ಬಹುಶ್ರುತ ವ್ಯಕ್ತಿತ್ವವನ್ನು ಸಮರ್ಥವಾಗಿ ಪ್ರತಿನಿಧಿಸುವ ಕೃತಿ 'ರಚನಾತ್ಮಕ ಚಿಂತನೆಗಳು'.

– ಪ್ರೊ. ಶಾಂತಾ ಇಮ್ರಾಪೂರ

■

## ಪ್ರಕಾಶನದ – 'ಬಿನ್ನಹ'

ಮಾನ್ಯರೇ,

ನಮ್ಮ ತಂದೆ–ತಾಯಿ (ಪ್ರೊ, ವೃಷಭೇಂದ್ರಸ್ವಾಮಿ ಮತ್ತು ಪ್ರೊ, ಲಲಿತಾಂಬ) ತಮ್ಮ ಸ್ವ ಸಂತೋಷಕ್ಕಾಗಿ ಪ್ರಾರಂಭಿಸಿದ 'ಪ್ರಸಾದ ಪ್ರಕಾಶನ'ದ ಮೂಲಕ, ಈಗ ಪ್ರೊ, ಲಲಿತಾಂಬ ಅವರ ಸಮಗ್ರ ಕೃತಿ ಸಂಪುಟಗಳನ್ನು–ಪುಣ್ಯಸ್ಮರಣೆಯಾಗಿ ಪ್ರಕಟಿಸುವುದು ನನಗೆ ಪ್ರೀತಿಯ ಕಾಯಕ ಹಾಗೂ ಕರ್ತವ್ಯ, ಈ ಸಂಪುಟಗಳನ್ನು ಸಂಪಾದಿಸಿ – ಮುನ್ನುಡಿ – ಹಿನ್ನುಡಿಗಳನ್ನು ಅಭ್ಯಾಸಪೂರ್ಣವಾಗಿ ಬರೆದು, ಕರಡಚ್ಚಗಳನ್ನು ಶ್ರಮ ವಹಿಸಿ ತಿದ್ದಿ–ತೀಡಿ. ಪ್ರಕಟಣೆಗೆ ಅನುವು ಮಾಡಿಕೊಟ್ಟ, ನಮ್ಮ ಮನೆತನದ ಹಿತೈಷಿಗಳಾದ ಪ್ರೊ, ಶಾಂತಾ ಇಮ್ರಾಪುರ ಮತ್ತು ಪ್ರೊ, ಹಸನ್‌ಬಿ. ಬೀಳಗಿ ಹಾಗೂ ಮೂಲ ಸಾಮಗ್ರಿಗಳನ್ನು ದೊರಕೊಳಿಸಿದ ನಮ್ಮ ತಂದೆ, ಹಾಗೂ ಬಂಧು ಮಿತ್ರರ ನೆರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಈ ಸಂಪುಟದ ಸುಂದರ ಮುಖಚಿತ್ರ, ಅಂದವಾದ ಮುದ್ರಣ ಮಾಡಿದ ಅಭಿಮಾನೀ ಮಿತ್ರ ಶ್ರೀ ಜಿ. ಬಿ. ಪಾಟೀಲ, ಮಾಲೀಕರು ಪ್ರಿಂಟ್ ಪಾರ್ಕ್, ಬೆಂಗಳೂರು ಮತ್ತು ಅವರ ಕ್ರಿಯಾಶೀಲ ಸಿಬ್ಬಂದಿಗೆ ನಮ್ಮ ವಂದನೆಗಳು, ಈ ಕೃತಿಗಳ ಲೋಕಾರ್ಪಣೆ ಮಾಡಿದ ಅಭಿಮಾನೀ ಹಿರಿಯರಿಗೆ, ಸಾಹಿತಿ ಮಾನ್ಯರಿಗೆ ಕೃತಜ್ಞತೆಗಳು.

ನಮ್ಮ ತಾಯಿ–ತಂದೆಯರ ಅಭಿಮಾನಿಗಳೂ, ಪ್ರಖ್ಯಾತ ಉದ್ದಿಮೆದಾರರೂ ಆದ, ಶ್ರೀ ಪ್ರಭುಲಿಂಗೇಶ್ವರ ಸಕ್ಕರೆ ಕಾರ್ಖಾನೆಯ ಸಂಸ್ಥಾಪಕ ಎಂ.ಡಿ.ಯಾಗಿರುವ ಶ್ರೀ ಜಗದೀಶ ಗುಡಗುಂಟಿ ಅವರು ತಮ್ಮ ಪೂಜ್ಯ ತಂದೆ ತಾಯಿಯರಾದ ಡಾ॥ ಎಸ್. ವ್ಹಿ. ಗುಡಗುಂಟಿಮಠ ಮತ್ತು ಪುಷ್ಪಾತಾಯಿ ಅವರ ಸ್ಮರಣಾರ್ಥ – ಪ್ರಥಮ ಸಂಪುಟದ ಪ್ರಕಟಣೆಗೆ ವಿಶೇಷ 'ಕಾಣಿಕೆ'ಸಲ್ಲಿಸಿರುವ ಅವರ ಉದಾರತೆಗೆ–ಶಿಕ್ಷಣ–ಸಂಸ್ಕೃತಿ ಪ್ರೇಮಕ್ಕೆ ನನ್ನ ವಂದನೆಗಳು.

ತಮಗೆಲ್ಲ ತಿಳಿದಿರುವಂತೆ 'ಪ್ರಸಾದ ಪ್ರಕಾಶನ'ದ ಗುರಿ ಹಣಸಂಪಾದನೆಯಲ್ಲ–ಕಾಯಕ–ಶಿಕ್ಷಣ ದಾಸೋಹ. ಪ್ರಕೃತ ಈ ಮೂರು ಸಂಪುಟಗಳನ್ನು ಖರೀದಿಸಿ, ಶಿಕ್ಷಣಸಂಸ್ಥೆಗಳಿಗೆ ದಾನ ಮಾಡುವ 'ಉದಾರಹೃದಯಿ'ಗಳಿಗೆ, ಸ್ವಾಗತ.

ಈ 'ಪ್ರೀತಿಯಕಾಯಕ'ದಿಂದ ಬರುವ ವರಮಾನವೆನ್ನೆಲ್ಲ ಬಡಮಕ್ಕಳ ಶಿಕ್ಷಣ ನೆರವಿಗೆ ಮೀಸಲಾಗಿರಸಲು ನಿರ್ಧರಿಸಿದ್ದೇವೆ. ನಮ್ಮ ಮಾತಾ–ಪಿತೃಗಳ–ಅಭಿಮಾನೀ ಬಂಧುಗಳ "ಸದಾಶಯ"ದ ಮುಂದುವರಿಕೆ ನಮ್ಮ ಈ ಪ್ರಕಾಶನದ ಗುರಿ. ಎಲ್ಲರ ನೆರವನ್ನು ಕೃತಜ್ಞತೆಯಿಂದ ಸ್ಮರಿಸಿ, ಸಮಾನರೀತಿಯ ಸಹಕಾರವನ್ನು ನಿರೀಕ್ಷಿಸುತ್ತಿದ್ದೇನೆ.

ಕೊನೆಯದಾಗಿ, ನಮ್ಮ ಈ ಪ್ರಯತ್ನದಿಂದ ಪ್ರೀತಿಯ 'ಅಮ್ಮ'ನ ಆತ್ಮಕ್ಕೆ ಶಾಂತಿ – ಸಮಾಧಾನ – ತೃಪ್ತಿ ದೊರೆಯಲೆಂದು ಹಾರೈಸುತ್ತೇನೆ. ಅಮ್ಮನ ಪ್ರೀತಿಯ ಸೊಸೆ ಶ್ರೀಮತಿ ಅನುಪಮಾ, ಮುದ್ದಿನ ಏಕಮಾತ್ರ ಮೊಮ್ಮಗಳು ಕು॥ ಶರ್ವಾಣಿ ಮತ್ತು ನಮ್ಮ ಎಲ್ಲ ಬಂಧು–ಮಿತ್ರ–ಅಭಿಮಾನಿಗಳಿಗೆ ಹೃದಯಪೂರ್ವಕ ವಂದನೆಗಳು.

ಧಾರವಾಡ — ಡಾ. ಎಸ್. ಎಮ್. ಶಿವಪ್ರಸಾದ

೧೩–೦೮–೨೦೦೯

■

## ಪರಿವಿಡಿ



■

# ಬೇರೊಂದು ಮರವೆರಡು

(ಸಣ್ಣ ಕಥೆಗಳ ಸಂಗ್ರಹ)

ಲೇಖಕರು
ಪ್ರೊ. ಲಲಿತಾಂಬಾ ವೃಷಭೇಂದ್ರ ಸ್ವಾಮಿ
ಎಂ.ಇಡಿ.,ಡಿ.ಟಿ.ಇ.

ಪ್ರಕಾಶಕರು
ಪ್ರಸಾದ ಪ್ರಕಾಶನ
'ಶಿವಪ್ರಸಾದ' ಲನೇ ಕ್ರಾಸ್, ಕಲ್ಯಾಣನಗರ,
ಧಾರವಾಡ - ೫೮೦೦೦೭

# ಮುನ್ನುಡಿ

ವೈವಿಧ್ಯಮಯ ಬರಹಗಳಿಂದ, ವೈಚಾರಿಕ ಲೇಖನಗಳಿಂದ, ಕನ್ನಡ ಜನಮನಕ್ಕೆ ಸಾಣೆ ಹಿಡಿಯುವಲ್ಲಿ ಸಫಲರಾಗಿರುವ ಪ್ರೊ॥ ಶ್ರೀಮತಿ ಲಲಿತಾಂಬ ವೃಷಭೇಂದ್ರ ಸ್ವಾಮಿಯವರ ಮೊದಲ ಕಥಾ ಸಂಕಲನ 'ಬೇರೊಂದು ಮರವೆರಡು' ಒಟ್ಟು ಹನ್ನೆರಡು ಸಣ್ಣ ಕಥೆಗಳನ್ನು ಒಳಗೊಂಡಿದೆ.

ಧಾರ್ಮಿಕ, ವೈಚಾರಿಕ, ಶೈಕ್ಷಣಿಕ, ವಿಚಾರಧಾರೆಗಳಿಗೆ ಕೃತಿಯ ರೂಪುನೀಡಿಯೂ ಕಥೆಗಳಿಗೆ ಹೊತ್ತಗೆಯ ಆಕೃತಿ ನೀಡದ ಕಥೆಗಾರ್ತಿ–ಅರಕೆನೀಗಿ–ಅಂದದ ಕಥಾಸಂಗ್ರಹವನ್ನು ಹೊರತಂದಿದ್ದಾರೆ. ಅಂತರಂಗದಲ್ಲಿ ಹೆಪ್ಪುಗಟ್ಟಿದ ಭಾವನೆಗಳನ್ನು, ಸುತ್ತಣ ಸಮಾಜದಿಂದ ಅರಗಿಸಿಕೊಂಡ ಜೀವನಾನುಭವಗಳನ್ನು, ಹದವಾದ ಭಾಷೆಯಲ್ಲಿ, ಅಕ್ಷರ ರೂಪದಲ್ಲಿ ಅಭಿವ್ಯಕ್ತಿಸಿದ್ದಾರೆ. ಸಂವೇದನೆಗಳನ್ನು ಸರಳವಾಗಿ ಚೆಲ್ಲಿ ಚೆಂದದ ಚಿತ್ತಾರ ಮೂಡಿಸಿದ್ದಾರೆ.

'ಸ್ತ್ರೀಪರ ಚಿಂತನೆ', 'ಸ್ತ್ರೀ ವಾದಿ ಸಂವೇದನೆ', 'ಮಹಿಳಾ ಶೋಷಣೆ' ...... ಎಂಬಿತ್ಯಾದಿ ಜನಪ್ರಿಯ ಘೋಷಣೆಗಳ ಮೊರೆ ಹೋಗದೆ, ಅಂತರಂಗವನ್ನು ಕಲಕಿದ ಅಪರೂಪದ ಸಂಗತಿಗಳನ್ನು, ಘಟನೆಗಳನ್ನು, ಪ್ರಾಮಾಣಿಕವಾಗಿ, ಕಲಾತ್ಮಕವಾಗಿ ಕಥೆಯ ಚೌಕಟ್ಟಿನಲ್ಲಿ ಸೆರೆಹಿಡಿಯುವಲ್ಲಿ ಸಫಲರಾಗಿದ್ದಾರೆ ಕಥೆಗಾರ್ತಿ ಲಲಿತಾಂಬ ವೃಷಭೇಂದ್ರ ಸ್ವಾಮಿ.

ಹನ್ನೆರಡು ಕಥೆಗಳಲ್ಲಿ ಕಟ್ಟಿ ಕೊಡಲು ಇವರು ಬಯಸಿರುವುದು ಮಧ್ಯಮ ವರ್ಗದ ಸೋದರಿಯ..ರ ಕನಸುಗಳನ್ನು, ಮುರುಟಿದ ಮನಸ್ಸುಗಳನ್ನು, ಹೆಣ್ಣಿಗೆ ಹೆಣ್ಣೇ ಶತ್ರುವಾಗುವ ವೈಪರೀತ್ಯವನ್ನು, ಹೊಂದಿಕೊಳ್ಳಲು ಕಲಿಯದ ಹೆಣ್ಣುಮಕ್ಕಳು ಹಚ್ಚುವ ದುರಂತದ ಉ..ರಿಯನ್ನು, ಸಂಸಾರವಿಲ್ಲದವರು ಸುಡುವ ಸಂಸಾರಗಳನ್ನು.....

'ಖಂಡವಿದೆಕೋ–ಮಾಂಸವಿದೆಕೋ' ಕಥೆಯ ನಾಯಕಿ ಶಾಶ್ವತಿ, ಸ್ತ್ರೀ ಜಾಗೃತಾ ಸಮಿತಿಯ ಅಧ್ಯಕ್ಷೆಯಾಗಿದ್ದು, ಮಹಿಳೆಯ ಹಕ್ಕುಗಳಿಗಾಗಿ ಹೋರಾಡುತ್ತಾ ಬಂದವಳು. ಪತಿ ವಿಕಾಸ ಕಂದಾಚಾರಗಳ ಕಟ್ಟುಪಾಡುಗಳನ್ನು ಕಡಿದೊಗೆಯಲಾಗದ 'ಹೋಮ್ ಬರ್ಡ್'. ಸಂಸಾರದಲ್ಲಿ ಬಿರುಕು, ಪುರುಷನ ಅನ್ಯಾಯಕ್ಕೆ ಒಳಗಾಗಬಾರದೆಂಬ ದೃಢ ನಂಬಿಕೆ ಕೊಡಲಿ ಪೆಟ್ಟು. ಎರಡು ವರ್ಷಗಳ ನಂತರ

ಮರು ಹೊಂದಾಣಿಕೆಗೆ ಚಾಲನೆ ನೀಡುತ್ತಾನೆ ಗೆಳೆಯ ರಮೇಶ. ಶಾಶ್ವತಿ ಹೇಳುತ್ತಾಳೆ: "ಅವರು ಕ್ಷಮೆ ಕೇಳಲಿ ಎಂದೇನೂ ಬಯಸುವುದಿಲ್ಲ. ಸಮರಸ ಜೀವನ ಸಾಧ್ಯ' ಎಂಬ ನಂಬಿಕೆ ಹುಟ್ಟಿಸಿದರೆ ಅಷ್ಟೇ ಸಾಕು." ಇಲ್ಲಿ ಕಥೆಗಾರ್ತಿ ಸಾವಿರಾರು ಮಧ್ಯಮ ವರ್ಗೀಯ ಸುಶಿಕ್ಷಿತ ಮಹಿಳೆಯರ ಮೂಕ ವೇದನೆಗೆ ಧ್ವನಿ ನೀಡಿರುವುದನ್ನು ಒಪ್ಪದಿರಲಾಗದು.

ತಪ್ಪು ನಿರ್ಧಾರಗಳಿಂದ, ಅಪ್ರಬುದ್ಧ ಆಲೋಚನೆಗಳಿಂದ, ಸಂಸಾರದೊಳಗೆ ಅನ್ಯರ ಅನಗತ್ಯ ಅತಿಕ್ರಮಣದಿಂದ, ಅನರ್ಥಗಳ ಸರಮಾಲೆಗೆ ಆಹ್ವಾನ ನೀಡಿದಂತಾಗುತ್ತದೆ ಎಂಬುದನ್ನು ಕಥೆಗಾರ್ತಿ ತಮ್ಮ ಹೆಚ್ಚಿನ ಕಥೆಗಳಲ್ಲಿ ಪ್ರತಿಪಾದಿಸಿರುವುದನ್ನು ನಾವು ಬೆರಗಿನಿಂದಲೇ ಗಮನಿಸಬಹುದಾಗಿದೆ. ಗಂಡು ಮಕ್ಕಳ ಅನಾದರ, ಸೊಸೆಯಂದಿರ ತಾತ್ಸಾರಗಳಿಂದ ಮನೆಯ ಹಿರಿಯರಿಗೆ ಎದೆಭಾರ, ಬದುಕು ದುರ್ಭರ, ನೋವಿನ ಉದ್ಗಾರ, ಕೌಟುಂಬಿಕ ಸಮಸ್ಯೆಗಳನ್ನು, ಅಸಮತೆ, ಅಸಮಾಧಾನಗಳ ಘಟನೆಗಳನ್ನು ಲೇಖಕಿ ಅನಾವರಣಗೊಳಿಸಿದ ಪರಿ ಅನನ್ಯವಾಗಿದೆ. ಕಥೆಗಳು ಹಳೆಯವಾದರೂ ಇಲ್ಲಿನ ನೋವು, ನಿರಾಶೆ, ಹತಾಶೆ, ಉರಿ, ಭುಗಿಲು, ದಿಗಿಲು ಸಾರ್ವಕಾಲಿಕ. ಹೀಗಾಗಿ ವಿಷಯ – ವಸ್ತುಗಳ ಪ್ರಸ್ತುತತೆಯ ಪ್ರಶ್ನೆ ಉದ್ಭವಿಸುವುದೇ ಇಲ್ಲ.

'ತೀರ್ಪು' ಕಥೆಯ ಸೋಮಪ್ಪ, ತಮ್ಮ ಮೂವರು ಮಕ್ಕಳಿಂದ ಹಾಗೂ ಸೊಸೆಯಂದಿರಿಂದ ಅನಾದರಕ್ಕೊಳಗಾಗಿ, ಕೊನೆಗಾಲದಲ್ಲಿ ಉಪಚರಿಸಿದ ಅಡುಗೆ ಕೆಲಸದ ರಂಗಪ್ಪನ ಮಗಳು ವಿನೋದಾಬಾಯಿಯ ಹೆಸರಿನಲ್ಲಿ ದೊಡ್ಡ ಆಸ್ತಿಯ ಉಯಿಲು ಬರೆಯುವಂತಾಗುತ್ತದೆ. ಅವರೇ ಬರೆದಿದ್ದ ಡೈರಿಯಿಂದಾಗಿ ಕೋರ್ಟಿನಲ್ಲಿ ಮಾನವೀಯತೆಯ ಪರವಾಗಿ ತೀರ್ಪು ಬಂತು. 'ಗಂಡು ಮಗುವೇ ಬೇಕು' ಕಥೆಯಲ್ಲಿ ಎರಡು ಹೆಣ್ಣುಮಕ್ಕಳನ್ನು ಹೆತ್ತ ಕುಶಲಾ ಕೊರಗಿ ಕೊನೆಯುಸಿರೆಳೆಯುತ್ತಾಳೆ. "ನಾನು ನಿಮಗೆ ಮಗನನ್ನು ಹೆತ್ತು ಕೊಡದಾದೆ. ಕ್ಷಮಾಳನ್ನು ಅಲಕ್ಷಿಸಬೇಡಿ. ಚೆನ್ನಾಗಿ ನೋಡಿಕೊಳ್ಳಿ" ಎಂಬುದಾಗಿ ಪತಿಯೆದುರು ಹಲುಬುವ ಪರಿ ಹೃದ್ಯವಾಗಿದೆ.

'ಹತ್ಯೆ' ಕಥೆಯ ನಾಯಕಿ ಮಾಲತಿ, ತನ್ನದಲ್ಲದ ತಪ್ಪಿಗೆ ಶಿಕ್ಷೆ ಅನುಭವಿಸುತ್ತಾಳೆ. ಅನಂತಪುರದ ರೈಲ್ವೆ ನಿಲ್ದಾಣದಲ್ಲಿ ಗರ್ಭಿಣಿಯ ಶವ ಕುತೂಹಲದ ಕಣ್ಣುಗಳಿಗೆ ಆಹಾರವಾಗುತ್ತದೆ. 'ಹೀಗೂ ನಡ್ಯೋದುಂಟೇ?' ಕತೆಯಲ್ಲಿ ಯುವ ಉದ್ಯಮಿ ಸುರೇಶನ ಸಾವು ಅತ್ಯಂತ ದಾರುಣವಾದುದು. ಸ್ವತಃ ಹೆಂಡತಿ, ಅತ್ತೆ, ಮಾವ ಅಳಿಯನನ್ನು ದಿವಾಳಿ ಎಬ್ಬಿಸಿ ಕೊಲೆ ಮಾಡುವ ಬರ್ಬರತೆ. 'ಪೂರ್ವ–ಪಶ್ಚಿಮ'ದಲ್ಲಿ, ಚೆನ್ನಾಗಿ ಬಾಳ್ವೆ ಮಾಡದ ತಾಯಿ ತನ್ನ ಮಗಳ ಬದುಕನ್ನೂ ನರಕವಾಗಿಸುವ ಅಮಾನವೀಯತೆ.

ಸಂಕಲನದ ಶೀರ್ಷಿಕೆ ಹೊತ್ತ ಕಥೆ 'ಬೇರೊಂದು ಮರವೆರಡು' ಆಡು ಮಾತಿನ ಸೊಗಡಿನಿಂದ ಗಟ್ಟಿಯಾಗಿ ಗೆದ್ದು ಬಂದಿದೆ. ತಾಯಿಯ ವೇದನೆ, ಪಾರ್ವತೆವ್ವಳ ಅಂತರಂಗದ ಪಿಸುದನಿ ಅರ್ಥಪೂರ್ಣ. ಆದರೆ ಮಗನ ಹಲುಬುವಿಕೆ ಬಾಲಿಶವೆನಿಸುತ್ತದೆ. ಆತನ ಪುರುಷತ್ವದ ಬಗೆಗೆ ಶಂಕೆ ಮೂಡುತ್ತದೆ. 'ನನಗೆ ತಾಯಿಯ ಆರೈಕೆ ಮಾಡಬೇಕೆಂಬ ಆಸೆ ಇದ್ದರೂ, ಆಕೆಯೇ ಆರಿಸಿ ತಂದ ಸೊಸೆ ಆಸ್ಪದ ಕೊಡಲಿಲ್ಲ.' ದುರಾದೃಷ್ಟದಿಂದ ನನ್ನ ಹೆಂಡತಿ ಸದ್ಗುಣಗಳನ್ನು ಹೊಂದಲಿಲ್ಲ, ಇವಳ ಮನಸ್ಸನ್ನು ತಿದ್ದಲು ಎಷ್ಟೇ ಪ್ರಯತ್ನಿಸಿದರೂ ಸಂಸ್ಕಾರವಿಲ್ಲದ ಇವಳು ಬದಲಾಗಲಿಲ್ಲ.... ಇತ್ಯಾದಿ ಸ್ವಗತದ ಹೊಣೆ, ಜಾರ ಮಾತುಗಳು ಅಪಥ್ಯವೆನಿಸುತ್ತವೆ. ಮಾತೃವಾತ್ಸಲ್ಯ ಸೊರಗಿದ್ದೇಕೆ? ದೋಷಾರೋಪಣೆಗೆ ಪತ್ನಿ ಬೇಕೆ? ಎಂಬಿತ್ಯಾದಿ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಸಿಗುವುದಿಲ್ಲ. 'ಅಮ್ಮಾವ್ರ ಗಂಡ'ನ ಚಡಪಡಿಕೆಗೆ 'ಅಯ್ಯೋ ಪಾಪ' ಎನಿಸುತ್ತದೆ.

'ಯೋಗಾಯೋಗ' ಹಾಗೂ 'ವರ್ಗ ತಂದ ಸ್ವರ್ಗ' – ಈ ಸಂಕಲನದ ಸಾಮಾನ್ಯ ಕಥೆಗಳೆನಿಸುತ್ತವೆ. 'ಹಸಿರು ಸೀರೆ' ನಿಷಾ–ಉಷಾರ ಸುತ್ತ ಹೆಣೆಯಲ್ಪಟ್ಟು ಆನಂದನ ಆನಂದಕ್ಕೆ 'ಖೊ' ಕೊಟ್ಟು, ಮೆಚ್ಚುಗೆಯ ಉದ್ಗಾರವೊಂದು ಮತ್ಸರದಿಂದಾಗಿ ವಿಷಾದದಲ್ಲಿ ಪರ್ಯವಸಾನಗೊಳ್ಳುವ ಉತ್ತಮ ಕಥೆ. 'ಆತಂಕ' ಕೊನೆಯವರೆಗೂ ಕುತೂಹಲವನ್ನು ಕಾಯ್ದುಕೊಂಡು, ವೇಗವಾಗಿ ಓದಿಸಿಕೊಂಡು ಹೋಗುವ ಲವಲವಿಕತೆಯ ಕಥೆ. ಇತರ ಕಥೆಗಳಿಗಿಂತ ಇದು ಭಿನ್ನ.

ಅನೇಕ ಕೃತಿಗಳಿಂದ ಕನ್ನಡ ವಾಚಕರ ಮನಸ್ಸನ್ನು ಗೆದ್ದಿರುವ ಪ್ರೊ॥ ಶ್ರೀಮತಿ ಲಲಿತಾಂಬ ವೃಷಭೇಂದ್ರ ಸ್ವಾಮಿಯವರ ಈ ಕಥಾ ಸಂಕಲನ ತನ್ನ ಸರಳನಿರೂಪಣಾ ವಿಧಾನದಿಂದಾಗಿ ಆತ್ಮೀಯವೆನ್ನಿಸುತ್ತದೆ. ತಮ್ಮ ಗಟ್ಟಿ ಅನುಭವಗಳ ತಳಹದಿಯ ಮೇಲೆ ಇನ್ನಷ್ಟು ದಿಟ್ಟ ಕಥಾ ಹಂದರಗಳನ್ನು ರೂಪಿಸಲು ಇವರಿಗೆ ಸಾಧ್ಯ ಉಂಟು. ಸದಭಿರುಚಿಯ ಸೊಗಸಾದ ಕಥೆಗಳನ್ನು ಈ ಸೃಜನಶೀಲೆಯಿಂದ ನಾಡು ನಿರೀಕ್ಷಿಸುತ್ತದೆ.

– ಆರೂರು ಲಕ್ಷ್ಮಣ್‌ಶೇಟ್

'ಕೀರ್ತಿ', ೭೦೩, ರೂಪಾ ಅಪಾರ್ಟ್‌ಮೆಂಟ್,
ಆದರ್ಶನಗರ, ಹುಬ್ಬಳ್ಳಿ – ೫೮೦ ೦೩೨.

■

## ಲೇಖಕಿಯ ನುಡಿ

ನನ್ನ ಮೊದಲ ಕಥಾ ಸಂಗ್ರಹ 'ಬೇರೊಂದು ಮರವೆರಡು'ನ್ನು ಇದೀಗ ಓದುಗರ ಮುಂದು ಇಡುತ್ತಿದ್ದೇನೆ. ಇದು ಎಂಟು ಹತ್ತು ವರ್ಷಗಳ ಹಿಂದೆಯೇ ಪ್ರಕಟವಾಗಬೇಕಿತ್ತು. ಅನಿವಾರ್ಯ ಕಾರಣ, ಅನೇಕ ವರ್ಷಗಳ ಅಜ್ಞಾತವಾಸ ಮುಗಿಸಿ, ಈ ಕಥೆಗಳು ಈಗ ಬೆಳಕು ಕಂಡಿವೆ. ಇನ್ನೂ ಎರಡು ಕಥಾ ಸಂಗ್ರಹಗಳಾಗುವಷ್ಟು ಕಥೆಗಳನ್ನು ಬರೆದಿದ್ದರೂ, ಮೊದಲ ಸಂಗ್ರಹದ ಪ್ರಕಟಣೆಯಲ್ಲುಂಟಾದ ಅಡಚಣೆಗಳಿಂದ ಉಳಿದ ಕಥೆಗಳನ್ನು ಹೊರತರುವ ಹುಮ್ಮಸ್ಸು ಉಳಿಯಲಿಲ್ಲ.

ನಾನು ಹೆಚ್ಚಾಗಿ, ವೈಚಾರಿಕ ಲೇಖನಗಳ ಬರಹಗಾರ್ತಿಯಾಗಿಯೇ ಎಲ್ಲರಿಗೂ ಪರಿಚಿತೆ. ನನ್ನ ಮೊದಲ ಕಥೆ, ವಿಶ್ವಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಪ್ರಕಟವಾದ, 'ಕರ್ನಾಟಕದ ಲೇಖಕಿಯರ ಕಥೆಗಳು' ಎಂಬ ಪುಸ್ತಕದಲ್ಲಿ ಪ್ರಕಟವಾಗಿದೆ. ನಂತರ, ಸುಧಾ, ತುಷಾರಗಳಲ್ಲಿ ಎರಡು ಕಥೆಗಳು ಪ್ರಕಟವಾದವು. ಈ ಕಥೆಗಳು ಬಹುಜನರ ಮೆಚ್ಚುಗೆಯನ್ನು ಪಡೆದುದರಿಂದ ಪ್ರಬಂಧಗಳನ್ನು ಬರೆಯುತ್ತಿದ್ದ ನನಗೆ ಕಥೆಗಳನ್ನೂ ಬರೆಯುವ ಉತ್ಸಾಹ ಮೂಡಿತು. ಯಾವುದೇ ಒಂದು ಘಟನೆ ಕಂಡರೂ, ತಿಳಿದರೂ, ಅದು ಮನದಲ್ಲಿ ವಿಚಾರದ ಲಹರಿ ಎಬ್ಬಿಸಿ, ಕಥೆಯಾಗಿ ರೂಪುಗೊಳ್ಳುತ್ತಿತ್ತು. ಹಾಗೆ ರೂಪುಗೊಂಡ ಹನ್ನೆರಡು ಕಥೆಗಳನ್ನು ಈ ಸಂಗ್ರಹದಲ್ಲಿ ಸೇರಿಸಿರುವೆ. ಆಕಾಶವಾಣಿಯಲ್ಲೂ ಕೆಲವು ಕಥೆಗಳು ಬಿತ್ತರಗೊಂಡಿವೆ. ಅವುಗಳನ್ನು ಇಲ್ಲಿ ಸೇರಿಸಿಲ್ಲ.

ಒಟ್ಟಿನಲ್ಲಿ, ನಾನು ಬರೆದಿಟ್ಟಿರುವ ಅನೇಕ ಕಥೆಗಳಲ್ಲಿ ಹನ್ನೆರಡನ್ನು ಈ ಸಂಗ್ರಹದ ಮೂಲಕ ಓದುಗರ ಮುಂದಿಟ್ಟಿದ್ದೇನೆ. ಈ ಕೆಲಸವು ಇನ್ನೂ ಹತ್ತು ವರ್ಷಗಳ ಮೊದಲೇ ಆಗಬೇಕಿತ್ತಲ್ಲ ಎಂಬ ನೋವಿದ್ದರೂ, ಈಗಲಾದರೂ ಸಾಧ್ಯವಾಯಿತಲ್ಲ ಎಂಬ ಸಮಾಧಾನವಾಗಿದೆ. ಓದುಗರು ಈ ಸಮಾಧಾನ, ಸಂತೋಷ ಉಂಟಾಗುವ ರೀತಿಯಲ್ಲಿ ಇದನ್ನು ಆದರದಿಂದ ಬರಮಾಡಿಕೊಳ್ಳುವರೆಂದು ಆಶಿಸಿದ್ದೇನೆ.

ಸುಪ್ರಸಿದ್ಧ ಲೇಖಕರೂ, ಕಥೆಗಾರರೂ ಆದ ಶ್ರೀ ಆರೂರ ಲಕ್ಷ್ಮಣ ಸೇಠರು

ಇದಕ್ಕೆ 'ಮುನ್ನುಡಿ'ಯ ಕಿರೀಟ ತೊಡಿಸಿದ್ದಾರೆ. ಕಥೆಗಳನ್ನು ತಲಸ್ಪರ್ಶಿಯಾಗಿ ಓದಿ ತುಂಬಾ ಉತ್ತಮ ರೀತಿಯ ವಿಮರ್ಶೆ ಮಾಡಿ, ಓದುಗರ ಮುಂದೆ, ಕಥೆಗಳ ವೈಶಿಷ್ಟ್ಯವನ್ನು ತೆರೆದಿಟ್ಟಿದ್ದಾರೆ. ಅವರ ನುಡಿಗಳು ನನಗೆ ತುಂಬಾ ಸಂತೋಷ ಕೊಟ್ಟಿವೆ. ಅತ್ಯಂತ ಕಡಿಮೆ ಸಮಯದಲ್ಲಿ ಹುಬ್ಬಳ್ಳಿಯಲ್ಲಿದ್ದ ಶ್ರೀ ಶೇಠ್‌ರಿಗೆ ಕಥೆಗಳನ್ನು, ಅವರ 'ಮುನ್ನುಡಿ'ಯನ್ನು ನಮಗೆ ಮುಟ್ಟಿಸುವಲ್ಲಿ ನೆರವಾದುದಕ್ಕೆ ಪ್ರೊ. ಸಿ.ಪಿ. ಹೇಮಗಿರಿಮಠರನ್ನು ಆದರ ಪೂರ್ವಕ ಸ್ಮರಿಸುತ್ತೇನೆ.

ಈ ಪುಸ್ತಕವು ಹೊರಬರಲು ನೆರವಾದ ಶ್ರೀ ಪ್ರೇಮಸಾಯಿ ಪ್ರಕಾಶನದ ಶ್ರೀ ಎ.ಎಸ್. ಭಟ್ ಮತ್ತು ಶ್ರೀಮತಿ ಪ್ರೇಮಾಭಟ್ ದಂಪತಿಗಳವರಿಗೂ, ಪುಸ್ತಕ ಪ್ರಕಟಣೆಗೆ ಅನೇಕ ರೀತಿಯಿಂದ ನೆರವಾದ ಡಾ. ವೃಷಭೇಂದ್ರಸ್ವಾಮಿಯವರಿಗೂ, ಅಕ್ಷರ ಜೋಡಣೆ ಮಾಡಿದ ಮನ್‌ಆನಂದ ಪ್ರಿಂಟರ್ಸ್‌ರವರಿಗೂ, ಮುದ್ರಿಸಿದ ಲಕ್ಷ್ಮೀ ಆರ್ಟ್ಸ್ ಪ್ರಿಂಟರ್ಸ್ ಮತ್ತು ಪ್ರಕಾಶಿಸಿದ ಪ್ರಸಾದ ಪ್ರಕಾಶನದವರಿಗೂ ನನ್ನ ನಮನಗಳು.

೨೬.೧.೨೦೦೧ — ಲಲಿತಾಂಬ ವೃಷಭೇಂದ್ರಸ್ವಾಮಿ
ಧಾರವಾಡ ಧಾರವಾಡ

■

## ಪರಿವಿಡಿ





## ೧. ಖಂಡವಿದೆ ಕೋ – ಮಾಂಸವಿದೆ ಕೋ

ಸೋದರಿಯರೇ,

ಇಂದಿನ ಮುಖ್ಯ ಅತಿಥಿಗಳಾಗಿ ಅಖಿಲ ಭಾರತ ಸ್ತ್ರೀ ವಿಮೋಚನಾ ಸಂಘದ ಅಧ್ಯಕ್ಷಿಣಿಯರಾದ ಶ್ರೀಮತಿ ಭಾರ್ಗವಿಯವರು ಬಂದಿದ್ದಾರೆ. ಅವರು ಭಾರತದಾದ್ಯಂತ ಸಂಚಾರ ಮಾಡಿ ಮಹಿಳೆಯರಲ್ಲಿ ಜಾಗೃತಿ ಉಂಟುಮಾಡುವ ಒಂದು ಪುಣ್ಯ ಕೆಲಸಕ್ಕೆ ಕಂಕಣ ಬದ್ಧರಾಗಿದ್ದಾರೆ. ಅನಾದಿಕಾಲದಿಂದಲೂ ಮಹಿಳೆಯರು ಪುರುಷನ ಶೋಷಣೆಗೆ ತುತ್ತಾಗಿ ತಮಗೆ ವ್ಯಕ್ತಿತ್ವವೇ ಇಲ್ಲವೆಂಬಂತೆ ತಮ್ಮ ನೋವು ನಲಿವುಗಳನ್ನೆಲ್ಲಾ ಹತ್ತಿಕ್ಕಿಕೊಂಡು ಬದುಕುತ್ತಾ ಬಂದಿದ್ದಾರೆ. ಕುಟುಂಬದ ಬೆನ್ನೆಲುಬಾದ ಆಕೆಗೆ, ಭಾವೀ ಜನಾಂಗದ ಬುನಾದಿ ಹಾಕುವ ತಾಯಿಯಾದ ಆಕೆಗೆ, ಸಮಾಜದಲ್ಲಿ ಕುಟುಂಬದಲ್ಲಿ ಸರಿಯಾದ ಸ್ಥಾನಮಾನಗಳಿಲ್ಲ. ಪುರುಷನಿಗೆ ಸಮನಾದ ಜವಾಬ್ದಾರಿಯನ್ನು ಆಕೆ ಕುಟುಂಬದಲ್ಲಿ ನಿರ್ವಹಿಸುತ್ತಿದ್ದರೂ, ತೊತ್ತಿನ ಸ್ಥಾನದಲ್ಲಿದ್ದುಕೊಂಡು ಬದುಕಬೇಕಾಗಿದೆ. ಪುರುಷನ ಬೇಕು–ಬೇಡಗಳಿಗೆ ಸ್ಪಂದಿಸುವ ಕೈಗೊಂಬೆಯಾಗಿ ಬಾಳಬೇಕಾಗಿದೆ. ಇದೆಲ್ಲಾ ಏಕೆ? ಆಕೆ ಅನ್ಯಾಯವನ್ನು ಸಹಿಸಿಕೊಂಡು ಮೂಕ ಪಶುವಿನಂತೆ ದುಡಿದುಕೊಂಡು ಹೋಗುತ್ತಿರುವುದರಿಂದ ಪುರುಷ ತನ್ನ ದೌರ್ಜನ್ಯವನ್ನು ತೋರಿಸಲು ಸಾಧ್ಯವಾಗಿದೆ. ಕಾವ್ಯದಲ್ಲಿ, ಲೇಖನಗಳಲ್ಲಿ, ವೇದಿಕೆಯ ಮೇಲೆ ಸ್ತ್ರೀಯನ್ನು ಮಾತೆ, ಕರುಣಾಮಯಿ, ತಾಳ್ಮೆಯ ಪ್ರತಿರೂಪ ಎಂದು ನಾನಾ ವಿಧವಾಗಿ ಹೊಗಳಿ ಹೊನ್ನ ಶೂಲಕ್ಕೇರಿಸಿ, ನಿಜಜೀವನದಲ್ಲಿ ಆಕೆಯ ಅಸ್ತಿತ್ವಕ್ಕೆ ಕುರುಡು ಕವಡೆಯಷ್ಟೂ ಬೆಲೆ ಕೊಡದೆ ಆಕೆಯ ಅನಿಸಿಕೆಗಳಿಗೆ ಸಿನಿಸಿಸಂ ತೋರಿಸುತ್ತಾ ಅಸಹಾಯಕಳನ್ನಾಗಿ ಮಾಡಿ ಶೋಷಿಸುವ ಕಾಲ ಮುಗಿಯಬೇಕು.ನೀವೆಲ್ಲಾ ಪರಿಸ್ಥಿತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಪುರುಷನು ಯಾವುದೇ ರೂಪದಲ್ಲೂ ನಮ್ಮನ್ನು ಶೋಷಿಸಲು ಅವಕಾಶ ಕೊಡಬಾರದು. ಈ ಎಲ್ಲ ವಿಚಾರಗಳ ಬಗ್ಗೆ ನನಗಿಂತಲೂ ಹೆಚ್ಚು ತಿಳಿದುಕೊಂಡಿರುವ, ಈ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ಮಾಡಿರುವ ಭಾರ್ಗವಿಯವರು ಈ ದಿಶೆಯಲ್ಲಿ ಮಹಿಳೆಯರ ಕರ್ತವ್ಯವೇನು? ಮಹಿಳೆಯರ ಶೋಷಣೆಗೆ, ದುಃಖಕ್ಕೆ ಮಹಿಳೆಯರೇ ಕಾರಣರಾಗುತ್ತಿರುವಾಗ, ಅದನ್ನು ಹೇಗೆ ತಡೆಗಟ್ಟಬೇಕು, ಎಂಬ ಬಗ್ಗೆ ನಮಗಿಂದು ಬೆಳಕು ಚೆಲ್ಲಲಿದ್ದಾರೆ. ಅವರೀಗ ಮಾತನಾಡುತ್ತಾರೆ ಎಂದು ಹೇಳಿ, ತನ್ನ ಮಾತನ್ನು

ಶಾಶ್ವತಿ ಮುಗಿಸಿದಾಗ ಸಭಾಗೃಹದಲ್ಲಿ ಸೇರಿದ್ದ ಮಹಿಳಾ ಕಾಲೇಜಿನ ವಿದ್ಯಾರ್ಥಿಗಳೆಲ್ಲಾ ಕಿವಿಗಡಚಿಕ್ಕುವಂತೆ ಚಪ್ಪಾಳೆ ತಟ್ಟಿದರು. ಹುಡುಗಿಯರೂ ಉತ್ಸಾಹಗೊಂಡರು.

ಶಾಶ್ವತಿ ಬಾಲ್ಯದಿಂದಲೂ, ತನ್ನ ತಾಯಿ ಶೋಷಣೆಗೆ ಒಳಗಾಗಿ ಹಿಂಸೆಗೆ ಗುರಿಯಾಗುತ್ತಿದ್ದುದನ್ನು ಕಣ್ಣಾರೆ ಕಂಡಿದ್ದಳು. ಅಸಹಾಯಕಳಾಗಿ ವ್ಯಥೆಗೊಂಡಿದ್ದಳು. ಆಗಲೇ ತಾನು ದೊಡ್ಡವಳಾದ ಮೇಲೆ ಒಂದು ಚಳವಳಿ ಹೂಡಿ, ಕ್ರಾಂತಿ ಮಾಡಿ ಸ್ತ್ರೀಯರ ಪರಿಸ್ಥಿತಿಯನ್ನು ಉತ್ತಮಗೊಳಿಸಬೇಕು ಎಂದು ಕನಸು ಕಂಡಿದ್ದಳು. ಅದಕ್ಕೆ ಪೂರಕವಾಗಿ ಸ್ವಲ್ಪ ದೊಡ್ಡವಳಾದಂತೆ ಮನೆಯಲ್ಲಿ ತಂದೆಯು ತಾಯಿಯ ಮೇಲೆ ದಬ್ಬಾಳಿಕೆ ಮಾಡುವುದನ್ನು ಪ್ರತಿಭಟಿಸುತ್ತಿದ್ದಳು. ತಾಯಿಯ ಪರವಾಗಿ ಸೆರಗುಕಟ್ಟಿ ನಿಂತಳು. ತಂದೆಯನ್ನು ಎಲ್ಲದರಲ್ಲೂ ಎದುರಿಸಿ ಒಂದು ಹದಕ್ಕೆ ತಂದು, ತಾಯಿಯ ಉಕ್ಕುತ್ತಿದ್ದ ದುಃಖಕ್ಕೆ ತಣ್ಣೀರು ಚುಮುಕಿಸಿದ್ದಳು. ಹೀಗೆ ಪ್ರಥಮದಲ್ಲಿ ಮನೆಯಲ್ಲೇ ಯಶಸ್ಸು ಪಡೆದ ಆಕೆ, ಕಾಲೇಜಿಗೆ ಹೋದ ಮೇಲೆ ಸ್ತ್ರೀ ಜಾಗೃತಾ ಸಮಿತಿಯನ್ನು ರಚಿಸಿ ಅದರ ಅಧ್ಯಕ್ಷೆಯಾದಳು. ತನ್ನ ವಿಚಾರಗಳನ್ನು ಬೆಂಬಲಿಸುವ ಭಾವನೆಗಳುಳ್ಳ ಹುಡುಗಿಯರನ್ನು ತನ್ನ ಸಂಘದ ಸದಸ್ಯೆಯರನ್ನಾಗಿ ಮಾಡಿಕೊಂಡಳು. ಮೊದ ಮೊದಲು ಸಂಪ್ರದಾಯಸ್ಥ ಮನೆತನಗಳಿಂದ ಬಂದ ಹುಡುಗಿಯರು 'ಗಂಡುಬೀರಿ' 'ಮರ್ಯಾದೆ ಇಲ್ಲದವಳು' 'ಗಯ್ಯಾಳಿ' ಎಂಬ ಬಿರುದುಗಳನ್ನು ಕೊಟ್ಟರೂ 'ಹೇಳುತ್ತಾಳೇನನ್ನು ಕೇಳಿಯಾದರೂ ಕೇಳೋಣ' ಎಂದು ಒಂದೆರಡು ಮೀಟಿಂಗುಗಳಿಗೆ ಅಟೆಂಡಾದರು. ಆಗ ಶಾಶ್ವತಿ ಉದಾಹರಣೆ ಸಹಿತ ಸ್ತ್ರೀ ಹೇಗೆ ಶೋಷಣೆಗೆ ಒಳಗಾಗುತ್ತಿದ್ದಾಳೆ ; ಎಷ್ಟು ಅಸಹಾಯಕತೆಯಿಂದ ಬಾಳುತ್ತಿದ್ದಾಳೆ ಎಂಬ ಅಂಶವನ್ನು ಮನಮಿಡಿಯುವಂತೆ ವಿವರಿಸುತ್ತಿದ್ದಳು. ಕೇವಲ ಬೆರಳೆಣಿಸುವಷ್ಟು ಮಂದಿ ಶೋಷಣೆಗೆ ಒಳಗಾಗಿಲ್ಲ. ಅವರಿಗೆ ಸಾಕಷ್ಟು ಸ್ವಾತಂತ್ರ್ಯವಿದೆ. ಅಂತಹವರ ಉದಾಹರಣೆ ಕೊಟ್ಟು ಕೆಲವರು ನಮ್ಮನ್ನು ಮೋಸಗೊಳಿಸುತ್ತಾರೆ, ದಿಕ್ಕು ತಪ್ಪಿಸುತ್ತಿದ್ದಾರೆ. ಆದರೆ ಅಂತಹ ಮಹಿಳೆಯರ ಸಂಖ್ಯೆ ಎಷ್ಟು? ನೂರಕ್ಕೆ ಒಬ್ಬರೂ ಸಿಗುವುದಿಲ್ಲ. ಅಂತಹವರನ್ನು ಆಧಾರವಾಗಿಟ್ಟುಕೊಂಡು ನಾವು ಸ್ತ್ರೀಯರ ಸ್ಥಿತಿ ಸುಧಾರಿಸುತ್ತಿದೆಯೆಂದು ಕೈಕಟ್ಟಿ ಕುಳಿತುಕೊಳ್ಳಲಾಗದು, ಎಂದು ಎಚ್ಚರಿಸಿದಾಗ ಆಕೆಯನ್ನು ಟೀಕಿಸುತ್ತಿದ್ದ ಹುಡುಗಿಯರಿಗೂ ಅವಳ ಮಾತಿನಲ್ಲಿ ಸತ್ಯಾಂಶವಿದೆಯೆಂದು ಅನ್ನಿಸುತ್ತಿತ್ತು. ಹಾಗಾಗಿ ಕಾಲೇಜಿನಲ್ಲಿ ಶಾಶ್ವತಿ ಒಬ್ಬ ಲೀಡರ್ ಎನಿಸಿಕೊಂಡಳು. ಹುಡುಗಿಯರೆಲ್ಲಾ ಆಕೆಯನ್ನು ತಮ್ಮ ಆದರ್ಶ ವ್ಯಕ್ತಿ ಎಂದುಕೊಂಡರು.

ವರ್ಷಗಳುರುಳಿದವು. ಶಾಶ್ವತಿಯ ಶಿಕ್ಷಣ ಮುಗಿದು ಒಂದು ಬ್ಯಾಂಕಿನಲ್ಲಿ ನೌಕರಿ ಮಾಡುತ್ತಿದ್ದಳು 'ಪುರುಷನ ಮೇಲೆ ಆರ್ಥಿಕ ಅವಲಂಬನೆ, ಶೋಷಣೆಗೆ ದಾರಿ' ಎಂದು ನಂಬಿದ್ದ ಆಕೆ, ಮಹಿಳೆ ಆರ್ಥಿಕವಾಗಿಯೂ ತನ್ನ ಕಾಲ ಮೇಲೆ

ತಾನು ನಿಲ್ಲಬೇಕೆಂದು ಪ್ರತಿಪಾದಿಸುತ್ತಿದ್ದಳು. ಹಾಗಾಗಿ ಶಿಕ್ಷಣ ಮುಗಿಯುತ್ತಲೇ ನೌಕರಿಯ ಬೇಟೆಗೆ ಹೊರಟಳು. ಬುದ್ಧಿವಂತೆಯೂ, ಸಮರ್ಥಳೂ ಆದ ಆಕೆಗೆ ಕೆಲಸ ಸಿಗುವುದೇನು ಕಷ್ಟವಾಗಲಿಲ್ಲ. ದಿನಗಳೆದಂತೆ ಆಕೆಯ ತಂದೆ-ತಾಯ್ಗಳು ಆಕೆಗೆ ಲಗ್ನ ಮಾಡುವ ವಿಚಾರದಲ್ಲಿ ತೊಡಗಿದರು. ಎಷ್ಟೇ ದುಡಿಯುತ್ತಾಳೆಂದರೂ ತನ್ನದೇ ಆದ ಒಂದು ಸಂಸಾರವಿದ್ದರೇ ಕ್ಷೇಮ ಎಂಬುದು ಅವರ ಅಭಿಪ್ರಾಯ. ಅವರು ಆರಿಸಿದ ಅನೇಕ ವರಗಳನ್ನು ಈಕೆ ಒಪ್ಪಲಿಲ್ಲ. ಇಂಜಿನಿಯರ್ ವರನೊಬ್ಬನನ್ನು ಹುಡುಕಿದರು. ಹುಡುಗನ ತಂದೆಗೆ ಇಬ್ಬರು ಹೆಣ್ಣುಮಕ್ಕಳು ಇವನೊಬ್ಬನೇ ಮಗ. ಹುಡುಗಿಯರಿಬ್ಬರಿಗೂ ಮದುವೆಯಾಗಿ ಗಂಡನ ಮನೆಯಲ್ಲಿದ್ದರು. ತಾಯಿ ಇರಲಿಲ್ಲ. ಮನೆಯಲ್ಲಿ ತಂದೆಯೊಬ್ಬನೆ. ಸ್ತ್ರೀ ಸ್ವಾತಂತ್ರ್ಯ ವಿಚಾರ ತುಂಬಿಕೊಂಡಿದ್ದ ಈ ಮಗಳು, ತುಂಬಿದ ಕುಟುಂಬದಲ್ಲಿ ಹೊಂದಿಕೊಳ್ಳುವುದು ಕಷ್ಟ. ಇಲ್ಲಾದರೆ ತಂದೆ-ಮಗ ಇಬ್ಬರೆ. ಈ ಸಂಬಂಧ ತಮ್ಮ ಮಗಳಿಗೆ ಯೋಗ್ಯ ಎಂದು ತೀರ್ಮಾನಿಸಿದರು. ಅವರ ಈ ತೀರ್ಮಾನಕ್ಕೆ ಇನ್ನೊಂದು ಕಾರಣವೂ ಇತ್ತು. ಹುಡುಗನಿಗೆ ಯಾವ ದುಶ್ಚಟಗಳೂ ಇರಲಿಲ್ಲ. ಹೋಟೆಲ್‌ಗೆ ಸಹ ಹೋಗುತ್ತಿರಲಿಲ್ಲ. ಉಡುಗೆ-ತೊಡುಗೆಗಳಲ್ಲಿ, ಜೀವನ ಕ್ರಮದಲ್ಲಿ, ಸರಳತೆಯ ಪ್ರತೀಕದಂತಿದ್ದ. ಮನೆಯ ಅಗತ್ಯ ಖರ್ಚುಗಳನ್ನು ಬಿಟ್ಟರೆ ವೃತ್ತಪತ್ರಿಕೆ, ಧಾರ್ಮಿಕ ಪುಸ್ತಕಗಳು ಇಂತಹುಗಳಿಗಾಗಿ ಮಾತ್ರ ಹಣ ಖರ್ಚು ಮಾಡುತ್ತಿದ್ದ. ಹೀಗಾಗಿ ಮದುವೆಗೆ ಮೊದಲೇ ಸಂಸಾರಕ್ಕೆ ಬೇಕಾದ ಎಲ್ಲಾ ಸಾಮಾನುಗಳನ್ನು ಕೊಂಡಿದ್ದ. ಅಲ್ಲದೇ ಒಂದು ಮನೆಯ ನಿವೇಶನವನ್ನೂ ಖರೀದಿಸಿದ್ದ. ಈ ಮಾಹಿತಿಯನ್ನೆಲ್ಲಾ ತಿಳಿದುಕೊಂಡಿದ್ದ ತಂದೆಗೆ ಇಂತಹ ಜವಾಬ್ದಾರಿಯುತ ಹುಡುಗನೊಂದಿಗೆ ಯಾವ ಘರ್ಷಣೆ ಇಲ್ಲದೆ ಮಗಳು ಸಂಸಾರ ಮಾಡುತ್ತಾಳೆಂದು ತೀರ್ಮಾನಿಸಿ, ಹೆಂಡತಿಗೆ ತಿಳಿಸಿದ. ಆಕೆಗೂ ಒಪ್ಪಿಗೆಯಾಯಿತು. ತಾಯಿಗೇ ಮಗಳನ್ನು ಈ ಸಂಬಂಧಕ್ಕೆ ಒಪ್ಪಿಸುವ ಜವಾಬ್ದಾರಿ ವಹಿಸಿದರು ತಂದೆ. ಏಕೆಂದರೆ ಅವರಿಬ್ಬರಲ್ಲೇ ಹೆಚ್ಚು ಹೊಂದಾಣಿಕೆಯಿತ್ತು. ಮೊದಲಿನಿಂದಲೂ ತಂದೆಯ ಅಭಿಪ್ರಾಯವನ್ನು ವಿರೋಧಿಸುತ್ತಿದ್ದಳು. ಸಂಜೆ, ಮಗಳು ಬ್ಯಾಂಕಿನಿಂದ ಹಿಂತಿರುಗಿದ ಮೇಲೆ ತಾಯಿ ಬಹಳ ಜಾಗರೂಕತೆಯಿಂದ ವಿಷಯವನ್ನು ಮಗಳ ಮುಂದಿಟ್ಟರು. ಶಾಶ್ವತಿಯೂ ಹೀಗೆ ಆದರ್ಶವಾದಿಯಾದ ಹಾಗೂ ವಿದ್ಯಾವಂತನಾದ ಈತ, ಮಹಿಳೆಯರ ಬಗೆಗೂ ವಿಶಾಲ ಮನೋಭಾವ ಹೊಂದಿರಬೇಕೆಂದು ಊಹಿಸಿ, ಒಪ್ಪಿಗೆ ಕೊಟ್ಟಳು. ರೂಪವತಿಯೂ, ದಕ್ಷಳೂ, ವಿದ್ಯಾವತಿಯೂ ಆರ್ಥಿಕವಾಗಿಯೂ ಸಂಸಾರಕ್ಕೆ ಹೆಗಲು ಕೊಡಬಲ್ಲ ಹುಡುಗಿಯನ್ನು ನೋಡಿ ವರ ಹಾಗೂ ಅವನ ತಂದೆ ವರದಕ್ಷಿಣೆ ವರೋಪಚಾರವನ್ನೂ ಕೇಳದೆ 'ನಿಮಗೆ ಅನುಕೂಲವಾದ ರೀತಿಯಲ್ಲಿ ಮದುವೆ ಮಾಡಿಕೊಡಿ' ಎಂದರು.

ಮದುವೆಯನ್ನು ಸಂಭ್ರಮದಿಂದ ಮಾಡಿಕೊಟ್ಟರು. ಶಾಶ್ವತಿ ತುಂಬಾ ಉತ್ಸಾಹದಿಂದಲೇ ಅದೇ ಊರಿನಲ್ಲಿದ್ದ ಗಂಡನ ಮನೆಗೆ ಬಂದಳು. ಮನೆಯಲ್ಲಿ ಮಾವ ಮತ್ತು ಗಂಡ ಇಬ್ಬರೆ. ಆಫೀಸಿಗೆ ಹೋಗುವಾಗ ಬೆಳಗಿನ ಕೆಲಸಗಳನ್ನು ಇಬ್ಬರೂ ಕೂಡಿ ಮಾಡಿ, ಮಾವನಿಗೆ ಬಡಿಸಿ, ಮಧ್ಯಾಹ್ನಕ್ಕೆ ಅವರಿಗೆ ವ್ಯವಸ್ಥೆ ಮಾಡಿ ಹೋದರೆ ಆಯ್ತು. ಸಂಜೆ ಬರುವ ಹೊತ್ತಿಗೆ ಬೇಜಾರಾಗಿರುತ್ತೆ. ಆಗ ಕೆಲಸದವಳು ಬಂದು ಕಾಡಿಸುವುದು ಬೇಡ. ಎಲ್ಲಾ ಈಗಲೇ ರೆಡಿಮಾಡಿಟ್ಟು ಹೋಗಿ ಬಿಟ್ಟರೆ ಅವಳು ಬಂದು ಬಟ್ಟೆ ಒಗೆದು ಪಾತ್ರೆ ತೊಳೆದಿಟ್ಟು ಹೋಗಿರುತ್ತಾಳೆ. ಹೇಗೂ ಮನೆಯಲ್ಲಿ ಮಾವನವರಿರುತ್ತಾರಲ್ಲ. ಸಂಜೆ ಊಟ ಸಿಂಪಲ್ ಮಾಡಬೇಕು. ಆಗ ಹೆಚ್ಚು ತ್ರಾಸಾಗುವುದಿಲ್ಲ. ಇಬ್ಬರೂ ಮಾತು–ಮಾತು ಆಡುತ್ತಲೇ ಕೆಲಸ ಮುಗಿಸಬಹುದು. ಏನೂ ಕಷ್ಟವಾಗುವುದಿಲ್ಲ ಎಂದು ಮನಸ್ಸಿನಲ್ಲೇ ಮಂಡಿಗೆ ಹಾಕಿದಳು. ಅವಳು ಮನೆಗೆ ಬಂದ ದಿನ ಭಾನುವಾರ. ತಾನು ತಂದ ಸಾಮಾನುಗಳನ್ನು ಓರಣವಾಗಿಟ್ಟಳು. ಮನೆಗೆಲಸಕ್ಕೆ ಸಿದ್ಧವಾದಳು. ಇಷ್ಟಾದರೂ ವಿಕಾಸ್ ಏನೋ ಓದುತ್ತಿದ್ದವನು ತನ್ನೊಡನೆ ಒಂದೂ ಮಾತಾಡಲಿಲ್ಲ. ಅದೆಲ್ಲಾ ಹೆಂಡತಿಗೆ ಮಾತ್ರ ಸೇರಿದ್ದು ಎಂದು ನಿರ್ಲಿಪ್ತನಾಗಿದ್ದ. ತಾನೊಬ್ಬಳೇ ಇಷ್ಟು ಹೆಣಗಿಕೊಂಡು ಕೆಲಸ ಮಾಡುತ್ತಿದ್ದರೂ ಹೊಸ ವಾತಾವರಣಕ್ಕೆ ಹೊಸದಾಗಿ ಬಂದ ತನಗೇನಾದರೂ ಹೊಂದಿಕೊಳ್ಳುವುದು ಕಷ್ಟವಾಗಿದೆಯೋ ಏನೋ. ತಾಯಿ–ತಂಗಿಯರೊಡನಿದ್ದ ತನಗೆ ಬೇರೆ ಹೆಣ್ಣುಮಕ್ಕಳಾರೂ ಇಲ್ಲದ ಮನೆಯಲ್ಲಿ ಒಂಟಿತನ ಉಂಟಾಗಿದೆಯೋ ಏನೋ ಎಂಬ ಯಾವ ಮಾನವೀಯ ಪ್ರತಿಕ್ರಿಯೆಯೂ ಇಲ್ಲದೆ, ತನ್ನ ಪಾಡಿಗೆ ತಾನಿರುವುದನ್ನು ನೋಡಿ ವಿಚಿತ್ರವೆನ್ನಿಸಿತು. ಹೊಸ ಸಂಸಾರದ ಉತ್ಸಾಹವಾದರೂ ಈ ಮನುಷ್ಯನಿಗೆ ಬೇಡವೆ? ಒಬ್ಬಳೇ ಬೆಳಗಿನಿಂದ ಮಾಡುತ್ತಿದ್ದಾಳಲ್ಲ. ಬೇಜಾರಾಗಿದೆಯೋ ಏನೋ ಎಂದು ತಮಾಷೆಯಾಗಿ ಮಾತನಾಡಿಸುವಷ್ಟು ಸೌಜನ್ಯವಾದರೂ ಬೇಡವೇ? ಹೃದಯವಂತಿಕೆಯೇ ಇಲ್ಲದ ಈ ನಡೆಯನ್ನು ಸದ್ಗುಣ ಸರಳತೆ ಎಂದು ಹೇಗೆ ಹೇಳಲಿ ಎಂದು ಬೇಸರವಾದರೂ, ಏನಾದರೂ ಅರ್ಜೆಂಟಾಗಿ ಓದಿಕೊಳ್ಳುವುದಿರಬೇಕು ಎಂದು ಸಮಾಧಾನ ಮಾಡಿಕೊಂಡಳು. ಅರ್ಜೆಂಟಿದ್ದರೆ ಅದನ್ನು ನನಗೆ ಹೇಳಿ, 'ಸಾರಿ, ಈ ದಿನ ನನಗೆ ಹೆಲ್ಪ್ ಮಾಡೋಕಾಗಲ್ಲ. ಸ್ವಲ್ಪ ಅಗತ್ಯವಾಗಿ ಓದುವುದಿದೆ' ಎಬು ಹೇಳಿದ್ದರೂ ನನಗೆಷ್ಟೋ ಹರ್ಷವಾಗುತ್ತಿತ್ತಲ್ಲ ಎಂದುಕೊಂಡು ಅಡಿಗೆ ಮಾಡತೊಡಗಿದಳು.

'ಶಾಶ್ವತೀ ಈಗಾಗಲೇ ರಾತ್ರಿ ಒಂಬತ್ತಾಯ್ತು. ಇನ್ನೂ ತಟ್ಟೇ ಹಾಕೇ ಇಲ್ಲ. ರಜವಿರಲಿ – ಇಲ್ಲದಿರಲಿ. ನಮ್ಮ ಮನೆಯಲ್ಲಿ ರಾತ್ರಿ ಒಂಭತ್ತಕ್ಕೆ ಸರಿಯಾಗಿ ಊಟಕ್ಕೆ ಕುಳಿತುಕೊಳ್ಳುವುದು ಪದ್ಧತಿ. ಬೇಗ ತಟ್ಟೆ ಹಾಕು' ಎಂದ ವಿಕಾಸ್.

ಶಾಶ್ವತಿಗೆ ಒಮ್ಮೆಗೇ ಷಾಕ್ ಆಯ್ತು. 'ಇಷ್ಟೆಲ್ಲಾ ಒದ್ದಾಡಿಕೊಂಡು ಕೆಲಸ ಮಾಡುತ್ತಿದ್ದರೂ ಸಂತೋಷವಾಗುವಂತಹ ಒಂದು ಮಾತೂ ಆಡದೆ ಈಗ ಒಮ್ಮೆಗೇ 'ತಟ್ಟೆ ಹಾಕು' ಎಂಬ ಆಜ್ಞೆಯೇ? ಎನ್ನಿಸಿತು. ಸಿಟ್ಟು ಬಂತು. ಆದರೂ ತಡೆದುಕೊಂಡು 'ನಾನು ಒಗ್ಗರಣೆ ಹಾಕ್ತಾ ಇದ್ದೀನಿ. ನೀವೆ ಬಂದು ತಟ್ಟೆ ಹಾಕಬಾರದೆ?' ಎಂದಳು.

ಹೀಗಂದದ್ದೇ ತಡ. ಅಲ್ಲೇ ಕುಳಿತಿದ್ದ ಮಾವ 'ಏನಮ್ಮಾ? ಏನಂದೆ? ಅವನು ಬಂದು ತಟ್ಟೆ ಹಾಕಬೇಕೆ? ಗಂಡ ಅಡಿಗೆ ಮನೆ ಕೆಲಸಕ್ಕೆ ಬರಬೇಕೆ? ಅವನಿಗೂ ಒಂದು ಸೀರೆ, ಕೈಗೆ ಬಳೆ ತಂದು ಕೊಟ್ಟುಬಿಡು, ನಾಳೆಯಿಂದ ಅಡಿಗೆಗೂ ಹಚ್ಚಿಬಿಡು' ಎಂದಾಗ ಬೆಳಗಿನಿಂದ ಒಳಗೇ ಅದುಮಿ ಹಿಡಿದುಕೊಂಡಿದ್ದ ಭಾವನೆಗಳನ್ನು ಅವಳಿಗೆ ತಡೆಹಿಡಿಯುವುದಾಗಲಿಲ್ಲ.

'ಕೆಲಸ ಮಾಡೋಕೆ ಸೀರೆ ಯಾಕೆ ಉಡಬೇಕು? ಬಳೆ ಯಾಕೆ ತೊಡಬೇಕು? ನಾನು ಹೊರಗೆ ಹೋಗಿ ನೌಕರಿ ಮಾಡಿ, ಗಂಡಸಿನಂತೆ ಹಣ ದುಡಿದುಕೊಂಡು ಬರುತ್ತೇನಲ್ಲಾ ಆಗ, ಪ್ಯಾಂಟು ಕೋಟನ್ನೇನೂ ಹಾಕಿಕೊಳ್ಳುವುದಿಲ್ಲ. ಸೀರೆ ಉಟ್ಟುಕೊಂಡೇ ಹೋಗುತ್ತೇನೆ ಹಾಗೇ ಇವರು ಪಾಯಿಜಾಮ ಹಾಕಿಕೊಂಡು ತಟ್ಟೆ ಹಾಕಲು ಬರುತ್ತದೆ' ಎಂದಳು.

ತನ್ನನ್ನು ಕೆಲಸಕ್ಕೆ ಕರೆದದ್ದಕ್ಕೂ, ತಂದೆಗೆ ಎದುರು ಜವಾಬು ಮಾಡಿದುದಕ್ಕೂ ಬಂದ ಸಿಟ್ಟನ್ನು ವಿಕಾಸನಿಗೆ ಸಹಿಸಲಾಗಲಿಲ್ಲ. ಸಿಟ್ಟು ನೆತ್ತಿಗೇರಿತು. 'ಏನಂದೆ? ಯಾರ್‍ಜೊತೆ ಮಾತಾಡ್ತಿದ್ದೀನೀಂತ ನಿನಗೆ ಎಚ್ಚರ ಇದೆಯಾ? ಮಾವನೊಡನೆ ಗೌರವದಿಂದ ನಡೆದುಕೊಳ್ಳಬೇಕೆಂಬುದನ್ನು ನಿನ್ನ ಶಿಕ್ಷಣ ಕಲಿಸಿಲ್ಲವೆ? ಈ ತರಹದ ಮಾತು, ನಡೆ ನಮ್ಮ ಮನೆಯಲ್ಲಿ ನಡೆಯುವುದಿಲ್ಲ.'

'ನಾನಂದ ಮಾತಲ್ಲಿ ತಪ್ಪೇನಿದೆ? ಹಿಂದಿನ ರೂಢಿಗಳನ್ನು ಸಂಪ್ರದಾಯಗಳನ್ನು ಮೀರಿ ನಾನು ಶಿಕ್ಷಣ ಪಡೆದಿಲ್ಲವೆ? ಹೊರಗೆ ಹೋಗಿ ಗಂಡಸರ ಮಧ್ಯೆ ದುಡಿದು ಹಣ ತರುವುದಿಲ್ಲವೆ? ಹಂಗೆ ನೀವೂ ಹಿಂದಿನ ರೀತಿಗಳಲ್ಲಿ ನಮ್ಮ ಅವಶ್ಯಕತೆಗಳಿಗ ತಕ್ಕಂತೆ ಬದಲಾವಣೆಗಳನ್ನೇಕೆ ಮಾಡಿಕೊಳ್ಳಬಾರದು? 'ಇದ್ದದ್ದು ಇದ್ದಂತೆ ಹೇಳಿದರೆ ಸಿದ್ದಪ್ಪನಿಗೆ ಸಿಡಿಲು ಬಡಿಯಿತು' ಎಂಬಂತೆ ಸಿಟ್ಟೇಕೆ ಏಳುತ್ತೀರಿ ಎಂದಳು.

'ನೋಡು, ಹೆಚ್ಚು ಮಾತು ಬೇಡ. ನೀನು ನಮ್ಮ ಮನೆಗೆ ಬಂದಿರುವಿ. ನಮ್ಮ ಮನೆಯ ರೀತಿ ರಿವಾಜುಗಳು, ಆಚರಣೆಗೆ ತಕ್ಕಂತೆ ಬದಲಾವಣೆ ಮಾಡಿಕೊಳ್ಳಬೇಕು. ಇಲ್ಲವಾದಲ್ಲಿ ನೆಟ್ಟಗಾಗಲಿಕ್ಕಿಲ್ಲ' ಎಂದು ಬೆದರಿಸುವ ಧ್ವನಿಯಲ್ಲಿ ಹೇಳಿದ. ಶಾಶ್ವತಿಗೂ ಬೆಳಗಿನಿಂದ ಕೆಲಸ ಮಾಡಿ ದಣಿವಾಗಿತ್ತು. ಹೊಟ್ಟೆಯೂ

ಹಸಿದು ಚುರುಗುಡುತ್ತಿತ್ತು. ಜಗಳ ಪ್ರಾರಂಭಿಸಿದರೆ ಮಾತಿಗೆ ಮಾತು ಹತ್ತಿ ಮನಸ್ಸೂ ಕೆಟ್ಟು ಹೋಗುತ್ತದೆ. ಅಲ್ಲದೆ ಬಂದ ದಿನವೇ ಜಗಳವಾಡುತ್ತಾ ಜೀವನ ಪ್ರಾರಂಭಿಸುವುದೇಕೋ ಅವಳಿಗೆ ಸರಿಯಲ್ಲವೆನ್ನಿಸಿತು. ಗಂಡ ಮತ್ತು ಮಾವನ ಮಾತುಗಳು ತನ್ನ ಸ್ವಾಭಿಮಾನವನ್ನೇ ಕೆಣಕಿದ್ದುವು. ತಾನು ನಂಬಿಕೊಂಡು ಬಂದ ತತ್ವಕ್ಕೇ ವಿರುದ್ಧವಾಗಿದ್ದರೂ, ಮನಸ್ಸನ್ನು ಹಿಡಿತಕ್ಕೆ ತಂದುಕೊಂಡು ಸಮಾಧಾನಕ್ಕೆ ಬಂದಳು. ಎಂದೂ ಅನ್ಯಾಯದ ವಿರುದ್ಧ ಬಾಯಿ ಮುಚ್ಚಿಕೊಂಡಿರದಿದ್ದ ಆಕೆ, ತನಗೇ ಆಶ್ಚರ್ಯವಾಗುವಂತೆ ತಾಳ್ಮೆ ತಂದುಕೊಂಡಳು. ಊಟವೆಲ್ಲಾ ಆಯ್ತು. ಯಾವ ಪ್ರೀತಿಯ ಮಾತನ್ನೂ ಕಾಣದೆ, ಅಡಿಗೆ ಮನೆಯ ಕೆಲಸ ಮುಗಿಸಿ ಬಂದಳು. ತಂದೆ-ಮಗ ಹಾಲಿನಲ್ಲಿ ಆತ್ಮೀಯವಾಗಿ ಮಾತನಾಡುತ್ತಾ ಕುಳಿತಿದ್ದರು. ಹಾಸಿಗೆ ಸಹ ಹಾಕಿಕೊಂಡಿರಲಿಲ್ಲ. ಹಾಸಿಗೆಗಳನ್ನು ಸರಿಮಾಡಿ ಪರದೆ ಇಳಿಯಬಿಟ್ಟು ದಣಿದಿದ್ದ ಮೈಗೆ ಆಸರೆಯಾಗುವಂತೆ ಹಾಸಿಗೆಯ ಮೇಲೆ ಹಾಗೇ ಅಡ್ಡಾದಳು. ಸ್ವಲ್ಪ ಹೊತ್ತಿನಲ್ಲಿ ವಿಕಾಸ ಇದಕ್ಕಾಗಿಯೇ ಕಾದಿದ್ದವನಂತೆ ಬಂದು ದೀಪವಾರಿಸಿ ಪರದೆಯ ಒಳ ಸೇರಿದ.

ಬೆಳಿಗ್ಗೆ ಹತ್ತು ಗಂಟೆಯ ಒಳಗೇ ಎಲ್ಲಾ ಕೆಲಸ ಮುಗಿಸಿಕೊಂಡು ಹೊರಡಬೇಕು. ಗಡಬಡಿಸಿ ಐದುವರೆಗೆ ಎದ್ದು ಕೆಲಸ ಪ್ರಾರಂಬಿಸಿದಳು. ಇಷ್ಟು ದಿನ ತವರಿನಲ್ಲಿ ಹಾಯಾಗಿ ಮಲಗಿಕೊಂಡು, ತಾಯಿ ಕಾಫಿಗಿಟ್ಟು 'ಕಾಫಿಗಿಟ್ಟಿದ್ದೀನಿ ಏಳಮ್ಮಾ ಆಮೇಲೆ ಹೊರಡಲು ಅವಸರ ಮಾಡಿಕೊಳ್ಳುತ್ತಿಯೆ' ಎಂದು ಎಚ್ಚರಿಸಿದಾಗಲೇ ಕಣ್ಣು ಬಿಡುತ್ತಿದ್ದದ್ದು. ತಾನೇ, ತನ್ನ ಸ್ಥಿತಿಗೆ, ವ್ಯಂಗ್ಯವಾಗಿ ನಗುತ್ತಾ ಕೆಲಸ ಮಾಡುತ್ತಿದ್ದಳು. ತಂದೆ-ಮಗ ಏಳೂವರೆಗೆ ಎದ್ದು ಆರಾಮಾಗಿ ಬೆಳಗಿನ ಆಹ್ನಿಕಗಳನ್ನು ಮುಗಿಸಿಕೊಂಡು ಬಂದು ಡೈನಿಂಗ್ ಟೇಬಲ್ ಬಳಿ ಕೂತರು. ಇದರರ್ಥ ತಮಗೆ ಬೆಳಗಿನ ಪಾನೀಯ ರೆಡಿಮಾಡಿ ತರಬೇಕೆಂಬುದು. ಅವರ ರೀತಿಯಲ್ಲೇ ಇದನ್ನೆಲ್ಲಾ ಅರ್ಥ ಮಾಡಿಕೊಂಡು ಇಬ್ಬರಿಗೂ ಬೋರ್ನ್‌ವೀಟಾ ರೆಡಿಮಾಡಿ ಮುಂದೆ ಇಟ್ಟಳು.

'ನಾನು ಈ ದಿನ ಹನ್ನೊಂದಕ್ಕೆ ಹೊರಡುತ್ತೇನೆ. ನೀನಂತೂ ಹತ್ತಕ್ಕೇ ಹೊರಡಬೇಕಲ್ಲ. ಅಷ್ಟರಲ್ಲಿ ಅಪ್ಪನ ಮಧ್ಯಾಹ್ನ ಊಟಕ್ಕೆ ರೆಡಿ ಇಟ್ಟು, ನನಗೂ ಡಬ್ಬಿ ತಯಾರಿಸು' ಎಂದ. 'ತಾನು ಇಷ್ಟು ದಿನ, ಪುರುಷ, ಹೆಣ್ಣಿನ ಶೋಷಣೆಯನ್ನು ಮಾಡುವುದನ್ನು ಪ್ರತಿಭಟಿಸಬೇಕೆಂದುದೇನು? ಈಗ ಸ್ವತಃ ತಾನೇ ಅನುಭವಿಸುತ್ತಿರುವುದೇನು? ಎಂದು ದಿಕ್ಕು ತೋಚದಂತಾಯಿತು ಶಾಶ್ವತಿಗೆ. ಇದೆಲ್ಲಾ ವಿಚಾರ ಮಾಡಲೂ ಈಗ ಸಮಯವಿಲ್ಲ. ಆಫೀಸಿಗೆ ಹೊರಡಬೇಕು. ಅಲ್ಲಿ ಎಲ್ಲರೂ ಇಂದು ನಾನು ಗಂಡನ ಮನೆಯಿಂದ ಬರುತ್ತೇನೆಂದು ಗೊತ್ತಿರುವುದರಿಂದ ಕೀಟಲೆ ಮಾಡುತ್ತಾರೆ. ಮೂಡ್ ಕೆಡಿಸಿಕೊಂಡು ಹೋದರೆ ಮೊದಲ ದಿನವೇ

ಏನೋ ರಾದ್ಧಾಂತವಾಗಿದೆ ಎಂದುಕೊಂಡು ಬಿಡುತ್ತಾರೆ. ಹೊಟ್ಟೆಕಿಚ್ಚಿನ ಕೆಲವರಿಗೆ ಖುಷಿಯನ್ನೂ ಕೊಡುತ್ತದೆ. ಯಾವುದೋ ಸಣ್ಣ-ಪುಟ್ಟ ಕಾರಣಕ್ಕಾಗಿ ನಗುವವರ ಮುಂದೆ ಎಡವಿ ಬಿದ್ದಂತೆ ಮಾಡಿಕೊಳ್ಳಬಾರದು. ನಿಧಾನವಾಗಿ ಗಂಡನೊಡನೆ ಬಿಡುವಿದ್ದಾಗ ಮಾತನಾಡಿಕೊಂಡು ಎಲ್ಲಾ ಸರಿಪಡಿಸಿಕೊಳ್ಳಬೇಕು. ವಿರಸ ಜೀವನ ಮಾಡಿಕೊಂಡರೆ ನೆಮ್ಮದಿ ಇಲ್ಲದಂತಾಗುತ್ತದೆ ಎಂದುಕೊಂಡಳು. ಗಡಿಬಿಡಿಯಲ್ಲಿ ಕೆಲಸವನ್ನೆಲ್ಲಾ ಮುಗಿಸಿಕೊಂಡು ಊಟಮಾಡಲು ಸಮಯವಿಲ್ಲದೆ ಡಬ್ಬಿಗೊಂದಿಷ್ಟು ಹಾಕಿಕೊಂಡು ಹೊರಟಳು.

ಇದನ್ನೆಲ್ಲಾ ನೋಡಿದರೂ ಗಂಡನೆನ್ನಿಸಿಕೊಂಡವನು 'ಊಟ ಮಾಡದೆ ಹೊರಟು ಬಿಟ್ಯಲ್ಲ' ಎಂಬ ಒಂದು ಕಳಕಳಿಯ ಮಾತನ್ನೂ ಆಡದೆ, 'ಹೀಗಿರಬೇಕಾದುದೇ ಆಕೆಯ ಧರ್ಮ' ಎಂಬಂತೆ ದಿವ್ಯಮೌನದಿಂದ ತನ್ನಷ್ಟಕ್ಕೆ ತಾನಿದ್ದುದನ್ನು ನೋಡಿ, ಮನಸ್ಸು ನೋವಿನಿಂದ ನರಳಿತು. ಅವನ ಮನೋಭಾವ ಅವಳಿಗೆ ದಿಗ್ಭ್ರಮೆಯನ್ನುಂಟುಮಾಡಿ, ಇಂತಹವರೊಡನೆ ಇಡೀ ಜೀವಮಾನವನ್ನು ಹೇಗೆ ಕಳೆಯುವುದು ಎನ್ನಿಸಿತು.

ಮರುದಿನವೇ ವಿಕಾಸ್ ಆಫೀಸ್ ಡ್ಯೂಟಿಯ ಮೇಲೆ ಬೇರೆ ಊರಿಗೆ ಹೋದ. ಹೊರಡುವಾಗ, ತಾನು ಬರುವುದು ಒಂದು ವಾರವಾಗಬಹುದೆಂದೂ ತಂದೆಯ ಯೋಗಕ್ಷೇಮ ಸರಿಯಾಗಿ ನೋಡಿಕೊಳ್ಳಬೇಕೆಂದು ಹೇಳುವುದನ್ನು ಮರೆಯಲಿಲ್ಲ.

ಮನೆಯಲ್ಲಿ ಬೇರೊಬ್ಬರಿಲ್ಲದಿರುವಾಗ ಅವರ ಯೋಗಕ್ಷೇಮವನ್ನು ನಾನಲ್ಲದೇ ಮತ್ತ್ಯಾರು ನೋಡಿಕೊಳ್ಳಲು ಬರುತ್ತಾರೆ? ಇದನ್ನೆಲ್ಲಾ ಹೇಳಿ ಹೋಗಬೇಕೆ? ನನಗೇನೂ ತಿಳಿಯುವುದಿಲ್ಲವೇ?' ಎಂದುಕೊಂಡು ದಿನಕಳೆಯುತ್ತಿದ್ದಳು ಯಾಂತ್ರಿಕವಾಗಿ.

ಗಂಡ ಹೋಗಿ ಆಗಲೇ ಐದು ದಿನ ಕಳೆದಿದ್ದವು. ಭಾನುವಾರ ಬಂದೇ ಬಿಟ್ಟಿತು. ಸಮಯ ಕಳೆಯಲು ಬೇಸರವಾಗಿತ್ತು. ಆತ್ಮೀಯತೆಯ ಮಾತನ್ನೇ ತವರುಮನೆಯಿಂದ ಬಂದಾಗಿನಿಂದ ಕೇಳಿರಲಿಲ್ಲ. ಮನಸ್ಸು ಗಂಡನ ಕಡೆಗೆ ಓಡಿತು. ಅಲ್ಲೆ ಇದ್ದ ಅವನ ಕಪಾಟಿನ ಕಡೆಗೆ ಅವಳ ಲಕ್ಷ್ಯ ಹೋಯಿತು. ಬಿಡುವಿಲ್ಲದೆ ಅದನ್ನು ಇದುವರೆಗೂ ತೆಗೆದು ಸಹ ನೋಡಿರಲಿಲ್ಲ. ಏನಿಟ್ಟಿರಬಹುದೆಂಬ ಕುತೂಹಲದಿಂದ ಬಾಗಿಲು ತೆರೆದಳು. ವಸ್ತುಗಳು ಚೆಲ್ಲಾಪಿಲ್ಲಿಯಾಗಿ ಹರಡಿಕೊಂಡಿದ್ದವು. ಅವನು ಬಂದು ಬಾಗಿಲು ತೆರೆದಾಗ ಸಂತೋಷಾಶ್ಚರ್ಯಗಳಾಗುವಂತೆ ಮಾಡುತ್ತೇನೆಂದು ವಸ್ತುಗಳನ್ನೆಲ್ಲಾ ವರ್ಗೀಕರಿಸಿ

ಓರಣವಾಗಿ ಹೊಂದಿಸಿಟ್ಟಳು. ನಂತರ ಅವನ ಓದಿನ ಟೇಬಲ್ ಒರೆಸಿ, ತಾನು ಹೆಣೆದಿದ್ದ ಕಸೂತಿಯ ಟೇಬಲ್ ಕ್ಲಾತ್ ಹಾಸಿದಳು. ಮಧ್ಯದಲ್ಲಿ ಹೂದಾನಿ ಇಟ್ಟಳು. ಕೆಲಸವೆಲ್ಲಾ ಮುಗಿದಂತಾಯಿತು. ಮಾವನವರಿಗೆ ಸಂಜೆಯ ಬೋರ್ನ್‌ವಿಟಾ ಸಹ ಕೊಟ್ಟು ಮುಗಿಸಿದ್ದಳು. ಅವರೂ ಸಂಜೆಯ ಸುತ್ತಾಟಕ್ಕೆಂದು ಹೊರಗೆ ಹೋಗಿದ್ದರು. ಸಹಜವಾಗಿಯೇ ಮನಸ್ಸು ವಿಕಾಸನ ಕಡೆಗೆ ಓಡಿತು. 'ಅವರು ಹೋಗಿ ನಾಡಿದ್ದಿಗೆ ಒಂದು ವಾರವಾಗುತ್ತೆ. ಬರುವುದು ಒಂದು ವಾರವಾಗಬಹುದೆಂದಿದ್ದರು. ಇಂದೇ ಈಗಲೇ ಬಂದುಬಿಟ್ಟರೆ ಎಷ್ಟು ಚೆನ್ನಾಗಿರುತ್ತೆ' ಎಂದುಕೊಳ್ಳುತ್ತಿದ್ದಂತೆಯೇ ಮನೆಯ ಮುಂದೆ ಆಟೋ ನಿಂತ ಶಬ್ದವಾಯಿತು. ಕುಳಿತಲ್ಲಿಂದಲೇ ಆಸೆಗಣ್ಣಿನಿಂದ ಕಿಟಕಿಯ ಮೂಲಕ ಬೀದಿಯ ಕಡೆ ನೋಡಿದಳು. ನಿರೀಕ್ಷೆ ಸುಳ್ಳಾಗಿರಲಿಲ್ಲ. ವಿಕಾಸ್ ಆಟೋದಿಂದ ಇಳಿಯುತ್ತಿದ್ದ. ಶಾಶ್ವತಿಯ ಮನಸ್ಸು ಸಂತೋಷದಿಂದ ಕುಣಿಯಿತು.

'ಇಂದು ಭಾನುವಾರ, ಎಲ್ಲಾ ಮುಗಿಸಿ ಫ್ರೀಯಾಗಿ ಕುಳಿತಿದ್ದೇನೆ. ಈಗ ಬಂದುದೆಷ್ಟು ಚೆನ್ನ' ಎಂದುಕೊಂಡಳು ಹೊಸ ಮಡದಿ. ವಿಕಾಸ್ ಒಳಗೆ ಬಂದವನೇ ಪ್ರಯಾಣದ ದಣಿವಿನಿಂದಲೂ ಒಂದು ವಾರದ ಬಿಡುವಿಲ್ಲದ ಕೆಲಸದಿಂದಲೂ ಆಯಾಸಗೊಂಡುದರಿಂದ ಅಲ್ಲಿದ್ದ ಸೋಫಾದ ಮೇಲೆ ಕಾಲು ಚಾಚಿ, ಮೈಚೆಲ್ಲಿ ಕುಳಿತ. ಶಾಶ್ವತಿ ಅಷ್ಟು ಪ್ರೀತಿಯಿಂದ ಮಾಡಿದ ಒಪ್ಪ ಓರಣದ ಕಡೆಗೆ, ಅಂದ–ಚೆಂದದ ಕಡೆಗೆ, ಕಲಾತ್ಮಕವಾಗಿ ಮನೆಯನ್ನು ಶೃಂಗರಿಸಿದ ಬಗೆಗೆ ಅವನ ಗಮನ ಹರಿಯಲೇ ಇಲ್ಲ. ಇದನ್ನೆಲ್ಲಾ ನೋಡಿ ಒಂದು ವಾರದಿಂದ ದೂರವಿದ್ದ ಅವನು ತನ್ನನ್ನು ಬಿಗಿದಪ್ಪಿ ಮುತ್ತಿನ ಮಳೆಗರೆಯಬಹುದೆಂದು ಆಶಿಸಿದ್ದ ಅವಳಿಗೆ ನಿರಾಸೆಯಾದುದಲ್ಲದೆ' ಎಂತಹ 'ಅರಸಿಕ' ಎಂದು ಮನಸ್ಸು ಕಲ್ಲಾಯಿತು. ಆದರೂ ದಣಿದು ಬಂದಿರುವನೆಂದು ಶರಬತ್ತು ಮಾಡಿಕೊಂಡು ಬಂದು ತಂದಿತ್ತಳು. ಪಾನೀಯ ಕುಡಿದ. ಸ್ವಲ್ಪ ಹಾಯೆನಿಸಿತು. ಎದ್ದು ಡ್ರೆಸ್ ಬದಲಾಯಿಸಲೆಂದು ಕಪಾಟಿನ ಬಾಗಿಲು ತೆಗೆದ. ಇಟ್ಟ ಸಾಮಾನುಗಳು ಇಟ್ಟಲ್ಲಿರಲಿಲ್ಲ. ತನ್ನ ಸಾಮಾನಿನ ಮೇಲೆ ಲಗ್ಗೆ ಹಾಕಿದ ಹೆಂಡತಿಯ ಸ್ವೇಚ್ಛೆಯನ್ನು ನೋಡಿ ಸಿಟ್ಟು ನೆತ್ತಿಗೇರಿತು.

"ನನ್ನ ಸಾಮಾನುಗಳನ್ನು ಮುಟ್ಟು ಎಂದು ನಿನಗೆ ಹೇಳಿಗವರಾರು? ನನ್ನ ಕಪಾಟನ್ನು ಏಕೆ ತೆರೆದೆ? ಈ ಉದ್ಧಟತನ ನಿನಗೇಕೆ? ನನ್ನನ್ನು ಕೇಳದೆ ಇನ್ನೆಂದೂ ನನ್ನ ಸಾಮಾನು ಮುಟ್ಟೀಯೆ" ಸಿಟ್ಟಿನಿಂದ ಅರಚಿದ. ಅವನ ವಿಚಾರವನ್ನು ನೋಡಿ ಅವಳಿಗೆ ಘಟಸರ್ಪವನ್ನು ತುಳಿದಂತೆ ಆಯಿತು. ಹೌಹಾರಿದಳು ಶಾಶ್ವತಿ.

ತನ್ನ ಅಚ್ಚುಕಟ್ಟುತನವನ್ನು ಮೆಚ್ಚಿ, ಸಂತೋಷಗೊಳ್ಳಬಹುದೆಂದು ಭಾವಿಸಿದ ಆಕೆಗೆ ಅವನ ಸಿಟ್ಟಿನ ಪ್ರತಿಕ್ರಿಯೆ 'ಇವನೊಬ್ಬ ಅನಾಗರಿಕ' ಎಂದು ತಿಳಿಯುವಂತೆ

ಮಾಡಿತು. ಅವನ ಮಾತುಗಳು ಅವಳ ಕಪಾಳಕ್ಕೆ ಚಟ್ಟೆಂದು ಹೊಡೆದಂತೆನ್ನಿಸಿದವು. ಹೃದಯದಲ್ಲಿ ರೋಷ ಉಕ್ಕಿತು. ಬಂದ ತಕ್ಷಣ ಜಗಳ ಬೇಡೆಂದು ಮತ್ತೆ ತನ್ನನ್ನು ತಾನೇ ಸಾವರಿಸಿಕೊಂಡಾಗ, ತನ್ನ ತಾಳ್ಮೆಯ ಬಗೆಗೆ ಆಕೆಗೇ ಆಶ್ಚರ್ಯವೆನ್ನಿಸಿತು.

ಹೀಗೆಯೇ ದಿನಗಳುರುಳಿದವು. ತಿಂಗಳುಗಳು ಗತಿಸಿದವು. ವರ್ಷಗಳೂ ಕಳೆದವು. ಜೀವನದ ಬಗ್ಗೆ ತನ್ನದೇ ಆದ ಕಲ್ಪನೆಯನ್ನು ಹೊಂದಿದ್ದ ಆಕೆಗೆ ವಾಸ್ತವಿಕತೆಗೂ ಆಸೆಗೂ ಬಹುದೂರ ಎನ್ನಿಸಿತು. ಅವಳ ಸ್ಥಿತಿ ಅನ್ಯಾಯವನ್ನು ಸಹಿಸಿಕೊಂಡು ಬದುಕಬೇಕು, ಇಲ್ಲವೆ ಬಡಿದಾಡಿಕೊಂಡು ಮನೆಬಿಟ್ಟು ಹೋಗಬೇಕು ಎನ್ನುವಂತಾಗಿತ್ತು. ಒಮ್ಮೆ ಯಾವುದೋ ಒಂದು ಕಾರಣಕ್ಕಾಗಿ ಅವನು ಸಿಟ್ಟಿಗೆದ್ದಾಗ ಇವಳಿಗೂ ತಡೆಯಲಾಗಲಿಲ್ಲ.

'ನಾನೇನು ಕೊಂಡುಕೊಂಡ ಆಳಲ್ಲ. ನನಗೂ ಬೇಕು-ಬೇಡಗಳಿವೆ. ಆಸರಿಕೆ-ಬೇಸರಿಕೆಗಳಿರುತ್ತವೆ. ಬೇಕಾದರೆ ನೀವೆ ಮಾಡಿಕೊಳ್ಳಿ. ನಾನೂ ನಿಮ್ಮಂತೆಯೇ ಹೊರಗೆ ದುಡಿದುಕೊಂಡು ಬರುತ್ತೇನೆ' ಎಂದಳು.

ಅಲ್ಲೇ ಇದ್ದ ಮಾವನಿಗೆ "ನಿಮ್ಮಂತೆಯೇ ನಾನು ದುಡಿದುಕೊಂಡು ಬರುತ್ತೇನೆ" ಎಂದುದು ಸಿಟ್ಟನ್ನು ತಂದಿತು.

'ಎನ್ ನೋಡ್ತಿ ಮಗಾ, ಒಂದೆರಡು ಬಾರಿಸು, ದುಡಿದುಕೊಂಡು ಬರ್ತೀನೀಂತ ಆಕೆಗೆ ಧಿಮಾಕು. ಯಾರ ದಾನಕ್ಕೆ ದುಡೀತಾಳೆ. ಎಲ್ಲರಂತೆ ನಾವೇನು ವರದಕ್ಷಿಣೆ ತೊಗೋಂಡ್ವಾ? ಲಕ್ಷಗಟ್ಟಲೆ ಒಮ್ಮೆಗೆ ಕೊಡಬೇಕಾಗ್ತಿತ್ತು ಕೇಳಿದ್ರೆ. ಇವ್ರು ದುಡ್ಡು ತರೋದು ಅಷ್ಟರಲ್ಲೇ ಇದೆ. ಈ ಹೆಂಗಸ್ರನ್ನ ಬಿಗಿಯಾಗಿ ಇಟ್ಟುಕೊಳ್ಳಬೇಕು. ಇಲ್ದಿದ್ರೆ ತಲೆ ಮೇಲೆ ಏರ್ತಾರೆ' ಎಂದಾಗ ಇವಳ ಮೈಯ್ಯೆಲ್ಲಾ ಸಿಟ್ಟಿನಿಂದ ಕಂಪಿಸಿತು.

'ಅಂದೇ ವರದಕ್ಷಿಣೆ ಕೇಳಿದ್ರೆ ಚೆನ್ನಾಗಿತ್ತು. ಮಾನವೀಯತೆಯೇ ಇಲ್ಲದ ನಿಮ್ಮ ಸಂಬಂಧವೇ ಬೆಳೆಯುತ್ತಿರಲಿಲ್ಲ. ಆದರ್ಶವಾದಿಗಳೆಂದು ನಾನು ಒಪ್ಪಿದೆ ಅಷ್ಟೆ. ಎಲ್ಲರ ಮುಂದೆ ಆದರ್ಶವಾದಿಗಳೂಂತ ತೋರಿಸ್ಕೊಂಡು, ಒಳಗೆ ವರದಕ್ಷಿಣೆ ಬದಲು ನನ್ನತ್ರ ದುಡಿಸ್ಕೊಂಡು ದುಡ್ಡು ಮಾಡಿಕೊಳ್ಳೋ ಸಂಚು. ಎಂತಹ ನೀಚತನ'

ಶಾಶ್ವತಿ ತಂದೆಗಾಡಿದ ಮಾತನ್ನು ಕೇಳಿ ವಿಕಾಸನ ಸಿಟ್ಟು ನೆತ್ತಿಗೇರಿತು. ಎದ್ದು ಬಂದವನೇ ಮನಬಂದಂತೆ ಹೆಂಡತಿಯನ್ನು ಹೊಡೆದ. ಈಗ ಶಾಶ್ವತಿಯು ಹೆಡೆ ತುಳಿದ ಸರ್ಪದಂತಾದಳು. ಇಷ್ಟು ದಿನ ಅವಡುಗಚ್ಚಿಕೊಂಡು ಎಲ್ಲಾ ಸಹಿಸಿಕೊಂಡಿದ್ದ ಅವಳಿಗೆ ಈಗ ಸಹನೆ ಮೀರಿತು. ಅವನೆರಡು ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡು,

'ಎಚ್ಚರ ! ನಾನೇನು ದನವಲ್ಲ. ಮತ್ತೆ ಒಂದೇಟು ಹಾಕಿದರೆ ಮುಂದೆ ಪಶ್ಚಾತ್ತಾಪ ಪಡುವಂತಾದೀತು' ಎಂದವಳೇ ಅವನನ್ನು ನೂಕಿದಳು. ಮನೆಯಲ್ಲಿ ಎಲ್ಲರೂ ತಾರಕಸ್ವರದಿಂದು ಕೂಗುತ್ತಿದ್ದರು. ನೆರೆಹೊರೆಯವರಿಗೂ ಇವರ ಜಗಳ ಕೇಳಿಸುತ್ತಿತ್ತು. ಇದರ ಪರಿಣಾಮ ಎಲ್ಲರೂ ಇವಳನ್ನು ಟೀಕಿಸುವವರೆ.

'ಇಂಥ ದೇವ್ರಂತ ಗಂಡನ್ನತ್ರ ಸರಿಯಾಗಿ ಸಂಸಾರ ಮಾಡಲಾರದವಳು ಇನ್ನೆಂಥಹವರ ಹತ್ರಾನೂ ಬಾಳೋಕೆ ಸಾಧ್ಯನೇ ಇಲ್ಲ. ದೇವ್ರಂಥ ಮನುಷ್ಯ. ಒಂದು ಕೆಟ್ಟ ಚಟಾನೆ? ಸಿಗ್ರೇಟು, ಡ್ರಿಂಕ್ಸ್, ಕಾಫೀ ಸಹ ಇಲ್ಲ. ಮನೆಯಾಯ್ತು ಆಫೀಸಾಯ್ತು. ಇದಕ್ಕಿಂತ ಇನ್ನೆಂಥ ಗಂಡ ಬೇಕು. ಇವ್ಳಿಗೆ ದುಡೀತೀನಿಂತ ಹಮ್ಮು ಎಂದು ಅನೇಕ ರೀತಿಯಲ್ಲಿ ಟೀಕಿಸಿದರು. ಅಲ್ಲದೇ ಅವಳ ಹತ್ರ ನೆರೆಹೊರೆಯವರು ಮಾತನಾಡುವುದನ್ನೂ ಕಡಿಮೆ ಮಾಡಿದರು. ಈ ಸನ್ನಿವೇಶದಲ್ಲಿ ಅವಳ ಹಿಂದಿನ ಎಲ್ಲಾ ಕ್ರಾಂತಿಕಾರಕ ವಿಚಾರಗಳು ಕಮರಿ ಹೋಗಿ, ಸದ್ಯ ದುಡಿದು ಹಣ್ಣಾಗಿ ಮನೆಗೆ ಬಂದಾಗ ಜಗಳವಿಲ್ಲದೆ ಮನೆಯಲ್ಲಿ ಶಾಂತಿಯ ವಾತಾವರಣವಿದ್ದರೆ ಸಾಕೆನ್ನಿಸಿತು. ಮಕ್ಕಳ ಮುಂದೆ ದಿನಾ ಜಗಳಾವಾಡಬಾರದೆಂದು ಅನೇಕ ರೀತಿಯ ದೌರ್ಜನ್ಯಕ್ಕೆ ತಲೆಬಾಗಿ ಸುಮ್ಮನಿರುತ್ತಿದ್ದಳು. ಮಕ್ಕಳು ಹುಟ್ಟಿದ ಮೇಲೂ ವಿಕಾಸನಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ಶಾಶ್ವತಿಗೆ ತಾನು ಕಾಲೇಜಿನಲ್ಲಿ ಭಾಷಣ ಮಾಡುತ್ತಿದ್ದುದೇನು? ಈಗ ತಾನು ಬದುಕುತ್ತಿರುವ ರೀತಿ ಏನು? ಎಂದು ಮನಸ್ಸಿಗೆ ಹೊಳೆದಾಗ, ತಡೆಯಲಾರದ ದುಃಖ ಒತ್ತರಿಸಿ ಬರುತ್ತಿತ್ತು. ಆದರ್ಶಕ್ಕೂ ವಾಸ್ತವತೆಗೂ ಅಜಗಜಾಂತರ ಎಂದುಕೊಂಡು ಸುಮ್ಮನಾಗುತ್ತಿದ್ದಳು. ಒಂದಲ್ಲ ಒಂದು ಕಾರಣಕ್ಕೆ ಜಗಳಗಳಾಗುತ್ತಲೇ ಇದ್ದವು. ಒಮ್ಮೆ ಹಾಸಿಗೆಯ ಮೇಲಿದ್ದ ನ್ಯೂಸ್‌ಪೇಪರ್ ತೆಗೆದು ಷೆಲ್ಫ್‌ನಲ್ಲಿ ಇಟ್ಟಿದ್ದಕ್ಕೆ ಹಗರಣವಾಯ್ತು. ಮತ್ತೊಮ್ಮೆ ಮಗಳನ್ನು ಸ್ಕೂಲಿಗೆ ಸೇರಿಸುವಾಗ 'ಈಗ ಬೇಡ ಈಗ ರಾಹುಕಾಲವಿದೆ. ಇನ್ನೊಂದು ಗಂಟೆ ಬಿಟ್ಟು ಹೋಗೋಣ' ಎಂದುದಕ್ಕೇ ದೊಡ್ಡ ರಾದ್ಧಾಂತವಾಯಿತು. ಇನ್ನೊಂದು ಸಾರಿ ಯಾವುದೋ ಊರಿಗೆ ಹೊರಟಾಗ ಇವಳು ಕೆಲಸವೆಲ್ಲಾ ಮುಗಿಸಿ ರೆಡಿಯಾಗಿ ಬಂದರೂ ಅವನಿನ್ನೂ ತಯಾರಾಗಿರಲಿಲ್ಲ. ರೈಲಿಗೆ ಆಗಲೇ ಟೈಂ ಆಗಿತ್ತು ಆಗ ಆಕೆ,

'ಬೇಗ ಬನ್ನಿ. ಆಮೇಲೆ ರೈಲು ಸಿಕ್ಕೋಲ್ಲ. ನಾನು ಮನೆಗೆಲ್ಸ ಎಲ್ಲ ಮಾಡ್ಕೊಂಡು ರೆಡಿಯಾದ್ರೂ ನೀವು ಬರೀ ಡ್ರೆಸ್ ಮಾಡ್ಕೊಂಡು ಟೈಂಗೆ ಸರ್‍ಯಾಗಿ ಹೊರಡೋಕಾಗೋಲ್ವ?' ಎಂದುದಕ್ಕೆ ವಿಕಾಸ ತನ್ನನ್ನು ಹೀಯಾಳಿಸುತ್ತಾಳೆ ಎನ್ನಿಸಿ ಸಿಟ್ಟಿಗೆದ್ದ. ಅಂದಿನ ಜಗಳದಿಂದ ಊರಿಗೆ ಹೊರಡುವುದನ್ನೇ ಕ್ಯಾನ್ಸಲ್ ಮಾಡಬೇಕಾಯ್ತು.

'ನಿನ್ನ ಅಧಿಕಾರ ಹೆಚ್ಚಾಯ್ತು. ನಿನ್ನ ಬಾಲ ಬಿಚ್ಚಬೇಡ. ಹೇಳಿದಂತೆ ಕೇಳಿಕೊಂಡು ಬಿದ್ದಿರುವುದಾದರೆ ಬಿದ್ದರು. ಇಲ್ಲದಿದ್ದರೆ ಮನೆಬಿಟ್ಟು ಹೋಗು' ಎಂದ. ಮಕ್ಕಳಿಗಾಗಿ, ಮರ್ಯಾದೆಯಾಗಿ ಇದುವರೆಗೂ ಏನೆಲ್ಲವನ್ನೂ ಸಹಿಸಿಕೊಂಡು ಅಡ್ಜೆಸ್ಟ್ ಮಾಡಿಕೊಂಡು ಆಕೆ ಹೋದುದರಿಂದ ವಿಕಾಸ್ 'ಏನೆಂದರೂ ನಡೆಯುತ್ತದೆ' ಎಂಬಂತೆ ವರ್ತಿಸುತ್ತಿದ್ದ. ತನ್ನ ಮಾತುಗಳು ವರ್ತನೆ ಅವಳಿಗೆ ಎಷ್ಟು ನೋವನ್ನುಂಟು ಮಾಡಬಹುದೆಂದು ಅವನು ಯೋಚಿಸುತ್ತಿರಲಿಲ್ಲ. ಅವಳು ಸಹಿಸಲಾರದೆ ತಿರುಗಿ ಅಂದಾಗ ಇನ್ನಿಲ್ಲದ ರಾದ್ಧಾಂತವಾಗುತ್ತಿತ್ತು. ಅವಳಿಗೆ ಸಂಸಾರದ ಬಗೆಗಿದ್ದ ಆಸಕ್ತಿ, ಮಕ್ಕಳ ಬಗೆಗಿದ್ದ ಮಮತೆ ನೋಡಿ, ಅವಳೆಂದೂ ಮನೆಬಿಟ್ಟು ಹೋಗುವುದಿಲ್ಲವೆಂಬ ಭರವಸೆ ಅವನಿಗುಂಟಾಗಿತ್ತು.

ಪುರುಷನ ಅನ್ಯಾಯಕ್ಕೆ ಒಳಗಾಗಬಾರದೆಂಬ ಅವಳ ದೃಢ ನಂಬಿಕೆಗೇ ಕೊಡಲಿ ಪೆಟ್ಟು ಬಿದ್ದರೂ, ಮಕ್ಕಳಿಗಾಗಿ ಸಹಿಸಿಕೊಂಡಿದ್ದಳು. ಅನೇಕ ಬಾರಿ ಅವನು ಸಮಾಧಾನದಿಂದಿದ್ದಾಗ, ವಿಚಾರ ವಿನಿಮಯ ಮಾಡಿಕೊಂಡು ವಿರಸವಿಲ್ಲದ ಬದುಕು ಬದುಕೋಣವೆಂದು ಎಷ್ಟೇ ಪ್ರಯತ್ನಿಸಿದರೂ ಅವನೆಂದೂ ತಮ್ಮ ಕುಟುಂಬ ಜೀವನದ ಬಗ್ಗೆ ಅವಳೊಂದಿಗೆ ಸಮರಸದಿಂದ ಮಾತನಾಡಲು ಸಿದ್ಧನಿರಲಿಲ್ಲ. ಇವಳು ಎಷ್ಟೆಷ್ಟು ಸಹಿಸಿಕೊಳ್ಳುತ್ತಿದ್ದಳೋ ಅಷ್ಟಷ್ಟು ಅವನ ದಬ್ಬಾಳಿಕೆ ಹೆಚ್ಚಾಗುತ್ತಿತ್ತು. ಈಚೀಚೆಗಂತೂ ತಿಂಗಳಿಗೊಮ್ಮೆಯಾದರೂ ಒದೆ ತಿನ್ನುವುದು ಸಹಜವಾಗಿ ಬಿಟ್ಟಿತ್ತು. ಒಮ್ಮೊಮ್ಮೆ ಕಾಲುಕೆಳಗೆ ಹಾಕಿಕೊಂಡು ತುಳಿದುಬಿಡುತ್ತಿದ್ದ. ಮಕ್ಕಳೇನಾದರೂ ಬಿಡಿಸಿಕೊಳ್ಳಲು ಹೋದರೆ ಅವರಿಗೂ ಪೆಟ್ಟು ಕಟ್ಟಿಟ್ಟಿದ್ದೆ. ಇಂತಹುದನ್ನೆಲ್ಲ ಸಹಿಸಿಕೊಂಡು ಹೋದರೂ ಇಂದು 'ಮನೆ ಬಿಟ್ಟು ಹೋಗು' ಎಂದು ಮಾತು ಅವಳ ಸ್ವಾಭಿಮಾನಕ್ಕೆ ಸವಾಲಾಯಿತು. ಇದರ ಮೇಲೂ ಇದ್ದರೆ ನಾಚಿಕೆಗೇಡು ಎಂದು ಸಹನೆ ಮೀರಿ ಮಕ್ಕಳೊಂದಿಗೆ ಮನೆಬಿಟ್ಟು ಹೊರಟಳು. ತನ್ನ ಆಪ್ತಗೆಳತಿಯ ಮನೆಯ ಒಂದು ಭಾಗದಲ್ಲಿ ಇರತೊಡಗಿದಳು. ಜನರು ನಾನಾ ರೀತಿಯಲ್ಲಿ ಮಾತನಾಡುತ್ತಿದ್ದರು. ಎಲ್ಲರೂ ಇವಳನ್ನು ಟೀಕಿಸುವವರೆ. 'ದೇವರಂಥ ಮನುಷ್ಯ. ಅಂಥವನೊಂದಿಗೆ ಸಂಸಾರ ಮಾಡಲು ಇವಳಿಗೇನು ಧಾಡಿ. ಇವಳಿಗೆ ಗಂಡಸರನ್ನು ಕಂಡರೇ ದ್ವೇಷವಂತೆ. ಅಂಥಹವಳು ಮದುವೆ ಏಕೆ ಮಾಡಿಕೊಳ್ಳಬೇಕಿತ್ತು? ಪಾಪ, ಇವನ ಜೀವನ ಹಾಳು ಮಾಡಿದಳು ಎಂದು ನಾನಾ ರೀತಿಯಲ್ಲಿ ಆಡಿಕೊಂಡರು. ಆದರೆ ಇಬ್ಬರ ಒಳ್ಳೆಯ ಗುಣಗಳನ್ನು ಅರಿತಿದ್ದ ಆಪ್ತಸ್ನೇಹಿತರು ಈ ವಿರಸದ ಪರಿಣಾಮ ನೋಡಿ ಮರುಗಿದರು.

ಈಗ ಇಬ್ಬರಿಗೂ ಫಜೀತಿಯಾಗಿತ್ತು. ವಿಕಾಸ್ ಆಗಿಂದಾಗ್ಗೆ ಆಫೀಸ್ ಕೆಲಸಕ್ಕಾಗಿ ವಾರಗಟ್ಟಲೇ ಬೇರೆ ಊರಿಗೆ ಹೋಗುವ ಪ್ರಸಂಗ ಉಂಟಾಗುತ್ತಿತ್ತು.

ಆಗ ತಂದೆಯ ಊಟೋಪಚಾರಕ್ಕೆ ಬೇರೆಯವರನ್ನು ಆಶ್ರಯಿಸಬೇಕಾಗುತ್ತಿತ್ತು. ಊರಿನಲ್ಲಿ ಇದ್ದಾಗ ಸಹ ಕೈಬಾಯಿ ಸುಟ್ಟುಕೊಂಡು ಅಡಿಗೆ ಮಾಡಿಕೊಳ್ಳಬೇಕಾಗುತ್ತಿತ್ತು. ಮನೆಗೆಲಸಗಳನ್ನೆಲ್ಲಾ ನೋಡಿಕೊಂಡು ಹೋಗುವುದು ರೂಢಿ ಇಲ್ಲದ ಅವನಿಗೆ ಬಹಳ ತ್ರಾಸದಾಯಕವಾಗಿತ್ತು. ಮಕ್ಕಳನ್ನೂ ನೋಡಿ ಎಷ್ಟೋ ದಿನಗಳಾಗಿತ್ತು. ಅದೂ ಮನಸ್ಸಿನ ಒಳಗೆ ಕೊರೆಯುತ್ತಿತ್ತು. ಇವಳಿಗೂ ಅಷ್ಟೆ. ಅಡಿಗೆಯ ಕೆಲಸದ ಜೊತೆಗೆ, ಈಗ ಪೇಟೆಗೆ ಹೋಗಿ ಸಾಮಾನು ತರುವ ಕೆಲಸ, ಮಕ್ಕಳನ್ನು ಸ್ಕೂಲಿಗೆ ಬಿಟ್ಟುಬರುವ ಕೆಲಸ, ಪಾಠ ಹೇಳಿಕೊಡುವ ಕೆಲಸಗಳನ್ನು ಮಾಡಬೇಕಾಗುತ್ತಿತ್ತು. ಬ್ಯಾಂಕ್‌ಗೆ ಹೋಗಿ ಬಂದು ಇವೆಲ್ಲಾ ನಿರ್ವಹಿಸಿಕೊಂಡು ಹೋಗುವುದು ತುಂಬಾ ಕಷ್ಟವಾಗಿತ್ತು. ಯಾವ ಕೆಲಸವನ್ನೂ ಬಿಡಲು ಬರುವಂತಿರಲಿಲ್ಲ. ಈ ಕೆಲಸದ ದಣಿವಿಗಿಂತ ಜನರಾಡುವ ಮಾತುಗಳು, ಪರಿಚಿತರು ಮಕ್ಕಳನ್ನು ಕೇಳುವ ಪ್ರಶ್ನೆಗಳು, ಅವಳನ್ನು ಚುಚ್ಚಿ ಚುಚ್ಚಿ ಘಾಸಿಗೊಳಿಸಿದ್ದವು.

ಒಂದು ದಿನ ವಿಕಾಸನ ಗೆಳೆಯ ರಮೇಶ್ ಮನೆಗೆ ಬಂದು 'ಅಲ್ಲಾ ವಿಕಾಸ್ ನಿನ್ನಲ್ಲಿ ಎಷ್ಟು ಒಳ್ಳೆಯ ಗುಣಗಳಿವೆ. ಆದರೆ ಕಲಿತ ಹೆಂಡತಿಯೊಡನೆ ಕಲೆತು ಬಾಳುವ ಕಲೆ ಇಲ್ಲದಿದ್ದರೆ ಜೀವನ ಎಂತಹ ದುರಂತಕ್ಕೆ ಗುರಿಯಾಗುತ್ತದೆ ನೋಡು. ನಿನ್ನ ಶ್ರೀಮತಿ ಸಹ ಎಷ್ಟು ಒಳ್ಳೆಯವರು. ನೇರ ಸ್ವಭಾವ, ದಿಟ್ಟ ನಿಲುವು, ಅದನ್ನು ನೀನು ಸರಿಯಾಗಿ ಅರ್ಥಮಾಡಿಕೊಂಡು ನಿನ್ನ ಸ್ವಭಾವದಲ್ಲಿ ಬದಲಾವಣೆ ಮಾಡಿಕೊಳ್ಬೇಕು' ಎಂದ.

'ನಾನಾದ್ರೂ ಏನ್ಮಾಡ್ತೀನಿ. ಅವಳು ತರುವ ಸಂಬಳ ಎಷ್ಟೂಂತ ಕೇಳಿಲ್ಲ. ಹಣ ಏನ್ಮಾಡ್ತೀಯಾಂತ ಕೇಳೊದಿಲ್ಲ. ನಾನು ದುಡಿದ ಹಣವನ್ನೆಲ್ಲಾ ಸಂಸಾರದ ಹಿತಕ್ಕಾಗಿಯೇ ಖರ್ಚು ಮಾಡುತ್ತೇನೆ. ಸ್ವಂತಕ್ಕಾಗಿ ಒಂದು ಪೈಸೆ ಸಹ ಖರ್ಚು ಮಾಡಿಕೊಳ್ಳುವುದಿಲ್ಲ. ಗಂಡನೆನ್ನಿಸಿಕೊಂಡವನು ಕಾರಣವಿದ್ದಾಗ ಸಿಟ್ಟಿಗೇಳಬಾರದೇ? ಸಿಟ್ಟಾಗಿ ಎಂದೋ ಒಂದು ದಿನ ಹೊಡೆದರೆ ಸಿಂಹಿಣಿಯಾಗಿ ಬಿಡುತ್ತಾಳೆ. ಹೆಂಗಸಾಗಿ ಸ್ವಲ್ಪವೂ ಅನುಸರಣೆ ಇಲ್ಲ. ನಮ್ಮ ಅಪ್ಪ ಅಜ್ಜ ಅವರ ಹೆಂಡಂದಿರನ್ನು ಹೊಡೆಯದ ದಿನವಿರಲಿಲ್ಲ. ಗಂಡಂದಿರ ಎದುರಿಗೆ ಬರಲು ಅವರು ನಡುಗುತ್ತಿದ್ದರು. ಆದರೆ ನಾನೀಕೆಗೆ ಎಷ್ಟು ಸ್ವಾತಂತ್ರ್ಯ ಕೊಟ್ಟಿದ್ದೇನೆ. ಮನೇಲೆಲ್ಲಾ ಅವಳದ್ದೇ ಸ್ವತಂತ್ರ, ಆಕೆಗೆ ಸಮಾಧಾನವಿಲ್ಲ ಸೊಕ್ಕು ಜಾಸ್ತಿ.'

'ಆಕೆಗೆ ನೀನು ಮನೆಯಲ್ಲಿ ಕೆಲಸ ಮಾಡುವ ಸ್ವತಂತ್ರ ಕೊಟ್ಟಿದ್ದು. ಆಕೆ ಎಲ್ಲವನ್ನೂ ಅಚ್ಚುಕಟ್ಟಾಗಿ, ದಕ್ಷತೆಯಿಂದ ಮಾಡಿಕೊಂಡು ಹೋಗ್ತಾಳೆ; ಯಾವುದನ್ನೂ ವ್ಯರ್ಥವಾಗಿ ಹಾಳುಮಾಡುವವಳಲ್ಲ ಎಂಬ ನಂಬುಗೆ ಬರುವಂತೆ ಆಕೆ ಇರುವುದರಿಂದ ನೀನು ಯಾವುದನ್ನೂ ಪ್ರಶ್ನಿಸುವುದಿಲ್ಲ. ಮನೇಲಿ ಅವರಿಗಿರುವ

ಸ್ವಾತಂತ್ರ, ಕೆಲಸ ಮಾಡುವುದಕ್ಕೆ ಮಾತ್ರ, ನಿನ್ನ ಒಂದು ವಸ್ತು ಮುಟ್ಟಲೂ ಸ್ವತಂತ್ರವಿಲ್ಲ. ನಿನ್ನ ಒಂದು ಅಭಿಪ್ರಾಯ ವಿರೋಧಿಸಲು ಆಕೆಗೆ ಸ್ವತಂತ್ರವಿಲ್ಲ. ನಿನ್ನ ಒಂದು ಅಭಿಪ್ರಾಯ ವಿರೋಧಿಸಲು ಆಕೆಗೆ ಸ್ವತಂತ್ರವಿಲ್ಲ. ನಿನ್ನ ಅಜ್ಜಿ, ತಾಯಿ ಇದ್ದಂತೆ ಹೆಂಡತಿಯಿರಬೇಕೆನ್ನಿಸಿದರೆ, ನೀನು ವಿದ್ಯೆ ಇಲ್ಲದೆ ಸ್ವಂತ ವಿಚಾರವೇ ಇಲ್ಲದ ಬರೀ ಕೆಲಸ ಮಾಡಿಕೊಂಡು ಹೋಗುವ ಒಂದು ಹಳ್ಳಿ ಹೆಣ್ಣನ್ನು ಮದುವೆಯಾಗಬೇಕಿತ್ತು. ಹಿಂದಿನ ಕಾಲದಲ್ಲಿ ಹೆಣ್ಣು ಮಕ್ಕಳಿಗೆ ವಿದ್ಯೆ ಇರುತ್ತಿರಲಿಲ್ಲ. ಆರ್ಥಿಕವಾಗಿ, ಪೂರ್ಣ ಗಂಡನನ್ನೇ ಅವಲಂಬಿಸಿ ಇರಬೇಕಾಗುತ್ತಿತ್ತು. ಮನೆಯ ಹೊಸಲು ದಾಟುತ್ತಿರಲಿಲ್ಲವಾಗಿ ಹೊಸ ವಿಚಾರಗಳೇ ಅವರಿಗೆ ಮುಟ್ಟುತ್ತಿರಲಿಲ್ಲ. ಗಂಡ ಹೇಳಿದಂತೆ ಕೇಳಿಕೊಂಡು ಬಿದ್ದಿರುವುದೇ ತಮ್ಮ ಧರ್ಮ ಎಂದು ಬದುಕುತ್ತಿದ್ದರು. ಅಂತಹವರೊಡನೆ ವಿಚಾರವಾದಿಯೂ, ವಿದ್ಯಾವಂತಳೂ, ಸ್ವಂತ ದುಡಿಮೆಯುಳ್ಳವಳೂ ಆದ ಹೆಂಡತಿಯನ್ನು ಹೋಲಿಸುವುದು, ಅವರಂತೆ ಇರಬೇಕೆಂದು ಬಯಸುವುದು ಮೂರ್ಖತನವೇ ಸರಿ. ಸೂರ್ಯನಿದ್ದಾಗ ರಾತ್ರಿಯಾಗಬೇಕೆಂದರೆ ಸಾಧ್ಯವಾದೀತೆ? ಈಗಿನ ಕಾಲದಲ್ಲಿ ದುಡಿಯದಿರುವ ಹೆಂಡತಿ ಸಹ ಹೇಳಿದಂತೆ ಕೇಳಿಕೊಂಡಿರಬೇಕೆಂಬ ಅಭಿಪ್ರಾಯ ಒಪ್ಪುವುದಿಲ್ಲ. ಅಂತಹುದರಲ್ಲಿ ಕಲಿತ ಜೀವನ ಸಂಗಾತಿಯನ್ನು ಒಬ್ಬ ಆಳಿನಂತೆ ಟ್ರೀಟ್ ಮಾಡಿದರೆ ನಿನ್ನಲ್ಲಿ ಎಷ್ಟೇ ಒಳ್ಳೆಯ ಗುಣಗಳಿದ್ದರೂ ನೆಮ್ಮದಿಯ ಜೀವನ ಮನೆಯಲ್ಲಿ ದೊರೆಯಲು ಸಾಧ್ಯವೇ? ಹೆಂಡತಿ, ಗಂಡ ಹೇಳಿದಂತೆ ಕೇಳಿಕೊಂಡಿರಬೇಕೆಂಬ ಕಾಲ ಹೊಯ್ತು. ಇಬ್ಬರೂ ಕಷ್ಟ–ಸುಖಗಳಲ್ಲಿ ಒಂದಾಗಿ ಇಷ್ಟ–ಅನಿಷ್ಟಗಳನ್ನರಿತು ಒಬ್ಬರಿಗೊಬ್ಬರು ನೆರವಾಗುತ್ತ ಸ್ನೇಹಿತರಂತೆ ಸಮಾನರಾಗಿ ಬದುಕಿದರೆ ಜೀವನದಲ್ಲಿ ಸುಖ–ಶಾಂತಿ; ತನ್ನ ಅನಿಸಿಕೆಗಳ ಬಗ್ಗೆ ತನ್ನ ಸುಖದ ಬಗ್ಗೆ ಆಕೆ ಚಿಂತಿಸಬೇಕು. ತಾನು ಮಾತ್ರ ಆಕೆ ನೋವು–ನಲಿವುಗಳ ಬಗ್ಗೆ ಸುಖ–ಶಾಂತಿಗಳ ಬಗ್ಗೆ ಕಾಳಜಿ ವಹಿಸದಿದ್ದರೆ ಜೋಡಿ ಇಜ್ಜೋಡಿಯಾಗುತ್ತದೆ. ಹೆಣ್ಣನ್ನು ಶೋಷಿಸುವ ಹಿಂದಿನ ಕಾಲದ ವಿಚಾರಗಳನ್ನು ತೆಗೆದುಹಾಕು. ಇಬ್ಬರೂ ಸಮಾನ ಎಂಬ ದೃಷ್ಟಿಯಿಂದ ಬದುಕು, ಎಲ್ಲಾ ಸರಿಹೋಗುತ್ತದೆ.'

'ನಿನ್ನದು too much ideal, ನಮ್ಮಪ್ಪ ಈಗಿನ ಕಾಲದ ಉದಾಹರಣೇನೆ ಹೇಳ್ತಿದ್ರು. ನಮ್ಮೂರಲ್ಲಿ ಒಬ್ಬರು ಹೆಂಡತಿಗೆ ತುಂಬಾ ಸಲಿಗೆ ಕೊಟ್ಟಿದ್ರಂತೆ. ಆಕೆ ಹೇಳ್ದಂಗೇ ಕೇಳ್ತಿದ್ರಂತೆ. ಆಗ ಆಕೆ ಮಿತಿಮೀರಿ ಬರುಬರುತ್ತಾ ಗಂಡ ಅಂದರೂ ಲೆಕ್ಕಕ್ಕಿಲ್ಲ – ಅತ್ತೆ ಮಾವ ಅಂದ್ರೂ ಲೆಕ್ಕಕ್ಕಿಲ್ಲ. ಅಲ್ಲದೆ ಯಾರಿಗೂ ಕೇರ್ ಮಾಡದೆ ಮೆರ್‍ಯೋಕೆ ಶುರೂ ಮಾಡಿದ್ಲಂತೆ. ತನ್ನ ಮರ್ಯಾದೆ, ಗಂಡನ ಮರ್ಯಾದೆ, ಮನೆತನದ ಮರ್ಯಾದೆ ಅಂತ ಯಾವ್ದಕ್ಕೂ ಬೆಲೆ ಕೊಡ್ದೆ, ಮನ್ಸಿಗೆ ಬಂದಂತೆ

ಮರೆದು ಮನೇನೆ ದಿಕ್ಕಾಪಾಲಾಯ್ತಂತೆ. ಎಲ್ಲರನ್ನು ದಿನಾ ಗೋಳು ಹಿಡಿಸಿ ಬಿಡ್ತಿದ್ಲಂತೆ ಅದ್ಕೆ ನಮ್ಮಪ್ಪ ಹೆಂಗಸ್ರನ್ನ ಮೊದಲಿನಿಂದ ಬಿಗೀಲಿ ಇಟ್ಕೋಬೇಕು ತಲೆಮೇಲೆ ಕೂರಿಸ್ಕೋಬಾರದು ಅಂತ ಎಚ್ಚರಿಕೆ ಹೇಳ್ತಾನೇ ಇರ್ತಾರೆ. ನೀನೋಡಿದ್ರೆ ಏನೇನೋ ಹೇಳ್ತೀಯಾ'.

'ಅಂತಹವೂ ಕೆಲವು ಉದಾಹರಣೆ ಇವೆ. ಇಲ್ಲಾಂತಲ್ಲ. ಆದರೆ ವಿದ್ಯಾವಂತ ಹೆಣ್ಮಕ್ಳು ಸುಸಂಸ್ಕೃತರಾಗಿ ಬೆಳೆದವರು ಎಷ್ಟು ಸಲಿಗೆ ಕೊಟ್ರು ದುರುಪಯೋಗ ಮಾಡಿಕೊಳ್ಳೋಲ್ಲ. ನಿನ್ನ ಮಿಸೆಸ್ ಸುಶಿಕ್ಷಿತ ಸುವಿಚಾರಿ – ಸ್ವತಂತ್ರ ಮನೋಭಾವದವರು. ಆಕೆ ದುಡೀತಾ ಇರುವಾಗ, ಮನೇಲಿ ನಿನ್ನ ಸಹಕಾರ ಅಪೇಕ್ಷಿಸಿದ್ರೆ ಅದೇನು ತಪ್ಪಲ್ಲ. ನೀನು ಸಹಕರಿಸದಿದ್ರೆ ಅದು ಶೋಷಣೆ ಎನ್ನಿಸುತ್ತೆ. ಕತ್ತೇನೂ ಕುದ್ರೇನೂ ಒಂದೇ ರೀತಿ ನೋಡ್ಕೊಳ್ಳೋಕಾಗುತ್ತಾ. ನಿನ್ನ ಹೆಂಡ್ತಿ ಜಾಣೆ. ವಿಚಾರವಂತೆ, ಸುಸಂಸ್ಕೃತಳು. ಆಕೆಯನ್ನು ನೀನು ದುಡಿಸಿಕೊಳ್ಳುವ ರೀತಿಯಿಂದ ಆಕೆ ಒರಟಾಗಿ ವರ್ತಿಸಿದ್ದರೆ ತಪ್ಪೇನಿಲ್ಲ. ಅಂತಹ ಹೆಂಡತಿ ಸಿಕ್ಕೋಕೆ ನೀನು ಪುಣ್ಯ ಮಾಡಿದ್ದೆ. ಅದನ್ನು ಅರ್ಥಮಾಡ್ಕೊಂಡು ಬದುಕದೆ ಜೀವನವನ್ನು ದುರಂತ ಮಾಡ್ಕೊಳ್ಳೋದಲ್ದೆ ಸರೀಕರಲ್ಲಿ ನಗೆಪಾಟಲು ಮಾಡಿಕೊಂಡೆ. ಈಗ್ಲೂ ಕಾಲ ಮೀರಿಲ್ಲ. ದೂರಾಲೋಚನೆ ಮಾಡಿನೋಡು. ಈ ತರಹ ಜೀವನ ಛಂದ ಕಾಣೋಲ್ಲ' ಎಂದು ಹೇಳಿ ಹೋದ ರಮೇಶ್.

ಅದ ದಿನ ಸಂಜೆ, ರಮೇಶ್, ಶಾಶ್ವತಿಯ ಮನೆಗೂ ಹೋದ. ತುಂಬಾ ಆದರದಿಂದ ತನ್ನ ಗಂಡನ ಸ್ನೇಹಿತನನ್ನು ಬರಮಾಡಿಕೊಂಡಳು. ಗಂಡನಿಗೆ ಒಮ್ಮೊಮ್ಮೆ ತೀವ್ರವಾದ ಹೊಟ್ಟೆ ನೋವು ಬರುತ್ತಿತ್ತು. ಬಿಸಿನೀರಿನ ಚೀಲದಲ್ಲಿ ಕಾವು ಕೊಡಬೇಕಾಗುತ್ತಿತ್ತು. ಸಪ್ಪೆ ಅಡಿಗೆ ಮಾಡಬೇಕಾಗುತ್ತಿತ್ತು. ರೆಸ್ಟ್ ಬೇಕಾಗುತ್ತಿತ್ತು. ಆ ಬಗ್ಗೆ ಆಕೆಗೆ ಚಿಂತೆ ಎನ್ನಿಸಿತ್ತು. ಈಗ ರಮೇಶ್ ಬಂದುದರಿಂದ ವಿಕಾಸ್‌ನ ಆರೋಗ್ಯದ ಬಗ್ಗೆ ತಿಳಿಯಬಹುದೆಂದುಕೊಂಡಳು. ರಮೇಶ್ ಅದೂ ಇದೂ ಮಾತನಾಡುತ್ತಾ ಹಾಗೆಯೇ ವಿಷಯಕ್ಕೆ ಬಂದು,

'ಶಾಶ್ವತಿಯವರೇ ನೀವೆಂತಹ ತೀರ್ಮಾನಕ್ಕೆ ಬಂದಿರಿ! ನೀವೂ ವಿಚಾರವಂತರು. ನೀವೇ ಯೋಚಿಸಿ, ನೀವು ಮಾಡಿದ್ದು ಸರಿಯೆ? ಈ ಸಂಗತಿ ನನಗೆ ಮೊನ್ನೆ ತಾನೇ ತಿಳಿಯಿತು. ನನಗೆ ಬೆಂಗಳೂರಿಗೆ ವರ್ಗವಾಗಿರುವುದರಿಂದ ಬೇಗ ತಿಳಿಯಲಿಲ್ಲ.

'ನಾನು ಪ್ರತ್ಯೇಕ ಬಂದು ಆಗಲೇ ಎರಡು ವರ್ಷಗಳಾಗುತ್ತಾ ಬಂದವು.'

'ಹೌದೆ? ಎಂತಹ ಕೆಲಸ ಮಾಡಿದಿರಿ? ದುಡಿಕಿಬಿಟ್ಟಿರಿ ಎನ್ನಿಸುತ್ತದೆ. ಈ

ಜೀವನ, ಬೆಳೆಯುವ ಮಕ್ಕಳ ಮೇಲೆ ಎಷ್ಟು ದುಷ್ಪರಿಣಾಮ ಉಂಟುಮಾಡುತ್ತದೆ ಯೋಚಿಸಿದ್ದೀರಾ? ವಿಕಾಸ್‌ನಲ್ಲಿ ಯಾವ ದುರ್ಗುಣಗಳಿವೆ ಹೇಳಿ. ಅವನು ಒಬ್ಬ ಹೋವ್‌ಬರ್ಡ್. ಮನೆಬಿಟ್ಟರೆ ಬೇರೆ ಹವ್ಯಾಸಗಳಿಲ್ಲ. ಕೆಲವು ದೋಷಗಳಿರಬಹುದು. ನೀವು ಸುಧಾರಿಸಿಕೊಂಡು ಹೋಗಬೇಕಿತ್ತು. ಹೀಗೆ ಮಾಡಿದುದರಿಂದ ನಿಮ್ಮ ಕುಟುಂಬಕ್ಕೇ ದೊಡ್ಡಪೆಟ್ಟು, ಇದರಿಂದ ನಿಮಗೆ ಸಮಸ್ಯೆ ಪರಿಹರಿಸಲಾಯಿತೆ?'

'ನಿಜ. ನೀವು ಹೇಳಿದಂತೆ ಅವರಲ್ಲಿ ದುರ್ಗುಣ, ದುಶ್ಚಟಗಳಿಲ್ಲ. ಅವುಗಳಿದ್ದಿದ್ದರೆ ಸಮಾಜವಾದರೂ ನನ್ನ ಬಗ್ಗೆ ಕನಿಕರಿಸುತ್ತಿತ್ತು. ದುರ್ಗುಣ ದುಶ್ಚಟಗಳಿದ್ದವರಿಂದ ಮಹಿಳೆಯರು ಎಷ್ಟು ನೋಯಬಹುದೋ, ಅದಕ್ಕಿಂತ ಹೆಚ್ಚು ಮಾನಸಿಕ ನೋವನ್ನು ಅನುಭವಿಸಿದ್ದೇನೆ ಹೆಂಡತಿಯ ಬಗ್ಗೆ ಅವರಿಗಿರುವ ಅಮಾನವೀಯ ವಿಚಾರಗಳಿಂದ. ನಾನು ಸಹಿಸಿ ಸಹಿಸಿ ಸಾಕಾಗಿ ಹೊರಬಿದ್ದೆ. ಎಲ್ಲದಕ್ಕೂ ಒಂದು ಎಲ್ಲೆ ಇರುತ್ತದಲ್ಲವೆ. ನಾನೂ ನೋವಿನಲ್ಲೇ ಆರೇಳು ವರ್ಷ ನೂಕಿದೆ. ದಿನವೂ ಕಣ್ಣೀರಲ್ಲಿ ಕೈತೊಳೆಯಬೇಕಿತ್ತು. ದುಡಿದು ದಣಿದು ಮನೆಗೆ ಬಂದರೆ ಮೈತುಂಬಾ ಕೆಲಸ. ಅಲ್ಲಿ ಬೇಸರಪಟ್ಟುಕೊಂಡು ಬಂದರೂ ಒಂದು ಹಿತವಾದ ಮಾತೂ ಇಲ್ಲ ಎಂದರೆ ಎಷ್ಟು ವರ್ಷಾಂತ ಸಹಿಸಿಕೊಳ್ಳುವುದಕ್ಕೆ ಸಾಧ್ಯ ಹೇಳಿ. ಅದೂ ಅಲ್ಲದೆ ದಿನವೂ ಜಗಳ. ಮಾನಸಿಕ ಹಿಂಸೆ, ಜೊತೆಗೆ ಆಗಾಗ್ಗೆ ದೈಹಿಕ ದಂಡನೆಯೂ ಆಗುತ್ತಿತ್ತು. ನನಗೂ ಮನಸ್ಸು ರೋಸಿಹೋಯಿತು. ನನಗಂತೂ 'ಖಂಡವಿದೆಕೋ ಮಾಂಸವಿದೆಕೋ' ಎಂಬ ಜೀವನ ಬದುಕಿ ಸಾಕಾಯ್ತು. ನಿರ್ವಾಹವಿಲ್ಲದೆ ಈ ನಿರ್ಧಾರಕ್ಕೆ ಬಂದೆ.

'ಇದೆಲ್ಲಾ ಸರಿಯಲ್ಲ ಶಾಶ್ವತಿಯವರೇ. ಇಬ್ಬರಲ್ಲಿ ಯಾರೂ ಕೆಟ್ಟವರಿಲ್ಲ. ಆದರೆ ವಿಚಾರದಲ್ಲಿ ಒಬ್ಬರು ಪೂರ್ವ, ಇನ್ನೊಬ್ಬರು ಪಶ್ಚಿಮ. ಹೀಗಾಗಿ ಇಬ್ಬರೂ ಒಂದಾಗುವುದು ದುಸ್ತರವಾಗಿದೆ. ನನಗೆ ನಿಮ್ಮಿಬ್ಬರ ವಿಚಾರಗಳು ಗೊತ್ತು. ನಿಮ್ಮದೇನೂ ತಪ್ಪಿಲ್ಲ. ಆಧುನಿಕ ಸುಶಿಕ್ಷಿತ ಯೋಗ್ಯ ಮಹಿಳೆಯ ವಿಚಾರ ನಿಮ್ಮದು. ಆದರೆ ಅವನಿನ್ನೂ ಹಳೆಯ ಕಂದಾಚಾರಗಳ ಪ್ರಭಾವದಲ್ಲಿಯೇ ಇದ್ದಾನೆ. ನಾನವನಿಗೆ ವಿಚಾರ ಬದಲಾವಣೆ ಮಾಡಿಕೊಳ್ಳಲು ಸಲಹೆ ಮಾಡುತ್ತೇನೆ. ದಯವಿಟ್ಟು ನಿಮ್ಮ ನಿರ್ಧಾರ ಬದಲಿಸಿ.'

ಅವರು ತಮ್ಮ ನಡವಳಿಕೆಯಲ್ಲಿ ಬದಲಾವಣೆ ಮಾಡಿಕೊಳ್ಳುವುದಾದರೆ ನನ್ನದೇನೂ ಅಭ್ಯಂತರವಿಲ್ಲ. ಅವರು ಕ್ಷಮೆ ಕೇಳಲಿ ಎಂದೂ ಬಯಸುವುದಿಲ್ಲ. 'ಸಮರಸ ಜೀವನ ಸಾಧ್ಯ' ಎಂಬ ನಂಬಿಕೆ ಹುಟ್ಟಿಸಿದರೆ ಸಾಕು. ನಮ್ಮ ಆದರ್ಶಗಳು

ವಿಚಾರಗಳು ಏನೇ ಇದ್ದರೂ ಮಕ್ಕಳು ಹುಟ್ಟಿದಮೇಲೆ ಅವರ ಹಿತಕ್ಕಾಗಿ ಸಂಸಾರದಲ್ಲಿ ಸ್ವಲ್ಪ ಹೊಂದಾಣಿಕೆ ಮಾಡಿಕೊಳ್ಳಲೇಬೇಕು. ವಾಸ್ತವಿಕತೆಗೆ ತಲೆಬಾಗಲೇ ಬೇಕಾಗುತ್ತದೆ. ಆದರೆ ಈ ಹೊಂದಾಣಿಕೆ ಒನ್‌ಸೈಡೆಡ್ ಆದರೆ ಏನೂ ಪ್ರಯೋಜನವಿಲ್ಲ ಅಲ್ಲವೆ?'

'ನೀವು ಇಷ್ಟು ಸರಳವಾಗಿದ್ದ ಮೇಲೆ ವಿಕಾಸನನ್ನು ಒಪ್ಪಿಸಿ ಕರೆದುಕೊಂಡು ಬರುವುದೇನೂ ಕಷ್ಟವಾಗುವುದಿಲ್ಲ' ಎಂದು ಹೇಳಿ, ಆಕೆ ಕೊಟ್ಟ ಉಪಹಾರ, ಕಾಫಿ ಮುಗಿಸಿ ತಾನು ಬಂದ ಕೆಲಸ ಸಾರ್ಥಕವಾಯಿತು ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾ ಸ್ಕೂಟರ್ ಏರಿ ಹೊರಟ ರಮೇಶ್.

■

# ೨. ಯೋಗಾಯೋಗ

'ಲಿಂಗಾಪುರದ ಕಾಲುವೆಯ ಉದ್ಘಾಟನೆಗೆ ಹೋಗಬೇಕಾಗಿದೆ. ಅಲ್ಲಿಯ ಜಲಪಾತದಲ್ಲಿ ಈಗ ನೀರು ತುಂಬಿ ಚೆನ್ನಾಗಿ ಕಾಣುತ್ತಿದೆಯಂತೆ. ಮನೆಯಲ್ಲಿ ಕೂತಾದರೂ ಏನು ಮಾಡುತ್ತೀ ಹೇಗೂ ಕಾರು ಹೋಗುತ್ತದೆ. ಸಾಕಷ್ಟು ಜಾಗವಿದೆ. ಬರುವಂತಿದ್ದರೆ ಬಾ' ಎಂದು ಸುರೇಂದ್ರ ಕರೆದಾಗ ಶುಚಿಗೆ 'ಯಾಕಾಗಬಾರದು' ಎನ್ನಿಸಿತು. ಪಕ್ಕದ ಮನೆಯ ಶುಭಾ, 'ಜಲಪಾತದ ಸೊಬಗನ್ನು ನೋಡಬೇಕೆಂದೇ ಟ್ಯಾಕ್ಸಿ ಮಾಡಿಕೊಂಡು ಮನೆಯವರೆಲ್ಲಾ ಹೋಗಿದ್ದೆವು' ಎಂದು ಹೇಳಿದ್ದಳು; ಅಲ್ಲದೇ ಅದರ ಸೌಂದರ್ಯವನ್ನು ಮನಸಾರೆ ಬಣ್ಣಿಸಿದ್ದಳು. ತನಗೂ ಅದನ್ನು ನೋಡಿ ಬರಬೇಕೆಂಬಾಸೆ ಆಗಿತ್ತು. ಆದರೆ ಕೆಲಸದ ಜಂಜಾಟದಲ್ಲಿ ಮನೆಗೆ ಬರುವುದೇ ಅಪರೂಪವಾಗಿದ್ದ ಸುರೇಂದ್ರ ತನಗಾಗಿ ಒಂದು ದಿನ ಸ್ಪೇರ್ ಮಾಡುವನೆಂಬ ಮಾತು ಕನಸಿನಲ್ಲೂ ಬಯಸಲಾರದುದು ಎಂದು ಗೊತ್ತಿದ್ದುದರಿಂದ ಆ ಒಂದು ಆಸೆಯನ್ನು ಸಹ ಅವನ ಮುಂದೆ ತಿಳಿಸಿರಲಿಲ್ಲ. ಆದರೆ ಈಗ ತನ್ನಷ್ಟಕ್ಕೇ ತಾನೇ ಆ ಬಯಕೆ ಪೂರ್ತಿಯಾಗುವ ಅವಕಾಶ ಬಂದಿರುವಾಗ ಬಿಡಬೇಕೇಕೆ ಎನ್ನಿಸಿ 'ಎಂದು ಹೊರಡಬೇಕು?' ನಾನೂ ಖಾಲಿ ಇರಬೇಕಲ್ಲ ಆದಿನ' ಎಂದಳು. ಏಕೆಂದರೆ 'ಆ ದಿನ' ಶುಕ್ರವಾರವಾದರೆ ಶುಕ್ರವಾರದ ಪೂಜೆ ಬಿಟ್ಟು ಹೋಗುವಂತಿರಲಿಲ್ಲ. ಭಾನುವಾರವಾದರೆ ಆ ದಿನ ಸಂಕಷ್ಟ ಗಣಪತಿ ವ್ರತ ಬಿಟ್ಟು ಹೋಗುವುದಸಾಧ್ಯ' ಅದಕ್ಕಾಗಿ ಕೇಳಿದಳು.

'ಸೋಮವಾರ ಬೆಳಿಗ್ಗೆ ಹತ್ತಕ್ಕೆ ಹೊರಟರೆ ಸಾಕು. ಮಧ್ಯಾಹ್ನ ಮೂರಕ್ಕೆ ಮುಟ್ಟುತ್ತೇವೆ. ನಾಲ್ಕಕ್ಕೆ ಕಾರ್ಯಕ್ರಮ. ಎಲ್ಲಾ ಮುಗಿಯಲು ಸಂಜೆ ಏಳಾದರೂ ಆಗುತ್ತದೆ. ಆಗ ಹೊರಟರೂ ರಾತ್ರಿ ಹನ್ನೆರಡಕ್ಕೆಲ್ಲಾ ಮನೆಗೆ ಬಂದು ಬಿಡುತ್ತೇವೆ' ಎಂದಾಗ ಅಲ್ಲಿಗೆ ಹೋಗುವುದಾದರೂ ಏಕೆ ತನಗೇನೂ ಅಲ್ಲಿ ಕೆಲಸವಿಲ್ಲ ಎಂದುಕೊಂಡು,

'ಹಾಗಾದರೆ ನಾನೇಕೆ ಬರಲಿ? ನೋಡಲು ಸಮಯವಿದ್ದಿದ್ದರೆ ಜಲಪಾತ ನೋಡಲು ಬರುತ್ತಿದ್ದೆ. ಅದನ್ನು ನೋಡಲೆಂದೇ ಬಾ ಎಂದಿರಿ. ನಿಮ್ಮ ಪ್ರೋಗ್ರಾಂನಲ್ಲಿ ಅಲ್ಲಿಗೆ ಹೋಗಲಿಕ್ಕೇ ಸಮಯವಿಲ್ಲವಲ್ಲ' ಎಂದಳು.

'ಹೌದಲ್ಲಾ! ಒಂದು ಕೆಲಸ ಮಾಡು. ಫಂಕ್ಷನ್ ನಡೀತಿರ್ವಾಗ ಯಾರಾದರೂ ನಮ್ಮ ಆಫೀಸಿನ ಸಿಪಾಯಿಯನ್ನು ಕಳುಹಿಸ್ತೀನಿ, ನೀನು ನೋಡಿಕೊಂಡು ಬಾ'.

'ಎಷ್ಟೇ ಸೊಬಗಿನ ತಾಣವಾದರೂ ಒಬ್ಬಳೇ ಹೋಗಿ ನೋಡಲೇನು ಮಜಾ ಇರ್ತದೆ? ಎಲ್ಲರೂ ಎಷ್ಟು ಮಜವಾಗಿ ಕಾಲಕಳೀತಾರೆ. ನೀವು ನಿಮ್ಮ ಕೆಲ್ಸದಲ್ಲೇ ಮುಳುಗಿಬಿಡ್ತೀರಿ. ನನಗಾಗಿ ಒಂದು ಗಂಟೆ ಬಿಡುವು ಮಾಡ್ಕೊಳ್ಳೋಕೂ ಆಗೋಲ್ಲ'.

'ನನ್ಗೂ ನೋಡ್ಬೇಕೂಂತ ಇಷ್ಟ. ನೋಡೋಣವೆಂದ್ರೆ ಸಮಯ ಎಲ್ಲಿದೆ ಹೇಳು. ಮರುದಿನ ನೋಡೋಣವೆಂದ್ರೆ ಮತ್ತೊಂದು ದಿನ ಆಫೀಸಿಗೆ ರಜೆ ಹಾಕಬೇಕಾಗುತ್ತೆ. ಕೆಲ್ಸ ತುಂಬಾ ಇದೆ. ಇನ್ನ್ಯಾವಾಗ್ಲಾದ್ರೂ ಕಂಪನಿ ಕೊಡ್ತೀನಿ. ಈ ಸಾರಿ ನೀನೊಬ್ಬಳೇ ನೋಡಿಕೊಂಡು ಬಾ' ಎನ್ನಲು ಶುಚಿಯೂ ರೆಡಿಯಾಗಿ ಹೊರಟಳು. ದಾರಿಯಲ್ಲಿ ಕಾರು ಕೆಟ್ಟು ಜಲಪಾತ ನೋಡುವ ಶುಚಿಯ ಆಸೆ ಪ್ರಾರಂಭದಲ್ಲಿಯೆ ಕಮರಿತು. ಊರು ತಲುಪಿದಾಗ ಗಂಟೆ ಐದಾಗಿತ್ತು. ಇವರನ್ನು ನಿರೀಕ್ಷಿಸುತ್ತಿದ್ದ ಕಾರ್ಯಕರ್ತರು ಶುಚಿಯನ್ನೂ ಒತ್ತಾಯಿಸಿ ವೇದಿಕೆಯ ಮೇಲೆ ಕೂರಿಸಿದರು. ಕಾರ್ಯಕ್ರಮ ಲೇಟಾಗಿ ಶುರುವಾಗಿ ಮುಗಿಯುವ ಹೊತ್ತಿಗೆ ಗಂಟೆ ಎಂಟಾಯ್ತು. ನಂತರ ಊಟ, ಎಲ್ಲರೊಡನೆ ಮಾತುಕತೆ ಮುಗಿದಾಗ ಹತ್ತು ಗಂಟೆ ದಾಟಿತ್ತು. ಅಷ್ಟು ಅವೇಳೆಯಲ್ಲಿ ಈಗಿನ ಕಾಲದಲ್ಲಿ ಪ್ರಯಾಣ ಮಾಡುವುದು ಒಳಿತಲ್ಲವೆಂದೂ, ಆ ದಿನ ಅಲ್ಲಿಯೇ ತಂಗಿದ್ದು ಮರುದಿನ ಹೊರಡಬೇಕೆಂದು ಎಲ್ಲರೂ ಒತ್ತಾಯಿಸಿದರು. ಶುಚಿಗೂ ಖುಷಿಯಾಯ್ತು. ಎಲ್ಲರೂ ಕೂಡಿ ಜಲಪಾತ ನೋಡಿಕೊಂಡು ಬರಬಹುದೆಂದು ಅವಳ ಮನಸ್ಸು ಅರಳಿದ ಮಲ್ಲಿಗೆಯಾಯಿತು. ಸುರೇಂದ್ರ ನಿರ್ವಾಹವಿಲ್ಲದೇ ಉಳಿಯಬೇಕಾಯ್ತು. ಹೇಗೂ ಉಳಿದಾಗಿದೆ. ಬೆಳಿಗ್ಗೆ ಜಲಪಾತ ನೋಡಿಕೊಂಡಾದರೂ ಬಂದರಾಯ್ತೆಂದು ಆಫೀಸಿನ ಸಿಬ್ಬಂದಿಗೆ ತಿಳಿಸಿದ. ಜ್ಯೂನಿಯರ್ ಇಂಜನಿಯರ್ ಒಬ್ಬರು ಒಂಬತ್ತು ಗಂಟೆಗೆ ಬರುವುದಾಗಿಯೂ ಆತ ಎಲ್ಲಾ ವ್ಯವಸ್ಥೆ ಮಾಡುವುದಾಗಿಯೂ ಹೇಳಿದರು.

ರಾತ್ರಿ ಗೆಸ್ಟ್ ಹೌಸ್‌ಗೆ ಬಂದು ಮಲಗಿದಾಗ ಸುಮಾರು ಹನ್ನೊಂದಾಗಿತ್ತು. ಶುಚಿಗೇಕೋ ಬೇಗ ನಿದ್ದೆ ಹತ್ತಲೇ ಇಲ್ಲ. ಹಿಂದಿನ ತಮ್ಮ ಜೀವನವನ್ನೆಲ್ಲಾ ನೆನಸಿಕೊಳ್ಳುತ್ತಾ ಹಾಗೇ ಮಲಗಿದ್ದಳು. ಪಕ್ಕದಲ್ಲಿ ಸುರೇಂದ್ರ ನಿಶ್ಚಿಂತೆಯ ನಿದ್ರೆ ಮಾಡುತ್ತಿದ್ದ. ಯೋಚಿಸುತ್ತಾ ಯೋಚಿಸುತ್ತಾ ಮಲಗಿದ್ದಂತೆ ಎಷ್ಟೋ ಹೊತ್ತಾದ ಮೇಲೆ ಶುಚಿಗೆ ನಿದ್ದೆ ಬಂದುಬಿಟ್ಟಿತು. ಬೆಳಿಗ್ಗೆ ಸುರೇಂದ್ರ 'ಶುಚೀ ನಾನು ಒಂದರ್ಧ ಗಂಟೆ ಹೊರಗೆ ಅಡ್ಡಾಡಿ ಬರುತ್ತೇನೆ. ನೀನು ಬೇಕಾದರೆ ಮಲಗಿರು. ರಾತ್ರಿ ಸರಿಯಾಗಿ ನಿದ್ದೆ ಮಾಡಿದಂತೆ ಕಾಣುವುದಿಲ್ಲ. ನಾನು ಹೊರಗಿನಿಂದ ಬೀಗ ಹಾಕಿಕೊಂಡು ಹೋಗುತ್ತೇನೆ' ಎಂದಾಗ ಬೆಳಗಿನ ಜಾವದ ನಿದ್ದೆ ಹತ್ತಿತ್ತಾಗಿ

ಶುಚಿಗೆ ಕಣ್ಣು ಬಿಡಲಾಗುತ್ತಿರಲಿಲ್ಲ. 'ಬೀಗ ಹಾಕಿಕೊಂಡು ಹೋಗಲಿ' ಎಂದು ನಿದ್ದೆಯಲ್ಲಿ ಅನ್ನಿಸಿದರೂ ಬಹುಮುಂಜಾಗ್ರತೆಯ ಆಕೆಯೆ 'ಎಲ್ಲಿಯಾದ್ರೂ ಹಾವೋ ಗೀವೋ ಬಂತು ಅಥವಾ ಏನೋ ಅಪಾಯದ ಕಾರಣದಿಂದ ಹೊರಗೆ ಹೋಗೋ ಸಂದರ್ಭ ಬಂದ್ರೆ ಹೊರಗಿನಿಂದ ಬೀಗ ಹಾಕಿದ್ರೆ ಎಷ್ಟು ಕಷ್ಟ' ಎನ್ನಿಸಿ 'ಬೇಡ ನಾನೇ ಒಳಗಿನಿಂದ ಬೋಲ್ಟ್ ಹಾಕಿಕೊಳ್ತೀನಿ. ಆದ್ರೆ ಅರ್ಧ ಗಂಟೇಲೆ ಬಂದ್ಬಿಡ್ಬೇಕು. ಪರಸ್ಥಳ ಒಬ್ಳೇ ಇದ್ದೀನಿ. ಲೇಟಾದ್ರೆ ಗಾಬರಿಯಾಗುತ್ತೆ' ಎಂದಳು.

'ಇಲ್ಲಿಲ್ಲ, ಬೇಗ ಬಂದ್ಬಿಡ್ತೀನಿ. ಒಂದರ್ಧ ಗಂಟೆಯಾದ್ರು ಅಡ್ಡಾಡಿ ಬರದಿದ್ರೆ ನನಗೆ ಲವಲವಿಕೇನೇ ಅನ್ಸೋಲ್ಲ' ಎನ್ನುತ್ತಾ ಹೊರಗೆ ಹೋದ. ಆಗ ಶುಚಿ ಎದ್ದು ನಿದ್ದೆಗಣ್ಣಲ್ಲೇ ಬಾಗಿಲಿನ ಬೋಲ್ಟ್ ಹಾಕಿ ಬಂದು ಮಲಗಿದಳು. ಟೈಂ ಆಗಲೇ ಆರಾಗಿತ್ತು. ಇನ್ನು ಮಲಗಿದರೆ ನಿದ್ದೆ ಹತ್ತಿ ರೆಡಿಯಾಗಲು ಲೇಟಾಗಿ ನಂತರ ಜಲಪಾತ ನೋಡಲು ತಡವಾದೀತೆಂಬ ವಿಚಾರ ಬಂದು ಪುನಃ ನಿದ್ದೆ ಹತ್ತಲೇ ಇಲ್ಲ. ಎದ್ದು ಪ್ರಾತಃಕಾಲದ ಕ್ರಿಯೆಗಳನ್ನೆಲ್ಲಾ ಮುಗಿಸಿದಳು. ಸ್ನಾನ-ಧ್ಯಾನ ಮುಗಿಸಿದಳು. ಸುರೇಂದ್ರನ ಸುಳಿವಿಲ್ಲ 'ಇದೇನಪ್ಪಾ ಇನ್ನೂ ಬರಲಿಲ್ಲ. ಪರಸ್ಥಳ. ಊರಿಂದ ಹೊರಗೆಲ್ಲಿ ಹೋದರೋ ಏನೋ, ಕೈಲಿ ವಾಚಿತ್ತು, ಉಂಗುರವಿತ್ತು, ಯಾರಾದರೂ ಕಳ್ಳರು ಕಾಕರಿಗೆ ಸಿಕ್ಕಿ ಬಿದ್ದಿದ್ದರೆ' ಎಂದು ಏನೇನೋ ಭಯವಾಯಿತು. ಯಾರಾದರೂ ಸಿಕ್ಕಿ ಮಾತಾಡುತ್ತಾ ನಿಂತಿರಬೇಕು ಎಂದುಕೊಳ್ಳುತ್ತಾ ತನ್ನೆಲ್ಲಾ ಕೆಲಸ ಮುಗಿಸಿಕೊಂಡರಾಯ್ತೆಂದು ತಲೆ ಬಾಚಿಕೊಂಡು ಸೀರೆ ಬದಲಾಯಿಸಿದಳು. ಆದರೂ ಸುರೇಂದ್ರನ ಪತ್ತೆ ಇಲ್ಲ. ಈಕೆಗೀಗ ಹೆದರಿಕೆಯಾಗತೊಡಗಿತು. ಪರಸ್ಥಳ ಇಲ್ಲಿ ತನಗ್ಯಾರೂ ಗೊತ್ತಿಲ್ಲ. ಗೆಸ್ಟ್‌ಹೌಸ್ ಆದರೂ ಊರಿನ ಕೊನೆಯಲ್ಲಿದೆ ಎಂದು ಚಿಂತಿಸುತ್ತಾ ಕುಳಿತಳು 'ಇವರ ಸ್ವಭಾವವೇ ಹೀಗೆ ನನಗೇನಾದೀತು, ಭಯವಾದೀತೆ, ಗಾಬರಿಯಾದೀತೆ, ಚಿಂತೆಯಾದೀತೆ, ಬೇಸ್ಸರವಾದೀತೆ ಎಂದು ಒಂದು ದಿನವೂ ಯೋಚಿಸುವುದಿಲ್ಲ. ತಮ್ಮ ಮನಸ್ಸಿಗೆ ಬಂದಂತೆ ಇದ್ದು ಬಿಡುತ್ತಾರೆ. ಎಲ್ಲದಕ್ಕೂ ನಾನು ಹೊಂದಿಕೊಂಡು ಹೋಗಬೇಕು. ಇವತ್ತೊಂದು ದಿನ ಅಡ್ಡಾಡಲು ಹೋಗದಿದ್ದರೆ ಏನಾಗುತ್ತಿತ್ತು' ಎನ್ನಿಸಿ ಸುರೇಂದ್ರ ಬಗ್ಗೆ ಸಿಟ್ಟೂ ಬಂದಿತು. ಹಾಗೆಯೇ ಹಿಂದೆ ಹೀಗೆ ತಾನು ತಲ್ಲಣಗೊಳ್ಳುವಂತೆ ಮಾಡಿದ ಅನೇಕ ಘಟನೆಗಳು ನೆನಪಿಗೆ ಬಂದವು.

ಒಮ್ಮೆ ಬಾಂಬೆಗೆ ಮನೆಯವರೆಲ್ಲಾ ಹೋಗಿದ್ದರು. ಅಲ್ಲಿಯ ಪ್ಲಾನಟೋರಿಯಂ, ಅಕ್ವೇರಿಯಂ, ಬೀಚ್ ಎಲ್ಲಾ ನೋಡಿಯಾಯ್ತು. ಸಮುದ್ರದ ಸಮೀಪ ಇನ್ನೂ ನಿಂತಿದ್ದರು. ಆಗಲೇ ಸಂಜೆಯಾಗಿತ್ತು. ದಟ್ಟವಾದ ಮೋಡಗಳು ಆಕಾಶದಲ್ಲಿ ಕವಿಯತೊಡಗಿದವು. ಕೂಡಲೇ ಶುಚಿ 'ಬೇಗ ವಾಪಾಸ್ಸು ಹೋಗಿ ಹೋಟೆಲ್

ಸೇರಿಕೊಂಡು ಬಿಡೋಣ. ಮಕ್ಕಳು ಮರಿಕಟ್ಕೊಂಡು ಮಳೇಲಿ ಸಿಕ್ಕಿಬಿದ್ರೆ ಪರಸ್ಥಳದಲ್ಲಿ ಪರದಾಡಬೇಕಾದೀತು' ಎಂದು ಅನೇಕ ವಿಧದಲ್ಲಿ ಹೇಳಿದರೂ 'ಮಳೆ ಬಂದ್ರೇನು ಆಕಾಶ ಕಳಚಿ ಬೀಳೋಲ್ಲ, ಮತ್ತೆ ಮತ್ತೆ ಬಾಂಬೆಗೆ ಬರೋಕಾಗುತ್ತೇನು. ಈ ದೃಶ್ಯ ಪುನಃ ಸಿಕ್ಕುತ್ತಾ? ಸಮುದ್ರ ನೋಡು ಸ್ವಲ್ಪ. ಈ ಸಂಜೆಯ ಲೈಟಿನ ಬೆಳಕಿನಲ್ಲಿ ದಟ್ಟಮೋಡಗಳ ಅಡಿಯಲ್ಲಿ ಎಂತಹ ರುದ್ರ ಸುಂದರವಾಗಿ ಕಾಣುತ್ತದೆ. ಕಣ್ಣು ಮುಂದೆ ಜಲರಾಶಿಯೇ ಇದ್ದರೂ ಅದನ್ನು ಸವಿಯುವ ಹೃದಯವಿಲ್ಲ. ನೀನು ತುಂಬಾ ಅರಸಿಕಳು' ಎನ್ನುತ್ತಾ ಸ್ಥಳ ಬಿಟ್ಟು ಕದಲಲಿಲ್ಲ. 'ಮಳೆ ಬಂದರೆ ಮಕ್ಕಳು ಮರಿಗಳ ಗತಿ ಏನು? ತಲೆ ಮೈ-ಕೈಯೆಲ್ಲಾ ತೋಯ್ದು ಯಾರಾದರೂ ಕಾಯಿಲೆ ಬಿದ್ದರೆ ; ಮಳೆ ಜೋರಾಗಿ, ಟ್ಯಾಕ್ಸಿಗಳೇ ದಾರಿಯಲ್ಲಿ ದೊರೆಯದಿದ್ದರೆ ಏನು ಮಾಡಬೇಕು. ಇದಾವುದನ್ನೂ ಯೋಚಿಸುವುದೇ ಇಲ್ಲವಲ್ಲ! ತನಗೆ ಅನ್ನಿಸಿದಂತೆಯೇ ಆಗಬೇಕು. ಅದು ಸರಿಯಲ್ಲದಿದ್ದರೂ ನಾನು ಅದರಂತೆಯೇ ನಡೆಯಬೇಕು' ಇಂತಹ ಸುರೇಂದ್ರನ ಸ್ವಭಾವದಿಂದ ತನಗೆಷ್ಟು ಬೇಜಾರಾಗುತ್ತಿತ್ತು. ಏನಾದರೂ ತೊಂದರೆಯಾದರೆ' ಎಂಬ ಆತಂಕದಲ್ಲಿ ಸುರೇಂದ್ರ ಹೇಳಿದ ಯಾವ ಸೊಬಗೂ ಸಮುದ್ರದಲ್ಲಿ ಆಕೆಗೆ ಕಾಣಿಸಲಿಲ್ಲ. ಉಳಿದ ಬಂಧುಗಳು ಆತಂಕಗೊಂಡಿದ್ದರೂ ಮಾತನಾಡಲಾರದೆ ಸುಮ್ಮನಿದ್ದರು. ನಿರೀಕ್ಷಿಸಿದಂತೆ ಮಳೆ ಭೋರೆಂದು ಶುರುವಾಗಿಯೇ ಬಿಟ್ಟಿತು. ಸಮುದ್ರದ ತಡಿಯಲ್ಲಿರುವ ಬಾಂಬೆಯಲ್ಲಿ ಮಳೆ ಬಂದರೆ ಕೇಳಬೇಕೆ? ಧಾರಾಕಾರವಾದ ಮಳೆಯಲ್ಲಿ ರಸ್ತೆ ತುಂಬಾ ಮೊಳಕಾಲುದ್ದ ನೀರು, ಟ್ಯಾಕ್ಸಿಗಾಗಿ, ರಸ್ತೆ ಕ್ರಾಸ್ ಮಾಡಿ ಹೋಗಲೂ ಸಹ ಆಗಲಿಲ್ಲ. ಅಬ್ಬಾ! ಆಗಿನ ಸ್ಥಿತಿ ನೆನಪಿಸಿಕೊಳ್ಳಬಾರದು. ಎಲ್ಲರೂ ತೊಯ್ದು ತಪ್ಪಡಿಯಾಗಿ ಮಕ್ಕಳೆಲ್ಲಾ ಅಳಹತ್ತಿದರು. ಎಲ್ಲೋ ಒಂದು ಚಾಟಿನ ಅಡಿಯಲ್ಲಿ ಮಳೆ ಕಡಿಮೆಯಾಗಿ ರಸ್ತೆಯಲ್ಲಿ ಹರಿವ ನೀರು ಕಡಿಮೆಯಾಗುವವರೆಗೂ ಮುದುಡಿಕೊಂಡು ನಿಲ್ಲಬೇಕಾಯ್ತು. ಆ ದಿನ ಊಟವೂ ಇಲ್ಲದೇ ಅವರಿಳಿದುಕೊಂಡಿದ್ದ ಹೋಟೆಲನ್ನು ಸೇರಿದಾಗ ಹೊತ್ತಾಗಲೇ ಬಹಳ ಮೀರಿತ್ತು.

ಮತ್ತೊಂದು ಸಾರಿ ಬೇಸಿಗೆಯ ಸಮಯ ಪ್ರವಾಸ ಹೊರಟಿದ್ದೆವು. ದಾರಿಯಲ್ಲಿ ಶೃಂಗೇರಿ ಸಿಕ್ಕಿತ್ತು. ಅಲ್ಲೆಲ್ಲಾ ನೋಡಿಕೊಂಡು ಮುಂದೆ ಹೋದರಾಯ್ತೆಂದು ಕಾರನ್ನು ನಿಲ್ಲಿಸಿ ದೇವಸ್ಥಾನಕ್ಕೆ ಹೋದೆವು. ನಂತರ ನದಿಯ ಈ ದಡದಿಂದ ಕಟ್ಟಿಗೆಯ ಪಟ್ಟಿಗಳಿಂದ ಮಾಡಿದ ಸೇತುವೆಯ ಮೇಲಿಂದ ಆ ದಡದವರೆಗೆ ಹೋಗಿ ಶೃಂಗೇರಿಯ ಗುರುಗಳ ಮಠ ಮತ್ತು ವನವನ್ನೆಲ್ಲಾ ನೋಡಬೇಕೆಂದು ಹೊರಟೆವು. ಬೇಸಿಗೆಯಾದುದರಿಂದ ನದಿ ಬಹಳಷ್ಟು ತುಂಬಿರದಿದ್ದರೂ ಆಳವಾಗಿಯೇ ಹರಿಯುತ್ತಿತ್ತು. ಜೊತೆಯಲ್ಲಿ ಬಂದಿದ್ದ ಸುರೇಂದ್ರನ ತಮ್ಮ ಗಿರೀಶ,

ತನ್ನ ಅಕ್ಕನ ಮಗ ಹರೀಶ, ತಮ್ಮನ ಮಗ ಸತೀಶನಿಗೆ ನೀರು ಕಂಡಿದ್ದೇ ಈಜುವ ಆಸೆಯಾಯಿತು. ಅವರುಗಳು ಸುರೇಂದ್ರನನ್ನು ಒಪ್ಪಿಗೆಗಾಗಿ ಕೇಳಿದರು. ಅಪಾಯದ ಬಗ್ಗೆ ಯೋಚಿಸುವ ಸ್ವಭಾವವೇ ಇಲ್ಲದ ಸುರೇಂದ್ರ 'ಹೂಂ' ಎನ್ನಲು ತಡವೇ ಆಗಲಿಲ್ಲ. ಮೊದಲೇ ಹುಡುಗರು ಕೇಳಬೇಕೆ?' ಒಬ್ಬೊಬ್ಬರೇ ಮೇಲಿನ ಬಟ್ಟೆಯನ್ನು ಕಳಚಿ ಸೇತುವೆಯ ಮೇಲಿನಿಂದ ಬಂದು ನೀರಿಗೆ ಧುಮುಕಿದರು. ಧುಮುಕಿದವರು ನೀರಿನ ಒಳಗೆ ಹೋಗಿ ಮೇಲೆ ಬರುವವರೆಗೆ ನನ್ನ ಹೃದಯದಲ್ಲಿ ಢಡಬಡ. ಮೇಲೆ ಬಂದವರು ದಡದವರೆಗೂ ಈಜಿ ಮತ್ತೆ ಸೇತುವೆಯ ಮೇಲೆ ಬಂದು ಪುನಃ ಧುಮುಕುತ್ತಿದ್ದರು. ಹುಡುಗರು ಎಷ್ಟು ಹೇಳಿದರೂ ಕೇಳಲಿಲ್ಲ. ಅವರು ಮೇಲಿನಿಂದ ಧುಮುಕಿದಂತೆ ನನ್ನ ಹೃದಯದಲ್ಲಿ "ಢಂ' ಎಂದಂತಾಗುತ್ತಿತ್ತು. ಗಾಬರಿಯಿಂದ ನಾನು ಪರದಾಡುತ್ತಿದ್ದರೆ ಸುರೇಂದ್ರ ಭಲೇ ಎಂದು ಮೆಚ್ಚುತ್ತಾ ಹುಡುಗರನ್ನು ಹುರಿದುಂಬಿಸುತ್ತಿದ್ದಾಗ ನನಗೆ ಜೀವವೇ ಬಾಯಿಗೆ ಬಂದಂತಾಗುತ್ತಿತ್ತು. ಕೊನೆಗೆ ತಡೆದುಕೊಳ್ಳಲಾರದೆ 'ಕರೀರೀ ಹುಡುಗರನ್ನ! ಎಂಥಾ ನೀರೋ ಏನೋ, ಗೊತ್ತಿಲ್ಲದ ಜಾಗದಲ್ಲಿ ಈಜಾಡೋದು ಅಪಾಯ. ಎಲ್ಲಾದ್ರೂ ಏನಾದ್ರೂ ಅನಾಹುತ ಆದ್ರೆ ಗತಿ ಏನು' ಎಂದು ಒದ್ದಾಡಿಕೊಂಡು ಹೇಳಿದಾಗ 'ನಿನ್ನಂತಹವಳಿದ್ರೆ ಹುಡುಗರು ಪುಕ್ಕಲುತನ ಕಲಿತುಬಿಡ್ತಾರೆ. ಇಲ್ಲೇನ್ ಭಯ? ಸಾವಿರಾರು ಜನ ಓಡಾಡೋ ಸ್ಥಳ' ಎಂದು ನಕ್ಕಾಡಿಬಿಟ್ಟರು. 'ಸಾವಿರಾರು ಜನ ಓಡಾಡಿದ್ರೆ ಈಜಾಡ್ಲಿಕ್ಕೆ ಸರಿಯಾದ ಸ್ಥಳವೋ ಅಲ್ವೋ ಯಾರಿಗ್ಗೊತ್ತು? ಹುಡುಗರಿಗಂತೂ ತಿಳ್ಯೋಲ್ಲ, ನೀವು ಇದಕ್ಕೆಲ್ಲಾ ಪ್ರೋತ್ಸಾಹಿಸೋದೆ' ಎಂದಾಗ' ನೀನ್ಯಾವಾಗ್ಲೂ ಹೀಗೆ ಎಲ್ಲದಕ್ಕೂ ಅಡ್ಡಿ. ನಿನ್ನ ಹೆಸರನ್ನ ಶುಚಿ ಅನ್ನೊಬದ್ಲು ಕೊಕ್ಕೆ ಅಂತ್ಲಾದ್ರೂ ಇಟ್ಟುಕೊಳ್ಳಬೇಕಾಗಿತ್ತು. ಅಂತ ನಕ್ಕಾಗ, ದಿಕ್ಕೇ ತೋಚದೆ ತೆಪ್ಪಗಾದೆ. ಆದರೆ ಗಾಬರಿಯಿಂದ ದೇಹವೆಲ್ಲಾ ಕಂಪಿಸುತ್ತಿತ್ತು. ನಿರುಪಾಯಳಾಗಿ ನಿಂತಿದ್ದೆ. ಆಗ ಸಾಕ್ಷಾತ್ ಶಾರದದೇವಿಯೇ ಕಳಿಸಿದಂತೆ ಒಬ್ಬ ವಯಸ್ಸಾದ ಬ್ರಾಹ್ಮಣರು ಮಠದ ಕಡೆಯಿಂದ ಬಂದರು. ಈ ಹುಡುಗರು ನೀರಲ್ಲಿ ಧುಮುಕುವುದನ್ನೂ ಈಜುವುದನ್ನೂ ನೋಡಿ 'ಯಾರೋ ಪರಸ್ಥಳದವರು ಬಂದಿದ್ದೀರಿ. ಸುಖವಾಗಿ ವಾಪಸ್ಸು ಹೋಗಿ, ಇಲ್ಲೆಲ್ಲಾ ಮಕ್ಳನ್ನ ಈಜೋಕೆ ಯಾಕ್ಬಿಟ್ಟೀರಿ? ಮೇಲೆ ನೀರು ಶಾಂತವಾಗಿದೆ. ಆದರೆ ಕೆಲವು ಕಡೆ, ಆಳದಲ್ಲಿ ಸುಳಿಗಳಿವೆ. ಆ ಸುಳಿಗೆ ಹೋಗಿ ಸಿಕ್ಕಿಕೊಂಡರೆ ಮುಳುಗಿದವರು ಮೇಲೇಳುವುದೇ ಇಲ್ಲ' ಎಂದರು. ಇದನ್ನು ಕೇಳಿದ ನನಗೆ ಉಳಿದಿದ್ದ ಸ್ವಲ್ಪ ಧೈರ್ಯವೂ ಉಡುಗಿಹೋಯ್ತು. ಓಡಿಹೋಗಿ ಸುರೇಂದ್ರನಿಗೆ ವಿಷಯ ತಿಳಿಸಿದಾಗ ದೇವರ ದಯೆಯಿಂದ ಅಲಕ್ಷ್ಯ ಮಾಡದೇ ಕೂಡಲೇ ಹುಡುಗರನ್ನು ಕರೆದರು. ಪುಣ್ಯಕ್ಕೆ ಯಾವ ಅಪಾಯವೂ ಇಲ್ಲದೇ ಊರು ಸೇರಿದೆವು.

ಸತೀಶ ಚಿಕ್ಕವನಿದ್ದಾಗೊಮ್ಮೆ ಇವರು ಕೃಷ್ಣಾ ಪ್ರಾಜೆಕ್ಟಿನಲ್ಲಿ ಕೆಲಸ ಮಾಡುತ್ತಿದ್ದರು. ಅಲ್ಲಿಂದ ಕೂಡಲಸಂಗಮ, ಶಿವಯೋಗಮಂದಿರ ಇವೆಲ್ಲಾ ತುಂಬಾ ಹತ್ತಿರ. ಒಂದು ಭಾನುವಾರ ಅವೆಲ್ಲಾ ನೋಡಿಕೊಂಡು ಬರೋಣವೆಂದು ಹೋದೆವು. ಶಿವಯೋಗಮಂದಿರ ತುಂಬಾ ಶಾಂತ ಸುಂದರ ಸ್ಥಳ. ಪಕ್ಕದಲ್ಲೇ ಮಲಪ್ರಭೆ ಆಳವಾಗಿ, ಅಗಲವಾಗಿ, ಶಾಂತವಾಗಿ ಹರಿಯುತ್ತಾಳೆ. ಅಲ್ಲಿಯ ಸುಂದರ ನಯನಮನೋಹರ ಪರಿಸರದಲ್ಲಿ ಮನಸ್ಸೆಲ್ಲಾ ಆನಂದಮಯ. ಅಲ್ಲಿಯ ವಟುಗಳು, ಗುರುಗಳು – ಯೋಗಶಾಲೆ, ಲೈಬ್ರರಿ, ಗೋಶಾಲೆ, ವಿಭೂತಿ ಕಾರ್ಖಾನೆ, ಪ್ರಸಾದ ನಿಲಯ, ಸಂಸ್ಕೃತ ಪಾಠಶಾಲೆ, ಹೈಸ್ಕೂಲ್ ಮುಂತಾದವುಗಳನ್ನೆಲ್ಲಾ ತೋರಿಸಿದರು. 'ಪ್ರಸಾದ ಇಷ್ಟರಲ್ಲೇ ಸಿದ್ಧವಾಗುತ್ತದೆ ತೆಗೆದುಕೊಂಡು ಹೋಗಿ' ಎಂದು ಶ್ರೀಗಳು ಆದರದಿಂದ ಆಹ್ವಾನಿಸಿದರು. ಸ್ವಲ್ಪ ಹಾಗೇ ಸುತ್ತಾಡಿಕೊಂಡು ಬಂದರಾಯ್ತೆಂದು ನಾವು ಮೂವರೂ ಹೊರಗೆ ಬಂದೆವು. ನದಿಯ ದಡದಲ್ಲಿ ನಿಂತು ತುಂಬಿದ ನದಿಯನ್ನು ನೋಡುತ್ತಾ ನಿಂತಿದ್ದೆವು. ತಂದೆ ಮಗ ಇಬ್ಬರಿಗೂ ಆ ನದಿಯಲ್ಲಿ ಈಜುವ ಆಸೆ ಹುಟ್ಟಿತು. ಉಡುಪು ತೆಗೆಯಲು ಸಿದ್ಧರಾದರು. ಹುಡುಗನಿನ್ನೂ ಚಿಕ್ಕವನು. ಈಜಲು ಸರಿಯಾಗಿ ಬಾರದು. ಇಂತಹ ತುಂಬಿದ ನದಿಗೆ ಇಳಿಯುವುದೇ? ಎದೆ ಝಲ್ಲೆಂದಿತು. 'ಇದೇನ್ರೀ ಹುಡುಗಾಟ, ನದಿ ತುಂಬಿ ಹರಿಯುತ್ತಿದೆ. ಚಿಕ್ಕ ಹುಡುಗ. ಏನು ಕೆಲಸ ಮಾಡುತ್ತೀರಿ' ಎಂದೆ ಗಾಬರಿಯಾಗಿ.

'ನಾನೂ ಜೊತೆಗಿರ್ತೀನಲ್ಲ. ಇದೇನು ಮಹಾ. ಇದಕ್ಕಿಂತ ದೊಡ್ಡ ನದಿಗಳಲ್ಲಿ ಈಜಿದ್ದೇನೆ. ನೀನು ಈಜು ಕಲಿತ್ತಿದ್ರೆ ಅದ್ರ ಮಜಾ ಅರ್ಥ ಆಗ್ತಿತ್ತು. ಹೆದರ್ಬೇನೂ ಇಲ್ಲಿಲ್ಲ' ಎಂದದ್ದೇ, ತಂದೆ–ಮಗ ಇಬ್ಬರೂ ನೀರಿನಲ್ಲಿ ಜಿಗಿದರು. ನಾನು ಅಸಹಾಯಕಳಂತೆ ದಿಗ್ಭ್ರಾಂತಳಾಗಿ ದಿಕ್ಕುಕಾಣದೇ ನಿಂತಾಗ ಭಯದಿಂದ ಬಾಯಲ್ಲಿನ ದ್ರವವೆಲ್ಲಾ ಒಣಗಿ ನಾಲಿಗೆ ತುಟಿಗಳು ಕಟ್ಟಿಗೆಯಂತಾಗಿದ್ದುವು. ಹೊಟ್ಟೆಯಲ್ಲೆಲ್ಲಾ ತಳಮಳವಾಗುತ್ತಿತ್ತು. ಅವರುಗಳು ಇಲ್ಲಿ ಮುಳುಗಿ ಮುಂದೆ ಎಷ್ಟೋ ದೂರದಲ್ಲಿ ಮೇಲೇಳುತ್ತಿದ್ದರು. ಅಲ್ಲಿಯವರೆಗೂ ನನಗೆ ಉಸಿರಾಡಲೂ ಸಹ ಆಗುತ್ತಿರಲಿಲ್ಲ. ಮುಳುಗಿದಾಗ ಬಿಗಿ ಹಿಡಿದುಕೊಂಡಿದ್ದ ಉಸಿರನ್ನು ಅವರು ತಲೆ ಮೇಲೆತ್ತಿದ ನಂತರವೇ ಬಿಡುತ್ತಿದ್ದೆ. ಎದೆ ದಡಗುಡುತ್ತಿತ್ತು. ದಡದ ಮೇಲೆ ನಿಂತುಕೊಂಡು ತಾನೆಷ್ಟು ಕೂಗಿಕೊಂಡರೂ ಕಿವಿಗೊಡಲಿಲ್ಲ. ಅಷ್ಟರಲ್ಲಿ ಮಂದಿರದಿಂದೊಬ್ಬರು ಸ್ವಾಮಿಗಳು ಹೊರಗೆ ಬಂದು 'ಸಾಹೇಬರೆಲ್ಲಿ' ಎಂದು 'ಅಲ್ಲಿ ನೀರಲ್ಲಿ ಈಜಾಡುತ್ತಿದ್ದಾರೆ' ಎಂದೆ ಆರ್ತಳಾಗಿ. ಆಗ ಕೂಡಲೇ ಸ್ವಾಮಿಗಳು ದಡಕ್ಕೆ ಹೋಗಿ ಕೈಬೀಸಿ ತಕ್ಷಣವೇ ಬರಬೇಕೆಂದು ಗಾಬರಿಯ ಮುಖಮಾಡಿ ಸಂಜ್ಞೆ ಮಾಡಿದರು. ಪುಣ್ಯಕ್ಕೆ ತಂದೆ ಮಕ್ಕಳಿಬ್ಬರೂ ಈಜಿ ದಡ ಸೇರಿದಾಗ ಮನಸ್ಸಿಗೆ ನಿರಾಳವೆನ್ನಿಸಿತು. ಆಗ ಸ್ವಾಮಿಗಳು 'ಏನು ಸಾಹೇಬ್ರೆ, ನೀರಿನ ಬಗ್ಗೆ

ತಿಳಿದುಕೊಳ್ಳದೇ ಕಾಣದ ಜಾಗದಲ್ಲಿ ನೀರಿಗಿಳೀಬಾರ್ದು. ಇಲ್ಲೆಲ್ಲಾ ಮೊಸಳೆಗಳಿವೆ. ಪುಣ್ಯ ಚೆನ್ನಾಗಿತ್ತು' ಎಂದರು.

ಹೀಗೆ ಶುಚಿಗೆ ಹಿಂದಿನ ಅನೇಕ ಘಟನೆಗಳು ಸರಮಾಲೆಯಂತೆ ಒಂದರ ಹಿಂದೊಂದು ನೆನಪಿಗೆ ಬಂದುವು. ನೆನಪಿನ ಸುರುಳಿ ಬಿಚ್ಚಿದಂತೆ ಗಾಬರಿ ಹೆಚ್ಚಾಗುತ್ತಿತ್ತು. ಇಲ್ಲಿಯೂ ಎಲ್ಲಾದರೂ ನದಿಗೆ ಇಳಿದಿದ್ದರೆ? ಪ್ರವಾಹ ಜೋರಾಗಿದ್ದಿದ್ದರೆ? ಯೋಚಿಸಿದಂತೆ ಭಯದಿಂದ ದೇಹವೆಲ್ಲಾ ಕಂಪಿಸತೊಡಗಿತು. ಪರಸ್ಥಳದಲ್ಲಿ ನಾನೊಬ್ಬಳೇ ಕುಳಿತುಕೊಂಡು ಏನು ಮಾಡಲಿ? ಯಾರಿಗೆ ಹೇಳಲಿ, ಎಲ್ಲಿಗೆ ಹೋಗಲಿ, ಎಂದು ಗಾಬರಿಯಾಯಿತು. ಅರ್ಧ ಗಂಟೆಯಲ್ಲಿ ಬರುತ್ತೇವೆಂದಿದ್ದರು. ಎರಡು ತಾಸಾದರೂ ಬರಲಿಲ್ಲವೆಂದ ಮೇಲೆ ಏನು ಅಪಾಯವಾಗಿದೆಯೇ ಏನೋ ಎಂದು ತಳಮಳಿಸುತ್ತಿದ್ದಂತೆಯೇ ಬಾಗಿಲು ಬಡಿದ ಶಬ್ದವಾಯಿತು. 'ಬಾಗಿಲು ತೆಗಿ' ಎಂಬ ಪರಿಚಿತ ಧ್ವನಿಯಿಂದ ಇಷ್ಟರವರೆಗಿನ ಕುದಿಯೆಲ್ಲಾ ಆರಿ ತಣ್ಣಗಾಯ್ತು.

'ಎಷ್ಟು ಹೊತ್ತು ಹೋಗಿ ಬಿಟ್ರಿ? ಇಲ್ಲಿ ನಾನೊಬ್ಬೆ ಎಷ್ಟು ಗಾಬರಿಯಾಗಿತ್ತು.'

'ನಿನಗೆ ಎಲ್ಲದಕ್ಕೂ ಗಾಬ್ರೀನೆ. ಗಾಬ್ರಿ ಪಡೋಕೇ ಹುಟ್ಟಿದ್ದಿ. ಹಾಗೇ ಅಡ್ಡಾಡ್ತಾ ಊರ ಹೊರಗೆ ಹೋಗ್ತಿದ್ದೆ. ಅಲ್ಲಿ ಒಂದುಕಡೆ 'ಆನಂದಾಶ್ರಮಕ್ಕೆ ದಾರಿ' ಅಂತ ಒಂದು ಬೋರ್ಡಿತ್ತು. ಕುತೂಹಲದಿಂದ ಆ ದಾರಿಯಲ್ಲೇ ಹೋದೆ. ಒಂದು ಆಶ್ರಮವಿತ್ತು. ಅಲ್ಲಿಯೊಬ್ಬರು ಯೋಗಿಗಳಿದ್ದರು. ಅವರನ್ನು ನೋಡಿ ನಾನೇ ಪರಿಚಯ ಮಾಡಿಕೊಂಡೆ. ತುಂಬಾ ಜ್ಞಾನಿಗಳು. ಅವರೊಡನೆ ಮಾತಾಡ್ತಾ ಆಡ್ತಾ ಹೊತ್ತು ಹೋಗಿದ್ದೇ ಗೊತ್ತಾಗಲಿಲ್ಲ. ಈಗ ಟೈಂ ನೋಡ್ಕೊಂಡವ್ನೆ ಗಡಬಡಿಸಿ ಬಂದೆ' ಎಂದ ಸುರೇಂದ್ರ.

'ಬೇಗ ಸ್ನಾನ ಮಾಡಿ ತಯಾರಾಗ್ರೀ, ಇಂಜಿನಿಯರರು ಇಷ್ಟರಲ್ಲೇ ಬರಬಹುದು' ಎಂದಾಗ, ಸುರೇಂದ್ರ ಶೇವ್, ಸ್ನಾನ ಮುಗಿಸಿ ರೆಡಿಯಾದ. ಅಷ್ಟರಲ್ಲಿ ಇಂಜನಿಯರ್ ಅರವಿಂದ ಬರಲು ಎಲ್ಲರೂ ಹೊರಟರು. 'ಆನಂದಾಶ್ರಮಕ್ಕೆ ದಾರಿ' ಎಂಬ ಬೋರ್ಡ್ ಬಂದಾಗ ಡ್ರೈವರ್‌ಗೆ ಆ ಕಡೆ ತಿರುಗಿಸಲು ಸುರೇಂದ್ರ ಹೇಳಿದರು.

'ಈಗಲ್ಲಿಗೆ ಯಾಕೆ? ಫಾಲ್ಸ್‌ಗೆ ಹೋಗೋದು ಬಿಟ್ಟು ಆಮೇಲೆ ಪ್ರೋಗ್ರಾಮ್ ಎಲ್ಲಾ ತಲೆಕೆಳಗಾಗಿ ಬಿಡುತ್ತೆ. ನೀವು ಹೇಗೂ ನೋಡಿದ್ದೀರಲ್ಲ. ನನಗೇನು ಹೋಗೋ ಇಷ್ಟ ಇಲ್ಲ.'

'ಹೋದ್ಮೇಲೆ ಇಷ್ಟ ಪಡ್ತೀಯ. ನೋಡ್ಲೇ ಬೇಕಾದಂತಹ ವ್ಯಕ್ತಿ. ಮತ್ತೆ

ನೋಡ್ಬೇಕೊಂದ್ರೆ ಆಗುತ್ತಾ? ನಿನಗಾಗೇ ಈಗ ಹೋಗ್ತಿರೋದು. ನಾನಾಗ್ಲೇ ನೋಡಿದ್ದೀನಿ' ಎನ್ನುತ್ತಾ ನನ್ನ ಇಷ್ಟ-ಅನಿಷ್ಟಗಳ ಬಗ್ಗೆ ಯೋಚಿಸದೇ ಆಶ್ರಮದ ಕಡೆಗೇ ಹೋಗಲು ಡ್ರೈವರ್‌ಗೆ ಹೇಳಿದರು. ಆಶ್ರಮದ ಹತ್ತಿ ಕಾರು ನಿಂತಾಗ ಚಪ್ಪಲಿಗಳನ್ನು ಕಾರಲ್ಲೇ ಬಿಟ್ಟು ಒಳಗೆ ಹೋದೆವು. ಶುಭ್ರವಾದ ಬಿಳಿಯ ಪಂಚೆ ಮತ್ತು ಕಸೆಯ ಅಂಗಿಯನ್ನು ತೊಟ್ಟಿದ್ದ, ಬೋಳು ತಲೆಯ, ಮಗುವಿನ ಮಂದಹಾಸವನ್ನೊಳಗೊಂಡ ವೃದ್ಧರೊಬ್ಬರು ಬಾಗಿಲಲ್ಲಿ ಕಾಣಿಸಿದರು.

'ಸ್ವಾಮಿಗಳು ಒಳಗಿದ್ದಾರೇನೋ' ಎಂದಳು ಶುಚಿ.

'ಒಳಗಿಲ್ಲ, ಇಲ್ಲಿ ನಿಂತಿರುವವರೇ ಅವರು' ಎಂದ ಸುರೇಂದ್ರ

'ಕಾವಿ ಹಾಕಿಲ್ಲ, ಎಲ್ಲರಂತೆ ಬಿಳಿ ಪಂಚೆ, ಬಿಳಿ ಅಂಗಿ ಹಾಕಿದ್ದಾರೆ.'

'ಇವರು ಕಾವಿ ಹಾಕದೇ ಕಾವಿ ಹಾಕಿದವರಿಗಿಂತ ಮಿಗಿಲಾಗಿ ಬಾಳುತ್ತಿರುವ ಸತ್ಪುರುಷರು. ಅವರ ಶುಭ್ರವಾದ ಬಟ್ಟೆ ಪರಿಶುದ್ಧವಾದ ನಗುವಿಗಿಂತಲೂ ಶುದ್ಧವಾದ ಮನಸ್ಸು ಇವರದ್ದು. ಇವರೇನು ಮಠದ ಸ್ವಾಮಿಗಳಲ್ಲ. ಸಂಸಾರಿಗಳಾಗಿದ್ದವರು. ಇಂದು ಸನ್ಯಾಸಿಗಳಂತೆ ಬದುಕುತ್ತಿದ್ದಾರೆ. ಸನ್ಯಾಸಿಯಷ್ಟೇ ಅಲ್ಲ, ಶಿವಯೋಗಿಗಳು ಆಗಿದ್ದಾರೆ' ಎಂದು ಸುರೇಂದ್ರ ಎನ್ನುವ ಹೊತ್ತಿಗೆ ಯೋಗಿಗಳ ದೃಷ್ಟಿ ನಮ್ಮ ಮೇಲೆ ಬಿತ್ತು. ಎಲ್ಲರೂ ಹೋಗಿ ನಮಸ್ಕರಿಸಿದೆವು. ಶಿವಯೋಗಿಗಳು ಒಳಗೆ ಹೋಗಿ ತಮ್ಮ ಆಸನದಲ್ಲಿ ಕುಳಿತರು. ನಾವೂ ಹಿಂದೆಯೇ ಹೋದೆವು.

ನಮ್ಮ ಪರಿಚಯವನ್ನು ಒಬ್ಬರಿಗೊಬ್ಬರು ಮಾಡಿಕೊಂಡೆವು.

'ಶಿವಾ ನಿಮ್ಗೆ ಒಳ್ಳೆಯದು ಮಾಡಲಿ' ಎಂದು ತುಂಬು ಹೃದಯದಿಂದ ಮಮತೆಯ ವಾಣಿಯಲ್ಲಿ ಹರಸಿದರು.

'ತಮ್ಮ ದರ್ಶನವಾದದ್ದು ನಮ್ಮ ಪುಣ್ಯಾನ್ರಪ್ಪಾ. ನಾನಾಗಲೇ ಬಂದಿದ್ದೆ. ಈಕೆ ನನ್ನ ಪತ್ನಿ. ಇವರುಗಳು ನನ್ನ ಸ್ನೇಹಿತರು. ನಾನು ಈ ಕಾಲುವೆಯ ಉದ್ಘಾಟನೆಗೆ ಬಂದಿದ್ದೆ' ಎಂದು ನಮ್ಮವರು ಪುನಃ ಹೇಳಿ' ತಮ್ಮಂತಹ ಸತ್ಪುರುಷರಿಂದ ನಮ್ಮ ಸಮಾಜ ಉದ್ಧಾರ ಆಗಬೇಕು' ಎಂದಾಗ,

ನಾವು ಮಾನವರು ಏನು ಮಾಡಿಯೇವ್ರಪ್ಪಾ! ಎಲ್ಲಾ ಭಗವಂತನ ಇಚ್ಛಾ. ಮನುಷ್ಯ ಪಂಚೇಂದ್ರಿಯಗಳಿಗೆ ಬಲಿಯಾಗದೇ ಶುದ್ಧ ಜೀವನದಿಂದ ತನ್ನ ಕರ್ತವ್ಯ ನಿರ್ವಹಿಸಬೇಕು. ಬರುಬರತ್ತಾ ಈ ಭವದ ಜಂಜಾಟಗಳನ್ನು ಕಡಿಮೆ ಮಾಡಿಕೊಳ್ಳುತ್ತಾ ಮೇಲೆ ಏರಬೇಕು. ಏರುತ್ತಾ ಏರುತ್ತಾ ಪಾಪ ಪುಣ್ಯಗಳನ್ನು ಅರ್ಥಮಾಡಿಕೊಂಡು ಪುಣ್ಯಜೀವಿಯಾಗಿ ಬದುಕಬೇಕು. ದೇಹ ನಶ್ವರ. ಈ ದೇಹ ದಿವ್ಯಾತ್ಮನಿಗೆ

ಒಂದು ಆವರಣ ಅಷ್ಟೇ. ಅದಕ್ಕಾಗಿ ಮನುಷ್ಯ ಬಹಳ ತಹ-ತಹ ಪಡಬಾರದು. ಆತ್ಮ ಈ ದೇಹದಲ್ಲಿರುವವರೆಗೆ ದೇಹವನ್ನು ರಕ್ಷಿಸಿಕೊಳ್ಳಬೇಕು. ದೇಹದ ಸಹಾಯದಿಂದಲೇ ಆತ್ಮ, ಸತ್ಕರ್ಮಗಳನ್ನು ಮಾಡಲು ಸಾಧ್ಯ. ಆದರೆ ಕರ್ಮ ಮಾಡುವುದರಲ್ಲೇ ಜೀವಿ ಮಗ್ನನಾಗಿರಬಾರದು. ಇದನ್ನು ದಾಟಿ ಮೇಲಕ್ಕೇರುವ ಪ್ರಯತ್ನ ಜೊತೆಯಲ್ಲೇ ಸಾಗಬೇಕು. ನಾವು ಮಾಡುವ ಕೆಲಸವೆಲ್ಲ ಭಗವದರ್ಪಿತ ಎಂದು ಮಾಡುತ್ತಾ ಜಗತ್ತೆಲ್ಲಾ ಭಗವಂತ ಎಂಬ ಅರಿವಿಗೆ ಬರಬೇಕು. ಅಂತಹ ಅರಿವಿನಲ್ಲಿ ತಾನೂ ಜಗತ್ತಿನ ಒಂದಂಶ ಎಂಬ ನಿಲುವಿಗೆ ನಿಲ್ಲಬೇಕು. ಆಗ ನಾನೂ ಭಗವಂತನ ಅಂಶ ಎಂಬ ಅರಿವುಂಟಾಗುತ್ತದೆ. ಆಗ ಆ ಅರಿವೇ ಮಾನವನ ಗುರುವಾಗಿ ಅವನ ಕೈಹಿಡಿದು ಮುನ್ನಡೆಸುತ್ತದೆ. ಈ ಅರಿವಿನಮಟ್ಟ ಎತ್ತರಕ್ಕೆ ಏರಿದಂತೆ ಮಾನವ ಭಕ್ತನ ಮಟ್ಟದಿಂದ ಶರಣನ ಮಟ್ಟಕ್ಕೆ ಏರುತ್ತಾನೆ. ಜೀವನದಲ್ಲಿ ಎಲ್ಲವನ್ನೂ ತಿಳಿದುಕೊಂಡರೂ, ನಂಬಿದರೂ ಅದರಂತೆ ಸಾಧನೆ ಮಾಡುವುದು ಕಷ್ಟ. ಲಕ್ಷಕ್ಕೊಬ್ಬ ನಿಜವಾದ ಭಕ್ತನಿರಬಹುದು. ಲಕ್ಷಕ್ಕೊಬ್ಬ ಭಕ್ತನಾದರೆ ಕೋಟಿಗೊಬ್ಬ ಶರಣ ಎಂದು ಬಸವಾದಿ ಶರಣರು ಹೇಳಿದ್ದಾರೆ' ಎನ್ನುತ್ತಾ ಎಲ್ಲರೂ ಶರಣರಾದರೆ ಭವಕ್ಕೆ ಬೀಜವೆಲ್ಲಿಯದೋ ಎಂಬ ವಚನವನ್ನು ಸುಶ್ರಾವ್ಯವಾಗಿ ಹಾಡಿ ತಿಳಿಯಪಡಿಸಿದರು. ಆ ಸತ್ಪುರುಷರು ಹೇಳುತ್ತಿದ್ದ ದಿವ್ಯವಾಣಿಯನ್ನು ಕೇಳುತ್ತಿದ್ದ ನಾವು ಮಂತ್ರ ಮುಗ್ಧರಾಗಿದ್ದೆವು. ಅವರ ಅವಿರಳ ಜ್ಞಾನದಿಂದ ನಮ್ಮ ಹೃದಯಗಳು ಆನಂದ ಸಾಗರದಲ್ಲಿ ಓಲಾಡುತ್ತಿದ್ದವು. ಸ್ವಾಮಿಗಳು ಇಷ್ಟೆಲ್ಲಾ ಹೇಳುತ್ತಿದ್ದಾಗ ನಾವೆಲ್ಲಾ ನಿಂತೇ ಇದ್ದರೂ ನಮಗೆ ಅದರ ಅರಿವೇ ಇಲ್ಲದಷ್ಟು ತನ್ಮಯರಾಗಿದ್ದೆವು.

ಆಗ ನಾನು, 'ಇಷ್ಟೆಲ್ಲಾ ಸಾಧಿಸುವ ಗುರಿ ಏನಪ್ಪ' ಎಂದೆ ವಿನೀತಳಾಗಿ.

'ಈ ಭವಲೋಕ ಕಷ್ಟಕಾರ್ಪಣ್ಯಗಳಿಂದ ಪಾರಾಗುವುದೇ ಗುರಿ. ಈ ಆತ್ಮಕ್ಕೆ ಬಿಡುಗಡೆ ಎಂದರೆ ಈ ಭವಸಾಗರದಲ್ಲಿ ಹುಟ್ಟಿ ಇಲ್ಲಿಯ ಕಷ್ಟ-ಕಾರ್ಪಣ್ಯಗಳಲ್ಲಿ ನೋವು-ಸಂಕಟಗಳಲ್ಲಿ ಮುಳುಗಿ ಒದ್ದಾಡದ ಸ್ಥಿತಿಯನ್ನು ಮುಟ್ಟುವುದು.'

'ಅಂತಹ ಒಂದು ಸ್ಥಿತಿಗೆ ಬರಲು ಯಾವ ಮಾರ್ಗದಿಂದ ಸಾಧ್ಯ ಸ್ವಾಮೀಜಿ.'

'ಇದಕ್ಕೆ ಬಹಳ ಸಾಧನೆ ಬೇಕು ತಂಗಿ. ಮೊದಲು ಈ ಚಂಚಲ ಮನಸ್ಸನ್ನು ಹತೋಟಿಯಲ್ಲಿ ಇಟ್ಟುಕೊಳ್ಳಬೇಕು. ಪಂಚೇಂದ್ರಿಯಗಳಿಗೆ ದಾಸನಾಗದೇ ತನ್ನಲ್ಲೇ ಹುಟ್ಟುವ ಆಸೆ, ಆಮಿಷ, ಮದ, ಮೋಹ ಮಾತ್ಸರ್ಯಗಳನ್ನು ತನ್ನ ಮನಸ್ಸಿನಿಂದ ಹೊರ ಓಡಿಸಬೇಕು. ಓಡಿಸುವುದೊಂದೇ ಸಾಲದು. ಅವು ಪುನಃ ಬಂದು ಸೇರಿಕೊಳ್ಳದಂತೆ ಜಾಗೃತನಾಗಿರಬೇಕು. ಸತ್ಕಾರ್ಯನಿರತನಾಗಿರಬೇಕು. ಇವೆಲ್ಲಾ

ಶರಣತ್ವವನ್ನು ಮುಟ್ಟುವ ಮಾರ್ಗ. ಆದರೆ ಈ ಮಟ್ಟದಲ್ಲೂ ಮನುಷ್ಯ 'ಪುಣ್ಯ ಸಂಪಾದಿಸಿಕೊಳ್ಳಬೇಕು, ಮುಕ್ತಿ ಪಡೆಯಬೇಕು' ಎಂಬ ಆಸೆಯಲ್ಲಿರುತ್ತಾನೆ. ಶರಣ ಈ ಆಸೆಯನ್ನು ಗೆದ್ದವನು. ಅವನು ಪಾಪ ಪುಣ್ಯಗಳ ಭಾವನೆಯನ್ನು ದಾಟಬೇಕು. ಎಲ್ಲವೂ ಶಿವಮಯವಾಗಬೇಕು. ಶಿವನ ಹೊರತು ಇನ್ನೊಂದು ವಿಚಾರ ಅವನಲ್ಲಿ ಮೂಡಬಾರದು. ಚಿತ್ತಬರಿದಾಗಬೇಕು – ಆಗ ಅವನು ಶಿವನೊಳಗೊಂದಾಗಬಲ್ಲ. ಶಿವನೇ ತಾನಾಗಬಲ್ಲ ಶಿವನೇ ತಾನಾದವನಿಗೆ ಜಗದ ಹಂಗೆಲ್ಲಿ? ಹುಟ್ಟು-ಸಾವುಗಳ ಸುತ್ತಾಟವೆಲ್ಲಿ? ಶಿವನಂಶ ತಾನೆಂದುಕೊಂಡಿದ್ದವನು 'ಶಿವೋಹಂ' ಎನ್ನುವ ಹಂತಕ್ಕೆ ಬರುತ್ತಾನೆ. ಆ ಹಂತ ಮುಟ್ಟಲು ಚಿತ್ತ ಬರಿದಾಗಬೇಕು' ಎಂದಾಗ ನಾನು ಅನೇಕ ಬಾರಿ ಓದಿದ, ಕೇಳಿದ 'ಶೂನ್ಯ ಸಂಪಾದನೆ'ಯ ನಿಜವಾದ ಅರ್ಥ ಈಗ ವಿವರವಾಗಿ ಗೋಚರಿಸಹತ್ತಿತು. ಅನೇಕ ಬಾರಿ ಶೂನ್ಯ ಸಂಪಾದನೆಯ ಖಚಿತ ಅರ್ಥವೇನು' 'ಶೂನ್ಯವನ್ನು ಸಂಪಾದಿಸುವುದು ಏಕೆ? ಹೇಗೆ? ಅದರ ಗುರಿ ಏನು? ಎಂಬುದನ್ನು ನನ್ನಲ್ಲೇ ನಾನು ಅನೇಕ ಬಾರಿ ಪ್ರಶ್ನಿಸಿಕೊಂಡಿದ್ದೆ. ಉತ್ತರವನ್ನು ಪುಸ್ತಕದಲ್ಲಿ ಹುಡುಕದೇ ಮನಸ್ಸಿನಂಗಳದಲ್ಲಿಯೇ ತಡಕಾಡಿದ್ದೆ. ಅರ್ಥ ನಿಚ್ಚಳವಾಗಿರಲಿಲ್ಲ. ಇಂದು ಆ ಪ್ರಶ್ನೆಗೆ ನನಗೆ ಉತ್ತರ ದೊರೆತಂತೆನ್ನಿಸಿತು. ಇಂತಹ ಮಹಾತ್ಮರಿಗೆ ದಿವ್ಯ ಜ್ಞಾನದಿಂದ, ಹೃದಯದಲ್ಲೇ ವಿಚಾರ ಮಂಥನದಿಂದ ಸಾಮಾನ್ಯರಿಗೆ ಅರ್ಥವಾಗದ ಅಂಶಗಳು ಸ್ಪಷ್ಟವಾಗುತ್ತವೆ. ಇವರೇ ದೃಷ್ಟಾರರು. ಇಂತಹವರಿಂದಲೇ ಆಧ್ಯಾತ್ಮಕ್ಕೆ ಸಂಬಂಧಿಸಿದ ನಮ್ಮ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕೆನ್ನಿಸಿ,

ಅಲ್ರಪಾ, ವೀರಶೈವರಲ್ಲಿ ಪಂಚಾಚಾರ್ಯರು ಲಿಂಗದಲ್ಲಿ ಹುಟ್ಟಿದರು ಎಂಬ ಮಾತನ್ನು ಹೇಳುತ್ತಾರೆ. ಈ ಮಾತನ್ನು ವಿಜ್ಞಾನಯುಗದ ಆಧುನಿಕ ವಿದ್ಯಾವಂತರು ನಂಬಲಸಾಧ್ಯ. ಪ್ರಕೃತಿ ನಿಯಮದಂತೆ, ಜೀವಿ ತಾಯಿಯ ಗರ್ಭದಲ್ಲಿ ಭ್ರೂಣರೂಪ ತಾಳಿ ಅಲ್ಲಿಯೇ ವಿಕಸಿಸಿ ತನ್ನ ಪೂರ್ಣಾಕಾರ ಪಡೆದ ನಂತರ ಗರ್ಭದಿಂದ ನೂಕಲ್ಪಡುತ್ತಾನೆ. ಹೀಗಿರುವಾಗ ಪಂಚಾಚಾರ್ಯರನ್ನು ಲಿಂಗೋದ್ಭವರೆಂದು ಹೇಳುವುದು ಸರಿಯೇ? ಅನೇಕ ವಿದ್ವಾಂಸರು ಈ ಬಗ್ಗೆ ಸಂಶೋಧನೆ ಮಾಡಿ ಮೂಲ ಕಂಡು ಹಿಡಿಯಬೇಕೆನ್ನುತ್ತಾರೆ, ನಿಮ್ಮ ಅಭಿಪ್ರಾಯವೇನು?

'ತಂಗೀ, ಇದೆಲ್ಲಾ ಪಾಂಡಿತ್ಯದ ದೊಂಬರಾಟ. ನಿಮ್ಮ ಸಂಶೋಧನೆಯ ಹಿಡಿತಕ್ಕೆ ಸಿಗುವುದಿಲ್ಲ ಈ ವಿಷಯ. ಅದನ್ನು ದಾಟಿದ ಮಹತ್ವದ ಅಂಶಗಳು ಇದರಲ್ಲಿವೆ. ನೀವು ಶಬ್ದ ಶಬ್ದಕ್ಕೆ ಅರ್ಥವನ್ನು ಅರ್ಥಕೋಶದಲ್ಲಿ ಸಿಗುವಂತೆ ಕೇಳಿದರೆ ಆ ಅರ್ಥ ಇಲ್ಲಿ ತಪ್ಪಾಗುತ್ತದೆ. ಅನೇಕ ವಿಚಾರಗಳು ಸಾಮಾನ್ಯರಿಗೆ ಅರ್ಥವಾಗುವುದೇ ಇಲ್ಲ. ಅಂತಹವರು ಅಪಾರ್ಥ ಮಾಡಲೂ ಸಾಧ್ಯವಿದೆ.

ಅದಕ್ಕೋಸ್ಕರವೇ ಹೀಗೆ ಯಾರಾದರೂ ಅಪಾರ್ಥಮಾಡಿ ಅನರ್ಥ ಮಾಡಿಯಾರೆಂದು ತಿಳಿದವರು ಋಷಿಮೂಲ, ನದಿಮೂಲ ಕಂಡುಹಿಡಿಯಲು ಹೋಗಬಾರದು ಎನ್ನುತ್ತಾರೆ. ಅಗಸ್ತ್ಯರು 'ಕುಂಭೋದ್ಭವರು' ಎನ್ನುತ್ತಾರೆ. ಸೀತೆ ಭೂಮಿಯಲ್ಲಿ ಸಿಕ್ಕಿದಳು ಎಂಬ ನಂಬಿಕೆಯಿದೆ. ಇದನ್ನು ಸಂಶೋಧನೆಯ ಒರೆಗಲ್ಲಿಗೆ ಹಚ್ಚಿ ಅರ್ಥ ಮಾಡಿಕೊಂಡು ನೀವೇನು ಮಾಡುವವರಿದ್ದೀರಿ? ಅವರು ಹೇಗೆ ಬದುಕಿದರು. ಅವರ ಬದುಕಿನಿಂದ ಮಾನವ ಜನಾಂಗಕ್ಕಾದ ಉಪಕಾರವೇನು ಎಂದು ವಿಚಾರ ಮಾಡಿಕೊಂಡರೆ ಸಾಲದೇ? ಮೂಲವನ್ನು ಕೆದಕಿ ಅಲ್ಲಿಲ್ಲದ್ದನ್ನು ಹುಡುಕಿ, ಅಲ್ಲವಾದುದನ್ನು ಊಹಿಸಿ ಸಾಧಿಸಬೇಕಾದುದಾದರೂ ಏನು?'

'ಹಾಗಲ್ರಪ್ಪಾ ಇದು ವಿಜ್ಞಾನಯುಗ. ಕಾರ್ಯಕಾರಣವಿಲ್ಲದೇ ಆಧುನಿಕ ಮಾನವ ಏನನ್ನೂ ನಂಬುವುದಿಲ್ಲ. ನೀವು ಸೂಕ್ತ ವಿವರಣೆ ಕೊಡದಿದ್ದಲ್ಲಿ ದೇವರು, ಆಧ್ಯಾತ್ಮ ಸಾಧನೆ, ಸಾಕ್ಷಾತ್ಕಾರ ಇವುಗಳಲ್ಲಿ ಇಂದಿನ ಪೀಳಿಗೆಗೆ ನಂಬಿಕೆಯೇ ಇಲ್ಲವಾಗುತ್ತದೆ. ಇಂದಿನವರಗೆ ಎಲ್ಲಾ ವಿಷಯಗಳನ್ನೂ ದೂರದಲ್ಲಿದ್ದವರನ್ನು ಟಿ.ವಿ. ಮೂಲಕ ಹೇಗೆ ನೋಡಲು ಸಾಧ್ಯ. ದೂರದಲ್ಲಿ ಮಾತನಾಡುವುದನ್ನು ಹೇಗೆ ಕೇಳಲು ಸಾಧ್ಯ. ಅಷ್ಟೊಂದು ಭಾರವನ್ನು ಹೊತ್ತುಕೊಂಡು ವಿಮಾನ ಹಕ್ಕಿಯಂತೆ ಆಕಾಶದಲ್ಲಿ ಹಾರಲು ಹೇಗೆ ಸಾಧ್ಯವಾಗುತ್ತೆ. ಒಂದು ಸಣ್ಣ ಊರಿನಂತಿರುವ ಹಡಗು ನೀರಿನಲ್ಲಿ ತೇಲಿಕೊಂಡು ಹೇಗೆ ಚಲಿಸುತ್ತದೆ ಎಂಬುದನ್ನು ಹೇಗೆ ವಿವರಿಸಲು ಸಾಧ್ಯವೋ ಹಾಗೆ ಈ ಆಧ್ಯಾತ್ಮ ವಿಚಾರವನ್ನು ವಿವರಿಸಿ ಅವರಿಗೆ ಅರ್ಥವಾಗುವಂತೆ ಮಾಡಬೇಕು. ಅವರಿಗೆ ಇದು ಸರಿ ಎನ್ನಿಸಿದಾಗ ಮಾತ್ರ ಅದನ್ನು ನಂಬಬಲ್ಲರು. ಇಲ್ಲದಿದ್ದಲ್ಲಿ 'ಇದು ಕಾಗಕ್ಕ ಗುಬ್ಬಕ್ಕನ ಕಥೆ' ಎಂದು ನಗೆಯಾಡಿ ಬಿಡುತ್ತಾರೆ.'

'ಸರಿ ತಂಗೀ, ನೀನು ಹೇಳೋದನ್ನ ನಾನು ಒಪ್ತೀನಿ. ಆದ್ರೆ ನೀನು ಮೇಲೆ ಹೇಳಿದ ವಿಷಯಗಳನ್ನೆಲ್ಲಾ ವಿಜ್ಞಾನಿಗಳು ವೈಜ್ಞಾನಿಕವಾಗಿ ಅಭ್ಯಾಸಮಾಡಿ ಪ್ರಯೋಗ ಶಾಲೆಗಳಲ್ಲಿ ಪ್ರಯೋಗ ಮಾಡಿ ಕಂಡುಹಿಡಿದರು ಅಲ್ಲವೆ? ಇಷ್ಟೆಲ್ಲಾ ಪ್ರಯತ್ನ ಮಾಡದಿದ್ದರೆ ಇವನ್ನೆಲ್ಲಾ ಕಂಡುಹಿಡಿಯಲು ಹೇಗೆ ಸಾಧ್ಯವಾಗುತ್ತಿತ್ತು? ವೈಜ್ಞಾನಿಕ ಸಾಧನೆ ಒಂದು ತಪಸ್ಸಿದ್ಧಿ. ವಿಜ್ಞಾನಿ ಒಬ್ಬ ತಪಸ್ವಿ, ಇದು ಒಂದು ರೀತಿಯ ತಪೋಮಾರ್ಗ. ಇದರ ಫಲ ಮನುಷ್ಯನ ಭೌತಿಕ ಜೀವನಕ್ಕೆ, ಐಷಾರಾಮೀ ಜೀವನಕ್ಕೆ, ಆರೋಗ್ಯ ಜೀವನಕ್ಕೆ ಬೇಕಾದ ಅನುಕೂಲಗಳನ್ನು ಒದಗಿಸುತ್ತದೆ.'

'ಆರೋಗ್ಯ ಜೀವನಕ್ಕೆ ಅನುಕೂಲ ಮಾಡಿಕೊಡುವುದೂ ಒಂದು ರೀತಿಯ ಪುಣ್ಯಕಾರ್ಯವಲ್ಲವೇ ಸ್ವಾಮೀಜಿ?'

ಶರಣತ್ವವನ್ನು ಮುಟ್ಟುವ ಮಾರ್ಗ. ಆದರೆ ಈ ಮಟ್ಟದಲ್ಲೂ ಮನುಷ್ಯ 'ಪುಣ್ಯ ಸಂಪಾದಿಸಿಕೊಳ್ಳಬೇಕು, ಮುಕ್ತಿ ಪಡೆಯಬೇಕು' ಎಂಬ ಆಸೆಯಲ್ಲಿರುತ್ತಾನೆ. ಶರಣ ಈ ಆಸೆಯನ್ನು ಗೆದ್ದವನು. ಅವನು ಪಾಪ ಪುಣ್ಯಗಳ ಭಾವನೆಯನ್ನು ದಾಟಬೇಕು. ಎಲ್ಲವೂ ಶಿವಮಯವಾಗಬೇಕು. ಶಿವನ ಹೊರತು ಇನ್ನೊಂದು ವಿಚಾರ ಅವನಲ್ಲಿ ಮೂಡಬಾರದು. ಚಿತ್ತಬರಿದಾಗಬೇಕು – ಆಗ ಅವನು ಶಿವನೊಳಗೊಂದಾಗಬಲ್ಲ. ಶಿವನೇ ತಾನಾಗಬಲ್ಲ ಶಿವನೇ ತಾನಾದವನಿಗೆ ಜಗದ ಹಂಗೆಲ್ಲಿ? ಹುಟ್ಟು-ಸಾವುಗಳ ಸುತ್ತಾಟವೆಲ್ಲಿ? ಶಿವನಂಶ ತಾನೆಂದುಕೊಂಡಿದ್ದವನು 'ಶಿವೋಹಂ' ಎನ್ನುವ ಹಂತಕ್ಕೆ ಬರುತ್ತಾನೆ. ಆ ಹಂತ ಮುಟ್ಟಲು ಚಿತ್ತ ಬರಿದಾಗಬೇಕು' ಎಂದಾಗ ನಾನು ಅನೇಕ ಬಾರಿ ಓದಿದ, ಕೇಳಿದ 'ಶೂನ್ಯ ಸಂಪಾದನೆ'ಯ ನಿಜವಾದ ಅರ್ಥ ಈಗ ವಿವರವಾಗಿ ಗೋಚರಿಸಹತ್ತಿತು. ಅನೇಕ ಬಾರಿ ಶೂನ್ಯ ಸಂಪಾದನೆಯ ಖಚಿತ ಅರ್ಥವೇನು' 'ಶೂನ್ಯವನ್ನು ಸಂಪಾದಿಸುವುದು ಏಕೆ? ಹೇಗೆ? ಅದರ ಗುರಿ ಏನು? ಎಂಬುದನ್ನು ನನ್ನಲ್ಲೇ ನಾನು ಅನೇಕ ಬಾರಿ ಪ್ರಶ್ನಿಸಿಕೊಂಡಿದ್ದೆ. ಉತ್ತರವನ್ನು ಪುಸ್ತಕದಲ್ಲಿ ಹುಡುಕದೇ ಮನಸ್ಸಿನಂಗಳದಲ್ಲಿಯೇ ತಡಕಾಡಿದ್ದೆ. ಅರ್ಥ ನಿಚ್ಚಳವಾಗಿರಲಿಲ್ಲ. ಇಂದು ಆ ಪ್ರಶ್ನೆಗೆ ನನಗೆ ಉತ್ತರ ದೊರೆತಂತೆನ್ನಿಸಿತು. ಇಂತಹ ಮಹಾತ್ಮರಿಗೆ ದಿವ್ಯ ಜ್ಞಾನದಿಂದ, ಹೃದಯದಲ್ಲೇ ವಿಚಾರ ಮಂಥನದಿಂದ ಸಾಮಾನ್ಯರಿಗೆ ಅರ್ಥವಾಗದ ಅಂಶಗಳು ಸ್ಪಷ್ಟವಾಗುತ್ತವೆ. ಇವರೇ ದೃಷ್ಟಾರರು. ಇಂತಹವರಿಂದಲೇ ಆಧ್ಯಾತ್ಮಕ್ಕೆ ಸಂಬಂಧಿಸಿದ ನಮ್ಮ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕೆನ್ನಿಸಿ,

ಅಪ್ಪಾಜಿ, ವೀರಶೈವರಲ್ಲಿ ಪಂಚಾಚಾರ್ಯರು ಲಿಂಗದಲ್ಲಿ ಹುಟ್ಟಿದರು ಎಂಬ ಮಾತನ್ನು ಹೇಳುತ್ತಾರೆ. ಈ ಮಾತನ್ನು ವಿಜ್ಞಾನಯುಗದ ಆಧುನಿಕ ವಿದ್ಯಾವಂತರು ನಂಬಲಸಾಧ್ಯ. ಪ್ರಕೃತಿ ನಿಯಮದಂತೆ, ಜೀವಿ ತಾಯಿಯ ಗರ್ಭದಲ್ಲಿ ಭ್ರೂಣರೂಪ ತಾಳಿ ಅಲ್ಲಿಯೇ ವಿಕಸಿಸಿ ತನ್ನ ಪೂರ್ಣಾಕಾರ ಪಡೆದ ನಂತರ ಗರ್ಭದಿಂದ ನೂಕಲ್ಪಡುತ್ತಾನೆ. ಹೀಗಿರುವಾಗ ಪಂಚಾಚಾರ್ಯರನ್ನು ಲಿಂಗೋದ್ಭವರೆಂದು ಹೇಳುವುದು ಸರಿಯೇ? ಅನೇಕ ವಿದ್ವಾಂಸರು ಈ ಬಗ್ಗೆ ಸಂಶೋಧನೆ ಮಾಡಿ ಮೂಲ ಕಂಡು ಹಿಡಿಯಬೇಕೆನ್ನುತ್ತಾರೆ, ನಿಮ್ಮ ಅಭಿಪ್ರಾಯವೇನು?

'ತಂಗೀ, ಇದೆಲ್ಲಾ ಪಾಂಡಿತ್ಯದ ದೊಂಬರಾಟ. ನಿಮ್ಮ ಸಂಶೋಧನೆಯ ಹಿಡಿತಕ್ಕೆ ಸಿಗುವುದಿಲ್ಲ ಈ ವಿಷಯ. ಅದನ್ನು ದಾಟಿದ ಮಹತ್ವದ ಅಂಶಗಳು ಇದರಲ್ಲಿವೆ. ನೀವು ಶಬ್ದ ಶಬ್ದಕ್ಕೆ ಅರ್ಥವನ್ನು ಅರ್ಥಕೋಶದಲ್ಲಿ ಸಿಗುವಂತೆ ಕೇಳಿದರೆ ಆ ಅರ್ಥ ಇಲ್ಲಿ ತಪ್ಪಾಗುತ್ತದೆ. ಅನೇಕ ವಿಚಾರಗಳು ಸಾಮಾನ್ಯರಿಗೆ ಅರ್ಥವಾಗುವುದೇ ಇಲ್ಲ. ಅಂತಹವರು ಅಪಾರ್ಥ ಮಾಡಲೂ ಸಾಧ್ಯವಿದೆ.

ಅದಕ್ಕೋಸ್ಕರವೇ ಹೀಗೆ ಯಾರಾದರೂ ಅಪಾರ್ಥಮಾಡಿ ಅನರ್ಥ ಮಾಡಿಯಾರೆಂದು ತಿಳಿದವರು ಋಷಿಮೂಲ, ನದಿಮೂಲ ಕಂಡುಹಿಡಿಯಲು ಹೋಗಬಾರದು ಎನ್ನುತ್ತಾರೆ. ಅಗಸ್ತ್ಯರು 'ಕುಂಭೋದ್ಭವರು' ಎನ್ನುತ್ತಾರೆ. ಸೀತೆ ಭೂಮಿಯಲ್ಲಿ ಸಿಕ್ಕಿದಳು ಎಂಬ ನಂಬಿಕೆಯಿದೆ. ಇದನ್ನು ಸಂಶೋಧನೆಯ ಒರೆಗಲ್ಲಿಗೆ ಹಚ್ಚಿ ಅರ್ಥ ಮಾಡಿಕೊಂಡು ನೀವೇನು ಮಾಡುವವರಿದ್ದೀರಿ? ಅವರು ಹೇಗೆ ಬದುಕಿದರು. ಅವರ ಬದುಕಿನಿಂದ ಮಾನವ ಜನಾಂಗಕ್ಕಾದ ಉಪಕಾರವೇನು ಎಂದು ವಿಚಾರ ಮಾಡಿಕೊಂಡರೆ ಸಾಲದೇ? ಮೂಲವನ್ನು ಕೆದಕಿ ಅಲ್ಲಿಲ್ಲದ್ದನ್ನು ಹುಡುಕಿ, ಅಲ್ಲವಾದುದನ್ನು ಊಹಿಸಿ ಸಾಧಿಸಬೇಕಾದುದಾದರೂ ಏನು?'

'ಹಾಗಲ್ರಪಾ ಇದು ವಿಜ್ಞಾನಯುಗ. ಕಾರ್ಯಕಾರಣವಿಲ್ಲದೇ ಆಧುನಿಕ ಮಾನವ ಏನನ್ನೂ ನಂಬುವುದಿಲ್ಲ. ನೀವು ಸೂಕ್ತ ವಿವರಣೆ ಕೊಡದಿದ್ದಲ್ಲಿ ದೇವರು, ಆಧ್ಯಾತ್ಮ ಸಾಧನೆ, ಸಾಕ್ಷಾತ್ಕಾರ ಇವುಗಳಲ್ಲಿ ಇಂದಿನ ಪೀಳಿಗೆಗೆ ನಂಬಿಕೆಯೇ ಇಲ್ಲವಾಗುತ್ತದೆ. ಇಂದಿನವರಗೆ ಎಲ್ಲಾ ವಿಷಯಗಳನ್ನೂ ದೂರದಲ್ಲಿದ್ದವರನ್ನು ಟಿ.ವಿ. ಮೂಲಕ ಹೇಗೆ ನೋಡಲು ಸಾಧ್ಯ. ದೂರದಲ್ಲಿ ಮಾತನಾಡುವುದನ್ನು ಹೇಗೆ ಕೇಳಲು ಸಾಧ್ಯ. ಅಷ್ಟೊಂದು ಭಾರವನ್ನು ಹೊತ್ತುಕೊಂಡು ವಿಮಾನ ಹಕ್ಕಿಯಂತೆ ಆಕಾಶದಲ್ಲಿ ಹಾರಲು ಹೇಗೆ ಸಾಧ್ಯವಾಗುತ್ತೆ. ಒಂದು ಸಣ್ಣ ಊರಿನಂತಿರುವ ಹಡಗು ನೀರಿನಲ್ಲಿ ತೇಲಿಕೊಂಡು ಹೇಗೆ ಚಲಿಸುತ್ತದೆ ಎಂಬುದನ್ನು ಹೇಗೆ ವಿವರಿಸಲು ಸಾಧ್ಯವೋ ಹಾಗೆ ಈ ಆಧ್ಯಾತ್ಮ ವಿಚಾರವನ್ನು ವಿವರಿಸಿ ಅವರಿಗೆ ಅರ್ಥವಾಗುವಂತೆ ಮಾಡಬೇಕು. ಅವರಿಗೆ ಇದು ಸರಿ ಎನ್ನಿಸಿದಾಗ ಮಾತ್ರ ಅದನ್ನು ನಂಬಬಲ್ಲರು. ಇಲ್ಲದಿದ್ದಲ್ಲಿ 'ಇದು ಕಾಗಕ್ಕ ಗುಬ್ಬಕ್ಕನ ಕಥೆ' ಎಂದು ನಗೆಯಾಡಿ ಬಿಡುತ್ತಾರೆ.'

'ಸರಿ ತಂಗೀ, ನೀನು ಹೇಳೋದನ್ನ ನಾನು ಒಪ್ತೀನಿ. ಆದ್ರೆ ನೀನು ಮೇಲೆ ಹೇಳಿದ ವಿಷಯಗಳನ್ನೆಲ್ಲಾ ವಿಜ್ಞಾನಿಗಳು ವೈಜ್ಞಾನಿಕವಾಗಿ ಅಭ್ಯಾಸಮಾಡಿ ಪ್ರಯೋಗ ಶಾಲೆಗಳಲ್ಲಿ ಪ್ರಯೋಗ ಮಾಡಿ ಕಂಡುಹಿಡಿದರು ಅಲ್ಲವೆ? ಇಷ್ಟೆಲ್ಲಾ ಪ್ರಯತ್ನ ಮಾಡದಿದ್ದರೆ ಇವನ್ನೆಲ್ಲಾ ಕಂಡುಹಿಡಿಯಲು ಹೇಗೆ ಸಾಧ್ಯವಾಗುತ್ತಿತ್ತು? ವೈಜ್ಞಾನಿಕ ಸಾಧನೆ ಒಂದು ತಪಸ್ಸಿದ್ಧಿ. ವಿಜ್ಞಾನಿ ಒಬ್ಬ ತಪಸ್ವಿ. ಇದು ಒಂದು ರೀತಿಯ ತಪೋಮಾರ್ಗ. ಇದರ ಫಲ ಮನುಷ್ಯನ ಭೌತಿಕ ಜೀವನಕ್ಕೆ, ಐಷಾರಾಮೀ ಜೀವನಕ್ಕೆ, ಆರೋಗ್ಯ ಜೀವನಕ್ಕೆ ಬೇಕಾದ ಅನುಕೂಲಗಳನ್ನು ಒದಗಿಸುತ್ತದೆ.'

'ಆರೋಗ್ಯ ಜೀವನಕ್ಕೆ ಅನುಕೂಲ ಮಾಡಿಕೊಡುವುದೂ ಒಂದು ರೀತಿಯ ಪುಣ್ಯಕಾರ್ಯವಲ್ಲವೇ ಸ್ವಾಮೀಜಿ?'

'ಅಲ್ಲ ಎಂದವರು ಯಾರವ್ವಾ. ವಿಜ್ಞಾನಿ ತನ್ನ ತಪಸ್ಸಿನ ಫಲವನ್ನು ಮನುಷ್ಯನ ಒಳಿತಿಗಾಗಿಯೇ ಕೊಡುತ್ತಾನೆ. ಈ ಒಳಿತಿನ ಸಾಧನೆಯ ಮಾರ್ಗ ಅನೇಕ. ಈಗ ನೋಡು ಒಂದು ರೋಗವನ್ನು ಅನೇಕ ರೀತಿಯ ಚಿಕಿತ್ಸೆಗಳಿಂದ ಗುಣಪಡಿಸಬಹುದು. ಅದು ಅಲೋಪತಿಯಾಗಿರಬಹುದು. ನ್ಯಾಚುರೋಪತಿ ಆಗಿರಬಹುದು. ಹೋಮಿಯೋಪತಿಯಾಗಿರಬಹುದು ಅಥವಾ ಆಯುರ್ವೇದವಾಗಿರಬಹುದು. ಗುರಿ ಒಂದೇ ಆದರೂ ಇವುಗಳ ಮಾರ್ಗ ಬೇರೆ ಬೇರೆ. ಆಲೋಪತಿಯ ಚಿಕಿತ್ಸಕನ ಅಭ್ಯಾಸವೇ ಬೇರೆ. ಹಾಗೆಯೇ ಇತರ ಚಿಕಿತ್ಸಿಕರೂ ತಮ್ಮ ಚಿಕಿತ್ಸಾ ವಿಧಾನದ ಬೇರೆ ಬೇರೆ ಮಾರ್ಗವನ್ನೇ ಅನುಸರಿಸಿ ಆ ಮೂಲಕ ರೋಗಿಗೆ ಅವಶ್ಯಕವಾದ ಚಿಕಿತ್ಸೆ ಮಾಡಿ ಅವನ ರೋಗ ಗುಣಪಡಿಸಿ ಆರೋಗ್ಯವಂತನನ್ನಾಗಿ ಮಾಡುತ್ತಾರೆ. ಹೀಗೆ ವೈಜ್ಞಾನಿಕ ಸಂಶೋಧನೆ ಮಾನವನನ್ನು ಸುಖಿಯಾಗಿಡಲು ಅನುಸರಿಸುವ ಒಂದು ಮಾರ್ಗ. ಇವು ಭೌತಿಕ ಸುಖಕ್ಕೆ ಹಾದಿ ಮಾಡಿಕೊಡುತ್ತದೆ. ಇನ್ನೊಂದು ಆಧ್ಯಾತ್ಮ ಸುಖವೊಂದಿದೆ. ಅದಕ್ಕೆ ಬೇಕಾದ ಮಾರ್ಗವೂ ಬೇರೆ. ಅದರ ಗುರಿ, ಚಿತ್ತವನ್ನು ಬರಿದುಮಾಡಿಕೊಳ್ಳುವುದು. ಆ ಮಟ್ಟ ಮುಟ್ಟಿದಾಗ ಸರ್ವವೂ ಸಾಕ್ಷಾತ್ಕಾರವಾಗುತ್ತದೆ. ಮಾನವ ತನಗೆ ತಾನೇ ಗುರುವಾಗುತ್ತಾನೆ. ಆಗ ತನ್ನ ಪ್ರಶ್ನೆಗಳಿಗೆ ತಾನೇ ಉತ್ತರ ಕಂಡುಹಿಡಿದುಕೊಳ್ಳುವಷ್ಟು ಶಕ್ತಿ ಪಡೆದಿರುತ್ತಾನೆ. ಹೇಗೆ ಸಂಶೋಧನಾ ಫಲಗಳನ್ನು ಪಡೆಯಲು ವೈಜ್ಞಾನಿಕ ರೀತಿಯಲ್ಲಿ ಸತತವಾದ ಅಭ್ಯಾಸ ಪ್ರಯೋಗ, ಪ್ರಯತ್ನಗಳು ಬೇಕೋ ಹಾಗೆ ಆಧ್ಯಾತ್ಮ ಮಾರ್ಗದಲ್ಲಿ ಮನಸ್ಸು ಹಾಕಿ ಸತತವಾದ ಅಭ್ಯಾಸ, ಚಿಂತನ, ಮನನ, ನಿಧಿಧ್ಯಾಸನ, ಸತ್ಸಂಗ ಮುಂತಾದ ರೀತಿಯಲ್ಲಿ ದೀರ್ಘಕಾಲ ತಪಸ್ಸು ಮಾಡಬೇಕು. ಆಗ ಆಧ್ಯಾತ್ಮಿಕ ವಿಚಾರಗಳ ಅರಿವಾಗುತ್ತದೆ. ವಿಜ್ಞಾನದಲ್ಲಿ, ವಿಜ್ಞಾನಿಯಲ್ಲದವನಿಗೆ ವೈಜ್ಞಾನಿಕ ಸಂಶೋಧನೆಯ ಫಲಗಳನ್ನು ಅನುಭವಿಸಲು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಅದೊಂದು ರೀತಿಯ ತಪಸ್ಸು. ಆದರೆ ಆಧ್ಯಾತ್ಮ ತಪಸ್ಸಿನ ರೀತಿಯೇ ಬೇರೆ. ಆ ಮಾರ್ಗದಲ್ಲಿ ನಡೆದವನಿಗೆ ಮಾತ್ರ ಅದರ ಅರಿವಾಗುತ್ತದೆ. ಅದರ ಅನುಭವವಾಗುತ್ತದೆ. ಇತರರಿಗೆ ಅದರ ಮಾರ್ಗಗಳೇನೆಂಬುದನ್ನು ಹೇಳಬಹುದಷ್ಟೆ. ಆದರೆ ಅದರ ಅನುಭವ ಉಂಟಾಗುವಂತೆ, ಅರಿವುಂಟಾಗುವಂತೆ ಮಾಡುವುದು ಸುಲಭವಲ್ಲ. ಅದು ಸಿದ್ಧಪುರುಷರಿಗೆ ತಮ್ಮ ಯೋಗಸಿದ್ಧಿಯಿಂದ ಮಾಡಲು ಸಾಧ್ಯವಾಗಬಹುದು. ಅಂತಹವರು ಯುಗಕ್ಕೊಬ್ಬರು ಸಿಕ್ಕರೆ ಪುಣ್ಯ. ಇತರರಿಗೆ ಆ ಮಟ್ಟ ಮುಟ್ಟಲು ಸಾಧ್ಯವಿಲ್ಲದುದರಿಂದ ಆ ಅನುಭವದ ಅರಿವನ್ನು ಇತರರಲ್ಲಿ ಉಂಟು ಮಾಡುವುದೂ ಅಸಾಧ್ಯ. ಹೀಗೆಂದ ಮಾತ್ರಕ್ಕೆ ಆಧ್ಯಾತ್ಮ ಮಾರ್ಗ, ಅದರ ಅನುಭವದ ಫಲ ಸುಳ್ಳಲ್ಲ. ನಿನಗೆ ಅರ್ಥವಾಗದಿದ್ದರೆ, ಸಾಧಿಸಲು ಸಾಧ್ಯವಿಲ್ಲದಿದ್ದರೆ ಅದು ಇಲ್ಲವೆಂದು ಅರ್ಥವಲ್ಲ. ಅದನ್ನು ಕಂಡುಕೊಳ್ಳುವ ಮಾರ್ಗದಲ್ಲಿ ನೀನು

ಸಾಗಬೇಕು. ಕೇವಲ ಚರ್ಚೆಗೆ, ವಿವರಣೆಗೆ ನಿಲುಕದ ಮಾತು ಅದು. ಈ ಆಧ್ಯಾತ್ಮ ಮಾರ್ಗದಲ್ಲಿ ಸಾಗಲು ವೈಜ್ಞಾನಿಕ ಮಾರ್ಗದಲ್ಲಿ ಬೇಕಾದುದಕ್ಕಿಂತ ಹೆಚ್ಚು ನಿಷ್ಠೆ ಬೇಕು. ಲಾಭ ಬೇಕಿಲ್ಲದ ಗುರಿ ಬೇಕು'.

'ಎಂದರೆ ಸ್ವಾಮೀಜಿ' 'ಲಿಂಗೋದ್ಭವರು' ಎಂಬುದನ್ನು ಸಾರ್ವಜನಿಕರಿಗೆ ತೃಪ್ತಿಯಾಗುವಂತೆ ನಿಲುಕಿಸಲು ಸಾಧ್ಯವೇ ಇಲ್ಲ ಎನ್ನುತ್ತೀರ ಹಾಗಾದರೆ'.

'ನಾನೆಲ್ಲಿ ಹಾಗಂದೆ ನನ್ನವ್ವಾ, ಅದಕ್ಕೆ ಶಬ್ದಕ್ಕೆ ಶಬ್ದ ಅರ್ಥಕೊಡಬಾರದು ಎಂದೆ ಅಷ್ಟೆ. ಲಿಂಗೋದ್ಭವರು ಎಂದ ತಕ್ಷಣ ಕಲ್ಲಿನ ಲಿಂಗವನ್ನು ಇಬ್ಭಾಗ ಮಾಡಿಕೊಂಡು ಹುಟ್ಟಿದವರು ಎಂದು ಅರ್ಥೈಸಿಬಿಡುತ್ತಾರೆ. ಕಲ್ಲಿನ ಲಿಂಗ ಶಿವನಾಗಬಲ್ಲುದೆ? ಶಿಲೆಯನ್ನು ಶಿಲ್ಪಿ ನಾವು ಕಲ್ಪಿಸಿದ ಲಿಂಗಾಕಾರಕ್ಕೆ ಕಟೆಯುತ್ತಾನೆ. ಆಗ ಅದು ಲಿಂಗಾಕಾರದ ಒಂದು ಕಲ್ಲು ಅಷ್ಟೆ. ಅದರಲ್ಲಿ ಶಿವನನ್ನು ತರುವ ಶಕ್ತಿ ನಿನ್ನಲ್ಲಿದ್ದರೆ ಅಲ್ಲಿ ಲಿಂಗದ ಅರ್ಥಾತ್ ಶಿವನ ಸಾಕ್ಷಾತ್ಕಾರವಾಗುತ್ತದೆ. ಶಿವನನ್ನು ನಿನಗೆ ಬೇಕಾದ ಆಕಾರದಲ್ಲಿ ಕಾಣಬಹುದು. ಬೇಕಾದ ಹೆಸರಿನಲ್ಲಿ ಕರೆಯಬಹುದು. ನೀನು ಕೊಟ್ಟ ಆಕಾರದಲ್ಲಿ ಶಿಲ್ಪಿ, ಶಿಲೆಯನ್ನು ರೂಪಿಸುತ್ತಾನೆ ಅಷ್ಟೆ. ರಾಮನ ವಿಗ್ರಹದಲ್ಲಿ, ರಹೀಮನ ರೀತಿಯಲ್ಲಿ ಶಿಲುಬೆಯ ಆಕಾರದಲ್ಲಿ ಕ್ರೈಸ್ತನ ರೂಪದಲ್ಲಿ ಶಿವ ಕಾಣುತ್ತಾನೆ. ಶಿವ ಎಂದರೆ ದೇವರು. ಆಧ್ಯಾತ್ಮ ಮಾರ್ಗದಲ್ಲಿ ಕಾಣಬೇಕು ಅಷ್ಟೆ. ವೈದ್ಯರಲ್ಲಿ ಅನೇಕ ವಿಧಗಳು ಹೇಗೋ ಹಾಗೆ ಆಧ್ಯಾತ್ಮ ರೀತಿಗಳೂ ಅನೇಕ. ಯಾರಿಗೆ ಯಾವ ರೀತಿ ಬೇಕೋ ಆ ರೀತಿ ಅನುಸರಿಸಬಹುದು. ಆದರೆ 'ಇದೊಂದೇ ರೀತಿ' ಎಂದು ಹೇಳುವುದು ತಪ್ಪು. ಕೆಲವು ಸಮೀಪ ಮಾರ್ಗ ಆದರೆ ದುಷ್ಕರ. ಕೆಲವು ಮಾರ್ಗ ದೂರ. ಆದರೆ ನಿಧಾನವಾಗಿ ಸುಲಭವಾಗಿ ಸಾಗಲು ಅನುಕೂಲ. ಒಂದೊಂದು ಧರ್ಮವೂ ಒಂದೊಂದು ಮಾರ್ಗವನ್ನು ತೋರಿಸುತ್ತದೆ. ಆದರೆ ಎಲ್ಲ ಧರ್ಮಗಳ ಪ್ರಾರಂಭದ ಸ್ಥಳ, ಮುಟ್ಟುವ ಗುರಿ ಒಂದೇ ಆಗಿರುವುದರಿಂದ ಯಾವ ಧರ್ಮವೂ ಮೇಲಲ್ಲ, ಯಾವ ಧರ್ಮವೂ ಕೀಳಲ್ಲ, ಸರ್ವಧರ್ಮಗಳನ್ನು ಸಮಾನ ದೃಷ್ಟಿಯಿಂದ ನೋಡುವವನೇ ಧಾರ್ಮಿಕ ವ್ಯಕ್ತಿ. ಧರ್ಮದ ಹೆಸರಿನಲ್ಲಿಯ ಕಚ್ಚಾಟ ಮಾನವ ಜನಾಂಗಕ್ಕೆ ಅವಮಾನ, ನಾಗರೀಕತೆಗೆ ಅವಹೇಳನ.'

'ಸ್ವಾಮೀಜಿ ಇದರಲ್ಲಿ ನನ್ನ ಪ್ರಶ್ನೆಗೆ ಉತ್ತರವಿನ್ನೂ ಬರಲಿಲ್ಲ.'

'ನಿಜ ತಂಗೀ, ನಾನು ನಿನ್ನ ಪ್ರಶ್ನೆಗೆ ಉತ್ತರ ಕೊಡುವ ಮಾರ್ಗದಲ್ಲೇ ಹೋದರೂ ಸ್ವಲ್ಪ ಸುತ್ತು ಮಾರ್ಗ ತೆಗೆದುಕೊಂಡೆ ಅಷ್ಟೆ. ದಾರಿಬಿಟ್ಟೇನೂ ಹೋಗಿಲ್ಲ. ಲಿಂಗೋದ್ಭವರೆಂದರೆ ನಾನಾಗಲೇ ಹೇಳಿದಂತೆ ಲಿಂಗಾಕಾರದ

ಕಲ್ಲಿನಲ್ಲಿ ಉದ್ಭವಿಸಿದವರೆಂದು ಅರ್ಥವಲ್ಲ. ಆ ಮಾತನ್ನು ಹೇಳುವವರು 'ಅವರು ಮೂಲಪುರುಷರು' ಎಂಬ ಮಾತನ್ನು ಹೇಳಲು ಹಾಗೆ ಹೇಳಿರಲು ಸಾಧ್ಯ. ಈಗ ಸೃಷ್ಟಿಯನ್ನೇ ತೆಗೆದುಕೊಂಡರೆ ಪಶು, ಪಕ್ಷಿ, ಗಿಡ, ಮರ, ಕ್ರಿಮಿ ಕೀಟಾದಿಗಳೆಲ್ಲಾ ಹೇಗೆ ಹುಟ್ಟಿದವು? ಅವರವರ ತಂದೆ-ತಾಯಿ (ಗಂಡು-ಹೆಣ್ಣುಗಳ ಸಮ್ಮಿಲನ)ಗಳಿಂದ ಎಂದು ಹೇಳುತ್ತಾ ಹೋದರೆ, ಮೂಲದಲ್ಲಿ ಪ್ರಾರಂಭದ ತಂದೆ-ತಾಯ್ಗಳು (ಈ ಎಲ್ಲಾ ಜೀವಕೋಟಿ) ಎಲ್ಲಿಂದ ಹುಟ್ಟಿದರು. ಹೇಗೆ ಹುಟ್ಟಿದರೆಂಬುದನ್ನು ವಿಜ್ಞಾನಿಗಳು ವಿವರಿಸಬಲ್ಲರೇ? ಈ ಬಗ್ಗೆ ಎಷ್ಟೇ ಪ್ರಯತ್ನಪಟ್ಟರೂ ಸಮಾಧಾನಕರವಾದ ವಿವರಣೆಯನ್ನು ಕೊಡಲು ಯಾರು ಸಮರ್ಥರಾಗಿದ್ದಾರೆ? ಮೂಲ 'ಪ್ರಕೃತಿಯ ಸೃಷ್ಟಿ' ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಆ ಮೂಲವನ್ನೇ 'ಲಿಂಗ'ವೆಂದೂ ಬ್ರಹ್ಮನೆಂದು ತಿಳಿಯಬಹುದು. ದೇವರೆಂದೂ ಆ ಅರ್ಥದಲ್ಲಿ ಅವರನ್ನು ಲಿಂಗೋದ್ಭವರೆಂದು ಕರೆದಿರಬಹುದು. ಅಲ್ಲದೆ ನಾವು ಆಧ್ಯಾತ್ಮ ಸಾಧನೆಯ ಕೊನೆಯ ತುದಿಯನ್ನು ಮುಟ್ಟಿದಾಗ 'ಅಹಂ ಶಿವೋಸ್ಮಿ' ಎಂಬ ಅರಿವಾಗುತ್ತದೆ ಎಂದು ಹೇಳಿದೇನಲ್ಲವೆ? ಆ ಅರ್ಥದಲ್ಲಿ ಶಿವನ ಅಂಶವಾದ ಇವರನ್ನು ಲಿಂಗೋದ್ಭವರು ಎಂದು ಹೇಳಿದರೆ ತಪ್ಪೇನು? ಪ್ರತಿಯೊಬ್ಬರೂ ಪ್ರಕೃತಿಯ ಅಂಶವಲ್ಲವೆ? 'ಪ್ರಕೃತಿಯೇ ಪರಮೇಶ್ವರ' ಎಂದು ಭಾವಿಸಿದರೆ ಈಗಿನ ಜನರು ಅಷ್ಟೊಂದು ವಿರೋಧಿಸಲಾರರು. ಪ್ರಕೃತಿಯನ್ನು ದೇವರೆಂದುಕೊಂಡಾಗ, ಪಂಚಾಚಾರ್ಯರೂ ಪ್ರಕೃತಿಯ ಅಂಶವಾಗಿರುವಾಗ ಲಿಂಗ ಎಂದರೆ ದೇವರಲ್ಲಿ ಉದ್ಭವಿಸಿದರು, ಎಂದರೆ 'ಜನಿಸಿದರು' ಎಂದು ಅರ್ಥಮಾಡಿಕೊಳ್ಳಬಹುದಲ್ಲವೆ? ಅಲ್ಲದೆ ಮಹಾಪುರುಷರ ಜನನದ ಬಗ್ಗೆ ಹೇಳುವಾಗ ನಮ್ಮಲ್ಲಿ ಪವಾಡ ಸದೃಶವಾದ ರೀತಿಯಲ್ಲಿ ವರ್ಣಿಸುವ ಪರಿಪಾಠವಿದೆ. ಅದನ್ನು ಸಾಮಾನ್ಯರಿಗಿಂತ ಮಿಗಿಲು ಎನ್ನುವ ಅರ್ಥದಲ್ಲಿ ಅವರ ಹುಟ್ಟಿನ ಬಗ್ಗೆ ಅನೇಕ ರೀತಿಯ ಕಥೆಗಳನ್ನು ಭಕ್ತರು ಭಾವುಕ ರೀತಿಯಲ್ಲಿ ವಿವರಿಸಿರುವುದು ಸರ್ವೇಸಾಮಾನ್ಯ. ಆ ಅರ್ಥದಲ್ಲಿಯೂ ಈ ಆಚಾರ್ಯರುಗಳನ್ನು ಲಿಂಗೋದ್ಭವರು ಎಂದು ಕರೆದರೂ ತಪ್ಪಾಗಲಿಕ್ಕಿಲ್ಲ, ಇನ್ನೊಂದು ವಿಷಯ. ವೀರಶೈವರು ಯಾರಾದರೂ ದೊಡ್ಡವರು ದೇಹತ್ಯಜಿಸಿದರೆ ಸಾಮಾನ್ಯವಾದ 'ಸತ್ತರು' ಎಂಬ ಪದ ಬಳಸದೆ 'ಲಿಂಗೈಕ್ಯರಾದರು' ಅಥವಾ 'ಲಿಂಗದೊಳಗಾದರು' ಎನ್ನುವ ವಾಡಿಕೆ. ಇದರರ್ಥ ಲಿಂಗಾಕಾರದ ಕಲ್ಲಿನಲ್ಲಿ ಹೋಗಿ ಸೇರಿಕೊಂಡರೆಂದು ಅರ್ಥವಲ್ಲ. 'ಮನುಷ್ಯನಲ್ಲಿಯ ಆತ್ಮ ಭಗವಂತನೆಂದು ನಂಬಿದ ಜನತೆ ಆ ಆತ್ಮ, ದೇಹ ತ್ಯಜಿಸಿದಾಗ ಅದು ಹೋಗಿ ಲಿಂಗದಲ್ಲಿ ಎಂದರೆ ದೇವರಲ್ಲಿ ಒಂದಾಯಿತು ಎಂಬ ಆಧ್ಯಾತ್ಮಿಕ ನಂಬಿಕೆಯ ಪ್ರಯೋಗ. ಅದರಂತೆ 'ಹುಟ್ಟಿದರೂ' ಎಂಬ ಮಾತನ್ನು ದೊಡ್ಡವರ ಬಗ್ಗೆ ಸಾಮಾನ್ಯವಾಗಿ ಹೇಳದೆ 'ಲಿಂಗೋದ್ಭವರಾದರು' ಎಂಬುದರಲ್ಲಿಯೂ ಒಂದು ರೀತಿಯ ಸುಸಂಸ್ಕೃತ ಅಭಿವ್ಯಕ್ತಿ

ಅಡಕವಾಗಿದೆ ಎನ್ನಬಹುದು. ಅದರಲ್ಲಿ ತಲೆಕೆಡಿಸಿಕೊಳ್ಳಬೇಕಾದ ವಿಷಯವೇನೂ ಇಲ್ಲ ತಂಗಿ. ಮಾನವ ಯಾವುದನ್ನು ಆಳವಾಗಿ ಅರಿಯಬೇಕೋ ಅದನ್ನು ಬಿಟ್ಟು ಅನಗತ್ಯ ವಿಷಯಗಳಿಗೆ ತಲೆಕೆಡಿಸಿಕೊಳ್ಳುತ್ತಾನೆ. ಇದರಿಂದ 'ಹಾವೂ ಸಾಯಲಿಲ್ಲ ಕೋಲೂ ಮುರಿಯಲಿಲ್ಲ' ಎಂದಾಗುತ್ತದೆ. ಇಂತಹ ವಿಷಯಗಳನ್ನು ಬಿಟ್ಟು 'ಮಾನವ'ನಾಗಿ ಬದುಕುವುದನ್ನು ಅಭ್ಯಸಿಸಿದರೆ ಸಾಕು. ಎಲ್ಲರು ಶರಣರಾಗುವುದು ಬೇಡ. ಎಲ್ಲರೂ ಶರಣರಾದರೆ ಶರಣರು ಹೇಳಿದಂತೆ 'ಭವಕ್ಕೆ ಬೀಜವೆಲ್ಲಿಯದು' ಎಂಬಂತಾಗುತ್ತದೆ. ಹುಟ್ಟು ಸಾವುಗಳಿಲ್ಲದಿದ್ದರೆ ಜಗತ್ತು ಹೇಗೆ ನಡೆದೀತು? ಆದರೆ ಮನುಷ್ಯ ಒಳ್ಳೆಯವನಾಗಿ ಬದುಕುವುದನ್ನು ಮೊದಲು ಕಲಿಯಬೇಕು. ಹೆರರಿಗೆ ಕೆಡಕು ಮಾಡದಂತೆ ಇರಬೇಕು. ಸಾಧ್ಯವಾದರೆ ಒಳಿತು ಮಾಡಬೇಕು, ಒಳಿತು ಮಾಡದಿದ್ದರೂ ಅಡ್ಡಿಯಿಲ್ಲ. ಕೆಡಕು ಮಾಡದಿದ್ದರೆ ಎಷ್ಟೋ ಉಪಕಾರ ಮಾಡಿದಂತೆ' ಎಂದಾಗ ಶುಚಿಗೆ ಆಧ್ಯಾತ್ಮದ ರುಚಿಯೂಟ ಸಿಕ್ಕ ಆನಂದವಾಯಿತು. ಇದನ್ನೆಲ್ಲಾ ಕೇಳುತ್ತಾ ಕೇಳುತ್ತಾ ಎಲ್ಲರೂ ತಮ್ಮ ತಮ್ಮನ್ನು ತಾವೇ ಮರೆತುಕೊಂಡಿದ್ದರು. ಅವರು ಮಾತು ಮುಗಿಸಿದ ಮೇಲೆಯೇ ಎಲ್ಲರ ಗಮನ ಟೈಂ ಕಡೆ ಹರಿದದ್ದು. ಆಗಾಗಲೇ ಹೊತ್ತು ನೆತ್ತಿಗೇರಿತ್ತು. ಪೂಜ್ಯರ ಪಾದಗಳಿಗೆ ನಮಸ್ಕರಿಸಿ ಹೊರಡಲುನುವಾದರು. ಸ್ವಾಮಿಗಳು ಹಣ್ಣನ್ನು ಆಶೀರ್ವದಿಸಿ ಎಲ್ಲರನ್ನು ಬೀಳ್ಕೊಟ್ಟರು.

ಶುಚಿಯ ಮನಸ್ಸಿನ ತುಂಬಾ ಗೃಹಸ್ಥರ ಉಡುಪಿನಲ್ಲಿದ್ದು ಸನ್ಯಾಸಯೋಗದ ಜೀವನ ನಡೆಸುತ್ತಾ ಶಿವಯೋಗದ ಸಾಧನೆಯ ತುಟ್ಟತುದಿ ಏರಿದ್ದ ಆ ಸತ್ಪುರುಷರೇ ತುಂಬಿದ್ದರು. ದಾರಿಯುದ್ದಕ್ಕೂ ಅವರ ಗೃಹಸ್ಥಾಶ್ರಮದ ಜೀವನದ ಬಗೆಗೆ ಸುರೇಂದ್ರ ಹೆಂಡತಿಗೆ ವಿವರಿಸುತ್ತಿದ್ದ. ಜೀವನದ ಕಷ್ಟಗಳು ಮನುಷ್ಯನನ್ನು ನಿರಾಸೆಯ ನಿರುತ್ಸಾಹದ ಕಡಲಲ್ಲಿ ಮುಳುಗಿಸಿಬಿಡುತ್ತವೆ. ಕೆಲವರಂತೂ ಕಷ್ಟಗಳಿಂದ ಬೆದರಿ ದುಶ್ಚಟಗಳಿಗೆ ಬಲಿಯಾಗಿ ಪಲಾಯನ ಸೂತ್ರ ಹೇಳುತ್ತಾರೆ. ಮತ್ತೆ ಕೆಲವರು ಆತ್ಮಹತ್ಯೆ ಮಾಡಿಕೊಂಡು ಬಿಡುತ್ತಾರೆ. ಆದರೆ ಎಲ್ಲೋ ಅಲ್ಲೊಬ್ಬರು ಇಲ್ಲೊಬ್ಬರು ಆಧ್ಯಾತ್ಮದ ಹಾದಿಯತ್ತ ಮುಖ ಮಾಡುತ್ತಾರೆ. ಈ ಸತ್ಪುರುಷರಾದರೂ ಬಂಧು-ಬಾಂಧವರು ದೂರಾದಾಗ, ಕೈಹಿಡಿದ ಹೆಂಡತಿ, ಉದರಲ್ಲಿ ಜನಿಸಿದ ಮಕ್ಕಳೆಲ್ಲಾ ಇಲ್ಲವಾದಾಗ ಕಷ್ಟ-ಕಾರ್ಪಣ್ಯಗಳು ಜೇನು ಮುತ್ತಿದಂತೆ ಮುತ್ತಿದಾಗ, ಮೊದ ಮೊದಲು ನಿರಾಸೆಗೊಂಡರೂ ನಂತರ ಸತ್ಸಂಗದಿಂದ ಬಾಳನ್ನು ಪೂಜ್ಯಗೊಳಿಸಿಕೊಂಡ ರೀತಿಯನ್ನು ಸುರೇಂದ್ರನಿಂದ ಕೇಳಿ ಶುಚಿಯ ಮನಸ್ಸು ಪುಲಕಿತವಾಯಿತು. ಆ ಗುಂಗಿನಲ್ಲೇ ಜಲಪಾತವನ್ನು ನಿರೀಕ್ಷಿಸಿದ ಆಕೆಗೆ ಆ ಸೊಬಗು ಆ ಪುಣ್ಯಜೀವಿಯ ಸೊಬಗಿನ ಮುಂದೆ ಸಪ್ಪೆ ಎನ್ನಿಸಿತು. ಆ

ಮನಃಸ್ಥಿತಿಯಲ್ಲೇ ಸುರಂದ್ರನಿಗೆ 'ಈ ದಿನ ನನಗೊಂದು ಸುಯೋಗ ಮಾಡಿಕೊಟ್ಟಿರಿ. ನನ್ನನ್ನೇ ಕೇಳಿದ್ದರೆ ನಾನಲ್ಲಿಗೆ ಹೋಗಲೊಪ್ಪುತ್ತಿರಲಿಲ್ಲ. ಅಲ್ಲಿಗೆ ಹೋಗದಿದ್ದರೆ ಅಪೂರ್ವ ಸನ್ನಿವೇಶವೊಂದು ನನ್ನ ಬಾಳಿನಲ್ಲಿ ಇಲ್ಲವಾಗುತ್ತಿತ್ತು' ಎಂದಳು. ಅಂತೂ ಆ ದಿನವೆಲ್ಲಾ ಆನಂದಾಶ್ರಮದ ಸತ್ಪುರುಷರ ಬಗ್ಗೆ ಮಾತನಾಡುತ್ತಲೇ ಊರು ಸೇರಿದರು. ಇದೆಲ್ಲಾ ಯೋಗಾಯೋಗ.

■

## ೩. ವರ್ಗ ತಂದ ಸ್ವರ್ಗ

ಪವಿತ್ರ, ಮನೆಗೆ ಬರುತ್ತಲೇ ಭಕ್ತಿ, ಕಾಫಿ ಮಾಡಿಕೊಂಡು ಬರಲು ಎದ್ದಳು. ಅವನು 'ನಿನಗೊಂದು ಆಶ್ಚರ್ಯದ ಸುದ್ದಿ ಭಕ್ತಿ, ನಿನ್ನ ಹರಕೆ ತೀರ್ಸೋಕೆ ಚಾಮುಂಡಿ ಬೆಟ್ಟಕ್ಕೆ ಹೋಗ್ಬೇಕೂಂತಿದ್ಯಲ್ಲ. ಈಗ ಕಾಲ ಕೂಡಿಬಂತು ನೋಡು' ಎಂದುದನ್ನು ಕೇಳಿ ಹಾಗೆಯೇ ಚಟ್ಟಂತ ನಿತ್ಕೊಂಡು,

'ಏನ್ ಸಮಾಚಾರರೀ? ಯಾರಾದ್ರೂ ಮೈಸೂರಿಗೆ ಹೋರ್ಟಿದಾರೋ ಅಥವಾ ನಿಮ್ಗೇನಾದ್ರೂ ಅಲ್ಲಿ ಕೆಲ್ಸ ಹಾಕಿದಾರೋ ನಿಮ್ಮ ಶಾಲೆಯವ್ರು. ಅಲ್ಗೆ ಟ್ರಿಪ್-ಗಿಪ್ ಅರೇಂಜ್ ಮಾಡಿದಾರೋ' ಎಂದು ಅರಳು ಹುರಿದಂತೆ ಒಮ್ಮೆಗೇ ಪಟಪಟಾಂತ ಪ್ರಶ್ನಿಸಿದಳು.

'ನೀನು ಹೇಳಿದ್ದು ಯಾವ್ದೂ ಇಲ್ಲ. ನನ್ಗೇನೆ ಮೈಸೂರಿಗೆ ವರ್ಗವಾಗಿದೆ!

'ಇದೇನೂಂದ್ರೆ ನೀವು ಹೇಳೋದು? ನಾವು ಶಿವಮೊಗ್ಗಾಕ್ಕೆ ಬಂದು ಎರಡು ವರ್ಷ ಸಹ ಆಗ್ಲಿಲ್ಲ. ಮತ್ತೆ ಮೈಸೂರಿಗೆ ಹೊರಡ್ಬೇಕೆ? ನನ್ಗಾಗಲ್ಲಪ್ಪ. ಈ ಪ್ಯಾಕಿಂಗ್ ಕೆಲ್ಸ ಮೊನ್ನೆ ತಾನೆ ಮಾಡಿದಂತಿದೆ. ಮತ್ತಾಗ್ಲೆ ಕಟ್ಟೋದೂಂದ್ರೆ' ಎಂದು ಆಕಾಶವೇ ಕಳಚಿ ತಲೆಯ ಮೇಲೆ ಬಿತ್ತೆಂಬಂತೆ ಅಲ್ಲೆ ಇದ್ದ ಕುರ್ಚಿಯ ಮೇಲೆ ಕುಕ್ಕರಿಸಿದಳು. ಸಂಸಾರಕ್ಕೆ ಒಂದು ಸಾಮಾನಿಲ್ದಿದ್ರೂ ನಡ್ಯೋದಿಲ್ಲ. ಹಾಗಾಗಿ ಈ ಹದಿನೈದು ವರ್ಷಗಳಲ್ಲಿ ಮನೆಗೆ ಸಾಕಷ್ಟು ಸಾಮಾನು ಕೂಡಿಸಿದ್ದು. ಈ ಟ್ರಾನ್ಸ್‌ಫರ್ ಗದ್ದಲದಲ್ಲಿ ಪ್ರತಿಸಲವೂ ಎಷ್ಟೋ ಸಾಮಾನುಗಳು ಹಾಳಾಗಿ ಬಿಡುತ್ತಿದ್ದವು. ಈ ಶಿವಮೊಗ್ಗೆಗೆ ಬರ್ಬೇಕಾದ್ರೆ ಎಷ್ಟೇ ಜಾಗರೂಕತೆ ವಹ್ಸಿದ್ರೂ ಟೀ ಸೆಟ್ಟು, ಷೋಕೇಸ್ ಸಾಮಾನು ಎಲ್ಲಾ ಹಾಳಾಗಿದ್ದು ಈ ಸರ್ಕಾರಿ ನೌಕರಿಯೂ ಸಾಕು, ಮೂರು ಮೂರು ದಿನಕ್ಕೆ ಈ ಪರದಾಟವೂ ಸಾಕು ಎನ್ನಿಸಿತ್ತವಳಿಗೆ. ತನ್ನ ತಂದೆ ಹುಡ್ಕೀ ಹುಡ್ಕೀ ಸರಕಾರಿ ನೌಕರಿಯವರಿಗೇ ಕೊಟ್ಟದ್ದು ನೆನಪು ಬಂತು. ಗಂಡನಿಗೆ ಕಾಫಿ ಮಾಡುತ್ತಿದ್ದಂತೆಯೇ ಹಿಂದಿನ ನೆನಪುಗಳು ಮರುಕಳಿಸಿದವು.

ತಾನಿನ್ನೂ ಕಾಲೇಜು ಮೆಟ್ಟಿಲು ಹತ್ತುತ್ತಿದ್ದಂತೆಯೇ ಜಮೀನ್ದಾರರ ಮಗನಿಗೆ ತನ್ನನ್ನು ಕೇಳಲು ಬಂದಿದ್ದರು. ಅಮ್ಮನಿಗೆ ಈ ಸಂಬಂಧ ಮಾಡಲು ತುಂಬಾ ಆಸೆ ಇತ್ತು. ತಮ್ಮ ಮನೇಲಂತೂ ಮಗಳು ಇಡಲಿಲ್ಲ. ತೊಡಲಿಲ್ಲ. ಶ್ರೀಮಂತರ

ಮನೆಗಾದ್ರೂ ಕೊಟ್ಟರೆ ಇಟ್ಟೂ ತೊಟ್ಟೂ ಚೆನ್ನಾಗಿ ಬಾಳ್ತಾಳೇಂತ ಅವರ ವಿಚಾರ. ಆದರೆ ತಂದೆಗೆ ಮಾತ್ರ ಈ ಸಂಬಂಧ ಸುತಾರಾಂ ಇಷ್ಟವಿರಲಿಲ್ಲ. ಅಮ್ಮ ಒತ್ತಾಯಿಸಿದಾಗ 'ನಿನಗೇನು ಗೊತ್ತು ಸಾಹುಕಾರರ ಸಹವಾಸ. ಇಂದು ಲಕ್ಷಾಧಿಪತಿಗಳು ನಾಳೆ ಬಿಕ್ಷಾಧಿಪತಿಗಳು. ಹಣದ ಮದದಲ್ಲಿ ಹುಡುಗನೇನಾದರೂ ದುಶ್ಚಟಕ್ಕೋ ದುಷ್ಟ ಸಹವಾಸಕ್ಕೋ ಬಿದ್ದಾಂದ್ರೆ ಮಗಳ ಬಾಳು ಗೋಳಾದೀತು' ಎಂದು ತಡೆದರು.

'ಸಾಹುಕಾರರಲ್ಲದವರೆಲ್ಲಾ ಒಳ್ಳೆಯವರೇ ಇರ್ತಾರೇನು ಹಾಗಾದ್ರೆ?'

'ಹಾಗಲ್ಲಾ ಸರಸೂ, ವಿದ್ಯೆಯ ಜೊತೆ ಸ್ವಲ್ಪ ವಿವೇಕವೂ ಕೂಡಿರುತ್ತದೆ. ಅಲ್ಲದೇ ಹಣದ ಕೊರತೆ ಮಜಾ ಮಾಡೋ ಮನೋಭಾವಕ್ಕೆ ಒಂದು ಲಗಾಮಿದ್ದಂತೆ ವಿದ್ಯೆ ಬೇರೆಯವರಿಗೆ ಕದಿಯಲಿಕ್ಕಾಗದ ಸಂಪತ್ತು. ಶ್ರೀಮಂತರಲ್ಲಿ ಸೊಕ್ಕಿಲ್ಲದವರು ಅಪರೂಪ. ಬಡವರಿಗೆ ಶ್ರೀಮಂತರ ಸಹವಾಸ ಹೊಂದಿಕೆಯಾಗುವುದಿಲ್ಲ. ಸರ್ಕಾರಿ ನೌಕರಿಯಲ್ಲಿದ್ದ ಇವನಿಗೆ ಕೊಟ್ಟರೆ ಬರಬಿದ್ದರೂ ಸಂಬಳ ಮಾತ್ರ ತಪ್ಪುವುದಿಲ್ಲ. ಸರ್ಕಾರಿ ನೌಕರಿ ಬಾಳುವೆಗೆ ದೊಡ್ಡ ಆಸರೆ'

'ಏನು ಆಸರೇನೋ ಏನೋ, ಏನು ಬೇಕಾದ್ರೂ ಒಂದನೇ ತಾರೀಖಿನ ದಾರಿ ನೋಡ್ಬೇಕು. ಖರ್ಚು ಹೆಚ್ಚಾದರೂ ಬಂದಷ್ಟರಲ್ಲೇ ಮುಗಿಸಿಬಿಡಬೇಕು'

'ಏನ್ ದಡ್ಡರಂತೆ ಮಾತಾಡ್ತೀಯಲ್ಲ. ಆದಾಯ ಇಂತಿಷ್ಟೇ ಇರುವುದರಿಂದ, ಖರ್ಚನ್ನು ಒಂದು ಮಿತಿಯಲ್ಲಿ ಮಾಡುವ ಸ್ವಭಾವ ಬೆಳೆಯುತ್ತದೆ. ಇದು ಬೆಳೆಯುವ ಮಕ್ಕಳಿಗೆ ಒಂದು ಉತ್ತಮ ಜೀವನಪಾಠ. ಮಕ್ಕಳಲ್ಲಿ ಮಿತಿಮೀರಿದ ನಡತೆ ಬರುವುದಿಲ್ಲವಾಗಿ ಅವರನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಸುಲಭವಾಗ್ತದೆ. ಅಷ್ಟಲ್ದೆ ಸರ್ಕಾರಿ ನೌಕರೀಲಿ ಅನೇಕ ಸೌಲಭ್ಯಗಳೂ ಇರುತ್ತವೆ. ವಯಸ್ಸಾದ ನಂತರ ದುಡೀದಿದ್ರೂ ಜೀವನಕ್ಕೆ ಸಾಕಾಗುವಷ್ಟು ನಿವೃತ್ತಿ ವೇತನ ಬರುತ್ತದೆ. ಸರ್ವಿಸ್ನಲ್ಲಿದ್ದಾಗ ಎರಡು ವರ್ಷಕ್ಕೊಂದು ಸಾರಿ ತಮ್ಮ ಸ್ವಂತ ಊರಿಗೆ ಹೋಗಲು ಇಡೀ ಕುಟುಂಬಕ್ಕೆ ಪ್ರಯಾಣ ಭತ್ಯೆ ಕೊಡುತ್ತಾರೆ. ನಾಲ್ಕು ವರ್ಷಕ್ಕೊಂದು ಸಾರಿ ಇಡೀ ಇಂಡಿಯಾದಲ್ಲಿ ಎಲ್ಲಿಗೆ ಬೇಕಾದರೂ ಹೆಂಡತಿ ಮತ್ತು ಅಪ್ರಾಪ್ತ ವಯಸ್ಕ ಮಕ್ಕಳೊಂದಿಗೆ ಹೋಗಲು ಪ್ರವಾಸ ಭತ್ಯೆ ಸಹ ಸಿಗುತ್ತದೆ.

ಇಷ್ಟೆಲ್ಲಾ ಕೊಡ್ತಾರಾ? ಮತ್ತೆ ಒಂದು ಸಾರೀನೂ ನಮ್ಮನ್ನ ಎಲ್ಲೂ ಕರ್ಕೊಂಡೇ ಹೋಗಿಲ್ಲ ನೀವು.

'ಯಾವಾಗ ಕರ್ಕೊಂಡು ಹೋಗ್ಬೇಕು? ಪ್ರತಿ ರಜೆಗೂ ಏನಾದ್ರೂ ಕೆಲ್ಸ. ರಜೆ ತಗೊಂಡು ಹೋಗೋಣಾಂದ್ರೆ ಹುಡುಗರಿಗೆ ಪಾಠ ಹಾಳು. ಹಾಗಾಗಿ ಆಗ್ಲಿಲ್ಲ. ಮುಂದಿನ ರಜೆಗೆ ಹೇಗಾದ್ರೂ ಮಾಡಿ ಬದರಿ, ಕೇದಾರಕ್ಕೆ ಹೋಗ್ಬರೋಣ.'

'ನೀವು ಹೇಳೋದೆಲ್ಲಾ ಕೇಳಿದ್ರೆ, ಸರ್ಕಾರಿ ನೌಕರೀಲಿ ಇರೋ ಹುಡುಗನಿಗೆ ಕೊಡೋದು ಸರಿ ಅನ್ಸುತ್ತೇರಿ. ಆದರೆ ಅದೃಷ್ಟ ಯಾರು ಕಂಡಿದ್ದಾರೆ? ತಂದೆ-ತಾಯಿಗಳಾಗಿ ನಾವು ಎಲ್ಲಾ ರೀತಿಯಿಂದ ಯೋಚಿಸ್ಬೇಕಾಗುತ್ತೆ. ಎಲ್ಲಾದರೂ ಹುಡುಗನ ಆಯಸ್ಸು ಬೇಗ ತೀರಿದರೆ, ನೌಕರಿ ನಂಬಿಕೊಂಡು ಬಾಳುತ್ತಿದ್ದ ಸಂಸಾರದ ಗತಿ ಏನು? ಎಂದು ಅಮ್ಮ ಆತಂಕಗೊಂಡಾಗ, 'ಅದಕ್ಕೂ ಎಲ್ಲಾ ವ್ಯವಸ್ಥೆ ಮಾಡಿದಾರೆ ಕಣೆ. ಅವನ ಹೆಂಡತಿಗೆ, ಅಪ್ರಾಪ್ತ ವಯಸ್ಸಿನ ಮಕ್ಕಳಿಗೆ ಪಿಂಚಣಿ ಕೊಡ್ತಾರೆ, ಮತ್ತೆ ಪರಿಹಾರ ಧನ ಕೊಡ್ತಾರೆ. ಹಾಗಾಗೋ ಘಟನೆಗಳು ಬಹಳ ಕಡಿಮೆ. ಪೂರ್ತಿ ಸರ್ವೀಸಾಗಿ ನಿವೃತ್ತಿಯಾದಾಗಂತೂ ಕೈತುಂಬಾ ಹಣ. ಗ್ರ್ಯಾಚ್ಯುಟಿ, ಪ್ರಾವಿಡೆಂಟ್ ಫಂಡ್, ಇನ್ಶೂರೆನ್ಸ್ ಹಣ ಎಲ್ಲಾ ಸಿಕ್ಕುತ್ತೆ. ಅಲ್ದೆ ನಿವೃತ್ತಿ ವೇತನದ ಹತ್ತು ವರ್ಷ ಸಂಬಳದ ಮೂರನೇ ಒಂದು ಭಾಗವನ್ನು ಮುಂಗಡವಾಗಿ ಕೊಟ್ಟು ಬಿಡುತ್ತಾರೆ. ಈ ಎಲ್ಲಾ ಹಣವನ್ನು ಯಾವುದಾದರೂ ಉದ್ಯಮದಲ್ಲಿ ತೊಡಗಿಸಿಕೊಂಡು ಹಣ ಬರುವಂತೆ ಮಾಡಿಕೊಳ್ಳಬಹುದು. ಬ್ಯಾಂಕಿನಲ್ಲಿಟ್ಟರೂ ಬಡ್ಡಿ ಬರುತ್ತೆ. ಮನೆ ಕಟ್ಟಿಸಿಕೊಂಡರೆ ಈ ಕಡೆ ಆಸ್ತಿಯೂ ಆಗುತ್ತೆ. ಆ ಕಡೆ ಬಾಡಿಗೆಯೂ ಬರುತ್ತೆ. ನಾನು ಮಾತ್ರ ನೀನೆಷ್ಟೇ ಹಾರಾಡಿದ್ರೂ ನನ್ನ ಮಗಳನ್ನು ಸರ್ಕಾರಿ ನೌಕರಿಯೋನಿಗೇ ಕೊಡೋದು' ಎಂದು ಅಪ್ಪ ಖಡಾಖಂಡಿತವಾಗಿ ಹೇಳ್ದಾಗ' ಅವ್ರು ಹೇಳೋದೂ ಸರೀನೇ' ಎಂದು ಅಮ್ಮನೂ ಸುಮ್ಮನಾಗಿದ್ದಳು.

ಅಲ್ಲಿಂದ ಕೆಲವೇ ತಿಂಗಳಲ್ಲಿ ಒಬ್ಬ ಸರ್ಕಾರಿ ನೌಕರಿಯಲ್ಲಿರುವ ವರನೂ ಬಂದಿದ್ದ. ಅಮ್ಮ ಆಗ ಮದುವೆ ಮಾಡಬೇಕೆಂದು ಅಪ್ಪನಿಗೆ ಗಂಟು ಬಿದ್ದಳು. ಅಪ್ಪನದು ಯಾವಾಗಲೂ ತುಂಬಾ ದೂರಾಲೋಚನೆ. ಅಲ್ಲದೇ ತನ್ನ ವಿಚಾರವೇ ಸರಿ ಎಂಬ ನಂಬಿಕೆ ಬೇರೆ. ಹಾಗಾಗಿ ಯಾರ ಮಾತಿಗೂ ಸೋಲುತ್ತಿರಲಿಲ್ಲ. ಅಮ್ಮ ಮದುವೆ ಮಾಡಬೇಕೆಂದಾಗ 'ಅವಳು ಡಿಗ್ರಿ ಪಡೆಯುವ ತನಕ ನೀನು ಜಪ್ಪಯ್ಯ ಎಂದರೂ ನಾನು ಮಗಳ ಮದ್ವೆ ಮಾಡೋದಿಲ್ಲ. ಜೀವನದಲ್ಲಿ ಯಾವ ಸಂದರ್ಭ ಹೇಗೆ ಬರುತ್ತೋ ಹೇಳೋಕಾಗೊಲ್ಲ. ಹುಡುಗಿ ತನ್ನ ಕಾಲ್ಮೇಲೆ ತಾನು ನಿಂತುಕೊಳ್ಳೋ ಶಕ್ತಿ ಪಡೀಬೇಕು. ಆಮೇಲೇನಿದ್ರೂ ಮದ್ವೆ ಮಾತು, ಅಂತ ಖಂಡತುಂಡವಾಗಿ ಹೇಳಿ, ನಾನು ಬಿ.ಎಸ್ಸಿ. ಮುಗಿಸೋತನಕ ಮದುವೆ ಸುದ್ದಿ ತೆಗೀಲಿಕ್ಕೇ ಆಸ್ಪದ ಕೊಟ್ಟಿರಲಿಲ್ಲ. ನಾನೂ ಸಹ ಕಡೇ ಪಕ್ಷ ಡಿಗ್ರಿ ಮುಗಿಯುವವರೆಗೂ ಮದ್ವೆ ಆಗೋಲ್ಲಾಂತ ಖಚಿತವಾಗಿ ಹೇಳಿದ್ದರಿಂದ ಅಮ್ಮ ಸುಮ್ಮನಾಗುವಂತಾಯಿತು. ನನಗೆ ಬಿ.ಎಸ್ಸಿ.ಯಲ್ಲಿ ಫಸ್ಟ್ ಕ್ಲಾಸಿನಲ್ಲಿ ಪಾಸಾಗಿತ್ತು. ಬಿ.ಎಡ್.ಗೆ ಸೇರ್ಕೊಬೇಕೊಂತಿದ್ದೆ. ಅಷ್ಟರಲ್ಲಿ ಕೇದಾರನಾಥರವರ ಮಗ ಹೈಸ್ಕೂಲ್‌ನಲ್ಲಿ ಕೆಲಸ ಮಾಡುತ್ತಿದ್ದ ಪವಿತ್ರನಿಗೆ ಕನ್ಯೆ ಬೇಕೆಂದು ಬಂದಾಗ, ತಂದೆ ಒಪ್ಪಿಗೆ ಸೂಚಿಸಿದರು. ಏಕೆಂದ್ರೆ ಅವರಿಗೆ ಪವಿತ್ರನ ನಡೆ-ನುಡಿ ಅವರ ತಂದೆ-

ತಾಯ್ಗಳ ಸ್ವಭಾವ ಬಹಳ ಒಪ್ಪಿಗೆಯಾದವು. ಅದೇ ಸಮಯಕ್ಕೆ ನೆರೆಮನೆ ನಾಗರತ್ನ 'ನನ್ನ ತಮ್ಮ ಪಿ.ಡಬ್ಲ್ಯುಡಿನಲ್ಲಿ ಇಂಜಿನೀಯರ್ ಆಗಿದ್ದಾನೆ. ವರದಕ್ಷಿಣೆ ಕೇಳುವವನಲ್ಲ. ನಿಮ್ಮ ಹುಡುಗಿ ಅವನಿಗೆ ತುಂಬಾ ಮನಸ್ಸಿಗೆ ಬಂದಿದ್ದಾಳೆ' ಎಂದು ಹೇಳಿದಳೆಂದು, ನಮ್ಮ ತಾಯಿ ಹೇಳಿದಾಗ,

'ಇಂಜಿನಿಯರ್ ಸಹವಾಸವೇ ಬೇಡ. ಅವರಲ್ಲಿ ಸರ್ಕಾರಕ್ಕೆ ಮೋಸ ಮಾಡ್ದೆ ಇರೋರನ್ನ ದೀಪ ಹಚ್ಚಿ ಹುಡುಕ್ಬೇಕು. ಸರ್ಕಾರಕ್ಕೆ ದ್ರೋಹ ಮಾಡೋದು ಒಂದೇ, ಸಮಾಜ ಸುಲ್ಕೊಂಡು ತಿನ್ನೋದು ಒಂದೆ. ನಮ್ಮ ಮಗಳು ಸರ್ಕಾರಕ್ಕೆ ವಂಚಿಸಿದ ಹಣದಲ್ಲಿ ಮಜಾ ಮಾಡೋದು ಬೇಡ ಎಂದು ಬಿಟ್ಟರು ಅಪ್ಪ. ಅವರ ದೃಷ್ಟಿಯಲ್ಲಿ ಶಿಕ್ಷಕರು ತುಂಬಾ ನ್ಯಾಯವಾಗಿರ್ತಾರೆ, ನೀತಿವಂತರಾಗಿರ್ತಾರೆ ಅನ್ನೋ ನಂಬಿಕೆ. ತಾವು ಶಿಕ್ಷಕರಾಗಿದ್ದ ಆದರ್ಶ ವ್ಯಕ್ತಿಗಳೆ ಅವರ ತಲೇಲಿ. 'ಇಂದಿನ ಸಮಾಜದಲ್ಲಿ ಶಿಕ್ಷಕರೇನು ಕಡಿಮೆಯಿಲ್ಲ. ಇಂದಿನ ಮೌಲ್ಯದ ಅಪವ್ಯಯಕ್ಕೆ ಶಿಕ್ಷಕರೇ ಮುಖ್ಯ ಹೋಣೆಗಾರರು' ಎಂಬ ವಿಚಾರ ಅವರ ಲಕ್ಷ್ಯಕ್ಕೇ ಬಂದಿರಲಿಲ್ಲ. ಹಾಗಾಗಿ ತನ್ನ ಮದುವೆಯನ್ನು ಗೌರ್ನಮೆಂಟ್ ಹೈಸ್ಕೂಲ್ ಶಿಕ್ಷಕರಾದ ಪವಿತ್ರರೊಡನೆ ಮಾಡಿದುದರಿಂದ ನನಗೀಗ ಈ ಪರದಾಟ ಎಂದುಕೊಂಡಳು ಭಕ್ತಿ.

ಮೊದಲೇನೋ ದಾಂಪತ್ಯ ಸುಖವಾಗಿಯೇ ಇತ್ತು. 'ಆರತಿಗೊಬ್ಬ ಮಗಳು ಕೀರ್ತಿಗೊಬ್ಬ ಮಗ' ಎಂಬಂತೆ ಪೂಜಾ ಹಾಗೂ ಅಭಿಷೇಕ್ ಹುಟ್ಟಿದಾಗ, ಇಬ್ರೇ ಮಕ್ಕಳು ಸಾಕೂಂತ ಅಂದುಕೊಂಡರು. ಆಗ ಒಬ್ಬನೇ ಮಗನ ತಾಯಿಯಾದ ಅವಳತ್ತೆ, 'ನಿನಗೆ ಭಾರ ಆದ್ರೆ ನಾನು ಸಾಕ್ತೀನಿ ಇನ್ನೊಂದು ಮಗು ಆಗಲಿ' ಎಂದರು. ಆಗ ಕಡೆಯದಾಗಿ ಪ್ರಸಾದ ಹುಟ್ಟಿದ. ಈಗ ಪೂಜಾ ಏಳನೇ ಕ್ಲಾಸಿನಲ್ಲಿ, ಅಭಿಷೇಕ್ ಐದರಲ್ಲಿ, ಪ್ರಸಾದ್ ಎರಡರಲ್ಲಿ ಓದುತ್ತಿದ್ದಾರೆ. ಶಿವಮೊಗ್ಗೆಗೆ ಟ್ರಾನ್ಸ್‌ಫರ್ ಆಗಿ ಬಂದಾಗ, ಇವರಿಗೆಲ್ಲಾ ಒಳ್ಳೆ ಸ್ಕೂಲಲ್ಲಿ ಅಡ್ಮಿಷನ್ ಪಡಿಬೇಕಾದ್ರೆ ಕಣ್ಣೀರು ಕಪಾಳಕ್ಕೆ ಬಂದ್ವು. ಎಷ್ಟೋ ಕಷ್ಟಪಟ್ಟು ಎಲ್ರಿಗೂ ಡೋನೇಷನ್ ಜೋಡ್ಸಿದ್ದಾಯ್ತು. ಈಗೊಂದೂವರೆ ವರ್ಷದಿಂದ ಚೆನ್ನಾಗಿ ಓದುತ್ತಾ ಇದ್ದರು. ಈ ವರ್ಷ ಶಾಲೆ ಪ್ರಾರಂಭವಾಗಿ ಐದು ತಿಂಗಳೂ ಆಗಿಲ್ಲ. ಆಗ್ಲೆ ಟ್ರಾನ್ಸ್‌ಫರೂಂದ್ರೆ ಆ ಮಕ್ಕಳ ಗತಿ ಏನು? ವರ್ಷದ ಮಧ್ಯೆ ಬದ್ಲಾಯಿಸ್ಸಿದ್ರೆ ಅವ್ರ ಸ್ಥಿತಿ ಏನು? ಕೇಳಿದ ತಕ್ಷಣ ಹೋದ ಊರ್ನ ಸ್ಕೂಲ್ನಲ್ಲಿ ಅಡ್ಮಿಷನ್ ಸಿಕ್ಕೋಕೆ ಸಾಧ್ಯವೆ? ಮರು ವರ್ಷ ಹೋದ್ರೂ ಮಕ್ಳು ಪುನಃ ಹೊಸವಾತಾವರಣಕ್ಕೆ, ಹೊಸ ಸ್ನೇಹಿತರಿಗೆ ಹೊರ ರೀತಿಯ ಬೋಧನೆಗೆ ಹೊಂದ್ಕೋಳ್ಳಬೇಕಾದ್ರೆ, ಅವ್ರಿಗೆ ಎಷ್ಟು ತೊಂದ್ರೆ? ಈ ಹೊಂದಾಣ್ಕೆ ಒಳಗೆ ಅವರ ಓದಿಗೆ ಎಂತಹ ಪೆಟ್ಟು ಬೀಳುತ್ತೆ. ಅಪ್ಪನಂತೂ ಸರ್ಕಾರಿ ನೌಕರಿಯಲ್ಲಿರೋರ್ಗೆ ಕೊಡೋದೂಂತ ಹಠ ಮಾಡಿ ಕೊಟ್ರು. ಈಗ

ಅದ್ರ ಸುಖ ಅನುಭವಿಸ್ತಿರೋ ನನ್ಗೇ ಗೊತ್ತು. ಎಷ್ಟು ಕಷ್ಟ ಆದ್ರೂ ಸರಿ. ನಾನಂತೂ ಮಕ್ಕಳ ವಾರ್ಷಿಕ ಪರೀಕ್ಷೆ ಆಗೋತನ್ಕ ಈ ಊರು ಬಿಡೋಲ್ಲ. ಈಗಂತೂ ಅವ್ರು ಒಬ್ಬರೇ ಹೋಗ್ಲಿ. ಈ ಕಾಲ್ವಿಲ್ಲದ ಕಾಲದ ಟ್ರಾನ್ಸ್‌ಫರ್‌ನಿಂದ ಅವ್ರು, ಅಲ್ಲಿ ಒಬ್ರೆ ಪರದಾಡಬೇಕು. ಇಲ್ಲಿ ನಾನೊಬ್ಬೆ ಮಕ್ಕಳನ್ನು ಕಟ್ಟಿಕೊಂಡು ಒದ್ದಾಡಬೇಕು. ಮಕ್ಳಿಗೂ ಅನೇಕ ವಿಧದಲ್ಲಿ ಅನಾನುಕೂಲ. ನನಗಂತೂ ಎರಡು ವರ್ಷಕ್ಕೊಮ್ಮೆ ಸಾಮಾನು ಪ್ಯಾಕ್ ಮಾಡಿ, ಪರಸ್ಥಳ ಸುತ್ತಿ, ಮೂರು ಮೂರು ದಿನಕ್ಕೂ ಹೊಸಜನಕ್ಕೆ ಹೊಂದ್ಕೊಂಡು ಸಾಕಾಗ್ಹೋಯ್ತು' ಎಂದು ಚಿಂತಿಸುತ್ತಿದ್ದಂತೆಯೇ., ಪವಿತ್ರ ಬಂದು,

'ಭಕ್ತಿ ಬುಧವಾರ ರಾತ್ರಿ ಬಸ್‌ಗೆ ರಿಜಿಸ್ಟ್ರೇಷನ್ ಸಿಕ್ಕಿದೆಯೆಂತೆ. ಈಗ ತಾನೆ ನಮ್ಮ ಫ್ಯೂನ್ ಟಿಕೇಟ್ ತಂದ್ಕೊಟ್ಟ. ನಾನು ಹೋಗಿ ಆದಷ್ಟು ಬೇಗ ಮನೆ ಹುಡ್ಕಿ ನಿಮ್ಮನ್ನು ಕರೆಸ್ಕೊಳ್ತೀನಿ.'

'ಏನ್ ಕರಸ್ಕೊಳ್ತೀರಿ? ಮನೆ ಸಿಕ್ಕಿದ್ರೂ ನಾವೆಲ್ಲಾ ಬರೋಕೆಲ್ಲಾಗುತ್ತೆ? ಹುಡುಗರ ಪರೀಕ್ಷೆ ಮುಗೀಬೇಡ್ವೆ? ವರ್ಷದ ಮಧ್ಯದಲ್ಲಿ ಡಿಸ್ಟರ್ಬ್ ಮಾಡಿದ್ರೆ ಮಕ್ಕಳ ಓದಿನ ಗತಿ ಏನು? ನೀವೇನ್ಬೇಕಾದ್ರೂ ಹೇಳಿ, ನನಗೆಷ್ಟಾದ್ರೂ ಕಷ್ಟ ಆಗ್ಲಿ, ಮಕ್ಕಳ ಪರೀಕ್ಷೆ ಮುಗ್ಯೋತನ್ಕ ಅವರ್ನಿಟ್ಕೊಂಡು ನಾನಿಲ್ಲೇ ಇರ್ತೀನಿ.'

'ನೀನು ಹೇಳೋದೂ ಸರೀನೇ ಅನ್ನು. ಮನೇ ಅಂತೂ ನೋಡ್ತೀನಿ. ನನಗೆ ಇರೋಕಾದ್ರೂ ಮನೆ ಬೇಕಲ್ಲ? ನನ್ಗಂತೂ ಹೋಟೆಲ್ ಊಟ ಸರೀನೇ ಹೋಗಲ್ಲ. ಒಂದಿನ ಆದ್ರೆ ಸರಿ. ಎರಡು ದಿನ ಆದ್ರೆ. ಸರಿ ತಿಂಗಳು ಗಟ್ಲೆ ಆ ಹೊಲಸು ಊಟ ಮಾಡ್ಕೊಂಡು ಯಾರಿರ್ತಾರೆ? ಮನೇಂತ ಇದ್ರೆ ಏನೋ ಒಂದು ಬೇಯಿಸ್ಕೊಂಡು ತಿನ್ನಬಹುದು.'

'ಮನೆ ಸಿಕ್ಕಿದ ಕೂಡ್ಲೆ, ಮಕ್ಕಳಿಗೆ ಯಾವ ಸ್ಕೂಲು ಚೆನ್ನಾಗಿದೇಂತ ತಿಳ್ಕೊಳ್ಳಿ. ಮುಂದಿನ ವರ್ಷಕ್ಕೆ ಅಡ್ಮಿಷನ್ ಆಗ್ಬೇಕಲ್ಲ. ಈಗ್ನಿಂದಲೇ ಪ್ರಯತ್ನ ಶುರುಮಾಡಿದ್ರೆ ಅಲ್ಲಿಗೆ ಬಂದು ಹತ್ತುತ್ತೆ.

'ಇದೆನೋ ಸರಿ. ನೋಡೋದಂತೂ ನೋಡ್ತೀನಿ. ಇದೆಲ್ಲಾ ನಿಭಾಯ್ಸೋದು ಹೇಗೆ ಅನ್ನೋದೆ ಪ್ರಶ್ನೆ. ಎರಡು ಕಡೆ ಮನೆ ಬಾಡಿಗೆ, ಎರಡು ಕಡೆ ಅಡಿಗೆ, ಅಲ್ದೆ ನೀವೆಲ್ಲಾ ಇಷ್ಟು ದೂರ ಇರೋವಾಗ ತಿಂಗಳಿಗೊಂದ್ಸಾರಿಯಾದ್ರೂ ಇಲ್ಲಿಗೆ ಬಂದು ನಿಮ್ಮ ಯೋಗಕ್ಷೇಮ ವಿಚಾರಿಸ್ಕೊಂಡು ಅವಶ್ಯಕವಾದ ವ್ಯವಸ್ಥೆ ಮಾಡಿ ಹೋಗ್ದೆ ಇದ್ರೆ, ನಾನು ಅಲ್ಲಿ ನೆಮ್ಮದಿಯಿಂದ ಇರಲು ಹೇಗೆ ಸಾಧ್ಯ? ಇಷ್ಟಕ್ಕೆಲ್ಲಾ ಹಣ ಎಲ್ಲಿಂದ ಜೋಡುಸ್ಲಿ? ಮೇಲಾಗಿ ಮುಂದಿನ ವರ್ಷ ಒಳ್ಳೇ ಸ್ಕೂಲಲ್ಲಿ ಅಡ್ಮಿಷನ್

ಸಿಕ್ರೆ ಸ್ಕೂಲಿನವರು ಬೇರೆ, ಡೋನೇಷನ್ ಎಷ್ಟು ಕೇಳ್ತಾರೋ ಏನೋ? ಒಳ್ಳೆ ಸ್ಕೂಲೂಂದ್ರೆ ಈ ಕಾಲ್ದಲ್ಲಿ ಒಬ್ಬೊಬ್ರಿಗೆ ಐದು ಸಾವಿರ ಆದ್ರೂ ಕೇಳ್ಬಹ್ದು. ಇದ್ರ ಮೇಲೆ ಯೂನಿಫಾರ್ಮೂ ಛೇಂಜ್ ಆಗುತ್ತೆ. ಅದಕ್ಕೇರೆ ಖರ್ಚು. ನನಗಂತೂ ಏನು ಮಾಡ್ಬೇಕೂ ಅನ್ನೋದೆ ತೋಚ್ತಿಲ್ಲ' ಅಂತ ಪೇಚಾಡಿದ ಪವಿತ್ರ.

'ಇಬ್ರೆ ಮಕ್ಳು ಸಾಕೂಂದ್ರೆ ನಿಮ್ಮಮ್ಮ 'ನಿಮ್ಗೆ ಭಾರ ಆದ್ರೆ ನಾನ್ ಸಾಕ್ತೀನಿ ಇನ್ನೊಂದಾಗ್ಲಿ' ಅಂದ್ರಲ್ಲ. ಇನ್ನೊಂದು ಮಗೂ ಖರ್ಚನ್ನು ಅವ್ರನ್ನೇ ನೋಡ್ಕೊಳೀಂತ ಹೇಳಿ'

'ಅಮ್ಮನ್ನ ಬಯ್ಯೋಕೆ ಏನಾದ್ರೂ ಕಾರಣ ಸಿಕ್ಕಿದ್ರೆ ಸಾಕೂಂತೀಯ. ಅವರೇನು ಕೊಡೋಲ್ಲ ಅಂದಿದಾರ? ನಾವೇ ಕೇಳಿಲ್ಲ, ತೋಗೋಳ್ತಾ ಇಲ್ಲ.'

'ಯಾವಾಗ ತೊಗೋಳೋಲ್ಲಾ ಅಂದಿದೀವ್ರಿ? ಬರೋ ಒಂದೂವರೆ ಸಾವ್ರ ಮನೆ ಟ್ಯಾಕ್ಸ್, ತಮ್ಮಿಬ್ಬರ ಖರ್ಚಿಗೇ ಬೇಕೂಂತ ಹೇಳಿದ್ರು. ನಮ್ಗೆಲ್ಲಿಂದ ಕೊಡ್ತಾರೆ.?

'ಅದೇ ಕಣೇ ನಾನು ಹೇಳಿದ್ದು. ಅಮ್ಮ ಎಷ್ಟು ಒಳ್ಳೆಯವರು. ನಿನಗೆ ಉಪಚಾರ ಮಾಡ್ತಾರೆ ಬೇಕಾದ್ರೆ. ಆದ್ರೆ ಅವರ ಮಡಿ, ಧಾರಾಳತನ ನಿನಗೆ ಸರಿ ಹೋಗೋಲ್ಲ. ಸಣ್ಣ ಸಣ್ಣ ವಿಚಾರಕ್ಕೂ ರಾದ್ಧಾಂತ ಮಾಡಿಬಿಡ್ತಿ. ನನ್ಗೂ ನೋಡಿ ನೋಡಿ ಸಾಕಾಗಿ, ವಯಸ್ಸು ಹೋದ ಕಾಲ್ದಲ್ಲಿ ಮನಸ್ಸು ನೋವು ಮಾಡ್ಕೊಂಡು ಯಾಕಿರ್ಬೇಕೂಂತ ಅವರನ್ನ ಊರಲ್ಲೇ ಇದ್ಬಿಡೀಂತ ಹೇಳ್ಬಿಟ್ಟೆ. ಈ ಇಳಿ ವಯಸ್ನಲ್ಲಿ ಅಪ್ಪನ್ಗೆ ಮನೆ ಜವಾಬ್ದಾರಿ. ಅಮ್ಮ ಕೈ ಬಾಯಿ ಸುಟ್ಕೊಂಡು ಅಡ್ಗೆ ಮಾಡ್ಬೇಕು. ಅವ್ರನ್ನ ನೆನಸ್ಕೊಂಡ್ರೆ ಮಗಾ ಅನ್ನಿಸ್ಕೊಂಡೋನು ಮುಪ್ಪಿನ ಕಾಲ್ದಲ್ಲಿ ಅವ್ರಿಗೆ ಏನೂ ಮಾಡೋಕಾಗ್ಲಿಲ್ವಲ್ಲಾಂತ ಎಷ್ಟು ನೋವಾಗುತ್ತೆ ಅನ್ನೋದು ದೇವರಿಗೆ ಗೊತ್ತು. ಹಾಗಂತ ಅವ್ರನ್ನ ಇಲ್ಲಿಗೇ ಕರ್ಕೊಂಡು ಬಂದ್ರೆ, ನೀನೂ ಬೇಜಾರು ಮಾಡ್ಕೊಳ್ತಿ. ಅಮ್ಮ-ಅಪ್ಪಂಗೂ ಸಂತೋಷ ಇರೋಲ್ಲ; ನನ್ಗೂ ನೆಮ್ಮದಿ ಸಿಕ್ಕೋಲ್ಲ. ಈ ವಾತಾವರಣದಲ್ಲಿ ಮಕ್ಕಳಿಗೂ ಅಸಮಾಧಾನದ ಸ್ಥಿತಿ. ಇದನ್ನೆಲ್ಲಾ ಯೋಚಿಸಿ, ಆ ವಿಚಾರಾನೆ ಬಿಟ್ಟು ಬಿಟ್ಟೆ. ಆದ್ರೆ ನೀನೊಬ್ಳು ಸ್ವಲ್ಪ ಹೊಂದ್ಕೊಂಡು ಬಿಟ್ರೆ ಅನೇಕ ಸಮಸ್ಯೆಗಳು ಪರಿಹಾರವಾಗಿ ಬಿಡುತ್ವೆ. ಜೊತೆಗೆ ಎಲ್ಲಾ ರೀತಿಯಿಂದ ನನ್ಗೆ ಅನ್ಕೂಲವಾಗುತ್ತೆ.

'ನಿಮ್ಮ ಅಪ್ಪ-ಅಮ್ಮ ಬಂದ್ಬಿಟ್ರೆ, ನಿಮ್ಮೆಲ್ಲಾ ತೊಂದ್ರೆ ಕಡಿಮೆ ಆಗಿಬಿಡುತ್ತಾ? ಅವ್ರನ್ನ ಇಲ್ಲಿ ತಂದು ಕೂಡೋಕೆ ನಿಮ್ದೊಂದು ಪ್ಲಾನು ಅಷ್ಟೆ.'

'ಇದನ್ನು ಪ್ಲಾನೂ ಅಂದ್ಕೊಳ್ತೀಯಲ್ಲೇ. ಪ್ಲಾನಲ್ಲಾ, ಫ್ಯಾಕ್ಟು, ನೋಡು

ಅವರುಗಳು ನಮ್ಜೊತೇಲೇ ಇದ್ರೆ ಅವರು ಖರ್ಚು ಮಾಡ್ಕೊಳ್ತಿರೋ ಒಂದೂವರೆ ಸಾವಿರ ನಮಗೇ ಸಿಕ್ಕಿ, ನನ್ನ ಆರ್ಥಿಕ ತೊಂದರೆಗಳು ಎಷ್ಟೋ ಕಡಿಮೆಯಾಗುತ್ತೆ. ಅವ್ರಿರೋ ಮನೇನೂ ಬಾಡ್ಗೆಗೆ ಕೊಟ್ರೆ ಮತ್ತೊಂದು ಐನೂರು ಸಿಗುತ್ತೆ. ಅಮ್ಮನ ನೆರವೂ ಮನೇಲಿ ಸಿಕ್ಕುತ್ತೆ. ಕೆಲಸ್ದವ್ರು ಕೈಕೊಟ್ರೂ ನಿಂಗೆ ಹೆಚ್ಚು ತೊಂದರೆ ಆಗೋಲ್ಲ. ಅವ್ರಿಗಾಗಿ ಏನು ಮಹಾ ಒಂದೈದುನೂರು ಹೆಚ್ಚೂಂದ್ರೆ ಒಂದಾರುನೂರು ಖರ್ಚಾಗಬಹ್ದು. ಉಳಿದ್ದೆಲ್ಲಾ ನಮ್ಗೇ ಸಿಗುತ್ತೆ. ಪಾಪ ಅದನ್ನು ತೊಗೊಂಡು ಅವ್ರೇನು ಮಾಡ್ತಾರೆ?'

'ನಿಮ್ತಂದೆ ಜೊತೇಲಿ ಹೇಗಾದ್ರೂ ಹೊಂದಿಸ್ಕೋತೀನಪ್ಪ. ನಿಮ್ತಾಯಿದೇ ಕಿರಿಕಿರಿ. ನನಗ್ಯಾಕೋ ನಮ್ಗೆ ತೊಂದರೆ ಆದ್ರೂ ಅಡ್ಡಿ ಇಲ್ಲ. ಅವರ್ಜೊತೆ ಇರೋದು ಆಗೋಲ್ಲ ಅನ್ಸುತ್ತೆ.'

'ಅಲ್ವೇ? ಅದೇನು ಅಮ್ಮನ ಬಗ್ಗೆ ಹಾಗ್ಮತಾಡ್ತೀಯಲ್ಲ? ಅವರ್ಗಾಗೆ ನಮ್ಗೆ ಒಳ್ಳೇದಾಗ್ಲಿಂತ ಬಯಸೋರು ಜಗತ್ನಲ್ಲೇ ಯಾರೂ ಇಲ್ಲ. ಅದಿರ್ಲಿ, ನೀನು ನನ್ನ ಬಗ್ಗೆ ಎಂದಾದ್ರೂ ಯೋಚ್ನೆ ಮಾಡಿದೀಯಾ? ನಿನ್ಗೆ ಸ್ವಲ್ಪಾನೂ ಬೇಜಾರಾಗ್ಬಾರ್ದೂಂತ ಎಷ್ಟು ಅಡ್ಜೆಸ್ಟ್ ಮಾಡ್ಕೋಳ್ತೀನಿ. ನಿನ್ನ ತಂಗಿ ಮದ್ವೇಲಿ ಸಾವಿರ ರೂಪಾಯಿನ ಸೀರೇನೇ ಉಡುಗೊರೆ ಕೊಡ್ಬೇಕೂಂತ ಹಠ ಹಿಡಿದಿ. ನನ್ನ ಕೈಲಿ ಹಣ ಇಲ್ದಿದ್ರೂ ನಿನಗೆ ಬೇಜಾರಾಗ್ಬಾರ್ದೂಂತ ಕೃಷ್ಣಶೆಟ್ಟಿ ಅಂಗ್ಡೀಲಿ ಸಾಲ ಮಾಡಿ ಸೀರೆ ತಂದ್ಕೊಟ್ಟೆ. ನಿನ್ನ ತಮ್ಮ ಪಿ.ಯು.ಸಿ. ಮ್ಯಾತ್ಸ್ ಚೆನ್ನಾಗಿ ಮಾಡಿಲ್ಲ. ಅವ್ನು ಇಂಜಿನಿಯರಿಂಗ್‌ಗೆ ಹೋಗ್ಬೇಕಂತೆ. ಹೇಗಾದ್ರೂ ಮಾಡಿ ಮೆರಿಟ್ ಸೀಟ್ ಕೊಡಿಸ್ರಿ, ನಮ್ತಂದೇಗೆ ಡೋನೇಷನ್ ಕೊಡೋಕಾಗೋಲ್ಲ ಎಂದೆ. ಮಾರ್ಕ್ಸ್ ಹಾಕ್ಸೋದು ಹಾಕೀಂತ ಕೇಳೋದು ಇದೆಲ್ಲಾ ನನ್ನ ತತ್ವಕ್ಕೆ ವಿರುದ್ಧ ಆದ್ರೂ ನೀನು ಒದ್ದಾಡೋದು ನೋಡಿ, ನಮ್ಮ ಚಿಕ್ಕಮ್ಮನ ಮಗನಿಗೆ ದಮ್ಮಯ್ಯಾ ಅಂದು, ಅವನ ಸ್ನೇಹಿತನಿಂದ ನಿನ್ನ ತಮ್ಮನ ಮ್ಯಾತ್ಸ ಪೇಪರ್‌ಗೆ ತೊಂಬತ್ತಾರು ಅಂಕಿ ಹಾಕ್ಸಿ ಅವನಿಗೆ ಇಂಜನಿಯರಿಂಗ್‌ನಲ್ಲಿ ಮೆರಿಟ್ ಸೀಟ್ ಸಿಗೋ ಹಾಗೆ ಮಾಡ್ದೆ. ಆದ್ರೆ ನೀನೆಂದಾದ್ರೂ ನನ್ಗೆ ಸಂತೋಷ ಆಗ್ಬೇಕು, ಬೇಜಾರಾಗ್ಬಾರ್ದೂಂತ, ಒಂದ್ಸಾರಿಯಾದ್ರೂ ಯೋಚಿಸಿದ್ದೀಯಾ? ಗಂಡ ಮಾತ್ರ ಹೆಂಡ್ತೀಗೆ ಬೇಕಾದ್ದೆಲ್ಲಾ ಮಾಡ್ಬೇಕು; ಹೆಂಡ್ತಿ ಮಾತ್ರ ಅವ್ನು ಸಾಯ್ತಿದ್ರೂ ಸುಮ್ನಿರ್ಬೇಕು? ಆಕೆಗೂ ಸಹಕರಿಸಿಕೊಂಡು ಹೋಗೋ ಜವಾಬ್ದಾರಿ ಇರ್ಬಾರ್ದಾ?

'ನಿಮ್ಗೇನ್, ನಾನ್ ತೊಂದ್ರೆ ಕೊಟ್ಟಿರೋದು? ಏನನ್ಯಾಯ ಮಾಡೀದೀನಿ?'

'ನಿಜಾ, ನಾನು ಒಪ್ಕೊಳ್ಳೀನಿ. ನೀನೊಳ್ಳೆ ಜಾಣೆ. ಚೊಕ್ಕವಾಗಿ ನನ್ಗೆ ಯಾವ

ಜವಾಬ್ದಾರಿ ಹಾಕ್ದೆ, ಸಂಸಾರ ನಡೆಸ್ಕೊಂಡು ಹೋಗ್ತಿ. ಬಂದಷ್ಟು ಹಣದಲ್ಲೇ ಎಲ್ಲಾ ನಿಭಾಯಿಸ್ತೀ. ಇದ್ಬೇಕು ಅದ್ಬೇಕೂಂತ ಎಂದೂ ಕಾಡಿಲ್ಲ. ಅದಿಲ್ಲ ಇದಿಲ್ಲ ಅಂತ ನನ್ನನ್ನು ಮೂದಲಿಸಿಲ್ಲ. ನಮಗೆಷ್ಟು ಇದ್ಯೋ ಅಷ್ಟರಲ್ಲೇ ತೃಪ್ತಿಪಟ್ಕೊಂಡು ಸಂತೋಷವಾಗಿದ್ದಿ. ಮನೆಗೆ ಬಂದ್ರೆ ನೆಮ್ಮದಿ ಸಿಕ್ಕೋ ಹಾಗೆ ಎಲ್ಲಾ ನೋಡ್ಕೋತಿ. ಎಂದೂ ಯಾವ್ದಕ್ಕೂ ಜಗಳ ಕಾಯೋಲ್ಲ. ಕೆಲವರ ಜೀವನ ನೋಡಿದ್ರೆ ಗಾಬರಿ ಆಗುತ್ತೆ. ಮನೆ ಅನ್ನೋದು ನರಕ ಅನ್ನೋ ಹಾಗೆ ಮಾಡಿಬಿಡ್ತಾರೆ. ನೀನು ಒಳ್ಳೆ ತಿಳವಳಿಕೆ ಉಳ್ಳವಳು. ಆದ್ರೆ ನನ್ನನ್ನು ಅಷ್ಟು ಪ್ರೀತಿಯಿಂದ ಸಾಕಿ, ಇಷ್ಟು ಮುಂದೆ ತಂದ ತಾಯಿ–ತಂದೇನ ನಮ್ಜೊತೇಲಿ ಇಟ್ಕೊಳ್ಳೋಕೆ ಆಗೋಲ್ಲಾಂದ್ರೆ, ನಾನು ಒಳಗೇ ಎಷ್ಟು ದುಃಖದಿಂದ ಕುದೀತಿರಬಹುದೂಂತ ಎಂದಾದ್ರೂ ಯೋಚಿಸಿದ್ದೀಯಾ? ಅವರುಗಳಿಗಾದ್ರೂ ಈ ವಯಸ್ನಲ್ಲಿ ಮೊಮ್ಮಕ್ಕಳ ಜೊತೆ ಇರ್ಬೇಕೂಂತ ಆಸೆ ಆಗೋಲ್ವೆ? ಅವರ ಕಷ್ಟ ಏನು, ಸುಖ ಏನೂಂತ ನೋಡ್ಕೊಳ್ಳೋಕೆ ಆಗೋಲ್ವಲ್ಲಾಂತ ಒಳಗೇ ಎಷ್ಟು ಸಂಕ್ಟ ಪಡ್ತಾ ಇದೀನಿ ಅಂತ ನಿನ್ಗೇನು ಗೊತ್ತು? ಅವ್ರನ್ನ ನಮ್ಜೊತೇಲಿ ಇಟ್ಕೊಂಡ್ರೆ, ನಮ್ಗೆ ಹಣದ ಸಹಾಯವೂ ಆಗುತ್ತೆ, ತಂದೆ–ತಾಯೀನ ಇಳೀ ವಯಸ್ನಲ್ಲಿ ನೋಡ್ಕೋಳ್ತಾ ಇದ್ದೀನಲ್ಲ ಅಂತ, ನನಗೆ ನೆಮ್ಮದೀನೂ ಸಿಗುತ್ತೆ'.

'ನಿಮ್ಮಪ್ಪ ಅಮ್ಮನ ಜೊತೇಲಿ ಇರ್ಬೇಕೂಂತ ನಿಮ್ಗೆ ಇಷ್ಟೊಂದು ಆಸೆ ಇದೇಂತಾನೆ ನನ್ಗೆ ಗೊತ್ತಿರ್ಲಿಲ್ಲಾರಿ. ಈ ಸಾರಿ ಮೈಸೂರಿಗೆ ಹೋದ್ಮೇಲೆ ಅವ್ರನ್ನ ಕರ್ಕೊಂಡು ಬನ್ನಿ. ಅವ್ರು ತಾನೆ ಇನ್ನೆಷ್ಟು ವರ್ಷ ಬದುಕಿರ್ತಾರೆ? ಅವ್ರ ಮನಸ್ನಾದ್ರೂ ಯಾಕೆ ನೋಯಿಸ್ಬೇಕು? ಅವ್ರು ಬರೋದ್ರಿಂದ ನಿಮ್ಗೂ ಅಷ್ಟು ಖುಷಿ ಆಗೋ ಹಾಗಿದ್ರೆ ನಾನ್ಯಾಕೆ ಅಡ್ಡಿ ಮಾಡ್ಲಿ'.

'ಲೇ ಭಕ್ತಿ, ನನಗೆಷ್ಟು ಸಂತೋಷವಾಗ್ತಿದೆ ಗೊತ್ತಾ? ನಿನ್ನ ಹೊತ್ಕೊಂಡು ಕುಣೀಬೇಕು ಅನ್ನಿಸ್ತಿದೆ. ನೋಡು ನನ್ನ ಮನಸ್ಸಿನಲ್ಲಿ ಇರೋದ್ನ ನಿನ್ಗೆ, ಇಷ್ಟು ದಿನ ಹೇಳ್ದೇ ನಿನ್ನನ್ನ ತಪ್ಪು ತಿಳ್ಕೊಂಡು, ನಾನೇ ತಪ್ಪು ಮಾಡಿದೆ ಅನ್ನಿಸ್ತಿದೆ. ನೀನು ಯಾವಾಗ್ಲೂ ಅಮ್ಮನ್ನ ಟೀಕೆ ಮಾಡೋದನ್ನು ನೋಡಿ, ಅವ್ರು ಬರೋದು ನಿನಗೆ ಇಷ್ಟಾ ಇಲ್ಲಾಂತ ತೀರ್ಮಾನಿಸಿ ನನ್ನ ದುಃಖವನ್ನೆಲ್ಲಾ ಒಳಗೆ ನುಂಗಿಕೊಳ್ತಾ ಇದ್ದೆ.

'ಹೋಗ್ಲಿ ಬಿಡ್ರಿ. ಈಗಿನ ಟ್ರಾನ್ಸ್‌ಫರ್ ಒಂದು ವಿಧದಲ್ಲಿ ಒಳ್ಳೇದೇ ಮಾಡ್ತು. ಇಲ್ದಿದ್ರೆ ನಿಮ್ಮ ದುಃಖ ನನಗೆ ತಿಳೀತ್ಲೇ ಇರ್ಲಿಲ್ಲ' ಎನ್ನುತ್ತಾ, ಭಕ್ತಿ ಸಂಜೆಯ ಅಡಿಗೆಗೆ ಹೊತ್ತಾಯ್ತೆಂದು ಒಳಗೆ ಹೋದಳು. ಪವಿತ್ರನೂ ಪತ್ರಿಕೆ ಓದುತ್ತಾ ಕುಳಿತ.

ಮುಂದೊಂದು ವಾರದಲ್ಲಿ ಮೈಸೂರಿಗೆ ಹೋದ ಪವಿತ್ರ ಸರಸ್ವತಿಪುರಂನಲ್ಲಿ ಒಂದು ಒಳ್ಳೆ ಮನೆ ಮಾಡಿದ. ಹುಡುಗರ ವಾರ್ಷಿಕ ಪರೀಕ್ಷೆ ಮುಗಿಯುವುದರಲ್ಲಿ

ಮೈಸೂರಿನ ಸ್ಕೂಲುಗಳನ್ನೆಲ್ಲಾ ಅಡ್ಡಾಡಿ, ಅನೇಕರ ವಶೀಲಿ ಹಚ್ಚಿ ಒಂದು ಒಳ್ಳೇ ಸ್ಕೂಲಿನಲ್ಲಿ ಮಕ್ಕಳೆಲ್ಲರಿಗೂ ಸೀಟು ದೊರಕಿಸಿದ. ಹುಡುಗರೆಲ್ಲಾ ತುಂಬಾ ಜಾಣರಾಗಿದ್ದರಿಂದ ಸೀಟು ದೊರೆಯಲು ಬಹಳ ಕಷ್ಟವಾಗಲಿಲ್ಲ. ಆದರೇನೂ ಡೊನೇಷನ್ ಮಾತ್ರ ವಿಪರೀತವಾಗಿತ್ತು. ಹಣ ಜೋಡಿಸಲು ಯಾವ ಮಾರ್ಗವೂ ಇಲ್ಲದೇ, ತನ್ನ ಸ್ಕೂಟರ್ ಮಾರಬೇಕೆಂದು ನಿರ್ಧರಿಸಿದ. ಪರೀಕ್ಷೆ ಮುಗಿದಿತ್ತು. ಹೆಂಡತಿ ಮಕ್ಕಳನ್ನು ಶಿವಮೊಗ್ಗೆಯಿಂದ ಮೈಸೂರಿಗೆ ಕರೆತರುವ ಜವಾಬ್ದಾರಿ ಆಕೆಯ ತಮ್ಮನಿಗೇ ಒಪ್ಪಿಸಿದ್ದ. ಹಾಗಾಗಿ ತಾನು ತಂದೆ-ತಾಯಿಯರನ್ನು ಕರೆತರಲು ಊರಿಗೆ ಹೋದ.

ಅಪರೂಪಕ್ಕೆ ಬಂದ ಮಗನನ್ನು ನೋಡಿ ಅವರಿಗಾದ ಸಂತೋಷ ಅಷ್ಟಿಷ್ಟಲ್ಲ. ಗುರುಸ್ವಾಮಿಯವರು ಬೆಳಗಿನ ತಿರುಗಾಟ ಮುಗಿಸಿಕೊಂಡು ಹೆಂಡತಿ ಕೊಟ್ಟ ಕಾಫಿ ಚಪ್ಪರಿಸುತ್ತಾ ವರಾಂಡದಲ್ಲಿ ಕುಳಿತಿದ್ದರು. ಅನಸೂಯಮ್ಮನೂ ಅದು ಇದು ಮಾತಾಡುತ್ತಾ ಅಲ್ಲೇ ಕುಳಿತಿದ್ದರು. ಮಗನನ್ನು ನೋಡಿ, 'ಏನಪ್ಪ ಇದ್ದಕ್ಕಿದ್ದಂತೆ ಬಂದ್ಬಿಟ್ಟೆ, ಭಕ್ತಿ ಹಾಗೂ ಮಕ್ಕಳು ಚೆನ್ನಾಗಿದ್ದಾರಾ? ಪಾಪ ಮೂವರೂ ಚಿಕ್ಕವರು. ಅವ್ರನ್ನೆಲ್ಲಾ ಸುಧಾರಿಸ್ಕೊಂಡು ಮನೆ ನಡೆಸ್ಕೊಂಡು ಹೋಗೋದು ಅವ್ಳಿಗೆ ತ್ರಾಸಾಗ್ತಿರ್ಬೇಕು.'

'ಅದ್ಕೆ ಅಮ್ಮಾ ಬಂದಿರೋದು. ನೀವು ಬಂದ್ರೆ ಅವಳಿಗೂ ನೆರವಾಗುತ್ತೆ, ನಿಮ್ಗೂ ಮೊಮ್ಮಕ್ಕಳ ಜೊತೇಲಿ ಹೊತ್ತು ಹೋಗುತ್ತೇಂತ. ನಿಮ್ಮಿಬ್ರನ್ನೂ ಮೈಸೂರಿಗೆ ಕರ್ಕೊಂಡು ಹೋಗೋಣಾಂತ ಬಂದಿದೀನಿ.'

'ಏನೇನೋ ತಮಾಷೆ ಮಾಡ್ತೀಯಪ್ಪ. ನಿಮ್ಗೆ ನನ್ನಿಂದ ನೆರವಾಗೋ ಹಾಗಿದ್ರೆ ಯಾರು ಬೇಡಾಂತಿದ್ರು. ಆದ್ರೆ ನಿನ್ನ ಹೆಂಡ್ತಿಗೆ ನನ್ನ ಮಡಿ, ಆಚಾರ ಸರಿ ಹೋಗೊಲ್ಲ ಕಣಪ್ಪ. ಸುಮ್ನೆ ಆಕೆಗ್ಯಾಕೆ ಕಿರಿಕಿರಿ? ಇಲ್ಲಿ ನಾವೂ ಹಾಯಾಗಿದ್ದೀವಿ ಅಲ್ಲಿ ನೀವೂ ಸುಖವಾಗಿದ್ದೀರಿ. ಯಾವಾಗ್ಲಾದ್ರೂ ನೀವು ಬರ್ತಾ ಹೋಗ್ತಾ ಇದ್ರೆ ಸಾಕು. ಎಲ್ಲಾದ್ರೂ ದೇವರು ನಿಮ್ಮನ್ನು ಚೆನ್ನಾಗಿಟ್ಟಿದ್ರೆ ಆಯ್ತು.'

'ನಿಮ್ಮನ್ನು ಎಲ್ಲೋ ಬಿಟ್ಟು ನಾವು ಸುಖವಾಗಿರೋಕೆ ಸಾಧ್ಯವೇನಮ್ಮ? ನಿಮ್ಗೇನಾದ್ರೂ ತೊಂದರೆ ಆದ್ರೆ, ಮಗಾ ಅನಿಸ್ಕೊಂಡ ನಾನಿದ್ದೂ ನೀವು ಪರರ ಆಶ್ರಯ ಮಾಡ್ಬೇಕಾ? ನಡೀರಿ, ನಡೀರಿ, ತಡಮಾಡೋಕೆ ನನಗೂ ರಜಾ ಇಲ್ಲ. ನಾಳೇನೇ ಇಲ್ಲಿಂದ ನಾವೆಲ್ಲಾ ಹೊರಡ್ಬೇಕು. ಗಂಟು ಮೂಟೆ ಕಟ್ಕೋ ತಯಾರಿ ಮಾಡಿ. ಯಾರಾದ್ರೂ ಬೇಗ ಸಿಕ್ಕಿದ್ರೆ, ಈ ಮನೇನೂ ಬಾಡ್ಗೆಗೆ ಮಾತಾಡಿ ಹೋಗೋಣ.'

'ಅಲ್ಲಾ ಕಣೋ, ಮನೆ ಬಾಡ್ಗೆಗೆ ಕೊಟ್ಟು, ಆಮೇಲೆ ಕಣ್ ಕಣ್ ಬಿಡೋ ಹಂಗಾದೀತು. ಅಲ್ಲಿಗೆ ಹೋದ್ಮೇಲೆ ನಮ್ಗೆ ಮತ್ತೆ ಊರಿಗೆ ಬರ್ಬೇಕು ಅನ್ನಿಸಿದ್ರೆ ಏನ್ಮಾಡಬೇಕು? ಬಾಡ್ಗೆ ಕೋಡೋದು ಬೇಡಪ್ಪ' ಎಂದರು ತಂದೆ. ಅನಸೂಯಮ್ಮ ಮಗನಿಗೆ ಕಾಫಿ ಮಾಡಿಕೊಂಡು ಬರಲು ಒಳಗೆ ಹೋದರು.

'ನಿಮ್ಗೆ ಪುನಃ ಊರಿಗೆ ಬರ್ಬೇಕು ಅನ್ನಿಸದ ಹಾಗೆ ಇಟ್ಕೊಳ್ಳೋ ಜವಾಬ್ದಾರಿ ನಮ್ಮಿಬ್ಬರದು. ಆಯ್ತಲ್ಲಾ, ನೀವೆಲ್ಲೋ ಇದ್ದು ನಾವೆಲ್ಲೋ ಇದ್ರೆ ನನ್ಗೆ ಸಹಿಸಿಕೊಳ್ಳೋಕೆ ಆಗೋದಿಲ್ಲಪ್ಪ' ಎನ್ನುತ್ತಾ ಅದೂ ಇದೂ ಮಾತಾಡುವಷ್ಟರಲ್ಲಿ ಅನುಸೂಯಮ್ಮ ಮಗನಿಗೆ ಕಾಫಿ ಮಾಡಿಕೊಂಡು ಬಂದರು.

'ಅಲ್ಲೋ ಪವಿತ್ರ, ಇಲ್ಲಿ ನಮ್ಮಿಬ್ಬರಿಗೆ ಎಷ್ಟು ಮಹಾ ಖರ್ಚಾಗಬೇಕು. ಬಾಡಿಗೆ ಹಣದಲ್ಲಿ ಸ್ವಲ್ಪ ಮಿಗ್ತಿತ್ತು. ಅದೊಂದು ಇಪ್ಪತ್ತು ಸಾವಿರ ಆಗಿದೆ. ಈಗ ಅದನ್ನೇನು ಮಾಡ್ಲಿ. ಮೊಮ್ಮಕ್ಕಳ ಹೆಸರ್ನಲ್ಲಿ ಬ್ಯಾಂಕ್‌ನಲ್ಲಾದ್ರೂ ಇಡು' ಅಂದರು ಅನುಸೂಯಮ್ಮ.

'ದೇವ್ರು ಎಷ್ಟು ದೊಡ್ಡೋನು ನೋಡಮ್ಮ 'ಮಕ್ಳನ್ನು ಶಾಲೆ ಸೇರಿಸಲು ಡೋನೇಷನ್ ಕೊಡ್ಬೇಕಿತ್ತು. ಹಣ ಇಲ್ದೆ ಸ್ಕೂಟರ್ ಮಾರೋಣಾಂತಿದ್ದೆ. ನಿನ್ನ ಮೊಮ್ಮಕ್ಳ ಹೆಸರ್ನಲ್ಲಿ ಬ್ಯಾಂಕ್‌ನಲ್ಲಿ ಇಡೋಬದ್ಲು ಅವ್ರ ಓದಿನ ಖರ್ಚಿಗಾಗುತ್ತೆ ಕೊಡು' ಅಮ್ಮಾ ನಾಳೆ ಸಂಜೆಗೆ ಎಲ್ಲಾ ರೆಡಿಯಾಗಿರ್ಬೇಕು. ಸಂಜೆ ಹೊರಟರೆ ಮರುದಿನ ಬೆಳಿಗ್ಗೆ ಮೈಸೂರು ಮುಟ್ತೀವಿ. ಭಕ್ತಿ ತನ್ನ ತಮ್ಮನ ಜೊತೇಲಿ ಮೊದಲೇ ಹೋಗಿರ್ತಾಳೆ. ನಾನೀಗ ಕೆಲವು ಸ್ನೇಹಿತರನ್ನು ಕಂಡು, ಮನೆ ಬಾಡಿಗೆಗೆ ಕೊಡುವ ವಿಚಾರ ಮಾಡ್ಬರ್ತೀನಿ' ಅಂತ ಹೇಳಿ ಹೋದ.

ಮರುದಿನ ಸಂಜೆ ಹೊರಟು ಅವರೆಲ್ಲಾ ಮೈಸೂರು ಸೇರುವ ಹೊತ್ತಿಗೆ ಬೆಳಗಿನ ಏಳಾಗಿತ್ತು. ಕೂಡಲೇ ಆಟೋ ಮಾಡಿಕೊಂಡು ಮನೆ ಸೇರಿದಾಗ, ಭಕ್ತಿ ಬಾಗಿಲು ಸಾರಿಸಿ ಆಗಲೇ ರಂಗವಲ್ಲಿ ಹಾಕಿದ್ದಳು. ಒಳಗೆ ಹೋದರೆ ಊರಿಂದ ತಂದ ಸಾಮಾನುಗಳು ಅಲ್ಲಲ್ಲೇ ಬಿದ್ದಿದ್ದವು. ಇನ್ನು ತಮ್ಮ ತಮ್ಮ ಸ್ಥಾನ ಸೇರಿರಲಿಲ್ಲ. ಅತ್ತೆ-ಮಾವ ಮತ್ತು ಗಂಡನನ್ನು ಕಂಡ ಭಕ್ತಿ, ಸಂಭ್ರಮದಿಂದ ಸ್ವಾಗತಿಸಿದಳು. ಅತ್ತೆಗೆ ಬಚ್ಚಲು ಮನೆ ತೋರಿಸಿ, ಕಾಫಿ ಮಾಡಿಕೊಂಡು ಬರಲು ಒಳಗೆ ನಡೆದಳು. ಸೊಸೆ ತೋರಿಸಿದ ಪ್ರೀತಿ, ಆದರದ ಮುಖ ಅನೂಸೂಯಮ್ಮನಿಗೆ ನೆಮ್ಮದಿ ನೀಡಿದವು. ಸೊಸೆಯಲ್ಲಾದ ಬದಲಾವಣೆ ಕಂಡು ಒಳಗೇ ಹಿಗ್ಗಿದರು. ಇದ್ದೊಬ್ಬ ಮಗನಿಂದ ದೂರವಿದ್ದು ಬಂಜೆಯ ಹಾಗೆ ಭಣಭಣ ಬದುಕುವುದು ತಮಗೆ ದುಃಖಕರವೆನ್ನಿಸಿತ್ತು. ತಂದೆ-ತಾಯ್ಗಳನ್ನು ದಿಕ್ಕಿಲ್ಲದವರಂತೆ ದೂರ ಬಿಟ್ಟಿರುವುದು ಮಗನಿಗೂ ಕಷ್ಟವೆಂಬುದು ಗೊತ್ತಿತ್ತು. ಆದರೂ ಮಗನ ಸಂಸಾರದಲ್ಲಿ ತೊಡಕಿಗೆ

ಕಾರಣವಾಗಬಾರದೆಂದು ಯಾವ ಭಾವನೆಯನ್ನು ವ್ಯಕ್ತಪಡಿಸದೆ, ಪಾಲಿಗೆ ಬಂದದ್ದು ಪಂಚಾಮೃತವೆಂದು ಅನುಭವಿಸುತ್ತಿದ್ದರು. ಅಷ್ಟರಲ್ಲಿ ಸೊಸೆ ತಂದ ಕಾಫಿ ಕುಡಿಯುತ್ತಾ,

'ನಿನ್ನ ಕೈನ ಕಾಫಿ ಅದೆಷ್ಟು ರುಚೀನಮ್ಮ?' ಎಂದರು. ಹೀಗೆಲ್ಲಾ ಲೋಕಾರೂಢಿಯಾಗಿ ಮಾತನಾಡುತ್ತಾ, ಇಲ್ಲಿ ನೆರೆಹೊರೆಯಲ್ಲಿ ಯಾರದಾದ್ರೂ ಪರಿಚಯವಾಯ್ತೆ? ಜನ ಹೇಗಿದ್ದಾರೆ? ಪರಸ್ಥಳದಲ್ಲಿ ನೆರೆಯವರೇ ನೆಂಟರು. ಕಷ್ಟಾ ಸುಖ ಆದ್ರೆ ದೂರದಲ್ಲಿರೋ ಸಂಬಂಧಿಕರು ತಕ್ಷಣ ಎಲ್ಲಿ ಬರ್ತಾರೆ? ನೆರೆಯವರ್ನ್ನೇ ಹಚ್ಕೋಬೇಕು. ಏನಾದರೂ ಅವಶ್ಯಕತೆ ಬಿದ್ದಾಗ ತಕ್ಷಣ ಸಲುಗೆಯಿಂದ ಕರ್ಯೋಹಾಗೆ ವಿಶ್ವಾಸವಿಟ್ಟುಕೊಂಡಿರಬೇಕು.'

'ಹೌದತ್ತೇ, ನಾನೂ ಹಂಗೇ ಇರ್ಬೇಕೂಂತ ಶಿವಮೊಗ್ಗಾದಲ್ಲಿ ನಮ್ಮ ಪಕ್ಕದ ಮನೆಯೋಳ ಹತ್ತಿರ, ಎಷ್ಟು ಹೊಂದಿಸ್ಕೊಳ್ಳೋಕೆ ಪ್ರಯತ್ನ ಮಾಡ್ತಿದ್ದೆ. ಆದ್ರೆ ಆ ಗಿಲೀಟ್‌ನ ಗೀತಾ ಹೊಂದ್ಕೊಳ್ತಾನೇ ಇರ್ಲಿಲ್ಲ. ತನಗೆ ಅವಶ್ಯಕ ಇದ್ದಾಗ ಗಿಲೀಟ್ ಮಾಡ್ಕೊಂಡು ಬಂದು, ತನಗೆ ಬೇಕಾದ್ದು ಸಾಧಿಸಿಕೊಂಡು ಹೋಗ್ಬಿಡ್ತಾ ಇದ್ಲು, ನಮ್ಗೇನಾದ್ರೂ ಬೇಕಾಗಿ ಹೋದಾಗ, ಮಾತಾಡಿದ್ರೆ, ಮುತ್ತು ಉದುರುತ್ತೇನೋ ಅನ್ನೋ ಹಾಗೆ ಸರಾಗವಾಗಿ ಮಾತೂ ಸಹ ಆಡ್ತಿರ್ಲಿಲ್ಲ. ಅಲ್ದೆ ಮುಖಾ ಸಹ ಬಿಗಿ ಮಾಡ್ಕೊಂಡು, ನಮಗೆ ಏನೂ ಮಾತಾಡೋಕೆ ಆಗಬಾರ್ದು. ಹಂಗೆ ಇದ್ದು ಬಿಡ್ತಾ ಇದ್ಲು.'

'ಅದೂ ಕೆಲವರ ಜಾಣತನಾಮ್ಮ. ಅಂಥವ್ರಿಗೆ ದಾಕ್ಷಿಣ್ಯ ಪಟ್ಕೋಬಾರ್ದು. ಸೇರಿಗೆ ಸವ್ವಾಸೇರು ಅನ್ನೋ ಹಂಗಿದ್ರೆ, ಅಂಥವ್ರಿಗೆ ಬುದ್ಧಿ ಬರೋದು. ಒಂದೆರಡು ಸಲ ಗಟ್ಟಿ ಮನಸ್ಸು ಮಾಡಿ, ಅವರಿಗೆ ಅಗತ್ಯ ಬಿದ್ದಾಗ ಸಹಾಯಾನೇ ಮಾಡ್ಬಾರದು. ಆಗ ಗೊತ್ತಾಗುತ್ತೆ ನೆರೆಯವರ ಬೆಲೆ.'

'ನನಗೂ ಹಂಗೇ ಅನ್ಸುತ್ತತ್ತೆ. ಆದ್ರೆ ಅವ್ಳು ಸಹಾಯ ಕೇಳೋಕೆ ಬಂದಾಗ ನಮ್ಗೂ ಎಂಥ ಸಮಯ ಬರುತ್ತೋ ಅವ್ರು ಮಾಡಿದ್ರೂಂತ, ನಾವು ಸಣ್ಣ ಬುದ್ಧಿ ಮಾಡಬಾರ್ದೂಂತ, ನನ್ನ ಕೈಲಾದ ಸಹಾಯ ಮಾಡ್ಬಿಡ್ತಿದ್ದೆ. ನಾಚಿಕೆಗೇಡಿ ನಾವೆಷ್ಟು ದೊಡ್ಡತನ ತೋರ್ಸಿದ್ರೂ ಅವ್ಳು ಮಾತ್ರ ಸುಧಾರಿಸ್ಲೇ ಇಲ್ಲ.'

'ಒಬ್ಬೊಬ್ರು ಹಾಗೂ ಇರ್ತಾರೆ, ಜಗತ್ತಿನಲ್ಲಿ ಚಿತ್ರ–ವಿಚಿತ್ರ ಜನ ಇರ್ತಾರೆ. ನಮ್ಮನೆ ಹತ್ರ ಅರ್ಚನಾ ಇದ್ದಾಳಲ್ಲ. ಅವ್ಳ ಸ್ವಭಾವ ಇನ್ನೊಂದು ರೀತಿ. ದಿನಾ ಬೆಳಗಾದ್ರೆ ಅಕ್ಕಿ ಬೇಕು, ಸಕ್ರೆ ಬೇಕು, ಬೇಳೆ ಬೇಕು, ಅಂತ ಒಂದಲ್ಲ ಒಂದು ಬೇಕೂಂತ ಬರ್ತಾಳೆ. ಕೊಟ್ರೆ ಹಿಂತಿರುಗಿಸೋ ಬಾಬತ್ತೇ ಇಲ್ಲ. ನಾನೂ ಮೊದ ಮೊದಲು ಬಾಯ್ಬಿಟ್ಟು ವಾಪಸು ಕೊಡೂಂತ ಹೇಗೆ ಕೇಳೋದೂಂತ ಸಂಕೋಚ ಪಟ್ಕೊಳ್ತಿದ್ದೆ.

ಆದ್ರೆ ಎಷ್ಟೂಂತ ಕೊಡೋದು? ಸಾಮಾನು ಮನೇಲಿದ್ದಾಗ ಇಲ್ಲ ಅಂತ ಸುಳ್ಳು ಹೇಳೋಕೂ ಆಗೋಲ್ಲ. ಕೊಟ್ರೆ ಆ ಮಹಾರಾಯಿ, ವಾಪಸೂ ಮಾಡೋದೆ ಇಲ್ಲ! ಕೊನೆಗೆ ನಾನೇ ನಾಚ್ಗೆ ಬಿಟ್ಟು, ಆಕೆ ಏನಾದ್ರೂ ಕೇಳೋಕೆ ಬಂದಾಗ ಮೊನ್ನೆ ಅಕ್ಕಿ ತಗೊಂಡು ಹೋಗಿದ್ದು ತಂದ್ಕೊಡಮ್ಮ ಅಂತ ಕೇಳೋಕೆ ಶುರು ಮಾಡ್ದೆ'

'ಅಷ್ಟಲ್ದೆ ಏನು? ಕೇಳ್ ಕೇಳ್ದ ಹಾಗೆ ಎಲ್ಲರಿಗೂ ಕೊಡೋಕೆ ನಮ್ಮಲ್ಲೇನು ಕುಬೇರನ ಭಂಡಾರ ಇದ್ಯಾ?'

'ಆದ್ರೇನು, ಅವ್ಳೇನು ಮಾಡ್ತಿದ್ಲೂ ಅಂತಿಯಾ, ಪೂರ್ತಿ ಸಾಮಾನೇ ಹಿಂತಿರುಗಿಸ್ತಿರಲಿಲ್ಲ. ಒಂದು ಸೇರು ಇಸ್ಕೊಂಡು ಹೋಗಿದ್ರೆ, ಮೂರು ಪಾವಿನಷ್ಟು ವಾಪ್ಸು ಕೊಡುತ್ತಿದ್ದಳು.'

'ಇದು ಕಡಿಮೆಯಾಗಿದೆ, ನಾನು ಜಾಸ್ತಿ ಕೊಟ್ಟಿದ್ದೆ ಅಂತ ಕೇಳೋಕೆ ಅಸಹ್ಯ ಅನ್ಸಿ ಸುಮ್ಮಾಗಿ ಬಿಡ್ತಿದ್ದೆ.'

'ನಿಜಾ ಅತ್ತೆ ಕೆಲವರು ನಮ್ಮ ಸಂಕೋಚ ಸ್ವಭಾವಾನ, ಒಳ್ಳೇತನಾನ ದುರುಪಯೋಗಪಡಿಸಿಕೊಂಡು ಬಿಡ್ತಾರೆ. ಒಳ್ಳೆಯವರಾದ್ರೆ ಪಕ್ಕದ ಮನೆಯವರು ನೆರೆಯವರಾಗ್ತಾರೆ, ಇಲ್ದೆ ಇದ್ರೆ, ಹೊರೆಯವರಾಗ್ತಾರೆ, ಶಿವಮೊಗ್ಗಾದಲ್ಲಿ ಗಿಲೀಟ್ ಗೀತಂಗೆ ನಾವು ನೆರೆಯವರಾಗಿದ್ವಿ, ಆಕೆ ನಮ್ಗೆ ಹೊರೆಯವಳಾಗಿದ್ದಳು.

'ನೆರೇಲಿ ಒಳ್ಳೆ ಜನ ಇಲ್ದಿದ್ರೆ ಬಹಳ ಕಷ್ಟಮ್ಮ, ನನ್ಗೆ ಇದ್ರನುಭವ ಈ ವಯಸ್ಸಿಗೆ ಸಾಕಷ್ಟಾಗಿದೆ. ನನ್ತಂಗಿ ಆರತಿ, ಪ್ರತಿವರ್ಷ ತಮ್ಮ ತೋಟದ ಕಾಫಿ ಬೀಜ ಕಳಿಸ್ತಾಳೆ. ನನ್ತಮ್ಮ ಎಷ್ಟು ಬೇಡಾಂದ್ರೆ ಕೆ.ಜಿ. ಗಟ್ಟಲೇ ಅಡಿಕೆ ಕಳಿಸ್ತಾನೆ. ನಮ್ಮ ಅಕ್ಕನ ಮಗ ಒಂದು ಸಿಮೆಂಟ್ ಚೀಲಾ ಸೇಂಗಾ ಕಳಿಸ್ತಾನೆ. ಇದೆಲ್ಲಾ ವಿಚಾರ ಅರ್ಚನಾಗೆ ಗೊತ್ತು. ಹಾಗಾಗಿ ಅವ್ಳು, 'ಅಂಟೀ, ನಿಮ್ಮ ಮನೆ ಅಡ್ಕೆ ಎಷ್ಟು ಚೆನ್ನಾಗಿರುತ್ತೆ, ಒಂದು ಹಿಡಿ ಕೊಡ್ತೀರಾ ಅಂತ ಬರ್ತಾಳೆ. 'ಇಲ್ಲ' ಅನ್ನೋದು ಹೇಗೆ? ಒಂದು ಪಾವಿನಷ್ಟು ಕೊಟ್ಟುಬಿಡ್ತೀನಿ, ಅವ್ಳು ವಾಪ್ಸು ಕೊಡೊಲ್ಲ, ನಾವೇನು ಕೊಂಡದ್ದಲ್ಲ. ವಾಪ್ಸು ಕೊಡೂಂತ ಹೇಗೆ ಕೇಳೋದು? ಇನ್ನೊಂದು ಸಾರಿ ಬರ್ತಾಳೆ. 'ಆಂಟೀ, ನಿಮ್ಮ ತಂಗೀ ಮನೆ ಕಾಫಿ ಪುಡಿ ಎಷ್ಟು ರುಚಿ. ಈ ಊರಲ್ಲಿ ಯಾವ ಅಂಗ್ಡೀಲೂ ಅಷ್ಟು ಚೆನ್ನಾಗಿರೋದು ಸಿಕ್ಕೋಲ್ಲ. ನನ್ಗಂತೂ ಒಮ್ಮೊಮ್ಮೆ ಈ ಕಾಫಿ ಕುಡೀಬೇಕೂಂತ ಆಸೆಯಾದ್ರೆ ತಡ್ಕೋಕೇ ಆಗೋಲ್ಲ. ಒಂದು ಲೋಟ ಕಾಫಿ ಪುಡಿ ಕೊಡಿ ಆಂಟಿ' ಅಂತಾಳೆ. ಮತ್ತೊಂದು ದಿನ ಬಂದು 'ಯಾಕೊ ಬಾಯಿ ಚುಟುಗುಟ್ತಾ ಇದೆ. ಆಂಟಿ ನಿಮ್ಮನೇಲಿ ಯಾವಾಗ್ಲೂ ಸೇಂಗಾ ಇರುತ್ತೆ.

ಒಂದೆರಡು ಸೇರು ತಕ್ಕೊಡಿ ಹುರ್ಕೊಡ್ತೀನಿ. ನಿಮ್ಗೂ ತಿನ್ನೋಕಾಗುತ್ತೆ. ನಾನು ಸ್ವಲ್ಪ ತಗೊಂಡು ಹೋಗ್ತೀನಿಂತ ಭಿಡೆ ಇಲ್ದೆ ಬಾಯ್ಬಿಟ್ಟು ಕೇಳ್ದಾಗ ಹೇಗೆ ಇಲ್ಲಾನ್ನೋದು ಅಂತ ಕೊಟ್ಟಿಡ್ತೀನಿ.'

'ಪಕ್ಕಾ ಹೆಂಗ್ಸು, ಅದ್ಸರಿ ನಿಮ್ಮ ಹತ್ರ ಹಂಗೆ ಇಸ್ಕೊಂಡು ಹೋಗ್ತಿದ್ದಲ್ಲ. ನೀವು ಕೇಳಿದ್ರೆ ಹಂಗೇ ತಾನೂ ಕೊಡ್ತಾಳಾ?'

'ಕೊಡ್ತಿದ್ದಳೋ ಏನೋ ಆದ್ರೆ ನನಗೆ ಕೇಳೋ ಪ್ರಸಂಗವೇ ಬರ್ಲಿಲ್ಲ. ಯಾವ ಸಾಮಾನ್ನು ತೊಂದ್ರೆ ಆಗದ ಹಂಗೆ ಮೊದಲೆ ಯೋಚಿಸಿ ತರಸ್ಕೊಳ್ಳೋ ಸ್ವಭಾವ ನನ್ನದು. ಅವರಿವರ ಮನೇಲಿ ಕೇಳೋ ಹಾಗೆ ಮಾಡ್ಕೊಬಾರ್ದೂಂತ ನಮ್ಮಮ್ಮ ನಂಗೆ ಹುಡ್ಗಿ ಇದ್ದಾಗ್ಲೆ ಕಲ್ಸಿದ್ರು. ಹಾಗಾಗಿ ನಾನು ಕೇಳುತ್ತಿದ್ದುದು ತುಂಬಾ ಕ್ವಚಿತ್. ಆದ್ರೆ ನನಗೆ ಯಾವ್ದೇ ತರದ ತೊಂದ್ರೆ ಆದ್ರೂ, ತಾನೇ ಬಂದು ಕೇಳ್ದೆ ಇದ್ರೂ, ತನ್ನ ಕೈಲಾದ ಸಹಾಯ ಮಾಡ್ತಿದ್ಲು. ವಿಚಾರಿಸ್ಕೊಳ್ತಿದ್ಲು, ಪಾಪ ಅನ್ಯಾಯ ಆಡ್ಬಾರ್ದು.

'ಅಷ್ಟಿದ್ರೆ ಎಷ್ಟೋ ವಾಸಿ ಅತ್ತೆ. ನಮ್ಮ ಗಿಲೀಟ್ ಗೀತಾ ಇದ್ಲಲ್ಲ, ಪಕ್ಕಾ ನಂಬರ್ ಒನ್. ಇನ್ನೊಬ್ರಿಂದ ಲಾಭ ಪಡ್ಕೋದ್ರಲ್ಲಿ, ಬೇರೆಯವರ್ಗೆ ಏನೂ ಸಹ್ಕಳ್ದೆ ಇರೋದ್ರಲ್ಲಿ, ಒಂದನೇ ನಂಬರ್, ಒಮ್ಮೆ ನಮ್ಗೆ ಏಣಿ ಬೇಕಾಗಿತ್ತು. ಅವರ ಮನೇಲಿ ಏಣಿ ಇದ್ದದ್ದು ಗೊತ್ತಿತ್ತು. ಅಲ್ದೆ ಕಾಣೋ ಹಾಗೆ ಅಲ್ಲೇ ಹಿತ್ಲಲ್ಲೇ ಇಟ್ಟಿದ್ರು. ಏಣಿಗೆ ಹೇಳಿ ಕಳ್ಸಿದ್ರೆ, ಮುಲಾಜಿಲ್ಲದಂತೆ ಮುರ್ದು ಹೋಗಿದೆ; ಹತ್ತೋಕೆ ಬರೋಹಂಗಿಲ್ಲ ಅಂತ ಸುಳ್ಳು ಹೇಳಿಕಳ್ಸೋದೆ. ಒಂದ್ಸಾರಿ ಆಕೆಯ ಯಜಮಾನರಿಗೆ ಹುಷಾರಿರಲಿಲ್ಲ. ಆಸ್ಪತ್ರೆಗೆ ಸೇರಿಸಿದ್ರು, ಕಾಫಿ ತೊಗೊಂಡು ಹೋಗೋಕೆ ಫ್ಲಾಸ್ಕ್ ಬೇಕಾಗಿತ್ತಂತೆ ಅವರ ಮನೆಯದು ಕೆಟ್ಟು ಬಿಸೀನೆ ಉಳೀತಿರ್ಲಿಲ್ಲವಂತೆ. ಆಗ ಬಂದು ಫ್ಲಾಸ್ಕ್ ಕೇಳಿದ್ಲು. ಅಂಥ ಸಮಯದಲ್ಲಿ ಇಲ್ಲಾಂತ ಹೇಗೆ ಹೇಳೋದು. ಅವಳ ಬುದ್ಧಿ ನೋಡಿದ್ರೆ, ಕೊಡ್ಬಾರ್ದು ಅನ್ನಿಸ್ತಿತ್ತು. ಆದ್ರೆ ಕಷ್ಟ ಕಾಲದಲ್ಲಿ ಹಾಗೆ ಮಾಡಬಾರ್ದೂಂತ ಹೇಳಿ ಹೊಸ ಫ್ಲಾಸ್ಕ್ ತಂದಿದ್ದು ತಂದಂತೆಯೇ ಇತ್ತು ನಾವು ಒಂದ್ಸಾರೀನೂ ಉಪಯೋಗಿಸಿರಲಿಲ್ಲ. ಕೊಟ್ಟಿಟ್ಟೆ, ಆಮೇಲೆ ಅವರ ಯಜಮಾನ್ರು ಮನೇಗ್ಬಂದ್ರೂ ವಾಪ್ಸು ಕೊಡ್ಲೇ ಇಲ್ಲ. ಅಷ್ಟರಲ್ಲಿ ನನಗೆ ಗಂಟಲು ನೋವು ಬಂತು. ರಾತ್ರಿ ಹೊತ್ನಲ್ಲಿ ಬಿಸಿನೀರು ಕುಡೀಲಿಕ್ಕೆ ಬೇಕಾಗುತ್ತೇಂತ ಫ್ಲಾಸ್ಕ್‌ಗೆ ಹೇಳಿ ಕಳ್ಸಿದೆ. ನಿಮ್ಮ ಫ್ಲಾಸ್ಕ್ ಒಡೆದುಹೋಯ್ತು. ನಮ್ದನ್ನೇ ತೊಗೋಳಿ ಅಂತ ಅವ್ರ ಮನೇಲಿದ್ದ ಹಳೇ ಮುರುಕು ಫ್ಲಾಸ್ಕು ಕಳ್ಸೋದೆ.'

'ಆಗ ನೀನೇನ್ಮಾಡ್ದೆ'?

'ಏನ್ಮಾಡ್ಲಿ ಸಿಟ್ಬಂತು. ಆದ್ರೆ ಇದು ಸರಿ ಅಲ್ಲ ಹೊಸದು ತರಿಸಿಕೊಡಿ' ಅಂತ

ಹೇಗೆ ಕೇಳ್ಳೋದೂಂತ ಸುಮ್ನಾದೆ. ಆಮೇಲೆ ನಾನೇ ಒಂದು ಹೊಸ ಫ್ಲಾಸ್ಕ್ ತರಿಸಿಕೊಂಡೆ.'

'ಇದೊಳ್ಳೆ ವಿಚಿತ್ರ ನೋಡು, ಒಂದ್ಸಾರಿ ನಾನು ಚಕ್ಲಿ ಮಾಡ್ಬೇಕಾಗಿತ್ತು. ನಮ್ಮ ಚಕ್ಲಿ ಒರಳ್ನ ಎಲ್ಲಿಟ್ಟಿದ್ನೋ ಏನೋ, ಎಷ್ಟು ಹುಡುಕಿದ್ರೂ ಸಿಕ್ಲಿಲ್ಲ. ಕಡೆಗೆ ಒಬ್ಬರ ಮನೇಲಿ ತರಿಸ್ದೆ. ಆದ್ರೆ ಒತ್ತುತ್ತಾ ಇರ್ಬೇಕಾದ್ರೆ ಹಿಡಿ ಮುರಿದುಬಿಡ್ತು. ತಕ್ಷಣ ಹೊಸಾ ಚಕ್ಲಿ ಒರಳ್ನ, ಅಂಗಡಿಯಿಂದ ತರ್ಸಿ ವಾಪ್ಸು ಕೊಟ್ಟೆ. ನಾನು ಶಾಲೆಗೆ ಹೋಗುವಾಗ ಒಂದು ಪಾಠ ಓದಿದ್ದೆ. ಅದ್ರಲ್ಲಿ 'ಬೇರೆಯವರ ಸಾಮಾನನ್ನು ಎಂದೂ ಎರವು ಕೇಳಬೇಡ, ತಂದರೂ ಬೇಗ ಹಿಂತಿರುಗಿಸು. ಹಾಳಾದರೆ, ಹೊಸದನ್ನು ತರಿಸಿಕೊಡು' ಎಂದಿತ್ತು. ಆ ಮಾತು ನನ್ನ ಮನಸ್ಸಿಗೆ ತುಂಬಾ ಹಿಡಿದಿತ್ತು. ಈಗ್ಲೂ ಯಾರಲ್ಲಾದರೂ ಏನಾದರೂ ಕೇಳಬೇಕಾದ ಪ್ರಸಂಗ ಬಂದರೆ, ತಕ್ಷಣ ಆ ಮಾತುಗಳು ನನ್ನ ಕಣ್ಣ ಮುಂದೆ ನಿಂತು ಬಿಡುತ್ತವೆ.'

'ಹೌದು ಅತ್ತೆ. ಒಳ್ಳೆಯ ಮಾತುಗಳನ್ನು ನಾವು ಎಂದೂ ಮರೀಬಾರದು. ಅವು ಸಮಯದಲ್ಲಿ ನಮಗೆ ದಾರಿದೀಪವಾಗುತ್ತವೆ. ಆದ್ರೆ, ಈಗಿನ ಕಾಲದಲ್ಲಿ ನಾವು ಮಾತ್ರ ಒಳ್ಳೆಯವರಾದ್ರೆ ಸಾಲದು. ಜನರೆಲ್ಲಾ ಹೀಗೇ ವಿಚಾರ ಮಾಡಿದ್ರೆ ಸರಿ. ಇಲ್ದಿದ್ರೆ ನಮ್ಮ ಒಳ್ಳೆಯತನವನ್ನು, 'ಶಾಣೇ' ಜನ ದುರುಪಯೋಗಪಡಿಸಿಕೊಂಡು ಬಿಡ್ತಾರೆ' ಎನ್ನುತ್ತಿರುವ ಹೊತ್ತಿಗೆ ಪವಿತ್ರ ಸ್ನಾನ ಮುಗಿಸಿಕೊಂಡು ಬರ್ತಾ,

'ಏನ್ ಭಕ್ತೀ ಅತ್ತೆ ಹತ್ರ ಹಿಂಗೇ ಸರಸ ಸಲ್ಲಾಪ ಮಾತಾಡ್ತಾ ಕೂತ್ಕೊಳ್ತೀಯೋ ನನಗೆ ಸ್ಕೂಲ್‌ಗೆ ಹೋಗೋ ಹೊತ್ತಿಗೆ, ಏನಾದ್ರೂ ಬೇಯಿಸಿ ಹಾಕ್ತೀಯೋ' ಎಂದಾಗ ಗಡಿಯಾರದ ಕಡೆ ನೋಡಿ ಗಡಿಬಡಿಸಿ ಎದ್ದು ಭಕ್ತಿ ಒಳಗೆ ಹೋದಳು.

ಅತ್ತೆ-ಸೊಸೆ ಅಷ್ಟು ಪ್ರೀತಿಯಿಂದ ಮಾತಾಡಿಕೊಳ್ಳುತ್ತಿರುವುದನ್ನು ನೋಡಿ, ಅವನಿಗೆ ಬಹಳ ಸಂತೋಷವಾಗಿತ್ತು. ಡಿಸ್ಟರ್ಬ್ ಮಾಡೋ ಮನಸ್ಸಿರಲಿಲ್ಲ. ಈಗಾಗಲೇ ಎರಡು ದಿನ ರಜೆ ಹಾಕಿದ್ದ. ಪುನಃ ಹಾಕುವಂತಿರಲಿಲ್ಲ. ಆದ್ರೆ ಮನದಲ್ಲಿ 'ಹೆಂಡ್ತೀಂದ್ರೆ ಹೀಗಿರ್ಬೇಕು' ವರ್ಗವಾದಾಗ ಎಷ್ಟು ಕಷ್ಟ ಬಂತಲ್ಲಾ ಅಂದ್ಕೊಂಡಿದ್ದೆ. ಆದರೆ ಅದು ನನ್ನ ಪಾಲಿಗೆ ಸ್ವರ್ಗವನ್ನೇ ತಂದಿತು ಎಂದುಕೊಂಡ.

ಅನಸೂಯಮ್ಮ 'ಅಯ್ಯೋ ಆಗಲೇ ಒಂಭತ್ತು ಗಂಟೆಯ ಮೇಲಾಗಿದೆ. ನಾನೂ ಸ್ನಾನ ಮಾಡಿಕೊಂಡು ಪೂಜೆಗೆ ಹೋಗ್ತೀನಿಂತ ಪೇಪರ್ ಓದುತ್ತಿದ್ದ ಯಜಮಾನರಿಗೂ ಸ್ನಾನ ಮಾಡಿ ರೆಡಿಯಾಗಲಿಕ್ಕೆ ಹೇಳಿ, ಒಳಗೆ ಹೋದರು. ■

## ೪. ತೀರ್ಪು

ನ್ಯಾಯಾಧೀಶರು ಜಡ್ಜ್‌ಮೆಂಟ್ ಓದಿದಾಗ ಕೋರ್ಟಿನಲ್ಲೇ ಉಪಸ್ಥಿತರಿದ್ದ ಸುರೇಶ, ಹರೇಶ, ನರೇಶ ಒಬ್ಬರಿಗೊಬ್ಬರು ಪ್ರಶ್ನಾರ್ಥಕವಾಗಿ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ತೀರ್ಮಾನ ಅವರಿಗೆ ದಿಗ್ಭ್ರಮೆಯನ್ನುಂಟುಮಾಡಿತ್ತು. ಹತ್ತು ಹದಿನೈದು ಲಕ್ಷದ, ತಂದೆಯ ಆಸ್ತಿಯನ್ನು ಸ್ವಂತ ಮಕ್ಕಳಾದ ತಮಗೆ ದೊರೆಯದಂತೆಯೂ ಯಾವುದೋ ಅನಾಮಧೇಯ ಮಹಿಳೆ ಪಡೆಯುವಂತೆ ಮಾಡಿದ ನ್ಯಾಯಾಧೀಶರ ತೀರ್ಪು ಅಣ್ಣ–ತಮ್ಮಂದಿರಿಗೆ ಅತೀವ ಕೋಪವನ್ನು ತಂದಿತ್ತು. ಆದರೆ ಅಲ್ಲಿಯೇ ಕುಳಿತಿದ್ದ ವಿನೋದಾಬಾಯಿ ಸಮಾಧಾನದ ಉಸಿರು ಬಿಟ್ಟಳು. ಆಕೆಯೂ ಸಹ ತೀರ್ಪನ್ನು ಅತೀ ಕಾತುರದಿಂದ ಕೇಳುತ್ತಿದ್ದಳು.

ಮೂವರು ಅಣ್ಣ–ತಮ್ಮಂದಿರೂ ಬಾಂಬೆ, ಕಲ್ಕತ್ತಾ, ಸೂರತ್ತಿನಿಂದ ತಮ್ಮ ಆಫೀಸುಗಳಿಗೆ ರಜೆ ಹಾಕಿ ಬಂದು ಮೂರು ದಿನದಿಂದಲೂ ತೀರ್ಪಿಗಾಗಿ ಕಾದು ಕುಳಿತಿದ್ದರು. ನ್ಯಾಯಾಲಯದಲ್ಲಿ ತಮಗೆ ಅನ್ಯಾಯವಾಯಿತೆಂದು ತುಂಬಾ ದುಃಖದಿಂದ ಮನೆ ಸೇರಿ ಮುಂದೆ ಮಾಡಬೇಕಾದ ಕೆಲಸಗಳ ಬಗೆಗೆ ಚರ್ಚಿಸಿದರು. ಕೊನೆಗೆ ಅಪೀಲ್ ಹೋಗಬೇಕೆಂದು ನಿರ್ಣಯಿಸಿ ವಕೀಲರು ಕೋರ್ಟಿನಿಂದ ಆಫೀಸಿಗೆ ಬರುವವರೆಗೂ ಕಾದಿದ್ದು ಸಂಜೆ ವಕೀಲರಲ್ಲಿಗೆ ಹೋದರು.

'ಏನು ವಕೀಲರೇ ಕೇಸು ಹೀಗಾಯ್ತಲ್ಲ. ಮುಂದೇನು ಮಾಡುವುದು?'

'ಇನ್ನೇನು ಮಾಡುವಂತಿಲ್ಲ. ತೀರ್ಮಾನವನ್ನು ಒಪ್ಪಿಕೊಳ್ಳುವುದೇ ಉಳಿದಿರುವ ಮಾರ್ಗ. ನಾನು ನಿಮಗೆ ಮೊದಲೇ ಹೇಳಿರಲಿಲ್ಲವೇ? ಕೇಸು ಗೆಲ್ಲುವುದು ಕಷ್ಟ ಇದು ನಿಮ್ಮ ತಂದೆಯ ಸ್ವಯಾರ್ಜಿತವಾದ ಆಸ್ತಿಯಾಗಿರುವುದರಿಂದ ಅದನ್ನು ಯಾರಿಗೆ ಬೇಕಾದರೂ ಕೊಡುವ ಹಕ್ಕು ಅವರಿಗುಂಟು. ಅವರು ಸ್ಪಷ್ಟವಾಗಿ ವಿನೋದಾಬಾಯಿಗೇ ಕೊಟ್ಟಿದ್ದೇನೆ ಎಂದು ಕಾಯಿದೆ ಪ್ರಕಾರ ಬರೆಸಿ ಸಹಿ ಮಾಡಿರುವಾಗ ಯಾವ ಕೋರ್ಟು ಏನು ಮಾಡಲೂ ಬರುವುದಿಲ್ಲ ಎಂದು.'

'ಆದರೆ ಆ ಪತ್ರವನ್ನು ಅವರಿಗೆ ಆರೋಗ್ಯವಿಲ್ಲದೆ ನರಳುತ್ತಿರುವಾಗ ಆಕೆಯ

ಮನೆಯವರೆಲ್ಲಾ ಸೇರಿ ಒತ್ತಡ ತಂದು ಸಹಿ ಮಾಡಿಸಿಕೊಂಡಿದ್ದಾರೆಂದು ನಾವೂ ಕೋರ್ಟಿಗೆ ತಿಳಿಸಿದ್ದೇವೆ. ಅದನ್ನೇಕೆ ಅವರು ಗಣನೆಗೆ ತೆಗೆದುಕೊಂಡಿಲ್ಲ?

'ಅಲ್ಲಾ ಮಿಸ್ಟರ್ ಸುರೇಶ್, ಅವರ ಒಳಹೊರಗೆಲ್ಲಾ ಗೊತ್ತಿದ್ದ ಆಕೆ ನಿಮ್ಮ ತಂದೆಯ ಡೈರಿಯನ್ನೇ ಕೋರ್ಟ್‌ಗೆ ಹಾಜರುಪಡಿಸಿದ್ದಾಳೆ. ಅದರಲ್ಲಿ ಅವರು ಎಲ್ಲಾ ವಿಚಾರಗಳನ್ನೂ ವಿವರಿಸಿದ್ದಾರೆ. ವಿನೋದಾಬಾಯಿ ತಮ್ಮ ಸಂಕಟದ ಅಸಹಾಯಕತೆಯ ಸಮಯದಲ್ಲಿ ನೀಡಿದ ನೆರವನ್ನು ಹೃದಯಂಗಮವಾಗಿ ವಿವರಿಸಿದ್ದಾರೆ. ಇದೆಲ್ಲವನ್ನೂ ಅವರು ಆರಾಮವಾಗಿದ್ದಾಗಲೇ ಯಾರ ಒತ್ತಾಯವೂ ಇಲ್ಲದೇ ಬರೆದಿದ್ದಾರಲ್ಲ! ಇದರ ಆಧಾರದಿಂದ ನೀವು 'ಒತ್ತಾಯದಿಂದ ಸಹಿ ಮಾಡಿಸಿಕೊಂಡಿದ್ದಾರೆ' ಎಂದು ಹೇಳಿದುದನ್ನು ಸುಳ್ಳು ಆಪಾದನೆ ಎಂದು ನ್ಯಾಯಾಧೀಶರು ಅರ್ಥ ಮಾಡಿಕೊಂಡಿದ್ದಾರೆ.

ಏನಾದರಾಗಲಿ ಮಕ್ಕಳಾದ ನಮಗೆ ಅರ್ಧ ಪಾಲಾದರೂ ಬರಬೇಕು. ಹೈಕೋರ್ಟಿನಲ್ಲಿ ಅಪೀಲಂತೂ ಮಾಡೋಣ. ವಕೀಲರೆ.'

'ನೋಡಿ ಸುರೇಶ್, ನಾನು ಮೊದಲೇ ನಿಮಗೆ ಈ ಕೇಸು ವೀಕಿದೆ. ನಿಮಗೆ ಅನುಕೂಲ ಆಗೋದಿಲ್ಲ ಎಂದು ಹೇಳಿದ್ದೆ. ಆದರೂ ನೀವು ಒತ್ತಾಯಿಸಿದುದುರಿಂದ ನೀವು ನನ್ನ ಬಾಲ್ಯ ಸ್ನೇಹಿತರಾಗಿದ್ದೀರೆಂಬ ಕಾರಣದಿಂದ ಈ ಕೇಸು ಹಿಡಿದೆ. ನೀವು ಹೈಕೋರ್ಟಿಗೆ ಹೋದರೂ ಜಯ ದೊರೆಯುವುದು ಕಷ್ಟ. ನನ್ನನ್ನು ಕೇಳಿದರೆ ಈ ವಿಚಾರ ನೀವು ಕೈಬಿಡುವುದೇ ಒಳ್ಳೆಯದು. ಮಾಡ್ಲೇ ಬೇಕು ಎನ್ನಿಸಿದರೆ ಬೇರೆ ಯಾವ ಲಾಯರ್ ಬಳಿಯಾದರೂ ಹೋಗಿರಿ. ಕಂಡೂ ಕಂಡೂ ಜಯ ದೊರೆಯದ ಕೇಸ್ ತೆಗೆದುಕೊಂಡು ನನ್ನ ಹೆಸರು ಕೆಡಿಸಿಕೊಳ್ಳಲು ನನಗೆ ಇಷ್ಟವಿಲ್ಲ' ಎಂದು ಹೇಳಿದಾಗ ಅಣ್ಣ–ತಮ್ಮಂದಿರಿಗೆಲ್ಲಾ ಕೋಪ ಉಕ್ಕಿ ಬಂದಿತು.

'ನೀವಿಲ್ಲದಿದ್ದರೆ ಈ ಊರಲ್ಲಿ ಬೇರೆ ವಕೀಲರೇ ಇಲ್ಲವೇ? ನೋಡಿಕೊಳ್ಳುತ್ತೇವೆ' ಎನ್ನುತ್ತಾ ಫೈಲ್ ಕೈಗೆತ್ತಿಕೊಂಡು ಮೂವರೂ ಗಣೇಶರಾಯರ ಆಫೀಸಿನ ಪಾವಟಿಗೆ ಇಳಿದು ಹೊರಬಿದ್ದರು. ಆಗ ವಕೀಲರ ಬಳಿಯೇ ಕುಳಿತಿದ್ದ ಅವರ ಸ್ನೇಹಿತ ಡಾ॥ ಚಂದ್ರಕೀರ್ತಿ, 'ಗಣೇಶ್, ಏನಿದು ವ್ಯವಹಾರ? ತಂದೆ ಎಲ್ಲಾದರೂ ಆಸ್ತಿಯನ್ನು ತನ್ನ ಮಕ್ಕಳಿಗೆ ಕೊಡುವುದನ್ನು ಬಿಟ್ಟು ಯಾರೋ ಸಂಬಂಧವಿಲ್ಲದ ಒಬ್ಬ ಹೆಣ್ಣು ಮಗಳ ಹೆಸರಿಗೆ ಬರೆದು ಹೋಗೋದೆ? ಏನನ್ಯಾಯ! ಕೋರ್ಟು ಇಂಥ ತೀರ್ಪು ಕೊಡೋದೆ? ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಹೆಚ್ಚೋ! ಯಾರೋ ನಾಲ್ಕು ದಿನ ಸೇವೆ ಮಾಡಿದ, ಹಣಕ್ಕಾಗಿ ಬಂದು ಸೇರಿಕೊಂಡ ಹೆಂಗಸು ಹೆಚ್ಚೋ?'

‘ನೀವು ಹೇಳೋದು ಸರಿ. ಕೀರ್ತಿ. ಆದರೆ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು, ಹೊಟ್ಟೆಯ ಮಕ್ಕಳಂತೆ ನಡ್ಕೋಬೇಕೋ ಬೇಡ್ವೋ? ಪಾಪ, ಆ ಮುದುಕನಿಗೆ ವಿನೋದಾಬಾಯಿ ಇಲ್ಲದಿದ್ರೆ ದಿಕ್ಕೇ ಇಲ್ಲದ ಹಾಗೆ ಆಗ್ತಿತ್ತು. ಮಕ್ಳೇ ಕಷ್ಟ-ಸುಖಕ್ಕೆ ಆಗದಿದ್ದರೆ ಬೇರೆಯವರು ಯಾರು ಆಗ್ತಾರೆ? ಈ ಹೆಣ್ಣು ಮಗಳು ಅವರ ನೆರವಿಗೆ ಬರದೇ ಇದ್ದಿದ್ದರೆ ಅವರ ಜೀವನ ನರಕವಾಗ್ತಿತ್ತು.’

‘ಇರ್ಲಿ ಆಕೆ ಕೊನೇ ಕಾಲ್ದಲ್ಲಿ ಉಪ್ಕಾರ ಮಾಡಿದ್ಲೂಂತ್ಲೇ ಇಟ್ಕೊಳ್ಳೋಣ. ಅದಕ್ಕೆ ಒಂದು ಲಕ್ಷ. ಎರಡು ಲಕ್ಷ ಕೊಡಬಹುದಿತ್ತು. ಆ ಮಕ್ಕಳಿಗೆ ಒಂದು ಚೂರೂ ಕೊಡದೇ, ಎಲ್ಲವನ್ನೂ ಅವಳಿಗೆ ಕೊಟ್ಬಿಡೋದೆ. ಇದನ್ನು ನಾನೊಪ್ಪೊಲ್ಲಪ್ಪ. ಮಕ್ಕಳಾದವರಿಗೆ ಇದ್ರಿಂದ ಎಷ್ಟು ದುಃಖ ಆಗ್ಬಹ್ದು. ನೀವು ಆ ಕೇಸು ತೊಗೊಂಡು ಕಡೇ ಪಕ್ಷ ಅರ್ಧದಷ್ಟಾದ್ರೂ ಮಕ್ಕಳಿಗೆ ಬರೋ ಹಾಗೆ ಫೈಟ್ ಮಾಡ್ಬೇಕು.’

‘ನೋಡಿ ಕೀರ್ತಿ, ನೀವು ವಿಷ್ಯ ವಿವರವಾಗಿ ಗೊತ್ತಿಲ್ದೆ ಮಾತಾಡ್ಬೇಡಿ. ನಮ್ಮ ಮನೇನೂ ಈ ಸೋದರರ ತಂದೆಯ ಮನೇನೂ ಸಮೀಪದಲ್ಲೇ ಇದ್ದು ಅವರೆಲ್ಲಾ ಚಿಕ್ಕ ವಯಸ್ಸಿನಿಂದ ನನಗೆ ಗೊತ್ತು. ಅವರ ತಂದೆ ಈ ಮಕ್ಕಳಿಗಾಗಿ ಎಷ್ಟು ಕಷ್ಟಪಟ್ರು. ಈ ಮಕ್ಕಳನ್ನೆಲ್ಲಾ ಉನ್ನತ ಸ್ಥಿತಿಗೆ ಹೇಗೆ ತಂದ್ರು, ಅವ್ರೆಲ್ಲಾ ನೆಟ್ಟಗಾದ ಮೇಲೆ ತಮಗಾಗಿ ಅಷ್ಟು ತ್ಯಾಗ ಮಾಡಿದ ತಂದೇನ ಹೇಗೆ ನೋಡ್ಕೋಂಡ್ರು ಅನ್ನೋದೆಲ್ಲಾ ನನಗ್ಗೊತ್ತು. ಅದೆಲ್ಲಾ ಗೊತ್ತಿರುವ ನನಗೆ ಅವ್ರ ತಂದೆ, ಆಸ್ತಿನ ಮಕ್ಕಳಿಗೆ ಕೊಡ್ದೇ ಇರೋದು ನೋಡಿದ್ರೆ ಆಶ್ಚರ್ಯವೇನೂ ಆಗೋಲ್ಲ.’

‘ಏನೋಪ್ಪಾ ವಿಚಿತ್ರ ಹೇಳ್ತಿದ್ದೀರಿ. ಎಲ್ಲಾ ತಂದೆ-ತಾಯ್ಗಳೂ ತಮ್ಮ ಮಕ್ಕಳನ್ನು ಸಾಕ್ತಾರೆ, ಬೆಳೆಸ್ತಾರೆ, ಮುಂದೆ ತರ್ತಾರೆ. ಅವ್ರು ಒಂದು ಒಳ್ಳೇ ಸ್ಥಿತಿಗೆ ಬರ್ಲೀಂತ ಬೇಕಾದಷ್ಟು ತ್ಯಾಗ ಮಾಡ್ತಾರೆ. ಅದರಲ್ಲಿ ವಿಶೇಷತೆ ಏನಿದೆ. ಎಲ್ಲರಂತೆ ಇವ್ರ ತಂದೇನೂ ಮಾಡಿದ್ದಾರೆ. ಅದ್ರಲ್ಲೇನು ಹೆಚ್ಚುಗಾರಿಕೆ’?

‘ಹೆಚ್ಚುಗಾರಿಕೆ ಇದೆ, ಕೀರ್ತಿ ಹೆಚ್ಚುಗಾರಿಕೆ ಇದೆ. ನೋಡಿ ಇವರ ತಂದೆ ಸೋಮಪ್ಪ ಸಾಮಾನ್ಯವಾಗಿ ತಂದೆ-ತಾಯ್ಗಳು ಮಾಡುವುದಕ್ಕಿಂತ ಹೆಚ್ಚು ತ್ಯಾಗ ಮಾಡಿದ್ದಾರೆ. ಅವರ ಹೆಂಡತಿ ಸುಮಿತ್ರಮ್ಮ ಮದುವೆಯಾದ ಹತ್ತು ವರ್ಷಗಳಲ್ಲಿ ಮೂರು ಗಂಡುಮಕ್ಕಳನ್ನು ಹೆತ್ತು ಮೂರನೆಯ ಮಗು ಹುಟ್ಟಿದ ಸಮಯದಲ್ಲಿ ಅಸು ನೀಗಿದಳು. ಆಗ ಸೋಮಪ್ಪನವರಿಗೆ ಇನ್ನೂ ನಲ್ವತ್ತು ವರ್ಷ ಸಹ ಆಗಿರಲಿಲ್ಲ. ಮನೆಯಲ್ಲಿ ಮೂರು ಸಣ್ಣ ಮಕ್ಕಳು. ಅವರೋ ಫ್ಯಾಕ್ಟರಿಯಲ್ಲಿ ತುಂಬಾ ದೊಡ್ಡ ಅಧಿಕಾರಿ. ಬೆಳಿಗ್ಗೆ ಎಂಟು ಗಂಟೆಗೆ ಮನೆ ಬಿಡಬೇಕಾಗುತ್ತಿತ್ತು. ಹೀಗಾಗಿ ಹೆಂಡತಿ ಸತ್ತಸಮಯದಲ್ಲಿ ತುಂಬಾ ಸಮಸ್ಯೆಗಳಿಗೆ ಒಳಗಾದರು. ಆಗ

ಬಂಧು–ಬಳಗದವರು ಸ್ನೇಹಿತರೆಲ್ಲಾ ಮಕ್ಕಳನ್ನು ನೋಡಿಕೊಳ್ಳುವ ಸಲುವಾಗಿ, ಮನೆ ಮತ್ತು ಅವರನ್ನು ನೋಡಿಕೊಳ್ಳುವುದಕ್ಕಾಗಿ ಪುನಃ ಮದುವೆ ಮಾಡಿಕೊಳ್ಳಿರೆಂದು ಒತ್ತಾಯಿಸಿದರು. ಹೆಣ್ಣು ಕೊಡುವವರೂ ಮುಂದೆ ಬಂದಿದ್ದರು. ಆದರೆ ಮದುವೆ ಮಾಡಿಕೊಳ್ಳಿ ಎಂದವರಿಗೆಲ್ಲಾ ಸೋಮಪ್ಪನವರು, 'ಮಕ್ಕಳಿಗಾಗಿ ಮದುವೆ ಮಾಡಿಕೊಳ್ಳಿ ಅಂತೀರಲ್ಲಾ, ಈ ಮಾತು ಸುಳ್ಳು, ಎರಡನೆಯ ಹೆಂಡಿತಿಯಾಗಿ ಬಂದವಳು, ಮಕ್ಕಳಿಗೆ ತಾಯಿ ಆಗಲಾರಳು. ನಾನು ಅವರಿಗೆ ಊಟ, ಒಡವೆ, ವಸ್ತ್ರ ಎಲ್ಲಾ ಕೊಡಬಹುದು. ಆದ್ರೆ ಬಂದ ಹೆಂಡತಿ ಮಕ್ಕಳಿಗೆ ತಾಯಿಯಾಗಿ ನಡೆದುಕೊಳ್ಳದಿದ್ದರೆ, ನಾನು ತುಂಬಾ ಅಸಹಾಯಕನಾಗುತ್ತೇನೆ. ಸುಮಿತ್ರ ಮಕ್ಕಳೆಂದರೆ ಪ್ರಾಣ ಬಿಡುತ್ತಿದ್ದಳು. ಆ ಮಕ್ಕಳಿಗೆ ನಾನು ಅನ್ಯಾಯ ಮಾಡಲಾರೆ. ಕರುಳು ಸಂಬಂಧವೇ ಇಲ್ಲದ ಬೇರೆ ಯಾರೋ ಹೆಣ್ಣೊಬ್ಬಳ ಕೈಲಿ ಈ ಮುದ್ದು ಮಕ್ಕಳನ್ನು ಕೊಡಲಾರೆ. ಆಕೆ ಸರಿಯಾಗಿ ನೋಡಿಕೊಳ್ಳದಿದ್ದರೆ, ಮಕ್ಕಳಿಗೂ ಸುಖವಿರುವುದಿಲ್ಲ. ಅಲ್ಲದೇ ದಾಂಪತ್ಯದಲ್ಲೂ ವಿರಸ. ಹೀಗಾಗಿ ಈಗಿಗಿಂತ ಹೆಚ್ಚು ತೊಂದರೆ ಆಗ ಆಗುತ್ತದೆ. ಈಗ ನಾನಾದರೂ ಮಕ್ಕಳನ್ನು ನಿಜವಾದ ಪ್ರೀತಿಯಿಂದ ನೋಡಿಕೊಳ್ಳಬಹುದು. ಮದುವೆ ಮಾಡಿಕೊಂಡರೆ ನನಗೂ ಮಕ್ಕಳನ್ನು ನೋಡಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಬರಬಹುದು. ಮಕ್ಕಳ ಸಲುವಾಗಿ ಮರುಮದುವೆ ಮಾಡಿಕೊಂಡ ಅನೇಕರನ್ನು ನೋಡಿ ಮರುಗಿದ್ದೇನೆ. ನಾನು ಅಂತಹ ಗೊಂದಲದಲ್ಲಿ ಸಿಕ್ಕಿಹಾಕಿಕೊಳ್ಳಲಾರೆ' ಎಂದು ಖಂಡತುಂಡವಾಗಿ ಉತ್ತರಕೊಡುತ್ತಿದ್ದರು. ಯಾರು ಎಷ್ಟೇ ಒತ್ತಾಯಿಸಿದರೂ ಅವರು ಮರುಮದುವೆ ಮಾಡಿಕೊಳ್ಳಲೇ ಇಲ್ಲ. ಆ ಪುಟ್ಟ ಮಕ್ಕಳನ್ನು ಆಳನ್ನಿಟ್ಟುಕೊಂಡು ಬೆಳೆಸುವಾಗ, ಅವರು ಪಟ್ಟಪಾಡು ಅಷ್ಟಿಷ್ಟಲ್ಲ. ಅವರಿಗೆ ಫ್ಯಾಕ್ಟರಿಯ ಸಲುವಾಗಿ ಮೇಲಿಂದ ಮೇಲೆ ಕಲ್ಕತ್ತ, ಮುಂಬಯಿ, ದೆಹಲಿ, ಬೆಂಗಳೂರಿಗೆ ಓಡಾಡಬೇಕಾಗುತ್ತಿತ್ತು. ಆಗ ನಮ್ಮ ತಂದೆಗೆ ಮನೆ ಕಡೆ ಸ್ವಲ್ಪ ನೋಡುತ್ತಿರಿ ಎಂದು ಹೇಳಿ ಹೋಗುತ್ತಿದ್ದಾಗ, ನಮ್ಮ ತಾಯಿಯೇ ಮಕ್ಕಳ ಬಗ್ಗೆ ವಿಚಾರಿಸಿಕೊಳ್ಳುತ್ತಿದ್ದರು. ಅದೇ ಒಂದು ಪ್ರೀತಿಯಿಂದ ನಾನೂ ಸುರೇಶನ ಮಾತಿಗೆ ಬೆಲೆಕೊಟ್ಟು ಈ ಕೇಸು ಹಿಡಿದೆ ಅಷ್ಟೆ.'

'ಅಲ್ಲಪ್ಪಾ ಮದ್ವೆ ಮಾಡ್ಕೊಳ್ಳಲಿಲ್ಲ ಅಷ್ಟೆ. ಯಾವಳೋ ವಿನೋದಾಬಾಯಿ ಎಂಬ ಒಬ್ಬ ಹೆಂಗಸನ್ನು ತಂದಿಟ್ಕೊಂಡ್ರು ತಾನೆ, ಇದ್ರಲ್ಲಿ ಏನ್ ದೊಡ್ಡ ತ್ಯಾಗ.'

'ಹಾಗನ್ಬೇಡಿ ಕೀರ್ತಿ, ಈ ವಿನೋದಾಬಾಯಿ, ಅವರ ಜೀವನದಲ್ಲಿ ಕಾಲಿರಿಸಿದ್ದು ಅವರ ಕೊನೆಯ ಜೀವನದ ಕೆಲವು ವರ್ಷಗಳಲ್ಲಿ ಮಾತ್ರ. ಮಕ್ಕಳನ್ನೆಲ್ಲಾ ಓದಿಸಿ, ಬೆಳೆಸಿ, ನೌಕರಿಗೆ ಹಚ್ಚಿ, ಮದುವೆ ಮಾಡಿ, ಮೊಮ್ಮಕ್ಕಳನ್ನು ಕಂಡು, ಮೊಮ್ಮಕ್ಕಳು ಸಹ ಎಷ್ಟೋ ದೊಡ್ಡವರಾದ ಮೇಲೆ! ಈ ಮಹಿಳೆ ಚಿಲ್ಲರೆ ಸ್ವಭಾವದವಳು ಅಲ್ಲ.'

ಅಲ್ಲಯ್ಯಾ ಗಣೇಶ, ಇಷ್ಟೆಲ್ಲಾ ಮುಗಿದ ಮೇಲೆ ಈ ತಂದೆ, ಮಕ್ಕಳ ಹತ್ರ ಹೋಗಿ ಇರೋದು ಬಿಟ್ಟು ತಾನೇ ಸ್ವಂತವಾಗಿ ಈ ಬೆಳಗಾಂನಲ್ಲಿ ಏಕಿರಬೇಕಿತ್ತು ? ಒಬ್ರಲ್ಲಾಂತ ಮೂರು ಮಕ್ಕಳಿದ್ರು, ಒಬ್ಬೊಬ್ಬ ಮಗನ ಮನೇಲಿ ನಾಲ್ಕು ನಾಲ್ಕು ತಿಂಗಳಿದ್ರೂ ಒಂದು ವರ್ಷ ಮುಗ್ದು ಹೋಗ್ತಿತ್ತು. ಇವ್ರಿಗೂ ಛೇಂಜ್ ಆಗ್ತಿತ್ತು. ಅವ್ರಿಗೂ ಬೇಸರ ಆಗ್ತಿರಲಿಲ್ಲ.'

'ಕೀರ್ತಿ, ಹೊರಗಿರುವವರಿಗೆಲ್ಲಾ ಇದೆಲ್ಲಾ ಬಹಳ ಸರಳವಾಗಿ ಕಾಣಿಸುತ್ತೆ. ಆದ್ರೆ ಒಳಹೊಕ್ಕು ನೋಡಿದಾಗ ಪರಿಸ್ಥಿತಿ ಜಟಿಲವಾಗಿರುತ್ತೆ. ನೀವು ಹೇಳ್ದಷ್ಟು ಸರಾಗವಾಗಿ ಎಲ್ಲಾ ನಡೆದಿದ್ರೆ ಈ ಕೇಸೂ ಆಗ್ತಿರಲಿಲ್ಲ, ಸೋಮಪ್ಪನವರ ಲಕ್ಷಾಂತರ ರೂಪಾಯಿ ಆಸ್ತಿಯೂ ವಿನೋದಾಬಾಯಿಯ ಪಾಲಾಗ್ತಿರಲಿಲ್ಲ. ಆದ್ರೆ ಆದದ್ದೇ ಬೇರೆ.'

'ಮುದುಕರಿಗೆ ಸ್ವತಂತ್ರವಾಗಿ ಇರ್ಬೇಕಾಗಿತ್ತು, ಸೊಸೆ ಮೊಮ್ಮಕ್ಕ ಜಂಝಾಟ ಬೇಕಿರಲಿಲ್ಲ. ಅದಕ್ಕಾಗಿ ಬೆಳಗಾಂನಲ್ಲೇ ಉಳ್ಕೊಂಡು, ವಯಸ್ಸಾದ ಕಾಲದಲ್ಲಿ ಸೇವೇಗೇಂತ ಈ ಹೆಂಗ್ಸನ್ನು ತಂದಿಟ್ಕೊಂಡ್ರು. ಆಗ ಆಕೆಗೆ ಮರುಳಾಗಿಬಿಟ್ಟರು. ಇದರಿಂದ ತಂದೆ-ಮಕ್ಕಳಲ್ಲಿ ವಿರಸ ಬಂದಾಗ ಮಕ್ಕಳ ಮೇಲೆ ಸೋಮಪ್ಪನವರಿಗೆ ಬೇಜಾರಾಗಿ ಆಸ್ತೀನೆಲ್ಲಾ ಆ ಹೆಂಗ್ಸಿನ ಹೆಸರಿಗೆ ಬರ್ದುಬಿಟ್ರು. ಹೌದೋ ಇಲ್ವೋ?'

'ಗೊತ್ತಿಲ್ದೆ ಏನೇನೋ ಊಹಿಸ್ಕೋಬೇಡಯ್ಯ, ಸೋಮಪ್ಪನವರಂತಹ ತಂದೆ ಇರೋದು ಅಪರೂಪ. ಹೆಂಡತಿ ಸತ್ತ ಮೇಲೆ ಮಕ್ಕಳಿಗೆ ಅವರೇ ತಾಯಿ-ತಂದೆ ಎಲ್ಲಾ ಆಗಿದ್ರು. ದೊಡ್ಡ ಆಫೀಸರ್ ಅವ್ರು. ಅನೇಕ ಜವಾಬ್ದಾರಿಗಳಿದ್ದವು. ಆದ್ರೂ ತಾಯಿ ಹಾಗೆ ಮಕ್ಕಳನ್ನು ನೋಡಿಕೊಂಡ್ರು. ಅವ್ರಿಗೆ ಯಾವ್ದೇ ಕೊರತೆ ಆಗದಂತೆ ಸಾಕಿದ್ರು. ಮನೆಯಲ್ಲಿ ಒಮ್ಮೊಮ್ಮೆ ಅಡಿಗೆಯವರು ಇಲ್ಲದೇ ಇರುವಾಗ, ಮಕ್ಕಳು ಕಾಯಿಲೆ ಬಿದ್ದಾಗ ಅವರು ಪಡುತ್ತಿದ್ದ ಪಡಿಪಾಟಲು ಅಷ್ಟಿಷ್ಟಲ್ಲ. ರಂಗ ಎಂಬುವ ಒಬ್ಬ ನಿಷ್ಠಾವಂತ ಸೇವಕ ಇದ್ದಾಂತ ಅವರಿಗೆಷ್ಟೋ ಸಹಾಯಕವಾಗುತ್ತಿತ್ತು. ಸೋಮಪ್ಪನವರು ರಿಟೈರಾದ ಮೇಲೂ ರಂಗ ಅವರ ಮನೆ ಬಿಡ್ಲಿಲ್ಲ. ಇವರ ಮಕ್ಕಳ ಮದ್ವೇಲೂ ಅವನು ಮನೆಯವನಂತೆ ಲೇನಾ-ದೇನಾ ಎಲ್ಲಾ ನೋಡಿಕೊಂಡ. ಸಂಬಂಧಿಕರು ಬಂದರೂ ತಮ್ಮ ಲಾಭಕ್ಕಾಗಿ ಬರುತ್ತಿದ್ದರೇ ಹೊರತು ಅವರಿಂದ ನಿರೀಕ್ಷಿತ ಸಹಾಯಕ ದೊರಕುತ್ತಿರಲಿಲ್ಲ. ರಂಗ ಇರುವವರೆಗೂ ಅವರಿಗಿಷ್ಟು ಕಷ್ಟ ಗೊತ್ತಾಗಲಿಲ್ಲ. ಸೋಮಪ್ಪನವರ ಮೂರನೆಯ ಮಗನ ಮಧುವೆಯಾದ ಸ್ವಲ್ಪ ಕಾಲದಲ್ಲೇ ರಂಗನೂ ತೀರಿಹೋದ.'

'ಆಗಲಾದರೂ ಸೋಮಪ್ಪನವರು ಮಕ್ಕಳ ಮನೆಗೆ ಹೋಗಬಹುದಿತ್ತಲ್ಲ!

ಹೇಗಿದ್ರೂ ಮಕ್ಕಳೆಲ್ಲರ ಮದುವೆಯಾಗಿತ್ತು. ಬಹುಶಃ ಕೆಲಸದಿಂದ ನಿವೃತ್ತಿಯೂ ಆಗಿದ್ದಿರಬೇಕು ಅಷ್ಟು ಹೊತ್ತಿಗೆ.'

'ನಿವೃತ್ತಿಯೂ ಆಗಿತ್ತು. ನೀವು ಯೋಚಿಸಿದಂತೆ ಅವರು ಒಂಟಿಯಾಗಿರಲಾರದೇ ಮುಂಬಯಿಯಲ್ಲಿದ್ದ ದೊಡ್ಡ ಮಗನ ಮನೆಗೆ ಹೋದರು. ಒಂದೆರಡು ತಿಂಗಳು ಕೂಡ ಕಳೆದಿರಲಿಲ್ಲ. ಅಷ್ಟರಲ್ಲಿ ಮಗನ ಹೆಂಡತಿಯ ಅಸಮಾಧಾನ ಶುರುವಾಯ್ತಂತೆ 'ಎಲ್ಲಾ ಮಕ್ಕಳನ್ನೂ ಬಿಟ್ಟು ನಮಗಷ್ಟೇ ಈ ಮುದುಕರು ಯಾಕೇ ಜೋತುಬೀಳಬೇಕು. ಉಳಿದ ಮಕ್ಕಳ ಕಡೆ ಹೋಗಲಿ' ಎಂದು ಗಂಡನೊಡನೆ ಹೇಳುತ್ತಿದ್ದದ್ದು ಸೋಮಪ್ಪನವರಿಗೆ ಕೇಳಿಸಿ ತುಂಬಾ ದುಃಖವಾಯ್ತಂತೆ.

'ಇವೆಲ್ಲಾ ವಿಚಾರಗಳು ನಿಮಗೆಲ್ಲಾ ಹೇಗೆ ತಿಳಿದವು ಗಣೇಶ್? ಅವ್ರು ಮಕ್ಕಳ ಬಗೆಗೆ ಹೀಗೆಲ್ಲಾ ದೂರಿಕೊಂಡು ಓಡಾಡುತ್ತಿದ್ದರೆ?'

'ಛೇ! ಛೇ! ಅಂತಹ ಚಿಲ್ಲರೆ ವ್ಯಕ್ತಿಯಲ್ಲ ಸೋಮಪ್ಪನವರು. ಆದ್ರೆ ತುಂಬಾ ದುಃಖವಾದಾಗ ಮನಸ್ಸಿನಲ್ಲಿ ಇಟ್ಟುಕೊಳ್ಳುವುದೇ ಕಷ್ಟವೆಂದು ಅನ್ನುವಷ್ಟು ಮನಸ್ಸು ಭಾರವಾದಾಗ ಮನುಷ್ಯ ಸಹಿಸಿಕೊಳ್ಳಲೂ ಆಗುವುದಿಲ್ಲ. ಅದರಲ್ಲೂ ವಯಸ್ಸಾಗಿ ಮನಸ್ಸು ದುರ್ಬಲಗೊಂಡಾಗ ದುಃಖ ಅಸಹಾಯಕತೆಯ ಮಟ್ಟ ಮುಟ್ಟಿದಾಗ ಯಾರಾದರೂ ಆಪ್ತರಲ್ಲಿ ತಮ್ಮ ದುಃಖ ತೋಡಿಕೊಂಡು ಮನಸ್ಸು ಹಗುರು ಮಾಡಿಕೊಳ್ಳಬೇಕೆನ್ನಿಸುತ್ತದೆ. ಹಾಗಾಗಿ ಸೋಮಪ್ಪನವರು ತಮ್ಮ ಕೊನೆಯ ದಿನಗಳಲ್ಲಿ ತಮ್ಮ ಮಗಳಿಗಿಂತಲೂ ಹೆಚ್ಚಾಗಿ ಸೇವೆ ಮಾಡಿದ ವಿನೋದಾಬಾಯಿಯೊಡನೆ ಒಮ್ಮೊಮ್ಮೆ ತಮ್ಮ ಮನಸ್ಸಿನಲ್ಲಿದ್ದುದ್ದನ್ನೆಲ್ಲಾ ತೋಡಿಕೊಂಡು ದುಃಖಿಸುತ್ತಿದ್ದರಂತೆ. ಆಕೆ ಒಮ್ಮೊಮ್ಮೆ ನಮ್ಮ ತಾಯಿಯೊಡನೆ ಈ ವಿಚಾರಗಳನ್ನೆಲ್ಲಾ ಹೇಳುತ್ತಿದ್ದಳಂತೆ'

'ಹೋಗ್ಲಿ ಹಿರೀಸೊಸೆ ಸರ್‍ಯಾಗಿ ಕಾಣ್ಲಿಲ್ಲಾಂದ್ರೆ ಇನ್ನಿಬ್ರು ಮಕ್ಳಿದ್ರಲ್ಲಾ, ಅವ್ರೇನು ಒಬ್ನೇ ಮಗ್ನೇ? ಅವ್ನು ಕೃತಘ್ನನಾದ್ರೆ ಉಳಿದವ್ರೂ ಹಾಗಿರೋಕೆ ಸಾಧ್ಯವೇ?'

'ಸೋಮಪ್ಪನವರೂ ಹಾಗೇ ಮಾಡಿದ್ರು. ಎರಡನೆಯ ಮಗನ ಮನೆಗೆ ಹೋದ್ರು. ಆದ್ರೆ ಎರಡನೆ ಸೊಸೆ ತನ್ನ ತಾಯಿ, ತಂಗಿಯರನ್ನೆಲ್ಲಾ ತನ್ನ ಮನೆಯಲ್ಲೇ ಇಟ್ಟುಕೊಂಡಿದ್ದಳಂತೆ. ಸೋಮಪ್ಪನವರು ಹೋದಮೇಲೆ ಅವರ ತಾಯಿಗೆ ಮನೆಯಲ್ಲಿರಲು ಮುಜುಗರವಾಗಿ ಹೊರಟು ಹೋಗ್ತೀನೀಂತ ಕೂತ್ರಂತೆ. ಆಗ ಆ ಸೊಸೆ ನೇರವಾಗಿ ಮಾವನ ಹತ್ರ ಬಂದು, 'ನಮ್ತಾಯಿಗೆ ಯಾರೂ ಬೇರೆ ಆಸರೆ ಇಲ್ಲ. ನೀವಿದ್ರೆ ಅವ್ರು ನಮ್ಮನೇಲಿ ಇರೋಕೆ ಸಂಕೋಚಪಡ್ತಾರೆ. ದಯವಿಟ್ಟು ಬೇರೆ ಮಕ್ಕಳ ಮನೆಗೆ ಹೋಗಿ, ನಾವೇ ವರ್ಷಕ್ಕೊಮ್ಮೆ ನೀವಿದ್ದಲ್ಲಿಗೆ ಬಂದು ನೋಡ್ಕೊಂಡು ಹೋಗ್ತೀವಿ' ಅಂತ ಹೇಳಿದಳಂತೆ'

'ಭಲೇ ಹುಡ್ಗೀನಪ್ಪ ಹಾಗಾದ್ರೆ! ತನ್ನ ತಾಯೀನ ಸಾಕೋಕಾಗಿ ಒಂಟಿಯಾಗಿ ಇದ್ದು, ತನ್ನ ಗಂಡನನ್ನು ಈ ಸ್ಥಿತಿಗೆ ತಂದ ಮಾವನ್ನ ಮನೆಯಿಂದ ಹೊರಗೆ ಹೋಗು ಎನ್ನೋದಾದ್ರೆ ಈ ಹುಡ್ಗೀರ್ಗೇನೂ ಧರ್ಮ, ಕರ್ಮ ಒಂದೂ ಇಲ್ವೆ? ಜವಾಬ್ದಾರಿ ಬೇಡ್ವೇ? ಹೀಗೆ ಹೇಳಿದಾಗ ಗಂಡ ಸುಮ್ನಿದ್ನಾ?'

'ಅವ್ನೇನು ಮಾಡೋಕೆ ಸಾಧ್ಯ? ಕಲ್ಕತ್ತಾ ಅಂತ ಊರ್ನಲ್ಲಿ ಆಫೀಸ್‌ಗೇಂತ ಬೆಳಿಗ್ಗೆ ಎಂಟು ಗಂಟೆಗೆ ಮನ ಬಿಟ್ರೆ, ಪುನಃ ಮನೆ ಮುಟ್ಟೋದು ರಾತ್ರಿ ಒಂಭತ್ತಕ್ಕೇ. ಅಷ್ಟು ಸುಸ್ತಾಗಿ ಮನೆಗೆ ಬಂದಾಗ ಉಳಿದ ಉಸಾಬರಿ ಅವ್ನಿಗೆ ಬೇಕು ಅನ್ನೋದೇ ಇಲ್ಲ. ಮನೆಗೆ ಬಂದ ಸೊಸೆಯಾದವಳಿಗೆ ತನ್ನ ಕರ್ತವ್ಯವೇನು? ಯಾರಿಗೆ ಯಾವ ರೀತಿಯಿಂದ ನಡ್ಕೋಬೇಕು? ಹೇಗೆ ಕಾಣಬೇಕು? ಅನ್ನೋ ತಿಳಿವಳಿಕೆ ಬೇಕು. ಗಂಡ ಸಿಟ್ಟು ತೋರ್‍ಸಿದ್ರೆ ಇವ್ಳು ಜಗಳಾಡ್ತಾ ಕೂತ್ಕೊಂಡ್ರೆ ಅವ್ನು ಜೀವನ ಹೇಗೆ ಕಳಿಬೇಕು? ಅದಕ್ಕಿಂತ ಹೆಂಡ್ತಿ ಹೇಳಿದ್ಹಾಂಗೆ ಕೇಳ್ಬಿಟ್ರೆ ಯಾವ ಸಮಸ್ಯೆ ಇರೋಲ್ಲ. ತಾನು ಹೇಳಿದ ಹಾಗೆ ಕೇಳೋ ಗಂಡನ್ನ ಹೆಂಡತೀನೂ ಗೌರವದಿಂದ ಕಾಣ್ತಾಳೆ. ಇಲ್ದಿದ್ರೆ, ತಾವೂ ಹೇಳ್ದಂಗೂ ಕೇಳೋಲ್ಲ. ಸಮಸ್ಯೆನೂ ಉಂಟಾಗುತ್ತೆ. ಅದ್ರ ಬದ್ಲು, 'ನಿನಗೆ ಬೇಕಾದಂಗೆ ಇರು. ನನ್ನ ಯೋಗಕ್ಷೇಮ ಒಂದಿಷ್ಟು ನೋಡ್ಕೊಂಡ್ಬಿಟ್ರೆ ಖುಷಿಯಿಂದ ಬದುಕಬಹುದು. ಇದು ಈಗಿನ ಯುವಕರ ಮನೋಭಾವ'.

'ಏನ್ ಗಣೇಶ್ ನೀವು ಹೇಳೋದು? ಈಗಿನ ಜನ ಇಂಥ ಬೇಜವಾಬ್ದಾರಿಯ ಮನೋಭಾವ ಬೆಳಸ್ಕೊಂಡ್ರೆ ಸಾಕಿದವ್ರು, ಸಲಹಿದವ್ರು, ಎಲ್ಲಿ ಹೋಗಬೇಕು? ಈ ರಾಜಕೀಯ ವ್ಯಕ್ತಿಗಳು ಮೌಲ್ಯಗಳನ್ನು ಗಾಳಿಗೆ ತೂರಿದಂತೆ, ನಮ್ಮ ಸಂಸ್ಕೃತಿ, ಧರ್ಮ, ನೀತಿ, ಮೌಲ್ಯಗಳನ್ನು ರಕ್ಷಣೆ ಮಾಡುವಂತಹ ಮಹಿಳೆಯರೂ ಹೀಗಾಗಿಬಿಟ್ರೆ ಕೌಟುಂಬಿಕ ನೆಮ್ಮದಿ, ಸಮಾಧಾನ, ಸಾಮಾಜಿಕ ಶಾಂತಿ ಉಳಿಯುವುದು ಹೇಗೆ?'

'ಯಥಾ ರಾಜ, ತಥಾ ಪ್ರಜಾ. ಮೇಲಿಂದ ಕೆಳಗಿನ ತನಕ ಮೋಸ, ಭ್ರಷ್ಟಾಚಾರ, ದ್ರೋಹ, ಕುತಂತ್ರಗಳೇ ರಾಷ್ಟ್ರದಲ್ಲಿ ಹರಡಿದಾಗ, ಅದು ಬೆಳೆಯುವ ಪೀಳಿಗೆಯ ಮೇಲೆ ಸಹಜವಾಗಿ ಪ್ರಭಾವ ಬೀರುತ್ತದೆ. ಗುರು-ಹಿರಿಯರಲ್ಲಿ ಗೌರವವಿಲ್ಲದಿರುವಿಕೆ. ಸ್ವಚ್ಛಂದ ಮನೋಭಾವ, ಸ್ವಾರ್ಥ, ಸ್ವತಂತ್ರದ ಹೆಸರಿನಲ್ಲಿ ಬೇಜವಾಬ್ದಾರಿ ನಡವಳಿಕೆ ಎಲ್ಲಾ ಕ್ಷೇತ್ರದಲ್ಲಿ ಕಾಲಿಟ್ಟಂತೆ ಕೌಟುಂಬಿಕ ಕ್ಷೇತ್ರದಲ್ಲೂ ತಮ್ಮ ಪ್ರಭಾವವನ್ನು ತೋರಿಸುತ್ತಿದೆ.'

'ಅಂತೂ ಎರಡನೆಯ ಮಗನೂ ಸೋಮಪ್ಪನವರಿಗೆ ಕೈಕೊಟ್ಟ ಅನ್ನಿ. ಏನು ಮೂರನೇ ಮಗನ ಮನೆಯಲ್ಲೂ ಅವರಿಗೆ ಸ್ಥಳ ಸಿಗಲಿಲ್ಲವೆ?'

'ಮೂರನೆಯವನು ಎಂಟು ದಿನದ ಮಗುವಿದ್ದಾಗಲೇ ತಾಯಿ ತೀರಿದುದರಿಂದ ಸೋಮಪ್ಪನವರು ತಾಯಿಯಂತೆ ಸಾಕಿ ಅತೀವವಾದ ಪ್ರೀತಿಯನ್ನು ಅವನ ಬಗ್ಗೆ ಬೆಳೆಸಿಕೊಂಡಿದ್ದರು. ಅಲ್ಲಿಯಾದರೂ ತಮಗೆ ಪ್ರೀತಿ ದೊರೆತೀತೆಂಬ ಆಸೆಯಿಂದ ಸೂರತ್‌ಗೆ ಹೋದರು. ನರೇಶನಿಗೇನೋ ತಂದೆ ಬಂದುದು ಖುಷಿ ಎನ್ನಿಸಿತು. ಅಣ್ಣಂದಿರ ವರ್ತನೆಯಿಂದ ನೊಂದ ತಂದೆಗೆ ನೆಮ್ಮದಿಯುಂಟಾಗುವಂತೆ ಪ್ರೀತಿಯಿಂದ ಇಟ್ಟುಕೊಳ್ಳಬೇಕೆಂದುಕೊಂಡಿದ್ದ. ಆದರೆ ಸೋಮಪ್ಪನವರು ಅವರ ಮನೆಗೆ ಹೋದ ಎಂಟು ದಿನಗಳಲ್ಲೇ ನರೇಶನ ಹೆಂಡತಿ ಯಾರಿಗೂ ಬೇಡವಾದವರನ್ನು ನನ್ನ ಕೊರಳಿಗೆ ಕಟ್ಟಿದಿರಿ. ಫ್ರೀಯಾಗಿ ಇರುವಂತೆಯೇ ಇಲ್ಲ. ಎಲ್ಲಿಯಾದರೂ ಹೊರಗೆ ಹೋಗಬೇಕೆಂದರೆ ಇವರ ವ್ಯವಸ್ಥೆ ಮಾಡಿ ಹೋಗಬೇಕು. ಇದು ನನಗ್ಯಾವ ಗ್ರಹಚಾರ' ಎಂದು ಗೊಣಗಲು ಪ್ರಾರಂಭಿಸಿದಳಂತೆ. ಗೊಣಗಾಟದಿಂದ ಏನೂ ಪ್ರಯೋಜನವಾಗಲಿಲ್ಲ. ನರೇಶ ಬೆಳಿಗ್ಗೆಯೇ ಫ್ಯಾಕ್ಟರಿಗೆ ಹೋಗಿಬಿಡುತ್ತಿದ್ದ. ಪುನಃ ಸಂಜೆಗೇ ಹಿಂದಿರುಗುತ್ತಿದ್ದುದು. ಆ ಸಮಯದಲ್ಲಿ ಸೋಮಪ್ಪನವರನ್ನು ಆಕೆ ಬೇಕೋ ಬೇಡವೋ ಎನ್ನುವಂತೆ ನೋಡಿಕೊಳ್ಳುತ್ತಿದ್ದಳಂತೆ. ಒಂದು ದಿನ ಊಟ ಹಾಕಿದರೆ ತಿಂಡಿ ಇರುತ್ತಿರಲಿಲ್ಲ. ತಿಂಡಿ ಕೊಟ್ಟರೆ ಕಾಫಿ ಇರುತ್ತಿರಲಿಲ್ಲ. ಒಮ್ಮೊಮ್ಮೆ ಏನೂ ಮಾಡದೇ ಹೊರಗೆ ಹೋಗಿಬಿಡುತ್ತಿದ್ದಳಂತೆ. ಆದ್ರೆ ರಾತ್ರಿ ಮಾತ್ರ, ಗಂಡನ ಜೊತೆಯಲ್ಲಿ ಉಪಚಾರ ಮಾಡಿ ಊಟಕ್ಕೆ ಬಡಿಸುತ್ತಿದ್ದಳಂತೆ. ಇದನ್ನೆಲ್ಲಾ ಗಮನಿಸಿದ ಸೋಮಪ್ಪನವರಿಗೆ, ಇನ್ನು ಇಲ್ಲಿರುವುದು ಸರಿಯಲ್ಲ. ಒಬ್ಬ ಆಳನಿಟ್ಟುಕೊಂಡರೂ ಅಡ್ಡಿ ಇಲ್ಲ, ಬೇಡವಾದವರ ನಡುವೆ ಇರಬಾರದೆನ್ನಿಸಿತಂತೆ.'

'ಹಾಗೇಕೆ ಯೋಚಿಸಬೇಕಿತ್ತು? ಮಗನಿಗೆ ಇದ್ದ ವಿಚಾರ ತಿಳಿಸಬಹುದಿತ್ತು'.

'ಹಾಗೇ ಮಾಡಬಹುದಿತ್ತು. ಆದರೆ ಸೋಮಪ್ಪನವರಿಗೆ ಅದು ಬೇಡವಾಗಿತ್ತಂತೆ. ಇನ್ನು ಕೆಲವಾರು ವರ್ಷ ಬದುಕುವ ತಮ್ಮ ಜೀವಕ್ಕಾಗಿ, ತಮ್ಮ ಪ್ರೀತಿಯ ಮಗ ವಿರಸದಾಂಪತ್ಯವನ್ನು ಬಾಳುವ ಪರಿಸ್ಥಿತಿ ತರಬಾರದೆಂದುಕೊಂಡರಂತೆ. ಹಾಗಾಗಿ, ಒಂದು ದಿನ ಮಗನಿಗೆ ಇಲ್ಲಿಯ ಹವೆ ತಮಗೆ ಅಷ್ಟು ಒಗ್ಗುವುದಿಲ್ಲವೆಂದು ಹೇಳಿ, ಮೆಲ್ಲಗೆ ಅಲ್ಲಿಂದ ಕಾಲ್ತೆಗೆದರಂತೆ. ಬೆಳಗಾಂನಲ್ಲಿ ಅವರು ನಾಲ್ಕು ಮನೆಗಳ ಒಂದು ಚಾಳನ್ನೂ ಎರಡು ದೊಡ್ಡ ಬಂಗಲೆಗಳನ್ನು ಕಟ್ಟಿಸಿದ್ದಾರೆ. ಎಲ್ಲವನ್ನೂ ಬಾಡಿಗೆಗೆ ಕೊಟ್ಟಿದ್ದರು. ವಾಪಸ್ ಬಂದ ಮೇಲೆ ಒಂದು ಬಂಗಲೆ ಖಾಲಿ ಮಾಡಿಸಿಕೊಂಡರು. ಅಡಿಗೆಗೆ ರಂಗಪ್ಪನ ಹೆಂಡತಿಗೇ ಹೇಳಿಕಳಿಸಿದರು. ಆಕೆಗೂ ಜೀವನ ಕಷ್ಟವಾಗಿತ್ತು. ಗಂಡ ಸತ್ತು ಹೋದಮೇಲೆ ಅವಳಿಗೆ ಬರುತ್ತಿದ್ದ ಪೆನ್ಷನ್‌ನಲ್ಲಿ ಮಕ್ಕಳನ್ನು ಸಾಕಿಕೊಂಡು ಜೀವನ ಮಾಡುವುದು ಕಷ್ಟವಾಗಿತ್ತು. ಹಿರಿಯ ಮಗಳು

ವಿನೋದ ಪಿ.ಯು.ಸಿ. ಮಾಡಿ ಮನೆಯಲ್ಲಿ ಕುಳಿತಿದ್ದಳು. ಟೈಪಿಂಗ್ ಷಾರ್ಟ್‌ಹ್ಯಾಂಡ್ ಎಲ್ಲಾ ಕಲಿತಿದ್ದಳು. ಕೆಲಸ ಸಿಕ್ಕಿರಲಿಲ್ಲ. ಆಕೆಗಿಂತಲೂ ಚಿಕ್ಕವರಾದ ಮೂರು ಮಕ್ಕಳಿದ್ದರು. ಹೀಗಾಗಿ ರಂಗನ ಹೆಂಡತಿ ಸೋಮಪ್ಪನವರ ಆಶ್ರಯಕ್ಕೆ ಬಂದಳು. ಆಕೆಗೂ ನೆರವಾಯಿತು. ಇವರಿಗೂ ಅಡಿಗೆಗೊಂದು ದಿಕ್ಕಾಯಿತು. ಹೀಗೆ ನಾಲ್ಕಾರು ವರ್ಷ ಕಳೆಯಿತು. ಸೋಮಪ್ಪನವರ ಮಕ್ಕಳು ರಜೆಗೆ ಬಂದಾಗ ಹೆಂಡತಿ ಮಕ್ಕಳೊಂದಿಗೆ ತಂದೆ ಮನೆಗೆ ಬಂದು, ವರ್ಷದಲ್ಲಿ ಒಂದೆರಡು ತಿಂಗಳು ಹಾಯಾಗಿ ಇದ್ದು ಹೋಗುತ್ತಿದ್ದರು. ಸೋಮಪ್ಪನವರು ರಂಗನ ಸಂಸಾರಕ್ಕೆ ಆಸರೆಯಾಗಲೆಂದು ವಿನೋದಾಬಾಯಿಗೆ ಒಂದು ಆಫೀಸಿನಲ್ಲಿ ಟೈಪಿಸ್ಟ್ ಕೆಲಸವನ್ನು ಕೊಡಿಸಿದರು. ಇದರಿಂದ ಆ ಬಡ ಸಂಸಾರಕ್ಕೆಷ್ಟೋ ನೆರವಾಯಿತು. ಆದರೆ ಈ ವ್ಯವಸ್ಥೆ ಬಹಳ ದಿನ ಉಳಿಯಲಿಲ್ಲ. ರಂಗನ ಹೆಂಡತಿ ಆಮಶಂಕೆ ಹತ್ತಿ ಯಾವ ಔಷಧವೂ ಪ್ರಯೋಜನವಾಗದೇ ಒಂದು ದಿನ ಕಣ್ಮುಚ್ಚಿದಳು. ರಂಗನ ಮಕ್ಕಳು ಅನಾಥರಾದಂತೆ, ಸೋಮಪ್ಪನವರು ವಯಸ್ಸು ಹೋದ ಕಾಲದಲ್ಲಿ ಅಸಹಾಯಕರಾದರು. ಆಗ ಸೋಮಪ್ಪನವರಿಗೊಂದು ಯೋಚನೆ ಹೊಳೆಯಿತು. ವಿನೋದಾಬಾಯಿಗೆ ಆಫೀಸಿನಲ್ಲಿ ಕೊಡುವ ಸಂಬಳವನ್ನು ತಾವೇ ಕೊಟ್ಟುಬಿಟ್ಟರೆ ಎರಡೂ ಸಂಸಾರಗಳಿಗೆ ಆಕೆಯ ಸೇವೆ ದೊರೆಯಬಹುದೆಂದು ಆಕೆಯ ಮುಂದೆ ಈ ವಿಚಾರ ತಿಳಿಸಿದರು. ಮೊದಲಿನಿಂದಲೂ ತಮಗೆ ಸಹಾಯ ಮಾಡಿದ ಸೋಮಪ್ಪನವರ ಬಗೆಗೆ ಆ ಹುಡುಗಿಗೆ ತುಂಬಾ ಗೌರವವಿತ್ತು. ಅವರ ತಾಯಿ ಕೃತಜ್ಞತೆಯಿಂದ ಸೋಮಪ್ಪನವರ ಸಹಾಯದ ಬಗ್ಗೆ ಮಗಳ ಮುಂದೆ ಮಾತನಾಡುತ್ತಿದ್ದಳು. ಇದರಿಂದ ಆ ಹುಡುಗಿಗೆ ಅವರ ಬಗ್ಗೆ ಮಮತೆ ಗೌರವಗಳು ತುಂಬಿದ್ದವು. ಅವರಿಗೆ ಸಹಾಯ ಮಾಡುವ ಸಂದರ್ಭ ಬಂದಾಗ ನೌಕರಿಯ ಬಗ್ಗೆಯಾಗಲೀ ಮುಂದಿನ ತನ್ನ ಭವಿಷ್ಯದ ಬಗ್ಗೆಯಾಗಲೀ ಸ್ವಲ್ಪವೂ ಯೋಚಿಸದೇ ನೌಕರಿಯನ್ನು ಬಿಟ್ಟು ಸೋಮಪ್ಪನವರ ಸೇವೆಗೆ ನಿಂತಳು. ಅವರ ನೆರವಿನಿಂದ ತಂಗಿ, ತಮ್ಮಂದಿರನ್ನೂ ಓದಿಸುತ್ತಿದ್ದಳು.'

'ಓಹೋ, ಇದೇ ವಿನೋದಾಬಾಯಿಗಲ್ಲವೇ ಆಸ್ತಿಯನ್ನೆಲ್ಲಾ ಬರೆದಿರುವುದು. ಚಾಳೊಂದನ್ನು ಆಕೆಗೆ ಬರೆದು ಬಂಗಲೆಗಳನ್ನಾದರೂ ಮಕ್ಕಳಿಗೆ ಬರೆಯಬಹುದಿತ್ತಲ್ಲಾ ಗಣೇಶ್, ಮಕ್ಕಳೇನು ತಂದೆಯ ಸಂಪರ್ಕ ಕಳೆದುಕೊಂಡಿರಲಿಲ್ಲವಲ್ಲಾ, ಆಗಾಗ್ಗೆ ಬಂದು ಹೋಗುತ್ತಿದ್ದರು. ಹೆಂಡತಿಯರು ಹಾಗೆ ಮಾಡಿದರೆ ಮಕ್ಕಳದ್ದೇನು ತಪ್ಪು?'

'ಪಾಪ, ತಪ್ಪಿಲ್ಲ, ಕೀರ್ತಿ, ತಪ್ಪಿಲ್ಲ. ತಂದೆ ತಮಗಾಗಿ ಎಷ್ಟು ಕಷ್ಟಪಟ್ಟಿದ್ದರು. ತಮ್ಮನ್ನು ಎಷ್ಟು ಪ್ರೀತಿಸುತ್ತಿದ್ದರು ಎಂಬುದು ಈ ಮಕ್ಕಳಿಗೆ ಗೊತ್ತಿತ್ತಲ್ಲ. ಹೆಂಡತಿಯರಿಗೆ

ಗೊತ್ತಿಲ್ಲದಿರಬಹುದು. ಅದನ್ನೆಲ್ಲಾ ವಿವರಿಸಿ ಹೆಂಡತಿಯರ ಮನಸ್ಸನ್ನು ಬದಲಾಯಿಸಲು ಬರುತ್ತಿರಲಿಲ್ಲವೇ? ಅವರಿಗೆ ಸರಿಯಾದ ತಿಳಿವಳಿಕೆ ಬರುವಂತೆ ತಮ್ಮ ಸ್ಥಿತಿಯನ್ನು ವಿವರಿಸಲು ಆಗುತ್ತಿರಲಿಲ್ಲವೇ? ಅದನ್ನೆಲ್ಲಾ ಮರೆತು, ತಪ್ಪಿರಲಿ ಸರಿ ಇರಲಿ, ತಮ್ಮ ಜೀವನದಲ್ಲಿ ಸಮಸ್ಯೆ ಬರಬಾರದೆಂದು ಮೂರ್ಖ ಹೆಂಗಸರ ಕುಣಿತಕ್ಕೆಲ್ಲಾ ತಾಳ ಹಾಕಿದರೆ, ಇವರೆಂಥಾ ಗಂಡಸರು! ಇನ್ನೂ ದುರಂತವೆಂದರೆ ಈಗೆರಡು ವರ್ಷಗಳ ಹಿಂದೆ ಸೋಮಪ್ಪನವರಿಗೆ ಪಾರ್ಶ್ವವಾಯು ತಗುಲಿತು. ಎಲ್ಲಾ ಮಲಗಿದ್ದಲ್ಲಿಯೇ. ಮನೆಯಲ್ಲಿ ಮತ್ತೊಬ್ಬರಿಲ್ಲ. ವಿನೋದಾಬಾಯಿಯೇ ಎಲ್ಲಾ ಮಾಡಬೇಕು. ತನ್ನ ತಂದೆಗಿಂತಲೂ ಹಿರಿಯರಾದ ಅವರ ಬಗೆಗೆ ಬೇರೊಂದನ್ನು ಯೋಚಿಸದೇ ಹುಡುಗಿ ಎಲ್ಲಾ ರೀತಿಯಲ್ಲೂ ಸೇವೆ ಮಾಡಿದಳು. ದೊಡ್ಡ ದೊಡ್ಡ ಡಾಕ್ಟರನ್ನು ಕರೆಸಿ ಟ್ರೀಟ್‌ಮೆಂಟ್ ಕೊಡಿಸಿದಳು. ಮಕ್ಕಳಿಗೆಲ್ಲಾ ಟೆಲಿಗ್ರಾಂ ಕೊಟ್ಟಳು. ಒಬ್ಬರೂ ಬರಲಿಲ್ಲ. ನಂತರ ಪರಿಸ್ಥಿತಿಯನ್ನು ವಿವರಿಸಿ ಎಲ್ಲರಿಗೂ ಪತ್ರ ಬರೆದಳು. ಆಗ ಮೂರು ಜನ ಮಕ್ಕಳೂ ತಮ್ಮ ಆಫೀಸಿನ ತೊಂದರೆಗಳನ್ನು ವಿವರಿಸಿ ತಮಗೆ ಬರಲಾಗದ ಸ್ಥಿತಿಯನ್ನೂ ಮಕ್ಕಳ ಪರೀಕ್ಷೆಯ ಕಾರಣ, ಹೆಂಡತಿಯರಿಗೆ ಬರಲಾಗದ ಅಸಹಾಯಕತೆಯನ್ನು ವಿವರಿಸಿ, ಆಕೆ ಮಾಡುತ್ತಿರುವ ಸೇವೆಗೆ ಅಭಿನಂದಿಸಿ ಪತ್ರ ಬರೆದರು. ನೋಡಿಕೊಂಡು ಹೋಗಲೂ ಸಹ ಒಬ್ಬ ಮಗನೂ ಹಣಕಿ ಹಾಕಲಿಲ್ಲ. ಆಗ ತಂದೆಗೆ ಎಷ್ಟು ನೋವಾಗಿರಬೇಕು. ಅವರ ಮನಸ್ಸೆಷ್ಟು ಕಲ್ಲಾಗಿರಬೇಕು? ನೀವೇ ಯೋಚಿಸಿ, ಕೀರ್ತಿ.'

'ಹಾಗಾದರೆ ತಂದೆಯ ಅನಾರೋಗ್ಯ ಸ್ಥಿತಿಯಲ್ಲಿ ಮಕ್ಕಳ್ಯಾರೂ ಬರಲೇ ಇಲ್ಲವೇ? ಆ ಮೇಲೂ ಬರಲೇ ಇಲ್ಲವೆ?'

'ಅವರೆಲ್ಲಾ ಬಂದುದು ತಂದೆಯ ಸತ್ತ ಸುದ್ದಿ ತಿಳಿದ ಮೇಲೆ. ಆಗ ಹೇಗೆ ಇವರುಗಳಿಗೆ ರಜೆ ಸಿಕ್ಕಿತು? ಕೇಸಿಗಾಗಿ ಎಷ್ಟು ಸಾರಿ ಅಲೆದಾಡಿದರು? ತೀರ್ಪಿನ ಸಲುವಾಗಿ ಈಗ ಮೂರು ದಿನಗಳಿಂದಲೂ ಈ ಊರಲ್ಲೇ ಝೂಂಡಾ ಊರಿದ್ದಾರೆ. ಇದಕ್ಕೆಲ್ಲಾ ಇವರಿಗೆ ರಜೆ ಪಡೆಯಲು ಹೇಗೆ ಸಾಧ್ಯವಾಯ್ತು? ತಂದೆ ಮರಣಶಯ್ಯೆಯಲ್ಲಿದ್ದಾಗ ಪಡೆಯಲು ಸಾಧ್ಯವಾಗಲಿಲ್ಲ ಅಲ್ಲವೆ? ಬದುಕಿದ್ದಾಗ ಮಕ್ಕಳು ಬಂದು ಮಾತನಾಡಿಸಿದ್ದರೆ ತಂದೆಗೆಷ್ಟು ಸಂತೋಷವಾಗಬಹುದಿತ್ತು? ಅವರು ಬಾಯಿಬಿಟ್ಟು ಹೇಳದಿದ್ದರೂ ತಾನೆಷ್ಟು ಪ್ರೀತಿಯಿಂದ ಸಾಕಿದ ಮಕ್ಕಳು ಸ್ವಾರ್ಥಿಗಳಾಗಿ ಕೃತಘ್ನರಾಗಿ ಬದುಕಿದಾಗ, ಅವರ ಹೃದಯವೆಷ್ಟು ದುಃಖದಿಂದ ತಳಮಳಿಸಿರಬೇಕು? ತಮ್ಮ ಮಕ್ಕಳ ಬಗ್ಗೆಯೇ ದೂರಿಕೊಳ್ಳುವಂತಹ ದೌರ್ಭಾಗ್ಯ ಯಾವ ತಂದೆ-ತಾಯಿಗಳಿಗೂ ಬರಬಾರದು. ಬಂದರೂ ದೂರಿಕೊಳ್ಳುವುದು ಸಾಧ್ಯವಾಗುತ್ತದೆಯೇ? ನುಂಗಿಕೊಳ್ಳಬೇಕಷ್ಟೆ. ಹಾಗೆ ನುಂಗಿಕೊಂಡ

ಸೋಮಪ್ಪನವರು ತಮ್ಮ ಅನಿಸಿಕೆಗಳನ್ನೆಲ್ಲಾ ತಮ್ಮ ಡೈರಿಯಲ್ಲಿ ತೋಡಿಕೊಂಡಿದ್ದಾರೆ. ಕೊನೆಯ ದಿನಗಳಲ್ಲಿ ಮಕ್ಕಳ ಬಗ್ಗೆ ಮನಸ್ಸೆಲ್ಲಾ ರೋಸಿ ಹೋಗಿ, ತಾಯಿಯಂತೆ ತನ್ನ ಯೋಗಕ್ಷೇಮ ನೋಡಿಕೊಂಡ ವಿನೋದಾಬಾಯಿಗೆ ಎಲ್ಲವನ್ನೂ ಬರೆದಿಟ್ಟಿದ್ದಾರೆ. ತಮ್ಮ ದುಡಿಮೆಯ ಫಲ ಪರರಿಗೆ ಹೋದರೂ ಮಕ್ಕಳಿಗೆ ಸೇರಬಾರದೆನ್ನಿಸಿರಬೇಕವರಿಗೆ. ಹಾಗೆಂದು ವಿನೋದಾಬಾಯಿಯ ಹತ್ತಿರ ಹೇಳುತ್ತಲೂ ಇದ್ದರಂತೆ'.

'ನಿಜ, ಮಕ್ಕಳು ಇಷ್ಟು ಕೃತಘ್ನರಾದಾಗ, ಎಷ್ಟೇ ಪ್ರೀತಿ ಇದ್ದರೂ ಇಲ್ಲದಂತಾಗುವುದರಲ್ಲಿ ಆಶ್ಚರ್ಯವೇನಿಲ್ಲ. ನಾಚಿಕೆ ಇಲ್ಲದೇ ಅವರು ಆಸ್ತಿಗಾಗಿ ಕೋರ್ಟಿಗೆ ಹೋಗಿದ್ದಾರಲ್ಲ! ತಮ್ಮನ್ನು ಅಷ್ಟು ತ್ಯಾಗ ಮಾಡಿ ಬೆಳೆಸಿದ ತಂದೆಯನ್ನು ಸಾಕಲು, ನಾಮುಂದು ತಾಮುಂದು ಎಂದು ಮಕ್ಕಳು ಬಡಿದಾಡಬೇಕಿತ್ತು. ಅದುಬಿಟ್ಟು ಆಸ್ತಿಗಾಗಿ ಹೊಡೆದಾಡುತ್ತಿದ್ದಾರೆಂದರೆ ನಾಚಿಕೆಗೇಡೇ ಸರಿ. ಜಡ್ಜ್‌ಗೂ ಇದೆಲ್ಲಾ ಅರ್ಥವಾಗಿರಬೇಕು. ಅದಕ್ಕಾಗಿಯೇ ಅಂತಹ ತೀರ್ಪು ಕೊಟ್ಟಿದ್ದಾರೆ.'

'ಅರ್ಥವಾಗುವುದೇನು! ಅವರ ಡೈರಿಯಿಂದ ಎಲ್ಲಾ ಸ್ಪಷ್ಟವಾಗಿದೆ. ಆ ಹುಡುಗಿ ಡೈರಿಯನ್ನು ಕೋರ್ಟಿಗೆ ಹಾಜರುಪಡಿಸಿದ್ದಾಳೆ. ನನಗೂ ಅದನ್ನು ನೋಡಿದ ಮೇಲೆ ಇಂತಹ ದುಷ್ಕರ ಕೇಸನ್ನು ನಾನ್ಯಾಕೆ ಹಿಡಿದೆನಪ್ಪ ಎನ್ನಿಸಿತು. ಪಾಪ ಆ ಬಡ ಹುಡುಗಿಗೆ ಸೇರಿದ್ದು ಒಳ್ಳೆಯದೇ ಆಯ್ತು ಬಿಡಿ. ಆಕೆ ಇಲ್ಲದಿದ್ದರೆ ಅವರ ಗತಿ ಏನಾಗಬೇಕಿತ್ತು? ಅವಳ ಶ್ರದ್ಧೆಗೆ, ಗುಣಕ್ಕೆ ದೇವರು ತಕ್ಕ ಪುರಸ್ಕಾರ ಸಿಗುವಂತೆ ಮಾಡಿದ್ದಾನೆ' ಎನ್ನುತ್ತಾ ಇಬ್ಬರೂ ಮನೆಯ ದಾರಿ ಹಿಡಿದರು.

■

## ೫. ಹಸಿರು ಸೀರೆ

'ಅಲ್ವೇ, ನಿಷಾ, 'ಹಸಿರು ಸೀರೆಯುಟ್ಟಾಗ ನಿಷಾ ತುಂಬಾ ಚೆನ್ನಾಗಿ ಕಾಣಿಸ್ತಾಳೆ' ಎಂದು ಆನಂದ ಹೇಳಿದಾಗಿನಿಂದ ನೀನು ಅವನ ಕ್ಲಾಸಿದ್ದಾಗಲೆಲ್ಲಾ ಆ ಸೀರೆಯನ್ನೇ ಉಡ್ತೀಯಂತೆ. ಇದನ್ನು ಗಮನಿಸಿದ ಉಷಾ ನಿನ್ನ ಮೇಲೆ ಅಸಮಾಧಾನಗೊಂಡಿದ್ದಾಳೆ.'

'ಎಲ್ಲಾ ಬಿಟ್ಟು ಆ ಕರಿ ಮುಸುಡೀನ ಯಾರು ಲೈಕ್ ಮಾಡ್ತಾರ್ಯೇ. ಆ ಬೆಪ್ಪಕ್ಕೀಗಂತೂ ಬುದ್ಧಿ ಇಲ್ಲಾಂದ್ರೆ, ನನ್ಗೂ ಇಲ್ವೇ?' ಎಂದು ತಿರಸ್ಕಾರದಿಂದ ನುಡಿದಳು ನಿಷಾ.

ಲತಾ, ಉಷೆ-ನಿಷೆಯರಿಬ್ಬರಿಗೂ ಆತ್ಮೀಯ ಗೆಳತಿ. ಇಬ್ಬರೂ ಈಕೆಯೊಡನೆ ತಮ್ಮ ವೈಯಕ್ತಿಕ ಗುಟ್ಟು ಮೊದಲ್ಗೊಂಡು ಎಲ್ಲಾ ಹೇಳಿಕೊಳ್ಳುತ್ತಿದ್ದರು. ಎಲ್ಲರೊಡನೆಯೂ ಸ್ನೇಹದಿಂದಿರುತ್ತಿದ್ದ ಈಕೆ, ಒಬ್ಬರ ಗುಟ್ಟನ್ನು ಬೇರೊಬ್ಬರಿಗೆ ಹೇಳುತ್ತಿರಲಿಲ್ಲ. ಸಾಧ್ಯವಿದ್ದರೆ ಎಲ್ಲಾದರೂ ವಿರಸ ಉಂಟಾದರೆ, ಅಥವಾ ಭಿನ್ನಾಭಿಪ್ರಾಯ ಬಂದರೆ ಅವುಗಳನ್ನು ಹೋಗಲಾಡಿಸಲು ಸಹಾಯಕಳಾಗುತ್ತಿದ್ದಳೇ ವಿನಃ ವಿರೋಧ ಬೆಳೆಯಲು ಎಂದೂ ನೀರೆರೆಯುತ್ತಿರಲಿಲ್ಲ. ಹಾಗಾಗಿ ಎಲ್ಲರಿಗೂ ಈಕೆಯ ಸ್ನೇಹ ಬೇಕು.

ಉಷೆ-ನಿಷೆಯರಿಬ್ಬರೂ ಒಂದೇ ಕ್ಲಾಸಿನಲ್ಲಿದ್ದರು. ಇಬ್ಬರೂ ಕಾಲೇಜಿನ ಬ್ಯೂಟಿಗಳೆಂದು ಪ್ರಸಿದ್ಧರಾದವರು. ನಿಷಾ ನಿಜವಾಗಿಯೂ ಸುಂದರಿ. ನೀಟಾದ ಎತ್ತರ, ಮಾಟಾದ ಮೈಕಟ್ಟು, ಆಕರ್ಷಕವಾದ ನಗುಮುಖ, ನೇರವಾದ ಮೂಗು, ಚಂಚಲತೆಯನ್ನು ಸೂಸುವ ಕಣ್ಣುಗಳು, ನಾಗರಿಕವಾದ ನಡೆ-ನುಡಿ. ಬಣ್ಣ ಹೇಳಿಕೊಳ್ಳುವಷ್ಟು ಬಿಳುಪಲ್ಲದಿದ್ದರೂ ಅಲ್ಲಗಳೆಯುವಂತಿರಲಿಲ್ಲ, ಆಕರ್ಷಕವಾಗಿಯೇ ಇತ್ತು. ಒಟ್ಟಿನಲ್ಲಿ ಆಕೆ ಎದುರಿಗೆ ಬಂದರೆ ಸಭ್ಯ ಹುಡುಗರೂ ಸೌಂದರ್ಯ ನೋಡಲೋಸುಗ ಆಕೆಯ ಕಡೆ ಕಣ್ಣು ಹಾಯಿಸದೇ ಇರುತ್ತಿರಲಿಲ್ಲ. ಅಂತಹ ರೂಪ ಅವಳದು. ಆಕೆಗಾದರೂ ಅಷ್ಟೆ. ತನ್ನನ್ನು ಎಲ್ಲರೂ ನೋಡಬೇಕು. ಎಲ್ಲರೂ ಮೆಚ್ಚಬೇಕು. ಸುತ್ತ-ಮುತ್ತ ಆರಾಧಕರಿರಬೇಕು ಎನ್ನುವ ಚಪಲ. ಆಕೆಗೆ ತಾನು ರೂಪವತಿ ಎಂಬ ಹೆಮ್ಮೆ, ಮೆಚ್ಚುಗರು ಮೆಚ್ಚುಗೆಯಿಂದ ಮಾತಾಡಿಸಿದರೆ

ಆಕೆಗೆ ಹುರುಪು. ಆಗ ಸ್ನೇಹದಿಂದ ಮಾತನಾಡಿ ಅವರನ್ನು ಪ್ರೋತ್ಸಾಹಿಸಿಯೂ ಪ್ರೋತ್ಸಾಹಿಸುವಳು. ಎಲ್ಲರ ದೃಷ್ಟಿಯೂ ತನ್ನ ಕಡೆಗೇ ಇರಲಿ ಎನ್ನುವಂತೆ ಅತೀ ಮುತುವರ್ಜಿಯಿಂದ ಡ್ರೆಸ್ ಮಾಡಿಕೊಂಡು ಬರುತ್ತಿದ್ದಳು. ಹೀಗಿದ್ದ ಮಾತ್ರಕ್ಕೆ ಆಕೆ ಹೂವಿಂದ ಹೂವಿಗೆ ಹಾರುವ ಬಣ್ಣದ ಚಿಟ್ಟೆಯಾಗಿರಲಿಲ್ಲ. ಒಟ್ಟಿನಲ್ಲಿ ತನ್ನ ರೂಪವನ್ನು ಎಲ್ಲರೂ ಮೆಚ್ಚಬೇಕು. ಹೊಗಳಬೇಕು. ತನಗಾಗಿ ಹುಡುಗರು ಬಾಯ್ಬಿಡಬೇಕು. ಇದಿಷ್ಟೇ ಅವಳ ಇಚ್ಛೆ. ಅವರುಗಳ ಬಗ್ಗೆ ಆಕೆಯ ಅಭಿಪ್ರಾಯವೇನಿಲ್ಲ.

ಉಷೆಯೂ ಸುಂದರಿಯೇ. ಸುಂದರವಾದ ನಸುಗೆಂಪಿನ ಗುಲಾಬಿಯ ಬಣ್ಣ. ಒಳ್ಳೆಯ ಎತ್ತರ. ಎತ್ತರಕ್ಕೆ ತಕ್ಕ ಮೈಕಟ್ಟು. ಬುದ್ಧಿಮತ್ತೆಯನ್ನು ಸೂಚಿಸುವ ಹೊಳಪಾದ ಕಣ್ಣುಗಳು. ಸಮುದ್ರದಂತೆ ಗಂಭೀರವಾದ ಮುಖಭಾವ, ದಿಟ್ಟತನದಿಂದ ಕೂಡಿದ ನಡಿಗೆ, ಮಾತು ಹಿತ–ಮಿತ, ಮುಖದಲ್ಲಿ ಚಂಚಲತೆಯಿಲ್ಲ. ಮುಗ್ಧ–ಸ್ನಿಗ್ಧ ಮುಗುಳ್ನಗು ಮುಖದ ಮೇಲೆ. ಸೌಂದರ್ಯವೇ ಮೂರ್ತಿವೆತ್ತಂತಿದ್ದರೂ ಅವಳನ್ನು ನೋಡಿದರೆ ಗೌರವದಿಂದ ತಲೆತಗ್ಗಿಸಿಕೊಂಡು ಹೋಗಬೇಕು ಎನ್ನುವ ವ್ಯಕ್ತಿತ್ವ. ಪೋಲಿಗಳಾದರೂ ಸಹ ಆಕೆಯ ಕಡೆಗೆ ನೋಡುವುದಕ್ಕಾಗಲೀ ಕೀಟಲೆ ಮಾಡುವುದಕ್ಕಾಗಲೀ ಧೈರ್ಯ ಮಾಡುತ್ತಿರಲಿಲ್ಲ. ಎಂತಹವರಿಗೂ ಆಕೆಯ ಬಗ್ಗೆ ಗೌರವಾದರಗಳು ಮೂಡುತ್ತಿದ್ದವು.

ಇಂತಹ ಹುಡುಗಿ ಉಷಾ ಮನಶಾಸ್ತ್ರ ಬೋಧಿಸುತ್ತಿದ್ದ ಆನಂದನಿಗೆ ತಾನೇ ಮಾರುಹೋಗಿದ್ದಳು. ಈ ಸಂಗತಿಯನ್ನು ಕೇಳಿದ ಯಾರೂ ಮೊದಮೊದಲು ನಂಬಲಿಲ್ಲ. ಏಕೆಂದರೆ ಈಕೆಯಾದರೋ ಆಗರ್ಭ ಶ್ರೀಮಂತನ ಏಕಮಾತ್ರ ಪುತ್ರಿ. ಆಕೆ ಏನು ಬೇಕು ಎಂಬುದನ್ನು ಬಾಯ್ಬಿಡುವ ಮೊದಲೆ ತಿಳಿದುಕೊಂಡು ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುತ್ತಿದ್ದ ತಂದೆ–ತಾಯ್ಗಳು. ಕೊರತೆ ಏನೆಂಬುದನ್ನೇ ಅರಿಯದೇ ಬೆಳೆದವಳು. ಮಗಳು ಓದಲೆಂದು ಮೈಸೂರಿಗೆ ಬಂದಾಗ ಹಾಸ್ಟೆಲಿನಲ್ಲಿ ಸರಿಯಾದ ಸೌಕರ್ಯಗಳಿರುವುದಿಲ್ಲವೆಂದು ಒಂದು ಬಂಗಲೆಯನ್ನು ಬಾಡಿಗೆಗೆ ಹಿಡಿದು ತಾಯಿಯೂ ಆಕೆಯೊಂದಿಗೆ ಇರತೊಡಗಿದರು. ಐಶ್ವರ್ಯ, ವಿದ್ಯೆ, ಬುದ್ಧಿ, ರೂಪ, ಗುಣಗಳೆಲ್ಲವನ್ನೂ ಪಡೆದ ಈಕೆಯನ್ನು ವರಿಸಲು ಅತ್ಯಂತ ಶ್ರೇಷ್ಠ ದರ್ಜೆಯ ವರಗಳು ತಾ ಮುಂದು ನಾ ಮುಂದು ಎಂದು ಬಂದಿದ್ದರು. ತಂದೆ–ತಾಯ್ಗಳಿಗೆ ಯಾರನ್ನು ಆರಿಸಬೇಕೆಂಬುದೇ ಸಮಸ್ಯೆಯಾದರೂ ಬಿಪಿನನ ಜಾಣ್ಮೆ, ಚತುರತೆ, ದಕ್ಷತೆ, ಯೋಗ್ಯತೆ, ಐಶ್ವರ್ಯ ಅವರ ಮನವನ್ನು ಸೆಳೆದಿದ್ದವು. ಆಕೆಯ ತಂದೆ ಇವನಲ್ಲಿ ತನ್ನ ಅಳಿಯನಾಗುವ ಲಕ್ಷಣಗಳಿವೆ ಎಂದು ಮನಸ್ಸಿನಲ್ಲೇ ಅಂದುಕೊಂಡಿದ್ದರು. ಆದರೆ ಯಾವ ನಿರ್ಧಾರಕ್ಕೂ ಬಂದಿರಲಿಲ್ಲ. ಉಷೆಗೆ

ಲಗ್ನದ ಕಡೆಯೇ ಲಕ್ಷ್ಯವಿರಲಿಲ್ಲ. ಅವಳಿಗೆ ಮನಶ್ಶಾಸ್ತ್ರದಲ್ಲಿ ಆಳವಾದ ಅಭ್ಯಾಸ ಮಾಡಬೇಕೆಂಬ ಉತ್ಕಟೇಚ್ಛೆ ಇತ್ತು. ಆದುದರಿಂದ ಅವಳ ತಂದೆ ಮದುವೆಗೆ ಮಗಳನ್ನು ವಿಚಾರಿಸುವ ಗೊಡವೆಗೇ ಹೋಗಿರಲಿಲ್ಲ. ಆಕೆಯ ಬಾಳ ಸಂಗಾತಿಯ ಬಗ್ಗೆ ಆಕೆಯ ಒಪ್ಪಿಗೆ ಮೆಚ್ಚುಗೆಗಳೇ ಮುಖ್ಯವೆಂಬುದು ಅವರ ದೃಷ್ಟಿ. ಹಾಗಾಗಿ ಬಿಪಿನನ ಬಗ್ಗೆ ತಮ್ಮ ನಿರ್ಧಾರ ತಿಳಿಸಿರಲಿಲ್ಲ.

ಇಂತಹ ಹಿನ್ನೆಲೆಯ ಉಷೆ, ಸಾದಾ ಮನುಷ್ಯನಾದ ಆನಂದನಲ್ಲಿ ಯಾವ ಆಕರ್ಷಣೆ ಕಂಡಳೋ ದೇವರೇ ಬಲ್ಲ. ಅವನದು ಸಾದಾ ರೂಪು, ಸಾದಾ ಉಡುಪು, ಬಣ್ಣವೂ ಕಪ್ಪೆಂದೇ ಹೇಳಬೇಕು. ಇಷ್ಟು ಸಾಲದೆಂಬಂತೆ ಮುಖದ ಮೇಲೆ ಬರೆ ಎಳೆದಂತೆ ಬಾಲ್ಯದಿಂದಲ್ಲುಂಟಾದ ಕಲೆ. ಕೌಟುಂಬಿಕ ಹಿನ್ನೆಲೆಯಂತೂ ತೀರ ಬಡತನದ್ದು. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡಿದ್ದ. ವಿಧವೆಯಾದ ತಾಯಿ ತನ್ನ ಏಕಮಾತ್ರ ಪುತ್ರನನ್ನು ಬಹಳ ಕಾಳಜಿಯಿಂದ ಬೆಳೆಸಿದ್ದಳು. ಪರರ ಮನೆಯಲ್ಲಿ ಕೆಲಸ ಮಾಡಿ ಸಂಪಾದಿಸಿ ಮಗನಿಗೆ ವಿದ್ಯೆ ಕಲಿಸಿ ಕಾಲೇಜಿನಲ್ಲಿ ಪ್ರಾಧ್ಯಾಪಕನಾಗುವ ಮಟ್ಟಕ್ಕೆ ತಂದಿದ್ದಳು. ಆನಂದನು ಐಶ್ವರ್ಯದಲ್ಲಿ ಕಡುಬಡತನವನ್ನನುಭವಿಸಿದರೂ ತಾಯಿಯ ಮಮತೆಯ ಮಹದೈಶ್ವರ್ಯ ಪಡೆದು ಬಹಳ ಒಳ್ಳೆಯವನಾಗಿ ರೂಪುಗೊಂಡಿದ್ದ. ಸರಳ ಸ್ವಭಾವ, ಅಹಂಕಾರವಿಲ್ಲದ ಮನೋಭಾವ, ಈ ಗುಣಗಳೇ ಉಷೆಯನ್ನು ಆಕರ್ಷಿಸಿರಬೇಕು. ಆಕೆ ಆತನ ಬಗ್ಗೆ ಲತೆಯೊಡನೆ ಮಾತನಾಡುವಾಗ 'ಆನಂದ ಬಹಳ ಒಳ್ಳೆಯವನು ಕಣೆ, ಅವನ ಮುಖದ ಮೇಲಿರುವ ಆ ಪ್ಯಾಚು ಸಹ ಅವನಿಗೆ ಲಕ್ಷಣವಾಗಿಯೇ ಕಾಣುತ್ತೆ' ಎನ್ನುತ್ತಿದ್ದಳು. ಅಲ್ಲದೇ ಬುದ್ಧಿಯೂ ಅಂತಹ ತೀಕ್ಷ್ಣವಲ್ಲದಿದ್ದರೂ 'ಬಹು ಚುರುಕು ಬುದ್ಧಿ' ಎಂದು ಉಷೆ ಮೆಚ್ಚಿದ್ದಳು. ಇದನ್ನು ಕೇಳಿದ ಲತಾ 'ಮೆಚ್ಚಿದವರಿಗೆ ಮರುಳು ಸುಖ, ಹುಚ್ಚುನಾಯಿಗೆ ಅಡವಿ ಸುಖ' ಎಂದು ಮನಸ್ಸಿನಲ್ಲೇ ಅಂದುಕೊಳ್ಳುತ್ತಿದ್ದಳು.

ಉಷೆಯ ಜೀವನದಲ್ಲಿ ಮುಚ್ಚು-ಮರೆ ಇರಲಿಲ್ಲ. ಅವನು ಅವಳ ಮನಸ್ಸಿಗೆ ಬಂದಾದ ಮೇಲೆ ಆನಂದನಿಗೂ ಇದರ ಅರಿವಾಗದೇ ಉಳಿದಿರಲಿಲ್ಲ. ಈಕೆಯ ಕೃಪಾದೃಷ್ಟಿ ಬಿದ್ದ ಯಾರಾದರೂ ತಾವು ಪುಣ್ಯವಂತರೆಂದೇ ಎಂದುಕೊಳ್ಳುತ್ತಿದ್ದರು. ಹಾಗಿರುವಾಗ ಆನಂದ ಅದರಿಂದ ಹೊರತಾಗಬಲ್ಲನೇ? ತನ್ನ ಮತ್ತು ಆಕೆಯ ಮಟ್ಟದಲ್ಲಿ ಅಜಗಜಾಂತರವಿದೆ ಎಂದು ಮೊದ ಮೊದಲು ಅಳುಕಿದ. ತಾಯಿಗೂ ಈ ವಿಚಾರ ತಿಳಿಸಿದ. ಆಗ ಆಕೆ 'ಬೇಡಪ್ಪಾ, ನಮ್ಮಂತಹವರಿಗೆ ಅಂತಹವರು ಸರಿ ಹೊಂದುತ್ತಾರೆಯೇ?' ಮುಂದೆ ಆಕೆ ಅಸಮಾಧಾನಗೊಂಡರೆ ನಿನ್ನ ಸಂಸಾರ ಜೀವನ ಸಮಸ್ಯೆಯಾದೀತು'

'ಇಲ್ಲಮ್ಮಾ, ಆಕೆ ಎಲ್ಲ ಶ್ರೀಮಂತರಂತಲ್ಲ, ಆಕೆ ಶ್ರೀಮಂತಳಿದ್ದೂ ಬಡವರಷ್ಟು ಸರಳವಾಗಿ ಇರುತ್ತಾಳೆ. ಯಾವುದರಲ್ಲೂ ಆಡಂಬರವಿಲ್ಲ, ಅಹಂಕಾರವಿಲ್ಲ. ಈ ಬಡತನದ ಜೀವನಕ್ಕೆ ಆಕೆಯೇ ಬಯಸಿ ಬಂದಿದ್ದಾಳೆ. ಸಿರಿವಂತಿಕೆಯ ಜೀವನ ಬೇಕೆಂದರೂ ಆಕೆಗೆ ತೊಂದರೆ ಇಲ್ಲ. ಅವರಪ್ಪನಿಗೆ ಆಕೆಯೊಬ್ಬಳೇ ಮಗಳು ಎಂದಾಗ,

'ಏನೋಪ್ಪ ನೀನು ಕಲಿತವನು, ನನಗೆ ಇಂತಹ ವಿಚಾರಗಳೆಲ್ಲಾ ಹೆಚ್ಚು ತಿಳಿಯುವುದಿಲ್ಲ. ನಿನಗೆ ಸರಿ ಎನ್ನಿಸಿದರೆ ಮಾಡಿಕೋ' ಎಂದಳು

ಆನಂದನಿಗೆ 'ಆಕೆ ತನ್ನೊಂದಿಗೆ ಸುಖವಾಗಿ ಇರಬಲ್ಲಳೇ? ಆಕೆಯ ಜೀವನದ ಮಟ್ಟಕ್ಕೆ ನಾನೇರಬಲ್ಲೆನೆ' ಎಂದು ಮನಸ್ಸಿನಲ್ಲಿ ಕೊರೆಯುತ್ತಿದ್ದರೂ ಆಕೆಯ ಪ್ರೇಮ ತನ್ನ ಭಾಗ್ಯವೆಂದೇ ಭಾವಿಸಿದ. ತಾಯಿಯ ಒಪ್ಪಿಗೆ ಸಿಕ್ಕಮೇಲಂತೂ 'ಉಷಾ, ನನಗಂತೂ ಒಪ್ಪಿಗೆ, ತಾಯಿಯ ಅನುಮತಿಯೂ ದೊರೆಯಿತು. ಮುಂದಿನ ಜವಾಬ್ದಾರಿ ನಿನ್ನದು' ಎಂದು ಅವಳಿಗೆ ತಿಳಿಸಿಯೂ ಬಿಟ್ಟ.

ಉಷೆಯದು ಎಲ್ಲದಕ್ಕೂ ನಿರ್ಭಿಡೆಯ ನಡವಳಿಕೆ. ತನ್ನ ತಾಯಿಗೂ ಎಲ್ಲವನ್ನು ನಿಸ್ಸಂಕೋಚವಾಗಿ ತಿಳಿಸಿ ತಾನು ಆನಂದನನ್ನು ವಿವಾಹವಾಗುವುದಾಗಿ ಹೇಳಿದಳು. ಆಕೆ ಮೊದಲಿನಿಂದಲೂ ಸಂಕೋಚ, ದಾಕ್ಷಿಣ್ಯದಿಂದ ಒದ್ದಾಡುತ್ತಿರಲಿಲ್ಲ. ಎಲ್ಲಕ್ಕೂ ನೇರವಾದ ನಡೆ, ಲೈಬ್ರರಿಗೆ ಹೋದರೂ ಅಷ್ಟೆ. ತಾನೊಬ್ಬಳೇ ನುಗ್ಗಿ ಹುಡುಗರಿದ್ದರೂ ನಿಸ್ಸಂಕೋಚವಾಗಿ ತನಗೆ ಬೇಕಾದ ಪುಸ್ತಕಗಳನ್ನು ಆರಿಸಿಕೊಂಡು ಬಾಗಿಲಲ್ಲಿ ಹೋಗಲು ಜಾಗವಿಲ್ಲದಂತೆ ಹುಡುಗರು ನಿಂತಿದ್ದರೆ ಕಂಬಿ ಇಲ್ಲದ ಕಿಟಕಿಯಿಂದಲೇ ಹಾರಿ ಹೊರ ಬರುತ್ತಿದ್ದಳು. ತನಗೆ ಹೊರಲಾರದಷ್ಟು ಪುಸ್ತಕಗಳಿದ್ದರೆ ಅಲ್ಲಿದ್ದ ಯಾರಾದರೂ ಒಬ್ಬ ಹುಡುಗನನ್ನು ಕರೆದು 'Please help me' ಎಂದು ತನ್ನ ಬಂಗಲೆಯವರೆಗೂ ಪುಸ್ತಕಗಳನ್ನು ಹೊರಿಸಿಕೊಂಡು ಹೋಗುತ್ತಿದ್ದಳು. ಹೀಗಿದ್ದರೂ ಅವಳ ಬಗ್ಗೆ ಯಾರೂ ತುಟಿ ಪಿಟಕ್ ಎನ್ನುತ್ತಿರಲಿಲ್ಲ. ಅವಳ ದಿಟ್ಟತನ, ಗೌರವ, ಗಾಂಭೀರ್ಯ, ಗುಣ ಎಲ್ಲರಿಗೂ ಪರಿಚಯವಿದ್ದದ್ದೆ. ಯಾರಿಗೂ ಲಕ್ಷ್ಯಕೊಡದೇ ತನ್ನ ಪಾಡಿಗೆ ತಾನು ಹೇಗಿರಬೇಕೋ ಹಾಗಿರುತ್ತಿದ್ದಳು. ಇಂತಹ ಹುಡುಗಿ ಆನಂದನನ್ನು ಪ್ರೇಮಿಸುತ್ತಾಳೆ ಎಂದಾಗ ಕೇಳಿದವರು ಆಶ್ಚರ್ಯಪಟ್ಟರೆ ಅತಿಶಯವೇನಲ್ಲ. ಈ ವಿಷಯವನ್ನು ಎಲ್ಲರೂ ತಿಳಿಯುವ ಮೊದಲೇ ತಾಯಿಗೆ ಹೇಳಿದಾಗ ಆಕೆ,

'ಬಾಳುವೆ ಮಾಡುವವಳು ನೀನು. ವಿದ್ಯಾವಂತೆ ಹಾಗೂ ವಿಚಾರವಂತೆ. ನೀನೊಪ್ಪಿದ ಮೇಲೆ ನನ್ನ ಅಭ್ಯಂತರವೇನಿಲ್ಲ. ಒಟ್ಟಿನಲ್ಲಿ ನೀನು ಸುಖವಾಗಿರಬೇಕು' ಎಂದರು ಮಗಳ ಗುಣ ಜಾಣ್ಮೆಗಳ ಬಗೆಗೆ ವಿಶ್ವಾಸವಿಟ್ಟಿದ್ದ ಆಕೆ. ಆದರೂ

'ಒಂದು ಮಾತು ತಂದೆಯವರ ಕಿವಿಗೂ ಹಾಕಿ ಅವರ ಸಲಹೆಯನ್ನು ತೆಗೆದುಕೋ' ಎಂದು ಎಚ್ಚರಿಸುವುದನ್ನು ಮರೆಯಲಿಲ್ಲ.

ಪತ್ರ ಬರೆಯುವುದಕ್ಕಿಂತ, ಬಂದಾಗಲೇ ಕೇಳಿದರಾಯ್ತೆಂದು ಅವರ ಬರವಿಗಾಗಿ ಕಾಯತೊಡಗಿದಳು. ಮೊದಲಿನಿಂದಲೂ ತಂದೆ-ಮಗಳಲ್ಲಿ ಸಲುಗೆ ಇತ್ತು. ಸ್ನೇಹಿತರಂತೆ ಒಬ್ಬರಿಗೊಬ್ಬರು ತಮ್ಮೆಲ್ಲಾ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು.

ಉಷೆ ನಿರೀಕ್ಷಿಸಿದಂತೆ ಅದೇ ವಾರದ ಕೊನೆಯಲ್ಲಿ ತಂದೆ ಬಂದರು. ಆನಂದನ ವಿಚಾರ ತಿಳಿಸಿದಾಗ ಬಿಪಿನನ ಬಗ್ಗೆ ಆಸೆ ಇದ್ದ ಅವರಿಗೆ ನಿರಾಸೆಯಾಗದೇ ಇರಲಿಲ್ಲ. ಆದರೂ ಮಗಳ ಮನಸ್ಸಿಗೆ ನೋವಾಗಬಾರದೆಂದು ತಮ್ಮ ಆಸೆಯನ್ನು ಹತ್ತಿಕ್ಕಿದರು. ಅವಳ ಭವಿಷ್ಯ ಸುಂದರಮಯವಾಗಬೇಕೆಂದಿದ್ದ ಅವರಿಗೆ ಅನನುಭವಿಯಾದ ಮಗಳು ಎಂತಹ ಸಂಗಾತಿಯನ್ನಾರಿಸಿದ್ದಾಳೋ ಎಂದು ಆತಂಕವಾಯಿತು. ದುಡುಕಿದ್ದರೆ ಅವಳು ಅಸುಖಿಯಾದುದನ್ನು ಹೇಗೆ ನೋಡುವುದು? ಆದುದರಿಂದ ಈ ಬಗ್ಗೆ ಸ್ವಲ್ಪ ವಿಚಾರಿಸಿಯೇ ಒಪ್ಪಿಗೆ ಕೊಡಬೇಕೆಂದುಕೊಂಡು ಅವರು 'ನಿನ್ನಿಷ್ಟಕ್ಕೆ ನಾನೇನು ವಿರುದ್ಧವಿಲ್ಲವಮ್ಮಾ. ಆದರೂ ಈ ವಯಸ್ಸಿನಲ್ಲಿ ಎಲ್ಲಾ ರೀತಿಯಿಂದ ವಿಚಾರ ಮಾಡುವ ಶಕ್ತಿ ಇರುವುದಿಲ್ಲ. ನಿನ್ನ Selection ಹೇಗಿದೆ ಎಂಬುದನ್ನು ನೋಡಬೇಕು. ಸಂಜೆ ಮನೆಗೆ ಕರೆದುಕೊಂಡು ಬಾ' ಎಂದರು.

ಈ ಸಂದೇಶ ಉಷೆಯಿಂದ ಆನಂದನಿಗೆ ಮುಟ್ಟಿದಾಗ ಎಲ್ಲಿಲ್ಲದ ಗಾಬರಿ ಅವನಿಗೆ. ಆದರೂ ಪರಿಸ್ಥಿತಿಯನ್ನು ಎದುರಿಸಲೇಬೇಕಾಗಿತ್ತು. ಆ ದಿನದ ಕಾಲೇಜಿನ ಡ್ಯೂಟಿ ಮುಗಿಸಿಕೊಂಡು ಉಷೆಯೊಡನೆಯೇ ಆಕೆಯ ಮನೆಗೆ ಬಂದ. ಚಿಕ್ಕದಾಗಿದ್ದರೂ ಚೊಕ್ಕವಾದ ಬಂಗಲೆ. ಪೋರ್ಟಿಕೋದಲ್ಲಿ ಸುಂದರ ಕ್ಯಾಡಿಲಾಕ್ ಕಾರು ನಿಂತಿತ್ತು. ಒಳಗೆ ಕಾಲಿಡುತ್ತಿದ್ದಂತೆಯೇ ನೆಲಕ್ಕೆ ಹಾಸಿದ ಬೆಲೆ ಬಾಳುವ ರತ್ನಗಂಬಳಿಗಳು; ನೆಲವಾಸುಗಳು, ಕಿಟಕಿ-ಬಾಗಿಲುಗಳಿಗೆ ಹಾಕಿದ, ಕೋಣೆಯ ಸೌಂದರ್ಯವನ್ನು ಇಮ್ಮಡಿಸುವಂತಹ ಸುಂದರ ಪರದೆಗಳು, ಕಲಾತ್ಮಕವಾಗಿ ಜೋಡಿಸಿದ ಸುಸಜ್ಜಿತ ಸೋಫಾ ಸೆಟ್‌ಗಳು; ಆನಂದನಿಗೆ ಉಷೆಯ ಐಶ್ವರ್ಯ, ಅಭಿರುಚಿ ಕಲೆ ಹಾಗೂ ಸಂಸ್ಕೃತಿಗಳ ಮತ್ತಷ್ಟು ಪರಿಚಯ ಮಾಡಿಕೊಟ್ಟವು. ಮನಸ್ಸಿನೊಳಗೆ ಅಂಜಿಕೆ, ಅಳುಕುಗಳುಂಟಾದರೂ ಹೊರಗೆ ತೋರಗೊಡದೆ ಉಷೆ ಸೂಚಿಸಿದಲ್ಲಿ ಕುಳಿತ.

ಮನೆಯ ಉಡುಪಿನಲ್ಲಿದ್ದ ಉಷೆಯ ತಂದೆ ಬಂದಾಗ ಆನಂದ ಎದ್ದು ವಿನಯದಿಂದ ನಮಸ್ಕರಿಸಿದ. ಅವನ ವಿನಯ ಅವನನ್ನು ಒಳ್ಳೆಯವನು ಎಂದು ಗುರುತಿಸಿದರೂ ಮುದುಡಿ ನಿಂತಿರುವ ಈ ಹುಡುಗ ತನ್ನ ಮಗಳಿಗೆ

ಸರಿಯಲ್ಲವೆನ್ನಿಸಿತವರಿಗೆ. ರೂಪದ ವಿಷಯದಲ್ಲೂ ಮಗಳು ತಪ್ಪು ಮಾಡಿರುವಳೆಂದು ಮೊದಲ ನೋಟಕ್ಕೇ ತಂದೆ ತೀರ್ಮಾನಿಸಿದರು. ಉಳಿದ ವಿವರಗಳನ್ನು ತಿಳಿಯಲೋಸುಗ ಮಾತಿಗೆ ತೊಡಗಿದರು.

'ಉಷೆಯ ಪ್ರಾಧ್ಯಾಪಕ ಆನಂದ ಅಲ್ಲವೆ?' ಎಂಬ ಪ್ರಶ್ನೆಗೆ ಮುಗುಳ್ನಗುವಿನ ಉತ್ತರವಿತ್ತು. ಮಾತಿನ ಸಂದರ್ಭದಲ್ಲಿ ದೊರೆತ ಉತ್ತರಗಳಿಂದ ಅವನು ಕಡುಬಡತನದಲ್ಲಿ ಬೆಳೆದುಬಂದವನೆಂದೂ ವಿಧವೆಯಾದ ತಾಯಿ ಬಹುಕಷ್ಟದಿಂದ ಮಗನಿಗೆ ವಿದ್ಯಾಭ್ಯಾಸ ಮಾಡಿಸಿರುವಳೆಂದೂ ವಿಷಯ ಸಂಗ್ರಹಿಸಿದರು. ಚಹಾ-ತಿಂಡಿಗಳಾದ ನಂತರ ಡ್ರೈವರ್‌ಗೆ ಆನಂದನನ್ನು ಮನೆಗೆ ಬಿಟ್ಟು ಬರಲು ಕಳಿಸಿಕೊಟ್ಟು ಮಗಳಿಗೆ,

'ಉಷಾ ನಿನ್ನ ಜಾಣತನದ ಬಗೆಗೆ ನನಗಿದ್ದ ವಿಶ್ವಾಸವನ್ನು ನೀನಿಂದು ಸುಳ್ಳು ಮಾಡಿದೆ'.

'ಯಾಕಪ್ಪಾಜಿ, ನನ್ನ ಸೆಲೆಕ್ಷನ್ ನಿಮ್ಮ ಮನಸ್ಸಿಗೆ ಬರಲಿಲ್ಲವೆ?'

'ಇಲ್ಲಮ್ಮಾ, ಯಾವುದರಲ್ಲಿ ನಿನಗೆ ಸರಿಹೊಂದುತ್ತಾನೆ ಆನಂದ? ಸ್ವಭಾವವೊಂದು ಒಳ್ಳೆಯದಿರಬಹುದು. ಆದರೆ ಅದೊಂದೇ ನಿನ್ನ ಜೀವನವನ್ನು ಸುಖಮಯ ಮಾಡಲಾರದು.'

'ಏಕೆ ಅಪ್ಪಾಜಿ ಗುಣ ಮಹತ್ವವಾದುದಲ್ಲವೇ? ಬಡವನಿಗೆ ಸಮಾಜದಲ್ಲಿ ಸ್ಥಾನ ಇರಬಾರದೇ? ಅವನು ನಿಕೃಷ್ಟಮಟ್ಟದಲ್ಲಿಯೇ ಇರಬೇಕೆ?'

'ಹಾಗಲ್ಲಮ್ಮಾ, ಎಲ್ಲರ, ಸ್ವಭಾವಗಳೂ, ಅಭಿರುಚಿಗಳೂ ಅವರಿಗೆ ಬಾಲ್ಯದಲ್ಲಿ ಸಿಕ್ಕಿದ ಅವಕಾಶ ಹಾಗೂ ಅನುಕೂಲತೆಗಳಿಗೆ ತಕ್ಕಂತೆ ಬೆಳೆದಿರುತ್ತವೆ. ಜೀವನದಲ್ಲಿ ಬರೀ ಅಸಹಾಯಕತೆಯನ್ನೇ ಅನುಭವಿಸಿದ ಅವನು ನಿನ್ನ ಅಭಿರುಚಿಯ ಮಟ್ಟಕ್ಕೆ ಏರಲಾರ. ನಿಮ್ಮಿಬ್ಬರ ವಿಚಾರಧಾರೆಗಳೂ ಬೇರೆಯಾದವು. ಆದರಿಂದ ಜೀವನದಲ್ಲಿ ವಿರಸ ಉಂಟಾಗುವ ಸಾಧ್ಯತೆ ಬಹಳ. ನಿನ್ನ ಜೀವನ ಸಮಸ್ಯಾಮಯವಾಗಿರುವುದನ್ನು ನಾನೆಂದೂ ಸಹಿಸಲಾರೆ. ಈ ಯೋಚನೆ ಇಲ್ಲಿಗೇ ಬಿಟ್ಟುಬಿಡು'

'ಓ ಅದೆಂದಿಗೂ ಆಗದ ಮಾತು ಅಪ್ಪಾಜಿ. ನಾನು ತುಂಬಾ ಯೋಚಿಸಿದ್ದೇನೆ. ಆನಂದನ ಸ್ವಭಾವ ನನಗೆ ಬಹಳ ಸೇರುತ್ತದೆ. ವಿರಸ ಬರುವ ಪ್ರಶ್ನೆಯೇ ಏಳುವುದಿಲ್ಲ. ನನಗೆ ಹಿತವಾದುದನ್ನೇ ಬಯಸುವ ನೀವು ಒಪ್ಪಿಯೇ ಒಪ್ಪುತ್ತೀರೆಂದು ನನ್ನ ಮನಸ್ಸನ್ನು ಆ ಬಗ್ಗೆ ತುಂಬಾ ದೂರ ಒಯ್ದು ಬಿಟ್ಟಿದ್ದೇನೆ. ಆನಂದ ಬಡವ, ನೋಡಲು ಚೆನ್ನಾಗಿಲ್ಲ ಎಂದ ಮಾತ್ರಕ್ಕೆ ನಾವು ಹೊಂದಿಕೊಂಡು ಬಾಳುವುದಿಲ್ಲ

ಎಂದು ಹೇಗೆ ಹೇಳುತ್ತೀರಿ. ನಾನೇ ಮೆಚ್ಚಿದ ಮೇಲೆ ಆ ಕೊರತೆಗಳು ನನಗೇನು ಬೇಜಾರುಂಟು ಮಾಡುವುದಿಲ್ಲ ಅಪ್ಪಾಜಿ'

'ಈಗ ಹಾಗೆನ್ನಿಸುತ್ತೆ ಉಷಾ, ನೀನು ಬೆಳೆದಿರುವ ರೀತಿ ಅವನು ಬೆಳೆದಿರುವುದಕ್ಕಿಂತ ಸಂಪೂರ್ಣ ಭಿನ್ನ. ಆ ವಿಭಿನ್ನ ಅಭಿರುಚಿಗಳು ಜೀವನದಲ್ಲಿ ಹೆಜ್ಜೆ-ಹೆಜ್ಜೆಗೂ ತೊಡಕಾಗಬಹುದು. ಈಗಲೇ ಯೋಚಿಸು. ನಂತರ ಪಶ್ಚಾತ್ತಾಪ ಪಡುವುದು ಬೇಡ'

'ಇಲ್ಲಾ ಅಪ್ಪಾಜಿ, ನಾನೆಲ್ಲಾ ಯೋಚಿಸಿಯೇ ನಿರ್ಧಾರಕ್ಕೆ ಬಂದಿದ್ದೇನೆ. ನೀವೆಂದೂ ಪಶ್ಚಾತ್ತಾಪ ಪಡಬೇಕಾಗುವುದಿಲ್ಲ. ನಿಮಗೆಂದಿಗೂ ನೋವಾಗುವುದಿಲ್ಲ. ಬೇಕಾದರೆ ನೋಡಿ' ಎಂದು ದೈನ್ಯದಿಂದ ಬೇಡಿದಾಗ ಮಗಳ ಮನಸ್ಸು ನೋಯಿಸುವುದಾಗಲಿಲ್ಲ ತಂದೆಗೆ.

'ನಿನಗಾಗಿ ನಾನೇನು ಬೇಕಾದರೂ ಮಾಡಬಲ್ಲೆ ಮಗು. ನಿನಗೆ ಅಷ್ಟು ಇಷ್ಟವಿದ್ದರೆ ನಾನು ಅಡ್ಡಿ ಬರುವುದಿಲ್ಲ. ಆದರೆ ನಿರ್ಣಯಕ್ಕೆ ಬರುವ ಮೊದಲು ನಿನಗೆ ಯೋಚಿಸಲು ಮತ್ತೊಂದು ಅವಕಾಶ ಕೊಡುತ್ತೇನೆ. ಹೇಗೂ ಇನ್ನೆರಡು ವರ್ಷ ನಿನ್ನ ಎಂ.ಎ. ಮುಗಿಯುವ ತನಕ ಮದುವೆ ಮಾಡುವಂತಿಲ್ಲ. ಅಲ್ಲಿಯವರೆಗೆ ನೋಡೋಣ. .ಈ ಎರಡು ವರ್ಷಗಳಲ್ಲಿ ನಿನಗೆ ಅವನ ಸ್ವಭಾವದ ಸಂಪೂರ್ಣ ಪರಿಚಯವಾಗಬಹುದು. ಆಗ ನಿನಗೇ ಎಲ್ಲ ವಿಚಾರಗಳು ಅನುಭವಕ್ಕೆ ಬರುತ್ತವೆ. ನಂತರವೂ ನೀನು ಇವನನ್ನೇ ಮಾಡಿಕೊಳ್ಳಬೇಕೆಂದರೆ ನಾನೇನು ಬೇಡವೆನ್ನುವುದಿಲ್ಲ.'

ತಂದೆಯಿಂದ ಇಷ್ಟು ಒಪ್ಪಿಗೆ ಸಿಕ್ಕುದೇ ಸಾಕಾಯ್ತು ಉಷೆಗೆ. ಅವನೊಡನೆ ವಿಶ್ವಾಸ ಹೆಚ್ಚಿತು. ಸುಧಾರಿಸಿದ ಅವಳ ತಂದೆ-ತಾಯ್ಗಳು ಆನಂದ ಮನೆಗೆ ಬರುವುದಕ್ಕಾಗಲೀ ಅವರಿಬ್ಬರೂ ಅಡ್ಡಾಡಲು ಹೋಗುವುದಕ್ಕಾಗಲೀ ವಿರೋಧಿಸಲಿಲ್ಲ. ಅದಕ್ಕೇ ಕಾರಣ, ಮಗಳು ಎಂದಿಗೂ ಮಿತಿಯನ್ನು ಮೀರುವವಳಲ್ಲ ಎಂಬ ನಂಬಿಕೆ, ಅಷ್ಟು ವರ್ಷ ಬೆಳೆಸಿದ ಅವರಿಗೆ ಇತ್ತು.

ದಿನ-ದಿನಕ್ಕೆ ಅವರ ಪ್ರೇಮ ಗಾಢವಾಯ್ತೇ ವಿನಃ, ತಂದೆ ಭಾವಿಸಿದಂತೆ ವಿರಸ ಬರಲಿಲ್ಲ. ತಾಯಿ ಬಗೆ ಬಗೆಯ ಊಟ-ತಿಂಡಿ ಮಾಡಿ ಒಮ್ಮೊಮ್ಮೆ ಆನಂದನನ್ನೂ ಅವರ ಮನೆಯಲ್ಲಿಯೇ ಊಟಕ್ಕೆ ಇರಿಸಿಕೊಳ್ಳುತ್ತಿದ್ದರು. ಇಬ್ಬರೂ ಕೂಡಿಯೇ ವಾಕಿಂಗ್ ಹೋಗುವರು ;.ಸಿನಿಮಾಕ್ಕೆ ಹೋಗುವರು ; ಕಾಲೇಜಿನಲ್ಲೂ ತಮ್ಮ ರೂಮಿನಲ್ಲಿ ಕುಳಿತು ಗಂಟೆಗಟ್ಟಲೇ ಮನಶ್ಶಾಸ್ತ್ರದ ಬಗ್ಗೆ ಚರ್ಚಿಸುವರು. ಕಾಲೇಜಿನಲ್ಲಿ ಅಲ್ಪಸ್ವಲ್ಪ ವಿಷಯಗಳಿಗೇ ಹುಡುಗಿಯರನ್ನು ಕಾಡಿಸುವ ಚಟವಿದ್ದ ಹುಡುಗರೂ ಸಹ ಇವರ ಬಗ್ಗೆ ಟೀಕೆ ಮಾಡುತ್ತಿರಲಿಲ್ಲ. ಉಷೆಯ ನಡೆ ಎಂದರೆ

ಎಲ್ಲರಿಗೂ ಅಂತಹ ಒಂದು ಗೌರವ. ಅವರನ್ನು ಗಂಡ–ಹೆಂಡರಂತೆ ನೋಡುತ್ತಿದ್ದರೇ ವಿನಃ ಉಳಿದ ಪ್ರೇಮಿಗಳನ್ನು ಕಂಡಂತೆ ಕೀಟಲೆಯ ದೃಷ್ಟಿಯಿಂದ ನೋಡುತ್ತಿರಲಿಲ್ಲ.

ಎಂದೂ ತಾನು ಆಕರ್ಷಕಳಾಗಿ ಕಾಣಬೇಕೆಂದು ಪ್ರಯತ್ನಿಸದಿದ್ದ ಉಷಾ ಈಗೀಗ ಉಡುಗೆ–ತೊಡುಗೆಯ ಬಗ್ಗೆ ಹೆಚ್ಚು ಗಮನ ಕೊಡತೊಡಗಿದಳು. ಆನಂದನಿಗೆ ಆಕೆಯ ಸೌಂದರ್ಯದ ಬಗ್ಗೆ ಎಂದೂ ಕೊರತೆ ಎನ್ನಿಸದಿದ್ದರೂ ಈಕೆಗೆ ಮಾತ್ರ ಬೇರೆ ಚೆನ್ನಾದ ಹುಡುಗಿಯರನ್ನು ಕಂಡಾಗ ಆನಂದನಿಗೆ ತಾನು ಚೆನ್ನಾಗಿ ಕಾಣಿಸುತ್ತೇನೆಯೋ ಇಲ್ಲವೋ ಎಂದು ಹೆಚ್ಚಿನ ಆಸ್ಥೆಯಿಂದ ಅಲಂಕರಿಸಿಕೊಳ್ಳತೊಡಗಿದಳು. ಅವನೆಂದಾದರೂ 'ನೀನಿಂದು ತುಂಬಾ ಚೆನ್ನಾಗಿ ಕಾಣಿಸುತ್ತೀ' ಎಂದರೆ ಸಾಕು ಅವಳಿಗೆ ಸ್ವರ್ಗ ಮೂರೇ ಗೇಣು ಎನ್ನಿಸುತ್ತಿತ್ತು. ಒಮ್ಮೊಮ್ಮೆ ಅವನು ಸಹಜವಾಗಿ ಬೇರೆ ಹುಡುಗಿಯರನ್ನು ಕುರಿತು ಆಕೆಯ ಬಣ್ಣ ಚೆಂದವೆಂದೋ, ನಡಿಗೆ ಅಂದವೆಂದೋ, ಕಣ್ಣು ಆಕರ್ಷಕವೆಂದೋ ಹೇಳಿದರೆ ಈಕೆಗೆ ಮನಸ್ಸು ಕುದಿಯುತ್ತಿತ್ತು. ಅತಂಹ ಹುಡುಗಿಯರ ಬಗ್ಗೆ ಅಸಹನೆಯೂ ಉಂಟಾಗುತ್ತಿತ್ತು.

ಒಮ್ಮೆ ಇಬ್ಬರೂ ಕಾಲೇಜಿನ ಕ್ಯಾಂಪಸ್‌ನ ಲಾನ್ ಮೇಲೆ ಹರಟುತ್ತಾ ಕುಳಿತಿದ್ದರು. ಆಗ ನಿಷಾ ಕಾಲೇಜಿಗೆ ಅವರ ಮುಂದೆಯೇ ಹಾದುಹೋದಳು. ಆಗ ಆನಂದ,

'ನೋಡು ಉಷಾ, ನಿಷಾಗೆ ಈ ಹಸಿರು ಬಣ್ಣದ ಸೀರೆ ತುಂಬಾ ಒಪ್ಪುತ್ತೆ ಅಲ್ವೆ? ಮೊದಲೇ ಅವಳು ಚೆಂದ. ಈ ಸೀರೆ ಉಟ್ಟಾಗ ಇನ್ನೂ ಚೆನ್ನಾಗಿ ಕಾಣಿಸುತ್ತಾಳೆ'

ನಿಷಾಗೂ ಈ ಮಾತು ಸ್ವಲ್ಪ ಕೇಳಿಸಿತೋ ಏನೋ ಹಿಂತಿರುಗಿ ಆನಂದನ ಕಡೆಗೆ ತನ್ನ ನಗುವಿನ ನೋಟ ಬೀರಿ ಮುಂದೆ ಹೋದಳು. ಆನಂದನೂ ನಗುವಿನ ಉತ್ತರವಿತ್ತ.

ಈ ಘಟನೆ, ಉಷೆಯ ಹೆಣ್ಣಿನ ಸ್ವಭಾವವನ್ನು ಎಚ್ಚರಿಸಿತು. ಸ್ತ್ರೀ ಗಂಡನಿಗಾಗಿ ಯಾವ ತ್ಯಾಗಕ್ಕೂ ಸಿದ್ಧ. ಯಾವ ಕಷ್ಟವನ್ನಾದರೂ ಗಂಡನೊಡನೆ ಒಂದಾಗಿ ಸಹಿಸಿಯಾಳು. ಆದರೆ ಅವನು ಮತ್ತೊಬ್ಬ ಸ್ತ್ರಿಯನ್ನು ಮೆಚ್ಚುವುದನ್ನು ಮಾತ್ರ ಆಕೆ ಸಹಿಸಲು.

ಉಷೆಗೆ ಆನಂದನ ಬಗ್ಗೆ ಅಸಮಾಧಾನ ಮೂಡಿತು. ನಿಷೆಯ ಬಗ್ಗೆ ದ್ವೇಷ ಮೊಳೆಯಿತು. ಅದನ್ನು ಪುಷ್ಟೀಕರಿಸುವಂತೆ ಒಂದು ದಿನ ಉಷೆ ಕಾಲೇಜಿಗೆ ಹೋದಾಗ ನಿಷೆ ಆನಂದನೊಡನೆ ಮಾತನಾಡುತ್ತಾ ನಿಂತುದನ್ನು ನೋಡಿದಳು.

ಇದು ಬರುಬರುತ್ತಾ ಸಂಶಯಕ್ಕೆ ಎಡಮಾಡಿತು. ಒಂದು ದಿನ ಆಕೆಗೆ ಲೇಡೀಸ್ ರೂಂನಲ್ಲಿ ನಿಷಾ ಸಿಕ್ಕಾಗ,

'ನಿಷಾ, ಆನಂದ ನಿನಗೆ ಹಸಿರು ಸೀರೆ ತುಂಬಾ ಒಪ್ಪುತ್ತೆ' ಎಂದು ಹೇಳಿದ, ಎನ್ನುತ್ತಾ ಚಿಕಿತ್ಸಕ ದೃಷ್ಟಿಯಿಂದ ಅವಳನ್ನು ನೋಡಿದಳು. ಇವಳಿಗೂ ಅವನ ಮೇಲೆ ಪ್ರೇಮವಿದೆಯೇ ಎಂಬುದನ್ನು ಪರೀಕ್ಷಿಸಲು ಕೇಳಿದ ಪ್ರಶ್ನೆ ಇದು. ಇವಳು ಹೇಳಿದ ಮಾತಿನಿಂದ ನಿಷೆಗೆ ಮುಜುಗರವಾಯ್ತು. ಏನು ಹೇಳಬೇಕೋ ತೋಚಲೇ ಇಲ್ಲ. ಅಂ, ಹೂಂ ಎಂದು ಸಂಕೋಚದಿಂದ ತಡವರಿಸುತ್ತಾ ಸುಮ್ಮನಾದಳು. ಉಷೆಗೆ ತನ್ನ ಸಂಶೆಯ ನಿಜವೆನ್ನಿಸಿತು. ಅದಕ್ಕೆ ಪುಷ್ಟಿಕೊಟ್ಟಂತೆ ಆನಂದನ ಕ್ಲಾಸಿದ್ದಾಗಲೆಲ್ಲಾ ನಿಶೆ ಹಸಿರು ಸೀರೆಯನ್ನೇ ಉಟ್ಟುಕೊಂಡು ಬರಲಾರಂಭಿಸಿದಳು. ಉಳಿದವರು ಇದನ್ನು ಗಮನಿಸದಿದ್ದರೂ ಉಷೆಯ ಗಮನಕ್ಕೆ ಮಾತ್ರ ಇದು ಬರದೇ ಇರಲಿಲ್ಲ. ಇದರಿಂದ ಅವಳ ಮನಸ್ಸು ಹೊಟ್ಟೆಕಿಚ್ಚಿನಿಂದ ಕುದಿಯತೊಡಗಿತು. ಒಂದು ದಿನ 'ನೋಡು ಲತಾ ಆನಂದ ನಿಷೆಯನ್ನು ಪ್ರೀತಿಸುತ್ತಾನೆ. ಅದೂ ಸಹಜವೇ. ಆಕೆ ಆಕರ್ಷಕ ಹೆಣ್ಣು. ನನ್ನನ್ನಂತೂ ನಮ್ಮ ತಂದೆ ಗಂಡು ಮಗನಂತೆಯೇ ಬೆಳೆಸಿದ್ದಾರೆ. ಸ್ತ್ರೀ ಸಹಜವಾದ ಸೂಕ್ಷ್ಮತೆ, ಚಂಚಲತೆ, ವಯ್ಯಾರಗಳು ನನ್ನಲ್ಲಿ ಬೆಳೆದು ಬಂದಿಲ್ಲ. I am more like a boy rather than a girl in attitude ಅದಕ್ಕೆ ಅವನಿಗೆ ಅವಳನ್ನು ಕಂಡರೆ ಇಷ್ಟ.

'ಹಾಗೇಕೆನ್ನುತ್ತೀ ಉಷಾ. ಅವಳಿಗೆ ಹಸಿರು ಸೀರೆ ಒಪ್ಪುತ್ತೆ ಎಂದ ಮಾತ್ರಕ್ಕೆ ನೀನು ಹೀಗೆಲ್ಲಾ ಅಪಾರ್ಥ ಮಾಡಿಕೊಳ್ಳಬೇಕೆ? ಆಕೆ ಸಹ ಅಂತಹವಳಲ್ಲ ಬಿಡು. ನಿಮ್ಮಿಬ್ಬರ ಮಧ್ಯೆ ಅವಳೆಂದೂ ಬರುವುದಿಲ್ಲ.'

'ಹಾಗನ್ನಬೇಡ ಲತಾ, ಮೊನ್ನೆ ನಾನು ಬೇಕಂತಲೇ ಆನಂದ ಹೀಗೆಂದ ಎಂದು ಆಕೆ ಹತ್ರ ಹೇಳ್ದಾಗ ನೋಡಬೇಕಿತ್ತು ಅವಳನ್ನು? ಬ್ಲಷ್ ಆಗಿ ಮುಖವೆಲ್ಲಾ ಕೆಂಪಾಗಿ ಬಿಡ್ತು. ಮಾತಾಡಲಿಕ್ಕೂ ಆಗ್ಲಿಲ್ಲ ಅವ್ಳಿಗೆ.'

ಅಂದು ನಿಷೆ ಬಂದು ಉಷೆಯು ತನ್ನ ಬಗ್ಗೆ ಆನಂದನಾಡಿದ ಮಾತನ್ನು ಹೇಳಿದ ರೀತಿ ತನಗೆ ಒಂದು ಥರಾ ಆದುದು ತನಗೆ ಮಾತನಾಡಲು ತೋಚದಂತಾಗಿ ಉಗುಳು ನುಂಗಿದುದು ಎಲ್ಲವನ್ನೂ ಆ ದಿನ ಸಂಜೆಯೇ ಬಂದು ಹೇಳಿದುಧು ಲತೆಗೆ ನೆನಪಾಗಿ,

'ನೀನು ಮುಖದೆದುರು ಹಾಗೆಂದಾಗ ಅವಳಿಗೆ ಹಾಗಾಗಿರಬೇಕು. ಒಬ್ಬ ಯುವಕ ತನ್ನ ರೂಪದ ಬಗ್ಗೆ ತನ್ನ ಪ್ರೇಮಿಯೊಡನೇ ಹೇಳಿದುದನ್ನುಕೇಳಿ, ಆಕೆ ಬ್ಲಷ್ ಆಗಿರಬಹುದು. ಅದನ್ನೇ ನೀನು ತಪ್ಪಾಗಿ ಅರ್ಥಮಾಡಿಕೊಂಡಿದ್ದಿ.'

'ಇಲ್ಲಾ ಲತಾ, ಅಂದಿನಿಂದ ಅವಳು ಅವನ ಕ್ಲಾಸಿದ್ದಾಗಲೆಲ್ಲಾ ಹಸಿರು

ಸೀರೆಯನ್ನೇ ಉಟ್ಟುಕೊಂಡು ಬರುತ್ತಾಳೆ' ಎಂದು ದುಃಖದಿಂದ ಉಮ್ಮಳಿಸಿದಾಗ, ಲತೆಗೆ ಈಗ ತಾನು ಮಧ್ಯಪ್ರವೇಶ ಮಾಡಬೇಕು, ಇಲ್ಲದಿದ್ದರೆ ಉಷೆ-ನಿಷೆಯರ ಸ್ನೇಹಕ್ಕೆ ಚ್ಯುತಿ ಬರುವುದಲ್ಲದೇ ಆನಂದ ಉಷೆಯರಲ್ಲೂ ಸಮಸ್ಯೆ ಏಳಬಹುದೆನ್ನಿಸಿತು. ಏಕೆಂದರೆ ನಿಷೆಯ ಸ್ವಭಾವ ಲತೆಗೆ ಗೊತ್ತಿತ್ತು. ಹಸಿರು ಸೀರೆಯನ್ನೇ ಉಟ್ಟುಕೊಂಡು ಹೋಗುವುದು ಅವನನ್ನು ಪ್ರೇಮಿಸಲಿಕ್ಕಾಗಿಯಲ್ಲ. ಅವಳದೊಂದು ಸ್ವಭಾವ, ತಾನು ರೂಪವತಿ ಎಂದು ಆಕೆಗೂ ಅನ್ನಿಸಿತ್ತು. ಹಾಗಾಗಿ ತನ್ನನ್ನು ಎಲ್ಲರೂ ಮೆಚ್ಚಬೇಕು, ರೂಪವತಿ ಎನ್ನಬೇಕು ಎನ್ನುವುದೊಂದು ಗೀಳು ಅವಳಿಗೆ. ಅದಕ್ಕಾಗಿಯೇ ಅವನಿಗಿಷ್ಟವಾದ ಸೀರೆ ಉಟ್ಟು ಹೋಗುತ್ತಿರಬೇಕು ಎಂದು ತರ್ಕಿಸಿದಳು. ಸುಮ್ಮನೇ ಅಪಾರ್ಥಕ್ಕೆ ಅವಕಾಶ ಕೊಡಬಾರದೆಂದು ನಿಷಾ ಸಿಕ್ಕಾಗ,

'ಅಲ್ವೇ ನಿಷಾ, ಆ ದಿನ ಸೀರೆಯ ಬಗ್ಗೆ ಆನಂದನ ಮಾತನ್ನು ಉಷೆ ಹೇಳಿದಾಗ ಬಯ್ದವಳು ಆನಂದನ ಕ್ಲಾಸಿದ್ದಾಗಲೆಲ್ಲಾ ಆ ಸೀರೆಯನ್ನೇ ಏಕೆ ಉಡುತ್ತೀ?' ಎಂದು ಟೀಕಿಸುವಂತೆ ಮಾತು ತೆಗೆದಳು.

ನಿಷೆಗೆ ಧ್ವನಿಯಲ್ಲೇ ಎಲ್ಲಾ ಅರ್ಥವಾಗಿ ಸಿಟ್ಟೇ ಬಂದು ಬಿಟ್ಟಿತು. ಆಗ ಆ 'ಕರೀ ಮುಸುಡೀನ ಯಾರು ಲೈಕ್ ಮಾಡ್ತಾರ್ಯೇ, ಅದೊಂದು ಬೆಪ್ಪುತಕ್ಕಡೀಗಂತೂ ಬುದ್ಧಿ ಇಲ್ಲಾಂದ್ರೆ ನನ್ಗೂ ಇಲ್ವಾ' ಎಂದು ತಾತ್ಸಾರದಿಂದ ನುಡಿದಳು. ಅಂತೂ ಅಂದಿನಿಂದ ಹಸಿರು ಸೀರೆ ಉಡುವುದನ್ನೇ ಬಿಟ್ಟಳು ನಿಷಾ.

ಆದರೂ ಇವರೀರ್ವರ ವಿರಸ ಕಡಿಮೆಯಾಗಲಿಲ್ಲ. ಅವನ ಶೀವಿ ಇಲ್ಲದ ನಡೆ-ನುಡಿಗಳು ಕಡಿಮೆ ಮಟ್ಟದ ಅಭಿರುಚಿಗಳು, High Manners ಇಲ್ಲದಿರುವಿಕೆ ಯಾವುವೂ ಇವಳಿಗೆ ಇದುವರೆಗೆ ಬೇಸರ ತರುತ್ತಿರಲಿಲ್ಲ. ಅವನ ಮೇಲೆ ಬೇಸರ ಶುರುವಾದ ಮೇಲೆ ಎಲ್ಲವನ್ನೂ ವಿಮರ್ಶಾತ್ಮಕವಾಗಿ ನೋಡತೊಡಗಿದಳು. ಊಟ, ಉಡಿಗೆ, ಮಾತು-ಕತೆ ಎಲ್ಲವುಗಳಲ್ಲೂ ತನಗೂ-ಅವನಿಗೂ ಎಷ್ಟು ಅಂತರವಿದೆ ಎನ್ನಿಸತೊಡಗಿತು. ಅವನು ಏನೇ ಮಾಡಲಿ, ಏನೇ ಹೇಳಲಿ ಸಿಡಿಮಿಡಿಗೊಳ್ಳುತ್ತಿದ್ದಳು. ಬರುಬರುತ್ತಾ ಅವನ ಬಗ್ಗೆ ಬಹು ಉದಾಸೀನ ತೋರತೊಡಗಿದಳು. ಇದರಿಂದ ಆನಂದನಿಗೂ ಬಹಳ ಅಸಮಾಧಾನವಾಯ್ತು. ಅವನು ಆಕೆಯನ್ನು ಕಾಣಲು ಕಾತರಿಸಿ ಬಂದರೆ ಇವಳಿಗೆ ಅವನೊಡನೆ ಮಾತನಾಡಲು ಆಗದಷ್ಟು ಬೇರೇನೋ ಕೆಲಸ. ಆಗ ಅವನಿಗೆ ಬೇಸರವಾದರೂ ಸಿಟ್ಟನ್ನಾಗಲೀ ಅಸಮಾಧಾನವನ್ನಾಗಲೀ ತೋರಿಸುವ ಧೈರ್ಯ ಸಾಲದೇ ಸಂಕೋಚದಿಂದ ಮುದುಡಿ ಸುಮ್ಮನೇ ಹೋದರೆ, ಈಕೆಗೆ ಇನ್ನೂ ತಾತ್ಸಾರ. ಹೀಗೆ ಸಾವಕಾಶವಾಗಿ ಇಬ್ಬರೂ ಒಬ್ಬರಿಂದ ಒಬ್ಬರು ದೂರ ಸರಿಯತೊಡಗಿದರು.

ಈಕೆ ಏಕೆ ಹೀಗಾಗುತ್ತಿದ್ದಾಳೆ ಎಂಬುದೇ ಆನಂದನಿಗೊಂದು ಒಗಟಾಗಿತ್ತು. ಒಮ್ಮೆ ಆಕೆಯ ಹುಟ್ಟುಹಬ್ಬ ಬಂದಿತು. ಒಂದು ಚೆನ್ನಾದ ಸೀರೆಯನ್ನು ತಂದು ಈ ಸಂದರ್ಭದಲ್ಲಿ ಆಕೆಯ ಮನವೊಲಿಸಬೇಕೆಂದುಕೊಂಡು ಅಂಗಡಿಗೆ ಹೋದ. ಮೈಸೂರು ಸಿಲ್ಕಿನ ಹಸಿರು ಸೀರೆಯೊಂದು ತುಂಬಾ ಅಂದವಾಗಿ ಕಾಣಿಸಿತು. ಪ್ಯಾಕ್ ಮಾಡಿಸಿಕೊಂಡು ಉಷೆಯ ಮನೆಗೆ ಹೋದ.

'ಉಷಾ ನಿನಗಾಗಿ ಒಂದು ಗಿಫ್ಟ್ ತಂದಿದ್ದೇನೆ. ಏನು ಹೇಳು?'

'ನನಗೆ ಹೇಗೆ ಗೊತ್ತು ನೀವೇ ಹೇಳಿ. ಪ್ಯಾಕ್ ನೋಡಿದರೆ ಸೀರೆ ಎನ್ನಿಸುತ್ತೆ'

'Correct ಯಾವ Colour ದಿರಬಹುದು ಹೇಳು ನೋಡೋಣ'.

'ಹಸಿರು'.

Correct ನಿನಗೆ ಹೇಗ್ಗೊತ್ತು ನನಗೆ ಅದೇ ಬಣ್ಣ ಇಷ್ಟಾಂತ? ಎಂದು ಪ್ರಶ್ನಿಸಿದ. ಅವನಿಗಾಗಲೇ ತಾನು ನಿಷೆಯ ಹಸಿರು ಸೀರೆಯ ಬಗ್ಗೆ ಹೇಳಿದ್ದು ಮರತೇ ಹೋಗಿತ್ತು. ಸಹಜವಾಗಿ ಹೇಳಿದ್ದ ಮಾತದು.

ಆದರೆ ಇದರಿಂದ ಉಷೆಯ ಸಿಟ್ಟು ನೆತ್ತಿಗೇರಿತ್ತು.

'ನನಗೆ ಈ ಕಲರ್ ಇಷ್ಟವಿಲ್ಲ. ನಿನಗೆ ಬೇಕಾದವರಿಗೆ ಕೊಡು' ಎಂದು ಹೇಳಿದವಳೇ ಸೀರೆಯ ಪ್ಯಾಕನ್ನು ಅವನ ಕಡೆಗೆ ಎಸೆದು ಒಳಗೆ ಹೋದಳು. ಆನಂದನಿಗೆ ಅವಳ ನಡತೆ ಅರ್ಥವಾಗದೇ ತಬ್ಬಿಬ್ಬಾಗಿ ಕೆಲವು ಸಮಯದ ತನಕ ಕಾದು, ಮನೆಯ ಕಡೆಗೆ ಕಾಲೆಳೆದುಕೊಂಡು ಹೋದ.

ಸಂಜೆಯಾಯ್ತು, ಉಷೆಯ ತಂದೆ ಮಗಳ ಹುಟ್ಟಿದ ಹಬ್ಬಕ್ಕಾಗಿ ಬೆಲೆಬಾಳುವ ಒಡವೆ-ವಸ್ತ್ರ ತೆಗೆದುಕೊಂಡು ಊರಿಂದ ಬಂದು 'ಉಷಾ ನೋಡು ಈ ಕೆಂಪಿನ ಸೆಟ್ಟನ್ನು. ಇದನ್ನು ನೋಡಿದ ಕೂಡಲೇ ನಿನಗಾಗಿ ಕೊಳ್ಳಲೇಬೇಕೆನ್ನಿಸಿತು. ಹೇಗಿದ್ದರೂ ಈ ವರ್ಷ ನಿನ್ನ ಎಂ.ಎ. ಮುಗಿಯುತ್ತೆ ಪರೀಕ್ಷೆ ಮುಗಿದಕೂಡಲೇ ಮದುವೆ. ಮದುವೆಗೂ ಆಗುತ್ತದೆಯೆಂದು ಈಗಲೇ ಕೊಂಡುಬಿಟ್ಟೆ ಇದನ್ನು.

'ಇಲ್ಲಾ ಅಪ್ಪಾಜಿ, ನೀವು ಹೇಳಿದ ಮಾತು ಸರಿ. ನಾನು ಆನಂದನನ್ನು ಮದುವೆ ಆಗೋಲ್ಲ. ಸದ್ಯ ಮದುವೆ ಚಿಂತೆ ಬಿಡಿ' ಎಂದಳು.

■

## ೬. ಗಂಡು ಮಗುವೇ ಬೇಕು

ಗೋಪಾಲಯ್ಯನು ಆಫೀಸಿನಿಂದ ಮನೆಗೆ ಬಂದೊಡನೆಯೇ ಬಹಳ ಸ್ನೇಹದಿಂದ ಸರಳಾ ಅವನ ಉಪಚಾರ ಪ್ರಾರಂಭಿಸಿದುದನ್ನು ನೋಡಿ 'ಇಂದೇನೋ ವಿಶೇಷವಿದೆ' ಎನ್ನಿಸಿತಾದರೂ ವಿಷಯ ಅವಳಿಂದಲೇ ಬರಲಿ ಎಂದುಕೊಂಡು ಸುಮ್ಮನಿದ್ದ. ತಿಂಡಿ-ಕಾಫಿ ಮುಗಿದ ಮೇಲೆ ಮೆಲುದನಿಯಿಂದ.

'ಮತ್ತೆ ಆ ವಿಷಯದಲ್ಲಿ ಯಾವ ನಿರ್ಧಾರಕ್ಕೆ ಬಂದಿರಿ' ಎಂದಳು ಸರಳೆ.

'ಯಾವ ವಿಷಯ?'

'ಮತ್ತ್ಯಾವುದು, ಕುಶಲಳನ್ನು ಅವಿನಾಶ್‌ಗೆ ಕೊಡುವ ವಿಚಾರ.'

'ತಾಯಿಯಾದ ನೀನೇ ಮಗಳ ಬಗ್ಗೆ ವಕಾಲತ್ತು ವಹಿಸುತ್ತೀಯಲ್ಲ. ಚಿಕ್ಕವಯಸ್ಸು, ಯಾವುದೋ ಮೋಹಕ್ಕೆ ಒಳಗಾಗಿ ಏನೇನೋ ಕನಸು ಕಾಣುತ್ತಾರೆ. ಹಿರಿಯರಾದ ನಾವು ಪೂರ್ವಾಪರ ಯೋಚಿಸಿ ಮಕ್ಕಳಿಗೆ ಸರಿಯಾದ ತಿಳಿವಳಿಕೆ ಕೊಡಬೇಕಲ್ಲವೆ?'

'ಇಲ್ಲಾಂದವರು ಯಾರು? ಆದರೆ ಇಲ್ಲಿ ಕೆಟ್ಟದ್ದೇನಿದೆ? ಹುಡುಗ ಲಕ್ಷಣವಾಗಿದ್ದಾನೆ, ಒಳ್ಳೇ ಸುಸಂಸ್ಕೃತ ವ್ಯಕ್ತಿ, ಬುದ್ಧಿವಂತ, ವಿದ್ಯಾವಂತ, ಎಂ.ಟೆಕ್ ಆದ ಅವನಿಗೆ ಕರೆದು ಉದ್ಯೋಗ ಕೊಡುತ್ತಾರೆ. ಮತ್ತಿನ್ನೇನು ಬೇಕು? ಅವನು, ತಾನೇ ಕುಶಲಳನ್ನು ಮಾಡಿಕೊಳ್ಳಬೇಕೆಂದು ಇಚ್ಛೆಪಟ್ಟಿದ್ದಾನೆ. ನಾವೇ ಹುಡುಕಿಕೊಂಡು ಹೋದರೂ ಇಂತಹ ವರ ಸಿಗುವುದು ಕಷ್ಟ. ಆಕೆಗೂ ಅವನನ್ನು ಮಾಡಿಕೊಳ್ಳಬೇಕೆಂದು ತುಂಬಾ ಆಸೆ ಇದೆ. ಸರಿಯಿಲ್ಲದ ವರನನ್ನು ಅವಳು ಮಾಡಿಕೊಳ್ಳುತ್ತೇನೆಂದಿದ್ದರೆ ನಾವು ತುಂಬಾ ಯೋಚಿಸಬೇಕಾಗಿತ್ತು. ತಾನಾಗಿಯೇ ಹುಡುಕಿದರೂ ಸಿಕ್ಕದಂತಹ ಅಪರೂಪದ ವರ ಸಿಕ್ಕಿರುವಾಗ ಒಪ್ಪಿಗೆ ಕೊಡುವುದರಲ್ಲಿ ತಪ್ಪೇನಿದೆ?'

'ನೋಡು ಸರಳಾ, ನಮ್ಮ ಮತ್ತು ಅವನ ಜಾತಿಯಲ್ಲಿ ಅಷ್ಟೊಂದು ವ್ಯತ್ಯಾಸವಿಲ್ಲದಿದ್ದರೂ, ಅವರು ಉತ್ತರ ಭಾರತದವರು. ನಾವು ದಕ್ಷಿಣದವರು. ಅವರ ಸಂಸ್ಕೃತಿಗೂ ನಮ್ಮ ಸಂಸ್ಕೃತಿಗೂ ಅಜಗಜಾಂತರ. ಭಾಷೆ ಬೇರೆ, ಈಗೇನೋ

ಎಲ್ಲಾ ಚೆಂದ. ನಂತರ ಸಮಸ್ಯೆಗಳು ಪ್ರಾರಂಭವಾಗೋದು. ಆಗ ನಾವೇನು ಮಾಡಲೂ ಬರುವುದಿಲ್ಲ. ಮದುವೆಯೆಂದರೆ ಗೊಂಬೆಯಾಟವಲ್ಲ. ಈಗ ದುಡುಕಿದರೆ ಕಡೆಯತನಕ ಒದ್ದಾಡಬೇಕಾದೀತು' ಎಚ್ಚರಿಸಿದರು ಗೋಪಾಲಯ್ಯ.

'ಅವರು ಉತ್ತರ ಭಾರತದವರಾದರೇನು? ನಮ್ಮ ದೇಶದವರೇ ಅಲ್ಲವೆ? ಅವರೇನು ಪರದೇಶಧವರಲ್ಲವಲ್ಲ! ಒಂದು ಮಟ್ಟ ಮುಟ್ಟಿದ ಮೇಲೆ ಎಲ್ಲರ ಸಂಸ್ಕೃತಿಯೂ ಒಂದೆ. ಬೇರೆ ಬೇರೆ ಧರ್ಮದ ನರ್ಗಿಸ್-ಸುನೀಲ್‌ದತ್‌ರು ಅನ್ಯೋನ್ಯ ದಾಂಪತ್ಯ ಬಾಳಲಿಲ್ಲವೇ? ಬಂಧುಗಳಲ್ಲೇ ಬಾಂಧವ್ಯ ಬೆಳೆಸಿಕೊಂಡು ವಿವಾಹ ವಿಚ್ಛೇದನ ಮಾಡಿಕೊಂಡವರಿಲ್ಲವೆ? ಸುಖ ದಾಂಪತ್ಯಕ್ಕೆ ಒಬ್ಬರಿಗೊಬ್ಬರು ಹೊಂದಿಕೊಂಡು ಅರ್ಥ ಮಾಡಿಕೊಂಡು ಭಿನ್ನ-ಭೇದಗಳಿಗೆ ಅವಕಾಶ ಕೊಡದೇ, ಪ್ರೀತಿ-ವಿಶ್ವಾಸ ಬೆಳೆಯುವ ವಿಷಯಗಳಿಗೆ ಮಹತ್ವ ಕೊಡುವಂತಹ ಮನೋಭಾವ ಮುಖ್ಯ. ಈ ಮನೋಭಾವವಿದ್ದರೆ ಭಾಷೆ-ಜಾತಿ-ಸಂಸ್ಕೃತಿ ಯಾವುದೂ ಅಡ್ಡ ಬರುವುದಿಲ್ಲ.'

'ನೋಡು, ಚರ್ಚೆಯ ಸಲುವಾಗಿ ಏನು ಬೇಕಾದರೂ ವಾದ ಮಾಡಬಹುದು. ನೀನು ಹೇಳಿದುದೆಲ್ಲಾ ಸರಿ ಎಂದರೂ ಕೂಡ, ನಾವು ಯೋಚಿಸಬೇಕಾದ ಮತ್ತೊಂದು ವಿಷಯವಿದೆ. ಉತ್ತರ ಭಾರತದಲ್ಲಿ ವರದಕ್ಷಿಣೆಯ ಪಿಡುಗು ಇಲ್ಲಿಗಿಂತ ಹೆಚ್ಚು. ಎಷ್ಟು ಕೊಟ್ಟರೂ ಅವರ ದಾಹ ತೀರದು. ಪತ್ರಿಕೆಗಳಲ್ಲಿ, ಟಿ.ವಿ.ಗಳಲ್ಲಿ ದಿನವೂ ಈ ವರದಕ್ಷಿಣೆಯ ಹಾವಳಿ ನೋಡುತ್ತಿದ್ದೀವಲ್ಲ.'

'ನೀವು ಹೇಳುವ ಮಾತು ನಿಜವಾದರೂ, ಅವಿನಾಶ್ ಬಗ್ಗೆ ವರದಕ್ಷಿಣೆಯ ವಿಚಾರ ನಿಜವಲ್ಲ. ಅವನೊಬ್ಬ ಆದರ್ಶ ವ್ಯಕ್ತಿ. ವರದಕ್ಷಿಣೆಗೂ ಅವನಿಗೂ ಎಣ್ಣೆ-ಸೀಗೆಕಾಯಿ ಇದ್ದಂತೆ.'

'ಅಲ್ವೇ ಅವನೇನೋ ಹಾಗಿರಬಹುದು. ಅವರ ತಂದೆ-ತಾಯಿಗಳ ಮನಸ್ಸು ನಿನಗೇನು ಗೊತ್ತು? ಇವ್ನು ತನ್ನ ಉದ್ಯೋಗಕ್ಕೆ ಹೋಗ್ಬಿಡ್ತಾನೆ. ಮನೇಲಿ ಅತ್ತೆ ಆದವಳು ಕ್ಷಣಕ್ಷಣಕ್ಕೂ ಮೂದಲಿಸುತ್ತಾ ಇದ್ರೆ ಅಪ್ನಿಗೇನ್ಗೊತ್ತಾಗುತ್ತೆ? ನಾವಾದ್ರೂ ಮಗಳು ಸುಖವಾಗಿದ್ರೆ ಸಾಕೂಂತ ಅವ್ರು ಕೇಳಿ ಕೇಳಿದಂತೆ ಕೊಡೋ ಅಷ್ಟು ಶ್ರೀಮಂತರಿದ್ದೀವಾ? ಮುಂಗೈಲಿ ಬಿಟ್ಟು ಮೊಳಕ್ಕೆ ಹಿಡ್ಕೊಳ್ಳೋಕಾಗುತ್ತಾ? ಈಗಲೇ ವಿಚಾರ ಮಾಡ್ಬೇಕು. ಮುಂದೆ ಮದ್ವೆ ಆದ್ಮೇಲೆ ಏನೂ ಮಾಡೋಕಾಗ್ದೆ ಕೈ ಕೈ ಹಿಸುಕಿಕೊಳ್ಳಬೇಕಾಗುತ್ತೆ. ಆಗ ಪಶ್ಚಾತ್ತಾಪ ಪಟ್ರೂ ಸರಿಪಡ್ಸೋಕಾಗೋದಿಲ್ಲ.'

'ಏನೇನೋ ವಿಚಾರಾಪ್ಪ ನಿಮ್ದು. ಅಲ್ರಿ, ಅವರ ತಾಯಿ ಇವರ ಜೊತೇಲೇನು ಇರೋಲ್ಲಾರಿ. ಅವ್ರಿರೋದು ಒಂದು ಹಳ್ಳಿ. ಅಲ್ಲಿ ಹೊಲಾ-ಮನಿ ಎಲ್ಲಾ

ಇದ್ಯಂತೆ. ಅವ್ರು ತಮ್ಮ ಊರು ಬಿಟ್ಟು ಬರೋದಿಲ್ಲವಂತೆ. ಮನೇಲಿ ಇವ್ರೆ ಇಬ್ರು. ಯಾರ ಹಂಗೂ ಇಲ್ಲ. ಹುಡುಗನ್ಗೆ ಕೈ ತುಂಬಾ ಸಂಬ್ಳ ಬರುತ್ತೆ. ರಾಜ–ರಾಣಿ ಹಾಗೆ ಇರ್ತಾರೆ.'

'ಅಂತೂ ಮಗಳ ನೆಪದಲ್ಲಿ ಉತ್ತರ ಭಾರತದ ಸಂಬಂಧ ಮಾಡ್ಬೇಕೂಂತಿದ್ದೀ ಅನ್ನೂ. ಹೋಗ್ಲಿ ಅವಿನಾಶ ಅವರ ಅಪ್ಪ–ಅಮ್ಮನ ಒಪ್ಗೇನ ಕೇಳಿದ್ದಾನಂತಾ? ಇಲ್ದಿದ್ರೆ ಅದೊಂದು ರಾದ್ಧಾಂತ ಆಗ್ತಾಬರ್ದು. ಅವ್ರ ಒಪ್ಗೆ ಇಲ್ದೆ ಮಾಡಿದ್ರೆ, ನಾಳೆ ಹುಡುಗ, ಒಂದ್ಕಡೆ ತಾಯಿ–ತಂದೆ, ಒಂದ್ಕಡೆ ಹೆಂಡ್ತಿ, ಯಾರನ್ನೂ ಬಿಡಲಾರ್ದೆ ಒದ್ದಾಡುತ್ತಾ, ಸಂಸಾರ ಸಮಸ್ಯೆ ಆಗ್ಬಾರ್ದು.'

'ರೀ, ರೀ, ಏನ್ರೀ ಒಂದಾಲ್ಮೇಲೊಂದು ಸಮಸ್ಯೆಗಳ ಸರಮಾಲೇನೆ ಬಿಚ್ತೀರಲ್ಲ. ಅವ್ನು ತಂದೆ ತಾಯೀನ ಕೇಳಿದಾನಂತೆ 'ಭಾಷೆ ಬೇರೆಯಲ್ಲಪ್ಪಾ' ಎಂದ್ರಂತೆ 'ಪರ್ವಾಗಿಲ್ಲಮ್ಮ, ಹಿಂದೂ ತಾನೇ. ಬೇಗ ಕಲ್ತುಕೊಂಡು ಬಿಡ್ತಾಳೆ' ಎಂದಾಗ, 'ಏನೋಪ್ಪ ನಿನ್ನಿಷ್ಟ. ನೀನು ಸುಖವಾಗಿದ್ರೆ, ಸಾಕು' ಅಂದ್ರಂತೆ. ನೋಡ್ರಿ ಹಳ್ಳೀ ಜನಾ ಅದ್ರೂ ಎಷ್ಟು ವಿಶಾಲ ಭಾವನೆಯವರಿದ್ದಾರೆ. ನೀವು ಇಷ್ಟು ವಿದ್ಯಾವಂತರಾದ್ರೂ ಏನೇನೋ ಸಂಕುಚಿತವಾಗಿ ಯೋಚಿಸ್ತೀರಿ.'

'ತಾಯಿ–ಮಗಳು ಸೇರ್ಕೊಂಡು ತೀರ್ಮಾನಕ್ಕೆ ಬಂದ್ಬಿಟ್ಟಿದ್ದೀರ. ಈಗ ನಾನೇನು ಹೇಳಿದ್ರೂ ಅದು ನಿನ್ಗೆ ವಿಪರೀತವಾಗಿ ಕಾಣುತ್ತೆ. ಎಲ್ಲರಿಗೂ ಒಪ್ಪಿಗೆ ಆಗಿರೋವಾಗ ನಾನೊಬ್ಬ ಏಕೆ ಬೇಡಾಗ್ಲಿ' ಎಂದು ಪ್ರಶ್ನೆಯ ರೀತಿಯಲ್ಲೇ ಒಪ್ಪಿಗೆಯನ್ನಿತ್ತ ಗೋಪಾಲಯ್ಯ.

ಅವಿನಾಶ್‌ನ ಎಂ.ಟೆಕ್. ಪರೀಕ್ಷೆಯೂ ಮುಗಿಯಿತು. ಅಷ್ಟರಲ್ಲಿ ಕಲ್ಕತ್ತಾದ ಒಂದು ಫ್ಯಾಕ್ಟರಿಯಲ್ಲಿ ಒಳ್ಳೆಯ ನೌಕರಿಯೂ ದೊರೆಯಿತು. ಹಾಗಾಗಿ ಕುಶಲೆಯ ವಿವಾಹವನ್ನು ಸಾಕಷ್ಟು ಅದ್ದೂರಿಯಾಗಿ ಮಾಡಿ, ಗೋಪಾಲಯ್ಯ ಮತ್ತು ಸರಳೆ ಮಗಳನ್ನು ಗಂಡನ ಮನೆಗೂ ಕಳಿಸಿ ಬಂದರು. ಯಾವ ಸಮಸ್ಯೆಗಳು ಇಲ್ಲದೇ ಗಂಡ–ಹೆಂಡರಿಬ್ಬರೂ ಸುಂದರವಾಗಿ ಸಂಸಾರ ಮಾಡಿಕೊಂಡಿದ್ದರು. ಎರಡು ವರುಷ ಕಳೆಯುವಷ್ಟರಲ್ಲಿ ಒಂದು ಮಗುವಿಗೂ ಜನ್ಮ ಕೊಟ್ಟಳು ಕುಶಲೆ. ಮೊದಲನೆಯದು ಹೆಣ್ಣಾದಾಗ ತವರಿನವರು 'ಹೆಣ್ಣು ಹುಟ್ಟಿದ ಮನೆ ತಣ್ಣಗೆ, ಮೊದಲು ಹೆಣ್ಣಾದರೆ ಒಳ್ಳೆಯದು. ತಾಯಿಗೆ ಬೇಗ ನೆರವು ಸಿಕ್ಕುತ್ತದೆ. ಹೆಣ್ಣಿಗೆ ಕರುಳು ಬಹಳ. ಗಂಡು ಹುಡುಗರ ಹಾಗಲ್ಲ. ತಾಯಿ–ತಂದೆಗಳಿಗೆ ಕಷ್ಟ ಬಂದಾಗ ಮರುಗುತ್ತಾರೆ, ನೆರವಾಗುತ್ತಾರೆ' ಎಂದು ಹೇಳಿದರು. ಆದರೆ ಕುಶಲೆಗೆ ಮಾತ್ರ ಸಮಾಧಾನವಾಗಲಿಲ್ಲ. ಗಂಡ ವರದಕ್ಷಿಣೆ ಕೇಳುವವನಲ್ಲದಿದ್ದರೂ ಗಂಡು ಮಕ್ಕಳೇ ಬೇಕೆಂಬ ಮನಸ್ಸಿನವನೆಂದು ಅವಳಿಗೆ ಗೊತ್ತಿತ್ತು. ಅತ್ತೆಯಾದರೂ ಅಷ್ಟೆ

ತಾನು ಬಸುರಿಯಾಗಿದ್ದಾಗ ಅವರ ಊರಿಗೆ ಹೋಗಿದ್ದಾಗಲೂ ಆಕೆ ಕಲ್ಕತ್ತೆಗೆ ಬಂದಾಗಲೂ 'ಬಂಗಾರದಂತಹ ಗಂಡು ಮಗ ಹುಟ್ಟ'ಲೆಂದು ಹಾರೈಸುತ್ತಿದ್ದಳು. 'ನಮ್ಮ ಮನೆತನದಲ್ಲಿ ಗಂಡೇ ಹೆಚ್ಚು. ಎಲ್ಲರಿಗೂ ಚೊಚ್ಚಲು ಗಂಡೇ ಹುಟ್ಟಿದೆ. ನಿನಗೂ ಗಂಡೇ ಆಗಬೇಕು' ಎನ್ನುತ್ತಿದ್ದಳು. ಗಂಡನಾದರೂ ಅಷ್ಟೆ, ಹುಟ್ಟುವ ಮಗುವಿಗೆ ಹೆಸರೇನಿಡಬೇಕೆಂದು ತಾವಿಬ್ಬರೂ ಮಾತನಾಡಿಕೊಳ್ಳುತ್ತಿದ್ದಾಗ, ಬರೀ ಗಂಡು ಮಕ್ಕಳ ಹೆಸರನ್ನೇ ಸೂಚಿಸುತ್ತಿದ್ದ. 'ಹೆಣ್ಣು ಮಗುವಿನ ಹೆಸರನ್ನು ಹೇಳಿ. ಹೆಣ್ಣು ಮಗು ಹುಟ್ಟಿದರೆ" ಎಂಬುದಕ್ಕೆ 'ಹೆಣ್ಣು ಬೇಡ, ನಮಗೆ ಗಂಡೇ ಹುಟ್ಟುವುದು' ಎನ್ನುತ್ತಿದ್ದ. ಈಗ ಹೆಣ್ಣಾದುದನ್ನು ಕೇಳಿ ಅವರಿಗೆಲ್ಲಾ ನಿರಾಸೆಯಾಗುತ್ತದೆಂದು ಹೆದರಿದಳು ಕುಶಲೆ. ಆಕೆಗೆ ಗಂಡಾದರೂ ಅಷ್ಟೇ. ಹೆಣ್ಣಾದರೂ ಅಷ್ಟೆ ಎಂಬ ಭಾವನೆ ಇದ್ದರೂ, ಗಂಡನ ಮತ್ತು ಅವನ ಮನೆಯವರ ಭಾವನೆಗಳಿಂದಾಗಿ ಸುಂದರವಾದ ತನ್ನ ಮಗುವನ್ನು ನೋಡಿಯೂ ಆಕೆಗೆ ವಿಶೇಷ ಸಂತಸವಾಗಲಿಲ್ಲ.

ಹೆಣ್ಣು ಹುಟ್ಟಿದ ಸುದ್ದಿ ಮತ್ತು ಹೆಸರಿಡುವ ದಿನದ ಸುದ್ದಿಗಳು ಗಂಡನ ಮನೆಯವರಿಗೆ ಮುಟ್ಟಿದವು. ಎಲ್ಲರಿಗೂ ಬೇಸರವಾಯ್ತು. ಆದರೂ 'ಇಲ್ಲಿಗೇನೂ ಮುಗಿಯಲಿಲ್ಲವಲ್ಲ ಮುಂದಿನದು ಗಂಡಾದರಾಯ್ತು' ಎಂದುಕೊಂಡು ನಾಮಕರಣಕ್ಕೆ ಬಂದರು. ಬಹಳ ಸಂತೋಷಗೊಳ್ಳದಿದ್ದರೂ ಅಸಮಾಧಾನವನ್ನೇನೂ ಸೂಚಿಸಲಿಲ್ಲ. ಕುಶಲಳಿಗೆಷ್ಟೋ ಸಮಾಧಾನವಾಯ್ತು. ಬಾಣಂತನ ಮುಗಿಸಿಕೊಂಡು ಗಂಡನಿಗೆ ತೊಂದರೆಯಾದೀತೆಂದು ಮೂರನೆಯ ತಿಂಗಳಿಗೇ ಕಲ್ಕತ್ತೆಗೆ ಹೋದಳು. ಅವಳ ನೆರೆಯಲ್ಲಿ ಉತ್ತರ ಭಾರತದವರ ಕುಟುಂಬ ಒಂದಿತ್ತು. ಅವರು ಅನೇಕ ವರ್ಷಗಳು ನೌಕರಿಗಾಗಿ ಬೆಂಗಳೂರಿನಲ್ಲೂ ಇದ್ದು ಬಂದವರು. ಹಾಗಾಗಿ ಅವರಿಗೆ ಹಿಂದಿಯ ಜೊತೆಗೆ ಕನ್ನಡವೂ ಬರುತ್ತಿತ್ತು. ಅವರ ನೆರವಿನಿಂದ ಕುಶಲೆಯೂ ಹಿಂದಿ ಕಲಿತಿದ್ದಳು. ಮಗುವನ್ನು ಸಾಕುವಾಗ ಸಂಸಾರದ ಅನೇಕ ವಿಷಯಗಳಲ್ಲಿ ಆಕೆಗೆ ನೆರೆಮನೆಯವರು ನೆರವಾಗುತ್ತಿದ್ದರು. ತಾಯಿ ದೂರವಿರುವ ಕೊರತೆಯನ್ನು ಶೋಭಾದೇವಿ ಬಹಳಷ್ಟು ಮಟ್ಟಿಗೆ ತುಂಬಿಕೊಟ್ಟಿದ್ದರು. ಅತ್ತೆ-ಮಾವ ಮಗುವನ್ನು ನೋಡಿಕೊಂಡು ಹೋಗಲು ಅನೇಕ ಸಾರಿ ಬಂದು ಹೋದರೂ ಪ್ರತಿ ಮಾತಿನಲ್ಲೂ ಒಂದಲ್ಲ ಒಂದು ವಿಧದಲ್ಲಿ 'ಗಂಡು ಮಗು ಹುಟ್ಟಲಿಲ್ಲ' ಎಂಬ ತಮ್ಮ ಅತೃಪ್ತಿಯನ್ನು ವ್ಯಕ್ತಪಡಿಸುತ್ತಿದ್ದರು. ಕೊಂಕು ನುಡಿಯಿಂದ ಅವಳನ್ನು ಚುಚ್ಚುತ್ತಿದ್ದರು. ಅವಿನಾಶನ ಎದುರಿಗೇ ಅಂದರೂ ಅವನೂ ಏನೂ ತಿಳಿದುಕೊಳ್ಳುತ್ತಿರಲಿಲ್ಲ. ಏಕೆಂದರೆ ಅವರಾಡುವ ಮಾತುಗಳಲ್ಲಿ ಅವನ ಭಾವನೆಯೂ ಅಡಗಿತ್ತು. ಈ ಸನ್ನಿವೇಷಗಳಲ್ಲಿ ಕುಶಲೆ ಒಳಗೊಳಗೇ ನೊಂದುಕೊಳ್ಳುತ್ತಿದ್ದಳು. 'ಇದಕ್ಕೆ ನಾನೇನು ಹೊಣೆ, ನನ್ನ ಕೈಲಿದಿದ್ದರೆ ನಾನು ಗಂಡು ಮಗುವನ್ನೇ ಹೆರುತ್ತಿದ್ದೆ' ಎನ್ನಬೇಕೆಂದು ಮಾತು ತುಟಿಯುವರೆಗೂ ಬಂದರೂ ಅದರಿಂದ ಅವರುಗಳು ಸರಿಯಾಗಿ

ಅರ್ಥಮಾಡಿಕೊಳ್ಳುವ ಬದಲು ಮನೆಯಲ್ಲಿ ವಿರಸದ ಪರಿಸರಕ್ಕೆ ಅವಕಾಶವಾದೀತೆಂದು ತುಟಿ ಬಿಚ್ಚಿರಲಿಲ್ಲ. ತನಗೆ ಬೇಗ ಗಂಡು ಮಗು ಹುಟ್ಟಿದರೆ ಇದನ್ನೆಲ್ಲಾ ಮರೆತು ಎಲ್ಲರಿಗೂ ಸಂತೋಷವಾಗುತ್ತದೆ ಎಂದುಕೊಂಡು ಆ ದಿನಕ್ಕಾಗಿ ಕಾಯುತ್ತಿದ್ದಳು. ಅದಕ್ಕೆ ಸರಿಯಾಗಿ ಮಗುವಿಗೆ ವರ್ಷ ತುಂಬುತ್ತಿದ್ದಂತೆಯೇ ಕುಶಲೆ ಪುನಃ ಗರ್ಭಿಣಿಯಾದಳು. ಆಗ ಎಲ್ಲರೂ ಸಂದರ್ಭ ಸಿಕ್ಕಾಗಲೆಲ್ಲಾ 'ಈ ಸಾರಿ ಗಂಡು ಮಗನನ್ನೇ ಎತ್ತಿಕೊಂಡು ಬರಬೇಕು' ಎನ್ನುತ್ತಿದ್ದರು. 'ಎಲ್ಲಿ ಹೆಣ್ಣಾದೀತೋ' ಎಂಬ ಆತಂಕದಲ್ಲಿಯೇ ದಿನಗಳುರುಳುತ್ತಿದ್ದವು. ತನ್ನ ಛಡಪಡಿಕೆಯನ್ನು ಗಂಡನೊಂದಿಗೂ ತೋಡಿಕೊಳ್ಳುವಂತಿರಲಿಲ್ಲ. ಹಾಗಾಗಿ ತಾಯಿಯಂತೆ ತನ್ನನ್ನು ಪ್ರೀತಿಸುತ್ತಿದ್ದ ನೆರೆಮನೆಯ ಶೋಭಾದೇವಿಯೊಡನೆ ತನ್ನ ಆತಂಕವನ್ನು ಹೇಳಿಕೊಂಡು ಮನಸ್ಸು ಹಗುರ ಮಾಡಿಕೊಳ್ಳುತ್ತಿದ್ದಳು.

ದಿನಗಳು ಗತಿಸಿದವು. ತಿಂಗಳುಗಳುರುಳಿದವು. ಹೆರಿಗೆಯ ದಿನ ಸಮೀಪ ಸಮೀಪ ಬರಹತ್ತಿತ್ತು. ಮನಸ್ಸು ಆತಂಕಗೊಂಡಿರುತ್ತಿದ್ದುದರಿಂದ ಏನಾದರೊಂದು ಸಣ್ಣಪುಟ್ಟ ತೊಂದರೆಗಳಿದ್ದೇ ಇರುತ್ತಿದ್ದವು. ಅನುಭವಿಯಾದ ಶೋಭಾದೇವಿ, ಹುಡುಗಿ ಅಲಕ್ಷ್ಯಮಾಡಿಕೊಳ್ಳಲು ಅವಕಾಶ ಕೊಡದೇ ಹತ್ತಿರವೇ ಇದ್ದ ನರ್ಸಿಂಗ್ ಹೋಂಗೆ ಕರೆದುಕೊಂಡು ಹೋಗಿ ಪ್ರಾರಂಭದಲ್ಲಿಯೇ ತೋರಿಸಿಕೊಂಡು ಬಂದಳು. ನಂತರ ಮೇಲಿಂದ ಮೇಲೆ ಹೋಗಿ ಚೆಕ್ ಮಾಡಿಸಿಕೊಂಡು ಬರುವಂತೆಯೂ ವೈದ್ಯರ ಸಲಹೆಯಂತೆ ಔಷಧೋಪಚಾರ ಮಾಡಿಕೊಳ್ಳುವಂತೆಯೂ ಮಾಡುತ್ತಿದ್ದಳು. ಅದೊಂದು ದಿನ ಅವಿನಾಶ್ ಫ್ಯಾಕ್ಟರಿಯಿಂದ ಬರುತ್ತಿದ್ದಂತೆಯೇ 'ಕುಶಲಾ ಈ ಸಲ ಹೆರಿಗೆ ಇಲ್ಲಿಯೇ ಆಗಲಿ. ಈ ಸಾರಿ ನಿನಗೆ ಗಂಡೇ ಆಗುತ್ತದೆ. ನಾನು ಮಗನನ್ನು ಕೂಡಲೇ ನೋಡಬೇಕು. ಅಷ್ಟು ದೂರದ ತವರಿನಲ್ಲಿ ನೀನಿದ್ದರೆ ನಾನು ಬರುವುದು ಕಷ್ಟವಾಗುತ್ತದೆ. ಈಗ ಫ್ಯಾಕ್ಟರಿಯಲ್ಲಿ ತುಂಬಾ ಕೆಲಸ. ಇನ್ನೂ ಮೂರು ತಿಂಗಳು ಯಾರೂ ರಜೆ ತೆಗೆದುಕೊಳ್ಳಬಾರದೆಂದು ಹೇಳಿದ್ದಾರೆ' ಎಂದ.

ಇಲ್ಲೇ ಹೆರಿಗೆಯಾಗುವುದರ ಬಗ್ಗೆ ಅಸಮಾಧಾನವಾಗಲಿಲ್ಲ ಆಕೆಗೆ. ಏಕೆಂದರೆ ತಂದೆಗೂ ವ್ಯಾಪಾರದಲ್ಲಿ ನಷ್ಟವಾಗಿ ಆರ್ಥಿಕವಾಗಿ ತುಂಬಾ ತೊಂದರೆಯಲ್ಲಿದ್ದರು. ತಾಯಿಗೂ ಆರೋಗ್ಯ ಸರಿ ಇರಲಿಲ್ಲ. ಮನೆಯಲ್ಲಿ ಆಕೆಗೆ ಸಹಾಯಕ ಮಾಡುವವರೂ ಯಾರೂ ಇರಲಿಲ್ಲ. ಮಗವನ್ನು ನೋಡಿಕೊಂಡು, ಮನೆಯ ಕೆಲಸ ನೀಗಿಸಿಕೊಂಡು, ಬಾಣಂತಿಯ ಕೆಲಸ ನಿರ್ವಹಿಸುವುದು ಕಷ್ಟವಾಗುತ್ತದೆಯೆಂದು ಯೋಚನೆಯಾಗಿತ್ತು. ಗಂಡನೇ ಈಗ ಹೀಗೆಂದಾಗ 'ಆದರೂ ಆಗಲಿ' ಎಂದುಕೊಂಡು 'ನಿಮ್ಮಿಷ್ಟ' ಎಂದಳು.

'ನಿನ್ನನ್ನು ನಿಮ್ಮೂರಿಗೆ ಕಳಿಸದಿರಲು ಇನ್ನೊಂದು ಕಾರಣವಿದೆ ಗೊತ್ತೇ? ಏನಿರಬೇಕು ಹೇಳು ನೋಡೋಣ' ಎಂದು ಚೇಷ್ಟೆ ಮಾಡಿದ.

'ನಿಮಗೆ ಊಟಕ್ಕೆ ತೊಂದರೆಯಾದೀತೆಂದು'

'ಅಲ್ಲ'

'ಮಗಳನ್ನು ಬಿಟ್ಟಿರಬೇಕಾದೀತೆಂದು'

'ಅದೂ ಅಲ್ಲ'

'ಮತ್ತೇನು ನೀವೆ ಹೇಳಿಬಿಡಿ, ನನಗೆ ಹೊಳೆಯುತ್ತಿಲ್ಲ.'

'ನಿನ್ನ ತವರು ಮನೆಯಲ್ಲಿ ಎಲ್ಲರಿಗೂ ಹೆಣ್ಣೇ ಜಾಸ್ತಿ. ಹೋದಸಾರಿಯೂ ಹೆಣ್ಣನ್ನೆ ಹೆತ್ತುಕೊಂಡು ಮಗಳನ್ನು ಕರೆದುಕೊಂಡು ಬಂದಿ. ಈಗಲೂ ಹಾಗಾಗಬಾರದು.'

'ಏನು ಹುಚ್ಚು ನಿಮ್ಮದು? ಅಲ್ಲಿಗೆ ಹೋದರೆ ಹೆಣ್ಣಾಗುತ್ತೆ? ಇಲ್ಲಿದ್ದರೆ ಗಂಡಾಗುತ್ತದೆಯೇ? ಯಾವುದಾದರೇನು ಹೆಣ್ಣು ಮಗುವು ಮಗುವಲ್ಲವೇ? ಈಗ ಕ್ಷಮಾಳನ್ನು ನೀವೆಷ್ಟು ಪ್ರೀತಿಸುತ್ತೀರಿ. ಗಂಡು ಮಗ ಅಲ್ಲವೆಂದು ಅವಳನ್ನು ಅಲಕ್ಷ್ಯ ಮಾಡಲು ಬರುತ್ತದೆಯೆ'?

'ಅದೇನೇ ಹೇಳು. ನನ್ನನ್ನು ಹಳೆಯ ಕಾಲದವನೆಂದು ಬೇಕಾದರೆ ಅನ್ನು. ಈ ಸಾರಿಯಂತೂ ನೀನು ಮಗನನ್ನೇ ಹೆರಬೇಕು. ಹೆಣ್ಣೇನಾದರೂ ಆದರೆ ನನಗೆ ನಿರಾಸೆಯಾಗುವುದಿರಲಿ, ಅಪ್ಪ-ಅಮ್ಮನಿಗೆ ಆಕಾಶವೇ ಕಳಚಿ ಬಿದ್ದಂತಾಗಿ ಬಿಡುತ್ತೆ' ಎಂದಾಗ ಎಲ್ಲಾದರೂ ಪುನಃ ಹೆಣ್ಣೇ ಆಗಿಬಿಟ್ರೆ..... ಎಂದು ಒಳಗೆ ನಡುಗಿದಳು ಕುಶಲಾ.

ಆ ದಿನ ಮಧ್ಯಾಹ್ನ ಶೋಭಾದೇವಿಗೆ ಈ ಎಲ್ಲಾ ಮಾತುಗಳನ್ನು ಹೇಳಿ 'ಎಲ್ಲಾದರೂ ಹೆಣ್ಣಾಗಿಬಿಟ್ಟರೆ ಏನು ಮಾಡಲಿ ಆಂಟಿ' ಎಂದಳು. 'ಅದಕ್ಯಾಕೆ ಹೆದರ್ತಿ ಸುಮ್ನಿರು. ಹೇಗೋ ಬಾಣಂತನ ಇಲ್ಲೇ ಆಗ್ತದೆ. ನಾನಿರ್ತೀನಿ. ಹೆಣ್ಣಾಗೋದು, ಗಂಡಾಗೋದು ಯಾರ ಕೈಲಿದೆ? ಅದಕ್ಕೆ ನೀನೇ ಹೇಗೆ ಕಾರಣ. ಅಕಸ್ಮಾತ್ ಹೆಣ್ಣಾದ್ರೆ ನಿನ್ನ ಗಂಡನಿಗೂ ಅತ್ತೆಗೂ ನಾನು ಸರ್‍ಯಾಗಿ ಹೇಳ್ತಿನಿ. ನೀನೇನು ಹೆದರ್ಬೇಡ' ಎಂದು ಸಮಾಧಾನ ಮಾಡಿ ಕಳಿಸಿದರು. ಆಕೆಯ ಮನಸ್ಸಿಗೆಷ್ಟೋ ನೆಮ್ಮದಿ ಎನ್ನಿಸಿತು.

ಆದರೆ ಮರುದಿನವೇ ಬರಸಿಡಿಲಿನಂತಹ ಸುದ್ದಿಯೊಂದಿ ಕುಶಲಳಿಗೆ ಕಾದಿತ್ತು. ಶೋಭಾದೇವಿಯ ಯಜಮಾನರು ಸಂಜೆ ಆಫೀಸಿನಿಂದ ಬರುವಾಗ ತಮಗೆ ಅಲಹಾಬಾದಿಗೆ ವರ್ಗವಾಗಿರುವುದಾಗಿಯೂ ಎಂಟು ದಿನಗಳೊಳಗಾಗಿ ಅಲ್ಲಿ ಹಾಜರಾಗಬೇಕಾಗಿಯೂ ಅಲ್ಲಿ ಕ್ವಾರ್ಟರ್ಸ್ ಇರುವುದಾಗಿಯೂ ಕೂಡಲೇ

ಹೊರಡುವ ಏರ್ಪಾಟು ಮಾಡಿಕೊಳ್ಳಬೇಕೆಂಬ ಸುದ್ದಿ ತಂದರು. ಅಲಹಾಬಾದಿನಲ್ಲಿ ಶೋಭಾದೇವಿಯ ತವರುಮನೆಯಿತ್ತು. ತಾನು ಹುಟ್ಟಿ ಬೆಳೆದ ಊರು. ಅದರಲ್ಲೂ ಗಂಡನಿಗೆ ಪ್ರಮೋಷನ್ ಮೇಲೆ ಆ ಊರಿಗೆ ವರ್ಗವಾಗಿತ್ತು. ಹಾಗಾಗಿ ಅಲ್ಲಿಗೆ ವರ್ಗವಾದುದು ಸಂತೋಷವೇ. ಆದರೂ ಕುಶಲೆಯ ಹೆರಿಗೆಯಾಗುವವರೆಗಾದರೂ ತಮಗೆ ವರ್ಗವಾಗದಿದ್ದರೆ ಚೆನ್ನಾಗಿತ್ತು ಎನ್ನಿಸದೇ ಇರಲಿಲ್ಲ. ಆದರೂ ಆಕೆಯನ್ನು ಕರೆದು ಧೈರ್ಯದ ಮಾತುಗಳನ್ನು ಹೇಳಿದರು. 'ಮಗನೇ ಹುಟ್ಟುತ್ತಾನೆ' ನೀನೇನೂ ಚಿಂತೆ ಮಾಡಬೇಡ' ಎಂದು ಸಮಾಧಾನ ಮಾಡಿದರೂ ಕುಶಲೆಗೆ ಗಾಬರಿ ತಪ್ಪಲಿಲ್ಲ. ಇವರೂ ಇರುವುದಿಲ್ಲವೆಂದ ಮೇಲೆ ಹೆರಿಗೆಯ ಟೈಂಗೆ ಊರಿಂದ ಯಾರನ್ನಾದರೂ ಕರೆಸಿಕೊಳ್ಳಬೇಕೆಂದು ಯೋಚಿಸಿದಳು. ಅವಿನಾಶ್‌ನ ತಾಯಿಯಂತೂ ಬರುವಂತರಲಿಲ್ಲ. ಅತ್ತೆ ಬಂದು, ಸೊಸೆಗಾಗಿ ಕೆಲಸ ಮಾಡುವುದು ಊಹೆಗೂ ಮೀರಿದ ಮಾತಾಗಿತ್ತು. ಹಾಗಾಗಿ ಕೂಡಲೇ ಊರಿಗೆ ಯಾರನ್ನಾದರೂ ಸಂಬಂಧಿಕರನ್ನು ಕಳಿಸಿಕೊಡಬೇಕೆಂದು ತಂದೆಗೆ ಫೋನು ಮಾಡಿಸಿದಳು.

ತಾಯಿ ಹೊರಡುವಂತಿಲ್ಲ. ಬಹಳಷ್ಟು ಪ್ರಯತ್ನ ಮಾಡಿ ಕುಶಲಳ ದೊಡ್ಡಪ್ಪನ ಮಗಳನ್ನು ಕಳಿಸಿಕೊಟ್ಟರು. ಆಕೆಗೂ ಇಲ್ಲಿಯ ಜನ ಹೊಸಬರು. ಭಾಷೆ ಬರದು. ಜಾಗ ಅಪರಿಚಿತ. ಮನೆಯ ಕೆಲಸಗಳನ್ನೇನೋ ಮಾಡಬಲ್ಲಳು. ಆದರೆ ಒಳಗೆ ಹೊರಗೆ ಜನರೊಡನೆ ನಿರ್ವಹಿಸುವುದು ಕಷ್ಟ. ಬಂದ ಮೇಲೆ ತನಗೆ ಸಾಧ್ಯವಾದಷ್ಟು ಮಟ್ಟಿಗೆ ಮನೆಯ ಎಲ್ಲಾ ವಿಚಾರಗಳನ್ನು ಪರಿಚಯಿಸಿದಳು. ಮಗು ಬೀದಿಗೆಲ್ಲಾದರೂ ಹೋದಾಳೆಂದು ಆಕೆಯನ್ನು ನೋಡಿಕೊಳ್ಳುವ ಬಗ್ಗೆಯೂ ವಿವರಿಸಿದಳು. ಕುಶಲಳಿಗೆ ಆಗಲೇ ದಿನ ತುಂಬಿತ್ತು. ಹೆರಿಗೆ ಇಂದೋ-ನಾಳೆಯೋ ಎನ್ನುವುದರಲ್ಲಿತ್ತು. ನೆರೆಮನೆಯವರು ಊರು ಬಿಟ್ಟು ಹೋದುದು ಅವಳಿಗೆ ಆಸರೆಯೇ ಇಲ್ಲವೇನೋ ಎಂಬಂತಾಯ್ತು. ಮನೆಯ ಕಾಂಪೌಂಡಿನಲ್ಲೊಂದು ಹಳೆಯ ಬಾವಿ ಇತ್ತು. ಅದಕ್ಕೆ ಸುತ್ತಲೂ ಕಟ್ಟಿದ ಕಟ್ಟೆ ಎತ್ತರವಿರಲಿಲ್ಲ. ನಡೆಯುವುದನ್ನು ಕಲಿತಿದ್ದ ಮಗು ಒಂದು ಕ್ಷಣದಲ್ಲಿ ಓಡಿಬಿಡುತ್ತಿತ್ತು. ಮಗುವನ್ನು ನೋಡಿಕೊಳ್ಳುವ ರೂಢಿ ಇಲ್ಲದ ಅಕ್ಕ, ತಾನು ಆಸ್ಪತ್ರೆಯಲ್ಲಿದ್ದಾಗ ಕೆಲಸದಲ್ಲಿ ಮಗ್ನಳಾಗಿ ಮಗುವನ್ನು ಮರೆತರೆ? ಆಗ ಅದು ಹಿತ್ತಲಿಗೆ ಓಡಿಹೋಗಿ ಕುತೂಹಲದಿಂದ ಬಾವಿಯಲ್ಲಿ ಬಗ್ಗಿದರೆ? ಮುಂದಿನದನ್ನು ಅವಳಿಗೆ ಯೋಚಿಸಲು ಭಯವಾಯ್ತು. ತಕ್ಷಣವೇ ಪೇಟೆಗೆ ಹೋಗಿ ಘಲ್ ಘಲ್ ಎಂದು ಶಬ್ದ ಮಾಡುವ ಗೆಜ್ಜೆಯ ಚೈನು ತಂದು ಮಗಳ ಕಾಲಿಗೆ ಕಟ್ಟಿ 'ಇಲ್ನೋಡಕ್ಕಾ ಕ್ಷಮಾ ಬಹಳ ತುಂಟಿ. ನಾನು ಆಸ್ಪತ್ರೆಗೆ ಹೋದ ಮೇಲೆ ನೀನು ಕೆಲಸದಲ್ಲಿದ್ದಾಗ ಹೊರಗೋಡಿ ಬಿಟ್ಟರೆ ನಿನಗೆ ಗೊತ್ತಾಗುವುದಿಲ್ಲ. ಗೆಜ್ಜೆ ಕಟ್ಟಿದ್ದೀನಿ. ಆಕೆ ಓಡಾಡುವಾಗ ಆಗುವ ಗೆಜ್ಜೆಯ ಸಪ್ಪಳದಿಂದ ನಿನಗೆ ಕೆಲಸದಲ್ಲೂ ಆಕೆಯ ಕಡೆ ಗಮನ ಹೋಗುತ್ತದೆ.

ನಾನು ಹೀಗೇಳ್ತಿನೀಂತ ಏನು ತಿಳ್ಕೋಬೇಡ. ನಿನಗೆ ರೂಢಿ ಇಲ್ಲಾಂತ ಹೇಳ್ದಿ. ಹಿತ್ತಲ್ಲೇ ಬಾವಿ ಇರೋದ್ರಿಂದ ಹೆದರ್ಕೆ ಅಷ್ಟೇ' ಎಂದಳು.

'ಅದಕ್ಕೇನು ಬಿಡು. ನೀನು ಮಾಡಿದ್ದು ಸರೀನೇ' ಎಂದಳು. ಅದೇ ರಾತ್ರಿ ನೋವು ಕಾಣಿಸಿಕೊಂಡಿತು. ಕುಶಲಾ ದೇವರಿಗೆ ತುಪ್ಪದ ದೀಪ ಹತ್ತಿಸಿ ಮಲಗಿದ ಮಗಳ ಮುಖವನ್ನೊಮ್ಮೆ ನೋಡಿ ರಾತ್ರಿ ಹನ್ನೊಂದರ ಸುಮಾರಿಗೆ ನರ್ಸಿಂಗ್ ಹೋಂಗೆ ಹೊರಟಳು. ಅವಿನಾಶ್, ಅಕ್ಕ-ತಂಗಿಯರಿಬ್ಬರನ್ನು ನರ್ಸಿಂಗ್ ಹೋಂನಲ್ಲಿ ಬಿಟ್ಟು ಬಂದು ಮನೆಯಲ್ಲಿ ಮಗುವಿನೊಂದಿಗೆ ಮಲಗಿದ. ರಾತ್ರಿಯೆಲ್ಲಾ ನೋವನ್ನನುಭವಿಸಿದಳು ಕುಶಲಾ. ಡಾಕ್ಟರರ ಭಾಷೆ ಕುಶಲೆಯ ಅಕ್ಕ ಸರೋಜಗೆ ಬರುತ್ತಿರಲಿಲ್ಲ. ತಂಗಿ ನೋವಿನಿಂದ ನರಳುತ್ತಿರುವುದು ಪಕ್ಕದ ಕೋಣೆಯಲ್ಲಿದ್ದ ಈಕೆಗೆ ಕೇಳಿಸಿದರೂ ಹೋಗಿ ಸಂತೈಸುವಂತಿರಲಿಲ್ಲ. ಅಲ್ಲಿಗೆ ಬೇರೆ ಯಾರನ್ನೂ ಬಿಡಬಾರದೆಂದು ಡಾಕ್ಟರ್ ಹೇಳಿದ್ದಾರೆ ಎಂದು ನರ್ಸ ಹೇಳಿದಳು. ಏನಾದರೂ ಹೇಳಿ ಅವರನ್ನು ಒಪ್ಪಿಸಬೇಕೆಂದರೆ ಭಾಷೆ ಬರದು. ಈ ಸಮಯದಲ್ಲಿ ಇಲ್ಲಿ ಪರಿಚಯವಿದ್ದ ಶೋಭಾದೇವಿಯಾದರೂ ಇದ್ದಿದ್ದರೆ, ಒಳಗೆ ಹೋಗಿ ಸಮಾಧಾನ ಮಾಡುತ್ತಿದ್ದರು. ವಿಧಿ ಈ ಸಮಯದಲ್ಲೇ ಅವರೂ ವರ್ಗವಾಗಿ ದೂರ ಹೋಗುವಂತೆ ಮಾಡಿತ್ತು. ಸರೋಜ ಪಕ್ಕದ ರೂಮಿನಲ್ಲಿ ಕುಳಿತು 'ಸುಖವಾಗಿ ಹೆರಿಗೆಯಾದರೆ ಸಾಕು' ಎಂದು ದೇವರಲ್ಲಿ ಮೊರೆ ಇಡುತ್ತಿದ್ದಳು. ಸುಮಾರು ಬೆಳಗಿನ ಝಾವ ಐದು ಗಂಟೆಗೆ ಮಗು ಅಳುವ ಶಬ್ದ ಸರೋಜಗೆ ಕೇಳಿಸಿತು. ತಕ್ಷಣವೇ ಕುಶಲಾ 'ಡಾಕ್ಟ್ರೇ ಎಂಥಾ ಮಗು' ಎಂದು ಹಿಂದಿಯಲ್ಲಿ ಕೇಳಿದುದೂ ಆಕೆ 'ಲಡಕಿ' ಎಂದುದೂ ಹರುಕು ಮುರುಕು ಹಿಂದಿ ಬರುತ್ತಿದ್ದ ಸರೋಜಗೆ ಅರ್ಥವಾಯ್ತು. 'ಗಂಡಾದರೇನು, ಹೆಣ್ಣಾದರೇನು ಸುಖವಾಗಿ ಆಯ್ತಲ್ಲ ಅಷ್ಟೇ ಸಾಕು' ಎಂದುಕೊಂಡಳು ಸರೋಜ. ಅಷ್ಟರಲ್ಲಿ ನರ್ಸ್ ಬಂದು 'ಕಾಫಿ ತಂದ್ಕೊಡಿ. ಬಾಯೆಲ್ಲಾ ಒಣಗಿದೆ' ಎಂದಳು. ಹತ್ತಿರದಲ್ಲೇ ಮನೆ ಇದ್ದುದರಿಂದ ಕಾಫಿ ಮಾಡಿಕೊಂಡು ಬರಲು ಸರೋಜಾ ಮನೆಗೋಡಿದಳು. ಇತ್ತ ಕುಶಲೆಗೆ 'ಲಡಕಿ' ಎಂದ ತಕ್ಷಣ ಬರಸಿಡಿಲು ಬಡಿದಂತಾಯ್ತು. ಜಂಘಾಬಲವೇ ಉಡುಗಿದಂತಾಯ್ತು. ಮುಡಿಯಿಂದ ಅಡಿಯವರೆಗೂ ನಡುಗಿದಳು. ಈ ಷಾಕಿಗೆ ರಕ್ತಸ್ರಾವ ಜೋರಾಯ್ತು. ಡಾಕ್ಟರ್ ನಾರ್ಮಲ್ ಡೆಲಿವರಿಯಾಗಿದೆ ಎಂದು ನಿಶ್ಚಿಂತೆಯಿಂದ ಹೋಗಿದ್ದರು. ಸ್ವಲ್ಪ ಹೊತ್ತಿನ ನಂತರ ನರ್ಸ್ ಬಂದು ನೋಡಿದರೆ ವಿಪರೀತ ರಕ್ತಸ್ರಾವವಾಗಿ ಕುಶಲಾ ಬಿಳಿಚಿಕೊಂಡಿದ್ದಾಳೆ. ಲಗುಬಗೆಯಿಂದ ಡಾಕ್ಟರನ್ನು ನರ್ಸ್ ಕರೆದರು. ಮನೆಯವರು ಯಾರೂ ಇಲ್ಲ. ಬಾಣಂತಿ ಸುಸ್ತಾಗಿದ್ದಾಳೆ. ಕೂಡಲೇ ಫೋನ್ ಮಾಡಿ ಸ್ಪೆಷಲಿಸ್ಟ್‌ನ್ನು ಕರೆಸಿದರು. ರಕ್ತವೆಲ್ಲಾ ಬಸಿದು ಹೋಗಿತ್ತು. ತಕ್ಷಣವೇ ರಕ್ತ ಕೊಟ್ಟು ಆಕೆಯನ್ನು ಉಳಿಸಬೇಕಾಗಿತ್ತು. ಬಂದ ಡಾಕ್ಟರು ಪೇಷಂಟಿನ ಬ್ಲಡ್

ಗ್ರೂಪ್ ಯಾವುದೆಂದು ಕೇಳಿದರು. ನರ್ಸಿಂಗ್ ಹೋಂನ ಡಾಕ್ಟರಿಗೆ ಗೊತ್ತೇ ಇರಲಿಲ್ಲ. ಕುಶಲ ಗರ್ಭಿಣಿಯಾಗಿದ್ದಾಗ ಪೀರಿಯಾಡಿಕಲ್ ಚೆಕ್‌ಅಪ್ ಮಾಡಿಸುತ್ತಿದ್ದರೂ ಎಲ್ಲಾ ನಾರ್ಮಲ್ ಇದೆಯೆಂದು ಆಕೆ ಆ ಬಗೆಗೆ ಕಾಳಜಿ ವಹಿಸಿಯೇ ಇರಲಿಲ್ಲ. ಈಗ ತುರ್ತಾಗಿ ರಕ್ತ ಕೊಡಬೇಕಾಗಿತ್ತು. ಆದರೆ ಬ್ಲಡ್‌ಗ್ರೂಪ್ ಗೊತ್ತಿಲ್ಲದೇ ಕೊಡುವಂತಿರಲಿಲ್ಲ. ಆಕೆಯ ದೇಹದಿಂದ ರಕ್ತ ತೆಗೆದುಕೊಂಡು ಪರೀಕ್ಷೆಗಾಗಿ ಕಳುಹಿಸಿದರು. ರಕ್ತಸ್ರಾವವಾಗುತ್ತಲೇ ಇತ್ತು. ಯಾವ ಇಂಜಕ್ಷನ್ನಿನಿಂದಲೂ ತಡೆಯಲಾಗಲಿಲ್ಲ.

ಈ ಕಡೆ ಸರೋಜ ಹೋದವಳೇ ಕಾಫಿ ಮಾಡಿ ಅವಿನಾಶನೊಡನೆ ಕಾಫಿ ಕಳಿಸಿದಳು. ಹೆಣ್ಣಾಯ್ತೆಂದು ಕೇಳಿ ಅಸಮಾಧಾನವಾದರೂ 'ಆದದ್ದಾಯ್ತು ನಮ್ಮ ಅದೃಷ್ಟ' ಎಂದುಕೊಂಡು ಕಾಫಿ ತೆಗೆದುಕೊಂಡು ನರ್ಸಿಂಗ್ ಹೋಂಗೆ ಬಂದ. ಅಷ್ಟರಲ್ಲಾಗಲೇ ಕುಶಲಳ ಸ್ಥಿತಿ ತುಂಬಾ ಗಂಭೀರವಾಗಿತ್ತು. ಮುಖ ನಿಸ್ತೇಜಗೊಂಡಿತ್ತು. ಕಣ್ಣುಗಳು ಕಾಂತಿಹೀನವಾಗಿದ್ದವು. ಗುಲಾಬಿ ಬಣ್ಣದ ಕುಶಲಾ ಬಿಳಿಚಿಕೊಂಡಿದ್ದಳು. ಗಂಡನನ್ನು ನೋಡುತ್ತಲೇ 'ನಾನು ನಿಮಗೆ ಮಗನನ್ನು ಹೆತ್ತು ಕೊಡಲಾರದಾದೆ. ನಾನಿನ್ನು ಬದುಕುವುದಿಲ್ಲ, ನನಗೆ ಬದುಕುವುದು ಬೇಡ, ಕ್ಷಮಾಳನ್ನು ಅಲಕ್ಷಿಸಬೇಡಿ, ಚೆನ್ನಾಗಿ ನೋಡಿಕೊಳ್ಳಿ, ಎಂದು ತೊದಲುತ್ತಾ ನುಡಿದಳು. ಅನಿರೀಕ್ಷಿತವಾದ ಈ ಸ್ಥಿತಿಯನ್ನು ನೋಡಿ ಅವಿನಾಶನಿಗೆ ದಿಕ್ಕೇ ತೋಚದಂತಾಗಿತ್ತು. ಆರೋಗ್ಯವಾಗಿರುವ ಹೆಂಡತಿಗೆಂದು ಕಾಫಿ ತಂದ ಅವನಿಗೆ ರುಗ್ಣ ಶಯ್ಯೆಯಲ್ಲಿರುವ ಪ್ರೀತಿಯ ಪತ್ನಿಯನ್ನು ನೋಡಬೇಕಾಯ್ತು. ಅವನಿಗೆ ಈ ಸಾರಿ ಗಂಡೇ ಆಗಲೆಂಬ' ಆಸೆ ಇದ್ದರೂ ಅದಕ್ಕಾಗಿ ಹೆಂಡತಿಯನ್ನು ಬಲಿಕೊಡುವಷ್ಟು ಹಪಾಹಪಿ ಇರಲಿಲ್ಲ. ಮೆಚ್ಚಿ ಕೈ ಹಿಡಿದ ಪ್ರೀತಿಯ ಪತ್ನಿಗಾದ ಸ್ಥಿತಿ ನೋಡಿ ಆಕಾಶವೇ ತಲೆಯ ಮೇಲೆ ಕಳಚಿಬಿದ್ದಂತಾಗಿತ್ತು. ನಾರ್ಮಲ್ ಆಗಿ ಹೆರಿಗೆಯಾದರೂ ಹೀಗೇಕಾಯ್ತೆಂದು ವಿಚಾರಿಸಿದಾಗ ಹೆಣ್ಣಾಯ್ತೆಂಬ ಸುದ್ದಿ ಮನಸ್ಸಿನ ಮೇಲೆ ಮಾಡಿದ ಪರಿಣಾಮದ ಫಲವೆಂದು ತಿಳಿಯಿತು. ಆಗ ಅವನಿಗಾದ ನೋವು ಅಷ್ಟಿಷ್ಟಲ್ಲ. ತನಗೆ ಗಂಡು ಮಕ್ಕಳಿಲ್ಲದಿದ್ದರೆ ಚಿಂತೆಯಿಲ್ಲ. ಈಗ ಕುಶಲಳನ್ನು ಏನಾದರೂ ಮಾಡಿ ಉಳಿಸಿಕೊಳ್ಳಬೇಕೆಂದು ಪರದಾಡತೊಡಗಿದ. ಅಷ್ಟರಲ್ಲಿ ಆಕೆಗೆ ಬೇಕಾದ ರಕ್ತ ತೆಗೆದುಕೊಂಡು ಬಂದು, ರಕ್ತ ಕೊಡುವ ವ್ಯವಸ್ಥೆ ಮಾಡಿದರು. ಆದರೆ ನರಗಳೆಲ್ಲಾ ತಮ್ಮ ಸತ್ವವನ್ನು ಕಳೆದುಕೊಂಡಿದ್ದವು. ರಕ್ತವನ್ನು ದೇಹದೊಳಕ್ಕೆ ಸೇರಿಸಿಕೊಳ್ಳುವಷ್ಟು ಶಕ್ತಿ ನರಗಳಲ್ಲಿ ಉಳಿದಿರಲಿಲ್ಲ.

■

## ೭. ಹತ್ಯೆ

ಅನಂತಪುರದ ರೈಲ್ವೆ ಸ್ಟೇಶನ್ನಿನಲ್ಲಿ ಗದ್ದಲವೋ ಗದ್ದಲ. ಅದೇ ತಾನೆ ಬಂದ ಗೂಡ್ಸ್ ಟ್ರೈನಿಗೆ ಒಬ್ಬ ತರುಣಿ ಸಿಕ್ಕಿ ಸತ್ತಿದ್ದಳು. ಈ ಘಟನೆ ಎಲ್ಲರ ಕಣ್ಮುಂದೆಯೇ ಆಗಿ ಹೋಯಿತು. ರೈಲು ನಿಧಾನವಾಗಿ ಸ್ಟೇಶನ್‌ಗೆ ಬರುತ್ತಿತ್ತು. ಆಗ ಜನರೊಂದಿಗೆ ನಿಂತಿದ್ದ ಒಬ್ಬ ಯುವತಿ, ಇದ್ದಕ್ಕಿದ್ದಂತೆ ರೈಲಿನ ಮುಂದೆ ಓಡಿದಳು. ಜನರು ಹೋ ಹೋ ಎನ್ನುತ್ತಿದ್ದಂತೆಯೇ ಕೆಲಸ ಮುಗಿದು ಹೋಗಿತ್ತು. ರೈಲು ನಿಧಾನವಾಗಿ ಚಲಿಸುತ್ತಿದ್ದುದರಿಂದ ದೇಹ ನುಚ್ಚು ನೂರಾಗದಿದ್ದರೂ ಪ್ರಾಣಪಕ್ಷಿಯಂತೂ ಹಾರಿ ಹೋಗಿತ್ತು. ಒಂದು ಕ್ಷಣದಲ್ಲಿ ನಿಲ್ದಾಣದಲ್ಲಿದ್ದ ಪ್ರಯಾಣಿಕರು, ರೈಲ್ವೆ ಸಿಬ್ಬಂದಿ, ಪೊಲೀಸರು ಎಲ್ಲರೂ ಗುಂಪು ಕಟ್ಟಿದರು. ಒಬ್ಬೊಬ್ಬರು ಒಂದೊಂದು ವಿಧವಾಗಿ ಆ ಬಗ್ಗೆ ಚರ್ಚಿಸಿದರು.

'ಯಾರು ಈ ಹುಡುಗಿ? ಪಾಪ ಗರ್ಭಿಣಿ ಇದ್ದಾಳೆ. ಇನ್ನೂ ಇಪ್ಪತ್ತೈದು ಇಪ್ಪತ್ತಾರು ವರ್ಷಗಳಿರಬೇಕು.'

'ಅಕಸ್ಮಾತ್ತಾಗೇನು ಈಕೆ ರೈಲಿಗೆ ಸಿಕ್ಕಲಿಲ್ಲ. ತಾನೇ ಓಡಿಹೋಗಿ ರೈಲಿಗೆ ಸಿಕ್ಕಿದಳು.'

'ಬಸುರಿಯಾಗಿ ಆತ್ಮ ಹತ್ಯೆ ಮಾಡಿಕೊಳ್ಳಬೇಕಿದ್ದರೆ ಏನು ಕಾರಣವೋ ಏನೋ.'

'ಆಕೆಯವರು ಯಾರೂ ಇದ್ದಂತಿಲ್ಲ. ಒಬ್ಬಳೇ ಬಂದಿರಬೇಕು.'

'ಈಗಿನ ಕಾಲದಲ್ಲಿ ಏನು ಹುಡುಗಿಯರೋ ಏನೋ. ಯಾರ ಅಂಕೆಯೂ ಇಲ್ಲದಂತೆ ಮೆರೀತಾರೆ. ಆಮೇಲೆ ಇಂತಹ ಕೆಲಸ ಮಾಡಿಕೊಳ್ಳುತ್ತಾರೆ.'

'ಬಾಳುವ ಧೈರ್ಯ ಇಲ್ಲದಿದ್ದರೆ ಈ ಹುಚ್ಚುತನಕ್ಕೆ ಏಕೆ ಇಳಿಯಬೇಕು.'

'ಯಾವೋನು ಮೋಸ ಮಾಡಿದನೋ ಏನೋ. ಹೆಣ್ಣಾದವಳಿಗೆ ಎಚ್ಚರ ಬೇಡವೇ.'

'ಇಲ್ಲಾರಿ, ಅವಳ ಕೊರಳಲ್ಲಿ ಮಂಗಳ ಸೂತ್ರ ಇದೆ. ಮದುವೆಯಾದವಳಿದ್ದಾಳೆ.'

'ಓಹೋ ವರದಕ್ಷಿಣೆ ಗದ್ದಲವಿರಬೇಕು. ಕಿರುಕುಳ ಸಹಿಸಲಾರದೆ ಆತ್ಮಹತ್ಯೆ ಮಾಡಿಕೊಂಡಿರಬೇಕು.'

ಅಷ್ಟರಲ್ಲಿ ಪೋಲೀಸಿನವರು ಬಂದು ಸ್ಥಳ ಮಹಜರು ಮಾಡಿ ಪಂಚನಾಮೆ ಬರೆದುಕೊಂಡು ಶವವನ್ನು ಪರೀಕ್ಷೆಗಾಗಿ ದವಾಖಾನೆಗೆ ಒಯ್ದರು. ಆಗ ಆಕೆಯ ವ್ಯಾನಿಟಿ ಬ್ಯಾಗ್‌ನಲ್ಲಿದ್ದ ಒಂದು ಲೆಟರ್ ಸಿಕ್ಕಿತು. ಅದರಲ್ಲಿ ತನ್ನ ಸಾವಿಗೆ ಯಾರೂ ಕಾರಣರಲ್ಲವೆಂದೂ ತನಗೆ ಜೀವನದಲ್ಲಿ ಜಿಗುಪ್ಸೆಗೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದಾಗಿ ಬರೆದಿದ್ದಳು. ಅಲ್ಲದೆ ಅದರಲ್ಲಿ ತನ್ನ ತಂದೆಯ ಮನೆಯ ವಿಳಾಸ ತಿಳಿಸಿದ್ದಳು. ಗಂಡನ ಅಥವಾ ಗಂಡನ ಮನೆಯವರ ಬಗ್ಗೆ ಏನೂ ಸುಳಿವೇ ಇರಲಿಲ್ಲ!

ಪತ್ರದಲ್ಲಿ ಸಿಕ್ಕ ವಿಳಾಸದ ಸಹಾಯದಿಂದ ಶವವನ್ನು ಬಳ್ಳಾರಿಯ ಕೃಷ್ಣಪ್ಪನವರ ಮನೆಗೆ ತಂದರು. ಅದಕ್ಕೆ ಮೊದಲೇ ಪೋಲೀಸ್ ಪೇದೆ ಬಂದು, ವಿಷಯ ತಿಳಿಸಿದಾಗ, ವಿಶಾಲಮ್ಮ ಹೌಹಾರಿದರು. ಅನಂತಪುರದ ರೈಲ್ವೆಸ್ಟೇಷನ್‌ನಲ್ಲಿ ಎಂದರೆ ತಮ್ಮ ಕೊನೆಯ ಮಗಳು ಮಾಲತಿಯೇ ಇರಬೇಕೆಂದು ಊಹಿಸಿ, ಅವರಿಗೆ ಎದೆಯೊಡೆದಂತಾಯ್ತು. 'ಅವಳಿಗೇನಾಗಿರಬೇಕು. ಗಂಡ ಎಷ್ಟು ಪ್ರೀತಿಸುತ್ತಿದ್ದ. ಅತ್ತೆ ಮಾವಂದಿರೂ ಅಷ್ಟೆ. ಮಗಳಿಗಿಂತ ಹೆಚ್ಚಾಗಿ ಇಟ್ಟುಕೊಂಡಿದ್ದರು. ಮದುವೆಯಾದ ಈ ಮೂರು ವರ್ಷದಲ್ಲಿ ಅವಳು ಒಂದೇ ಸಾರಿ ತವರು ಮನೆಗೆ ಬಂದುದು. ಈಗ ಸಹ ಏಳು ತಿಂಗಳೂ ಮುಗಿದಿದ್ದರೂ ಕಳಿಸಿಕೊಡಿ ಎಂದು ಹೇಳಿದರೆ ಅವರ ಅತ್ತೆ 'ಇನ್ನೂ ಒಂದು ತಿಂಗಳು ನಮ್ಮ ಮನೆಯಲ್ಲೇ ಓಡಾಡಿಕೊಂಡು ಇರಲಿ. ಮುಂದೆ ಹೆರಿಗೆಯಾದ ಮೇಲೆ ಮೂರು ತಿಂಗಳಾದರೂ ನಿಮ್ಮ ಮನೆಯಲ್ಲೇ ಇರಬೇಕಾಲ್ಲಾ ಇಷ್ಟು ಬೇಗ ಏಕೆ' ಎಂದು ಹೋದವಾರ ತಾನೇ ಮಗಳನ್ನು ಕರೆಯಲು ಹೋದಾಗ ಅಂದಿದ್ದರು. ಇಷ್ಟು ಬೇಗ ಅಂತಹುದೇನಾಯ್ತು ಅವಳಿಗೆ? ಹಣಕ್ಕೇನಾದರೂ ಕಿರುಕುಳ ಕೊಟ್ಟರೇ ಎಂದರೆ ಅವರು ವರದಕ್ಷಿಣೆಯನ್ನೇ ಕೇಳಿದವರಲ್ಲ. 'ಹುಡುಗಿ ನಮ್ಮ ಮನಸ್ಸಿಗೆ ಬಂದಿದ್ದಾಳೆ. ಮದುವೆ ಮಾಡಿಕೊಟ್ಟುಬಿಡಿ ನಮಗಿನ್ನೇನೂ ಬೇಡ' ಎಂದಿದ್ದರು. ಅಳಿಯ ಸುಧೀಂದ್ರ ಬಂಗಾರದಂತಹ ಹುಡುಗ. ಹೀಗಿರುವಾಗ ಆದದ್ದಾದರೂ ಏನಾಗಿರಬೇಕು? ಬಹುಶಃ ನಮ್ಮ ಹುಡುಗಿ ಇರಲಿಕ್ಕಿಲ್ಲ. ತಪ್ಪು ವಿಳಾಸದಿಂದ ಪೋಲೀಸರು ನಮ್ಮ ಮನೆಗೆ ಬಂದಿರಬೇಕು ಎಂದುಕೊಂಡು ಮಗನನ್ನು ಕರೆದು,

'ನೀನೇ ಹೊಗಿಬಾರಪ್ಪಾ, ನಿಜವೋ ಸುಳ್ಳೋ ನೋಡಿಕೊಂಡು ಬಾ' ಎಂದರು.

'ಇಲ್ಲಮ್ಮಾ, ಇಷ್ಟರಲ್ಲೇ ಶವ ತರುತ್ತಾರೆ. ಪೋಲೀಸಿನವರು ಮಾಲತಿಯೇ ಬರೆದ ಪತ್ರ ತಂದು ಕೊಟ್ಟಿದ್ದಾರೆ' ಎಂದಾಗ ವಿಶಾಲಮ್ಮನ ದುಃಖದ ಕಟ್ಟೆ ಒಡೆಯಿತು. ಹಾಗಾದರೆ ಆಕೆಯ ಗಂಡನ ಮನೆಯವರ್‍ಯಾರೂ ಏಕೆ ಬಂದಿಲ್ಲ? ಅಲ್ಲೇ ಅನಂತಪುರದ ಅವರ ಮನೆಯ ಅಡ್ರೆಸ್ಸನ್ನು ಬಿಟ್ಟು, ನಮ್ಮ ಮನೆಯ ವಿಳಾಸವನ್ನಷ್ಟೇ

ಏಕೆ ಬರೆದಿದ್ದಾಳೆ ಎಂದುಕೊಂಡಾಗ ವಿಶಾಲಮ್ಮನವರ ಮನಸ್ಸು ಸಾವಿನ ಕಾರಣ ಹೀಗಿರಬಹುದೇ ಎಂದು ಯೋಚಿಸಿತು. ಮಗಳ ಹಿಂದಿನ ಕಥೆಯಲ್ಲಾ ಕಣ್ಣು ಮುಂದೆ ಕಟ್ಟಿತು.

ಈ ಐದು ವರ್ಷಗಳ ಹಿಂದೆ, ತಮ್ಮ ಮೂರನೆಯ ಮಗಳು ಶೀಲಾ ಹೆರಿಗೆಗಾಗಿ ಮನೆಗೆ ಬಂದಿದ್ದಳು. ಒಂದು ದಿನ ಸಂಜೆ, 'ಒಳ್ಳೆಯ ಸಿನಿಮಾ ಬಂದಿದೆ. ಹೋಗಿ ಬರೋಣಮ್ಮಾ' ಎಂದಳು. ಮನೆಯಲ್ಲಿ ಬೇರೆ ಯಾರು ಇರಲಿಲ್ಲ. ಯಜಮಾನರು ಊರಿಗೆ ಹೋಗಿದ್ದರು. ಮಗ ಸಹಿತ ಹೆಂಡತಿಯ ಮನೆಗೆ ಹೋಗಿದ್ದ. ಕೆಟ್ಟ ಕಾಲದ ದಿನದಲ್ಲಿ ಮನೆಗೆ ಬೀಗ ಹಾಕಿಕೊಂಡು ಹೋಗುವುದು ಬೇಡವೆಂದು ಕಡೆಯ ಮಗಳು ಮಾಲತಿಗೆ ಮನೆಯಲ್ಲಿರಲು ಹೇಳಿ, ನಾವಿಬ್ಬರೂ ಸಿನಿಮಾಕ್ಕೆ ಹೋಗಿದ್ದೆವು. ಅಂದು ಸಿನಿಮಾ ಮುಗಿಸಿಕೊಂಡು ಮನೆಗೆ ಬಂದಾಗ, ಮಾಲತಿಯನ್ನು ನೋಡುವಂತಿರಲಿಲ್ಲ, ಅತ್ತು ಅತ್ತು ಕಣ್ಣೆಲ್ಲಾ ಕೆಂಪಾಗಿದ್ದವು, ಮುಖವೆಲ್ಲಾ ಊದಿತ್ತು. ಏಕೆ ಎಂದು ಎಷ್ಟು ಕೇಳಿದರೂ ಮಾತಾಡಲೇ ಇಲ್ಲ. ಅಳುವುದೊಂದೇ ಅವಳ ಉತ್ತರವಾಗಿತ್ತು. ಅವಳ ಅಳುವಿಗೆ ಕಾರಣ ಎಷ್ಟು ಯೋಚಿಸಿದರೂ ತಿಳಿಯಲಿಲ್ಲ. ಆ ದಿನ ಊಟ ಮಾಡದೇ ಹಾಗೆಯೇ ಮಲಗಿದಳು. ರಾತ್ರಿಯೆಲ್ಲಾ ಆಕೆ ಅಳುತ್ತಾ ಇದ್ದುದು, ಆಕೆಯ ಅಳುವಿನ ಕಾರಣ ತಿಳಿಯದೆ ನಿದ್ದೆ ಬರದೆ ನನಗೆ ತಿಳಿದಿತ್ತು. ಮರುದಿನವೂ ಅವಳು ಮೇಲೇಳಲೊಲ್ಲಳು. ಆಗ ಶೀಲಾಳನ್ನು ಕರೆದು,

'ನೀನಾದರೂ ಕೇಳಿ ತಿಳಿದುಕೋ. ನಿನ್ನ ಬಳಿ ಸಂಕೋಚವಿಲ್ಲದೇ ಮಾತಾಡಬಹುದು' ಎಂದು ಹೇಳಿದೆ. ಶೀಲಾ ಅವಳ ರೂಮಿನಲ್ಲಿ ಗಂಟೆಗಟ್ಟಲೇ ಕೂತಿದ್ದಳು. ಅನಂತರ ಹೊರಗೆ ಬಂದ ಶೀಲಾ ಸಹ ಏನೂ ಹೇಳಲಿಲ್ಲ. ಅವಳ ಮುಖ ಪೆಚ್ಚಾಗಿತ್ತು. ಅವಳೂ ತುಂಬಾ ಚಿಂತಾಕ್ರಾಂತಳಾಗಿ ಕಂಡಳು. ನನಗೆ ಕಾಣದಂತೆ ಅವಳೂ ಅಳುತ್ತಿದ್ದಳು. ನನಗಂತೂ ಒಂದೂ ಅರ್ಥವಾಗಲೊಲ್ಲದು. ಎಷ್ಟೇ ಪ್ರಯತ್ನಿಸಿದರೂ ಇಬ್ಬರೂ ಬಾಯ್ಬಿಡಲಿಲ್ಲ. ಮನೆಯಲ್ಲಿ ಸ್ಮಶಾನಮೌನ. ಮಾಲತಿ ಬೆಳಿಗ್ಗೆ ಎರಡು ತುತ್ತು ಬಲವಂತಕ್ಕೆ ತಿಂದಿದ್ದಳು. ಈ ರಾತ್ರಿ ಇಬ್ಬರೂ ಊಟಕ್ಕೆ ಬರಲಿಲ್ಲ. ಇಬ್ಬರು ಮಕ್ಕಳೂ ಒಂದು ತುತ್ತು ತಿನ್ನದಿರುವಾಗ, ನಾನು ತಾನೆ ಹೇಗೆ ಊಟ ಮಾಡಲಿ, ರಾತ್ರಿಯೆಲ್ಲಾ ಛಡಪಡಿಕೆಯಲ್ಲೇ ಕಳೆಯಿತು. ಯಾರ ಮನಸ್ಸಿಗೂ ನೆಮ್ಮದಿ ಇಲ್ಲ. ಏಕಿರಬಹುದೆಂಬುದು ನಾನೆಷ್ಟು ಯೋಚಿಸಿದರೂ ಹೊಳೆಯಲಿಲ್ಲ. ನೆನ್ನೆಯಿಂದ ಶೀಲ ಸಹ ಏನೂ ಮಾತಾಡಲೊಲ್ಲಳು. ಬೆಳಗಾಯ್ತು. ಸ್ನಾನ ಪೂಜೆ ಮುಗಿಸಿ, ಅಲ್ಲೇ ಬಾಗಿಲಲ್ಲಿ ನಿಂತಿದ್ದೆ. ಪೋಸ್ಟ್‌ಮನ್ ಒಂದು ಲೆಟರ್ ಕೊಟ್ಟ, ಶೀಲಾಗೆ ಅವಳ ಗಂಡ ಬರೆದಿದ್ದರು. ನನ್ನ ಅಳಿಯಂದಿರೆಲ್ಲಾ ಅಷ್ಟೆ. ಒಬ್ಬರಿಗಿಂತ ಒಬ್ಬರು ಒಳ್ಳೆಯವರು. ಹೆಣ್ಣುಮಕ್ಕಳ ಬಗ್ಗೆ ಯಾವ

ಚಿಂತೆಯೂ ನಮಗಿಲ್ಲದಷ್ಟು ಪ್ರೀತಿಯಿಂದ ಇಟ್ಟುಕೊಂಡಿದ್ದಾರೆ. ಶೀಲಾ ಹೆರಿಗೆಗೆಂದು ಬಂದು ಹದಿನೈದು ದಿನಗಳಾಯ್ತು. ಆಗಲೇ ಐದಾರು ಪತ್ರ ಬರೆದಿದ್ದಾರೆ. ಈಕೆಗೂ ಅಷ್ಟೆ. ಮೂರು ಹೊತ್ತು ಗಂಡನದೇ ನೆನಪು. ನೆನ್ನೆಯಿಂದ ಬೇಜಾರು ಮಾಡಿಕೊಂಡಿದ್ದಾಳೆ. ಗಂಡನ ಪತ್ರ ನೋಡಿಯಾದರೂ ಸಂತೋಷಪಟ್ಟಾಳು, ಎಂದು.

'ಶೀಲಾ, ಬಾ ಇಲ್ಲಿ ಯಾರ ಪತ್ರ ಬಂದಿದೆ ನೋಡು' ಎಂದಾಗ ಉದಾಸೀನವಾಗಿಯೇ ಬಂದು ಪತ್ರ ಒಡೆದು ಓದಿದಳು. ಓದಿದವಳೇ ಪತ್ರ ನನ್ನ ಕೈಲಿಟ್ಟು ನನ್ನ ತಬ್ಬಿಕೊಂಡು ಅತ್ತುಬಿಟ್ಟಳು. ನನಗಂತೂ ಗಾಬರಿಯಾಗಿಬಿಟ್ಟಿತು. 'ದೇವರೇ ಅಳಿಯಂದಿರಿಗೆ ಏನೂ ಆಗದಿರಲಿ' ಎಂದುಕೊಳ್ಳುತ್ತಾ ಪತ್ರ ಓದಿದೆ.

ಪ್ರೀತಿಯ ಶೀಲಾ,

ನಾನು ಅಪರಾಧಿಯಾಗಿ ನಿನಗೀ ಪತ್ರ ಬರೆಯುತ್ತಿದ್ದೇನೆ. ನನಗೆ ಹೇಗೆ ಬರೆಯಬೇಕೋ ಗೊತ್ತಿಲ್ಲ. ನನಗೆ ದಿನಗಳೆಯುವುದು ಸಹಿಸಲಸಾಧ್ಯವಾಗಿತ್ತು. ದಿನಗಳೆದಂತೆ ನಿನ್ನನ್ನು ಯಾವಾಗ ನೋಡುತ್ತೇನೆಯೋ ಎನ್ನಿಸಿಬಿಟ್ಟಿತ್ತು. ದಿನ, ಕೆಲಸದಲ್ಲಿ ಹೇಗೋ ಕಳೆಯುತ್ತಿತ್ತು. ಆದರೆ ನಿನ್ನ ಚಿಂತೆಯಲ್ಲಿ ನಿದ್ದೆಯೇ ಹತ್ತುತ್ತಿರಲಿಲ್ಲ. ಆ ದಿನ ಶನಿವಾರ ನನಗೆ ಕಾಲೇಜಿಗೆ ಹೋಗಲೂ ಮನಸ್ಸು ಬರಲಿಲ್ಲ. ಸೀದಾ ಬಳ್ಳಾರಿಯ ಬಸ್ಸು ಹತ್ತಿದೆ. ದಾರಿಯುದ್ದಕ್ಕೂ ಅನಿರೀಕ್ಷಿತವಾಗಿ ಬಂದ ನನ್ನನ್ನು ನೋಡಿ ನೀನೆಷ್ಟು ಖುಷಿಗೊಳ್ಳಬಹುದು, ನನ್ನ ತೆಕ್ಕೆಯಲ್ಲಿ ಸಿಕ್ಕು ರೂಮಿನಿಂದ ಹೊರಗೇ ಹೋಗದ ನಿನ್ನನ್ನು ಕಂಡ ತಕ್ಷಣ ನಿನ್ನ ತಂಗಿ ಮಾಲತಿ ಹೇಗೆ ನಿನ್ನನ್ನು ಕಾಡಿಸಬಹುದು ಎಂದು ಏನೇನೋ ಯೋಚಿಸಿಕೊಳ್ಳುತ್ತಾ ಸಂಜೆ ಏಳರ ಹೊತ್ತಿಗೆ ಬಳ್ಳಾರಿಗೆ ಬಂದೆ. ಬಂದವನೇ ನಿನ್ನನ್ನು ಕಾಣುವ ಆತುರದಿಂದ ಮನೆಗೆ ಬಂದರೆ. ಮಾಲತಿ ಬಾಗಿಲು ತೆರೆದಳು. ನೀನೇ ಬರುವಿ ಎಂದುಕೊಂಡಿದ್ದ ನನಗೆ ನಿರಾಸೆಯಾಯ್ತು.

'ಶೀಲಾ ಎಲ್ಲಿ ಎಂದೆ.'

'ಅಮ್ಮ ಮತ್ತು ಶೀಲಾ ಸಿನಿಮಾಕ್ಕೆ ಹೋಗಿದ್ದಾರೆ' ಎಂದಳು.

ಮನೆಯಲ್ಲಿ ಮತ್ತ್ಯಾರಿದ್ದಾರೆ ಎಂದುದಕ್ಕೆ 'ಯಾರೂ ಇಲ್ಲ' ಎಂದಳು. ನಿನ್ನನ್ನೇ ಧ್ಯಾನಿಸಿಕೊಂಡು ಬಂದ ನನಗೆ ತುಂಬಾ ನಿರಾಸೆಯಾಗಿತ್ತು. ಆ ಕ್ಷಣದಲ್ಲಿ ಮಾಲತಿ ನಿನ್ನಂತೆಯೇ ಕಾಣಿಸತೊಡಗಿದಳು. ನನ್ನ ಪ್ರಾಣಿತನ ಜಾಗೃತವಾಯ್ತು. ವಿವೇಕ ಅಳಿಯಿತು. ವಿಚಾರ ಮಸಕಾಯಿತು. ನಾನು ನೀನು ಇಬ್ಬರೇ ಇದ್ದೀವೆಂಬ ಭಾವನೆಯಷ್ಟೇ ಮನಸ್ಸಿನಲ್ಲಿ ಪ್ರಬಲವಾಯಿತು. ನನ್ನ ದುರಾದೃಷ್ಟ ನನ್ನ ಮನಸ್ಸು

ನನ್ನ ಅಧೀನಕ್ಕೆ ಬಂದಾಗ, ವಿವೇಕ ಜಾಗೃತವಾದಾಗ, ನಾನಾಗಲೇ ಅಪರಾಧಿಯಾಗಿದ್ದೆ. ಆಗ ನನಗೆ ನಾನೆಂತಹ ತಪ್ಪು ಮಾಡಿದೆನೆಂಬ ಅರಿವಾಯ್ತು. ಮಾಲತಿಯ ಮುಖ ನೋಡುವ ಧೈರ್ಯ ಸಹ ನನಗಾಗಲಿಲ್ಲ. ಕೊಲೆ ಮಾಡಿದವನಿಗಾಗುವಂತಹ ಭಯ ನನ್ನನ್ನಾವರಿಸಿತು. ಟೈಂ ನೋಡಿದೆ. ಒಂಬತ್ತಾಗಲೇ ದಾಟಿತ್ತು. ಇನ್ನರ್ಧ ಗಂಟೆಯಲ್ಲಿ ನೀವುಗಳು ಸಿನಿಮಾದಿಂದ ಬರುವವರಿದ್ದಿರಿ. ನಿನ್ನನ್ನೇ ನೋಡಬೇಕೆಂದು ಊರಿಂದ ಬಂದ ನನಗೆ ನಿನ್ನನ್ನು ಕಾಣುವ ಮುಖವಾಗಲೀ, ಧೈರ್ಯವಾಗಲೀ ಉಳಿದಿರಲಿಲ್ಲ. ತಂದೆ-ತಾಯಿಗಳಂತಿರುವ ಅತ್ತೆ-ಮಾವಂದಿರನ್ನು ಇನ್ನು ಯಾವ ಮುಖವಿಟ್ಟುಕೊಂಡು ಮಾತಾಡಿಸಲಿ ಎನ್ನಿಸಿ, ಅಲ್ಲಿಂದ ಒಂದೇ ಉಸುರಿಗೆ ಸ್ಟೇಶನ್‌ಗೆ ಓಡಿಹೋಗಿ, ಊರ ದಾರಿ ಹಿಡಿದೆ.

ಶೀಲಾ ನಾನು ನಿನಗೆ ಮೋಸ ಮಾಡಿರುವೆ. ಮಾಲತಿಗೆ ಮಾಡಿರುವ ಅನ್ಯಾಯ ಹೇಗೆ ಸರಿಪಡಿಸಲು ಸಾಧ್ಯ. ಆ ವಿಷ ಘಳಿಗೆಯಲ್ಲಿ ನಾನು ಮೂರ್ಖನಾದೆ. ನನ್ನ ಬಗ್ಗೆಯೇ ನನಗೆ ಕೋಪ ಬರುತ್ತಿದೆ, ಅಸಹ್ಯವಾಗುತ್ತಿದೆ. ಅಪಮಾನದಿಂದ ನನ್ನ ಮನಸ್ಸೆಲ್ಲಾ ಜರ್ಝರಿತವಾಗಿದೆ. ನೀನು ಏನು ಶಿಕ್ಷೆ ಬೇಕಾದರೂ ಕೊಡು. ನನಗೆ ಯಾವ ಶಿಕ್ಷೆ ಕೊಟ್ಟರೂ ಕಡಿಮೆಯೆ. ಎಲ್ಲಾ ಶಿಕ್ಷೆಗಿಂತ ಈ ಪಶ್ಚಾತ್ತಾಪವೆಂಬ ಬೆಂಕಿ ನನ್ನನ್ನು ಜೀವಂತ ಸುಡುತ್ತಿದೆ. ನೀನು ಕ್ಷಮಿಸಿದರೆ ನಾನು ಉಳಿಯಬಲ್ಲೆ. ನಾನು ಅಂತಹ ಪಾಪಿಯಲ್ಲ. ಆದರೆ ಆ ಕ್ಷಣದಲ್ಲಿ ಪಶುವಿನಂತೆ ಹೇಗೆ ವರ್ತಿಸಿದೆನೋ ನನಗೆ ತಿಳಿಯದು.

ನನ್ನ ಮನದಳಲನ್ನು ತೋಡಿಕೊಂಡಿದ್ದೇನೆ. ಕ್ಷಮಿಸುವುದು ಬಿಡುವುದು ನಿನಗೆ ಸೇರಿದ್ದು.

ಇಂತು ನಿನ್ನ<br>
**ಅಪರಾಧಿ ಸುರೇಶ**

ಪತ್ರವನ್ನು ಓದಿದ ನನಗೆ ಬವಳಿ ಬಂದಂತಾಯ್ತು. ಮಾಲತಿಯ ಅಳುವಿನ ಕಾರಣ ತಿಳಿಯಿತು. ಅಸಹಾಯಕಳೂ ನಿರಪರಾಧಿಯೂ ಆದ ಮಾಲತಿಯ ಗತಿ ಏನು? ಮುಂದೆ ಅವಳ ಭವಿಷ್ಯ! ಮುಂದಿನ ವರ್ಷ ಅವಳ ಮದುವೆ ಮಾಡಬೇಕೆಂದು ಯಜಮಾನರು ಸಿದ್ಧತೆ ನಡೆಸುತ್ತಿದ್ದಾರೆ. ಇಂತಹವಳನ್ನು ಯಾರು ಮಾಡಿಕೊಳ್ಳುತ್ತಾರೆ. ನಾವು ಯಾವ ಮುಖವಿಟ್ಟು ಅವಳನ್ನು ತೋರಿಸಬೇಕು. ದೇವರೇ ನಮ್ಮ ಯಾವ ಅಪರಾಧಕ್ಕೆ ಇಂತಹ ಶಿಕ್ಷೆ ಅವಳಿಗೆ. ಅನ್ಯಾಯ ಮಾಡಿದ ವ್ಯಕ್ತಿಯನ್ನು ದಂಡಿಸುವಂತೆಯೂ ಇಲ್ಲ. ದೂರೀಕರಿಸುವಂತೆಯೂ ಇಲ್ಲ. ದುಡುಕಿದರೆ ಶೀಲಳ ಜೀವನವೂ ಹಾಳಾಗಬಹುದು. ಈಗಾಗಲೇ ಆಕೆಗೆ ತುಂಬಾ ನೋವಾಗಿದೆ. ನಾವೂ ಬೇಸರ ತೋರಿಸಿದರೆ ಮತ್ತಷ್ಟು ಸಮಸ್ಯೆಗೆ ಕಾರಣವಾಗುತ್ತದೆ ಎಂದು

ನುಂಗಲೂ ಆಗದೆ, ಉಗುಳಲೂ ಬಾರದೆ ದುಃಖವನ್ನೆಲ್ಲಾ ಅದುಮಿಕೊಂಡು ಶೀಲಳನ್ನು ಸಂತೈಸಿದೆ.

'ಆದದ್ದು ಆಗಿಹೋಯ್ತು ಶೀಲಾ, ಈಗ ಏನು ಮಾಡಿಯೂ ಸರಿಪಡಿಸುವಂತಿಲ್ಲ. ಮತ್ತಷ್ಟು ಸಮಸ್ಯೆ ಮಾಡಿಕೊಳ್ಳುವುದಕ್ಕಿಂತ ಈಗಿನ ಪರಿಸ್ಥಿತಿ ಹೇಗೆ ನಿಭಾಯಿಸಬೇಕೆಂದು ನೋಡೋಣ.'

'ಅಮ್ಮಾ ಅವರು ಅಂಥವರಲ್ಲಮ್ಮಾ. ನಮ್ಮ ದುರಾದೃಷ್ಟ. ದೈವ ಅಂತಹ ಪ್ರಸಂಗ ತಂದಿತು. ಅಂದು ನಾವು ಸಿನಿಮಾಕ್ಕೆ ಹೋಗದಿದ್ದರೆ ಈ ದುರಂತ ನಡೆಯುತ್ತಿರಲಿಲ್ಲ. ವಿಷ ಘಳಿಗೆ ದಾಟಿ ಹೋಗುತ್ತಿತ್ತು' ಎಂದು ಅವಳೂ ಪರಿಪರಿಯಾಗಿ ದುಃಖಿಸಿದಳು. ದಿನಗಳೆದಂತೆ ದುಃಖದ ವೇಗ ಕಡಿಮೆಯಾಗುತ್ತಾ ಹೋಯ್ತು. ಈ ವಿಷಯ ನಮ್ಮ ಮೂವರಲ್ಲೇ ಇತ್ತು. ಊರಿಂದ ಬಂದ ಯಜಮಾನರಿಗಾಗಲೀ ಮಗನಿಗಾಗಲೀ ಸೊಸೆಗಾಗಲೀ ತಿಳಿಸಲಿಲ್ಲ.

ಮೂರು ತಿಂಗಳ ನಂತರ ಒಂದು ಬೆಳಿಗ್ಗೆ ಮಾಲತಿ ಹಿತ್ತಲಲ್ಲಿ ವಾಂತಿ ಮಾಡುತ್ತಿದ್ದುದನ್ನು ನೋಡಿದಾಗ ಹೌಹಾರಿದೆ. ವಿಷಯ ನಾನು ಊಹಿಸಿದಂತೆಯೇ ಆಗಿತ್ತು. ಈಗ ಯಜಮಾನರಿಗೆ ತಿಳಿಸದೆ ವಿಧಿ ಇರಲಿಲ್ಲ. ಅವರ ಕಿವಿಗೆ ಬಿದ್ದಾಗ ಸಿಡಿಲೆರಗಿದಂತಾಯ್ತು ಅವರಿಗೆ ! ಹೇಗೋ ಸಾವರಿಸಿಕೊಂಡು ಮುಂದಿನದನ್ನು ವಿಚಾರಿಸತೊಡಗಿದೆವು. ಭ್ರೂಣಹತ್ಯೆ ಮಾಡುವ ಮನಸ್ಸು ಯಾರಿಗೂ ಬರಲಿಲ್ಲ.

ನಮ್ಮ ಎರಡನೆಯ ಮಗಳು ಉಷಾ ಗುಜರಾತಿನ ಸೂರತ್ತಿನಲ್ಲಿದ್ದಳು. ಅವಳ ಗಂಡ ಬ್ಯಾಂಕ್ ಮ್ಯಾನೇಜರ್‌ನಾಗಿದ್ದ. ದೂರದ ಸಂಬಂಧಿಕರು, ಪರಿಚಿತರು, ಯಾರೂ ಇಲ್ಲದ ಆ ಊರಿಗೆ ಕಳಿಸಿ ಮಾಲತಿಯ ಹೆರಿಗೆ ಮಾಡಿಸಿದರಾಯ್ತೆಂದು ಎಲ್ಲರೂ ನಿಶ್ಚಯಿಸಿದೆವು. ಹಾಗಾಗಿ ಮಾಲತಿ ಸೂರತ್‌ನಲ್ಲಿ ಅಕ್ಕನ ಮನೆಯಲ್ಲೇ ಇದ್ದಳು. ಅವಳಿಗಾಗಲೇ ಎಂಟು ತಿಂಗಳು ತುಂಬಿದಾಗ ಉಷಾನ ಮನೆಯ ಸಮೀಪದಲ್ಲೇ ಕರ್ನಾಟಕದವರೊಬ್ಬರು ಬಾಡಿಗೆಗೆ ಬಂದರಂತೆ. ಬೇರೆ ರಾಜ್ಯದಲ್ಲಿ ಕನ್ನಡಿಗರು ಒಂದೇ ಊರಿನಲ್ಲಿ, ಅದೂ ಒಂದೇ ಬೀದಿಯಲ್ಲಿ ಇರುವಾಗ ಪರಸ್ಪರ ಸ್ನೇಹ ವಿಶ್ವಾಸ ಬೆಳೆಯುವುದು ಸಹಜ. ಈಗಲೂ ಹಾಗೆ ಆಯ್ತು. ಉಷಾನ ಮನೆಗೆ ಹೊಸದಾಗಿ ಬಂದ ಆದಾಯ ತೆರಿಗೆಯ ಅಧಿಕಾರಿ ಮಂಜುನಾಥಯ್ಯನ ಹೆಂಡತಿ ರಾಧಮ್ಮ ಪರಿಚಯ ಮಾಡಿಕೊಳ್ಳಲು ಬಂದರು. ಆಗ ನಾನೂ ಅಲ್ಲೇ ಇದ್ದೆ. ಆಕೆ ಅಲ್ಲೇ ಇದ್ದ ನನ್ನನ್ನು ನೋಡಿ 'ಇವರ್‍ಯಾರು' ಎಂದಳು. ಉಷಾ 'ಇವರು ನಮ್ಮ ತಾಯಿ ಊರಿಂದ ಬಂದಿದ್ದಾರೆ. ಈಕೆ ನನ್ನ ಕೊನೆಯ ತಂಗಿ ಚೊಚ್ಚಲು ಬಸಿರು. ಏನೋ ಸ್ವಲ್ಪ ತೊಂದರೆ ಇದೆ. ಇಲ್ಲಿ ನನಗೆ ತುಂಬಾ

ಪರಿಚಿತವಾದ ಒಬ್ಬಲೇಡಿ ಡಾಕ್ಟರೊಬ್ಬರಿದ್ದಾರೆ. ಅದಕ್ಕಾಗಿ ಬಾಣಂತನಕ್ಕೆ ಇಲ್ಲೇ ಕರೆಸಿಕೊಂಡಿದ್ದೇನೆ' ಎಂದಳು.

'ಎಷ್ಟು ಒಳ್ಳೆ ಅಕ್ಕ ನೀವು. ಅವರ ಯಜಮಾನರು ಏನು ಮಾಡ್ತಿದ್ದಾರೆ?'

ಪ್ರಶ್ನೆ ಅನಿರೀಕ್ಷಿತರಾದರೂ ಉಷಾ ಜಾಣ್ಮೆಯಿಂದ 'ಕಾಲೇಜಿನಲ್ಲಿ ಉಪನ್ಯಾಸಕರಿದ್ದಾರೆ' ಎಂದಳು. ಆಗ ನಾನು ಮಾಲತಿಯ ಮುಖವನ್ನು ನೋಡಿದೆ. ಅವ್ಯಕ್ತ ನೋವಿನ ಚಿಂತೆಯ ಅಸಹಾಯಕ ಮುಖ ಮಾಡಿ ಕುಳಿತಿದ್ದಳು. ರಾಧಮ್ಮ ಅನೇಕ ಬಾರಿ ಚೊಚ್ಚಿಲು ಬಸುರಿ ಎಂದು ಬಗೆ ಬಗೆಯ ತಿಂಡಿ ಮಾಡಿ ತಂದು ಕೊಡುತ್ತಿದ್ದರು. ಹಾಸ್ಯ ಮಾಡುತ್ತಿದ್ದರು. ಆದರೆ ಚೊಚ್ಚಿಲ ಬಸುರಿಗಿರುವ ಆಕಾಂಕ್ಷೆಗಳಾಗಲೀ, ಉಲ್ಲಾಸವಾಗಲೀ, ಸಡಗರವಾಗಲೀ ಇಲ್ಲದ ಮಾಲತಿ ಈಕೆಯ ಮಾತುಗಳಿಂದ ಕಿರಿಕಿರಿಯಾದರೂ ತೋರಿಸಿಕೊಳ್ಳದೆ ನಗಲು ಪ್ರಯತ್ನಿಸುತ್ತಿದ್ದಳು. ಒಮ್ಮೆಯಂತೂ ರಾಧಮ್ಮ,

'ಯಾಕ್ರೀ ಮಾಲತಿ ನಿಮ್ಮ ಯಜಮಾನರು ಬರ್ಲ್ಲೇ ಇಲ್ಲ' ಎಂದಳು.

'ಅವರಿಗೆ ರಜಾ ಸಿಕ್ಕೋದು ಕಷ್ಟ. ಆದಷ್ಟು ಪ್ರಯತ್ನ ಮಾಡಿ ಮುಂದಿನ ತಿಂಗಳು ಬರ್ತೀನಂತ ಬರೆದಿದ್ದಾರೆ ಎಂದಳು. ಹೀಗೆ ಆಕೆಗೆ ಸಮಯಕ್ಕೆ ಸರಿಯಾಗಿ ಸುಳ್ಳು ಜೋಡಿಸಿಕೊಂಡು ಹೇಳಲು ಕಷ್ಟವಾಗುತ್ತಿತ್ತಾದರೂ ಹೇಳದೆ ವಿಧಿ ಇರಲಿಲ್ಲ.

ಒಂಬತ್ತು ತುಂಬಿತು. ಸೂರತ್‌ನ ಆಸ್ಪತ್ರೆಯೊಂದರಲ್ಲಿ ಹೆರಿಗೆಯಾಯ್ತು. ಮಗುವನ್ನು ಅಲ್ಲೇ ಇದ್ದ ಕ್ರೈಸ್ತರ ಅನಾಥ ಮಕ್ಕಳ ಸಂಸ್ಥೆಗೆ ಕೊಟ್ಟು, ಹನ್ನೊಂದನೆಯ ದಿನಕ್ಕೆ ಮಾಲತಿಯನ್ನು ಊರಿಗೆ ಕರೆದುಕೊಂಡು ಬಂದುಬಿಟ್ಟೆ. ಆಮೇಲೆ ಬಂದ ರಾಧಮ್ಮ 'ಯಾಕ್ರೀ ನಿಮ್ಮ ತಂಗಿಯನ್ನಾಗಲೇ ಕಳಿಸಿ ಬಿಟ್ಟಿದ್ದೀರಾ' ಎಂದರಂತೆ. ಆಗ ಉಷಾ 'ಅವರತ್ತೆ, ಯಜಮಾನರು ನೋಡಿಕೊಂಡು ಹೋಗಲು ಬಂದಿದ್ದರು. ಆಗ ಈ ಊರು ದೂರವಾಗುತ್ತದೆ. ಹೇಗಾದರೂ ಸುಖವಾಗಿ ಹೆರಿಗೆಯಾಯ್ತಲ್ಲ, ಕರ್ನಾಟಕಕ್ಕೆ ಕರೆದುಕೊಂಡು ಹೋಗಿಬಿಡೋಣ, ಎಂದರು. ಅದಕ್ಕೆ ನನ್ನ ತಾಯಿ ಅವರೊಂದಿಗೇ ಮಗೂ ಬಾಣಂತಿಯನ್ನೂ ಕರೆದುಕೊಂಡು ಹೋಗಿಬಿಟ್ಟರು' ಎಂದಳಂತೆ.

ಹೇಗೋ ಕಷ್ಟಪಟ್ಟು, ಕಷ್ಟದಿಂದ ಪಾರಾಗಿ ನಮ್ಮ ಊರು ಸೇರಿದೆವು. ಇದೆಲ್ಲಾ ಮನಸ್ಸಿನಿಂದ ದೂರವಾಗುತ್ತಾ ಹೋದಂತೆ ಮಾಲತಿಯ ವಿವಾಹದ ಬಗ್ಗೆ ಯೋಚಿಸತೊಡಗಿದೆವು. ನಮ್ಮ ಮಕ್ಕಳೆಲ್ಲಾ ಚೆನ್ನಾಗಿದ್ದರು. ಒಬ್ಬರಿಗಿಂತ ಒಬ್ಬರು ಸುಖವಾಗಿ ಸಂಸಾರ ಮಾಡುತ್ತಿದ್ದರು. ಹೀಗಾಗಿ ಅನೇಕರು ನಮ್ಮ

ಸಂಬಂಧ ಬೆಳೆಸಲು ಇಷ್ಟಪಟ್ಟು ಬರುತ್ತಿದ್ದರು. ಮುಂದಿನ ಒಂದು ವರ್ಷದೊಳಗಾಗಿ ಅನಂತಪುರದ ಅನಂತಯ್ಯನವರ ಮಗ ಹರೀಶನೊಂದಿಗೆ ಮಾಲತಿಯ ಮದುವೆಯಾಯಿತು. ಬೀಗರು ತುಂಬಾ ಒಳ್ಳೆಯವರು. ಅವರು ವರದಕ್ಷಿಣೆ ಸಹ ಕೇಳಲಿಲ್ಲ. ಹುಡುಗನಂತೂ ಗುಣ, ರೂಪ, ವಿದ್ಯೆ ಎಲ್ಲದರಲ್ಲಿಯೂ ಉತ್ತಮನಾದವನು. ಬಂಧುಗಳೆಲ್ಲಾ ಹುಡುಗನನ್ನು ನೋಡಿ 'ನಿಮ್ಮ ಪುಣ್ಯಕ್ಕೆ ಎಣೆ ಇಲ್ಲ. ಇಷ್ಟು ಒಳ್ಳೆಯ ಜನ. ಹುಡುಗ ಎಷ್ಟು ಚೆನ್ನಾಗಿದ್ದಾನೆ' ಎಂದು ಹೊಗಳಿದ್ದೇ ಹೊಗಳಿದ್ದು. ಇದೆಲ್ಲಾ ನಮಗೂ ಸಂತೋಷವೆನಿಸಿದರೂ ಒಳಗೆ ಮನಸ್ಸಿನಲ್ಲಿ ಒಂದು ರೀತಿಯ ಅಳುಕು, ಸಂಕೋಚ. ಆದರೆ ಪುಣ್ಯವಶಾತ್ ಯಾವ ರೀತಿಯ ತೊಂದರೆಯೂ ಆಗದೆ ಎಲ್ಲಾ ಸುಸೂತ್ರವಾಗಿ ನೆರವೇರಿತು. ಮಗಳನ್ನು ಗಂಡನ ಮನೆಗೆ ಕರೆದುಕೊಂಡು ಹೋದರು. ಬೀಗರು ತಮ್ಮ ಏಕಮಾತ್ರ ಪುತ್ರನ ಹೆಂಡತಿಯನ್ನು ಮಗನಷ್ಟೇ ಪ್ರೀತಿಸುತ್ತಿದ್ದರು. ತವರುಮನೆಗೆ ಸಹ ಹೆಚ್ಚಾಗಿ ಕಳಿಸುತ್ತಿರಲಿಲ್ಲ. ಅವಳೂ ಕೂಡ ಸುಖವಾಗಿದ್ದುದರಿಂದ ನಾವು ಆಕೆ ತವರಿಗೆ ಹೆಚ್ಚು ಬರುವುದಿಲ್ಲವೆಂದೂ ಚಿಂತಿಸುತ್ತಿರಲಿಲ್ಲ. ಹೀಗಾಗಿ ನಮ್ಮಗಳೆಲ್ಲರಿಗೆ ಆ ವಿಷ ಘಳಿಗೆಯಲ್ಲಿ ನಡೆದ ಘಟನೆ ಮನಸ್ಸಿನಿಂದ ಈಗೀಗ ಮಾಸಿ ಹೋಗಿತ್ತು.

ಒಂದು ವಾರದ ಹಿಂದೆ ತಾನೆ ನಾನು ಅವಳನ್ನು ಹೆರಿಗೆಗೆ ಕರೆದುಕೊಂಡು ಬರಬೇಕೆಂದು ಹೋದಾಗ ಅವರತ್ತೆ, ಇನ್ನೂ ಒಂದು ತಿಂಗಳು ನಮ್ಮ ಮನೆಯಲ್ಲೇ ಇರಲಿ. ಮುಂದಿನ ತಿಂಗಳು ಕರೆದುಕೊಂಡು ಹೋಗುವಿರಂತೆ' ಎಂದರು. ಅವರು ಅಷ್ಟೊಂದು ಪ್ರೀತಿಯಿಂದ ಸೊಸೆಯನ್ನು ಇಟ್ಟುಕೊಂಡುದನ್ನು ನೋಡಿ, ನಾನು ಒತ್ತಾಯಿಸದೆ ಹಾಗೆ ಬಂದುಬಿಟ್ಟೆ. ಆದರೆ ಈ ಒಂದು ವಾರದಲ್ಲಿ ಏನು ಗಂಡಾಂತರವಾಯ್ತು. ಈ ದುರಂತಕ್ಕೆ ಕಾರಣವೇನು ಎಂದು ವಿಶಾಲಮ್ಮ ದುಃಖ ಹಾಗೂ ಚಿಂತೆಯಲ್ಲಿ ಮುಳುಗಿದರು.

ಅಷ್ಟರಲ್ಲಿ ಪೊಲೀಸರು ಶವಪರೀಕ್ಷೆ ಮುಗಿಸಿ ಶವವನ್ನು ವ್ಯಾನಿನಲ್ಲಿ ತಂದು ಮನೆಯಲ್ಲಿಟ್ಟಿದ್ದರು. ಗಂಡನ ಮನೆಯಿಂದ ಹೆರಿಗೆಗಾಗಿ ಸಂಭ್ರಮದಿಂದ ಬರಬೇಕಾಗಿದ್ದ ಬಸುರಿಯಾದ ಮಗಳು ಶವವಾಗಿ ಬಂದುದನ್ನು ನೋಡಿ ವಿಶಾಲಮ್ಮನವರ ಕರುಳು ಕತ್ತರಿಸಿದಂತಾಯ್ತು. ಯಾವ ಪಾಪವನ್ನೂ ಕಾಣದೆ, ಯಾವ ಅಪರಾಧವನ್ನು ಮಾಡದೆ ಶಿಕ್ಷೆಗೊಳಗಾದ ಮಗಳ ದುರಂತ ಜೀವನ, ಆಕೆಯ ಹೃದಯಕ್ಕೆ ಅತೀವ ನೋವನ್ನುಂಟು ಮಾಡಿತು. ಹೀಗಾಗಲು ಕಾರಣವೇನು? ಹೀಗೆ ಹೇಗಾಯ್ತು ಎಂಬುದು ಗೊತ್ತಿಲ್ಲದ ಮನಸ್ಸು ತಳಮಳಿಸುತ್ತಿದ್ದರೂ ಗಂಡನ ಮನೆಯವರೊಬ್ಬರ ಸುಳಿವೂ ಇಲ್ಲದಿರುವುದು ಅನಂತಪುರದ ರೈಲ್ವೆ ಸ್ಟೇಷನ್‌ನಲ್ಲೇ ಮಗಳು ಆತ್ಮಹತ್ಯೆ ಮಾಡಿಕೊಂಡಿರುವುದನ್ನೂ

ಪತ್ರದಲ್ಲಿ ಗಂಡನ ಮನೆಯವರ ಬಗ್ಗೆ ಏನೂ ಬರೆಯದಿರುವುದನ್ನು ನೋಡಿದರೆ ಮಗಳು ಮೊದಲು ಗರ್ಭಿಣಿಯಾದ ವಿಷಯ ಗಂಡನ ಮನೆಯವರಿಗೆ ಗೊತ್ತಾಗಿರಬೇಕೆಂಬುದರಲ್ಲಿ ಅವರಿಗೆ ಸಂಶಯ ಉಳಿಯಲಿಲ್ಲ. ಹಾಗಾಗಿ ಗಂಡನ ಮನೆಯವರಿಗೆ ಈ ಬಗ್ಗೆ ತಿಳಿಸುವ ಧೈರ್ಯವಾಗಲಿಲ್ಲ. ಮನೆಯವರೆಲ್ಲಾ ಒಳಗೊಳಗೇ ದುಃಖದಿಂದ ಕುದಿಯುತ್ತಿದ್ದರು. ಮಗಳು ಸತ್ತ ದುಃಖ ಒಂದು ಕಡೆಯಾದರೆ. ಈ ದುರಂತದ ಸಾವಿನಿಂದಾದ ಅವಮಾನ ಬೇರೆ. ನೆರೆಯವರು, ಪರಿಚಿತರು ಮನೆತುಂಬಾ ನಾನಾ ವಿಧವಾದ ಪ್ರಶ್ನೆ ಕೇಳಿದರೆ ಅವರಿಗೆಲ್ಲಾ ಅಳುವುದೊಂದೇ ಉತ್ತರ. ಜನರು ತಮ್ಮ ಮನಸ್ಸಿನಗೆ ಬಂದಂತೆ, ಮನಸ್ಸಿಗೆ ಅನ್ನಿಸಿದಂತೆ ಮಾತಾಡಿಕೊಳ್ಳುತ್ತಾ ಕೆಲವರು ದುಃಖಿತರನ್ನು ಸಂತೈಸುತ್ತಾ, ಮತ್ತೆ ಕೆಲವರು ತಮ್ಮೊಳಗೆ ಗುಸುಗುಟ್ಟುತ್ತಾ ಇದ್ದರು. ಶವವನ್ನು ಬಹಳ ಹೊತ್ತು ಇಡುವಂತಿರಲಿಲ್ಲ. ಎಲ್ಲರೂ ಕೂಡಿ ಸಂಜೆಯ ಒಳಗೆ ಸಂಸ್ಕಾರ ಮಾಡಿ ಬಂದರು.

ಎಲ್ಲರೂ ಹೇಗೂ ದುಃಖ ನುಂಗಿಕೊಂಡರೂ ತಾಯಿಯ ಹೃದಯಕ್ಕೆ ಸಮಾಧಾನವಿರಲಿಲ್ಲ. ಏಕೆ ಹೀಗಾಯ್ತು ಎಂದು ಕಾರಣ ತಿಳಿದುಕೊಳ್ಳದೆ ಮನಸ್ಸು ಛಡಪಡಿಸುತ್ತಿತ್ತು. ಒಮ್ಮೊಮ್ಮೆ 'ಈಗೆಲ್ಲಾ ಮುಗಿದು ಹೋಗಿದೆ, ಈಗ ಕಾರಣ ತಿಳಿದಾದರೂ ಆಗುವುದೇನಿದೆ' ಎಂದುಕೊಳ್ಳುವರು. ಆದರೂ ನೆಮ್ಮದಿ ಇಲ್ಲದೆ' ಒಮ್ಮೆ ಅನಂತಪುರಕ್ಕೆ ಹೋಗಿ ಮಾಲತಿ ಗಂಡನ ಮನೆಗೆ ಹೋಗಿ ಬರಲೆ' ಎಂದುಕೊಳ್ಳುವರು. ಮತ್ತೆ 'ಈಗ ನಮ್ಮದೆನ್ನುವುದು ಅಲ್ಲಿ ನಮಗೇನಿದೆ? ಅವರಿಗೂ ನಮಗೂ ಇನ್ನೇತರ ಸಂಬಂಧ' ಎಂದು ಸುಮ್ಮನಾಗುವರು. ಆದರೂ ಮನಸ್ಸಿಗೆ ಸಮಾಧಾನವಾಗದೆ ಒಂದು ದಿನ ಮಗನನ್ನು ಕರೆದು ವಿಶಾಲಮ್ಮ, 'ರವೀ, ನನಗೆ ಮಾಲತಿ ಏಕೆ ಹೀಗೆ ಮಾಡಿಕೊಂಡಳು ಅನ್ನೋದು ತಿಳಿಯದೇ ಸಮಾಧಾನವೇ ಆಗ್ತಾ ಇಲ್ಲಪ್ಪ. ಅನಂತಪುರಕ್ಕೆ ಅವರ ಅತ್ತೆ ಮನೆಗೆ ಹೋಗಿ ಬರ್ತೀಯಾ' ಎಂದರು.

'ಈಗ ಹೋಗೋದ್ರಿಂದ, ವಿಷ್ಯ ತಿಳ್ಕೊಳ್ಳೋದ್ರಿಂದ ಆಗೋ ಪ್ರಯೋಜನ ಏನಿದ್ಯಮ್ಮ. ಆದರೂ ನಿನ್ನ ಸಮಾಧಾನಕ್ಕೆ ಇವತ್ತು ಸಂಜೆ ರೈಲಿಗೆ ಹೋಗಿ ಬರ್ತೀನಿ' ಎಂದವನು ಸಂಜೆ ಹೊರಟೇಬಿಟ್ಟ. ರಾತ್ರಿಯೆಲ್ಲ ವಿಶಾಲಮ್ಮನಿಗೆ ನಿದ್ರೆ ಹತ್ತಲಿಲ್ಲ.

ರವಿಯನ್ನು ನೋಡಿದ್ದೇ ತಡ ಮಾಲತಿಯ ಅತ್ತೆ ಬಾಗಿಲಲ್ಲೇ ನಿಲ್ಲಿಸಿಕೊಂಡು 'ನಿನ್ಗೆ ಮತ್ತೆ ನಮ್ಮನೆ ಬಾಗಿಲಿಗೆ ಬರೋಕೆ ನಾಚ್ಗೆ ಆಗೋಲ್ವೆ? ನಮ್ಮ ಮನೆ ಗೌರವ ಹಾಳ್ಮಾಡಿದ್ರಿ. ನಮ್ಮ ಮಗನ ಸುಖಕ್ಕೆ ಕಲ್ಲು ಹಾಕಿದ್ರಿ. ನಡತೆ ಇಲ್ಲದ ಹುಡ್ಗೀನ ನನ್ಮಗನ ಕೊರಳಿಗೆ ಕಟ್ಟಿ ಮೋಸ ಮಾಡಿದ್ರಿ' ಎಂದು ಬಾಯಿಗೆ ಸಿಕ್ಕಹಾಗೆ

ಮಾತನಾಡಿದಾಗ, ರವಿ ಒಂದೂ ತಿಳಿಯದೆ ಊರಿಗೆ ಹಿಂದಿರುಗಿ ತಾಯಿಗೆ ವಿಷಯವನ್ನೆಲ್ಲಾ ವಿವರಿಸಿದಾಗ ವಿಶಾಲಮ್ಮಗೆ ತಾವು ಅಂದುಕೊಂಡಂತೆ ಮಾಲತಿ ವಿವಾಹದ ಮೊದಲೇ ಗರ್ಭಿಣಿಯಾಗಿದ್ದ ವಿಷಯ ಅವಳ ಅತ್ತೆಯ ಮನೆಯವರಿಗೆ ತಿಳಿದುದೇ ಆಕೆಯ ಜೀವನ ದುರಂತವಾದುದಕ್ಕೆ ಕಾರಣವೆಂದು ಖಚಿತವಾಯ್ತು. ಇಷ್ಟು ದಿನಗಳ ಮೇಲೆ ಅವರಿಗೆ ವಿಷಯ ಹೇಗೆ ಗೊತ್ತಾಯ್ತು ಎಂದು ಯೋಚಿಸಿದರೂ ರಹಸ್ಯ ಬಯಲಾಗಲಿಲ್ಲ.

ಮಾಲತಿ ತೀರಿ ಹೋಗಿ ಆಗಲೇ ಮೂರು ತಿಂಗಳಾಗಿತ್ತು. ಹೆಣ್ಣುಮಕ್ಕಳೆಲ್ಲಾ ಬಂದು ತಾಯಿಗೆ ಸಮಾಧಾನ ಹೇಳಿ ಹೋಗಿದ್ದರು. ಅಲ್ಲದೆ ಎಲ್ಲರೂ ವಾರಕ್ಕೊಮ್ಮೆಯಾದರೂ ತಾಯಿಯ ದುಃಖ ಕಡಿಮೆ ಮಾಡಲು ಸಾಂತ್ವನದ ಪತ್ರ ಬರೆಯುತ್ತಿದ್ದರು. ಒಂದು ದಿನ ವಿಶಾಲಮ್ಮ ಒಬ್ಬರೇ ಮಾಲತಿಯ ಬಗೆಗೆ ಚಿಂತಿಸುತ್ತಾ ಮುಂದಿನ ವರಾಂಡದಲ್ಲಿ ಕುಳಿತಿದ್ದರು. ಪೋಸ್ಟ್‌ಮನ್ ಲಕೋಟೆಯನ್ನು ತಂದುಕೊಟ್ಟ. ಅಡ್ರೆಸ್ ನೋಡುತ್ತಿದ್ದಂತೆಯೇ ಸೂರತ್‌ನಿಂದ ಉಷಾ ಬರೆದಿದ್ದಾಳೆಂದು ತಿಳಿಯಿತು. ಈಗ ಅವರಿಗೆ ಸ್ವಲ್ಪ ನೆಮ್ಮದಿ ಕೊಡುತ್ತಿದ್ದುದೆಂದರೆ ಮಕ್ಕಳ ಪತ್ರಗಳು. ಆತುರದಿಂದ ಲಕೋಟೆಯೊಡೆದು ಪತ್ರ ಬಿಡಿಸಿ ಓದಿದರು.

ಪ್ರೀತಿಯ ಅಮ್ಮಾ,

ನಿನಗೆ ಮಾಲತಿ ಆತ್ಮಹತ್ಯೆ ಮಾಡಿಕೊಂಡ ಕಾರಣ ತಿಳಿಯದೆ ಧಡಪಡಿಕೆಯಾಗಿದೆ ಅಲ್ಲವೆ? ನಮಗೆಲ್ಲಾ ಅದು ಗೊತ್ತಾಗುವುದು ಸಾಧ್ಯವೇ ಇಲ್ಲ ಎನ್ನಿಸಿತ್ತು. ಆದರೆ ನೆನ್ನೆ ತವರು ಮನೆಯಿಂದ ಬಂದ ರಾಧಮ್ಮನಿಂದ ವಿಷಯಗಳೆಲ್ಲಾ ತಿಳಿದವು. ರಾಧಮ್ಮನ ತಂದೆಗೆ ಅನಂತಪುರಕ್ಕೆ ವರ್ಗವಾಗಿತ್ತು. ಹೆರಿಗೆಗೆಂದು ಅಲ್ಲಿಗೇ ಹೋಗಿದ್ದರು. ಅವರ ತಂದೆ ಮಾಲತಿಯ ಅತ್ತೆಯ ಮನೆಯ ಪಕ್ಕದ ಮನೆಯಲ್ಲೇ ಬಾಡಿಗೆ ಇದ್ದರಂತೆ. ಈಕೆ ಅವರ ಅತ್ತೆಯ ಮನೆಗೆ ಹೋದಾಗ ಮಾಲತಿಯನ್ನು ನೋಡಿ ಪ್ರೀತಿಯಿಂದ ಮಾತನಾಡಿಸಿದಳಂತೆ. ಆಗ ಅವರ ಅತ್ತೆ ಈಗೆ ನಿಮಗೆ ಹೇಗೆ ಗೊತ್ತು ಎಂದಾಗ, ರಾಧಮ್ಮ ಮೊದಲ ಹೆರಿಗೆಗೆಂದು ಸೂರತ್‌ನಲ್ಲಿ ಅವರ ಅಕ್ಕನ ಮನೆಗೆ ಬಂದಾಗ ನೋಡಿದ್ದೆ ಎಂದರಂತೆ 'ಈಕೆಗೆ ಇದೇ ಚೊಚ್ಚಲು. ಮದುವೆಯಾಗಿ ಇನ್ನೂ ಎರಡು ವರ್ಷ ತುಂಬಿಲ್ಲ' ಎಂದಾಗ, ಏನೂ ಗೊತ್ತಿಲ್ಲದ ರಾಧಮ್ಮ, ಏನ್ರಿ ಹೀಗಂತೀರ ಮಗುವನ್ನು ನೋಡಲು ಬಂದವರು ಹನ್ನೊಂದನೆ ದಿನಕ್ಕೇ ಊರಿಗೆ ಕರೆದುಕೊಂಡು ಹೋಗಿಬಿಟ್ಟರಂತೆ. ಇದ್ದಕ್ಕಿದ್ದಂತೆ ಹೋದುದರಿಂದಹೊರಡುವ ಮುನ್ನ ಮಾಲತಿಯನ್ನು, ಮಗವನ್ನು ನೋಡಲು ಆಗಲೇಇಲ್ಲ' ಎಂದಾಗ, ಅವರ ಅತ್ತೆ,

'ಏನು ಮಾಲತಿ ಇವರು ಹೇಳುತ್ತಿರುವುದು ನಿಜವೇ? ಇದೇನು ಸಮಾಚಾರ

ಎಂದು ಗಾಬರಿಯಾಗಿ ಮಾಲತಿಯನ್ನೇ ಕೇಳಿದಾಗ ಆಕೆ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳಂತೆ.

ಆಮೇಲೆ ಮನೆಯುವರೆಲ್ಲಾ ಅವಳಿಗೆ ತುಂಬಾ ನೋಯುವಂತೆ ಮಾತನಾಡಿದರಂತೆ. ಆಗ ಮಾಲತಿಯ ಗಂಡ 'ಯಾಕಮ್ಮಾ ಸುಮ್ಮನೆ ರಾದ್ಧಾಂತ ಮಾಡುತ್ತೀರ ನಾನೆಲ್ಲಾ ವ್ಯವಸ್ಥೆ ಮಾಡುತ್ತೇನೆ' ಎಂದು ಹೇಳಿದವನೇ ಮಾಲತಿಗೆ 'ನಿನ್ನ ಬಟ್ಟೆ ಬರೆ ಎಲ್ಲವನ್ನೂ ಕಟ್ಟಿಕೋ' ಎಂದು ಹೇಳಿ ಆಕೆಯ ಸಾಮಾನಿನೊಡನೆ ಆಕೆಯನ್ನು ಸ್ಟೇಶನ್‌ಗೆ ಕರೆದುಕೊಂಡು ಹೋಗಿ,

'ನಿಮ್ಮ ಊರಿಗೆ ನೀನು ಹೋಗಿಬಿಡು. ಮತ್ತೆಂದೂ ಹಿಂತಿರುಗಿ ಬರಬೇಡ' ಎಂದು ಹೇಳಿ ಮನೆಗೆ ಬಂದುಬಿಟ್ಟನಂತೆ. ನಂತರ ಅವರಿಗೆಲ್ಲಾ ಆಕೆ ರೈಲಿಗೆ ಸಿಕ್ಕು ಸತ್ತದ್ದು ಗೊತ್ತಾದರೂ ತುಟಿಪಿಟಕೆನ್ನಲ್ಲಿಲ್ಲವಂತೆ. ರಾಧಮ್ಮಾ ಈ ವಿಷಯವನ್ನೆಲ್ಲಾ ಹೇಳಿ ನಾನೇ ಮಾಲತಿಯ ದುರಂತ ಜೀವನಕ್ಕೆ ಕಾರಣಳಾದೆ ಎಂದು ತುಂಬಾ ದುಃಖಪಟ್ಟರು.

ಅಮ್ಮಾ, ದುರ್ವಿಧಿ ಈ ರೀತಿಯಲ್ಲಿ ಏನೊಂದೂ ತಪ್ಪು ಮಾಡದ ಮಾಲತಿಗೆ ಅನ್ಯಾಯ ಮಾಡಬಾರದಿತ್ತು. ರಾಧಮ್ಮನ ರೂಪದಲ್ಲಿ ಮಾಲತಿಯ ದುರಾದೃಷ್ಟ ಕಾಡುತ್ತದೆಯೆಂದು ಯಾರು ಬಗೆದಿದ್ದರು? ಪಾಪ ಆಕೆಯ ಜೀವನದಲ್ಲಿ ಎಲ್ಲವೂ ಅನಿರೀಕ್ಷಿತವಾಗಿ ನಡೆದು, ತನ್ನದಲ್ಲದ ತಪ್ಪಿಗಾಗಿ ಶಿಕ್ಷೆ ಅನುಭವಿಸುವಂತಾಯ್ತು. ಆದರೆ ಏನು ಮಾಡುವುದು ಎಲ್ಲಾ ವಿಧಿಯ ಕೈವಾಡ. ನಮ್ಮ ಕೈಲಿ ಏನೂ ಇಲ್ಲ. ಈ ವಿಷಯ ನೀನು ತಿಳಿಯದವಳೇನಲ್ಲ. ಮನಸ್ಸಿಗೆ ಸಮಾಧಾನ ತಂದುಕೋ. ವಯಸ್ಸು ಹೋದ ಕಾಲದಲ್ಲಿ ನೀನು ಹೀಗೆ ವ್ಯಥೆಪಟ್ಟು ಆರೋಗ್ಯ ಕೆಡಿಸಿಕೊಳ್ಳಬೇಡ,

ಇಂತಿ ನಿನ್ನ ಪ್ರೀತಿಯ ಮಗಳು,

ಉಷಾ

ಪತ್ರವನ್ನು ಓದುತ್ತಿದ್ದ ವಿಶಾಲಮ್ಮನವರ ಕಣ್ಣಿನಿಂದ ನೀರು ಧಾರಾಕಾರವಾಗಿ ಸುರಿಯುತ್ತಿತ್ತು. ದುಃಖವನ್ನು ಒಳಗೇ ನುಂಗಿಕೊಂಡು, ಕೊರಳುಬ್ಬಿ ಬಿಗಿದು ಬಂತು. ಬಂದ ದುಃಖವನ್ನು ತಾಳಲಾರದೆ ಬಿಕ್ಕಳಿಸುತ್ತಾ ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡರು.

■

# ೮. ಬೇರೊಂದು ಮರವೆರಡು

**ತಾಯಿ**

ಈ ಪಾರ್ವತೆವ್ವ ಎಲ್ಲಿ ಹೋದ್ಲು? ಒಂದು ವಾಟೆ ನೀರು ಕೊಡು ಅಂತ ಕೇಳಿ ಅರ್ಧ ಗಂಟೆಯ ಮೇಲಾಯಿತು. ಗಂಟ್ಲೆಲ್ಲಾ ಒಣ್ಗಿ ಗಾರಾಗ್ತಾ ಐತಿ. ಇದೆಂಥ ರೋಗ ಗಂಟುಬಿತ್ತೋ ಏನೋ, ಈಗೆರಡು ವರ್ಷದ ಮೇಲಾತು. ಕಣ್ಣೂ ಮಬ್ಬಾದ್ವು, ಆದ್ರೂ ಹೆಂಗೋ ನಿಭಾಯ್ಸಿಕೊಂಡು ಹೋಗ್ತಿದ್ದೆ. ಮೂವತ್ತು ವರ್ಷದಿಂದ ಇದ್ದ ಮನೆ. ಕಣ್ಣು ಕಾಣದಿದ್ರೂ ಗುರ್ತಿನ ಮೇಲೆ ಎಲ್ಲಿಬೇಕಾದ್ರೂ ಹೋಗಿ ಏನ್ಬೇಕಾದ್ರೂ ತಗೋತಿದ್ದೆ. ಈಗಾರು ತಿಂಗಳಿಂದ ಕಾಲೂ ಹೋಗ್ಬೇಕೆ? ಏಳಾಕೆ ಸೊಂಟದಾಗೂ ತ್ರಾಣ ಇಲ್ಲ. ಕಾಲಂತೂ ಬರೋ ಹಂಗೇ ಇಲ್ಲ. ಹಿಂಗಾಗಿ ಪೂರ್ತಿ ಪರವಾಲಂಬಿ ಆಗ್ಬಿಟ್ಟೀನಿ. ಈ ಪಾರ್ವತೆವ್ವಾ ನನ್ನ ಹಿರೇಮಗನ ಲಗ್ನಕ್ಕೆ ಬಂದೋಳು, ನನಗೆ ಜಡ್ಡಾಗಿ ಮಲ್ಗಿದ್ಮೇಲೆ ನನ್ಸೇವಾ ಮಾಡ್ಕೊಂಡು ಇಲ್ಲೇ ಉಳುದ್ಬಿಟ್ಳು. ಮೊದಮೊದ್ಲೇನೋ ಭಾಳ ಪ್ರೀತಿಯಿಂದನೇ ಎಲ್ಲಾ ಮಾಡ್ತಿದ್ಲು. ಆದ್ರೆ ನನ್ನ ಕಾಲು ಹೋದಾಗ್ನಿಂದ ಬದ್ಲೀನೇ ಆಗ್ಬಿಟ್ಟಿದ್ದಾಳೆ. ಕೈತುಂಬಾ ಪಗಾರ ಕೊಡ್ತೀವಿ. ಆಕೀಗೆ ನಾನ್ಯಾವುದಕ್ಕೂ ಕಡಿಮೆ ಮಾಡಿಲ್ಲ. ಯಾರೂ ಸಹಾಯಕ್ಕಿಲ್ದಾಗ ಬಂಧುಗಳು ಬಂದ್ಹಾಂಗೆ ಬಂದು ಮಾಡಿದ್ಲು. ಅಂಥಾಕೀನ ನಾನು ಮರ್ಯೋ ಹಂಗಿಲ್ಲ. ಆದ್ರೆ ಈಗೆರಡು ವರ್ಷದಿಂದ ಆಕಿ ಬದಲಾಗಿಬಿಟ್ಟಾಳೆ. ನನಗೀಗ ಯಾವ ಸಾಮಾನಿದಾವೋ ಯಾವಿಲ್ವೋ ಒಂದೂ ಗೊತ್ತಾಗೋ ಹಂಗಿಲ್ಲ. ಮೊದಲು ಕಣ್ಣಿಲ್ದಿದ್ರು ಮನೆ ತುಂಬಾ ಓಡಾಡ್ತಿದ್ದೆ. ಮುಟ್ಟಿ ನೋಡಿದ್ರೆ ಏನಿಲ್ಲ. ಏನೈತಿ ಅಂತೆ ಗೊತ್ತಾಗ್ತಿತ್ತು. ಆದ್ರೆ ಈ ಕಾಲು ಹೋದಾಗ್ನಿಂದ ಆಕೆ ಕೈಗೊಂಬೆಯಾಗೀನಿ. ಆಕೆ ಬಿಟ್ರೆ ನನಗೆ ಬ್ಯಾರಿನ್ನಾರೂ ಗತೀನೇ ಇಲ್ಲ. ಎರಡು ಹೊತ್ತು ಗಂಜಿಯಾದ್ರೂ ಕಾಣಿಸ್ತಾಳೆ. ಯಾವ ಜನ್ಮದ ಋಣಾನೋ ಅವ್ಳಾದ್ರೂ ಇದಾಳಲ್ಲ. ಇಲ್ದಿದ್ರೆ ನಾನ್ಪಾಡು ಏನಾಗ್ತಿತ್ತು. ಜಳಕಕ್ಕೆ ಹೋಗ್ಬೇಕಾದ್ರೂ ಸಂಡಾಸ್‌ಗೆ ಹೋಗ್ಬೇಕಾದ್ರೂ ಆಕೀನ ಬೇಕು. ಹಿಂಗಾಗಿ ಆಕಿ ಏನ್ಮಾಡಿದ್ರೂ ಸಹನಾ ಮಾಡ್ಕೊಳ್ಳೋಕೇಬೇಕು. ನನಗೇನು ರೊಕ್ಕಕ್ಕೆ ತ್ರಾಸಿಲ್ಲ. ಎಷ್ಟು ತಿಂದರೂ ಸವೀದಷ್ಟು ಯಜಮಾನರು ನನ್ನ ಹೆಸರೀಲಿ ಮಾಡಿ ಹೊಗ್ಯಾರೆ. ಅವರು ಹಾಸಿಗೆ ಹಿಡಿದಾಗ ಮಕ್ಳೆಲ್ಲಾ ಚೆಂದಾಗಿ ಇದ್ರು. ಎಷ್ಟು ಪ್ರೀತಿ ಮಾಡ್ತಿದ್ರು. ಅವ್ರ ಹೆಸ್ರಿಗೆ ಆಸ್ತೀನೆಲ್ಲಾ ಹಂಚಿ, ಹಚ್ಚಿ

ಹೋಗ್ಬಹುದಿತ್ತು. ನಾನು ಎಲ್ಲಾ ಹಂಚಿಕೊಟ್ಟಿದ್ರೆ ಅಂದಾಗ 'ಮುಂದೆ ಯಾರ ಮನ್ಸು ಹೆಂಗಿರ್ತದೋ ಹೇಳೋಕೆ ಬರಲ್ಲ. ನನ್ನ ಈ ಕಾಯಿಲೆ ನನ್ನ ಬಿಟ್ಟು ಹೋಗ್ತ್ಯಾತೂನ್ನ ನಂಬ್ಕೆ ನನಗಿಲ್ಲ. ಮುಂದೆ ನಿನಗ್ಯಾರು ಆಗೋರು. ಸದ್ಯಕ್ಕೆಲ್ಲಾ ನಿನ್ನ ಹೆಸರ್ನಾಗೇ ಇರ್ಲಿ. ನಿನ್ನ ಕಾಲಾನಚಿತ್ರ ಆವ್ರಿಗೇ ಸಿಗ್ತೈತಿ. ಅಚಿತಾ ದೂರಾಲೋಚನೆ ಮಾಡಿದ್ರು. ಈಗ ರೊಕ್ಕಾನೂ ನನ್ನ ಕೈಲಿ ಇಲ್ದಿದ್ರೆ ನಾನು ಬೀದಿ ಹೆಣ ಆಗ್ಬೇಕಿತ್ತೋ ಏನೋ. ಲಕ್ಷಾಂತರ ರೂಪಾಯಿ ವರಮಾನ ಇದ್ರೂ ಏನು ಪ್ರಯೋಜ್ನ? ಪ್ರೀತಿಯಿಂದ ನಡ್ಕೊಳ್ಳೋ ಮಕ್ಳು ಇಲ್ದಿದ್ರೆ ಎಲ್ಲಾ ಇದ್ರೂ ಏನೂ ಇಲ್ದಾಂಗೆ, ಈ ಮಕ್ಳನ್ನ ಎಷ್ಟು ಚೆನ್ನಾಗಿ ಸಾಕ್ದೆ. ಮಕ್ಳ ಸುಖಾನೇ ನನ್ನ ಸುಖಾಂತ, ನಾನೆಂದೂ ನನ್ನಾಗಿ ಏನೂ ಮಾಡ್ಕೊಳ್ಳಿಲ್ಲ. ಅವರ ಊಟ-ಉಪಚಾರ, ಅರಿವಿ-ಅಂಚಡಿ, ಕಾಯಿಲೆ-ಕಸಾರಕಿ, ಓದು-ಆಟ ಇದಕ್ಕೆಲ್ಲಾ ಎಷ್ಟು ನಿಗಾ ವಹಿಸ್ತಿದ್ದೆ. ಯಜಮಾನರಿಗಂತೂ ಸ್ವಲ್ಪವೂ ಬಿಡುವಿರಲಿಲ್ಲ. ಮಕ್ಕಳನ್ನು ಹೇಳಿ-ಕೇಳುವುದಿರಲಿ ಅವ್ರು ಯಾವ ಕ್ಲಾಸ್‌ನಲ್ಲಿ ಕಲೀತಾರೆ ಅನ್ನೋದೂ ಗೊತ್ತಿತ್ತೋ ಇಲ್ವೋ. ಇವ್ರು ಯಾವಾಗ ಡ್ಯೂಟಿಮ್ಯಾಲೆ ಹೋಗ್ತಿದ್ರೋ ಯಾವಾಗ ಮನ್ಯಾಗಿರ್ತಿದ್ರೋ ದೇವರ್ಗೇ ಗೊತ್ತು. ಯಾವಾಗಂದ್ರಾವಾಗ ಹೊರಟು ಬಿಡ್ತಿದ್ರು. ಅದಕ್ಕೇನು ಹೊತ್ತೇ? ಗೊತ್ತೇ? ಡಾಕ್ಟ್ರ ಕೆಲ್ಸ ಬ್ಯಾಡಪ್ಪಾ, ಯಾವ ಅಪರಾತ್ರೀಲಿ ಕರೆ ಬರ್ತದೋ. ನಿದ್ದೆಗಣ್ಣಾಗಿದ್ರೂ ಹೋಗ್ಬೇಕು ಎನ್ನುತ್ತಿದ್ದೆ ನಾನು. ಈ ಪೊಲೀಸ್ ಖಾತೆ ಕೆಲಸಾಂದ್ರೆ ಅದ್ಕಿಂತಾ ಕಷ್ಟ. ದಿನಾ ಬೆಳಗಾದ್ರೆ ಕೊಲೆ, ಸುಲಿಗೆ, ದರೋಡೆ, ಜಗಳ, ದೊಂಬಿ ಎಲ್ಲದ್ಕೂ ಸಾಹೇಬ್ರು ಹೋಗ್ಬೇಕು. ಎಷ್ಟು ಹೊತ್ನಾಗಂದ್ರೆ ಅಷ್ಟೊತ್ನಾಗ. ಕೊಲೆಗಾರರನ್ನು ಪತ್ತೆ ಹಚ್ಬೋಕ್ಹೋದಾಗಂತೂ ನನ್ಗೆ ಅವ್ರು ಬರೋತನ್ಕ ನಿದ್ದಿ ಹತ್ತುತ್ತಿರ್ಲಿಲ್ಲ. ಈ ಕೆಲ್ಸದಾಗ ಅವ್ರು ಮಕ್ಳು-ಮರಿ ನೋಡ್ಕೊಳ್ಳೋಕೆ ನಾನಿದ್ದೀನಂತ ನಿಶ್ಚಿಂತ್ಯಾಗಿ ತಮ್ಮ ಕೆಲಸ್ದಾಗೆ ಮುಳುಗ್ಬಿಡ್ತಿದ್ರು. ಮನೇಲೇನು ಬೇಕಾದ್ಹಂಗೆ ಆಳು-ಕಾಳು ಇದ್ರು, ಆದ್ರೂ, ಜವಾಬ್ದಾರೆಲ್ಲಾ ನಂದೇ ತಾನೇ? ಸಾಹೇಬ್ರ ಕಡಿಂದ ಕೆಲ್ಸ ಮಾಡ್ಸಿಕೊಳ್ಳೋಕಂತ ನೆಂಟರು-ಇಷ್ಟರು ಸ್ನೇಹಿತ್ರು ಪರಿಚಿತ್ರು ಲೆಕ್ಕವಿಲ್ಲದಷ್ಟು ಮಂದಿ ಮನೇಗೆ ಬರ್ತಿದ್ರು. ಅವ್ರಿಲ್ದಿದ್ರೆ ನಾನೇ ಅವ್ರನ್ನೆಲ್ಲಾ ಮಾತಾಡ್ಸಿ ಊಟ ಉಪಚಾರ ನೋಡಿ ಕಳಿಸ್ಬೇಕಾಗಿತ್ತು. ಒಮ್ಮೊಮ್ಮೆ ಸಾಹೇಬರ ಕೂಡ ಫಂಕ್ಷನ್‌ಗೂ ಹೋಗ್ತಿದ್ದೆ. ಹೀಂಗೆ ಒಂದೇ ಎರಡೇ ಕೆಲ್ಸ. ಬೇಕಾದ್ಹಂಗೆ ಎಲ್ಲಾ ಕೆಲ್ಸಕ್ಕೆ ಆಳು-ಕಾಳು ಇದ್ರೂ ನನಗೆ ಪುರಸತ್ತೆ ಸಿಗ್ತಿರಲಿಲ್ಲ. ಒಮ್ಮೊಮ್ಮೆಯಂತೂ ಕೆಲಸದ ಒತ್ತಡಕ್ಕೆ ತಲೆ ಬಿಸಿಯಾಗ್ಬಿಡ್ತಿತ್ತು. ಏನೇ ಆದ್ರೂ ಮಕ್ಳಿಗೆ ಮಾತ್ರ ಯಾವುದ್ರಗೂ ಎಂದೂ ತೊಂದ್ರೆ ಆಗ್ದಂಗೆ ಕಾಳಜಿ ತಗೋತಿದ್ದೆ ಇಬ್ರೂ ಮಕ್ಕಳೂ ಕ್ಲಾಸ್‌ನಾಗೆ ಫಸ್ಟ್ ಅಥವಾ ಸೆಕೆಂಡ್ ಬರ್ತಿದ್ರು. ಹೀಂಗೆ ಅವ್ರನ್ನ ಬೆಳೆಸ್ದೆ. ಹಂಗಾಗಿ ದೊಡ್ಡವ ಐ.ಎ.ಎಸ್. ಮಾಡ್ದ. ಈಗ ಮಹಾರಾಷ್ಟ್ರದಾಗ ಜಿಲ್ಲಾಧಿಕಾರಿಯಾಗಿದಾನೆ. ಸಾಹೇಬ್ರು ಮಕ್ಳನ್ನ

ನೋಡಿ 'ಸರಳಾ ಅವರಿಷ್ಟು ಚೆನ್ನಾಗಿಮುಂದೆ ಬರೋಕೆ ನೀನೇ ಕಾರಣ. ನಾನು ತಂದೆಯಾದ್ರೂ ಏನೂ ಮಾಡ್ಲಿಲ್ಲ. ಆದ್ರೆ ನೀನು ತಂದೆ-ತಾಯಿ ಎರಡೂ ಆಗಿ ಮಕ್ಳನ್ನ ಬೆಳಸ್ದಿ. ನಿನಗೆಷ್ಟು ಶಹಭಾಸ್ ಕೊಟ್ರೂ ತೀರದು' ಎನ್ನುತ್ತಿದ್ದರು. ಎರಡನೆಯವರನು ನೇವಿಯಲ್ಲಿ ಲೆಫ್ಟಿನೆಂಟ್ ಕರ್ನಲ್ ಆಗಿದಾನೆ. ಯಜಮಾನರಿಗೆ ಪೆನ್‌ಶನ್ ಆಗೋತನ್ಕ ಏನೂ ತೊಂದರೆ ಇರ್ಲಿಲ್ಲ. ಪೆನ್ಷನ್ ಆಗಿ ಇನ್ನೇನು ಆರಾಮಾಗಿರ್ಬೇಕು ಅಂದ್ಕೊಂಡಾಗ ಅವರಿಗೆ ಪೆರಾಲಿಸಿಸ್ ಆಯ್ತು. ಅದು ಸ್ವಲ್ಪ ಸೀರಿಯಸ್ ಆಗೇ ಇತ್ತು. ಎಷ್ಟು ಮದ್ದು ಮಾಡಿದ್ರೂ ಪೂರ್ಣ ಹತೋಟಿಗೆ ಬರ್ಲೇ ಇಲ್ಲ. 'ಆಗ ದೊಡ್ಡ ಮಗನಿಗೆ ಮದ್ವೆ ಮಾಡೋಣ, ಆ ಸಂತೋಷಾನಾದ್ರೂ ಕಾಣ್ತೀನಿ. ಮಕ್ಳ ಸುಖಾನೇ ನಾನು ಕಾಣ್ಲಿಲ್ಲಾಂತ' ಹಂಬಲಿಸಿದ್ರು, ಅಭಿಲಾಷ್ ಒಳ್ಳೇ ಕಟ್ಟುಮಸ್ತಾದ ಸ್ಪುರದ್ರೂಪಿಯಾದ ಹುಡುಗ. ಅದಕ್ಕೆ ಸರಿಯಾಗಿ ದೊಡ್ಡ ನೌಕರಿ. ಅವನಿಗೆ ಎಲ್ಲಾ ವಿಧದಲ್ಲೂ ತಕ್ಕವಳಾದ ಹುಡುಗಿ ಹುಡುಕಬೇಕೂಂತ, ಕರ್ನಾಟಕದ ತುಂಬಾ ಅಡ್ಡಾಡಿ ಒಳ್ಳೆಯ ಮನೆತನದ ರೂಪವತಿ – ವಿದ್ಯಾವತಿಯಾದ ವಿಂದ್ಯಳನ್ನು ಆರಿಸಿದೆ. ಯಜಮಾನರ ಕಣ್ಣುಮುಂದೇ ಮದುವೆ ಅದ್ದೂರಿಯಾಗಿ ಆಯ್ತು. ಕನ್ಯೆಯ ಕಡೆಯವರೂ ಇಂಥ ವರ ಸಿಕ್ಕಿದುದಕ್ಕೆ ಬಲೇ ಖುಷಿಯಾಗಿದ್ದರು. ಮಗನ ಬಳಿಗೆ ಕಳಿಸುವ ಮೊದಲು ಸೊಸೆಯನ್ನು ನಾಲ್ಕು ದಿನ ನಮ್ಮಲ್ಲೇ ಇಟ್ಟುಕೊಳ್ಳಬೇಕೆಂದು ಯೋಚಿಸಿದೆ. ಅವನಿಗಂತೂ ರಜೆ ಇರಲಿಲ್ಲ. ಇವಳಾದರೂ ಮನೆತುಂಬಾ ಓಡಾಡಿಕೊಂಡಿರಲಿ ಎಂದು. ಯಜಮಾನರಿಗೂ ಸಂತೋಷವಾಗಿ ನೆಮ್ಮದಿ ಸಿಕ್ಕುತ್ತೆ ಎಂಬ ಆಸೆಯೂ ಹಿಂದೆ ಇತ್ತು. ಆದರೆ ಆ ಹುಡುಗಿ ಗಂಡನಿಲ್ಲದೆ ಮನೆಯಲ್ಲಿ ತಾನಿರುವುದು ಸಾಧ್ಯವಿಲ್ಲವೆಂದು ನಿರ್ಭಿಡೆಯಿಂದ ಹೇಳಿದಳು. ಬಂದ ಹೊಸದರಲ್ಲೇ ಯಾರ ಲೆಕ್ಕವೂ ಇಲ್ಲದಂತೆ ನಡೆದ ಅವಳ ನಡವಳಿಕೆ ನೋಡಿ ದಿಗ್ಭ್ರಮೆಗೊಂಡೆ. ಆದರೂ 'ಇನ್ನೂ ಚಿಕ್ಕವಯಸ್ಸು, ಅನುಭವವಿಲ್ಲ. ಗಂಡನ ಜೊತೇಲಿರಬೇಕೆಂದು ಆಸೆ. ಹೊಸ ಹುರುಪು' ಇರಲಿ ಎಂದು ಮನಸ್ಸಿಗಷ್ಟು ಹಚ್ಚಿಕೊಳ್ಳಲಿಲ್ಲ. ಮಗನ ಜೊತೆಗೆ ಕಳಿಸಿಕೊಟ್ಟುಬಿಟ್ಟೆ.

ಸ್ವಲ್ಪ ದಿನಗಳಲ್ಲಿಯೇ ಯಜಮಾನರ ದೇಹಸ್ಥಿತಿ ಬಿಗಡಾಯಿಸಿತು. ಯಾವ ಔಷಧಿಯೂ ಗುಣಮಾಡಲಿಲ್ಲ. ಆಗ ಮಕ್ಕಳಿಗೆ ಪರಿಸ್ಥಿತಿ ತಿಳಿಸಿದೆ. ಮಕ್ಕಳು ಸೊಸೆಯೂ ಬಂದರು. ಅಂತಹ ಪರಿಸ್ಥಿತಿಯಲ್ಲೂ ಸೊಸೆ ಆತ್ಮೀಯತೆಯಿಂದ ನಡೆದುಕೊಳ್ಳಲಿಲ್ಲ. ತನ್ನ ವಿದ್ಯೆ, ರೂಪು ಐಶ್ವರ್ಯ, ಗಂಡನ ನೌಕರಿ ಇವುಗಳಿಗೆ ಬೀಗಿ ಅಹಂಕಾರಿಯಾಗಿದ್ದಳು. ಆಕೆಗೆ ನಾವೆಲ್ಲಾ ಸುಮಾರೆಂದು ಕಾಣಿಸುತ್ತಿತ್ತು. ಅವಳ ವೈಯ್ಯಾರಕ್ಕೆ ಮನಸೋತಿದ್ದ ಗಂಡನೂ ಅಸಹಾಯಕತೆಯಿಂದಲೋ ವ್ಯಾಮೋಹದಿಂದಲೋ ಅವಳ ತಾಳಕ್ಕೆ ತಕ್ಕಂತೆ ಕುಣಿಯುತ್ತಿದ್ದ 'ವಿದ್ಯಾ ವಿನಯೇನ

ಶೋಭತೆ' ಎನ್ನುತ್ತಾರೆ. ಆದರೆ ವಿದ್ಯಾವತಿ ಎನ್ನಿಸಿಕೊಂಡ ಅವಳಲ್ಲಿ ವಿನಯದ ನೆರಳೂ ಇರಲಿಲ್ಲ. ತುಂಬಾ ಕೆಳಮಟ್ಟದ ಮಹಿಳೆಯರಂತೆ ಅವಳು ನಡೆಯುತ್ತಿದ್ದ ರೀತಿ ನನ್ನನ್ನು ನೋವಿಗೆ ಗುರಿಮಾಡುತ್ತಿತ್ತು. ಅವಳಾಡುತ್ತಿದ್ದ ಕುಹಕದ ಮಾತು, ಕುತಂತ್ರದ ನಡೆ, ಯಾರೂ ಲೆಕ್ಕವಿಲ್ಲವೆಂಬಂತಹ ಒರಟು ಸ್ವಭಾವ, ನನ್ನ ಎದೆಯನ್ನು ನಡುಗಿಸಿತು. ಆದರೆ ಅಪರೂಪಕ್ಕೆ ಮಗ ಬಂದಿದ್ದಾನೆ, ಯಜಮಾನರು ಹಾಸಿಗೆ ಹಿಡಿದಿದ್ದಾರೆ. ಈ ಸಮಯದಲ್ಲಿ ನಾನು ಅಸಮಾಧಾನದಿಂದ ಒಂದು ಮಾತಾಡಿದರೂ, ಅವಳು ವಿಪರೀತಕ್ಕೆ ಒಯ್ಯುವ ಸಾಧ್ಯತೆ ಇತ್ತು. ಇಂತಹ ಸ್ಥಿತಿ ಉಂಟಾಗಲೆಂದೇ ಅವಳು ತನ್ನ ಮಾತು ಮತ್ತು ವರ್ತನೆಗಳಿಂದ ನನ್ನನ್ನು ಪ್ರಚೋದಿಸುತ್ತಿದ್ದಳು. ನಾನು ನನ್ನೆಲ್ಲಾ ತಾಳ್ಮೆ ತಂದುಕೊಂಡು ಎಲ್ಲವನ್ನೂ ಸಹಿಸಿಕೊಂಡೆ. ಇಲ್ಲದಿದ್ದರೆ ನನ್ನ ನೆಮ್ಮದಿಯೂ ಕೆಡುತ್ತಿದ್ದುದಲ್ಲದೆ, ಮರಣಶಯ್ಯೆಯಲ್ಲಿದ್ದ ಅವರಿಗೆಷ್ಟು ನೋವಾಗುತ್ತದೆ, ಅನೇಕ ಬಂಧುಗಳೂ ಬಂದಿದ್ದರು. ಎಲ್ಲರ ಮುಂದೆ ನಗೆಪಾಟಲಾಗಬಾರದೆಂದು, ಕಂಡೂ ಕಾಣದಂತೆ ಕೇಳಿಸಿಯೂ ಕೇಳಿಸದಂತೆ ಎಲ್ಲಾ ನುಂಗಿಕೊಂಡೆ. ಆದರೆ ಸೊಸೆ ಬಂದಳೆಂದು ಆಸೆಗೊಂಡಿದ್ದ ಯಜಮಾನರು ಮಲಗಿದಲ್ಲಿಂದಲೇ ಎಲ್ಲವನ್ನೂ ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಅವರಿಗೆ ನಾವು ತಂದ ಸೊಸೆ ಮಗನಿಗೂ ಮನೆಗೂ ಮರ್ಯಾದೆ ತರುವವಳಲ್ಲ ಎನ್ನಿಸಿ, ಅವರ ಆರೋಗ್ಯ ಮತ್ತಷ್ಟು ಹದಗೆಟ್ಟಿತು. ನಾವು ಅಂದುಕೊಂಡದ್ದಕ್ಕೂ ಮೊದಲೇ ಕಣ್ಣುಮುಚ್ಚಿ ಈ ಜಂಝಾಟದಿಂದ ಪಾರಾದರು. ಈ ಸಮಯದಲ್ಲಾದರೂ ಆ ಹುಡುಗಿ ಮಾನವೀಯತೆ ತೋರಿಸಬಹುದಿತ್ತು. ಆಗಲೂ ತನ್ನ ಕ್ಷುಲ್ಲಕತನವನ್ನೇ ತೋರಿಸಿದಳು. ಗಾಯಕ್ಕೆ ಉಪ್ಪು ಸುರಿದಂತಹ ರೀತಿಯಲ್ಲಿ ನಡೆಯುತ್ತಿದ್ದಳು. ಆಗ ನನಗೆಷ್ಟು ನೋವಾದೀತು ಎಂದು ವಿಚಾರ ಸಹ ಮಾಡದಷ್ಟು ಅಸಂಸ್ಕೃತಳಾಗಿದ್ದಳಾಕೆ. ಏನು ಮಾತಾಡಿದರೂ ಅದಕ್ಕೊಂದು ಪ್ಲಾನ್ ಮಾಡಿ ಗಂಡನಿಗೆ ಚಾಡಿ ಹೇಳಿ, ಅವನ ಮನಸ್ಸು ಕೆಡುವಂತೆ ಮಾಡುತ್ತಿದ್ದಳು. ನನ್ನ ದುಃಖವೇ ನನಗೆ ಸಾಕಾಗಿತ್ತು. ಆಗ ಇದರ ಪಂಚಾಯ್ತಿ ಮಾಡುವುದು ನನಗೆ ಬೇಕಾಗಿರಲಿಲ್ಲ. ಹಾಗಾಗಿ ಸುಮ್ಮನಿದ್ದು ಬಿಡುತ್ತಿದ್ದೆ. ಆದುದರಿಂದ ಆಕೆ ತನಗೆ ಬೇಕಾದಂತೆ ವಿಷಯಗಳನ್ನು ತಿರುಚಿ ಅವನ ಮನಸ್ಸು ಕೆಡಿಸಲು ಅವಳಿಗೆ ಸುಲಭವಾಯಿತು. ಇದು ಬರಬರುತ್ತಾ ಇನ್ನೂ ಹೊಲಸಾದೀತೆಂದು ಮಗನ ರಜೆ ಮುಗಿಯುವ ಮೊದಲೇ ಕಳಿಸಿಬಿಟ್ಟೆ. ಎರಡನೆಯ ಮಗ ವಿವೇಕ್ ಆ ಸಮಯದಲ್ಲಿ ನನಗೆ ತುಂಬಾ ಆಸರೆಯಾದ. ಮನಸ್ಸಿಗೆಷ್ಟೋ ನೆಮ್ಮದಿ ಎನ್ನಿಸಿತು.

ವಿವೇಕನಿಗೂ ಮದುವೆಯ ವಯಸ್ಸಾಗಿತ್ತು. ಯಜಮಾನರು ತೀರಿದ ಒಂದು ವರ್ಷದ ಒಳಗಾಗಿಯೇ ಶುಭಕಾರ್ಯ ಮಾಡಿದರೆ, ಅವರ ಆತ್ಮಕ್ಕೆ

ತೃಪ್ತಿಯಾಗುತ್ತದೆ ಎಂದು ಅನೇಕರು ಹೇಳಿದರು. ಮೊದಲ ಸಾರಿ ಕನ್ಯೆ ಆರಿಸುವುದರಲ್ಲಿ ಕೈ ಸುಟ್ಟುಕೊಂಡ ನಾನು, ಈ ಸಾರಿ ಬಹು ಎಚ್ಚರದಿಂದಿರಬೇಕೆಂದುಕೊಂಡೆ. ಬಹಳ ಕಲಿತಿರುವವಳೂ ಬೇಡ, ಇಂಗ್ಲಿಷ್ ಮಾತನಾಡುವವಳೂ ಬೇಡ. ಸರಿಯಾದ ಸಂಸ್ಕಾರವಿಲ್ಲದಿದ್ದರೆ ಅಂತಹುಗಳೆಲ್ಲಾ ಇದ್ದರೆ ಧಿಮಾಕು ಮಾಡುತ್ತಾರೆ. ಆದುದರಿಂದ ಎಲ್ಲ ದೃಷ್ಟಿಯಲ್ಲೂ ಸಾಧಾರಣವಾಗಿರುವ ಎಲ್ಲರೂ 'ಒಳ್ಳೆಯ ಹುಡುಗಿ' ಎಂದು ಮೆಚ್ಚಿದ ಒಬ್ಬ ಹುಡುಗಿಯನ್ನು ಆರಿಸಿ ಮದುವೆ ಮಾಡಿದೆ. ಮೊದಲ ಸೊಸೆ ಬಂದಾಗ 'ಬಂದ ಸೊಸೆಯನ್ನು ಮಗಳಿಗಿಂತ ಹೆಚ್ಚಾಗಿ ಕಾಣಬೇಕು. ತಾನು ತವರಲ್ಲಿದ್ದುದಕ್ಕಿಂತ ಇಲ್ಲಿ ಹೆಚ್ಚು ಸುಖವಾಗಿದ್ದೇನೆನ್ನುವಂತೆ ನೋಡಿಕೊಳ್ಳಬೇಕು. ಆಗ ಆಕೆಗೂ ನಮ್ಮ ಬಗ್ಗೆ ತಂದೆ-ತಾಯ್ಗಳೆಂಬಂತಹ ಪ್ರೀತಿ ಬೆಳೆಯುತ್ತೆ. ಸುಲಭವಾಗಿ ಹೊಸವಾತಾವರಣಕ್ಕೆ ಹೊಂದಿಕೊಂಡು ನಮ್ಮೊಡನೆ ಒಂದಾಗಿಬಿಡತ್ತಾಳೆಂಬ ಭ್ರಮೆಯಿಂದ, ಆಕೆಗೆ ನಾನು ಅತ್ತೆ ಎನ್ನಿಸದೇ ತಾಯಿ ಎನ್ನಿಸಬೇಕೆಂಬಂತೆ ಕಂಡೆ. ಆದರೆ ಅತ್ತೆಯ ಮನೆಯಲ್ಲಿ ಹೇಗೋ ಎಂದು ಅಂಜಿಕೊಂಡು ಬಂದ ಆಕೆಗೆ, ಯಾವುದೇ ಸಮಸ್ಯೆ ಇಲ್ಲದೇ ಎಲ್ಲಾ ಸರಳವಾಗಿ ಸುಲಭವಾಗಿ ತನಗೆ ಹೇಗೆ ಬೇಕೋ ಹಾಗೆ ಇರಲು ಸಾಧ್ಯವಾದಾಗ, ಇಲ್ಲಿ ದೊರೆತ ಅನುಕೂಲಗಳಿಗೆ, ನಾವು ತೋರಿಸಿದ ಪ್ರೀತಿಗೆ, ಕುರುಡು ಕಾಸಿನಷ್ಟೂ ಅವಳಿಗೆ ಬೆಲೆ ಇಲ್ಲವಾಯ್ತು. ಇದೆಲ್ಲಾ ತನಗೆ ದೊರೆಯಬೇಕಾದ ಹಕ್ಕು ಎನ್ನುವಂತೆ ನಡೆದುಕೊಂಡುಬಿಟ್ಟಳು. ಆದುದರಿಂದ ಈ ಸೊಸೆಯನ್ನು ಮೊದಲಿನಿಂದಲೇ ಹಿಡಿತದಲ್ಲಿಟ್ಟುಕೊಳ್ಳಬೇಕೆಂದು ನಿರ್ಧರಿಸಿದೆ. ಮೊದಲು ಬಿಗಿಯಾಗಿದ್ದುಕೊಂಡು ಆಕೆ ನಮ್ಮ ವಾತಾವರಣಕ್ಕೆ ಹೊಂದಿಕೊಂಡು, ನಮ್ಮೊಡನೆ ಒಂದಾಗಿ ಬೆರೆತುಕೊಂಡ ಮೇಲೆ ಪ್ರೀತಿ, ಸಲುಗೆ ಕೊಟ್ಟರಾಯ್ತು ಎಂದು ಲೆಕ್ಕ ಹಾಕಿದೆ. ಮೊದಲ ಸೊಸೆ ಮಾಡಿದಂತೆ ಈಕೆಯೂ ಎರಡನೆಯ ಮಗನ ಮನಸ್ಸನ್ನು ನನ್ನ ಬಗೆಗೆ ಕೆಡಿಸಿಯಾಳೆಂಬ ಭಯ ನನಗೆ. ಆಗ ನನ್ನವರಾಗಿ ಯಜಮಾನರಾದರೂ ಇದ್ದರು. ಮೊದಲ ಮಗನಂತೂ ದೂರವಾದ. ಈಗ ಇವನಾದರೂ ಪ್ರೀತಿಯಿಂದ ಇರುವಂತೆ ಕಾಯ್ದುಕೊಳ್ಳಬೇಕು. ನಾನೇನು ಇವರಿಂದ ಬೇರೇನನ್ನಾದರೂ ಅಪೇಕ್ಷಿಸುತ್ತೇನೆಯೇ? ತಾಯಿಯೆಂಬ ಮಮತೆ ತೋರಿಸಿದರೆ ಸಾಕು. ಹೊತ್ತು ಹೆತ್ತು ಸಾಕಿದ ತಾಯಿ ಮಕ್ಕಳು ತಮ್ಮ ಕಾಲಮೇಲೆ ನಿಲ್ಲುವವರೆಗೂ ತನ್ನ ಸುಖಕ್ಕೇನೂ ಗಮನ ಕೊಡದೇ ಇವರಿಗೆ ಸುಖವಾಗುವುದೇ ತನ್ನ ಸಂತೋಷವೆಂದು ಬದುಕಿದ ತಾಯಿ, ಇಷ್ಟನ್ನೂ ಮಕ್ಕಳಿಂದ ಅಪೇಕ್ಷಿಸಬಾರದೆ? ಹಿರಿಯ ಮಗನ ಮದುವೆಯಾದಾಗ ಹೊಸದರಲ್ಲಿ ಅಭಿಪ್ರಾಯ ಭೇದಗಳಿರುತ್ತವೆಯೆಂದು ಅರಿತಿದ್ದ ನಾನು ಅವರಲ್ಲಿ ಸಾಮರಸ್ಯ ಬೆಳೆಯುವಂತಹ ಅವಕಾಶ ಕಲ್ಪಿಸುತ್ತಿದ್ದೆ. ಅಂತಹ ರೀತಿಯಲ್ಲಿ ಮಾತನಾಡುತ್ತಿದ್ದೆ. ಅನ್ಯೋನ್ಯತೆ

ಬೆಳೆಯಿತೇನೋ ನಿಜ. ಆದರೆ ಬರುಬರುತ್ತಾ ಸೊಸೆ ನಾನೊಬ್ಬ ಅನವಶ್ಯ ಪ್ರಾಣಿ ಎಂಬಂತೆ ಕಾಣತೊಡಗಿದಳು. ಮಗನಲ್ಲಿದ್ದ ಪ್ರೀತಿ ವಿಶ್ವಾಸಗಳು ನನ್ನಲ್ಲಿ ಉಳಿಯದಂತೆ ಮಾಡಲು ಉದ್ದೇಶಪೂರ್ವಕ ಪ್ರಯತ್ನಿಸಿದಳು. ನಿಷ್ಕಾರಣವಾಗಿ ಜಗಳತೆಗೆದು ಮನ ನೋಯಿಸುತ್ತಿದ್ದಳು. ಮಗನಿಗೆ ನಾನೇ ತಪ್ಪು ಮಾಡಿರಬೇಕೆನ್ನಿಸುವಂತೆ ಸನ್ನಿವೇಶ ಸೃಷ್ಟಿಸುತ್ತಿದ್ದಳು. ಬರಬರುತ್ತಾ ಅವನಿಗೆ ಅವಳ ಮಾತೇ ವೇದವಾಕ್ಯವಾಗತೊಡಗಿತು. ನಾನು ಈ ಅನ್ಯಾಯದಿಂದ ಒಳಗೊಳಗೇ ನೊಂದು ಬೇಯುತಿದ್ದೆ. ಆದರೆ ನಾನು ನೊಂದೇನೆಂಬ ಬಂದೇನೆಂಬ ಚಿಂತೆ ಯಾರಿಗೆ ಬೇಕಿತ್ತು? ನಾನೊಬ್ಬಳು ಮನೆಯಲ್ಲಿದ್ದೇನೆಂಬ ಪರಿವೆಯೇ ಯಾರಿಗೂ ಇರಲಿಲ್ಲ. ಅದಕ್ಕಾಗಿ ಈ ಎರಡನೇ ಸೊಸೆ ಬಂದಾಗ ಪ್ರಾರಂಭದಿಂದಲೇ ಎಚ್ಚರವಾಗಿರಬೇಕೆಂದುಕೊಂಡೆ.

ಮದುವೆಯಾದ ಮೇಲೆ ಸೊಸೆ ಮನೆಗೆ ಬಂದಾಗ ಅವಳ ಜವಾಬ್ದಾರಿಗಳ ಬಗ್ಗೆ ವಿವರಿಸಿದೆ. ಹಿರಿಯ ಸೊಸೆಯ ಅವಿವೇಕದ ನಡೆಯ ಬಗ್ಗೆ ತಿಳಿಸಿದೆ. ಕೆಲಸದವರ ಮೇಲ್ವಿಚಾರಣೆ. ನನ್ನ ಯೋಗಕ್ಷೇಮ ಇಷ್ಟು ಅವಳ ಕರ್ತವ್ಯವೆಂದು ಮನಗಾಣಿಸಿದೆ. ಮೃದು ನುಡಿಗಳಿಂದ ಮಾತನಾಡುತ್ತಿದ್ದಳು. ನನಗೂ ಹಿತವೆನ್ನಿಸುತ್ತಿತ್ತು. ಹೊತ್ತು-ಹೊತ್ತಿಗೆ ನನಗೆ ಸ್ನಾನ, ಪೂಜೆ, ಊಟದ ವ್ಯವಸ್ಥೆ ನೋಡಿಕೊಳ್ಳುತ್ತಿದ್ದಳು. ನನ್ನ ಮಗನಿಗೆ ತನ್ನ ಹೆಂಡತಿ ತನ್ನಮ್ಮನನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಾಳೆ ಎನ್ನಿಸುವಂತೆ ನೋಡುತ್ತಿದ್ದಳು. ಆದರೆ ಮಾತಿಲ್ಲದೇ ಯಾರಿಗೂ ಗೊತ್ತಾಗದ ರೀತಿಯಲ್ಲಿ ನನ್ನನ್ನು ಅಲಕ್ಷಿಸುತ್ತಿದ್ದಳು, ಅಸಹಾಯಕಳನ್ನಾಗಿ ಮಾಡುತ್ತಿದ್ದಳು. ಒಂಟಿತನ ಹಿಂಡುವಂತಹ ಪರಿಸ್ಥಿತಿ ಸೃಷ್ಟಿಸುತ್ತಿದ್ದಳು. ವಿವೇಕ್ ನನ್ನೊಡನೆ ಮಾತನಾಡಲು ಬಂದಾಗ ಸಿಟ್ಟನ್ನೇನೂ ತೋರುತ್ತಿರಲಿಲ್ಲ. ಆದರೆ ಚಾಣಾಕ್ಷತನದಿಂದ ಅವನು ಅಲ್ಲಿ ನಿಲ್ಲದೇ, ಏನೋ ಕಾರಣಕ್ಕೇ ಬೇರೆ ಕಡೆಗೆ ಹೋಗುವಂತೆ ಮಾಡಿಬಿಡುತ್ತಿದ್ದಳು. ಇವಳನ್ನು ಇಡೀ ದಿನ ಗಮನಿಸುತ್ತಿದ್ದ ನನಗೆ, ಇವಳ ತಂತ್ರ ಅರ್ಥವಾಗುತ್ತಿದ್ದರೂ, ವಿವೇಕನಿಗೆ ಇವೆಲ್ಲಾ ಸಹಜ ಘಟನೆಗಳಾಗಿ ಕಾಣಿಸುತ್ತಿದ್ದವು. ಹಾಗಾಗಿ ಅವಳ ಕುತಂತ್ರ ಹೇಳಹೋದರೆ, ನನ್ನನ್ನೇ ಅವನು ತಪ್ಪಾಗಿ ತಿಳಿದುಕೊಳ್ಳುವ ಸಾಧ್ಯತೆ ಇತ್ತು. ಇದೂ ಆಕೆಗೆ ಗೊತ್ತಿತ್ತು. ಹೀಗಾಗಿ ಇವಳೂ ಮೂಲ ಸ್ವಭಾವದಲ್ಲಿ ಮೊದಲಿನ ಸೊಸೆಗೆ ಭಿನ್ನವಾಗಿರಲಿಲ್ಲ. ನಡೆಯುತ್ತಿದ್ದ ರೀತಿ ಬೇರೆ ಅಷ್ಟೆ. ಮೊದಲಿನವಳು ತುಂಬಾ ವಿದ್ಯಾವಂತೆ, ರೂಪವತಿ ಎಂದು ಅಹಂಕಾರ ಪಡುತ್ತಿದ್ದಳು. ಹೆಚ್ಚು ವಿದ್ಯಾವಂತಳೂ ಅಲ್ಲದ ರೂಪವತಿಯೂ ಅಲ್ಲದ ಇವಳನ್ನು ಆರಿಸಿದ್ದೆ. ಈಗ ನನಗೆ ಮಕ್ಕಳ ನಡೆ-ನುಡಿಗೆ ರೂಪ ಹಣ ವಿದ್ಯೆ ಕಾರಣವಲ್ಲ. ಅವರು ಬೆಳೆಯುವ, ವಯಸ್ಸಿನಲ್ಲಿ ಅವರಿಗೆ ಸಿಗುವ ಅವಕಾಶ,

ಮಾರ್ಗದರ್ಶನ, ವಾತಾವರಣ, ಶಿಕ್ಷಣ, ಸಹವಾಸ ಮುಖ್ಯವೆಂದು ಅರ್ಥವಾಯಿತು. ತಂದೆ-ತಾಯಿಯರ ಪಾತ್ರ ಅತೀ ಮುಖ್ಯ. ಅವರು ಕೇವಲ ಒಳ್ಳೆಯವರಿದ್ದರೂ ಉಪಯೋಗವಿಲ್ಲ. ಮಕ್ಕಳನ್ನು ಹೇಗೆ ಬೆಳೆಸಬೇಕೆಂಬ ಅನುಭವ ಉಳ್ಳವರಾಗಿರಬೇಕು. ನಮ್ಮ ಮಕ್ಕಳು ಹೇಗಾಗಬೇಕು, ಏನಾಗಬೇಕು ಎಂಬ ಆದರ್ಶದ ಅರಿವಿರಬೇಕು. ಸಮಯೋಚಿತವಾಗಿ ಸೂಕ್ತ ಮಾರ್ಗದರ್ಶನ ಮಾಡುವಷ್ಟು ಜ್ಞಾನ, ಜಾಣ್ಮೆ ಇರಬೇಕು. ಒಳ್ಳೆಯ ನಡೆ-ನುಡಿಗಳನ್ನು ಬೆಳೆಸಬೇಕೆಂಬ ಸದುದ್ದೇಶವಿರಬೇಕು. ಅವರು ಉದ್ಧಟತನ ಬೆಳೆಸಿಕೊಳ್ಳದಂತೆ ನೋಡಿಕೊಳ್ಳಬೇಕು. ಹಾಗೆಂದು ಮಕ್ಕಳನ್ನು ಸಣ್ಣದಕ್ಕೂ ಪುಟ್ಟದಕ್ಕೂ ಶಿಕ್ಷಿಸುತ್ತಾ ಹೋಗಬೇಕೆಂದು ಅರ್ಥವಲ್ಲ. ಎದಿರುಮನೆ ಶಕುಂತಲಾ ಮಗುವನ್ನು ಹಿಂಸಿಸುವುದನ್ನು ನೋಡಿದರೆ, ಸಂಕಟವಾಗುತ್ತೆ. ಹೀಗಾದರೆ ಮಕ್ಕಳು ಶಿಸ್ತನ್ನು ಕಲಿಯುತ್ತಾರೆ ಎಂದು ಅವಳ ಹೇಳಿಕೆ. ಸಣ್ಣ ಸಣ್ಣ ತಪ್ಪುಗಳಿಗೂ ಸುಳ್ಳು ಹೇಳುವುದನ್ನು ನಾನು ಗಮನಿಸಿದ್ದೇನೆ. ಸುಳ್ಳನ್ನು ಹೇಳಲು ಈಗಿನಿಂದಲೇ ಮಗು ಕಲಿತರೆ ಅದರ ಕಥೆ ಮುಗಿದಂತೆಯೇ! ಆ ಸ್ವಭಾವದಿಂದ ಮುಂದೆ ಅದು ತನ್ನನ್ನಾದರೂ ಸಮಸ್ಯೆಯಲ್ಲಿ ಒಳಗಾಗಿಸಿಕೊಳ್ಳಬಹುದು, ಬೇರೆಯವರನ್ನಾದರೂ ತೊಂದರೆಗೆ ಸಿಲುಕಿಸಬಹುದು. ಸುಳ್ಳು ಹೇಳುವುದೇ ಚಟವಾಗಿ ಬೆಳೆದವರ ಸಹವಾಸ ಕಷ್ಟ. ಅದು ಅವರ ಅಭ್ಯಾಸವಾಗಿ, ಅನವಶ್ಯಕ ಸುಳ್ಳು ಹೇಳಿ ವಿನಾಕಾರಣ ಎಲ್ಲರೂ ಗೊಂದಲದಲ್ಲಿ ಸಿಕ್ಕಿ ಒದ್ದಾಡುವಂತೆ ಮಾಡುತ್ತಾರೆ. ನನ್ನ ದುರಾದೃಷ್ಟಕ್ಕೆ ಇಬ್ಬರು ಸೊಸೆಯರಿಗೂ ಸರಿಯಾದ ಸಂಸ್ಕಾರ ಸಿಕ್ಕಿರಲಿಲ್ಲ. ಉತ್ತಮ ಮೌಲ್ಯಗಳ ಪರಿಚಯವೇ ಅವರಿಗಿರಲಿಲ್ಲವೆನ್ನಿಸುತ್ತಿತ್ತು. ಹೀಗಾಗಿ ನನಗೆ ತುಂಬಾ ದುಃಖವಾಗುತ್ತಿತ್ತು. ಮಾನಸಿಕ ನೋವಿನಿಂದ ಹಾಸಿಗೆ ಹಿಡಿದೆ. ನರದೌರ್ಬಲ್ಯ, ಬ್ಲಡ್‌ಪ್ರೆಷರ್, ಹೃದಯಬೇನೆ ಮುಂತಾದ ರೋಗಗಳು ಗಂಟುಬಿದ್ದವು. ನನ್ನ ಅನಾರೋಗ್ಯಕ್ಕೆ ತನ್ನ ಹೆಂಡತಿಯ ನಡೆಯೇ ಕಾರಣವೆಂಬುದನ್ನು ಬರು ಬರುತ್ತಾ ವಿವೇಕ ಮನಗಂಡ. ಹಾಗಾಗಿ ಇಬ್ಬರಲ್ಲೂ ಜಗಳವಾಗುತ್ತಿತ್ತು. ಅವನಿಗೆ ಬೇರೆ ಊರಿಗೆ ವರ್ಗವಾದರೂ ಅವಳು ನನ್ನನ್ನು ನೋಡಿಕೊಳ್ಳಲೋಸುಗ ಇಲ್ಲಿಯೇ ಬಿಟ್ಟು ಹೋದ. ಅಲ್ಲಿಯೂ ಮನೆ ಮಾಡಿದ್ದ. ಹಂಡತಿಯನ್ನು ಅಲ್ಲಿಗೂ ಕರೆಸಿಕೊಳ್ಳುತ್ತಿದ್ದನಾದರೂ, ಇಲ್ಲಿ ನಾನೊಬ್ಬಳೇ ಆಗಬಾರದೆಂದು ನನ್ನನ್ನೂ ಕರೆಸಿಕೊಳ್ಳುತ್ತಿದ್ದ. ಅವನು ನನ್ನ ಯೋಗಕ್ಷೇಮ ನೋಡಿಕೊಳ್ಳ ಹತ್ತಿದಂತೆ ಇವಳಿಗೆ ನನ್ನ ಮೇಲೆ ದ್ವೇಷ ಹೆಚ್ಚಾಗತೊಡಗಿತು. ಮೊದಮೊದಲು ಆ ಸಿಟ್ಟನ್ನುನನ್ನ ಮೇಲೆ ತೀರಿಸುತ್ತಿದ್ದವಳು ಅವನಿಗೂ ಕಾಟತೊಡತೊಡಗಿದಳು. ಗಂಡನಿಗೆ ಊಟಕ್ಕೆ ಸಹ ಬಡಿಸದೇ, ತಾನೂ ಊಟಮಾಡದೇ ದಿನವೆಲ್ಲಾ ಅಳುತ್ತಾ ಮಲಗಿಬಿಡುತ್ತಿದ್ದಳು. ಅವನಿಲ್ಲದಾಗ ಹುಚ್ಚಿಯಂತೆ ನನಗೆ ಸಿಕ್ಕಾಪಟ್ಟೆ ಅಂದುಬಿಡುತ್ತಿದ್ದಳು. ನಾನು ಅಸಹಾಯಕತೆಯಿಂದ ಎಲ್ಲವನ್ನೂ ನುಂಗಿಕೊಳ್ಳಬೇಕಾಗುತ್ತಿತ್ತು. ನನ್ನಿಂದ

ಮಗನ ಸಂಸಾರಕ್ಕೂ ಕಷ್ಟ ನನಗೂ ಹಿಂಸೆ, ಹೀಗೇಕಿರಬೇಕು ಎಂದುಕೊಂಡು ಒಂದು ದಿನ ಪಾರ್ವತೆವ್ವನನ್ನು ಕರೆದುಕೊಂಡು ಊರಿಗೆ ಬಂದುಬಿಟ್ಟೆ. ಅದು ನಡೆದು ಈಗಾಗಲೇ ಎರಡು ವರ್ಷಗಳಾಗಿವೆ. ಆಗಿನಿಂದಲೂ ನಾನು ಮನೋರೋಗದಿಂದ ಹಾಸಿಗೆ ಹಿಡಿದೆ. ದಿನದಿನಕ್ಕೂ ರೋಗಬಲಿಯಿತು. ಒಬ್ಬಳೇ ಅತ್ತೂ ಅತ್ತೂ ಮೊದಲು ಕಣ್ಣು ಹೋದವು. ಬರುಬರುತ್ತಾ ಊಟವೂ ಸೇರದಂತಾಗಿ ಸೊಂಟ-ಕೈಕಾಲುಗಳಲ್ಲೂ ಶಕ್ತಿ ಇಲ್ಲವಾಯ್ತು. ಈಗ ಪೂರ್ತಿಯಾಗಿ ಎಲ್ಲದಕ್ಕೂ ಕೆಲಸದವಳನ್ನೇ ಅವಲಂಬಿಸಿ ಬದುಕಬೇಕಾಗಿದೆ. ಹಿಂದಿನ ವರ್ಷ ಎರಡನೆಯ ಮಗ ಬಂದು, ಈಗೀಗ ಅವಳು ಸ್ವಭಾವದಲ್ಲಿ ಸ್ವಲ್ಪ ಸುಧಾರಿಸುತ್ತಿರುವುದಾಗಿ ಹೇಳಿದ. 'ನನ್ನ ಚಿಂತೆ ಬಿಟ್ಟು ನೀವು ಸುಖವಾಗಿರಿ' ಎಂದು ಹೇಳಿ ಕಳಿಸಿಬಿಟ್ಟೆ. ಹಿರಿಯ ಮಗನಿಗಂತೂ ನನ್ನ ನೆನಪೇ ಇಲ್ಲವಾಗಿತ್ತು. ಈ ಪಾರ್ವತೆವ್ವ ಹಿರಿಯವನ ಮದುವೆಯ ಸಮಯಕ್ಕೆ ಬಂದಿದ್ದಳು. ಆಗಿನಿಂದ ಈಕೆಯನ್ನು ಇಲ್ಲೇ ಇಟ್ಟುಕೊಂಡಿದ್ದೇನೆ. ಇಷ್ಟು ವರ್ಷ ಈಕೆ ಚೆನ್ನಾಗಿ ಎಲ್ಲಾ ಮಾಡಿಕೊಂಡು ಹೋಗುತ್ತಿದ್ದಳು. ಈಗೀಗ ಆಕೆಯೂ ಅಲಕ್ಷ್ಯ ಮಾಡಲು ಪ್ರಾರಂಭಿಸಿದ್ದಾಳೆ. ನಾನು ನೋಡುವಂತೆಯೂ ಇಲ್ಲ. ಓಡಾಡುವಂತೆಯೂ ಇಲ್ಲ. ಅವಳು ಆಡಿದ್ದೇ ಆಟ. ಕೇಳುವವರೇ ಇಲ್ಲ. ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗೆ, ಮಾಡಿಕೊಂಡು ಬಂದ ಸೊಸೆಯರಿಗೇ ಕರುಳು ಬಾಧಿಸದಿರುವಾಗ, ಹಣಕ್ಕಾಗಿ ಕೆಲಸ ಮಾಡಲು ಬಂದವರಿಂದ ಹೆಚ್ಚಿಗೆ ಬಯಸುವುದರಲ್ಲಿ ಅರ್ಥವಿಲ್ಲ. ಗಂಟಲೆಷ್ಟು ಒಣಗುತ್ತಿದೆ. ಒಂದು ಲೋಟ ನೀರೂ ಸಹ ಕೊಡಬಾರದೇ? ಕೂಗಿ ಕರೆಯಲೂ ತ್ರಾಣವಿಲ್ಲದಂತಾಗಿದೆ. ಏನು ಮಾಡಲಿ? ನೀರಡಿಕೆಯಿಂದ ಪ್ರಾಣ ಹೋದಂತಾಗುತ್ತಿದೆ. ತೆವಳಿಕೊಂಡಾದರೂ ಹೋಗೋಣವೆಂದು ಪ್ರಯತ್ನಿಸಿದರೂ ಆಗದಲ್ಲ. ಸ್ವಲ್ಪ ಪ್ರಯತ್ನಿಸುತ್ತೇನೆ ಬಾಯಾರಿಕೆಯನ್ನೂ ತಡೆಯಲಾಗುತ್ತಿಲ್ಲ. ಶಿವ..... ಶಿವಾ.....

**ಪಾರ್ವತೆವ್ವ**

ಇವತ್ತು ಬೆಳಿಗ್ಗೆ ಅಮ್ಮಗೆ ಗಂಜಿ ಕುಡಿಸಿ ನಾನೊಂದಿಷ್ಟು ಏನಾದರೂ ಮಾಡಿಕೊಳ್ಳೋಣಾಂತ ಅಡಿಗೆ ಮನೆಗೆ ಹೋಗ್ತಾ ಇದ್ದೆ. ಆಗ ಅಮ್ಮಾ ನನ್ನನ್ನು ಕರೆದು ಒಂದು ಲೋಟ ನೀರು ಕೊಡೂಂತ ಅಂದ್ರು. ನೀರು ತರೋಕೆ ಅಂತ ಒಳಗೆ ಹೊಗ್ತಿದ್ದ ಹಾಗೇ ಪಕ್ಕದ್ಮನೇ ನೀಲಮ್ಮನವರು ನನ್ನನ್ನು ಕರೀತಿದ್ದುದು ಕೇಳಿಸಿತು. ಯಾಕೇಂತ ಆಕಡೆ ಹೋದೆ. ಅವರ ಸೊಸೆ ವಿಚಾರ ಏನೇನೋ ಹೇಳೋಕೆ ಶುರೂ ಮಾಡಿದ್ರು. ಕೇಳ್ತಾ ಕೇಳ್ತಾ ಅಮ್ಮಾರು ನೀರು ಕೇಳಿದ್ನ ಮರ್ತು, ಅಲ್ಲೇ ನಿಂತ್ಕೊಂಬಿಟ್ಟೆ. ನಾವಿಬ್ರೂ ಒಂದು ಗಂಟೆ ಮೇಲೆ ಮಾತಾಡಿರ್ಬೇಕು.

ಅಷ್ಟರಲ್ಲಿ ನೀಲಮ್ಮಾರ ಮಗ ಫ್ಯಾಕ್ಟರಿಯಿಂದ ಬಂದ್ರೂಂತ ಅವ್ರು ಹೋದ್ರು. ಆಗ ನನಗೆ ಹೊಟ್ಟೆ ಚುರ್ ಎನ್ನಲಿಕ್ಕೆ ಹತ್ತಿ ಬೆಳಗ್ನಿಂದ ಏನೂ ತಿಂದೇ ಇಲ್ಲಾಂತ ಜ್ಞಾಪಕಕ್ಕೆ ಬಂತು. ಒಂದುಪ್ಪಿಟ್ಟಾದ್ರೂ ಬೇಗ ಮಾಡ್ಕೊಳ್ಳೋಣಾಂತ ಅಡಿಗೆ ಮನೆ ಕಡೆ ಹೊರಟಾಗ ಅಮ್ಮಾರು ನೀರು ಕೇಳಿದ್ದು ನೆನಪಿಗೆ ಬಂದು ಗಡಬಡಿಸಿ ಓಡಿದೆ. ಹಾಸ್ಗೆ ಮೇಲೆ ಅವರಿರ್ಲಿಲ್ಲ. ಗಾಬರಿಯಾಯ್ತು. ಏಳೋಕೇ ಬರೋಲ್ಲ. ಎಲ್ಲಿಗೆ ಹೋಗ್ತಾರೇಂತ ಅಡಿಗೆ ಮನೆ ಕಡೆ ನುಗ್ಗಿದೆ. ಅಲ್ಲೇ ಬಾಗ್ಲಲ್ಲೇ ಬಿದ್ದಿದ್ರು. ಓಡಿಹೋಗಿ ನೋಡಿದರೆ, ಕಣ್ಣು ಮೇಲ್ಗಣ್ಣಾಗಿದ್ದವು. ಬಾಯಿ ಅರೆದೆರೆದಿತ್ತು. ಕೈ ಎತ್ತಿದೆ ಧೊಪ್ಪೆಂದು ಬಿದ್ದಿತು. ಗಲ್ಲ ಹಿಡಿದು ಅಲ್ಲಾಡಿಸಿದರೂ ಸೊಲ್ಲಿಲ್ಲ. ಮೈಯ್ಯೆಲ್ಲಾ ಹಾವಿನಂತೆ ತಣ್ಣಾಗಾಗಿತ್ತು. ಕಾಯಿಲೆಯಿಂದ ಮೊದಲೇ ಜೀರ್ಣವಾಗಿದ್ದರು. ಮೂಳೆ ಮೂಳೆ ಬಿಟ್ಕೊಂಡಿದ್ದರು. ಈಗೆ ಕೇಳಬೇಕೆ? ದೇಹವೆಲ್ಲಾ ಕಟ್ಟಿಗೆಯಂತಾಗಿತ್ತು. ಅನಾಮತ್ ಎತ್ತಿಕೊಂಡು ಹಾಸಿಗೆಯ ಮೇಲೆ ಮಲಗಿಸಿದೆ. ಬಹುಶಃ ಬಾಯಾರಿಕೆ ತಡೆಯಲಾರದೆ ತೆವಳಿಕೊಂಡು ಹೋಗಿರಬೇಕು. ನಿಶ್ಶಕ್ತಿಯಿಂದಲೂ ನೀರಡಿಕೆಯಿಂದಲೂ ಕುಸಿದು ಬಿದ್ದು ಪ್ರಾಣ ಹೋಗಿರ್ಬೇಕು. ಇಷ್ಟು ದಿನ ಅವರ ಸೇವೆ ಮಾಡಿದೆ. ಆದರೆ ನನ್ನ ಅಲಕ್ಷ್ಯದಿಂದ ಎಂತಹ ಪ್ರಮಾದವಾಯ್ತು. ಪ್ರಾಣ ಹೋಗೋ ಸಂಕಟದ ಸಮಯದಲ್ಲಿ ಒಂದು ಹನಿ ನೀರು ಹಾಕದವಳಾಗಿ ಇಷ್ಟು ದಿನ ಮಾಡಿದ್ದೆಲ್ಲಾ ವ್ಯರ್ಥ ಆದಹಂಗಾತು. ಪಕ್ಕದ ಮನೆಯವರಿಗೆ ತಿಳಿಸಿ ಅಮ್ಮಾರ ಮಕ್ಕಳಿಗೆ, ಬಂಧುಗಳಿಗೆ ಫೋನ್ ಮಾಡಲು ಹೇಳಿದೆ.

ಶವದ ಮುಂದೆ ನಾನೊಬ್ಬಳೆ! ಯಾವುದಕ್ಕೂ ಕೊರತೆಯಿಲ್ಲ. ಮಕ್ಕಳಿಲ್ಲದ ಬಂಜೇನೂ ಅಲ್ಲ. ಒಬ್ರಲ್ಲಂತ ಇಬ್ಬರು ಗಂಡು ಮಕ್ಕಳು. ಅದೂ ದೊಡ್ಡ ಅಧಿಕಾರಿಗಳು. ಪಾಪ ಅಮ್ಮಂಗೆ ಮಕ್ಳನ್ನ ಕಂಡ್ರೆ ಎಷ್ಟು ಪ್ರೀತಿ. ಅವ್ರು ಮದ್ವೆ ಮಾಡಿ ಸೊಸೇರ್ನ ತಂದಾಗಿನಿಂದ ನಾನು ಈ ಮನೇಲಿದೀನಿ. ನಾನೂ ಏನು ಗತಿ ಇಲ್ಲದವಳಲ್ಲ. ಚೆನ್ನಾಗಿ ಇದ್ದೋರ ಮನೆಯವಳೆ. ಗಂಡ ಇನ್ನೊಬ್ಬ ಹೆಣ್ಣನ್ನ ಬೆನ್ನು ಹತ್ತಿ ಕುಣಿಯೋದನ್ನ ನೋಡಿ ಬೇಜಾರಾಯ್ತು. ಇದ್ದ ಇಬ್ಬರು ಹೆಣ್ಮಕ್ಳಿಗೂ ಮದ್ವೆ ಮಾಡಿದ್ದೆ. ಅವ್ರ ಅತ್ತೆ ಮನೆಯವ್ರು ನಮ್ಮನೇಲಿ ಬೇರೆ ಹೆಂಗ್ಸನ್ನ ತಂದಿಟ್ಕೊಂಡಿದ್ದನ್ನ ಕೇಳಿ ನಮ್ಮ ಮಕ್ಳನ್ನ ನಮ್ಮನೇಗೆ ಕಳಿಸ್ತಿರಲಿಲ್ಲ. ನನ್ನ ಸ್ಥಿತಿ ನೋಡಿ ನಮ್ಮ ಮಕ್ಳೇನೋ ತಮ್ ಮನೇಲಿ ಬಂದಿರೋಕೆ ಕರದ್ರು. ಆದರೆ ಬೀಗರ ಮನೇಲಿ ಹೋಗಿ, ಅವರ ಹಂಗಿನಲ್ಲಿರೋಕೆ ಮನಸ್ಸು ಒಪ್ಲಿಲ್ಲ. ಅದೇ ಸಮಯದಲ್ಲಿ ಈ ಅಮ್ಮಾರು ತಮ್ಮ ಹಿರೀ ಮಗನ ಮದುವೆಗೆ ಕರ್ಯೋಕೇಂತ ತಮ್ಮ ಸೋದರಮಾವನ ಮನೆಗೆ ನಮ್ಮೂರಿಗೆ ಬಂದಾಗ, ಅವ್ರಿಗೆ ಪಕ್ಕದ ಮನೇಲಿದ್ದ ನನ್ವಿಚಾರ ಎಲ್ಲಾ ತಿಳೀತು. ಮದುವೆ ಕೆಲಸಕ್ಕೆ ಸ್ವಲ್ಪ ಸಹಾಯ ಮಾಡೋಕೆ ನಾಲ್ಕು

ದಿನ ಬರ್ತೀಯಾ ಅಂದ್ರು. ನನ್ಗೂ ಮನೇಲಿರೋಕೆ ಬೇಜಾರಾಗಿ ಎಲ್ಲಾದ್ರೂ ಹೋಗ್ಬೇಕು ಅನ್ನಿಸ್ತು. ಮದ್ವೆ ಗದ್ದಲದಲ್ಲಿ ನಾಲ್ಕು ಜನರ ನಡುವೆ ಚಿಂತೇನಾದ್ರೂ ಮರೀಬಹುದು ಅಂತ ಹೊರಟುಬಿಟ್ಟೆ. ಪಾಪ, ಗಂಡ ಹಾಸಿಗೆ ಹಿಡಿದು ಮಲಗಿದ್ರೂ, ಒಬ್ರೆ ಓಡಾಡ್ಕೊಂಡು ಎಷ್ಟು ಸಡಗರದಿಂದ ಮದ್ವೆ ಮಾಡಿದ್ರು. ಸೊಸೇನಂತೂ ಮಗ್ಳಿಗಿಂತ ಹೆಚ್ಚಾಗಿ ಕಾಣ್ತಿದ್ರು. ಸೊಸೆ, ರೂಪ, ಓದು, ಇಂಗ್ಲಿಷ್, ಅದೂ ಇದೂಂತ ಎಲ್ಲರ ಮುಂದೆ ಹೇಳ್ಕೊಂಡು ಎಷ್ಟು ಹಿಗ್ತಿದ್ರು. ಆದರೆ ಆಕೆ ಅದೆಂತಾ ಹೆಣ್ಮಗಳೋ ಏನೋ. ಅಷ್ಟು ವಿದ್ಯಾವಂತೆ ಆದ್ರೂ, ಸ್ವಲ್ಪಾನೂ ಸದ್ಗುಣ ಬೇಡ್ವೆ. ಅತ್ತೆ ಆದವ್ರು ಎಷ್ಟು ಪ್ರೀತಿ ತೋರ್ಸಿದ್ರೂ ಅವ್ಳಿಗೆ ಎಷ್ಟು ಸೊಕ್ಕು, ಕೇರೇ ಮಾಡ್ತಿರಲಿಲ್ಲ. ಒಂದ್ಸಾರಿ ಅಂತೂ ಅಮ್ಮಾರ್ನ ನೋಡಿ 'ಇಷ್ಟು ದೊಡ್ಡ ಸಾಹೇಬ್ರು ಹೆಂಡ್ತಿ ನೋಡಿದ್ರೆ ಸ್ವಲ್ಪಾನೂ ಡಿಗ್ನಿಟಿ ಗೊತ್ತಿಲ್ಲ. ಮನೆ ತುಂಬಾ ಕೆಲಸದವ್ರು ಓಡಾಡಿದ್ಹಂಗೆ ಓಡಾಡ್ತಾಳೆ ಮುದ್ಕಿ. ಚೆನ್ನಾಗಿ ಹೇರ್‌ಸ್ಟೈಲ್ ಸಹ ಮಾಡ್ಕೊಳ್ಳೋಕೆ ಗೊತ್ತಿಲ್ಲ. ನನ್ನ ಫ್ರೆಂಡ್ಸ್ ಮುಂದೆ ನಮ್ಮತ್ತೆಂತ ಹೇಳ್ಕೊಳ್ಳೋಕೆ ಅಸಹ್ಯಾಗುತ್ತೇ ಅಂದ್ಬಿಡೋದೆ. ಅಮ್ಮಾರೂ ಏನ್ಮಾಡಿದ್ರೂ ಆಕೆಗೆ ಸೇರ್ತಿರ್ಲಿಲ್ಲ. ಗಂಡ ಅಂತೂ ತುಟಿಪಿಟಕ್ ಅನ್ತಿರಲಿಲ್ಲ. ಅವ್ರು ಹಾಡಿದ್ದೇ ರಾಗ, ಅಲ್ಲಾ ಏನ್ ಮಕ್ಳು ಇಷ್ಟು ಕಲ್ತಿರ್ತಾರೆ. ಯಾವ್ದು ಹಾಲು – ಯಾವ್ದು ನೀರು ಅಂತ ತಿಳ್ಕೊಳ್ಳೋಕೆ ಆಗೋಲ್ಲಾಂದ್ರೆ, ಅವ್ರ ವಿದ್ಯೆ ಎಲ್ಲಾ ನೌಕರಿ ತಗೊಳ್ಳೋಕೆ ಮಾತ್ರ ಅಂತ ಕಾಣುತ್ತೆ. ಹೆಂಡತೀನ ಚೆನ್ನಾಗಿ ಇಟ್ಕೋಬೇಕು. ಪ್ರೀತ್ಯಾಗಿ ಇರ್ಬೇಕು. ಆದ್ರೆ ಹೆತ್ತ ತಾಯೀನ. ಆಕೆ ಅಲಕ್ಷ್ಯ ಮಾಡೋಕೆ ಬಿಡೋದೆ? ತಮ್ಮಾದ್ರೂ ತಾಯಿ ಬಗ್ಗೆ ಜವಾಬ್ದಾರಿ ಬ್ಯಾಡ್ವಾ? ಅದ್ರಲ್ಲೂ ಈ ಅಮ್ಮಾರು ದೇವ್ರಂತಾಕಿ. ಕುಟಿಲ–ಕುತಂತ್ರ ಒಂದೂ ಗೊತ್ತಿಲ್ಲ. ದೊಡ್ಡ ಗುಣ, ಹೋದದ್ದೂ ಒಂದೇ ದಾರಿ ಬಂದದ್ದೂ ಅದೇ ದಾರಿ. ಅಂತಾಕೀನ ಈ ಸೊಸೆ ಎಷ್ಟು ಗೋಳು ಹೊಯ್ಕೊಳ್ಳೋದು ಪಾಪ. ಅಮ್ಮ ನುಂಗಲಾರ್ರು – ಉಗುಳ್ಳಾರ್ರು. ಇನ್ನೊಬ್ಬ ಅತ್ತೆ ಆಗಿದ್ರೆ ಏನ್ಮಾಡ್ತಿದ್ರೋ, ಕೆಲವರು ಸೊಸೇರ್ನ ಅರ್ದ್ಕೊಂಡು ಕುಡೀತಾರೆ. ಅಂಥವರಿಗೆ ಏನ್ಬೇಕಾದ್ರೂ ಮಾಡ್ಲಿ. ಇಂಥವರಿಗೆ ಹೀಗೆ ನಡ್ಕೊಳ್ಳೋದೆ? ಆದ್ರೆ ನನಗ್ಯಾಕೆ ಇದೆಲ್ಲಾ, ಮೂರು ದಿನ ಇದ್ದು ಹೋಗೋವ್ಳೂಂತ ಸುಮ್ನಿದ್ದೆ. ಬೇರೆಯವ್ರ ಮನೆ ವಿಚಾರಕ್ಕೆ ನಾನ್ಯಾಕೆ ಬಾಯಿ ಹಾಕ್ಬೇಕೂಂತ ಸುಮ್ನಿದ್ರೂ ಅಮ್ಮಾರ್ನ ನೋಡಿ ಕರುಳು ಚುರುಕ್ ಅನ್ತಿತ್ತು. ಸಾಹೇಬ್ರು ತೀರ್ಕೊಂಡ ಮೇಲಂತೂ ಆ ಸೊಸೆ ನಡೆದುಕೊಂಡ ರೀತಿ ದೇವರಿಗೇ ಪ್ರೀತಿ. ಒಂದೊಂದು ದಿನ ದುಃಖದಿಂದ ಅವ್ರಾರು ಊಟ ಬಿಟ್ರೆ, 'ಒಂದಿನ ಊಟ ಬಿಟ್ರೆ ಏನ್ ಸಾಯೋಲ್ಲ. ಸುಮ್ನಿರು ಪಾರಾತೆವ್ವಾ, ಈ ವಯಸ್ನಲ್ಲಿ ಒಂದೊಂದು ಸಾರಿ ಊಟ ಬಿಡೋದೇ ಒಳ್ಳೇದು. ಅತೀ ಮೀರಿ ಸತ್ರೂ ತಾನೆ, ಪ್ರಪಂಚ ಹಾಳಾಗೋಲ್ಲ. ಬಾಳಿದ್ದು ಬದುಕಿದ್ದು ಆಗ್ಯೆತೆ. ಇದ್ದು ಬೇರೆವ್ರನ್ನ ಗೋಳೊಯ್ಕೊಳ್ಳೋದಕ್ಕಿಂತ ಬೇಗ ಸಾಯೋದೇ

ಒಳ್ಳೇದು' ಅಂದದ್ದು ಕೇಳಿ, ನನ್ನ ಸಿಟ್ಟು ನೆತ್ತಿಗೇರಿಬಿಟ್ಟಿತು. ಈಗ್ತಾನೆ ಬಂದಿರೋ ಈಕೆ ಅಮ್ಮಾರಿಗಾಗಿ ಏನು ಸವ್ಕಂಡಿದಾಳೆ. ದುಃಖದಲ್ಲಿರೋ ಅವ್ರ ಜೊತೆ ಒಂದಿಷ್ಟು ಪ್ರೀತಿಯಾಗಿ ಮಾತಾಡೋಕೆ ಬರೋಲ್ವಾ? ಇಷ್ಟು ವಿದ್ಯೆ ಕಲ್ತು ಏನು ಸಾರ್ಥಕ!' ಗುಣ ಇಲ್ದ ಹಣ, ವಿದ್ಯೆ ಇಲ್ಲಾ ಒಣ-ಒಣ' ಏನೋ ಮನೇಲಿ ಸಂತೋಷವಾಗಿ ಓಡಾಡಿಕೊಂಡಿರೋದನ್ನು ನೋಡಿ ಸಂತೋಷ ಪಡೋಣಾಂತ ಆಸೆ ಇತ್ತು. ಅದಾಗೊಲ್ಲ ಅಂದ್ಮೇಲೆ ಬೇಜಾರ್ಮಾಡ್ಕೊಂಡು ಅವ್ರ್ಯಾಕೆ ಇಲ್ಲಿ ಇರ್ಬೇಕು ಅಂತ ಹೇಳಿ, ಸಂಸಾರಕ್ಕೆ ಬೇಕಾದ ಸಾಮಾನೆಲ್ಲಾ ಜೋಡಿಸ್ಕೊಟ್ಟು, ಕಳಿಸ್ಕೊಟ್ರು, ಸಾಹೇಬ್ರು ಸತ್ತು ವರ್ಷ ತುಂಬೋದ್ರೊಳಗೆ ಎರಡನೆ ಮಗನಿಗೂ ಮದ್ವೆ ಮಾಡಿದ್ರು, ಆ ಸೊಸೆ ಈಕೆಯಷ್ಟು ಕಲ್ತೋಳಲ್ಲ. ನೋಡೋಕೂ ಸಾಧಾರಣ ಇದ್ಲು. ಆಕೇನಾದ್ರೂ ಸರ್ಯಾಗಿರಬಾರ್ದಾ? ಮೊದ್ಲಿನ ಸೊಸೆ ವಿಚಾರ ತಿಳ್ಕೊಂಡ್ಲು. ಮನೇ ಸ್ಥಿತಿ ನೋಡ್ಕೊಂಡ್ಲು. ಇನ್ನು ಈ ಮುದ್ಕಿ ತನ್ಗೇ ಗಂಟು ಬೀಳುತ್ತೇಂತ ಮೊದಲಿಂದಾನೆ ತನ್ನ ಬಣ್ಣ ತೋರ್ಸೋಕೇ ಹತ್ತಿದ್ಲು. ಆದ್ರೆ ಬೋ ಘಾಟಿ. ಮಾಡಿದ್ದೊಂದೂ ಗೊತ್ತಾಗ್ದಹಂಗೆ, ಪ್ರೀತಿ ಮಾತಾಡ್ಕೊಂಡೇ ಅತ್ತೆ ಜೀವ ತಿಂತಿದ್ಲು. ಗಂಡ ಅಂತೂ ತಾಯಿ ಕೂಡಾ ಮಾತಾಡೋಕೆ ಆಗ್ದಹಂಗೆ ಜಾಣತನ ಮಾಡ್ತಿದ್ಲು. ಅಬ್ಬಬ್ಬ ಈ ಹೆಂಗುಸ್ರೂ ತಮ್ಮ ಜಾಣ್ತನಾನ ಇಂತ ಕುತಂತ್ರ ಮಾಡೋಕೆ ಉಪಯೋಗ್ಸೋದು ಬಿಟ್ಟು, ಯಾವ್ದಾದ್ರೂ ಒಳ್ಳೇ ಕೆಲ್ಸ ಮಾಡೋಕೆ ಉಪಯೋಗಿಸಬಾರ್ದಾ? ಪಾಪ, ಆ ಮಗ ತಾಯೀ ಸುಖವಾಗಿಟ್ಕೋಬೇಕೂಂತ ಒದ್ದಾಡ್ತಿದ್ದ. ಹೆಂಡ್ತಿಗೂ ಹೇಳ್ತಿದ್ದ. ಆದ್ರೆ ಆಕೆ ದಾರೀಗೆ ಬರ್ಲಿಲ್ಲ. ಅವ್ನು ಸಿಟ್ಟಿಗೆದ್ದು ಬೈದರೆ, ತಾನು ತಪ್ಪು ಮಾಡಿದೆ, ಅದ್ಕೆ ಬಯ್ತಾನೆ ಅಂದ್ಕೊಳ್ತಿರ್ಲಿಲ್ಲ. ತಾಯಿ ಮಾತು ಕೇಳ್ಕೊಂಡು ತನ್ಗೆ ಬಯ್ತಾನೆ. ಅಂತ ಅತ್ತೆ ಮೇಲೆ ಆಕೆಗೆ ಇನ್ನಷ್ಟು ಸಿಟ್ಟು ಬರ್ತಿತ್ತು. ದಿನ ದಿನಕ್ಕೂ ಗಂಡ-ಹೆಂಡಿರ ವಿರಸ ಹೆಚ್ಚಾಗ್ತಾನೇ ಹೊಯ್ತು. ಆಗ ಅಮ್ಮಾವ್ರೆ ನನಗಾಗಿ ಅವ್ರಿಬ್ರಲ್ಲಿ ಮನಸ್ತಾಪ ಯಾಕೇಂತ ಗೋಳಾಡ್ತಿದ್ರು. ಒಂದ್ಸಾರಿ ಮಗ ತಾನಿರೋ ಕಡೆಗೆ ಹೆಂಡ್ತೀನೂ – ತಾಯಿನೂ ಇಬ್ರನ್ನೂ ಕರಸ್ಕೊಂಡು, ಒಂದಿವ್ಸ ಮಗ ಆಫೀಸಿಗೆ ಹೋಗಿದ್ದಾಗ, ಸೊಸೆಗೆ ಹೇಳಿ ನನ್ನಕರ್ಕಂಡು ಊರಿಗೆ ಒಂದ್ಬಿಟ್ರು. ಆಮೇಲೆ ಆತ ಹೆಂಡ್ತೀನ ಕಳಿಸ್ತೇನೀಂದ್ರೂ ಇವ್ರು ಒಪ್ಲಿಲ್ಲ. ಇಬ್ರು ಸೋಸೇರು ಇಂಥೋರಾಗಿ ಅಮ್ಮಾರ ದುಃಖಕ್ಕೆ ಕೊನೆ ಇಲ್ದಂಗೆ ಆಯ್ತು. ದಿನ ದಿನಕ್ಕೂ ಹಾಸ್ಗೆ ಹಿಡ್ದೇ ಬಿಟ್ರು, ಅತ್ತೂ ಅತ್ತೂ ಕಣ್ಣೇ ಕಾಣದ ಹಂಗಾದ್ವು. "ಈ ಸ್ಥಿತೀಲಿ ನೀನು ಹೋಗ್ಬಡ ಪಾರ್ವತೆವ್ವ" ಅಂದ್ರು, ನನಗಾದ್ರೂ ಹೋಗ್ಲೇ ಬೇಕು ಅನ್ನೋ ಪರಿಸ್ಥಿತೀನೂ ಇರ್ಲಿಲ್ಲ. ಇಲ್ಲಿಗೇ ಹೆಣ್ಮಕ್ಕಳ್ನ ಕರಸ್ಕೊಂಡು ಇಟ್ಕೊಂಡು ಕಳಿಸ್ತಾ ಇವ್ರ ಹತ್ರಾನೇ ಉಳಿದುಬಿಟ್ಟೆ. ಈಚೀಚೆಗೆ ಈ ಅಮ್ಮಾರಿಗೆ ಖಾಯಿಲೆ ಇನ್ನೂ ಜಾಸ್ತಿಯಾಗಿ ಓಡಾಡೋಕೆ ಬರ್ದಹಂಗಾತು. ಎಲ್ಲಾ ಹಾಸ್ಗೆ ಮೇಲೆ ಆಗ್ಬೇಕಿತ್ತು. ನನ್ನೂಗ್ಗಿ ಮಾಡಿ

ಮಾಡಿ ಬೇಸರ ಆಗಿ ನನ್ಗೀಯಮ್ಮನ ಋಣ ಏನಿತ್ತಪ್ಪಾ ಅನ್ನಿಸ್ತಿತ್ತು. ಒಬ್ಬರನ್ನೇ ಬಿಟ್ಟು ಒಂದು ನಿಮಿಷ ಸಹ ಎಲ್ಲಿಗೂ ಹೋಗೋ ಹಂಗಿರಲಿಲ್ಲ. ಒಂದೊಂದು ಸಾರಿ ನಾನು ಬೇಜಾರಾಗಿ ಸಿಡಿಗುಟ್ಟಿ ಬಿಡ್ತಿದ್ದೆ. ಆದ್ರೂ ನೊಂದ ಜೀವನಕ್ಕೆ ಮತ್ತಷ್ಟು ನೋವು ಕೊಡಬಾರ್ದೂಂತ ನನ್ನನ್ನು ನಾನೇ ತಡ್ಕೊಳ್ತಿದ್ದೆ. ಯಾವಾಗ್ಲಾದ್ರೂ ಒಂದ್ಸಾರಿ ಪಕ್ಕದ್ಮನೆ ನೀಲಮ್ನೋರ ಹತ್ರ ಹರಟೆ ಹೊಡೀತಾ ಸ್ವಲ್ಪ ಬೇಜಾರು ಕಳ್ಕೊಳ್ತಿದ್ದೆ. ಅವ್ರಿಗೆ, ಕುಡೀಲಿಕ್ಕೆ ನೀರು ತರ್ಲಿಕ್ಕೆ ಹೋಗ್ತಿದ್ದಾಗ ನೀಲಮ್ಮ ಕರದ್ರೂಂತ ಹೋದದ್ದೇ ತಪ್ಪಾಯ್ತು. ಮಾತಾಡ್ತಾ ಮಾತಾಡ್ತಾ ಅವ್ರು, ನೀರು ಕೇಳಿದ್ದನ್ನೇ ಮರೆತುಬಿಟ್ಟೆ. ನೀರಿಲ್ದೆ ಎಷ್ಟು ಸಂಕ್ಟ ಪಟ್ಕೊಂಡ್ರೋ ಏನೋ. ನಾನು ತಕ್ಷಣ ನೀರು ಕೊಟ್ಟಿದ್ರೆ, ಸಾಯ್ತಾ ಇರ್ಲಿಲ್ವೋ ಏನೋ. ಇಷ್ಟು ದಿನ ಹೊಟ್ಟೇಲಿ ಹುಟ್ಟಿದ ಮಗಳ ಹಂಗೆ ಸೇವೆ ಮಾಡಿ ಕೊನೆ ಕಾಲ್ದಲ್ಲಿ ಎಂಥಾ ಅಚಾತುರ್ಯ ಆಯ್ತು. ಅವ್ರ ಸಾವಿಗೆ ನಾನೇ ಕಾರಣ ಆದ್ನೋ ಏನೊ.

ಮಕ್ಕಳು ಎಲ್ಲೆಲ್ಲಿ ಇದ್ದಾರೋ? ಅವ್ರಿಗೆಲ್ಲಾ ಸುದ್ದಿ ಮುಟ್ಟಿ ಹೊತ್ತಿಗೆ ಸರ್ಯಾಗಿ ಬಂದು ಈ ಕೊನೇ ಕೆಲ್ಸಾನಾದ್ರೂ ಸರ್ಯಾಗಿ ಮಾಡಿದ್ರೆ ಸಾಕು. ಮಕ್ಳು ಬಂದ್ರೆ ನನಗೂ ನಿಶ್ಚಿಂತೆ ಆಗುತ್ತೆ. ಅವ್ರಿಗಿಂತ ಮೊದ್ಲು ಬಂಧುಗಳು ಯಾರಾದ್ರೂ ಬಂದ್ರೆ, ಮನೇನೆಲ್ಲಾ ಅವ್ರ ವಶಕ್ಕೇ ಕೊಡ್ಬೇಕಾಗುತ್ತೆ. ಹಾಸ್ಗೆ ಕೆಳಗಿದ್ದ ಟ್ರೈಝರಿ ಬೀಗದ ಕೈನ ಜೋಪಾನವಾಗಿ ಸರಿಯಾಗಿ ತೆಗೆದಿಟ್ಟಿದೀನಿ. ಅದನ್ನು ಅವ್ರ ಮಕ್ಳ ಕೈಗೆ ಒಪ್ಪಿಸಿಬಿಟ್ಟರೆ ನನ್ನ ಋಣ ಮುಗ್ಯುತ್ತೆ. ನನ್ನ ದಾರಿ ನಾನು ಹಿಡೀತೀನಿ.

ಮಗ

ಅಮ್ಮ ಎಷ್ಟು ಜೀರ್ಣವಾಗಿ ಹೋಗಿದ್ದಾಳೆ. ಮೂಳೆಗೆ ಚರ್ಮವನ್ನು ಹೊದಿಸಿದಂತೆ ಕಾಣುತ್ತದೆ. ಹೋದವರ್ಷ ನಾನು ಬಂದಾಗ ನೋಡಿದ್ದಕ್ಕೂ ಇವತ್ತಿಗೂ ಹೋಲಿಸಿದರೆ ಅಜಗಜಾಂತರ ವ್ಯತ್ಯಾಸ! ಸೊರಗಿ ಕಡ್ಡಿಯಾಗಿದ್ದಾಳೆ. ಅಬ್ಬಾ! ನಾವೆಂತಹ ಮಕ್ಕಳು, ನಮ್ಮಂತಹವರು ಇದ್ದೂ ಇಲ್ಲದಂತೆ. ಆಕೆ ನಮ್ಮ ನಡತೆಯಿಂದ ಎಷ್ಟು ನೊಂದಿರಬೇಕು. ಬಹುಶಃ ಆಕೆ ಬಂಜೆಯಾಗಿದ್ದಿದ್ದರೆ ಇಷ್ಟು ನೋವು ಅನುಭವಿಸುತ್ತಿರಲಿಲ್ಲ. ನಮಗಾಗಿ ಈಕೆ ಏನೇನ ಮಾಡಿದಳು! ತಾಯಿಯಾಗಿ ಮಾಡುವುದನ್ನು ಎಲ್ಲರಿಗಿಂತ ಹೆಚ್ಚಾಗಿಯೇ ಮಾಡಿದಳು. ಆದರೆ ನಾವು ಮಕ್ಕಳಾಗಿ ತಾಯಿಗೆ ಏನು ಮಾಡಿದೆವು. ಏನಾದರೂ ಮಾಡುವುದಿರಲಿ ಸಂತೋಷವಾಗುವಂತೆ ಮಾತು ಸಹ ಆಡುತ್ತಿರಲಿಲ್ಲವಲ್ಲ. ಸಾಯುವ ಕಾಲದಲ್ಲಿ, ಮಕ್ಕಳಾಗಿ ಹುಟ್ಟಿದ ನಾವು ಒಂದು ಹನಿ ನೀರನ್ನೂ ಸಹ ಹನಿಸಲಾಗಲಿಲ್ಲವಲ್ಲ! ಅಷ್ಟು ಮಮತೆಯುಳ್ಳ ಆಕೆ ಸಾಯುವ ಮುಂದೆ ಮಕ್ಕಳನ್ನೂ ನೋಡಬೇಕೆಂದು ಎಷ್ಟು ಹಂಬಲಿಸಿದಳೋ ಏನೋ. ಸುದ್ದಿ ಮುಟ್ಟುವುದು ಇನ್ನೊಂದು ಗಂಟೆ

ತಡವಾಗಿದ್ದಿದ್ದರೆ, ಅಣ್ಣನಂತೆ ಮಣ್ಣಿಗೂ ಸಹ ನಾನು ಬರಲಾಗುತ್ತಿರಲಿಲ್ಲ. ಆಕೆಯ ಯೋಗಕ್ಷೇಮದ ಜವಾಬ್ದಾರಿಯನ್ನೂ ಬೇರಾರಿಗೋ ಬಿಟ್ಟಂತೆ, ಮಣ್ಣು ಕೊಡುವ ಹೊಣೆಗಾರಿಕೆಯನ್ನೂ ಯಾರೋ ಹೊರಬೇಕಾಗುತ್ತಿತ್ತು. ರಾಂಚಿಗೆ ಹೋಗಿ ಬಿಡುತ್ತಿದ್ದೆ. ಅಣ್ಣನಿಗಾದರೂ ಅಷ್ಟೆ. ಮೊನ್ನೆ ಫೋನ್ ಮಾಡಿದಾಗ ಆಫೀಸಿನ ಯಾವುದೋ ಕೆಲಸದ ನಿಮಿತ್ತ ಫ್ರಾನ್ಸ್‌ಗೆ ಹೊರಟಿರುವುದಾಗಿ ತಿಳಿಸಿದ್ದ. ಅವನಂತೂ ಈ ಸಂಜೆಯ ಒಳಗಾಗಿ ಪರದೇಶದಿಂದ ಬರಲು ಸಾಧ್ಯವಿಲ್ಲದ ಮಾತು. ನನ್ನ ಮದುವೆಯಾದ ಕೆಲವು ತಿಂಗಳ ಮೇಲೆ ಅಮ್ಮ ಅವನನ್ನು ನೋಡಿಯೇ ಇಲ್ಲ. ಆ ಬಗ್ಗೆ ಅವರೆಷ್ಟು ಕಣ್ಣೀರು ಸುರಿಸುತ್ತಿದ್ದರು. ಬದುಕಿದಾಗ ಮುಖ ನೋಡಲೂ ಬಾರದ ಅವನು, ಸತ್ತ ಮೇಲೆ ಮಣ್ಣು ಕೊಡುವುದರಿಂದ ಆಕೆಗಾಗುವುದೇನು ಎಂದೋ ಏನೋ, ವಿಧಿ ಅವನನ್ನು ಮಣ್ಣಿಗೂ ಒದಗದಂತೆ ಮಾಡಿತು.

ನಾನು ತಾಯಿಯ ರಕ್ತ ಮಾಂಸದಿಂದ ರೂಪುಗೊಂಡು ಬಂದುದೊಂದೇ ಅಲ್ಲ. ನಮ್ಮನ್ನು ಬೆಳೆಸುವಾಗ ಅಮ್ಮ ಪಟ್ಟ ಬವಣೆ ಎಷ್ಟು? ಅಪ್ಪನಾದರೋ ಕುಟುಂಬದ ಜವಾಬ್ದಾರಿಯೆಲ್ಲಾ ಹೆಂಗಸಿಗೇ ಸೇರಿದ್ದೆಂದು ತಿಳಿದು ಬೆಳೆದವರು. ಯಾವಾಗಲೂ ಬಿಜಿ ಬೇರೆ. ಕುಟುಂಬದ ಯಾವ ಸಣ್ಣ ಕೆಲಸಕ್ಕೂ ಅವರು ಗಮನ ಕೊಡುತ್ತಿರಲಿಲ್ಲ. ಆದರೆ ಅವರ ಸ್ನೇಹಿತರನ್ನು, ಪರಿಚಿತರನ್ನು, ಬಂಧುಗಳನ್ನು, ಸಹೋದ್ಯೋಗಿಗಳನ್ನು ಯಾವಾಗೆಂದರೆ ಆವಾಗ ಊಟಕ್ಕೋ, ತಿಂಡಿಗೋ ಇದ್ದಕ್ಕಿದ್ದಂತೆ ಕರೆದುಕೊಂಡು ಬಂದುಬಿಡುತ್ತಿದ್ದರು. ಅಮ್ಮಗೆ ಬಿಡುವಾಗಿದೆ ಎಂದಾಗಲೀ, ಆರೋಗ್ಯವಿದೆಯೋ ಇಲ್ಲವೋ ಎಂದಾಗಲೀ ಅವರಿಗೆ ಮನಸ್ಸಿದೆಯೋ ಇಲ್ಲವೋ ಎಂದಾಗಲೀ ಯೋಚಿಸಬೇಕೆಂಬ ಕಲ್ಪನೆ ಸಹ ಅವರಿಗೆ ಇರಲಿಲ್ಲ. ತಮಗೆ ಬೇಕಾದುದನ್ನೆಲ್ಲಾ ಅಮ್ಮ ಮಾಡಬೇಕೆಂಬುದು ಅವರ ಸಿದ್ಧಾಂತ. ಮನೆ ತುಂಬ ಆಳು-ಕಾಳುಗಳು. ಅವರನ್ನೆಲ್ಲಾ ನಿರ್ವಹಿಸಬೇಕಿತ್ತು. ಇಷ್ಟೆಲ್ಲಾ ಜವಾಬ್ದಾರಿಗಳ ಮಧ್ಯೆಯೂ ನಮ್ಮ ಆರೋಗ್ಯಕ್ಕೆ ಊಟ, ತಿಂಡಿಗೆ, ಅಭ್ಯಾಸಕ್ಕೆ ತೊಂದರೆಯಾಗದಂತೆ ಗಮನಕೊಡುತ್ತಿದ್ದಳು. ಮನೆಗೆ ಬರುಹೋಗುವ ಜನರ ಒತ್ತಡದಲ್ಲಿ ನಮ್ಮ ಓದು ಕೆಟ್ಟೀತೆಂದು ಚಡಪಡಿಸಿದರೂ, ಯಾವುದನ್ನೂ ಬಿಡುವ ಹಾಗಿರಲಿಲ್ಲ. ನಮ್ಮ ಶಾಲೆಯ ಓದು ಮುಗಿಯುವವರೆಗೆ ಬಿಡುವಾದಾಗಲೆಲ್ಲಾ ಪಾಠ ಸಹ ಹೇಳಿ ನಮ್ಮ ಶಿಕ್ಷಣಕ್ಕೆ ಭದ್ರ ಬುನಾದಿ ಹಾಕಿದಳು. ಹಾಗಾಗಿ ಮುಂದೆ ಓದು ನಮಗೆ ಸ್ವಲ್ಪವೂ ಕಷ್ಟವಾಗಲಿಲ್ಲ. ಒಮ್ಮೆ ಅಣ್ಣನಿಗೆ ಟಾಯ್‌ಫಾಯಿಡ್ ಆಗಿ ತುಂಬಾ ಸೀರಿಯಸ್ ಆಗಿಬಿಟ್ಟಿತ್ತು. ಅಮ್ಮ ರಾತ್ರಿ ಹಗಲೊಂದಾಗಿ ಆರೈಕೆ ಮಾಡಿದಳು. ಯಾವಾಗ ನಿದ್ದೆ ಮಾಡುತ್ತಿದ್ದಳೋ ದೇವರಿಗೇ ಗೊತ್ತು! ಯಾವಾಗ ಎಚ್ಚರವಾದರೂ ಅಣ್ಣನ ಹಾಸಿಗೆಯ ಪಕ್ಕದಲ್ಲೇ ಕುಳಿತಿರುತ್ತಿದ್ದಳು. ಅಪ್ಪನಾದರೋ ಔಷಧ ಪ್ರಿಸ್ಕ್ರೈಬ್

ಮಾಡಲು ಡಾಕ್ಟರಿದ್ದಾರೆ, ಉಪಚಾರಕ್ಕೆ ಅಮ್ಮನಿದ್ದಾಳೆ, ಹೀಗಾಗಿ ಅಲ್ಲಿ ತಮ್ಮ ಕೆಲಸವೇನಿಲ್ಲ, ಎಂಬಂತೆ ನಿಶ್ಚಿಂತರಾಗಿ ತಮ್ಮ ಕೆಲಸದಲ್ಲಿ ಮಗ್ನರಾಗಿದ್ದರು. ಕೊನೆಗೆ ಒಂದು ಧೈರ್ಯ ಕೊಡುವ ಗೊಡವೆಗೂ ಹೋಗುತ್ತಿರಲಿಲ್ಲ. ಮನೆಯಲ್ಲಿ ಆಳು-ಕಾಳುಗಳಿದ್ದರೂ ನಮಗೆ ಸಂಬಂಧಿಸಿದ ಕೆಲಸಗಳನ್ನು ಅಮ್ಮ ಆಳುಗಳಿಗೆ ವಹಿಸುತ್ತಿರಲಿಲ್ಲ. ಎಷ್ಟೇ ಕಷ್ಟವಾದರೂ ತಾನೇ ನೋಡಿಕೊಳ್ಳುತ್ತಿದ್ದಳು. ಒಮ್ಮೆ ನನಗೆ ಸಿವಿಯರ್ ಡಿಸೆಂಟ್ರಿಯಾದಾಗ ಬೆಡ್‌ಪ್ಯಾನ್ ಕೊಡಲು ಆಳುಗಳನ್ನು ಕರಿ ಎಂದರೆ ಕರೆಯಲಿಲ್ಲ. ಅವರೆಲ್ಲಾ ಮನಸ್ಸಿಲ್ಲದ ಮನಸ್ಸಿನಿಂದ ಮಾಡುತ್ತಾರೆ. ಅಂತಹವರಿಗೇಕೆ ಹೇಳಬೇಕೆಂದು ತಾನೇ ಎಳೆ ಮಗುವನ್ನು ನೋಡಿಕೊಂಡಂತೆ ನೋಡಿಕೊಂಡಳು. ಶಾಲೆಗೆ ಸಹ ಬಂದು ನಮ್ಮ ಶಿಕ್ಷಕರನ್ನು ಭೆಟ್ಟಿಯಾಗಿ ನಮ್ಮ ಓದಿನ ಬಗ್ಗೆ ವಿಚಾರಿಸಿಕೊಂಡು ಹೋಗುತ್ತಿದ್ದಳು. ಅಪ್ಪ 'ನೀವು ಯಾವ ತರಗತಿಯಲ್ಲಿ ಓದುತ್ತಿದ್ದೀರಿ' ಎಂದೂ ಸಹ ಕೇಳಿದವರಲ್ಲ. ಅಂದರೆ ಅವರಿಗೆ ನಮ್ಮ ಹಿತ ಬೇಕಿಲ್ಲವೆಂದೇನಿರಲಿಲ್ಲ. ಅಮ್ಮ ಇರುವಾಗ ನಾನೇಕೆ ಎಂದು ತಮ್ಮ ಕೆಲಸದಲ್ಲಿ ಮಗ್ನರಾಗಿಬಿಡುತ್ತಿದ್ದರು. ಮುಂದೆ ನಾವು ಹೆಚ್ಚಿನ ಶಿಕ್ಷಣಕ್ಕಾಗಿ ಬೇರೆ ಊರುಗಳಿಗೆ ಹೋಗಬೇಕಾಗಿ ಬಂದಾಗ ನಮ್ಮನ್ನು ಬಿಟ್ಟಿರುವುದು ಅವಳಿಗೆ ಸಹಿಸಲು ಕಷ್ಟವಾದರೂ ನುಂಗಿಕೊಂಡಳೇ ಹೊರತು ಇದ್ದೂರಲ್ಲೇ ಇದ್ದುದನ್ನು ಓದಿ ಎಂದು ನಮ್ಮ ಅಭಿವೃದ್ಧಿಗೆ ಅಡ್ಡ ನಿಲ್ಲಲಿಲ್ಲ. ನಮ್ಮ ಏಳ್ಗೆಗಾಗಿ ಯಾವ ತ್ಯಾಗಕ್ಕೆ ಬೇಕಾದರೂ ಸಿದ್ಧಳಿದ್ದಳು. ನಾವು ರಜೆಯಲ್ಲಿ ಮನೆಗೆ ಬಂದಾಗ ಆಕೆಗೆ ಸ್ವರ್ಗವೇ ಸಿಕ್ಕಂತಾಗುತ್ತಿತ್ತು. ಈಚೆಗೆ ನಮ್ಮ ಮದುವೆಯಾದ ಮೇಲೆ ನಮ್ಮನ್ನು ನೋಡಿದರೆ ಹಿಗ್ಗೂ ಇಲ್ಲ. ಕುಗ್ಗೂ ಇಲ್ಲ. ನಿರ್ಲಿಪ್ತಳಂತೆ ಕಾಣುತ್ತಿದ್ದಳು. ಅಂತಹ ತಾಯಿಗೆ ನಾವೇನು ಸುಖ ಕೊಟ್ಟೆವು? ಸುಖ ಕೊಡುವುದಿರಲಿ ವೃದ್ಧಾಪ್ಯದಲ್ಲಿ ಒಂಟಿತನವನ್ನುಂಟು ಮಾಡಿ ಕೊರಗುವಂತೆ ಮಾಡಿದೆವು.

ಅತ್ತಿಗೆ ವಿಚಿತ್ರ ವ್ಯಕ್ತಿ. ಅಮ್ಮ ಎಷ್ಟು ಪ್ರೀತಿಯಿಂದ ಕಂಡರೂ ಆಕೆ ಅಮ್ಮನನ್ನು ಬಲು ನಿಕೃಷ್ಟ ದೃಷ್ಟಿಯಿಂದ ನೋಡುತ್ತಿದ್ದಳು. ಒಂದು ದಿನವೂ ಅಮ್ಮನೊಡನೆ ಸಂತೋಷದಿಂದ ಮಾತನಾಡಿದುದನ್ನು ನಾನು ಕಾಣಲಿಲ್ಲ. ಅತ್ತೆಯರು ಸೊಸೆಯರನ್ನು ಗೋಳು ಹುಯ್ದುಕೊಳ್ಳುವ ಅನೇಕ ಕಥೆಗಳನ್ನು ಕೇಳಿದ್ದೆ. ಆದರೆ ಇಲ್ಲಿ ನಮ್ಮ ಮನೆಯಲ್ಲಿ ಸೊಸೆಯಿಂದಲೇ ಅತ್ತೆಗೆ ಹಿಂಸೆ, ಇಷ್ಟೇ ಅಲ್ಲ ಅಮ್ಮನ ಮೇಲೆ ಅಷ್ಟು ಪ್ರೀತಿಯಿಂದ ಇದ್ದ ಅಣ್ಣ ಸಹ ಅಸಹಾಯಕನಾಗುತ್ತಿದ್ದ. ಅಮ್ಮನ ಮೇಲೆಯೇ ಸಿಟ್ಟಿಗೇಳುತ್ತಿದ್ದ. ಅಣ್ಣ ಅಮ್ಮನಿಗೆ ದುಃಖವಾಗುವಂತೆ ಮಾತನಾಡಿದಾಗ ಅತ್ತಿಗೆ ಎಷ್ಟು ಸಂತೋಷ ಪಡುತ್ತಿದ್ದಳೆಂಬುದನ್ನು ಗಮನಿಸಿದ್ದೆ. ಅಮ್ಮನೇನು ಸಿಟ್ಟಿಗೇಳುತ್ತಿರಲಿಲ್ಲ. ಆದರೆ ತುಂಬಾ ನೊಂದುಕೊಳ್ಳುತ್ತಿದ್ದಳು. ಏನಾದರೂ ಮಾತಾಡಿದರೆ ಮತ್ತೆಷ್ಟು ರಾದ್ಧಾಂತವಾದೀತೋ ಎಂದು ತುಟಿ ಪಿಟಕ್ಕೆನ್ನುತ್ತಿರಲಿಲ್ಲ.

ಆಗಲೇ ನಾನು, ನನ್ನ ಮದುವೆಯಾದ ಮೇಲೆ ನಾನು ಹೀಗೆಂದೂ ಮಾಡುವುದೂ ಇಲ್ಲ. ನನ್ನ ಹೆಂಡತಿ ಹೀಗೆ ವರ್ತಿಸಲೂ ಬಿಡುವುದಿಲ್ಲ ಎಂದು ನಿಶ್ಚಯಿಸಿಬಿಟ್ಟಿದ್ದೆ. ಅದಕ್ಕಾಗಿಯೇ ಅಮ್ಮ ಆರಿಸಿದ ಹುಡುಗಿ ಅಷ್ಟೇನೂ ಲಕ್ಷಣವಾಗಿಲ್ಲದಿದ್ದರೂ, ಹೆಚ್ಚು ಓದದಿದ್ದರೂ ಒಪ್ಪಿಬಿಟ್ಟೆ. ಅಪ್ಪನೂ ತೀರಿಕೊಂಡಿರುವಾಗ ನಮ್ಮಿಂದಲಾದರೂ ಆಕೆಗೆ ಸ್ವಲ್ಪ ಸುಖ ಸಿಗಲಿ ಎಂಬುದು ನನ್ನ ವಿಚಾರವಾಗಿತ್ತು. ಆದರೆ ದುರಾದೃಷ್ಟದಿಂದ ನನ್ನ ಹೆಂಡತಿಯೂ ಸದ್ಗುಣಗಳನ್ನು ಹೊಂದಿರಲಿಲ್ಲ. ತುಂಬಾ ಸಂಕುಚಿತ ಸ್ವಭಾವದವಳೂ, ಸಣ್ಣಬುದ್ಧಿಯವಳೂ ಆಗಿದ್ದಳು. ಅಮ್ಮ ನನ್ನನ್ನು ಪ್ರೀತಿಯಿಂದ ಮಾತನಾಡಿಸಿದರೂ, ಆಕೆಗೆ ಸಹಿಸಲಾಗುತ್ತಿರಲಿಲ್ಲ; ತುಂಬಾ ಹೊಟ್ಟೆಕಿಚ್ಚು ಪಡುತ್ತಿದ್ದಳು. ಸಹಜವಾಗಿ ಮಾತನಾಡಿದರೂ ಕದ್ದು ಕೇಳುತ್ತಿದ್ದಳು. ನನ್ನೊಡನೆ ಅಮ್ಮನ ಬಗ್ಗೆ ಸದಾ ಚಾಡಿ ಹೇಳುತ್ತಿದ್ದಳು. ನಮ್ಮಮ್ಮನ ವಿಶಾಲ ಬುದ್ಧಿ ನನಗೆ ಗೊತ್ತಿತ್ತು. ಅವಳ ಮಾತನ್ನು ನಂಬುತ್ತಿರಲಿಲ್ಲ. ಆಗ ಆಕೆಗೆ ಸಿಟ್ಟು ಬಂದು ಬಿಡುತ್ತಿತ್ತು. ಅಷ್ಟೇ ಅಲ್ಲ. ಅಮ್ಮನ ಬಗ್ಗೆ ದ್ವೇಷ ಬೆಳೆಸಿಕೊಂಡಳು. ನನ್ನ ಎದುರಿಗೆ ಒಂದು ರೀತಿ, ಇಲ್ಲದಾಗ ಒಂದು ರೀತಿ ನಡೆಯುವುದೂ ನನಗೆ ತಿಳಿಯಿತು. ಅವಳ ಕ್ಷುಲ್ಲಕತನ ನೋಡಿ ನನಗೆ ಸಿಟ್ಟು ಬರುತ್ತಿತ್ತು. ಅಮ್ಮನನ್ನು ಸುಖವಾಗಿಡಬೇಕೆಂದು ಬಹಳ ಪ್ರಯತ್ನಪಟ್ಟೆ. ಇವಳ ಮನಸ್ಸನ್ನು ತಿದ್ದಲು ಎಷ್ಟೇ ಪ್ರಯತ್ನಿಸಿದರೂ ಸಂಸ್ಕಾರವಿಲ್ಲದ ಇವಳು ಬದಲಾಗಲಿಲ್ಲ. ಎಷ್ಟೋ ಬಾರಿ ಅವಳೊಡನೆ ಜಗಳವಾಡುತ್ತಿದ್ದೆ. ಇದರಿಂದ ಅಮ್ಮನಿಗೆ ಇನ್ನಷ್ಟು ನೋವಾಗುತ್ತಿತ್ತು. ಅಮ್ಮ ಉಪಾಯವಾಗಿ ನನ್ನಿಂದ ದೂರ ಉಳಿದಳು. ನನ್ನ ಹೆಂಡತಿಯ ಅವಿವೇಕದಿಂದ ನಾನೂ ತಾಯಿಯನ್ನು ಉಪಚರಿಸಲು ಹೋಗದಾದೆ. ಏಕೆಂದರೆ ಅಮ್ಮನ ಸುದ್ದಿ ಎತ್ತಿದರೆ ಇವಳಿಗೆ ಹುಚ್ಚು ಹಿಡಿದಂತಾಗುತ್ತಿತ್ತು. ನಾನು ಯೋಗಕ್ಷೇಮಕ್ಕೆ ಪತ್ರ ಬರೆಯುತ್ತಿದ್ದೆನಾದರೂ ಅಮ್ಮನ ಅನಾರೋಗ್ಯದಿಂದ ಆಕೆಯಿಂದ ಉತ್ತರ ಬರುತ್ತಿರಲಿಲ್ಲ. ಯಾರ ಕೈಲಾದರೂ ಬರೆಸಬಹುದಿತ್ತು. ಆದರೆ ನಮ್ಮ ನಡವಳಿಕೆಯಿಂದ ಆಕೆಗೆ ತುಂಬಾ ಬೇಸರವಾಗಿ ನಮ್ಮ ಸಂಬಂಧದ ಆಸೆಯನ್ನೇ ಬಿಟ್ಟುಬಿಟ್ಟಿದ್ದಳು. ನನಗೆ ತಾಯಿಯ ಆರೈಕೆ ಮಾಡಬೇಕೆಂಬ ಆಸೆ ಇದ್ದರೂ ಆಕೆಯೇ ಆರಿಸಿತಂದ ಸೊಸೆ ಆಸ್ಪದ ಕೊಡಲಿಲ್ಲ. ಆಕೆಯನ್ನು ಮನೆಯಿಂದ ಹೊರಹಾಕಬೇಕಾಗಿತ್ತು. ಅದರಿಂದಲೂ ಅಮ್ಮನಿಗೆ ನೋವಾಗುತ್ತಿತ್ತು. ಹೀಗೆ ಅಸಹಾಯಕನಾಗಿ ನನ್ನ ಕರ್ತವ್ಯ ಮಾಡದ ನೋವನ್ನು ಈಗ ಅನುಭವಿಸಬೇಕಾಗಿದೆ. ನನ್ನ ಸ್ನೇಹಿತ ಸುರೇಶ್ ಎಷ್ಟು ಪುಣ್ಯವಂತ. ಅವನು ತನ್ನ ತಂದೆ–ತಾಯಿಯೊಂದಿಗೆ ಎಷ್ಟು ಸುಖವಾಗಿದ್ದಾನೆ. ಅವನ ಹೆಂಡತಿ ಎಲ್ಲರೊಡನೆ ಎಷ್ಟು ಪ್ರೀತಿಯಿಂದ ಇದ್ದಾಳೆ. ಅವರ ಮನೆ ಸ್ವರ್ಗದಂತಿದೆ. ಇದಕ್ಕೆಲ್ಲಾ ಸುರೇಶನ ಹೆಂಡಿತಿಯೇ ಕಾರಣ. ನನ್ನ ಹೆಂಡತಿಗೂ ಸುರೇಶನ ಹೆಂಡತಿಯ ಸ್ವಭಾವವಿದ್ದಿದ್ದರೆ ನಾವೆಲ್ಲಾ ಎಷ್ಟು ಸುಖದಿಂದ ಇರಬಹುದಿತ್ತು.

ಯಾರ‍್ಯಾರ ಮನೆಯ ಹುಡುಗಿಯರನ್ನೋ ತಂದುಕೊಂಡು ನಮ್ಮ ಮನೆಯ ಪ್ರೀತಿ–ವಿಶ್ವಾಸಗಳನ್ನು ಸುಖ–ಶಾಂತಿಗಳನ್ನು ಹಾಳುಮಾಡಿಕೊಂಡಂತಾಯ್ತು. ದೇವತೆಯಂತಿದ್ದ ನಮ್ಮಮ್ಮ ನರಕ ಅನುಭವಿಸುವಂತಾಯ್ತು. ದಿಕ್ಕಿಲ್ಲದವರಂತೆ ಸಾಯುವ ಪರಿಸ್ಥಿತಿ ಉಂಟಾಯ್ತು. ನಮ್ಮ ತಾಯಿಯ ಮನಸ್ಸನ್ನು ನೋಡಿಸಿದ ನನ್ನ ಹೆಂಡತಿ. ಆಕೆಗೆ ಒಂದು ಹಿಡಿ ಮಣ್ಣು ಕೊಡುವುದು ಬೇಡವೆಂದು ಅವಳನ್ನು ಕರೆದುಕೊಂಡೇ ಬರಲಿಲ್ಲ.

■

## ೯. ಹೀಗೂ ನಡ್ಯೋದುಂಟೇ

ಸ್ವಾತಿ ಬೆಳಗಾಗೆದ್ದು ಮುಖ ತೊಳೆದು ಕಾಫಿ ಮಾಡಿದಳು. ಮಕ್ಕಳಿಬ್ಬರೂ ವಿವಾಹವಾಗಿ ಹೋದುದರಿಂದ ಮನೆಯಲ್ಲಿ ತಾವಿಬ್ಬರೆ. ಕಳೆದ ವಾರ, ಶೃತಿ ತನ್ನ ಮಕ್ಕಳೊಂದಿಗೆ ತಂದೆ-ತಾಯಂದಿರನ್ನು ನೋಡಿಕೊಂಡು ಹೋಗಲು ಬಂದು, ನಾಲ್ಕಾರು ದಿನವಿದ್ದಾಗ ಮನೆಯೆಲ್ಲಾ ಬೆಳಕಿನಿಂದ ತುಂಬಿತ್ತು. ಗೋಡೆ-ಕಿಟಕಿಗಳಿಗೆ ಸಹ ಜೀವ ಬಂದಿತ್ತು. ಇಡೀ ಮನೆಯೇ ಸಂತೋಷದಿಂದ ನಲಿದಾಡುತ್ತಿದೆಯೋ ಎಂಬಂತೆ ಎಲ್ಲೆಡೆ ಜೀವನೋತ್ಸಾಹ ತುಳುಕುತ್ತಿತ್ತು. ಮಕ್ಕಳ ಅಳು, ನಗು, ನಲ್ಮಾತು ಸಂಗೀತದ ವಿವಿಧ ರಾಗಗಳ ಆರೋಹಣ, ಅವರೋಹಗಳನ್ನು ಆಲಾಪನೆಗಳನ್ನು ಕೇಳಿದಂತೆನಿಸುತ್ತಿತ್ತು. ಇದೆಲ್ಲಾ ಕ್ಷಣಿಕ. ದಿನಗಳು ಕ್ಷಣಗಳಂತೆ ಉರುಳಿದವು. ನೆನ್ನೆ ಶೃತಿ ಕರೆದುಕೊಂಡು ಹೊರಟಾಗ, ಆ ನಾದ-ನಿನಾದಗಳೆಲ್ಲಾ ಒಮ್ಮೆಗೇ ಸ್ಥಬ್ದವಾದವು. ಮಧುಸೂದನ ಸಹ ಮಗಳನ್ನು ಕಳಸಿ ಬರಲು ಅವಳೊಟ್ಟಿಗೆ ಹೋಗಿದ್ದ. ನೆನ್ನೆಯಿಂದ ಸ್ವಾತಿ ಏಕಾಂಗಿಯಾಗಿದ್ದಳು. ರಾತ್ರಿ ನಿದ್ದೆ ಸಹ ಸರಿಯಾಗಿ ಬರದೆ, ಬೆಳಗಿನ ಝಾವ ಸ್ವಲ್ಪ ನಿದ್ದೆ ಮಾಡಿದ್ದಳು. ಏಳಲೂ ಉತ್ಸಾಹವಿರಲಿಲ್ಲ, ಮಲಗಲೂ ಬೇಜಾರಾಗಿ ಎದ್ದಳು. ಕಾಫಿಯಾದರೂ ಕುಡಿದರೆ ಮನಸ್ಸು ಸ್ವಲ್ಪ ಚುರುಕಾದೀತೆಂದು ಕಾಫಿ ಮಾಡಿಕೊಂಡು ಹಾಲಿನಲ್ಲಿ ಕುಳಿತಳು.

ಹಾಗೆಯೇ ರೇಡಿಯೋ ಆನ್ ಮಾಡಿದಾಗ ಪ್ರದೇಶ ಸಮಾಚಾರ ಬರುತ್ತಿತ್ತು. ಕಾಫಿ ಹೀರುತ್ತಲೆ 'ಸುದ್ದಿ' ಕೇಳುತ್ತಿದ್ದಳು. ಸುದ್ದಿ ಏನೋ ಕಿವಿಗೆ ಬೀಳುತ್ತಿದ್ದರೂ ಮನಸ್ಸು ಮೊಮ್ಮಕ್ಕಳ ಬಗ್ಗೆ ಯೋಚಿಸುತ್ತಿತ್ತು. ಆದರೆ 'ಬೆಂಗಳೂರಿನ ಯುವ ಉದ್ಯಮಿ ಸುರೇಶ್ ನೆನ್ನೆ ಸಂಜೆ ಹೃದಯಾಘಾತದಿಂದ ನಿಧನರಾದರು' ಎಂಬ ಸುದ್ದಿಯನ್ನು ರೇಡಿಯೋ ಉಲಿದಾಗ, ಎಲ್ಲಿಯೋ ಹೋಗಿದ್ದ ಮನಸ್ಸಿಗೂ ಕೇಳಿ. ಸ್ವಾತಿಗೆ ಬರಸಿಡಿಲೆರಗಿಂತಾಯ್ತು. ದಿಕ್ಕೇ ತೋಚದಂತಾಯ್ತು. ಈ ಅನಿರೀಕ್ಷಿತ ಅಘಾತದ ಸುದ್ದಿ ಅವಳ ಜಂಘಾಬಲವನ್ನೇ ಉಡುಗಿಸಿತು. ಆ ಆಘಾತದಿಂದ ಚೇತರಿಸಿಕೊಳ್ಳಲೇ ಅವಳಿಗೆ ಕೆಲವು ನಿಮಿಷಗಳು ಬೇಕಾದವು. ಮನಸ್ಸು ಚಿಂತಿತವಾಯಿತು.

ಇದು ಹೇಗೆ? ಇಷ್ಟು ಚಿಕ್ಕವಯಸ್ಸಿಗೇ ಸುರೇಶ್ ಹೃದಯಾಘಾತಕ್ಕೆ ಏಕೆ

ಗುರಿಯಾದ? ಎಷ್ಟು ಆರೋಗ್ಯವಂತನವ. ಒಂದು ದಿನವೂ ತಲೆನೋವು ಸಹ ಎಂದವನಲ್ಲ. ನಾನು ಯಾವಾಗಲಾದರೂ ತಲೆನೋವೆಂದರೆ, 'ಅಂದರೇನು ಅಂಟಿ, ಆಗ ನಿಮಗೆ ಹೇಗಾಗುತ್ತೆ. ನನಗಂತೂ ತಲೆನೋವೆಂದರೆ ಏನು ಎನ್ನುವುದೇ ಗೊತ್ತಿಲ್ಲ' ಎನ್ನುತ್ತಿದ್ದ.

ಇಲ್ಲದ ವಿಚಾರಗಳ ಬಗ್ಗೆ ಸುಮ್ಮ ಸುಮ್ಮನೇ ಚಿಂತಿಸುತ್ತೀರಿ, ತಲೆನೋವು ಬರುತ್ತೆ. ನನ್ನನ್ನು ನೋಡಿ. ಎಷ್ಟು ದೊಡ್ಡ ವ್ಯವಹಾರ, ಅಪ್ಪ, ನಾನಿನ್ನೂ ಹದಿನೆಂಟು ವರ್ಷದವನಿದ್ದಾಗಲೇ ಇಷ್ಟು ಹೊರೆಯನ್ನೆಲ್ಲಾ ಬಿಟ್ಟುಕೊಟ್ಟು ಲೋಕ ಬಿಟ್ಟು ಹೋಗಿಬಿಟ್ಟರು. ಅಮ್ಮ ಎಂದೂ ಬೀದಿ ಬಾಗಿಲು ಸಹ ಕಂಡವರಲ್ಲ. ತಂಗಿತಮ್ಮಂದಿರನ್ನೂ ಕುಟುಂಬವನ್ನೂ ನೋಡಿಕೊಂಡು, ಈ ಉದ್ದಿಮೆಯನ್ನೂ ಸಂಭಾಳಿಸಿಕೊಂಡು ಹೋಗಬೇಕಾಯ್ತು. ನಿಮ್ಮ ಹಾಗೆ ಅಷ್ಟಕ್ಕೂ ಇಷ್ಟಕ್ಕೂ ಚಿಂತಿಸುತ್ತಾ ಕೂತಿದ್ದರೆ ಬದುಕಿ ಉಳಿಯೋಕೇ ಸಾಧ್ಯವಿರಲಿಲ್ಲ. ಆಗೋದು ಆಗುತ್ತೆ. ಹೋಗೋದು ಹೋಗುತ್ತೆ. ನಾನಂತೂ ಚಿಂತೆ ಮಾಡೋಕೆ ಹೋಗೋಲ್ಲ' ಎನ್ನುತ್ತಿದ್ದ. ಎಷ್ಟು ದಕ್ಷ ಇದ್ದ. ಯಾವಾಗಲೂ ಸಂತೋಷವಾಗಿ ಲವಲವಿಕೆಯಿಂದಿದ್ದ. ಅಂತಹವನಿಗೆ ಹೀಗೆ ಹೇಗಾಯಿತು? ಪಾಪ. ಶಶಿಯ ಗತಿ ಏನಾಗಿರಬೇಕು. ಚಿಕ್ಕ ವಯಸ್ಸಿಗೇ ಗಂಡನನ್ನು ಕಳೆದುಕೊಂಡಿದ್ದಳು. ಮಗ ಜಾಣನಾಗಿದ್ದುದರಿಂದ ಎಲ್ಲವನ್ನೂ ಸಹಿಸಿಕೊಂಡಿದ್ದಳು. ಈಗವಳ ಗತಿಯೇನು? ಪಾಪ ! ಕಾಲ ಅಡಿಯ ಭೂಮಿಯೇ ಕುಸಿದಂತಾಗಿರಬೇಕು ಅವಳಿಗೆ. ಕೂಡಲೇ ಬೆಂಗಳೂರಿಗೆ ಹೋಗೋಣವೆಂದರೆ ಅವರೂ ಊರಲ್ಲಿಲ್ಲ. ನನಗಂತೂ ಆ ಊರಲ್ಲಿ ರೋಡುಗಳೂ ಗೊತ್ತಿಲ್ಲ. ಒಬ್ಬಳೇ ಹೋಗಲೂ ಭಯ. ಆದರೆ ನಾನಂತೂ ಹೋಗಲೇಬೇಕು. ಶಶಿಯು ಗತಿ ಏನಾಗಿದೆಯೋ? ಅವಳನ್ನು ಸಮಾಧಾನಪಡಿಸಬೇಕು. ಕಷ್ಟಕಾಲದಲ್ಲಿ ಆತ್ಮೀಯರು ಸಮೀಪವಿದ್ದರೆ ಮನಸ್ಸಿಗೆಷ್ಟೋ ನೆಮ್ಮದಿ ಬಂದೀತು. ಮನಬಿಚ್ಚಿ ದುಃಖ ತೋಡಿಕೊಳ್ಳಲು ಅವಕಾಶವಾದಿತು. ಮನ ಹಗುರಾದೀತು. ನಾನು ಬೆಂಗಳೂರಿಗೆ ಆದಷ್ಟು ಬೇಗ ಹೋಗಲೇಬೇಕು ಎಂದುಕೊಂಡು ಸ್ವಾತಿ ಕೆಲಸಕ್ಕೆ ತೊಡಗಿದಳು.

ಮಧುಸೂದನನೂ ಮಗಳ ಮನೆಯಲ್ಲಿ ನ್ಯೂಸ್ ಕೇಳಿದವನೇ 'ಸ್ವಾತಿಗೆ ದೊಡ್ಡ ಅಘಾತವಾಗಿರುತ್ತದೆ. ಮೊದಲೇ ಮಗಳನ್ನು ಕಳಿಸಿ ಒಂಟಿಯಾಗಿ ಬೇಸರದಲ್ಲಿರುವ ಅವಳಿಗೆ ಈ ಸುದ್ದಿ ಆಘಾತವನ್ನುಂಟು ಮಾಡಿರುತ್ತದೆ' ಎಂದು ಕೂಡಲೇ ಸಿಕ್ಕಿದ ಬಸ್ಸೊಂದನ್ನು ಹಿಡಿದು ಹುಬ್ಬಳ್ಳಿಗೆ ಬಂದ. ಮನೆಗೆ ಬಂದಾಗ ಸ್ವಾತಿ ಬೆಂಗಳೂರಿಗೆ ಹೊರಡುವ ತಯಾರಿಯಲ್ಲಿರುವುದನ್ನು ನೋಡಿ, ತಾನೂ ಅವಳ ಸಹಾಯಕ್ಕೆ ಕೈಗೂಡಿಸಿದ. ಕೆಲಸ ಮಾಡುತ್ತಿದ್ದರೂ ಸ್ವಾತಿಗೆ ಶಶಿಯದೇ ಚಿಂತೆ. ತಾನು ಶಶಿ ಹಾಗೂ ಶೀಲಾ ಮೂವರು ಮೈಸೂರಿನಲ್ಲಿ ಚಿಕ್ಕ

ಹುಡುಗಿಯರಿದ್ದಾಗ ಜೊತೆಗೂಡಿ ಆಡುತ್ತಿದ್ದುದೂ ಶಾಲೆಗೆ ಹೋಗುತ್ತಿದ್ದುದು ಎಲ್ಲ ಕಣ್ಣಮುಂದೆ ಕಟ್ಟಿದಂತೆ ಕಾಣಿಸಿದವು. ಆಗಿನ ಬಾಲ್ಯದಿನಗಳಲ್ಲಿ ಚಿಟ್ಟೆಯಂತೆ ಹಾರಾಡುತ್ತಾ ಜಿಂಕೆಯಂತೆ ಓಡುತ್ತಾ ಕುಣಿದು ಕುಪ್ಪಳಿಸುತ್ತಿದ್ದ ದಿನಗಳೆಲ್ಲಿ, ಈಗ ಜೀವನದ ಕುಲುಮೆಯಲ್ಲಿ ಒಂದು ತಪ್ಪಿದರೆ ಒಂದು, ಒಂದು ಸಣ್ಣದಾದರೆ ಮತ್ತೊಂದು ದೊಡ್ಡದಾದ ಸಮಸ್ಯೆಗಳನ್ನು ಎದುರಿಸುತ್ತಾ ನಗುವವರೊಡನೆ ನಗುತ್ತಾ ಅಳುವವರೊಡನೆ ಅಳುತ್ತಾ ಜೀವನದ ಜವಾಬ್ದಾರಿಗಳನ್ನು ನಿರ್ವಹಿಸುತ್ತಾ ದಿನಗಳನ್ನು ದೂಡುವ ಕಾಲವೆಲ್ಲಿ' ಎಂದು ನಿಟ್ಟುಸಿರು ಬಿಡುತ್ತಿದ್ದಳು. ಆಗ ತಾವು ಮೂವರೂ ತಮ್ಮ ಭವಿಷ್ಯ ಜೀವನದಲ್ಲಿ ತಾವು ಬದುಕಬಹುದಾದ ಸುಖದ ಸುಪ್ಪತ್ತಿಗೆಯ ಸೌಧಗಳ ಬಗ್ಗೆ ಮಾತನಾಡುತ್ತಿದ್ದುದು ಜ್ಞಾಪಕ ಬಂತು. ತನಗೇನೋ ತನ್ನ ಮಕ್ಕಳಿಂದ ದೂರವಿರುವ ಒಂಟಿತನ ಒಂದನ್ನು ಬಿಟ್ಟರೆ ಅಂತಹ ಸಮಸ್ಯೆಗಳೇನಿಲ್ಲವಾದರೂ ತನ್ನ ಜೀವನ, ತಾನು ಬಾಲ್ಯದಲ್ಲಿ ಕಲ್ಪಿಸಿಕೊಂಡಷ್ಟು ಭವ್ಯವಾಗೇನೂ ಇರಲಿಲ್ಲ. ಶೀಲಳದ್ದೂ ಅಷ್ಟೇ. ಗಂಡ ಐ.ಪಿ.ಎಸ್. ಆಫೀಸರ್ ಆಗಿದ್ದಾನೆ. ಸುಖವಾಗೇ ಇದ್ದಾಳೆ. ಕೆಲವೊಂದು ಸಾರಿ ಆಫೀಸಿನ ಗೊಂದಲಗಳನ್ನು ಬಿಟ್ಟರೆ ಅಂತಹ ದೊಡ್ಡ ಕಷ್ಟಗಳೇನೂ ಇಲ್ಲವಾದರೂ ಇದ್ದೊಬ್ಬ ಮಗಳು ಬುದ್ಧಿಮಾಂದ್ಯತೆಯನ್ನು ಹೊಂದಿರುವುದರಿಂದ ಅವಳಿಗೂ ನೆಮ್ಮದಿ ಇರಲಿಲ್ಲ. ಆದರೆ ಶಶಿ ಮಾತ್ರ ಒಬ್ಬ ದೊಡ್ಡ ಉದ್ಯಮಿಯನ್ನು ಕೈ ಹಿಡಿದಿದ್ದಳು. ಅವಳು ಕನಸಿನ ಸಾಮ್ರಾಜ್ಯದಲ್ಲಿ ಕಲ್ಪಿಸಿಕೊಂಡಂತಹ ಮನೆಯನ್ನೇ ಸೇರಿದ್ದಳು. ಅವಳ ಗಂಡನೂ ಅಷ್ಟೇ. ಹೂವಿನಂತೆ. ಜೋರಾಗಿ ಮಾತನಾಡಿದರೆ ಹೆಂಡತಿ ಎಲ್ಲಿ ಬಾಡುತ್ತಾಳೋ ಎಂಬಷ್ಟು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದ. ಆಕೆಯ ಮನಸ್ಸಿನಂತೆ ಸುಂದರರಾದ ಎರಡು ಗಂಡು ಮಕ್ಕಳೂ ಇಬ್ಬರು ಹೆಣ್ಣು ಮಕ್ಕಳೂ ಹುಟ್ಟಿದರು. ಅವಳ ಜೀವನ ತುಂಬು ಚಂದ್ರನಿಂದ ಕೂಡಿದ ಹುಣ್ಣಿಮೆಯ ರಾತ್ರಿಯಂತಿತ್ತು. ಎಷ್ಟೋ ಸಾರಿ ಬಾಲ್ಯದ ಗೆಳತಿಯರಾದ ನನ್ನನ್ನೂ ಶೀಲಳನ್ನೂ ಕರೆಯಿಸಿಕೊಂಡು ರಾಜೋಪಚಾರ ಮಾಡಿದ್ದಳು. ಅಷ್ಟು ಶ್ರೀಮಂತಿಕೆಯಿದ್ದರೂ ಅಹಂಕಾರಕ್ಕೆ ಆಕೆ ಎಡೆ ಇತ್ತಿರಲಿಲ್ಲ. ಈಚೆಗಷ್ಟೇ ಆಕೆಗೂ ನಮಗೂ ಸಂಪರ್ಕ ಕಡಿಮೆಯಾಗಿತ್ತು. ಆಕೆಯ ಹೆಣ್ಣು ಮಕ್ಕಳಿಗೂ ಮದುವೆಯಾಗಿತ್ತು. ಮಗನಿಗೂ ಒಬ್ಬ ದೊಡ್ಡ ಆಫೀಸರ್ ಮಗಳನ್ನು ಒದುಕೊಂಡು ಮದುವೆ ಮಾಡಿದ್ದಳು. ಮದುವೆಗೆ ಹೋದದ್ದೆಷ್ಟೋ ಅಷ್ಟೆ. ಬಿಡುವಾಗಿ ಹೋಗಿಯೇ ಇರಲಿಲ್ಲ. ನನಗೂ ಮಕ್ಕಳ ಮದುವೆ, ಬಾಣಂತನ, ಅವರನ್ನು ಕರೆಸುವುದು – ಕಳಿಸುವುದು ಇವುಗಳ ಕಡೆಗೆ ಆಸಕ್ತಿ ಹೆಚ್ಚಿ ಬಾಲ್ಯದ ಸ್ನೇಹದ ಸಂಪರ್ಕ ಕಡಿಮೆಯಾಗಿತ್ತು. ಹೋಗಿಬರುವುದು ಕಡಿಮೆಯಾಗಿದ್ದರೂ ಮಧುರ ಭಾವನೆಗಳಿಗೇನೂ ಕೊರತೆಯಾಗಿರಲಿಲ್ಲ. ಅದೇ ಊರಲ್ಲಿ ಮನೆಮಾಡಿಕೊಂಡಿರುವ ಶೀಲಾ ಎರಡು ಮೂರು ಸಾರಿ ಈ ಕಡೆ

ಬಂದಾಗ ಶಶಿಯ ಮನೆಯ ಸುದ್ದಿ ಹೇಳುತ್ತಿದ್ದಳು. ಆದರೆ ಶಶಿಯ ಗಂಡ ಒಂದು ದಿನ ಕಾರು ಅಪಘಾತದಲ್ಲಿ ಮೃತನಾದಾಗ ಶಶಿಯ ದುರದೃಷ್ಟ ಪ್ರಾರಂಭವಾಯಿತು. ಅಂದು ಆಕೆಯನ್ನು ಸಾಂತ್ವನಗೊಳಿಸಲು ಹೋದಾಗ ಶಶಿಯ ಗೋಳು ನೋಡುವಂತಿರಲಿಲ್ಲ. ಆ ದುಃಖವನ್ನೇ ಅವಳು ಸಹಿಸಿಕೊಂಡಿದ್ದರೆ ಸಾಕಾಗಿತ್ತು. ಸುಟ್ಟಗಾಯಕ್ಕೆ ಬರೆ ಎಳೆದಂತೆ ಮಗನ ಸಾವನ್ನೂ ದೇವರು ಅವಳಿಗೆ ತರಬಹುದೇ ಎಂದು ಯೋಚಿಸಿದ ಸ್ವಾತಿಯ ಜೀವ, ಮರಮರನೆ ಮರುಗಿತು. ಶೀಲ, ಕಳೆದ ವರ್ಷ ಬಂದಾಗ 'ಈಗ ಶಶಿ ಪರ್ವಾಗಿಲ್ಲ ಕಣೆ. ಮಗ ತಾಯಿಯನ್ನು ಚೆನ್ನಾಗಿ ನೋಡಿಕೊಳ್ಳುತ್ತಾನಂತೆ, ಸಂತೋಷವಾಗಿದ್ದಾಳೆ' ಎಂದು ಹೇಳಿದ್ದನ್ನು ಕೇಳಿ ತಾನೂ ಒಮ್ಮೆ ಬೆಂಗಳೂರಿಗೆ ಹೋಗಿ ನೋಡಿಕೊಂಡು ಬರಬೇಕೆಂದುಕೊಂಡಿದ್ದರೂ ಇದುವರೆಗೂ ಆಗಿರಲಿಲ್ಲ. ಆದ್ರೆ ಈಗ ಇಂತಹ ಸ್ಥಿತಿಯಲ್ಲಿ ಆಕೆಯನ್ನು ನೋಡಲು ಹೋಗಬೇಕಾಯಿತಲ್ಲ ಎಂದು ಸಂಕಟದಿಂದ ಒದ್ದಾಡಿದಳು ಸ್ವಾತಿ.

'ಸ್ವಾತಿ ಏನ್ ಮಾತಾಡ್ತಾನೇ ಇಲ್ಲ. ನೀನು ಧೈರ್ಯ ತೋಗೋಬೇಕು. ನೀನೆ ಹೀಗಾದ್ರೆ ನಾಳೆ ಅಲ್ಲಿಗೆ ಹೋದಾಗ ನಿನ್ನ ಗೆಳತೀನ ಹೇಗೆ ಸಮಾಧಾನ ಮಾಡ್ತಿ? ಜೀವನದಲ್ಲಿ ಕತ್ತಲು ಬೆಳಕು ಇದ್ದದ್ದೆ. ಮನಸ್ಸು ಗಟ್ಟಿ ಮಾಡಿಕೊಳ್ಳಬೇಕು.'

'ನನಗೂ ಗೊತ್ತೂರಿ ಜೀವನ ಬರೀ ಹೂವಿನ ಹಾಸಿಗೆಯಲ್ಲ. ಅದರ ಕೆಳಗೇ ಮುಳ್ಳು ಇರುತ್ತದೆ ಎಂದು, ದೀಪ ಎಷ್ಟೇ ಬೆಳಕು ಕೊಟ್ಟರೂ ಅದರ ಅಡಿಯಲ್ಲೇ ಕತ್ತಲಿರುತ್ತದೆ ಎಂಬುದನ್ನು ತಿಳಿದುಕೊಂಡಿರುವೆ. ಇವೆಲ್ಲಾ ಮಾತುಗಳನ್ನು ಓದಲು ಚೆಂದ, ತಿಳಿದುಕೊಳ್ಳಲು ಚೆಂದ, ಇನ್ನೊಬ್ಬರಿಗೆ ಹೇಳಲು ಚೆಂದ. ಆದರೆ ಸ್ವತಃ ಅನುಭವಿಸುವವರಿಗೆ ಈ ಮಾತುಗಳಿಗೆ ಬೆಲೆ ಇಲ್ಲ. ಅವರಿಗೆ ಇದ್ದ ಪರಿಸ್ಥಿತಿಯೇ ನೈಜ. ಉಳಿದದ್ದೆಲ್ಲಾ ಗೊಡ್ಡು ವೇದಾಂತ ಎನ್ನಿಸುತ್ತದೆ. ಯಾವ ವೇದಾಂತ ಅವಳು ಗಂಡ ಕಳೆದುಕೊಂಡ ದುಃಖವನ್ನೂ, ಮಗ ಅಗಲಿದ ನೋವನ್ನೂ ಕಡಿಮೆ ಮಾಡಲು ಸಾಧ್ಯ ಹೇಳಿ, ವೈರಾಗ್ಯ ಬಂದರೆ ಮಾತ್ರ ಸಾಧ್ಯವಾದೀತು ಅಷ್ಟೆ.'

'ನೀ ಹೇಳುವುದು ನಿಜ ಸ್ವಾತಿ. ಆದರೆ ಮನಸ್ಸು ಗಟ್ಟಿಮಾಡಿಕೊಳ್ಳದೆ ಬೇರೆ ಮಾರ್ಗವೇನಿದೆ ಹೇಳು. ಯಾವ ಪ್ರಯತ್ನ ಮಾಡಿದರೂ, ಏನೇ ಕೊಟ್ಟರೂ ಆಕೆ ಗಂಡನನ್ನು, ಮಗನನ್ನು ಮನಃ ಪಡೆಯಬಲ್ಲಳೇ?

ಅದು ಅಸಾಧ್ಯವಾದುದಕ್ಕೇ ಅಲ್ಲವೇ ಇಷ್ಟು ದುಃಖ. ದೇವರು ದುಷ್ಟ ಸುಖವಿದ್ದಲ್ಲಿ ಏನಾದರೂ ಕೊಡಲಿಪೆಟ್ಟು ಇಟ್ಟೇ ಇಡುತ್ತಾನೆ. ಅವನೊಬ್ಬ ಸ್ಯಾಡಿಸ್ಟ್ ಇರಬೇಕು.'

'ಈ ಪ್ರಾಪಂಚಿಕ ಜೀವನದ ಗುಟ್ಟು ಯಾರಿಗೂ ತಿಳಿಯದು ಸ್ವಾತಿ. ಇದು ಕರ್ಮ ಫಲ ಎನ್ನುತ್ತಾರೆ. ನಾವು ಮಾಡಿದ ಕರ್ಮಕ್ಕೆ ತಕ್ಕ ಫಲವನ್ನು ದೇವರು ಕೊಡುತ್ತಾನೆ.'

'ಆದರೆ ಯಾವುದೂ ನಮ್ಮ ಇಚ್ಛೆಯಲ್ಲ. ಒಂದು ಹುಲ್ಲು ಕಡ್ಡಿಯೂ 'ಅವನ' ಆಣತಿ ಇಲ್ಲದೇ ಚಲಿಸುವುದಿಲ್ಲ' ಎಂದೂ ಹೇಳುತ್ತಾರಲ್ಲ. ಹಾಗಾದರೆ ದುಷ್ಕರ್ಮ ಮಾಡುವಂತೆ ಅವನೇ ಮಾಡಿರಬೇಕಲ್ಲವೇ? ದುಷ್ಕರ್ಮ ಮಾಡಿಸಿ 'ನಿನ್ನ ತಪ್ಪಿಗೆ ಶಿಕ್ಷೆ' ಎಂದು ದೇವರು ಕಷ್ಟ ಕೊಟ್ಟರೆ, ಆ ದೇವರು ಇಂದಿನ ರಾಜಕಾರಣಿಗಳಿಗಿಂತ ಖದೀಮ ಎಂದು ಕಾಣಿಸುತ್ತದೆ.'

'ಹೌದು, ತರ್ಕ ಮಾಡುತ್ತಾ ಹೋದರೆ ಜಗತ್ತಿನಲ್ಲಿ ಹೀಗೆ ಏಕೆ ನಡೆಯುತ್ತದೆ ಎನ್ನುವುದೇ ಅರ್ಥವಾಗುವುದಿಲ್ಲ. ಯಾವುದು ಮಾಡಿದರೆ ಸರಿ – ಯಾವುದು ಮಾಡಿದರೆ ಸರಿಯಲ್ಲ ಎಂಬುದೇ ಅರ್ಥವಾಗಿದೆ ದ್ವಂದ್ವ ಉಂಟಾಗುತ್ತದೆ. ಜೀವನವೇ ಒಂದು ಬಿಡಿಸಲಾಗದ ಒಗಟು.'

'ಅಲ್ಲಾರೀ ಟ್ರೈನ್ ಎಷ್ಟು ಹೊತ್ತಿಗಿದೆ? ಮತ್ತೆ ಏನೇನೋ ಮಾತಾಡ್ತಾ ಟ್ರೈನ್ ತಪ್ಪಿಸ್ಕೋ ಬಾರ್ದು'. 'ಇನ್ನೂ ಒಂದು ಗಂಟೆ ಇದೆ. ಬಾಗಿಲೆಲ್ಲಾ ಸರ್ರ್ಯಾಗಿ ಹಾಕ್ಕೊಂಡು ಬರ್ತೀನಿ. ಅಷ್ಟರಲ್ಲಿ ರೆಡಿಯಾಗು' ಎಂದು ಹೇಳಿ ಮಧುಸೂದನ ಹೋದ. ಸ್ವಾತಿಯೂ ಎಲ್ಲಾ ರೆಡಿ ಮಾಡಿ ಇಬ್ಬರೂ ಸ್ಟೇಷನ್‌ಗೆ ಹೊರಟಾಗ ಸಂಜೆ ಎಂಟೂವರೆಯಾಗಿತ್ತು.

ರೈಲು ಬೆಂಗಳೂರು ತಲ್ಪಿದಾಗ ಬೆಳಗಿನ ಎಂಟು ಗಂಟೆಯಾಗಿತ್ತು. ಸ್ಲೀಪಿಂಗ್ ಬರ್ತ್ ಸಿಕ್ಕಿದ್ದರೂ ಸ್ವಾತಿಗೆ ನಿದ್ದೆ ಬಂದಿರಲಿಲ್ಲ. ಚಿಂತೆ ದುಃಖಗಳಿಂದ ಮನಸ್ಸು ಭಾರವಾಗಿತ್ತು. ತಲೆಯೆಲ್ಲಾ ಧಿಂ ಎನ್ನುತ್ತಿತ್ತು. ಕಣ್ಣು ಉರಿಯುತ್ತಿದ್ದವು. ಬೆಂಗಳೂರು ಬಂದರೂ ಅವಳಿಗೆ ಮನೆಗೆ ಹೇಗೆ ಹೋಗುವುದು, ಶಶಿಯನ್ನು ಹೇಗೆ ನೋಡುವುದು ಅವಳನ್ನು ಏನು ಹೇಳಿ ಸಮಾಧಾನ ಮಾಡುವುದು ಎಂಬ ವಿಚಾರಗಳ ತಾಕಲಾಟ ಅವಳನ್ನು ಘಾಸಿಗೊಳಿಸಿದ್ದವು. ಯಾಂತ್ರಿಕವಾಗಿ ಗಂಡನೊಡನೆ ಆಟೋ ಹತ್ತಿ ಶಶಿಯ ಭವ್ಯ ಬಂಗಲೆಗೆ ಬಂದಳು. ಪರಿಚಿತ ಆಳು ಚನ್ನ, ಸಾಮಾನನ್ನು ಒಳಗೊಯ್ದು, ಮನೆತುಂಬಾ ಜನರಿದ್ದರೂ ಎಲ್ಲರೂ ಮೌನ. ಯಾರ ಮುಖದಲ್ಲೂ ಗೆಲುವಿಲ್ಲ. ಒಂದೆರಡು ಮಾತಿನಲ್ಲಿ ಶಶಿಯ ಮಕ್ಕಳು ಆದರಿಸಿದಂತೆ ಮಾಡಿ, ಮಹಡಿಯ ಮೇಲಿನ ರೂಮಿನಲ್ಲಿ ಶಶಿ ಇರುವುದಾಗಿ ಹೇಳಿದರು. ಯಜಮಾನರು ಅಲ್ಲೇ ಹಾಲಿನಲ್ಲಿ ಕೂತರು. ಸ್ವಾತಿ ಬಚ್ಚಲು ಮನೆಗೆ ಹೋಗಿ ಕೈಕಾಲು ತೊಳೆದುಕೊಂಡು ಮಹಡಿಯ ಮೆಟ್ಟಿಲನ್ನು ಒಂದೊಂದಾಗಿ ಏರಿದಳು. ಆದರೆ ಮುಂದಕ್ಕೆ ಹೋಗಲೊಲ್ಲದ ಕಾಲುಗಳನ್ನು ಎಳೆದುಕೊಂಡು, ಮೇಲೆ ಶಶಿಯ

ರೂಮಿಗೆ ಕಾಲಿಟ್ಟಾಗ ಮಂಕಾಗಿ ಕುಳಿತಿದ್ದ ಶಶಿ ಓಡಿಬಂದು ಸ್ವಾತಿಯನ್ನು ತಬ್ಬಿಕೊಂಡು ಜೋರಾಗಿ ಅತ್ತಳು. ಇದುವರೆಗೂ ಗಾಂಭಿರ್ಯಕ್ಕಾಗಿ ತಡೆಹಿಡಿದಿದ್ದ ದುಃಖವೆಲ್ಲಾ ಏರಿಯೊಡೆದ ಕೆರೆಯ ನೀರಿನಂತೆ ಉಕ್ಕಿ ಹರಿಯಿತು. ಇಬ್ಬರೂ ಸಾಕಷ್ಟು ಅತ್ತರು. ಸ್ವಾತಿ ಗೆಳತಿಯನ್ನು ಮಗುವಿನಂತೆ ತೊಡೆಯ ಮೇಲೆ ಮಲಗಿಸಿಕೊಂಡು ಸಾಂತ್ವಗೊಳಿಸಲು ಪ್ರಯತ್ನಿಸಿದಳು.

'ಸ್ವಾತೀ ನನಗೆ ದೇವರು ಮೋಸ ಮಾಡಿದ – ಮೋಸ ಮಾಡಿದ'

'ನಿಜ ಶಶಿ, ನಿನಗೆ ಆಗಬಾರದ ಅನ್ಯಾಯ ಆಗಿದೆ. ಆದರೆ ಈಗೇನು ಮಾಡಬಲ್ಲೆ. ನೀನೇ ಧೈರ್ಯ ಕಳೆದುಕೊಂಡರೆ ಸಂತೈಸುವವರಾರು? ಎಲ್ಲರೂ ಚಿಕ್ಕವರು. ಹಿರಿಯಳಾದ ನೀನೇ ಗಟ್ಟಿಯಾಗಿ ಮಾರ್ಗದರ್ಶನ ಮಾಡಬೇಕು. ನೀನು ಮೂಲೆಗುಂಪಾದರೆ ಮನೆತನ ನಡೆಸುವವರಾರು? ಮೊಮ್ಮಕ್ಕಳಿನ್ನೂ ಚಿಕ್ಕವರು. ನೀನು ಗಟ್ಟಿಯಾಗಬೇಕು, ಧೈರ್ಯ ತಂದುಕೊಳ್ಳಬೇಕು. ದೇವರಿದ್ದಾನೆ.'

'ಎಲ್ಲಿಯ ದೇವರು ಸ್ವಾತಿ? ಇಂತಹ ಶಿಕ್ಷೆಗಳನ್ನೆಲ್ಲಾ ಕೊಡಲಿಕ್ಕೆ ನಾನು ಮಾಡಿದ ಪಾಪವೇನು? ನಾನು ತಿಳಿದಂತೆ, ನಾನ್ಯಾರಿಗೂ ಕೆಟ್ಟದು ಮಾಡಿಲ್ಲ. ನನ್ನ ಜೀವನವನ್ನೆಲ್ಲಾ ಪೂಜೆಯಲ್ಲೇ ಕಳೆದಿದ್ದೇನೆ. ನನಗೇಕೆ ಶಿಕ್ಷೆ? ಸ್ವಾತೀ ನನಗೇಕೀ ಶಿಕ್ಷೆ? ಯಜಮಾನರು ಹೋದರು. ಮಕ್ಕಳನ್ನು ನೋಡಿಕೊಂಡು ಕಾಲ ನೂಕುತ್ತಿದ್ದೆ. ಅದಕ್ಕೂ ಕಲ್ಲು ಹಾಕಿದ ದೇವರು.'

'ಹೋದವನು ನಿನ್ನ ಮನಗಲ್ಲ. ಈಗ ಇರುವ ಮಗನೊಬ್ಬನೇ ನಿನಗೆ ಹುಟ್ಟಿದುದು ಎಂದುಕೊಂಡು ಅವನನ್ನೇ ತಯಾರು ಮಾಡು. ಮೊಮ್ಮಕ್ಕಳಿದ್ದಾರೆ.'

'ನಾನು ಏನು ಹೇಳಲಿ ಸ್ವಾತೀ, ನನಗೇನೂ ತಿಳಿಯದು ನಾಳೆ ಬರುತ್ತೇನೆಂದು ಊರಿಗೆ ಹೋದ ಮಗ, ಹೆಣವಾಗಿ ಬಂದ. ಈಗಿರುವ ಮಗ ದೇವರಿಗೇ ಪ್ರೀತಿ. ದೇವರು ನನಗೆ ಮೋಸ ಮಾಡಿದ. ನಾವು ಮಾಡಿದಂತೆ ಏನೂ ಆಗುವುದಿಲ್ಲ. ಆಗಬೇಕಾದುದು ಆಗುತ್ತದೆಯೇ ಹೊರತು ನಾವು ಮಾಡಿದಂತೆ ಏನೂ ಆಗುವುದಿಲ್ಲ. ಎಲ್ಲ ಮೋಸ, ಸ್ವಾತೀ ಎಲ್ಲ ಮೋಸ. ಯಾರನ್ನು ನಂಬಲಿ? ಯಾರನ್ನು ಬಿಡಲಿ? ನನಗೆ ದಿಕ್ಕೇ ತೋಚದಂತಾಗಿದೆ' ಎಂದು ಕಣ್ಣೀರ ಕೋಡಿ ಹರಸಿದಳು.

ಶಶಿ ಎರಡು ದಿನದಿಂದಲೂ ಶರಬತ್ತಿನ ಹೊರತು ಹೊಟ್ಟೆಗೇನೂ ತೆಗೆದುಕೊಂಡಿರಲಿಲ್ಲ. ಸ್ವಾತಿ ಬಹಳಷ್ಟು ಪ್ರಯತ್ನಿಸಿ ಎರಡು ತುತು ಅನ್ನ ತಿನ್ನಿಸಿದಳು. ಅಳುತ್ತ ಮಲಗಿದ ಶಶಿಗೆ ಗೆಳತಿಯು ಬೆನ್ನಮೇಲೆ ಕೈಯಾಡಿಸುತ್ತಿದ್ದಂತೆ ಏನೋ ಒಂದು ರೀತಿಯ ಕ್ಷಣಿಕ ಸಮಾಧಾನ ಉಂಟಾದಾಗ ಎರಡು ದಿನದಿಂದ ನಿದ್ದೆಯನ್ನೇ ಕಾಣದ ಆಕೆಯನ್ನು ನಿದ್ದೆಯಾವರಿಸಿತು.

ಸ್ವಾತಿ, ಸದ್ದಿಲ್ಲದಂತೆ ಎದ್ದು ಬಾಗಿಲನ್ನು ಮುಂದೆ ಮಾಡಿ ಕೆಳಗಿಳಿದು ಬಂದಳು. ಅವಳಿಗೂ ಊಟ ಮಾಡುವ ಮನಸ್ಸಾಗಲಿಲ್ಲ. ಗೆಳತಿಗೆ ಊಟ ಮಾಡಿಸುವ ಸಲುವಾಗಿ ಅವಳ ಜೊತೆಗೆ ತಾನೂ ನಾಲ್ಕು ತುತ್ತು ಹಾಕಿಕೊಂಡಿದ್ದಳು. ಈಗ ಅದೇ ಊರಿನಲ್ಲಿದ್ದ ಶೀಲಳ ಮನೆಗೆ ಹೋಗಿ ಬಂದರಾಯ್ತು. ಸುರೇಶನಿಗೆ ಹೃದಯಾಘಾತ ಆಗಲಿಕ್ಕೆ ಏನಾದರೂ ತೊಂದರೆಗಳಿದ್ದವೆ ಏಕೆ ಹೀಗಾಯ್ತು ಎಂದು ಅವಳೊಡನೆ ಮಾತಾಡಿದರಾಯ್ತು. ಆ ವಿಷಯದ ಬಗ್ಗೆ ಇವರ ಮನೆಯಲ್ಲಿ ಮತ್ತೆ ಕೆದಕುವುದು ಸರಿಯಲ್ಲವೆಂದುಕೊಂಡು ಮಲ್ಲೇಶ್ವರದ ಕಡೆ ಹೊರಟಳು.

ಸ್ವಾತಿ, ಶೀಲಾಳ ಮನೆಯ ಕರೆಗಂಟೆಯನ್ನು ಒತ್ತಿದಾಗ ಶೀಲಳೇ ಬಂದು ಬಾಗಿಲು ತೆಗೆದಳು. ಬಾಗಿಲಲ್ಲಿ ಅನಿರೀಕ್ಷಿತವಾಗಿ ಬಂದಿದ್ದ ಬಾಲ್ಯ ಗೆಳತಿಯನ್ನು ನೋಡಿ ಅವಳಿಗೆ ಸ್ವರ್ಗ ಮೂರೇ ಗೇಣು ಎನ್ನಿಸಿತು.

'ಏನೇ ಸ್ವಾತಿ ಯಾವಾಗ್ಬಂದೆ? ದಾರಿತಪ್ಪಿ ನಮ್ಮನೇಗೆ ಬಂದ್ಯೋ ಏನೋ. ಬಾ ಒಳಗೆ. ಅಲ್ವೇ ಶಶಿ ಮಗನ ವಿಚಾರ ಕೇಳಿದ್ಯಾ?'

'ಕೇಳ್ದೆ ಕಣೆ. ಅದ್ಕೇ ಇದ್ದಕ್ಕಿದ್ದಂತೆ ಬಂದದ್ದು. ಶಶೀನ ನೋಡ್ಕೊಂಡೇ ಬಂದೆ. ಪಾಪ, ಅವಳ ಸ್ಥಿತಿ ಯಾವ ಶತ್ರುವಿಗೂ ಬರಬಾರ್ದು.'

'ಹೌದಮ್ಮಾ, ನಾನೂ ಆ ದಿನ ಸುದ್ದಿ ಕೇಳಿದ ತಕ್ಷಣ ಹೋದೆ. ಹೋದ್ಮೇಲೇನೇ ಶವ ಬಂದ್ದದ್ದು. ಅಲ್ಲಾ ಹಿಂದಿನ ದಿನ ಸಂಜೆ ತಾನೆ ಹೃದಯಘಾತ ಆದದ್ದು. ಬೆಳಗಿನ ಝಾವವೇ ಶವ ತಂದ್ರು. ಅಷ್ಟು ಹೊತ್ತಾಗ್ಲೇ ಶವ ಕಪ್ಪು ಹಿಡಿದ್ಬಿಟ್ಟಿತ್ತು.'

'ಏನೆಂದೇ ಶವಾ ಎಲ್ಲಿಂದ ತಂದ್ರು, ಎಲ್ಲಿ ಸತ್ತದ್ದು, ಯಾವ ಊರಿಗೆ ಹೋಗಿದ್ದ'?

'ನಿನ್ಗೇನೂ ಗೊತ್ತೇ ಇಲ್ವೇ ಹಾಗಾದ್ರೆ? ಅವ್ನು ಹಿಂದಿನ ದಿನ ತಾನೇ ಫ್ಯಾಕ್ಟರೀಲಿ ಕೆಲ್ಸ ಇದೇಂತ ತುಮಕೂರಿಗೆ ಹೋಗಿದ್ನಂತೆ. ಅಲ್ಲೇ ಹಾಗಾಯ್ತಂತೆ.'

'ಹೌದಾ ಫ್ಯಾಕ್ಟರೀಲೇ ಹಾಗಾಯ್ತಂತಾ? ಅಲ್ಲಾ ಹೃದಯಾಘಾತ ಆದ್ರೆ, ಬದುಕಿದ್ದಾಗ ಇದ್ದ ಹಾಗೇ ಇರ್ತಾರೆ, ಮುಖ ಕೂಡ ಬಾಡಿರೋಲ್ಲ. ಬಣ್ಣಾ ಕೂಡಾ ಕೆಟ್ಟಿರೋಲ್ಲ ಅಂತಾರಲ್ಲ.'

'ಅಲ್ಲೇ ಇರೋದು ನೋಡು ಹಕೀಕತ್ತು. ಅದ್ಕೆ ಎಲ್ರಿಗೂ ಅನ್ಮಾನ. ಅವ್ನು ಸತ್ತದ್ದು ಫ್ಯಾಕ್ಟರೀಲಲ್ಲ. ಹೆಂಡ್ತಿ ತವರ್ಮನೇಲಿ'.

'ಅಂದ್ರೆ ನೀನು ಹೇಳೋದೇನು ಅವ್ನು ಹೃದಯಘಾತದಿಂದ ಸಾಯ್ಲಿಲ್ವೆ? ಹೆಂಡ್ತಿ ಮನೇಲೆಂದ್ರೆ ಅವ್ರಿಗೆ ಕಾರಣ ಗೊತ್ತಿರ್ಬೇಕಲ್ಲ.'

'ಗೊತ್ತಿರುತ್ತೆ, ಆದ್ರೆ ಅವ್ರು ಹೇಳ್ಬೇಕಲ್ಲ ! ತಾವೇ ಮಾಡಿ ತಾವೇ ಹೇಗೆ ಹೇಳ್ಕೊಳ್ತಾರೆ.'

'ಏನೇ ಶೀಲಾ ನೀ ಹೇಳ್ತಿರೋದು. ಮಗಳ ಬಾಳಿಗೆ ತಂದೆ–ತಾಯ್ಗಳೇ ಕಲ್ಲು ಹಾಕ್ತಾರಾ? ಎಲ್ಲಾದ್ರೂ ಉಂಟೆ? ಸೊಸೇನ ಕೊಂದಿರೋ ಘಟನೆ ಕೇಳಿದ್ದೀನಮ್ಮಾ. ಅಳಿಯನನ್ನು ಅದ್ರಲ್ಲೂ ವಿದ್ಯಾವಂತರಾದವ್ರು ಕೊಲ್ತಾರೆ ಅನ್ನೋದನ್ನ ನಂಬೋಕೇ ಆಗೋಲ್ಲ. ಇದೆಲ್ಲಾ ಶಶಿಗೆ ಗೊತ್ತಿದ್ಯಾ'?

'ಗೊತ್ತಿದ್ಯೋ ಇಲ್ವೋ ನನಗಂತೂ ಗೊತ್ತಿಲ್ಲಮ್ಮ. ಆದ್ರೆ ಯಾವಾಗ್ಲೂ ದೇವ್ರು ನನ್ಗೆ ಮೋಸ ಮಾಡ್ದಾ, ಮೋಸ ಮಾಡ್ದಾ ಅಂತಿರ್ತಾಳೆ.'

'ಹೀಗಾದಾಗ ಹಾಗನ್ನೋದೇನು ಸಹಜಾನೆ ಬಿಡು. ಹೀಗಿದ್ದಿದ್ರೆ ಅವ್ರ ಬಗ್ಗೆ ನನ್ನ ಹತ್ರ ಬೇಜಾರಾಗಿ ಮಾತಾಡ್ತಾ ಇರ್ಲಿಲ್ವಾ? ಈಗ ಅವರೇ ನಮಗೆ ದಿಕ್ಕು ಅಂದಳಲ್ಲ. ಅವಳ ಎರಡನೇ ಮಗ ಇದ್ದಾನಲ್ಲ ಅವ್ನು ಈಗ ದೊಡ್ಡೋನಾಗಿದ್ದಾನೆ. ಅವ್ನು ವ್ಯವಹಾರ ನೋಡ್ಕೋಬಹುದಲ್ಲ.'

'ಅಯ್ಯೋಪಾಪ, ಅದೂ ಒಂದು ಕಥೆ ಕಣೆ. ಅವನೂ ಡ್ರಗ್‌ಗೆ ಅಡಿಕ್ಟಾಗಿ ಬುದ್ಧಿನೇ ಸರಿ ಎಲ್ಲ. ಅವ್ನನ್ನೇ ನೋಡ್ಕೋಬೇಕು. ಅವ್ನೇನು ವ್ಯವಹಾರ ನೋಡ್ಕೋತಾನೆ? ಈಗೆಲ್ಲಾ ಹೊರಗ್ಬರ್ತಿದೆ. ಅವ್ನು ಹಾಗಾಗೋಕೂ ಆ ಬೀಗ್ರೇ ಕಾರಣಾನಂತೆ. ದೊಡ್ಡ ಸಂಪತ್ತು. ಇವ್ನ ಹಾಳು ಮಾಡ್ಬಿಟ್ರೆ ಉಳಿದ್ದೆಲ್ಲಾ ತಮ್ಮ ಮಗಳೀಗೇ ಆಗ್ಬಿಡುತ್ತೇಂತ ಆ ಹುಡುಗನ್ನ ಹಾಳ್ಮಾಡಿದಾರೆ ಅಂತಾರೆ ಜನ.'

'ಇದೇನು ಶೀಲಾ ನೀ ಹೇಳೋದು. ಈ ಹುಡ್ಗ ಇರೋದು ಇಲ್ಲಿ. ಅವ್ರು ಅವನನ್ನು ಕೆಡ್ಸೋಕೇ ಹೇಗ್ಸಾಧ್ಯ?'

ಅದೇ ನೋಡು. ಸಂಬಂಧ ಮಾಡ್ಬೇಕಾದ್ರೆ ಬಹಳ ಎಚ್ಚರಬೇಕು. ಎರಡೂ ಕಡೆ ಸುಸಂಸ್ಕೃತರಿದ್ರೆ ಯಾವ ಸಮಸ್ಯೆನೂ ಬರೋಲ್ಲ. ಆದ್ರೆ ಸಮಾಜದಲ್ಲಿ ಗೋಮುಖ ವ್ಯಾಘ್ರಗಳಿರ್ತಾರಲ್ಲ. ಅವರು ಬಹಳ ಡೇಂಜರಸ್. ಶಶೀ ಮನೆಯವ್ರು ತುಂಬಾ ಆರ್ಥೋಡಾಕ್ಸ್‌ನೋಡು. ಮನೇಲಿ ಬರೀ ಹೇಳೇ ಸಂಪ್ರದಾಯ. ಅವ್ಳಂತೂ ಆ ವಾತಾವರಣಕ್ಕೆ ಹೊಂದ್ಕೊಂಡು ಬಿಟ್ಲು. ಮಕ್ಕಳು ಆಧುನಿಕ ಕಾಲದ ಬದಲಾವಣೆ ಥಳಕೂ – ಬೆಳಕೂ ನೋಡಿ ಆಕರ್ಷಿತರಾಗ್ತಾ ಇದ್ರು. ಆದ್ರೆ ಮನೆಯ ಒಂದು ಕಟ್ಟುನಿಟ್ಟಾದ ವಾತಾವರಣದಲ್ಲಿ ದಾರಿತಪ್ಪೋಕೆ, ಅಷ್ಟು ಐಶ್ವರ್ಯ ಇದ್ರೂ ಸಾಧ್ಯ ಇರ್ಲಿಲ್ಲ. ಶಶಿ ಯಜಮಾನ್ರು ಚಿಕ್ಕವಯಸ್ಸಿಗೆ ತೀರಿ ಹೋದದ್ದು, ಅವಳ ಜೀವನದ ಸಮಸೆಯಗಳ ಮೊದಲ ಮೆಟ್ಟಿಲಾಯ್ತು. ಮನೇಲಿ ಯಾರೂ ತಿಳಿದ ಗಂಡಸರು ದೊಡ್ಡವರು ಇಲ್ಲಾಂತ ರೆವಿನ್ಯೂ ಆಫೀಸರ್ ಜಗದೀಶ್ ಅವರ

ಮಗಳನ್ನು ಪಾಪ ಮಗನಿಗೆ ಮಾಡ್ಕೊಂಡ್ರು, ಅಂದ್ರೆ ದೊಡ್ಡ ವ್ಯವಹಾರ. ಸರ್ಕಾರ, ಕೋರ್ಟು, ಕಛೇರಿ, ಕಾನೂನು ಇವುಗಳ ಜ್ಞಾನ ಸಂಪರ್ಕ ಇದ್ದೋರಾದ್ರೆ ಮಗನಿಗೆ ಸಹಾಯ ಆಗುತ್ತೇಂತ ಆಕೆಯ ಲೆಕ್ಕಾಚಾರ.'

'ಹಾಗೆ ವಿಚಾರ ಮಾಡಿದ್ರಲ್ಲಿ ತಪ್ಪೇನು. ಯಾವಾಗ್ಲೂ ಹೆಣ್ಣಿನ ಮನೆಯೋರು ಮಗಳ ಜೀವನ ಚೆನ್ನಾಗಿ ಆಗ್ಲೀಂತ ತಮ್ಮ ಕೈಲಾದ ನೆರವು ನೀಡೇ ನೀಡ್ತಾರೆ. ಅಲ್ವಾ? ನಮ್ಮ ಪಕ್ಕದ್ಮನೆ ಸುದರ್ಶನ್ ಎಷ್ಟು ಜಾಣರೂಂತ, ಅವ್ರ ಅಳಿಯಂದ್ರೆಲ್ಲಾ ಮೊದಲು ಸಾಧಾರಣ ಇದ್ದವರು. ಈಗ ಎಲ್ರೂ ಎಷ್ಟು ಚೆನ್ನಾಗಿ ಆಗಿದ್ದಾರೇಂತ. ಇದಕ್ಕೆಲ್ಲಾ ಮಾವನ ಅಡ್ವೈಸೇ ಕಾರಣ.'

'ಅದ್ಸರೀನ್ನು. ಈಕೇನೂ ಹಾಗೆ ತಿಳ್ಕೊಂಡೇ ಈ ಸಂಬಂಧ ಮಾಡಿದ್ಲು. ಆದ್ರೆ ಈ ಜನ ವಿಚಿತ್ರ, ಅವ್ರ ಕಥೇನೆಲ್ಲಾ ಅವ್ರ ಜೊತೆ ಕೆಲ್ಸ ಮಾಡೋರೆಲ್ಲಾ ಹೇಳ್ತಾರೆ. ಪಾಪಾ ಅವರ ವಿಚಾರಾನೇ ಗೊತ್ತಿಲ್ಲದ ಶಶಿ ಅವರ ಥಳುಕು ಮಾತಿಗೆ ಬೆರಗಾಗಿ, ಅವರ ಸಂಬಂಧ ಮಾಡಿದ್ಲು. ಕಡೇತನ್ಕ ಅವ್ಳಿಗೆ ಅವ್ರ ಮೋಸಾನೆ ಗೊತ್ತಾಗಲಿಲ್ಲ. ಸುರೇಶ್ ಸಹ ಅವರ ಗ್ರಿಪ್‌ನಲ್ಲಿ ಸಿಕ್ಕಿಹಾಕ್ಕೊಂಡ. ಅವ್ರ ಮನೆಯವರೆಲ್ಲಾ ಕ್ಲಬ್‌ಗೆ ಹೋಗಿ ಡ್ಯಾನ್ಸ್ ಮಾಡ್ತಾರಂತೆ. ಡ್ರಿಂಕ್ಸ್ ತೊಗೋತಾರಂತೆ. ತಮ್ಮ ಮಜಕ್ಕೆ ಅಳಿಯನ ಸಹಕಾರ ಪಡ್ಯೋಕೆ ಅವನನ್ನೂ ಈ ಬಲೆಯೊಳಗೆ ಬೀಳಿಸ್ಕೊಂಡ್ರಂತೆ. ಹೀಗಾಗಿ ಇವ್ನು ಹೆಂಡ್ತೀ ಜೊತೆ ಕ್ಲಬ್‌ಗೆ ಹೋಗೋದು, ಡ್ಯಾನ್ಸ್ ಮಾಡೋದು, ಡ್ರಿಂಕ್ಸ್ ತಗೋಳೋದು ಎಲ್ಲಾ ಮಾಡ್ತಾ ಇದ್ನಂತೆ. ಅವರು ಮೆದು ಮಾತಿಗೆ, ಗಿಲೀಟಿಗೆ ಮರುಳಾಗಿ ಹಣ ಇವ್ನೇ ಖರ್ಚು ಮಾಡ್ತಿದ್ನಂತೆ. 'ಹಣ ಇದ್ದಾಗ ಮಜ ಮಾಡ್ಬೇಕು. ಸುಮ್ನೆ ದುಡ್ಕೋತಾ ಕೂತ್ಕೊಂಡ್ರೆ ಲೈಫ್‌ಗೆ ಏನರ್ಥ' ಹಾಗೆ ಹೀಗೇಂತ ಅವನ ತಲೆ ಕೆಡ್ಸಿ' ದುಡ್ಡಿದ್ದವರು ಹೇಗೆ ಇರ್ಬೇಕು. ತಮ್ಮ ಮನೇಲಿ ಇದ್ದ ಹಾಗೆ ಹಳೇಕಾಲದ ಥರಾ ಇರೋದು ನಾಚಿಕೆಗೇಡು' ಅಂತ ಅವ್ನಿಗೆ ಅನ್ಸೊಂಹಂಗೆ ಮಾಡಿದ್ರಂತೆ. ಮೇಲಿಂದ ಮೇಲೆ ತುಮಕೂರಿಲ್ಲಿಯೇ ಫ್ಯಾಕ್ಟರೀ ನೋಡ್ಕೊಂಡು ಬರ್ತೀನಿಂತ ಹೋಗ್ತಿದ್ರೆ, ಶಶಿ ನಿಜಾಂತ ನಂಬಿ ಗಂಡ–ಹೆಂಡ್ತಿ ಜೊತೇಲಿ ಅನ್ಯೋನ್ಯವಾಗಿರ್ಲೀಂತ ಸೊಸೇನೂ ಕಳಿಸ್ತಿದ್ದಳಂತೆ. ಇಷ್ಟಲ್ದೆ ಬಾಂಬೇಲಿ ಮೀಟಿಂಗ್ ಇದೆ, ಡೆಲ್ಲೀಲಿ ಮೀಟಿಂಗ್ ಇದೆ, ಮದ್ರಾಸ್‌ನಲ್ಲಿ ಮೀಟಿಂಗ್ ಇದೇಂತ ಮೇಲಿಂದ ಮೇಲೆ ಹೊದ್ರೆ ಪಾಪ ಈ ಶಶಿ ಹೌದೂಂತ ನಂಬಿ, ದುಡ್ಡು ಕೈಲಿ ಬೇಕಾದಷ್ಟು ಇದ್ದು ಪರಸ್ಥಳಕ್ಕೆ ಹೋದಾಗ ಯಾರಾದ್ರೂ ಅಡ್ಡದಾರಿಗೆ ಎಳೆದುಬಿಟ್ಟಾರೂಂತ ಸೋಸೇನೂ ಅವ್ನ ಜೊತೇಲಿ ಅವ್ನು ಹೋದಲ್ಲೆಲ್ಲಾ ಹೋಗು ಅಂತ ಹೇಳ್ತಿದ್ದಳಂತೆ. ಅವ್ನು ಪಾಪ ಈ ಮುಗ್ಧ ತಾಯಿಗೆ ಗೊತ್ತಿಲ್ಲದಂತೆ ಹೆಂಡ್ತಿಯ ಮನೆಯವರನ್ನೆಲ್ಲ ಪಾಳೀ ಮೇಲೆ ಇಂಡಿಯಾನೆಲ್ಲಾ ಸುತ್ತಿಸ್ತಾ ಇದ್ದನಂತೆ.'

'ಇಷ್ಟೆಲ್ಲಾ ಆದ್ರೂ ಇವ್ನಿಗೆ ದುಡ್ಡಿನ ತೊಂದ್ರೆ ಬರ್ಲಿಲ್ವಾ ಹಾಗಾದ್ರೆ, ಎಷ್ಟು ದೊಡ್ಡ ಲಾಭ ಬರ್ತಿರಬಹುದು ಇವ್ರಿಗೆ'?

ಅಯ್ಯೋ' ಶೆಟ್ಟೀ ಸಾಲ ಅವ್ನ ಸತ್ಮೇಲೆ' ಅಂತ ಗಾದೆ ಮಾತಿದ್ಯಲ್ಲ ಹಾಗೆ. ಈಗ ಅವ್ನ ಸತ್ಮೇಲೆ ಎಲ್ಲಾ ಹೊರಗ್ಬರ್ತಾ ಇದೆ. ಫ್ಯಾಕ್ಟರಿಗಳೆಲ್ಲಾ ಲಾಸ್‌ನಲ್ಲಿವೆಯಂತೆ. ಎಲ್ಲಾ ಕಡೆ ಸಾಲ ಮಾಡಿದಾನಂತೆ. ಮನೇಲಿದ್ದ ವಜ್ರ ಒಡವೆನೆಲ್ಲಾ ಮಾರಿದ್ನಂತೆ.' ಹೀಗೆಂತ ಜನರ ಈಗ ಮಾತಾಡಿಕೊಳ್ತಿದ್ದಾರೆ.

'ಮತ್ತೆ ಇಷ್ಟೆಲ್ಲಾ ಆಗ್ಬೇಕಾದ್ರೆ ತಾಯಿಗೆ ಗೊತ್ತಾಗ್ರಿಲ್ಲಿಲ್ಲವಾ'?

'ಅವ್ಳೇನಾದ್ರೂ ಕೇಳಿದ್ರೆ, ವ್ಯವಹಾರ್ದಲ್ಲಿ ಇದೆಲ್ಲಾ ಆಗೋದೆ. ಒಂದ್ಸಾರಿ ಬರುತ್ತೆ ಒಂದ್ಸಾರಿ ಹೋಗುತ್ತೆ. ದುಡ್ಯೋನು ನಾನು. ನಾನಿರುವಾಗ ನೀನ್ಯಾಕೆ ಚಿಂತೆ ಮಾಡ್ತೀಯ. ನೀನು ಆರಾಮವಾಗಿರು ಎಲ್ಲಾ ನಾನು ನೋಡ್ಕೊಳ್ತೀನಿ ಅಂತ, ತನಗೆ ತನ್ನ ಹೆಂಡ್ತಿ ಮನೇವ್ರು ತುಂಬಿದ ಐಡಿಯಾಸ್‌ನೆ ತಾಯಿಗೆ ಹೇಳ್ತಿದ್ನಂತೆ. ಅವ್ನೇನೂ ತಾಯಿಗೆ ಮೋಸ ಮಾಡ್ಬೇಕೂಂತ ಇರ್ಲಿಲ್ಲ. ಹಳೇ ಸಂಪ್ರದಾಯದ ತಾಯಿಗೆ ಈಗಿನ ಕಾಲದ ವಿಚಾರ ಹೇಳಿದ್ರೆ ಹಿಡ್ಯೋಲ್ಲಾಂತ ಅವ್ನಿಗೆ ಏನು ಹೇಳ್ಬೇಕೋ ಅದನ್ನು ಹೇಳಿ ತನ್ನ ಹೆಂಡ್ತಿ ಮನೇವ್ರು ಹೇಳ್ದಂಗೆ ಕೇಳ್ತಿದ್ನಂತೆ. ಆ ಬೋಳೇ ಸ್ವಭಾವದ ಹುಡುಗನ್ನ ಬಲೆಗೆ ಹಾಕ್ಕೊಂಡು ಮನೆಮಂದಿ ಎಲ್ಲಾ ಮಜಾ ಮಾಡ್ಬಿಟ್ಟು ಅವನ್ನ ಬರಿಗೈ ಮಾಡಿದ್ರು.'

'ಅಲ್ಲಾ ಅಳಿಯನಿಗೆ ಮೋಸ ಮಾಡಿದ್ರೆ ತಮ್ಮ ಮಗಳ ಬಾಳೆ ಹಾಳಾಗೋಲ್ವಾ? ಇದೇನ್ ನೀ ಹೇಳೋದು.'

'ಬಾಳ್ಬೇಕು – ಬದುಕ್ಬೇಕು ಅಂತ ವಿಚಾರ ಮಾಡೋರ ವಿಷ್ಯ ನೀನು ಹೇಳ್ತಿದೀಯ. ಆ ಜನ ಬರೀ ಮಜಾ ಮಾಡೋ ಜನ. ಪಾಪ ಶಶಿ ಮಗನೂ ಇಂಥ ಒಂದು ದುಷ್ಟಕೂಟದೊಳ್ಗೆ ಸಿಕ್ಕಿಹಾಕಿಕೊಂಡು ಬಿಟ್ಟ. ಇಷ್ಟು ಮಜಾ ಮಾಡ್ತಿದ್ದುದ್ದಲ್ದೆ ಅವ್ನ ಹತ್ರ ಲಕ್ಷಾಂತರ ರೂಪಾಯ್ನ ಕೊಡ್ತೀವಿಂತ ಇಸ್ಕೊಂಡಿದ್ರಂತೆ. ಈಗ ಸಾಲ್ವೆಲ್ಲ ಮೈಮೇಲೆ ಬಂದು, ದುಡ್ಡುಕೊಡೀಂತ ಅವ್ನ ಒತ್ತಾಯ ಮಾಡೋಕೆ ಶುರೂ ಮಾಡ್ದಾಗ ಅಳಿಯನಿಗೂ ಮಾವನ ಮನೆಯವರಿಗೂ ಮನಸ್ತಾಪ ಶುರುವಾಯಿತು ಅಂತ ಜನ ಆಡಿಕೊಳ್ತಿದ್ದಾರಂತೆ.'

ಇದೆಲ್ಲಾ ಯಾರು ಹೇಳಿದ್ದು? ಶಶಿಗೆ ಇದೆಲ್ಲಾ ಗೊತ್ತಾ?'

'ಅವ್ನಿಗೆ ಈಗ ಗೊತ್ತಾಗಿದ್ರೂ, ಗೊತ್ತಾಗಿರ್ಬಹ್ದು. ತಾಯಿ ಕೈಲಿ ಅವ್ನು ಹೇಳೆ ಇಲ್ಲ. ಈಗ ಆರು ತಿಂಗಳ ಹಿಂದೆ ತನ್ನ ಹಳೇ ಸ್ನೇಹಿತನ ಕೈಲಿ ಎಲ್ಲಾ ಹೇಳ್ಕೊಂಡು 'ನಾನು ದೊಡ್ಡ ಮೋಸದ ಬಲೇಲಿ ಸಿಕ್ಕಹಾಕ್ಕೊಂಡಿದೀನಿ. ಪಾರಾಗಿ

ಬರ್ತೀನೋ ಇಲ್ವೋ ಎನ್ಸಿದೆ. ಈಗ ನುಂಗೋ ಹಂಗೂ ಇಲ್ಲ. ಉಗ್ಳೋ ಹಂಗೂ ಇಲ್ಲ' ಎಂದು ತುಂಬಾ ಸಂಕ್ಟಪಟ್ಕೊಂಡ್ನಂತೆ.'

'ಏನೋಮ್ಮ ಎಷ್ಟು ವಿಚಿತ್ರ ಅನ್ಸುತ್ತೆ. ಅಂತೂ ಅವರ ಬೀಗರ ಬಗ್ಗೆ ಬಹಳ ಜನಾ ಹೇಳ್ತಾ ಇದ್ರು, ದುಡ್ನ, ನೀರು ಖರ್ಚು ಮಾಡಿದ ಹಾಗೆ ಮಾಡ್ತಾರೆ. ಎಲ್ಲಿಂದ ತರ್ತಾರೋ ಏನೋ, ಖೋಟಾ ನೋಟೇನಾದ್ರೂ ತಯಾರಿಸ್ತಾರಾ ಅಂತಾ ಅಂತಿದ್ರು, ಅಂದ್ರೆ ಈ ಹುಡುಗನ್ನ ಬೋಳ್ಸಿ ಅವ್ರು ಮಜಾ ಮಾಡ್ತಿದ್ರೂಂತ ಕಾಣ್ಸುತ್ತೆ.'

'ಕಾಣ್ಸುತ್ತೆ ಅನ್ನೋದೇನು ಮಾಡಿದ್ದೆ ಹಾಗೆ. ಈಗ ಸಾಲ್ದವ್ರೆಲ್ಲಾ ಮೈಮೇಲೆ ಬಿದ್ದಾಗ, ಅವ್ನು ಅವ್ರು ಕೊಡೋ ದುಡ್ಡಿಗೆ ಒತ್ತಾಯ ಮಾಡಿದ್ನಂತೆ. ಆಗ ಅವ್ರು ಮಾತಾಡಿದ ರೀತಿಯಲ್ಲಿ, ಅವ್ರ ಬಣ್ಣ ಅವನಿಗೆ ಗೊತ್ತಾಯ್ತಂತೆ. ಆ ದಿನ ಅವ್ರ ಮನೆಯವರ್ಗೂ ಸುರೇಶಂಗೂ ಭಾರೀ ಜಗಳ ಆಯ್ತು ಎಂದು ಅವರ ಮನೆ ಕೆಲಸದವಳು ಹೇಳಿದ್ಲಂತೆ. ಆಮೇಲೆ ಇನ್ನು ಇವನು ಬಿಡೋಲ್ಲ ಅಂದ್ಕೊಂಡು ಅವನನ್ನೇ ಮುಗ್ಸಿ ಹೃದಯಾಘಾತಾಂತ ಸುದ್ದಿ ಹಬ್ಬಿಸಿದರು ಎಂದು ಸುದ್ದಿ.

'ಇಷ್ಟೆಲ್ಲಾ ಅನುಮಾನ ಇದ್ಮೇಲೆ ಶವಾನ ಪರೀಕ್ಷೆಗೆ ಕಳಿಸಬಹುದಿತ್ತಲ್ಲ ಇವ್ರೆಲ್ಲಾ. ಯಾಕೆ ಸುಮ್ನಿದ್ರು'

'ಬೆಕ್ಕಿನ ಕೊರಳಿಗೆ ಗಂಟೆ ಕಟ್ಟೋರ್ಯಾರು? ಶಶೀನೆ ಇದಕ್ಕೆ ಮುಂದೆ ನಿಲ್ಬೇಕಾಗಿತ್ತು. ಹೊರಗಿನವರು ಇಂಥಾದ್ದಕ್ಕೆಲ್ಲಾ ಮುಂದೆ ಏಕೆ ಬರ್ತಾರೆ? ಮಗನನ್ನು ಕಳ್ಕೊಂಡ ಸ್ಥಿತೀಲಿ ಅವ್ಳು ಇದನ್ನೆಲ್ಲಾ ಯೋಚಿಸೋಕೆ ಸಾಧ್ಯಾನೆ? ಇಷ್ಟೆಲ್ಲಾ ಮಾಡಿದ್ರೂ ಹೋದ ಮಗ ವಾಪ್ಸು ಬರೋಕೆ ಸಾಧ್ಯವೆ? ಸುಮ್ನೆ ನಾಲ್ಕು ಜನರ ಮುಂದೆ ನಗೆಪಾಟ್ಲಾಗುತ್ತೆ.' 'ಸಂಸಾರ ಗುಟ್ಟು ವ್ಯಾಧಿ ರಟ್ಟೂ' ಅಂತ ಸುಮ್ಮನಾಗಿರ್ಬೇಕು.'

'ಅಬ್ಬಾ ಜಗತ್ತಿನಲ್ಲಿ ಎಂಥೆಂಥಾ ಜನ ಇರ್ತಾರೆ ಅಲ್ವೆ? ಸ್ವತಃ ಹೆಂಡತಿ, ಅತ್ತೆ-ಮಾವಾನೆ ಅಳಿಯನ್ನ ದಿವಾಳಿ ಎಬ್ಸಿದ್ರು, ಕೊಲೆ ಮಾಡಿದ್ರು ಅಂದ್ರೆ ಬದುಕೋದು ಹೇಗೇಂತ.'

'ಈಗ ಜನರು ಹಣಕ್ಕಾಗಿ ಏನ್ಬೇಕಾಗದ್ರೂ ಮಾಡಬಲ್ಲರು. ಅಲ್ಲಿ ಮಾನವೀಯತೆಯಾಗಲೀ, ನನ್ನದು-ತನ್ನದು ಎಂಬ ಮಮತೆಯಾಗಲೀ, ಭೂತ ಭವಿಷ್ಯದ ಕಲ್ಪನೆಯಾಗಲಿ, ಮಾನಾಪಮಾನದ ನೀತಿ-ಅನೀತಿಯ ವಿಮರ್ಶೆಯಾಗಲೀ ಇರುವುದಿಲ್ಲ. ಹೇಗಾದರೂ ಮಾಡಿ ದುಡ್ಡು ಗಳಿಸೋದು - ಮಜಾ ಮಾಡೋದು ಲಂಗುಲಗಾಮಿಲ್ಲದೆ, ಹಂಗಿಲ್ಲದ ಜೀವನ ನಡ್ಸೋದು, ಇಂಥವರಿಗೆ ಕರ್ತವ್ಯ, ಗೌರವ, ಗುರು-ಹಿರಿಯರು ಕೃತಜ್ಞತೆ ಉಪಕಾರಸ್ಮರಣೆ ಈ ಶಬ್ದಗಳು ಅರ್ಥವಿಹೀನ.

ಡಿಸಿಪ್ಲಿನ್ ಎನ್ನುವ ನಡತೆ ಇವರಿಗೆ ವಾಕರಿಕೆಯನ್ನುಂಟುಮಾಡುತ್ತವೆ. 'ಋಣಂ ಕೃತ್ವಾ ಘೃತಂ ಪಿಬೇತ್' ಹೇಗಾದರೂ ಆಗಲಿ ಏನಾದರಾಗಲಿ ತಂದು ಮೆರೆದು ಮಜಾ ಮಾಡುವುದೇ ಇವರ ಜೀವನದ ಗುರಿ.'

'ಅಲ್ಲಾ ಇಂಥವರ ನಡುವೆ ಶಶಿಯ ಗತಿ ಏನು? ಪಾಪ ಗೌರವಸ್ಥೆ ಸಂಪ್ರದಾಯ ಪೀಳಿಗೆಯ ಇವಳಿಗೆ ಇಂತಹ ಸಂಸ್ಕಾರರಹಿತ ಕುಟಿಲ ಜನರ ಸಂಬಂಧವೇ ಅವಳು 'ದೇವರು ಮೋಸ ಮಾಡಿದ' ಎಂದು ಹೇಳಿದ ಮಾತು ಅಕ್ಷರಶಃ ಸತ್ಯ. ದೇವರೇ ಮೋಸಗಾರನಾಗಿಲ್ಲದಿದ್ದರೆ ದೇವತೆಯಂತಹ ಅವಳಿಗೆ ಇಂತಹ ಸಂಬಂಧ ಬೆಳೆಯಲು ಅವಕಾಶ ಕೊಡುತ್ತಿರಲಿಲ್ಲ.'

'ನಿನಗೆಲ್ಲೋ ಹುಚ್ಚು, ಎಲ್ಲಿ ದೇವರು ಎಲ್ಲಿ ದಿಂಡರು? ನಮ್ಮ ಕೈಮೀರಿದುದಕ್ಕೆಲ್ಲಾ ದೇವರು ಅಂದ್ಕೊಳ್ತೀವಿ ಅಷ್ಟೆ. ಪಾಪ ಸುರೇಶ್ ಎಷ್ಟು ಒಳ್ಳೆ ಹುಡುಗ. ಅತ್ಯಂತ ಆಪ್ತರಂತೆ, ಹಿತೈಷಿಗಳಂತೆ ನಟಿಸಿ, ಅವನ ಜೀವನವನ್ನೇ ಅಲ್ದೆ, ಜೀವಾನೂ ತೆಗೆದುಬಿಟ್ರು.'

'ಏನಾದ್ರೂ ಹೇಳು ಶೀಲಾ, ಮದ್ವೆ ಆದ್ಮೇಲೆ ತವರು ಮನೇವ್ರು ಮಗಳ ಗಂಡನ ಮನೆ ವಿಚಾರದಲ್ಲಿ ತಲೆ ಹಾಕ್ಬಾರ್ದು. ಅವರ ಕೈವಾಡಕ್ಕೆ ಅವಕಾಶ ಇರ್ಬಾರ್ದು. ಏನೋ ಕರಸೋದು ಕಳ್ಸೋದು ಪ್ರೀತಿ ವಿಶ್ವಾಸ ತೋರ್ಸೋದು ಈ ಮಟ್ಟಕ್ಕೆ ಇರ್ಬೇಕು. ಅವಳೀಗೇನಾದ್ರೂ ಗಂಡನ ಮನೇಲಿ ತೊಂದ್ರೆ-ತಗಾದೆ ಇದ್ರೆ ಮಾತ್ರ ಆಸಕ್ತಿ ತೋರಿಸ್ಬೇಕೆ ಹೊರತು ಅತಿಯಾದ ಸಂಪರ್ಕ, ಪ್ರಭಾವ ಹುಡುಗನಿಗೂ ಅವರ ಮನೇವ್ರಿಗೂ ಒಳ್ಳೆದಲ್ಲ.'

'ನಿಜ ಹೀಗಿದ್ದಿದ್ರೆ ಶಶಿ ಸ್ಥಿತಿ ಹೀಗಾಗ್ತಿರಲಿಲ್ಲ. ಅವಳ ಮಾರ್ಗದರ್ಶನದಲ್ಲಿ, ಅವರ ಮನೆಯ ಶಿಸ್ತಿನ ವಾತಾವರಣದಲ್ಲಿ ಜಾಣನಾದ ಸುರೇಶ್ ಜೀವನವನ್ನು ಚೆನ್ನಾಗಿ ಮಾಡ್ಕೊಳ್ತಿದ್ದ. ಈ ಸಂಬಂಧಾನೆ ಅವರ ಮನೆತನ ಮುರೀಲಿಕ್ಕೆ ಕಾರಣ ಆಯ್ತು.'

'ಏನೋಪ್ಪ, ಶಶಿ ಮುಂದೆ ಹೇಗ್ಮಾಡ್ತಾಳೋ ಏನೋ. ಆ ಬೀಗರು ಈಗ್ಲಾದ್ರೂ ಅವ್ರನ್ನ ಕೈಬಿಟ್ರೆ ಮೊಮ್ಮಕ್ಕಳಾದ್ರೂ ಒಂದು ದಡ ಮುಟ್ಟಿಯಾರು. ಇವೆಲ್ಲಾ ಸೂಕ್ಷ್ಮ ವಿಷಯ. ಅವಳ ಕೈಲಿ ಮಾತಾಡೋಕೂ ಆಗೋಲ್ಲ. ದೇವ್ರೇ ಕಾಪಾಡ್ಬೇಕು. ಬರ್ತೀನಮ್ಮ. ಅವಳ ಮನೆಗೆ ಹೋಗಿ ರಾತ್ರೀನೆ ವಾಪ್ಸು ಹೋಗಿ ಬಿಡ್ತೀವಿ. ಬಿಡಿಸಲಾಗದ ಈ ಗೊಂದಲದ ಸನ್ನಿವೇಶದಲ್ಲಿ ನಾನಿದ್ದು ತಾನೆ ಏನು ಪ್ರಯೋಜನಾಂತ ಎಂದುಕೊಳ್ಳುತ್ತಾ ಶಶಿಯ ಮನೆ ಕಡೆ ಹೊರಟಳು ಸ್ವಾತಿ.

■

# ೧೦. ಪೂರ್ವ – ಪಶ್ಚಿಮ

ಪಶ್ಚಿಮದ ಮುಂಬಯಿಯಿಂದ ಹೊರಟ ರೈಲು ತಡವಾಗಿ ಬಂದಿತು. ಸೀಮಾದೇವಿ ರೈಲು ಹತ್ತಿದವಳೇ ಟಿಕೆಟ್ ಹಿಡಿದುಕೊಂಡು ತನ್ನ ಸೀಟು ಹುಡುಕುತ್ತಿದ್ದಳು. ಆ ಜನರ ನೂಕು ನುಗ್ಗಲಿನಲ್ಲಿ ಬಾಗಿಲಿನಿಂದ ಒಳಹೋಗುವುದೇ ಕಷ್ಟವಾಗಿತ್ತು. ಎಲ್ಲರಿಗೂ ರಿಜರ್ವೇಷನ್ ಇತ್ತು. ಆದರೂ ತಮಗೆ ಸೀಟ್ ಸಿಗುವುದೋ ಇಲ್ಲವೋ ಎಂಬ ಆತಂಕದಲ್ಲಿದ್ದಂತೆ ಪ್ರತಿಯೊಬ್ಬರೂ ಒಳಕ್ಕೆ ಮೊದಲು ಹೋಗುವ ಸನ್ನಾಹದಲ್ಲಿ, ಯಾರೂ ಒಳಗೆ ಹೋಗಲಾಗದಂತೆ ದಾರಿಯಲ್ಲೇ ಗುಂಪುಕಟ್ಟಿ ನಿಂತು ಬಿಟ್ಟಿದ್ದರು. 'ಹೇಗೂ ಒಳಗೆ ಬಂದಿದ್ದೇವಿ. ರೈಲು ಹೊರಟಮೇಲೆ ನಮ್ಮ ನಮ್ಮ ಸ್ಥಳಗಳು ನಮಗೇ ದೊರೆಯುತ್ತದೆ. ಹೋದರಾಯ್ತು' ಎಂಬ ತಾಳ್ಮೆ ಒಬ್ಬರಿಗೂ ಇರಲಿಲ್ಲ. ತಾನೇ ಮೊದಲು ಹೋಗಬೇಕೆಂಬ ಪ್ರತಿಯೊಬ್ಬರ ಆತುರದಿಂದಾಗಿ ಒಬ್ಬರಿಗೂ ಒಳಕ್ಕೆ ಸರಿಯಲು ಸಾಧ್ಯವಾಗಲಿಲ್ಲ. ಆಗ ಸೀಮಾ,

'ಸೀಟು ಎಲ್ಲೂ ಓಡಿ ಹೋಗೋದಿಲ್ಲ. ಯಾಕ್ ಹೀಗೆ ಆತುರಪಡ್ತೀರಿ? ಒಬ್ಬೊಬ್ಬರೇ ಹೋದರೆ ಎಲ್ಲರಿಗೂ ಅನುಕೂಲವಾಗುತ್ತೆ' ಎಂದಾಗ ನಿಂತಿದ್ದವರೆಲ್ಲರೂ ವಾಸ್ತವಿಕತೆಯ ಅರಿವು ಮಾಡಿಕೊಂಡು ಮುಂದೆ ಹೋಗುವವರಿಗೆ ಅವಕಾಶ ಮಾಡಿಕೊಟ್ಟರು. ಮೂರೇ ನಿಮಿಷಗಳಲ್ಲಿ ತಮ್ಮ ತಮ್ಮ ಸೀಟುಗಳ ಬಳಿ ಎಲ್ಲರೂ ಹೋಗಲು ಸಾಧ್ಯವಾಯಿತು. ಆಗ ಸೀಮಾಳೂ ಸೀಟು ಹುಡುಕುತ್ತಾ ಹೋದಾಗ ತನ್ನ ಹದಿನೇಳನೇ ನಂಬರಿನ ಸೀಟು ಅಪ್ಪರ್ ಬರ್ತ್ ಎಂದು ಗೊತ್ತಾಯಿತು 'ಈ ವಯಸ್ಸಿನಲ್ಲಿ ಈ ದೇಹ ಹೊತ್ತುಕೊಂಡು ಮೇಲೆ ಹತ್ತುವುದು ಹೇಗೆ' ಎಂದುಕೊಳ್ಳುತ್ತಾ ಕೆಳಗಿನ ಬರ್ತ್ ಮೇಲೆ ಕುಳಿತಳು. 'ಈ ಸೀಟಿನವರು ಯಾರೋ ಏನೋ, ಬರಲಿ ನೋಡೋಣ' ಎಂದು ಕೊಂಡಳು. ಕೆಳಗಿನ ಬರ್ತ್ ಯುವಕರಾದವರಿಗೆ ಅಲಾಟ್ ಆಗಿದ್ದರೆ ತನ್ನ ಸೀಟನ್ನು ಬದಲಾಯಿಸಿಕೊಳ್ಳಬಹುದೆಂದುಕೊಂಡಳು. ಅದೂ ಕೂಡಾ ವಯಸ್ಸಾದವರಿಗೇ ಸಿಕ್ಕಿದರೆ ಹೇಗಾದರೂ ಮಾಡಿ ಮೇಲೆ ಹತ್ತಬೇಕಾಗುತ್ತದೆ ಎಂದುಕೊಂಡು 'ಯಾರಿದ್ದಾರೋ ನೋಡೋಣ' ಎಂದು ಕಾಯುತ್ತಾ ಕೂತಳು.

ಟ್ರೈನ್ ಆಗಲೇ ಮುಂದಿನ ಸ್ಟೇಷನ್ ಸಮೀಪ ಸಾಗಿತ್ತು. ಆ ಕೆಳಗಿನ ಬರ್ತ್ ವ್ಯಕ್ತಿ ಬರಲೇ ಇಲ್ಲ. ಆಗ ಸೀಮಾ 'ಬಹುಶಃ ಕೊನೇಗಳಿಗೆಯಲ್ಲಿ ಆ

ಸೀಟಿನ ವ್ಯಕ್ತಿ ತನ್ನ ಪ್ರಯಾಣ ರದ್ದುಪಡಿಸಿರಬೇಕು. ಈಗ ಟಿ.ಟಿ.ಯನ್ನು ತನ್ನ ಸೀಟನ್ನು ಕೆಳಗಿನ ಬರ್ತ್‌ಗೆ ಬದಲಾಯಿಸಿಕೊಡು' ಎಂದು ಕೇಳಬೇಕೆಂದುಕೊಂಡಳು. ಅಷ್ಟರಲ್ಲಿ ಒಬ್ಬ ಯುವಕ ತನ್ನ ಪಕ್ಕದಲ್ಲಿ, ಕೆಳಗಿನ ಬರ್ತ್‌ನಲ್ಲಿ ಬಂದು ಕುಳಿತ. ಈತನಿಗೇ ಆ ಸೀಟು ಅಲಾಟ್ ಆಗಿರಬೇಕೆಂದುಕೊಂಡು ಸೀಮಾ,

'ನಿಮ್ಮ ಸೀಟ್ ನಂಬರ್‍ಎಷ್ಟು' ಎಂದಳು.

'ನನ್ನದು ಇದೇ ಸೀಟು. ಹದಿನೈದನೇ ನಂಬರಿನದು. ನಾನಿಲ್ಲೇ ಪಕ್ಕದ ಬ್ಲಾಕ್‌ನಲ್ಲಿ ನನ್ನ ಫ್ರೆಂಡ್ ಇದ್ದ ಅವನ ಬಳಿ ಕುಳಿತಿದ್ದೆ.'

'ನನ್ನದು ಮೇಲಿನ ಬರ್ತ್, ವಯಸ್ಸಾಗಿದೆ. ಹತ್ತಲು ಕಷ್ಟ. ಕೆಳಗಿನ ಸೀಟಿಗೆ ಯಾರಾದರೂ ಚಿಕ್ಕವಯಸ್ಸಿನವರು ಬಂದರೆ ಬದಲಾಯಿಸಿಕೊಳ್ಳೋಣ ಎಂದು ಕಾಯುತ್ತಿದ್ದೆ.'

'ಅಂದ ಹಾಗೆ ನೀವು ದೀಪಕ್‌ನ ತಾಯಿ ಅಲ್ಲವೆ' ಎಂದ.

'ಹೌದು. ನಿಮಗೆ ಹೇಗೆ ಗೊತ್ತು? ನೀವ್ಯಾರು?

'ನನ್ನ ಹೆಸರು ಕಿರಣ್. ನಾನು ದೀಪಕ್ ಇಬ್ಬರೂ ಫ್ರೆಂಡ್ಸ್. ನಾವಿಬ್ಬರೂ ಕಾಲೇಜಿನ ಕ್ರಿಕೆಟ್ ಮತ್ತು ಟೇಬಲ್ ಟೆನ್ನಿಸ್ ಪ್ಲೇಯರ್ಸ್ ಆಗಿದ್ದೆವು. ನಾನು ಈಗ ಸುಮಾರು ಹತ್ತು ವರ್ಷಗಳ ಹಿಂದೆ ಒಂದರೆಡು ಬಾರಿ ನಿಮ್ಮ ಮನೆಗೂ ಬಂದಿದ್ದೆ. ನಾನು ನಿಮ್ಮನ್ನು ಆಗಾಗ್ಗೆ ನೋಡುತ್ತಿದ್ದೆ. ಆದರೆ ಪರಿಚಯವಾಗಿರಲಿಲ್ಲ.'

'ಹೌದು. ದೀಪಕ್‌ಗೆ ಬಹಳ ಜನ ಫ್ರೆಂಡ್ಸ್. ಒಂದೋ ಎರಡೋ ಸಲ ನೋಡಿದ್ದರೆ ನನಗೆ ಪರಿಚಯ ಉಳಿಯುವುದಿಲ್ಲ. ಮೇಲಿಂದ ಮೇಲೆ ಮನೆಗೆ ಬರುತ್ತಿದ್ದವರ ನೆನಪು ಮಾತ್ರ ಇದೆ.'

'ಅಂದ ಹಾಗೆ ದೀಪಕ್ ಈಗ ಎಲ್ಲಿದ್ದಾನೆ? ಏನು ಮಾಡುತ್ತಿದ್ದಾನೆ?

'ಅವನೀಗ ಅಮೆರಿಕಾದಲ್ಲಿ ರಿಸರ್ಚ್ ಮಾಡುತ್ತಿದ್ದಾನೆ.'

'ಮದುವೆ ಮಾಡಿಕೊಂಡು ಹೋಗಿದ್ದಾನೆಯೆ?'

'ಓಹೋ ಈಗಾಗಲೇ ಒಂದು ಮಗುವೂ ಇದೆ. ಅಂದ ಹಾಗೆ ನೀವೇನಾಡ್ತಿದ್ದೀರಿ ? ನಿಮ್ಮ ಮದುವೆಯೂ ಆಗಿರಬೇಕು.'

'ನಾನು ಮದ್ರಾಸಿನ ಒಂದು ದೊಡ್ಡ ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್ ಇಂಜಿನೀಯರ್ ಆಗಿದ್ದೇನೆ. ಮದುವೆಯಾಗಿ ಎರಡು ವರ್ಷಗಳಾದವು.'

'ನಿಮ್ಮ ಶ್ರೀಮತಿ ಓದಿದ್ದಾರಾ? ಎಲ್ಲಿಯವರು? ಅವರು ನೀವು ಫ್ಯಾಕ್ಟರಿಗೆ ಹೋದಾಗ ಹೊತ್ತು ಹೇಗೆ ಕಳಿತಾರೆ?'

'ನನ್ನಾಕೆ ಕುಶಲಾ ಎಂ.ಎ.,ಎಂ.ಫಿಲ್ ಮಾಡಿಕೊಂಡಿದ್ದಾಳೆ. ಬೆಂಗಳೂರಿನ ಡಾ॥ ಮಣಿಯವರ ಮಗಳು.'

'ಮಣಿಯವರ ಮಗಳಾ?'

'ನಿಮಗೆ ಅವರ ಪರಿಚಯವಿದೆಯೇ?'

ನನಗೇನು ಪರಿಚಯವಿಲ್ಲ. ಆದರೆ ಮೊನ್ನೆ ತಾನೆ ಒಬ್ಬರ ಮನೆಗೆ ನಾನು ಮತ್ತು ನಮ್ಮ ಪಕ್ಕದ ಮನೆಯಾಕೆಯೂ ಹೋಗಿದ್ದೆವು. ಆಗ ಹೀಗೆ ಮಾತಾನಾಡುತ್ತಿರುವಾಗ ಬೆಂಗಳೂರಿನಲ್ಲಿರುವ ಅವರ ಮಗನ ಸ್ನೇಹಿತನ ತಾಯಿಯಾದ ಡಾ॥ ಮಣಿಯವರ ವಿಷಯ ಬಂದಿತ್ತು. ಅದು ಈಗ ನೆನಪಿಗೆ ಬಂತು.

'ಹೌದಾ? ಅವರಬಗ್ಗೆ ಏನು ಹೇಳಿದರು? ಏನೆಂದರು?'

'ನೀವು ಅವರ ಮಗಳನ್ನು ಮಾಡಿಕೊಂಡಿದ್ದೀರಾ? ಓಹೋ ಅವರ ಅಳಿಯ ಕಿರಣನೇ ನೀವು' ಪಾಪ ನೀವೀಗ ಒಬ್ಬರಿಗೊಬ್ಬರು ಚೆನ್ನಾಗಿಲ್ಲವಂತಲ್ಲ. ಹಾಗೇಕೆ ಮಾಡಿಕೊಂಡಿರಿ? ನಿಮ್ಮ ತಂದೆ-ತಾಯ್ಗಳಿಗೂ ಒಬ್ಬನೇ ಮಗ, ಒಬ್ಬಳೇ ಮಗಳಂತೆ. ಡಾ॥ ಮಣಿಯವರಿಗೆ ನಿಮ್ಮ ಹೆಂಡತಿ ಮತ್ತು ಇನ್ನೊಬ್ಬ ಮಗ ಮಾತ್ರ ಇದ್ದಾರಂತಲ್ಲ. ಎಲ್ಲರೂ ವಿದ್ಯಾವಂತರೆ. ಅವರೂ ಹೈಯರ್ ಮಿಡ್ಲ್ ಕ್ಲಾಸ್‌ಗೆ ಸೇರಿದವರು ಮತ್ತು ನೀವೂ ಅಷ್ಟೆಯಂತೆ. ಹೀಗೆಲ್ಲಾ ಇದ್ದು ಜೀವನವನ್ನು ಸಮಸ್ಯೆಯಾಗಿ ಏಕೆ ಮಾಡಿಕೊಂಡಿರಿ?'

'ನನ್ನದೊಂದು ದೊಡ್ಡ ಕಥೆ ಅಂಟೀ, ನಾನು ಯಾವಾಗಲೂ ಡಿಸ್ಟಿಂಕ್ಷನ್ ವಿದ್ಯಾರ್ಥಿ. ನಮ್ಮ ತಂದೆ-ತಾಯಿ ಸಹ ನನ್ನನ್ನು ಬಹಳ ನಿಗಾವಹಿಸಿ ತುಂಬಾ ಶಿಸ್ತಿನಿಂದ ಬೆಳೆಸಿದ್ದರು. ಇಂಜನಿಯರಿಂಗ್ ಪಾಸಾಗುತ್ತಲೆ ನನಗೆ ಮದ್ರಾಸ್‌ನಲ್ಲಿ ಒಳ್ಳೆಯ ಕೆಲಸ ಸಿಕ್ಕಿತು. ಕೆಲಸ ಸಿಕ್ಕಿದ ತಕ್ಷಣ ಮದುವೆಯ ಪ್ರಯತ್ನ ಪ್ರಾರಂಭವಾಯ್ತು. ಅನೇಕ ಕನ್ಯೆಗಳನ್ನು ನೋಡಿದ್ದರಲ್ಲಿ ಡಾ॥ ಮಣಿಯವರ ಮಗಳು ನನಗೆ ಒಪ್ಪಿಗೆಯಾಯಿತು. ಆದರೆ ನಮ್ಮಮ್ಮ ಅಷ್ಟು ಒಪ್ಪಲಿಲ್ಲ. ಕಾರಣ ಇಷ್ಟೆ. ತುಂಬಾ ದೊಡ್ಡ ಸಿಟಿಯೊಳಗೆ ಬೆಳೆದವರು, ಬಹಳ ಸ್ವತಂತ್ರ ಮನೋಭಾವ ಬೆಳೆಸಿಕೊಂಡಿರ್ತಾರೆ. ಕುಟುಂಬದಲ್ಲಿ ಹೊಂದಿಕೊಳ್ಳುವುದು ಕಷ್ಟ. ಒಬ್ಬನೇ ಮಗನಾದ ನನ್ನ ಸಂಸಾರ ವಿರಸ ಸಂಸಾರವಾಗಬಾರದೆಂಬುದು ಅವರ ಇಷ್ಟ. ಡಾಕ್ಟರಿಗೆ ಒಬ್ಬಳೇ

ಮಗಳಾದುದರಿಂದ ತುಂಬಾ ಅಚ್ಚುಮೆಚ್ಚಿನಿಂದ ಸಾಕಿರುತ್ತಾರೆ. ಅಲ್ಲದೇ ಬಾಲ್ಯದಿಂದಲೂ ಸಿಟಿಯಲ್ಲಿ ಬೆಳದವಳು. ಮೇಲಾಗಿ ವಿದ್ಯಾವಂತೆ. ಎಲ್ಲಕ್ಕಿಂತ ಹೆಚ್ಚಾಗಿ ತಂದೆ ಇಲ್ಲ. ತಾಯಿ ನೌಕರಿಯಲ್ಲಿದ್ದಾಳೆ. ತಾಯಿ ನೌಕರಿಯಲ್ಲಿದ್ದರೆ ಮಕ್ಕಳನ್ನು ಸರಿಯಾಗಿ ಬೆಳೆಸಲು ಸಾಧ್ಯವಾಗಿರುವುದಿಲ್ಲ ಎಂದು ತಮ್ಮ ಅನೇಕ ವಾದಗಳನ್ನು ಮುಂದಿರಿಸಿ ನಮ್ಮ ತಂದೆ-ತಾಯಿ ಈ ಕನ್ಯೆ ಬೇಡವೆಂದರು. ಆದರೆ ಮದ್ರಾಸಿನಲ್ಲಿ ನನ್ನ ಕೆಲಸ. ಅಲ್ಲಿಯ ವಾತಾವರಣಕ್ಕೆ ಸಿಟಿಯಲ್ಲಿ ಬೆಳೆದ ಹುಡುಗಿ ಸರಿಯಾಗಿ ಹೊಂದಿಕೊಳ್ಳಬಲ್ಲಳು. ನಾನಾದರೋ ಬೆಳಿಗ್ಗೆ ಹೋದವನು ಸಂಜೆಯಾದ ಮೇಲೆ ಮನೆಗೆ ಬರುವುದು. ಹೀಗಿರುವಾಗ ಹೆಚ್ಚು ಓದದ ಹುಡುಗಿಗೆ ಹೊತ್ತು ಕಳೆಯುವುದು ಕಷ್ಟವಾಗಬಹುದು. ವಿದ್ಯಾವಂತೆಯಾಗಿದ್ದರೆ ನೌಕರಿಯನ್ನಾದರೂ ಮಾಡುತ್ತಾಳೆ. ಇಲ್ಲವೇ ಬೇರಾವುದೇ ರೀತಿಯಿಂದ ತನಗೆ ಬೋರ್ ಆಗದಂತೆ ಏನಾದರೂ ವ್ಯವಸ್ಥೆ ಮಾಡಿಕೊಳ್ಳುತ್ತಾಳೆ. ವಿದ್ಯಾವಂತೆಯಾದ ಹುಡುಗಿ ಎಫಿಷಿಯಂಟಾಗಿಯೂ ಇರುತ್ತಾಳಷ್ಟೇ ಅಲ್ಲ ಮಕ್ಕಳನ್ನು ಸಹ ಚೆನ್ನಾಗಿ ಬೆಳೆಸಬಲ್ಲಳು. ಬೆಳಗಿನಿಂದ ಸಂಜೆಯವರೆಗೆ ನನಗೆ ನೌಕರಿಯೇ ಆಗುವುದರಿಂದ ಕುಟುಂಬದ ಅಗತ್ಯಗಳಿಗೆ ಲಕ್ಷ್ಯ ಕೊಡಲಾಗುವುದಿಲ್ಲ. ತಂದೆ ಇಲ್ಲದ ಮನೆಯಲ್ಲಿ ಆ ತಾಯಿಯೇ ಎಲ್ಲಾ ಜವಾಬ್ದಾರಿಯನ್ನು ನಿರ್ವಹಿಸಿಕೊಂಡು ಬಂದಿರುವ ಮನೆಯಲ್ಲಿ ಬೆಳೆದವಳಾಗಿ ಅಂತಹ ತರಬೇತಿಯೂ ಇವಳಿಗಿರುತ್ತದೆ. ಹಾಗಾಗಿ ನಾನು ನಿಶ್ಚಿಂತೆಯಿಂದ ನೌಕರಿ ಮಾಡಬಹುದು ಎಂಬುದು ನನ್ನ ತರ್ಕ. ಇದನ್ನೆಲ್ಲಾ ವಿವರಿಸಿ ನಮ್ಮ ತಂದೆ ತಾಯ್ಗಳ ಮುಂದಿಟ್ಟಾಗ ತನ್ನ ಮನಸ್ಸಿಗೆ ಬೇಜಾರಾಗಬಾರದೆಂದು ಅವರುಗಳು ಇಷ್ಟವಿಲ್ಲದಿದ್ದರೂ ಒಪ್ಪಿದರು, ಮದುವೆಯೂ ನಡೆಯಿತು.

'ಮುಂದೆ ನಿಮ್ಮ ತಾಯಿ-ತಂದೆ ಆಕೆಯನ್ನು ಪ್ರೀತಿಯಿಂದ ಬರಮಾಡಿಕೊಳ್ಳಲಿಲ್ಲವೆಂದು ಕಾಣಿಸುತ್ತದೆ. ಹೀಗೆಯೇ ಬಹಳ ಕಡೆ ಆಗಿರುತ್ತದೆ. ತಂದೆ-ತಾಯ್ಗಳು ಮಕ್ಕಳ ಸಲುವಾಗಿ ಮೊದಲೇನೋ ಇಷ್ಟವಿಲ್ಲದಿದ್ದರೂ ಒಪ್ಪಿಬಿಡುತ್ತಾರೆ. ಆದರೆ ಆಕೆ ಬಂದಾಗ, ಆಕೆಯೊಡನೆ ಹಿತವಾಗಿ ವರ್ತಿಸುವುದಿಲ್ಲ. ಬೇಡದ ಹುಡುಗಿ ಬಂದಳೆಂದು ಮನಸ್ಸಿನಲ್ಲಿ ಹುದುಗಿದ ಭಾವನೆ ಜೀವನದಲ್ಲಿ ನಾನಾ ಸಂದರ್ಭಗಳಲ್ಲಿ ಅನೇಕ ರೀತಿಯಲ್ಲಿ ವ್ಯಕ್ತವಾಗಿ, ಹೊಸದಾಗಿ ಬಂದ ಹುಡುಗಿಯ ಮನಸ್ಸಿಗೆ ತುಂಬಾ ಘಾತವಾಗಿ ಬಿಡುತ್ತದೆ. ಹೊಸದಾಗಿ ಬಂದವಳನ್ನು ಮನೆಯ ಜನ ಪ್ರೀತಿಯಿಂದ ಕಾಣದಿದ್ದಾಗ ಆಕೆಗೂ ಅವರ ಬಗ್ಗೆ ಪ್ರೀತ್ಯಾದರಗಳು ಬೆಳೆಯುವುದಿಲ್ಲ. ಇವರಿಬ್ಬರ ನಡುವೆ ಹುಡುಗ ಜಿಬ್ಬೆಯಾಗಿ ಹೋಗುತ್ತಾನೆ. ಇದು ಗಂಡ-ಹೆಂಡಿರಲ್ಲಿ ವಿರಸಕ್ಕೂ ಕಾರಣವಾಗಬಹುದು. ಹಾಗೇನಾದರೂ ಆಯ್ತೇನು ನಿಮ್ಮ ಜೀವನದಲ್ಲಿ?'

'ಛೆ, ಛೆ. ನಮ್ಮ ತಂದೆ–ತಾಯಿ ಅಂತಹವರಲ್ಲ. ಮೊದಲೇನೋ ಹಾಗೆ ಹೇಳಿದ್ದರು. ಮದುವೆಯಾದ ಮೇಲೆ ನನ್ನಷ್ಟೇ ಪ್ರೀತಿ ಇತ್ತು ಅವಳ ಬಗೆಗೆ. ಹಾಗೆ ವಿರಸ ಉಂಟುಮಾಡಿ ಸಂತೋಷಪಡುವವರಲ್ಲ ನಮ್ಮ ತಾಯಿ. ನನ್ನ ಸಂತೋಷಕ್ಕಾಗಿ ನಾನು ಏನು ಹೇಳಿದರೂ ಕೇಳುತ್ತಾರೆ. ಅದು ಆದದ್ದೇ ಬೇರೆ. ಮದುವೆಯಾದ ನಂತರ ಒಂದೆರಡು ಬಾರಿ ನಮ್ಮ ಊರಿಗೆ ಬಂದು ನಮ್ಮ ಮನೆಯಲ್ಲಿದ್ದಳು ಕುಶಲ. ನನ್ನ ತಂಗಿ ತಂದೆ–ತಾಯ್ಗಳೊಡನೆ ಹೊಂದಿಕೊಂಡೂ ಇದ್ದಳು. ನಂತರ ಮದ್ರಾಸಿಗೆ ನನ್ನೊಡನೆ ಇರಲು ಬಂದಾಗಲೇ ಸಮಸ್ಯೆ ಪ್ರಾರಂಭವಾದದ್ದು.'

'ಅದೇನ್ರಿ ವಿಚಿತ್ರ, ನಿಮ್ಮ ಮನೆಯವರೆಲ್ಲರೊಡನೆ ಹೊಂದಿಕೊಂಡಿದ್ದವಳು ತನ್ನ ಗಂಡನೊಡನೆ ಹೊಂದಿಕೊಳ್ಳಲಿಲ್ಲವೆ?'

'ಬೆಂಗಳೂರು ಮದ್ರಾಸಿಗೆ ಸಮೀಪ ನೋಡಿ, ಹೊಸ ಜಾಗ, ಇಡೀ ದಿನ ಮನೆಯಲ್ಲಿ ಒಬ್ಬಳೇ ಇರುತ್ತಿದ್ದಳು. ಅವರಮ್ಮ ಬೇರೆ, ಮೇಲಿಂದ ಮೇಲೆ ಪತ್ರ ಬರೆಯುತ್ತಿದ್ದರು. 'ಒಬ್ಬಳೇ ಇರ್ತೀಯಾ ಬೇಜಾರಾದರೆ ಬಂದ್ಬಿಡು. ಒಂದೆರಡು ದಿನ ಇದ್ದು ಹೋದರೆ ಛೇಂಜ್ ಆಗುತ್ತದೆ. ನನಗೂ ನಿನ್ನನ್ನು ಕಳಿಸಿ ಏನೋ ಕಳೆದುಕೊಂಡಂತಾಗಿದೆ. ಇಷ್ಟು ವರ್ಷ ಸಾಕಿ ಸಲಹಿ ನಿನ್ನಿಂದ ದೂರವಿರಬೇಕಲ್ಲ. ನನಗಿದು ಕಷ್ಟವಾಗಿದೆ.' ಎಂದು ಬರೆಯುತ್ತಿದ್ದರು. ಆಗ ನಾನೂ ಸಹ 'ಪ್ರಾರಂಭದಲ್ಲಿ ಕಷ್ಟವಾಗುತ್ತೆ. ಸ್ವಲ್ಪ ರೂಢಿಯಾಗುವತನಕ ಹೋಗಿ ಬರಲಿ' ಎಂದು ಅವಳು ಹೋಗುತ್ತೇನೆಂದಾಗೆಲ್ಲಾ ಕಳಿಸುತ್ತಿದ್ದೆ. ಒಮ್ಮೊಮ್ಮೆ ಹೋದವಳು ಹದಿನೈದು ದಿನಗಳಾದರೂ ಬರುತ್ತಿರಲಿಲ್ಲ. ಬಂದಮೇಲೂ ಸಹ ಮತ್ತೆ ಹೋಗಲು ಛಡಪಡಿಸುತ್ತಿದ್ದಳು. ನಾನು ಅವಳಿಗೆ ಹೊಂದಿಸಿ\ಕೊಂಡಂತೆಲ್ಲಾ ಅವಳಿಗೆ ತವರುಮನೆಯ ಮೇಲಿನ ಆಸಕ್ತಿ ಹೆಚ್ಚಾಗುತ್ತಾ ಹೋಯಿತು. ತನ್ನ ಮನೆಯ ಬಗ್ಗೆ ಅವಳಿಗೆ ಏನೂ ಆಸಕ್ತಿಯೇ ಇಲ್ಲವೇನೋ ಎನ್ನುವಷ್ಟರಮಟ್ಟಿಗೆ ಅವರ ತಾಯಿಯ ಬಗ್ಗೆ ಹಚ್ಚಿಕೊಂಡು ಬಿಟ್ಟಳು.'

'ಇದೇನು ವಿಚಿತ್ರ! ತಾಯಿಯಾದವಳು ಮಗಳಿಗೆ ಬುದ್ಧಿ ಹೇಳುವ ಬದಲು ತಾನೇ ಅವಳಿಗೆ ತವರು ಮನೆಗೆ ಬರಲು ಪ್ರೋತ್ಸಾಹಿಸಿದರೆ ಏನಾಗಬಾರದು ಮಕ್ಕಳು? ಗಂಡನ ಮನೆಯಲ್ಲಿ ಹೊಂದಿಕೊಳ್ಳುವಂತಹ ರೀತಿಯಲ್ಲಿ ತಾಯಿ ಪ್ರೋತ್ಸಾಹಿಸಬೇಕು. ಸ್ವಾಭಾವಿಕವಾಗಿ ಸಾಕಷ್ಟು ಜೀವನಾನುಭವವಿಲ್ಲದ ಮಕ್ಕಳು ಮೊದಲಿನಿಂದಲೂ ತಮಗೆ ರೂಢಿಯಾದ ವಾತಾವರಣ ನೀತಿ–ನಿಯಮಗಳಿಗೆ ಹೊಂದಿಕೊಂಡು ಬಿಟ್ಟಿರುತ್ತಾರೆ. ಹೊಸದಾದ ಪರಿಸ್ಥಿತಿಗೆ ಒಗ್ಗಿಕೊಳ್ಳಲಾರದ ಹುಡುಗಿಯರಿಗೆ ಪ್ರಾರಂಭದಲ್ಲಿ ಕಿರಿ ಕಿರಿಯಾಗಬಹುದು, ಕಷ್ಟವಾಗಬಹುದು.

ಈ ಸನ್ನಿವೇಶದಲ್ಲಿ ತಾಯಿಯ ಪಾತ್ರ ಅತ್ಯಂತ ಮಹತ್ವವಾದದ್ದು. ಆಗ ಮಕ್ಕಳಿಗೆ ತವರುಮನೆಯ ಗೀಳು ಬೆಳೆಯದಂತೆ ತನ್ನ ಗಂಡನ, ಗಂಡನಮನೆಯವರ ಸನ್ನಿವೇಶಕ್ಕೆ ಹೊಂದಿಕೊಂಡು ಹೋಗುವಂತಹ ಮನೋಭಾವ ಬರುವಂತೆ ಸನ್ನಿವೇಶಗಳನ್ನುಂಟುಮಾಡಬೇಕು, ಮಾರ್ಗದರ್ಶನ ಮಾಡಬೇಕು. ಅದು ಬಿಟ್ಟು ಮಗಳಿಗಿಂತ ಹೆಚ್ಚಾಗಿ ತಾಯಿಯೇ ತವರುಮನೆಗೆ ಬರಲು ಪ್ರೋತ್ಸಾಹಿಸಿದರೆ ಹುಡುಗಿಯರು ಹೊಸ ವಾತಾವರಣಕ್ಕೆ ಹೇಗೆ ಹೊಂದಿಕೊಂಡಾರು? ಇದು ಗಂಡ-ಹೆಂಡಿರಲ್ಲಿ ವಿರಸ ತರದೆ ಬಿಡುವುದಿಲ್ಲ. ಅಷ್ಟೇ ಅಲ್ಲ ಒಡಕು ದಾಂಪತ್ಯಕ್ಕೂ ಕಾರಣವಾಗುತ್ತದೆ. ಚೆನ್ನಾಗಿ ಬಾಳುವೆ ಮಾಡಿದ ತಾಯಿ ಮಗಳಿಗೂ ಸಮರಸ ದಾಂಪತ್ಯಕ್ಕೆ ಹಾದಿ ಮಾಡಿಕೊಡುತ್ತಾಳೆ.'

'ನೀವು ಹೇಳುವುದು ಸರಿ. ನನ್ನ ಹೆಂಡತಿಯ ತಾಯಿ, ಸುಖದಾಂಪತ್ಯ ಬಾಳಿಯೇ ಇಲ್ಲವಂತೆ. ಆಕೆ ಎಂ.ಬಿ.ಬಿ.ಎಸ್. ಓದಿದ್ದಳು. ತುಂಬಾ ಚೆನ್ನಾಗಿದ್ದಳು. ನನ್ನ ಹೆಂಡತಿಯ ತಂದೆ ದೊಡ್ಡ ಜಮೀನುದಾರರಂತೆ. ಹಾಗಾಗಿ ಮಗಳು ಸುಖವಾಗಿರುತ್ತಾಳೆಂದು ನಮ್ಮ ಅತ್ತೆಯ ತಂದೆ ಇವರಿಗೆ ಕೊಟ್ಟರು. ನಮ್ಮ ಮಾವನವರಿಗೂ ಸಹ ಬೇಕಾದಷ್ಟು ಐಶ್ವರ್ಯವಿತ್ತಂತೆ. ನಮ್ಮ ಮನೆಗೆ ವಿದ್ಯೆಯ ಆಗಮನವೂ ಆಗಲಿ ಎಂದೂ ಮತ್ತು ಮನೆಯಲ್ಲೊಬ್ಬ ವೈದ್ಯ ಇದ್ದರೆ ಒಳ್ಳೆಯದೆಂದು ನಮ್ಮ ಅತ್ತೆಯನ್ನು ಮಾಡಿಕೊಂಡರಂತೆ. ನಮ್ಮ ಮಾವನವರಿಗೆ ತಮ್ಮ ಹೆಂಡತಿಯನ್ನು ನೌಕರಿಗೆ ಕಳಿಸಲಿಷ್ಟವಿರಲಿಲ್ಲವಂತೆ. ಬೇಕಾದರೆ ಸ್ವಂತ ಪ್ರಾಕ್ಟೀಸ್ ಮಾಡಲಿ ಎಂದವರ ಆಸೆಯಂತೆ. ಆದರೆ ಸರ್ಕಾರಿ ನೌಕರಿ ಇದ್ದುದರಿಂದ ಎಷ್ಟು ದಿನ ಆಗುತ್ತೋ ಅಷ್ಟು ದಿನ ಮಾಡಿದರಾಯ್ತೂಂತ ಆಕೆ ನೌಕರಿ ಬಿಡಲಿಲ್ಲ. ಹೀಗಿರುವಾಗಲೇ ಒಂದು ಗಂಡು ಒಂದು ಹೆಣ್ಣು ಮಕ್ಕಳಾದವು. ಆಗಲಾದರೂ ನೌಕರಿ ಬಿಡು ಎಂದು ಬಹಳ ಒತ್ತಾಯಿಸಿದರಂತೆ ನಮ್ಮ ಮಾವ. ಆದರೆ ಆಕೆ ಒಪ್ಪಲಿಲ್ಲವಂತೆ. ಈ ಕಾರಣದಿಂದ ಗಂಡ-ಹೆಂಡಿರಲ್ಲಿ ಆಗಾಗ ಘರ್ಷಣೆಯಾಗುತ್ತಿತ್ತಂತೆ. ಇದೇ ಸಮಯದಲ್ಲಿ ಆಕೆಗೆ ಬೆಂಗಳೂರಿಗೆ ವರ್ಗವಾಯಿತು. ಈಗಾಲಾದರೂ ಕೆಲಸ ಬಿಡು ಎಂದು ನಮ್ಮ ಮಾವ ಪಟ್ಟು ಹಿಡಿದರಂತೆ. ಆಗ ಆಕೆ 'ನನ್ನ ಕೆರಿಯರ್‌ನ ಅಭಿವೃದ್ಧಿ ನಿಮಗೆ ಸಹಿಸಲಾಗುವುದಿಲ್ಲ. ನೀವು ಹೆಚ್ಚು ಓದಿಲ್ಲದುದರಿಂದ ನಿಮ್ಮ ಬಳಿ ನನ್ನ ಓದಿಗೆ ಬೆಲೆ ಇಲ್ಲ. ಬಂಗಾರದ ಬೊಂಬೆಯಂತೆ ಶೃಂಗಾರ ಮಾಡಿಕೊಂಡು ಮನೆಯಲ್ಲಿ ಕೊಳೆಯುವುದು ನನಗಿಷ್ಟವಿಲ್ಲ' ಎಂದು ಜಗಳಾಡಿ ಮಕ್ಕಳನ್ನು ಕರೆದುಕೊಂಡು ಬೆಂಗಳೂರಿಗೆ ಬಂದು ಒಂಟಿಯಾಗಿ ಜೀವನ ಪ್ರಾರಂಭಿಸಿದರಂತೆ. ಸಿಟ್ಟಿಗೆದ್ದ ಮಾವ ಆಕೆಯನ್ನು ಕೈಬಿಟ್ಟರೂ ಒಮ್ಮೊಮ್ಮೆ ಬೆಂಗಳೂರಿಗೆ ಹೋಗಿ ಆಕೆಯ ಮನವೊಲಿಸಲು ಅನೇಕ ವರ್ಷಗಳವರೆಗೆ ಪ್ರಯತ್ನಿಸಿದರಂತೆ.

ಸಾಧ್ಯವಾಗಲಿಲ್ಲವಾಗಿ ಅತೃಪ್ತರಾದವರು ಕುಡಿತ, ಜೂಜು ಮುಂತಾದವುಗಳಿಗೆ ಬಲಿಬಿದ್ದರು. ಮಕ್ಕಳಿಲ್ಲದ ಮನೆಯ ಸಂಪತ್ತು ಏತಕ್ಕೆ ಎನಿಸಿ ತುಂಬಾ ದುಃಖಪಡುತ್ತಿದ್ದರಂತೆ. ಎಷ್ಟೇ ಕೇಳಿಕೊಂಡರೂ ಆಕೆ ಮಕ್ಕಳನ್ನು ಗಂಡನೊಂದಿಗೆ ಕಳಿಸಲು ಒಪ್ಪದುದರಿಂದ ಕೊನೆಯ ವರ್ಷಗಳಲ್ಲಿ ಹೆಂಡತಿಯ ಬಳಿಗೇ ಬಂದುಬಿಟ್ಟರಂತೆ. ಇಬ್ಬರೂ ದಿನಾ ಜಗಳವಾಡುತ್ತಿದ್ದರಂತೆ. ಇದರಿಂದ ಮಕ್ಕಳಿಗೆ ಬಹಳ ಹಿಂಸೆ, ಅಸಹಾಯಕತೆ ಉಂಟಾಗುತ್ತಿತ್ತು. ಮನೆಯಲ್ಲಿ ಬೇಕಾದುದೆಲ್ಲಾ ಇತ್ತು. ತಾಯಿ ಸಾಕಷ್ಟು ಸಂಪಾದಿಸುತ್ತಿದ್ದರು. ತಂದೆಯೂ ಬೇಕಾದಷ್ಟು ತಂದು ಹಾಕುತ್ತಿದ್ದರು. ಆದರೆ ಸಂತೋಷವಾಗಲೀ ನೆಮ್ಮದಿಯಾಗಲೀ ಯಾರಿಗೂ ಇರುತ್ತಿರಲಿಲ್ಲ. ಮಕ್ಕಳಿಗಂತೂ ಉಭಯ ಸಂಕಟ. ತಾಯಿಯ ಹತ್ತಿರ ಪ್ರೀತಿಯಿಂದಿದ್ದರೆ ತಂದೆ ಅಸಮಾಧಾನಗೊಳ್ಳುತ್ತಿದ್ದರಂತೆ, ತಂದೆ ಹತ್ತಿರ ಪ್ರೀತಿಯಿಂದಿರಲು ತಾಯಿ ಅವಕಾಶವೇ ಕೊಡುತ್ತಿರಲಿಲ್ಲವಂತೆ. ಹೀಗಾಗಿ ತಂದೆ ಮಾನಸಿಕ ವ್ಯಾಕುಲದಿಂದ ದಿನವೆಲ್ಲಾ ಕುಡಿತದ ಅಮಲಿನಲ್ಲಿ ಇರುತ್ತಿದ್ದರಂತೆ. ಕಡೆಗೊಮ್ಮೆ ಹೃದಯಾಘಾತದಿಂದ ತೀರಿಹೋದರಂತೆ.'

'ಛೆ, ಛೆ! ಎಂತಹ ದುರಂತ! ಇದಕ್ಕೆಲ್ಲಾ ಆ ಹೆಣ್ಣುಮಗಳ ಹೊಂದಿಕೊಳ್ಳಲಾರದ ಸ್ವಭಾವವೇ ಕಾರಣ. ಆಕೆ ಅಷ್ಟು ವಿದ್ಯಾವಂತಳಾಗಿ ಏನು ಪ್ರಯೋಜನ? ಅಂತಹ ಸ್ವಭಾವದವಳು ಜಮೀನುದಾರರನ್ನು ಮದುವೆಯಾಗಬಾರದಿತ್ತು. ಅವರ ಐಶ್ವರ್ಯಬೇಕು. ಆ ಮನೆಗೆ ಹೊಂದಿಕೊಂಡು ನಡೆಯುವುದು ಬೇಕಿಲ್ಲ. ಎಂದರೆ ಏನರ್ಥ. ನಮ್ಮ ದೇಶದ ಸಮಾಜದ ರೂಢಿಯ ಪ್ರಕಾರ ಮದುವೆಯಾದ ಮೇಲೆ ಮಹಿಳೆ ತನ್ನ ಗಂಡನ ಮನೆಯವರಲ್ಲಿ ಒಂದಾಗಿ ಬಾಳಬೇಕು. ಅಲ್ಲಿಯ ರೀತಿ ನೀತಿಗಳನ್ನು, ಸಂಪ್ರದಾಯಗಳನ್ನು ಪದ್ಧತಿಗಳನ್ನು ಅಳವಡಿಸಿಕೊಳ್ಳಬೇಕು. ಇಲ್ಲದಿದ್ದಲ್ಲಿ ತಮ್ಮಿಬ್ಬರ ಜೀವನ ಸಮಸ್ಯಾಮಯವಾಗುವುದಲ್ಲದೆ ಮಕ್ಕಳ ಬೆಳವಣಿಗೆಯ ಮೇಲೂ ದುಷ್ಪರಿಣಾಮವಾಗುವುದು ವಿದ್ಯಾವಂತಳಾದ ಆಕೆಗೆ ಅಷ್ಟೂ ತಿಳಿಯಬಾರದೆ? ಹೀಗಾಗಿಯೇ ನಿಮ್ಮ ಹೆಂಡತಿ ಹೊಂದಿಕೊಳ್ಳಲಾರದವಳಾಗಿರಬೇಕು.'

'ಇಲ್ಲ. ಅವಳು ನನ್ನೊಡನೆ ತುಂಬಾ ಪ್ರೀತಿಯಿಂದಿರುತ್ತಿದ್ದಳು. ಅವಳಿಗೆ ತಾಯಿ ಮಾಡಿದ್ದುದು ಸ್ವಲ್ಪವೂ ಇಷ್ಟವಿರಲಿಲ್ಲ. ಅವಳೇ ತನ್ನ ತಂದೆ-ತಾಯಿಯರ ಜೀವನದ ಬಗ್ಗೆ ತಿಳಿಸಿದ್ದುದು. ಆದರೂ ಅವರ ತಾಯಿಯ ಪತ್ರ ಬಂದ ತಕ್ಷಣ ಆಕಡೆಗೆ ಆಕರ್ಷಿತಳಾಗಿಬಿಡುತ್ತಿದ್ದಳು. ತಾಯಿಯ ಪ್ರೀತಿಯ ಒತ್ತಾಯದ ಪತ್ರ ಬಂದ ತಕ್ಷಣ ಹೊರಡಲು ಸಿದ್ಧಳಾಗಿಬಿಡುತ್ತಿದ್ದಳು. ತಾಯಿಯಾದರೋ ಈ ಮಕ್ಕಳಲ್ಲೇ ಜೀವ ಇಟ್ಟವಳು, ಗಂಡನ ಪ್ರೀತಿಯಲ್ಲಿ ಬದುಕಿದವಳಲ್ಲ. ತಾನೇ ತಂದೆಯಾಗಿ-ತಾಯಿಯಾಗಿ ಮಕ್ಕಳನ್ನು ಸಾಕಿ ಆಕೆಗೆ ಮಕ್ಕಳ ಬಗ್ಗೆ ಬಹು ವ್ಯಾಮೋಹ

ಬೆಳೆದಿತ್ತು. ಆದರೆ ವಯಸ್ಸಿಗೆ ಬಂದಮೇಲೆ ಮದುವೆ ಮಾಡದೆ ಇಟ್ಟುಕೊಳ್ಳುವುದು ಕಷ್ಟವಾಯಿತು. ತಾನಾದರೋ ಇಡೀ ದಿನ ಮನೆಯಿಂದ ಹೊರಗೆ, ತಿಳಿವಳಿಕೆ ಇಲ್ಲದ ಮಗಳು ಯಾರಾದಾದರೂ ಮೋಸಕ್ಕೆ ಒಳಗಾದರೆ ಎಂಬ ಭಯ ಬೇರೆ. ಹೀಗಾಗಿ ಮದುವೆ ಮಾಡಿದಳು. ಆದರೆ ಮಗಳಿಂದ ದೂರವಿರಲು ಆಕೆಗೆ ಕಷ್ಟವಾಗುತ್ತಿತ್ತಂತೆ. ನನ್ನ ಹೆಂಡತಿಗೂ ತಾಯಿಯ ಬಗೆಗೆ ಪ್ರೀತಿ ಇರುವುದು ಸಹಜ ನೋಡಿ. ಮೇಲಾಗಿ ವೈವಾಹಿಕ ಜೀವನದ ಪ್ರಾರಂಭದಲ್ಲಿ ಹೊಸ ಜನರು, ಪರಿಸರಕ್ಕೆ ಹೊಂದಿಕೊಳ್ಳುವುದು ಆಕೆಗೆ ಸ್ವಲ್ಪ ಕಷ್ಟವಾಗಿರಬಹುದು. ಅಂತಹ ಮನಸ್ಸಿನ ತಾಕಲಾಟದ ಸಮಯದಲ್ಲಿ ತಾಯಿ ಬೇರೆ, ತನ್ನ ಬಳಿಯಲ್ಲೇ ಮಗಳಿರಬೇಕೆಂಬ ಮಮತೆ ತೋರಿಸಿದಾಗ ಅದು ಆಕೆಗೆ ಸುಲಭವಾಗಿ ಅನುಕೂಲಕರವಾಗಿ ಕಂಡಿತು. ಅವಳು ಅಲ್ಲಿ ತುಂಬಾ ಇಡೀ ದಿನ ಮನೆಯಿಂದ ಹೊರಗೆ. ಆಗ ಮಕ್ಕಳು ತಮ್ಮ ಮನಸ್ಸಿಗೆ ಬಂದಂತೆ ಮಾಡುತ್ತಿದ್ದರು. ಸಿನಿಮಾ, ಸ್ನೇಹಿತರು, ಪಿಕ್‌ನಿಕ್, ಬೇಕಾದಾಗ ಮನೆಯಿಂದ ಹೋಗುವುದು. ಸಾಕಾದಾಗ ಮನೆಗೆ ಬರುವುದು. ಮನೆಯಲ್ಲಿ ಊಟವಿದ್ದರೆ ಊಟ. ಇಲ್ಲದಿದ್ದರೆ ಹೊರಗೆ ಹೋದಲ್ಲಿಯೇ ಊಟ. ಇಂತಹ ರೀತಿಯಲ್ಲಿ ಬದುಕಿದ ಆಕೆಗೆ ನನ್ನೊಡನೆ ಹೊಂದಿಕೊಳ್ಳುವಾಗ ಒಳಗೊಳಗೇ ಕಷ್ಟವೆನಿಸರಬೇಕು. ನಮ್ಮ ತಂದೆ–ತಾಯಿ ನಮ್ಮನ್ನು ಬಹಳ ಶಿಸ್ತಿನಿಂದ ಬೆಳೆಸಿದ್ದಾರೆ. ನಮ್ಮ ಕೌಟುಂಬಿಕ, ಸಾಮಾಜಿಕ ನೀತಿ–ನಿಯಮಗಳಿಗೆ ಬದ್ಧರಾಗಿರುವಂತೆ ಕಲಿಸಿದ್ದಾರೆ. ನಾವು ಎಷ್ಟೇ ವಿದ್ಯಾವಂತರಾಗಿದ್ದರೂ ಮುಂದುವರಿದಿದ್ದರೂ ನಮ್ಮ ನಡೆ ನುಡಿಗಳು ಮೌಲ್ಯಗಳ ಚೌಕಟ್ಟಿನಲ್ಲಿಯೇ ಇರುವಂತೆ ನಮ್ಮ ತಂದೆ ಬಹು ಎಚ್ಚರಿಕೆ ವಹಿಸುತ್ತಿದ್ದರು. ಆದರೆ ಕುಶಲಳಿಗೆ ಹೊತ್ತುಗೊತ್ತಿಗೆ ಸರಿಯಾಗಿ ಬದುಕುವ ಜೀವನಕ್ಕೆ ಹೊಂದಿಕೊಳ್ಳುವುದು, ನನ್ನ ಅನೂಕೂಲಕ್ಕೆ ಸರಿಯಾಗಿ ಜವಾಬ್ದಾರಿ ವಹಿಸಿಕೊಳ್ಳುವುದು ಕಷ್ಟವಾಗಿ ಕಂಡಿರಬೇಕು. ನಿಜವಾಗಿ ಹೇಳಬೇಕೆಂದರೆ ಆಕೆ ನನ್ನನ್ನು ತುಂಬಾ ಪ್ರೀತಿಸುತ್ತಿದ್ದಳು. ಅಚ್ಚೆಯಿಂದ ಬೆಳೆದ ಹುಡುಗಿಯೆಂದು ನಾನು ಫ್ಯಾಕ್ಟರಿಗೆ ಹೋಗುವತನಕ ಆಕೆಗೆ ನೆರವಾಗುತ್ತಿದ್ದೆ. ಅವಳ ತಾಯಿ ಆಕೆಗೆ ತವರು ಮನೆಯ ಆಕರ್ಷಣೆ ತೋರಿಸದಿದ್ದರೆ ಕಾಲಕ್ರಮೇಣ ಅವಳು ನಮ್ಮ ಜೀವನಕ್ಕೆ ಒಗ್ಗಿಕೊಳ್ಳುತ್ತಿದ್ದಳು. ಅವಳು ಮೇಲಿಂದ ಮೇಲೆ ತಾಯಿಯ ಮನೆಗೆ ಹೋಗುವುದು, ಅಲ್ಲಿ ತನಗೆ ಬೇಕಾದಷ್ಟು ದಿನ ಇದ್ದು ಮನಸ್ಸಿಗೆ ಬಂದಾಗ ವಾಪಸು ಬರುವುದು, ನನ್ನ ಬಗ್ಗೆ ಯಾವುದೇ ಕಾಳಜಿ ಇಲ್ಲದಂತೆ ಬದುಕುವುದು ನನಗೇಕೋ ಸರಿಬರಲಿಲ್ಲ. ಹೀಗೆಯೇ ಬಿಟ್ಟರೆ ಇದೇ ಜೀವನ ಕ್ರಮವಾಗಿ ನಮ್ಮ ಸಂಸಾರದ ಹಿಡಿತವೇ ತಪ್ಪಿ ಹೋಗಬಹುದೆನ್ನಿಸಿತು. ಆದುದರಿಂದ ಒಮ್ಮೆ ಆಕೆ ತಾಯಿಯ ಮನೆಗೆ ಹೊರಟಾಗ ಆಕೆಯನ್ನು ತಡೆದೆ. ಇನ್ನಾದರೂ ಹೀಗೆ

ಹೋಗುವುದನ್ನು ಕಡಿಮೆ ಮಾಡಬೇಕೆಂದು ತಿಳಿಸಿದೆ. ಆಕೆ ಯಾವುದಕ್ಕೂ ಕೇಳದಿದ್ದಾಗ ಹೋಗಲೇ ಕೂಡದೆಂದು ಅಡ್ಡಿ ಮಾಡಿದೆ. ಆಗ ಸುಮ್ಮನೆ ಕೂತಳು. ಅವಳಿಗೆ ಬೇಸರವಾಗಿರಬಹುದೆಂದು ಆಕೆಯನ್ನು ರಮಿಸಿ ಸಮಾಧಾನ ಹೇಳಿ ಫ್ಯಾಕ್ಟರಿಗೆ ಹೋದೆ. ಆದರೆ ಸಂಜೆ ಬರುವುದರಲ್ಲಿ ಒಂದು ಪತ್ರ ಬರೆದಿಟ್ಟು ಬೆಂಗಳೂರಿಗೆ ಹೋಗಿಬಿಟ್ಟಿದ್ದಳು. ನನ್ನ ಮನಸ್ಸಿಗೆ ತುಂಬಾ ನೋವಾಯಿತು. ತಂದೆ-ತಾಯಿಗಳ ಮಾತು ಕೇಳದೆ, ಈ ಹುಡುಗಿಯನ್ನು ಮದುವೆಯಾಗಿ ಬಾಳದಾರಿಯ ಪ್ರಾರಂಭದಲ್ಲೇ ಎಡವಿದೆನೇನೋ ಎನ್ನಿಸಿತು. ಆಕೆಯನ್ನು ಹೇಗೆ ನನ್ನ ದಾರಿಗೆ ತಂದುಕೊಳ್ಳಬೇಕು ಎಂದು ಯೋಚಿಸುವುದರಲ್ಲೇ ಎರಡು ದಿನ ಕಳೆದವು. ಮೂರನೆಯ ದಿನ ಸಂಜೆ ಮನೆಗೆ ಬಂದಾಗ ಆಕೆಯ ತಾಯಿಯಿಂದ ಮತ್ತೊಂದು ಪತ್ರ ಬಂದಿತ್ತು. ನನಗೇನಾದರೂ ಸಮಾಧಾನದ ಪತ್ರ ಬರೆದಿದ್ದಾರೇನೋ ಎಂದು ಒಡೆದು ನೋಡಿದೆ. ಆದರೆ ಆಕೆ ನನಗೆ ಚೆನ್ನಾಗಿ ಬೈದು ಬರೆದಿದ್ದರು. 'ನೀನು ನಮ್ಮ ಮನೆಗೆ ಹೋಗಲೇಕೂಡದೆಂದು ಹೇಳಿದೆಯಂತೆ. ಹೊತ್ತು-ಹೆತ್ತು ಇಪ್ಪತ್ತನಾಲ್ಕು ವರ್ಷ ಸಾಕಿದ ತಾಯಿಗಿಂತ ನೀನು ಸಮೀಪದವನು ಹೇಗಾಗುತ್ತೀ ? ನಿನಗಾಗಿ, ಆಕೆ ತಾಯಿ ಮನೆಗೆ ಬರುವುದನ್ನು ಬಿಡಲು ಹೇಗೆ ಸಾಧ್ಯ? ನಿನ್ನ ಇತಿ-ಮಿತಿಗಳನ್ನು ತಿಳಿದು ನಡೆಯಬೇಕು. ನಿನ್ನ ಅಧಿಕಾರ ತೋರಿಸಹೊರಟೆಯಾದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ' ಎಂದು ಬೆದರಿಕೆಯನ್ನೂ ಹಾಕಿದ್ದರು.

'ಅಬ್ಬಾ ! ಎಂತಹ ಮಹಿಳೆಯಾಕೆ. ಪ್ರಾರಂಭದ ಜೀವನದಲ್ಲಿ ಅಳಿಯನ ಮನಸ್ಸು ಕೆಟ್ಟು ಹೋದರೆ ಮುಂದೆ ಮಗಳ ಬಾಳುವೆ ಹೇಗೆ ಎಂಬ ಎಚ್ಚರ ಬೇಡವೆ? ಈಕೆ ಎಂತಹ ತಾಯಿ.'

'ಅಲ್ಲಮ್ಮಾ, ಆಕೆ ತಾನು ಬಾಳುವೆ ಚೆನ್ನಾಗಿ ಮಾಡಿದ್ದರೆ ತಾನೆ ಮಗಳ ಬಾಳ್ವೆ ಚೆನ್ನಾಗಿ ಆಗುವಂತೆ ಮಾಡಲು ಏನು ಮಾಡಬೇಕೆಂಬುದು ಗೊತ್ತಿರುತ್ತಿತ್ತು. ಆಕೆಗೆ ಗಂಡನಿಗೆ ಹೊಂದಿಕೊಂಡು ಬಾಳುವುದೇ ಗೊತ್ತಿಲ್ಲ. ಅಲ್ಲದೆ ಆಕೆ ಅಹಂಕಾರಿ, ಹಠದ ಸ್ವಭಾವ. ಎಲ್ಲವೂ ತಾನು ಬಯಸಿದಂತೆಯೇ ಆಗಬೇಕು. ಅದರ ವಿರುದ್ಧ ಯಾರಾದರೂ ಮಾತನಾಡಿದರೆ ಅವಳಿಗೆ ಸಹಿಸಲಾಗುವುದಿಲ್ಲ. ಅವರನ್ನು ಮಟ್ಟ ಹಾಕಿಬಿಡುವಂತಹ ರೊಚ್ಚು. ಆಕೆಯ ಪರಿಚಿತರೆಲ್ಲರೂ ಹೇಳುತ್ತಾರೆ. ಆಕೆಯ ವಿರುದ್ಧ ಯಾರೂ ಮಾತನಾಡಲೇ ಹೋಗುವುದಿಲ್ಲವಂತೆ. ನನಗೂ ಹಾಗೆಯೇ ಆಯಿತು. ಆಕೆಯ ಪತ್ರ ನೋಡಿ ನನಗೂ ಸಿಟ್ಟು ಬಂತು. 'ನಿಮಗೆ ಮಗಳ ಮೇಲೆ ಅಷ್ಟೊಂದು ಪ್ರೇಮವಿದ್ದರೆ ಅಥವಾ ಮಗಳು ಗಂಡನಿಗಿಂತಲೂ ತಾಯಿಗೇ ನಿಷ್ಠಳಾಗಿ ಪ್ರೀತಿಯಿಂದ ನಡೆಯಬೇಕು ಎಂಬ ಅಭಿಪ್ರಾಯವಿದ್ದರೆ ಮಗಳಿಗೆ ಮದುವೆ ಮಾಡದೆ ಮನೆಯಲ್ಲೇ ಇಟ್ಟುಕೊಂಡಿದ್ದರೆ ಚೆನ್ನಾಗಿತ್ತು. ನಿಮ್ಮ

ಮಗಳಿಗೆ ಮದುವೆ ಮಾಡಿ, ನನ್ನ ಜೀವನದಲ್ಲಿ ಸಮಸೆಯಯನ್ನುಂಟುಮಾಡಿದಿರಿ' ಎಂದು ಬರೆದೆ. ಹೀಗೆ ಬರೆದುದು ಆಕೆಗೆ ಬಹಳ ಅವಮಾನ ಮಾಡಿದಂತೆ ಆಯಿತಂತೆ. ಆಕೆಯ ಸಿಟ್ಟು ಮತ್ತಷ್ಟು ಹೆಚ್ಚಿತು. 'ದೊಡ್ಡ ಜಮೀನುದಾರನಾಗಿದ್ದ ಗಂಡನಿಗೇ ನಾನು ಕೇರ್ ಮಾಡಲಿಲ್ಲ. ಇವ ಯಾವ ಬಚ್ಚ ನನಗೆ! ಇಂತಹ ಮಾತುಗಳನ್ನು ಬರೆಯಲಿಕ್ಕೆ' ಎಂದು ತುಂಬಾ ಕೂಗಾಡಿದರಂತೆ. ನಂತರ ನನಗೆ ಆಕೆಯಿಂದ ಮತ್ತೊಂದು ಪತ್ರ ಬಂತು. ಮದ್ರಾಸಿಗೆ ಮಗಳನ್ನು ಕಳುಹಿಸುವುದೇ ಇಲ್ಲವೆಂದೂ, ಹೆಂಡತಿ ಬೇಕಾಗಿದ್ದರೆ ನೌಕರಿಗೆ ರಾಜೀನಾಮೆ ಕೊಟ್ಟು ಬೆಂಗಳೂರಿಗೆ ಬರಬೇಕಾಗಿಯೂ ಅಲ್ಲಿ ತನ್ನ ಪ್ರಭಾವದಿಂದ ದೊಡ್ಡ ಕೆಲಸ ಕೊಡಿಸುವುದಾಗಿಯೂ ಮಗಳೊಡನೆ ತನ್ನ ಮನೆಯಲ್ಲೇ ಇರಬೇಕಾಗಿಯೂ ತಿಳಿಸಿದ್ದರು. ನನಗೆ ಪತ್ರ ಓದಿ ದಿಕ್ಕು ತೋಚದಂತಾಯಿತು. ಹೆಂಡತಿಯೊಡನೆ ಮದುವೆ ಮಾಡಿಕೊಳ್ಳದೆ ಸಮಸ್ಯೆಗಳೊಡನೆಯೇ ಮದುವೆ ಮಾಡಿಕೊಂಡೆನಲ್ಲಾ ಎನ್ನಿಸಿಬಿಟ್ಟಿತು, ಜೀವನದ ಬಗ್ಗೆ ಬಹು ನಿರಾಸೆ ಎನ್ನಿಸಿತು, ಫ್ಯಾಕ್ಟರಿಗೆ ಹೋಗುವುದೂ ಬೇಡವೆನ್ನಿಸಿತು. ಮರುದಿನ ರಜೆ ಹಾಕಿ ಬೆಂಗಳೂರಿಗೆ ಹೊರಟೆ. ನನ್ನ ಆಗಮನ ಅನಿರೀಕ್ಷಿತವಾಗಿತ್ತು ಅವರಿಗೆ. ರಾತ್ರಿ ಹತ್ತು ಗಂಟೆಗೆ ಹೋದುದರಿಂದ ತಾಯಿ ಮಕ್ಕಳು ಮನೆಯಲ್ಲಿದ್ದರು. ಬಹುಶಃ ಅವರ ಕರಾರಿಗೆ ಒಪ್ಪಿ ಬಂದಿರುವೆನೆಂದು ತಿಳಿದುಕೊಂಡಿರಬೇಕು. ಕುಶಲಾ ಕೃಶಳಾಗಿದ್ದಳು. ಕಣ್ಣು ಗುಳಿ ಬಿದ್ದಿದ್ದವು. ಮುಖದಲ್ಲಿ ತೇಜಸ್ಸಿರಲಿಲ್ಲ. ತಾಯಿ ಬಂದವರೇ, 'ನೀನು ಬಂದುದು ಸಂತೋಷ. ನನ್ನ ಪತ್ರ ತಲುಪಿರಬೇಕಲ್ಲವೆ? ಎಂದರು. 'ತಲುಪಿದೆ. ನನಗೆ ನನ್ನ ಹೆಂಡತಿ ಬೇಕು. ಕರೆದುಕೊಂಡು ಹೋಗಲು ಬಂದಿದ್ದೇನೆ' ಎಂದಾಗ ಆಕೆಗೆ ಸಿಟ್ಟು ನೆತ್ತಿಗೇರಿತು. ಬಾಯಿಗೆ ಬಂದಂತೆ ಕೂಗಾಡಿದರು. 'ಮಗಳನ್ನು ಮನೆಯಿಂದ ಕಳುಹಿಸುವುದು ಮುಗಿದುಹೋಯಿತು, ಬೇಕಾದರೆ ನೀನೇ ನಮ್ಮ ಮನೆಯಲ್ಲಿ ಬಂದಿರು. ಕೆಲಸ ಕೊಡಿಸುತ್ತೇನೆ' ಎಂದರು. ನಾನು ಕುಶಲಳನ್ನೇ 'ಬಾ' ಎಂದು ಕರೆದೆ. 'ಅಮ್ಮನ ತೀರ್ಮಾನವೇ ನನ್ನ ತೀರ್ಮಾನ' ಎಂದುಬಿಟ್ಟಳು. ನನಗೆ ಮುಂದೇನು ಮಾಡಬೇಕೆಂದು ತೋಚದೆ ಸೀದಾ ದಾವಣಗೆರೆಗೆ ನಮ್ಮ ತಂದೆ-ತಾಯಿಯವರ ಬಳಿ ಬಂದುಬಿಟ್ಟೆ. ನನ್ನ ಅಸಾಹಯಕತೆ ನೋಡಿ ನಮ್ಮ ತಆಯಿಗೆ ಇನ್ನಿಲ್ಲದ ದುಃಖ ಬಂದುಬಿಟ್ಟಿತು. ನನಗೆ ಯಾವ ದುಃಖವೂ ಆಗದಂತೆ ಬೆಳೆಸಿದ್ದರು. ಆದರೀಗ ನಾನು ಅನುಭವಿಸುತ್ತಿರುವ ತೊಳಲಾಟ ಕಂಡು ಅವರ ಹೃದಯ ಬಿರಿಯುವಂತಾಯ್ತು. 'ನೋಡಪ್ಪಾ, ನಮಗಿರುವವನು ನೀನೊಬ್ಬನೇ ಮಗ. ನೀನು ನಮ್ಮ ವಂಶದ ಕುಡಿ. ನಿನ್ನ ಜೀವನ ಸಮಸ್ಯೆಯಿಂದ ಕೂಡಿದ್ದರೆ ನಮ್ಮಿಂದ ಸಹಿಸಲಾಗುವುದಿಲ್ಲ. ನಾವೆಲ್ಲ ಹೋಗಿ ಅವರನ್ನು ಕೇಳುತ್ತೇವೆ. ಆಕೆ ಬಂದುನಿನ್ನೊಡನೆ ಸರಿಯಾಗಿ ಸಂಸಾರ ಮಾಡಿದರೆ ಸರಿ, ಇಲ್ಲದಿದ್ದಲ್ಲಿ ನಿನಗೆ

ಮದುವೆಯೇ ಆಗಿಲ್ಲವೆಂದುಕೊಂಡು ನಿಶ್ಚಿಂತೆಯಾಗಿರು. ನಾವು ಮುಂದಿನದನ್ನು ನೋಡಿಕೊಳ್ಳುತ್ತೇವೆ' ಎಂದರು. ಈಗ ಮನಸ್ಸಿಗೆ ಸ್ವಲ್ಪ ಸಮಾಧಾನವೆನ್ನಿಸಿ ಮದ್ರಾಸ್ ಕಡೆ ಹೊರಟಿದ್ದೇನೆ ಎಂದ. ನನ್ನ ಪುರಾಣ ಹೇಳುತ್ತಾ ನಿಮಗೂ ಲೇಟಾಯ್ತು, ನಿಮಗೂ ನಿದ್ದೆ ಬಂದಿರಬೇಕು. ಮಲಗಿಕೊಳ್ಳಿ ಎಂದ.

'ನಿದ್ದೆ ಏನಿಲ್ಲ. ಹಾಗೆ ಮೈಚಾಚಿ ಮಲಗಬೇಕೆನ್ನಿಸಿದೆ ಅಷ್ಟೆ' ಎಂದು ಹೇಳಿ ಮಲಗಲು ಸೀಟ್ ಮೇಲೆ ಬೆಡ್‌ಷೀಟ್ ಹಾಸಿದಳು, ಹಾಗೇ ಮೈ ಚಾಚಿದಳು. ಎಷ್ಟು ಹೊತ್ತಾದರೂ ನಿದ್ದೆ ಬಾರದು. ಕಿವಿ ತುಂಬಾ ಕಿರಣ್ ಹೇಳಿದ ಮಾತುಗಳೇ ಗುಯ್‌ಗುಡುತ್ತಿದ್ದವು. ಈ ಕಡೆ ಹೊರಳಿದಳು ಆ ಕಡೆ ಹೊರಳಿದಳು. ಕಣ್ಣು ಬಿಗಿಯಾಗಿ ಮುಚ್ಚಿಕೊಂಡಳು. ಅವಳು ಬಯಸಿದಷ್ಟೂ ನಿದ್ದೆ ದೂರ ದೂರ ಸರಿಯುತ್ತಿತ್ತು. ಕಿರಣನ ಬಗ್ಗೆ ಮನಸ್ಸಿನಲ್ಲಿ ತುಂಬಾ ಸಹಾನುಭೂತಿ ಮೂಡಿತು. ತನ್ನ ಮಗನಂತೆಯೇ ಮುಗ್ಧತೆಯಿಂದ ಬೆಳೆದ ಹುಡುಗ ಎನ್ನಿಸಿತು. ಹಿಂದೆಲ್ಲಾ ಗಂಡನ ಮೂರ್ಖತನ ಕಿರುಕುಳ ತಾಳಲಾರದೆ ಹುಡುಗಿಯರು ಬಾವಿಗೆ ಹಾರಿಕೊಂಡವರೆಷ್ಟು ಮಂದಿ, ಸೀಮೆಎಣ್ಣೆ ಸುರಿದುಕೊಂಡು ಬೆಂಕಿ ಹಚ್ಚಿಕೊಂಡವರೆಷ್ಟು ಮಂದಿ, ಅಸಹಾಯಕತೆಯಿಂದ ದಿನವಿಡೀ ಕಣ್ಣೀರು ಕರೆಯುತ್ತಾ ನಾಲ್ಕೂ ಗೋಡೆಗಳ ಮಧ್ಯೆ ಕತ್ತೆಯಂತೆ ದುಡಿಯುತ್ತಾ ಮೂಕ ಪಶುವಿನಂತೆ ಬದುಕಿದವರೆಷ್ಟು ಮಂದಿ? ಅಂತಹ ಘಟನೆಗಳಿಗೆ ಇಂದಿಗೂ ಕೊರತೆ ಏನಿಲ್ಲ. ಆದರೆ ಈಗೀಗ ಹೆಂಡತಿಯ ಸ್ವಭಾವದ ಕಾರಣ ಅಥವಾ ಆಕೆಯ ತವರಿನವರ ಕಾರಣ ಗಂಡ, ಗಂಡನ ಮನೆಯವರು ಸಂಕಟಕ್ಕೆ ಗುರಿಯಾಗಿರುವ ಉದಾಹರಣೆಗಳೂ ಅನೇಕ. ಪಾಪ, ಕಿರಣ ಎಷ್ಟು ಒಳ್ಳೆಯ ಹುಡುಗ'? ಅವನಿಗೆ ಮೂರ್ಖತನವಿಲ್ಲದ ಹೆಂಡತಿ ಸಿಕ್ಕಿದ್ದರೆ ಅವನ ಬಾಳೆಷ್ಟು ಚೆನ್ನಾಗಿರುತ್ತಿತ್ತು. ಹೆಂಡತಿಯಾದವಳೂ ಸಹ ಬೇಕಾದಷ್ಟು ಸುಖದಿಂದಿರಬಹುದಿತ್ತು. ಯಾವುದೇ ದುಶ್ಚಟವಿಲ್ಲ, ಯಾವುದೇ ಜವಾಬ್ದಾರಿ ಇಲ್ಲ, ಒಳ್ಳೆಯ ನೌಕರಿ, ಸುಖ ಸಂಸಾರ ಮಾಡಿಕೊಂಡು ಹೋಗಬಹುದಾದಷ್ಟು ಕೈ ತುಂಬಾ ಸಂಬಳ, ಒಳ್ಳೆಯ ತಂದೆ – ತಾಯ್ಗಳು. ಹೆಂಡತಿಯಾದವಳಿಗೆ ಇದಕ್ಕಿಂತ ಇನ್ನೇನು ಬೇಕು? ಇಷ್ಟೆಲ್ಲಾ ಇದ್ದು ತನ್ನ ಜೀವನವನ್ನು ಸಂಕಟಕ್ಕೆ ಗುರಿಮಾಡಿಕೊಂಡು ಗಂಡನ ಜೀವನ ಹಾಳು ಮಾಡಿ ಅವನ ಮನೆಯವರ ಹೊಟ್ಟೆಯನ್ನು ಉರಿಸುವಂತಹ ಸ್ವಭಾವ ಎಷ್ಟು ದುರದೃಷ್ಟ . . .

ಮದುವೆಗಳು ಲಾಟರಿ ಇದ್ದಂತೆ ಎಂದು ಕೆಲವರು ಹೇಳುತ್ತಾರೆ. ಇಂತಹ ಉದಾಹರಣೆಗಳನ್ನು ನೋಡಿದಾಗ ನಿಜ ಎನ್ನಿಸಿಬಿಡುತ್ತದೆ. ಜೀವನದಲ್ಲಿ ಗಂಡ–ಹೆಂಡಿರಿಬ್ಬರೂ ಒಂದು ನಾಣ್ಯದ ಎರಡು ಮುಖಗಳಂತೆ. ಅವರಿಬ್ಬರೂ

ಸಂಸಾರವೆಂಬ ರಥದ ಎರಡು ಗಾಲಿಗಳು. ಎರಡೂ ಹೊಂದಾಣಿಕೆಯಿಂದ ಉರುಳಿದರೆ ರಥ ಸಗಾಗವಾಗಿ ಸಾಗುತ್ತದೆ. ಇಲ್ಲದಿದ್ದರೆ ಎತ್ತು ಏರಿಗೆಳೆಯಿತು. ಕೋಣ ನೀರಿಗೆಳೆಯಿತು ಎನ್ನುವಂತಾಗುತ್ತದೆ. ಸಂಸಾರ ಜೀವನದಲ್ಲಿ ಗಂಡ ಅವಿವೇಕಯಾಗಿದ್ದರೂ ನೆಮ್ಮದಿ ಇರುವುದಿಲ್ಲ. ಹೆಂಡತಿ ಮೂರ್ಖಳಿದ್ದರೂ, ಯಾರ ಮನಸ್ಸಿನಲ್ಲೂ ಶಾಂತಿ ಉಳಿಯುವುದಿಲ್ಲ. ಇಬ್ಬರೂ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ನಡೆಯಬೇಕು. ಹೆಂಡತಿ ಗಂಡನ ಹಿತವನ್ನು ಸಾಧಿಸಬೇಕೆಂಬ ಭಾವನೆ ಹೊಂದಿರಬೇಕು. ಗಂಡ ಹೆಂಡತಿಯ ಮನಸ್ಸಿಗೆ ನೋವುಂಟಾಗದಂತೆ ನೋಡಿಕೊಳ್ಳಬೇಕು. ಬೇರೆ ಬೇರೆ ವಾತಾವರಣದಿಂದ ಬಂದ ಇಬ್ಬರ ವಿಚಾರಗಳು, ಆಸೆ ಆಕಾಂಕ್ಷೆಗಳೂ ಬೇರೆ-ಬೇರೆಯಾಗಿರಬಹುದು. ಆದರೆ ಮದುವೆ ಮಾಡಿಕೊಂಡ ಮೇಲೆ ತನ್ನ ಇಷ್ಟದಂತೆಯೇ ಗಂಡ ನಡೆಯಬೇಕೆಂದು ಹೆಂಡತಿಯಾಗಲೀ, ತನಗೆ ಹೇಗೆ ಬೇಕೋ ಹಾಗೆಯೇ ತನ್ನ ಹಎಂಡತಿ ಇರಬೇಕೆಂದು ಗಂಡನಾಗಲೀ ಪಟ್ಟು ಹಿಡಿದರೆ ಜೀವನ ದುರಂತದ ಹಾದಿ ಹಿಡಿದೀತು. ಒಬ್ಬರ ಇಚ್ಛೆಯಂತೆ ಇನ್ನೊಬ್ಬರು ಅಸಹಾಯಕತೆಯಿಂದ ನಡೆದುಕೊಂಡರೆ ಅದು ಜೀವನವಲ್ಲ. ಇಬ್ಬರಲ್ಲಿಯೂ ಇರುವ ಸಾಮ್ಯಗುಣಗಳೇನು ಎಂದು ನೋಡಿಕೊಳ್ಳಬೇಕು. ವಿರುದ್ಧವಾದ ಇಷ್ಟಗಳೇನು ಎಂದೂ ವಿಚಾರಮಾಡಿಕೊಳ್ಳಬೇಕು. ಇಬ್ಬರೂ ಕುಳಿತು ಯಾವುದು ಸರಿ ಯಾವುದು ಅಲ್ಲ ಎಂದು ಮುಕ್ತಮನಸ್ಸಿನಿಂದ ಮಾತನಾಡಿಕೊಂಡು ಜೀವನವನ್ನು ಸಗ್ಗವಾಗಿಸಿಕೊಳ್ಳಬಹುದು. ಯಾವುದರಲ್ಲೂ 'ಅತೀ' ಹಿತವಲ್ಲ ಇತಿ-ಮಿತಿಗಳನ್ನರಿತು ಈಗಿನ ಮಕ್ಕಳು ಬಾಳಲಾರರೇಕೆ ಎಂದು ಸೀಮಾಗೆ ಕಸಿವಿಸಿ ಎನ್ನಿಸಿತು. ಸರಳ ಮನಸ್ಸಿನ ಕಿರಣನ ಜೀವನ ಸಮಸ್ಯಾರಹಿತವಾಗಲಿ ಎಂದು ಆಶಿಸಿದಳು. ಕುಶಲೆಯೂ ಸಹ ವಿದ್ಯಾವಂತಳು. ತನ್ನ ತಾಯಿಗೆ ಬುದ್ಧಿ ಹೇಳಬಹುದು. ತನ್ನ ಭವಿಷ್ಯದ ಬಗ್ಗೆ ಅವಳು ಚಿಂತಿಸಿ ತನ್ನ ಜೀವನವನ್ನು ದುರಂತಮಾಡಿಕೊಳ್ಳದೆ ಕಿರಣನೊಡನೆ ಬಾಳ್ವೆ ಮಾಡಿದರೆಷ್ಟು ಚೆನ್ನ ಎಂದು ಯೋಚಿಸುತ್ತಿದ್ದಂತೆಯೇ ನಿದ್ರಾದೇವಿ ಯಾವಾಗಲೋ ಅವಳನ್ನಾವರಿಸಿದ್ದಳು.

ರೈಲು ನಡುರಾತ್ರಿಯಲ್ಲಿ ಮದ್ರಾಸಿನತ್ತ ಮುನ್ನಡೆದಿತ್ತು......

■

## ೧೧. ಆತಂಕ

ಟೆಲಿಗ್ರಾಂ ನೋಡುತ್ತಿದ್ದಂತೆಯೇ ಪಲ್ಲವಿಯ ಮುಖ ಅರಳಿದ ಹೂವಾಯಿತು. ಎಂಟು ತಿಂಗಳ ನಂತರ ಶಾಶ್ವತ್ ತಮ್ಮೂರಿಗೆ ಬರುವ ಸುದ್ದಿಯನ್ನು ಹೊತ್ತು ತಂದಿತ್ತು ಆ ಟೆಲಿಗ್ರಾಂ. ಅದನ್ನು ಓದುತ್ತಿದ್ದಂತೆಯೇ ಎಂಟು ತಿಂಗಳ ಅಗಲಿಕೆಯ ನೋವು ಒಮ್ಮೆಲೇ ಹೆಪ್ಪುಗಟ್ಟಿ ದುಃಖಾಶ್ರುಗಳು ಕಣ್ಣಲ್ಲಿ ತುಂಬಿದಂತೆಯೇ, ಅವನಿನ್ನೇನು ಬಂದೇ ಬಿಡುತ್ತಾನೆ ಎಂಬ ಹಿಗ್ಗು ತುಂಬಿ ಆನಂದ ಬಾಷ್ಪಗಳಾಗಿ ಕಣ್ಣಿನಿಂದ ಉದುರತೊಡಗಿದವು. ಟೆಲಿಗ್ರಾಂನ್ನು ಕೈಲಿ ಹಿಡಿದುಕೊಂಡು ಮುಖದಲ್ಲಿ ಆನಂದವನ್ನೂ, ಕಣ್ಣಲ್ಲಿ ನೀರನ್ನೂ ತುಂಬಿಕೊಂಡಿದ್ದ ಮಗಳನ್ನು, ಅಲ್ಲಿಗೆ ಬಂದ ಸುನಂದಮ್ಮ ನೋಡಿ ಗಲಿಬಿಲಿಗೊಂಡರು.

'ಏನು ಪಲ್ಲವಿ ಯಾರ ಟೆಲಿಗ್ರಾಂ? ಎನ್ಸಮಾಚಾರ? ನಗುತ್ತಲೂ ಇದ್ದಿ ಅಳುತ್ತಲೂ ಇದ್ದಿ? ಏನು ವಿಚಾರ' ಎಂದರು.

'ಅಮ್ಮಾ ನಾಡಿದ್ದು ರಾತ್ರಿ ಅವರು ಬೆಂಗಳೂರು ಮಾರ್ಗವಾಗಿ ಬರುತ್ತಾರಂತಮ್ಮ. ನಾವು ಬೆಂಗಳೂರಿಗೇ ಹೋಗೋಣ. ನಾವು ಅಲ್ಲೇ ಭೇಟಿಯಾಗಿ ಕರೆದಕೊಂಡು ಬರೋಣ.'

'ಹೌದಾ ಶಾಶ್ವತ ಬರುತ್ತಿದ್ದಾರಾ? ಅದಕ್ಕೇನು ಕಾರಿನಲ್ಲಿ ಬೆಂಗಳೂರಿಗೆ ಹೋಗಿ ಕರೆದುಕೊಂಡು ಬರೋಣ. ಮಗಳನ್ನು ನೋಡಿ ಅವರಿಗೆಷ್ಟು ಆನಂದವಾಯಿತು. ನಿನಗೆ ಅವರನ್ನು ನೋಡಲು ಇರುವ ಕಾತುರಕ್ಕಿಂತ ಅವರ ಕಾತುರ ಇನ್ನೂ ಹೆಚ್ಚಿರುತ್ತದೆ. ನಿನ್ನನ್ನು ನೋಡಬೇಕೆಂದ ಕಾತುರದ ಜೊತೆಗೆ ಇನ್ನೂ ನೋಡದೇ ಇರುವ ಮಗಳನ್ನು ನೋಡುವ ಕುತೂಹಲವೂ ಸೇರುತ್ತದೆ.'

'ಅಮ್ಮಾ ಒಂದು ಮಜಾ ಮಾಡೋಣ. ಅವರು ದಿವ್ಯಳನ್ನು ಇನ್ನೂ ನೋಡಿಯೇ ಇಲ್ಲ. ನನ್ನ ಗೆಳತಿ ಸ್ನೇಹಾಳ ಮಗಳೂ ಇದೇ ವಯಸ್ಸಿನವಳು. ಅವರು ಬಂದ ತಕ್ಷಣ ಅವಳನ್ನು ತೋರಿಸಿದ್ರೆ ಏನ್ಮಾಡ್ತಾರೆ ನೋಡೋಣ.'

'ಏನ್ಮಾಡ್ತಾರೆ ಪಾಪ, ಅವ್ರನ್ನೇ ಮಗಳೂಂತ ತಿಳ್ಕೊಂಡು ಖುಷಿಪಡ್ತಾರೆ, ಮುದ್ದಾಡ್ತಾರೆ, ಇನ್ನೇನ್ಮಾಡ್ತಾರೆ?'

'ಆಮೇಲೆ ಒಂದೈದು ನಿಮಿಷ ಬಿಟ್ಟು ದಿವ್ಯಾಳನ್ನು ತೋರ್ಸೋಣ. ಆಗ ಎಷ್ಟು ಪೆಚ್ಚಾಗ್ತಾರೋ.'

'ಬಿಡೇ ಪಾಪ, ಮಗಳನ್ನು ನೋಡ್ಬೇಕೂಂತ ಅಷ್ಟು ಆಸೆಯಿಂದ ಬಂದೋರ್ಗೆ ಏನೇನೋ ಮಂಗಾಟ ಮಾಡಿ ಪೆಚ್ಚು ಮಾಡಬೇಡ.'

'ಇಲ್ಲ ಸುಮ್ನಿರಮ್ಮ ಮಜಾ ಇರುತ್ತೆ. ರೈಲು ಹೇಗೂ ಎಂಟು ಗಂಟೆಗೆ ಬರುತ್ತೆ. ಚಿಕ್ಕಮ್ಮನ ಹತ್ತಿರ ದಿವ್ಯಳನ್ನು ಬಿಟ್ಟು ಸ್ನೇಹಳ ಮಗಳನ್ನೇ ಸ್ಟೇಷನ್‌ಗೆ ಕರೆದುಕೊಂಡು ಹೋಗೋಣ. ಸ್ನೇಹ ಹೇಗಿದ್ರೂ ಬೆಂಗ್ಳೂರಲ್ಲಿ ಇನ್ನೂ ಅಮ್ಮನ ಮನೆಯಲ್ಲೇ ಇದ್ದಾಳೆ. ಅತ್ತೇ ಮನೆಗೆ ಮುಂದಿನ ತಿಂಗಳು ಹೋಗುತ್ತಾಳಂತೆ.'

'ಏನೇನು ಮಾಡ್ತಿಯೋ ಮಾಡಮ್ಮ' ಎಂದು ಹೇಳಿ ಸುನಂದಮ್ಮ ಯಜಮಾನರಿಗೆ ಅಳಿಯ ಬರುವ ಸುದ್ದಿ ತಿಳಿಸಲು ಹೋದರು.

ಶಾಶ್ವತ ಈಗ ಎಂಟು ತಿಂಗಳ ಹಿಂದೆ, ಪಲ್ಲವಿ ಇನ್ನೂ ಐದು ತಿಂಗಳ ಗರ್ಭಿಣಿ ಎದ್ದಾಗಲೇ ಟ್ರೈನಿಂಗ್‌ಗಾಗಿ ತನ್ನ ಆಫೀಸಿನ ಕೆಲಸದ ಮೇಲೆ ಜಪಾನಿಗೆ ಹೋಗಿದ್ದ. ಈಗೆರಡು ತಿಂಗಳ ಹಿಂದೆಯೇ ಜಪಾನಿನಿಂದ ದೆಹಲಿಯ ತನ್ನ ಆಫೀಸಿಗೆ ಹಿಂತಿರುಗಿದ್ದರೂ ಗಂಡ-ಹೆಂಡಿರ ಭೇಟ್ಟಿಯಾಗಿರಲಿಲ್ಲ. ಊರಿಗೆ ಬರಲು ಶಾಶ್ವತಗೆ ಕೂಡಲೇ ರಜೆ ಸಿಕ್ಕಿರಲಿಲ್ಲ. ದೆಹಲಿಯಲ್ಲಿ ಛಳಿ ಬಹಳವಾದುದರಿಂದ ಎಳೆಯ ಮಗುವನ್ನು ಕರೆದುಕೊಂಡು ಬರುವುದು ಬೇಡವೆಂದು ಫೋನ್ ಮಾಡಿದ್ದ. ಹಾಗಾಗಿ ಭಾರತಕ್ಕೆ ಶಾಶ್ವತ ಬಂದಿದ್ದರೂ ತನ್ನ ಮಗಳನ್ನು ನೋಡಲಾಗಿರಲಿಲ್ಲ.

ಶಾಶ್ವತನಿಗೆ ಚಿಕ್ಕವಯಸ್ಸಿನಿಂದಲೂ ಮಕ್ಕಳೆಂದರೆ ಪಂಚಪ್ರಾಣ. ಈಗ ತನ್ನದೇ ಆದ ಮಗು ಹುಟ್ಟಿತ್ತು. ಅದನ್ನು ನೋಡಬೇಕೆಂಬ ಕಾತುರ ಮನಸ್ಸನ್ನೆಲ್ಲಾ ಆವರಿಸಿತ್ತು. ಆದರೆ ಆಫೀಸಿನಲ್ಲಿ ಬಿಡುವಿಲ್ಲದ ಕೆಲಸ. ರಜೆ ಇದ್ದರೂ ರಜೆ ತೆಗೆದುಕೊಳ್ಳಲಾರದ ಪರಿಸ್ಥಿತಿ. ದಿನಕ್ಕೆ ಎಂಟು ಗಂಟೆ ದುಡಿಯುವ ಬದಲು ಹನ್ನೆರಡು ಹದಿನಾಲ್ಕು ಗಂಟೆಗಳು ದುಡಿಯುತ್ತಿದ್ದ. ಕೆಲಸ ಬೇಗ ಮುಗಿಸಿ ಊರಿಗೆ ಹೋಗಬೇಕೆಂಬ ಆತುರ. ಇಷ್ಟು ದುಡಿದರೂ ರಜೆ ದೊರೆಯಲು ಎರಡು ತಿಂಗಳುಗಳೇ ಬೇಕಾದವು. ಆ ದಿನ ಬೆಳಿಗ್ಗೆ ಆಫೀಸಿಗೆ ಹೋದಾಗ ಬಾಸ್ ಹೇಳಿದ್ದರು. "ಶಾಶ್ವತ್, ಪಾಪ ನಿಮಗೆ ಊರಿಗೆ ಹೋಗಲು ಬಿಡುವೇ ಆಗಿಲ್ಲ ಅಲ್ಲವೇ? ಶುಕ್ರವಾರ ಬೇಕಾದರೆ ನೀವು ಊರಿಗೆ ಹೋಗಿ ಉಳಿದ ಕೆಲಸವನ್ನು ನಾನು ನೋಡಿಕೊಳ್ಳುತ್ತೇನೆ' ಎಂದು ಹೇಳಿ ರಜೆ ತೆಗೆದುಕೊಳ್ಳಲು ಗ್ರೀನ್ ಸಿಗ್ನಲ್ ಕೊಟ್ಟರು. ಹೀಗೆ ಅವರ ಪರವಾನಿಗೆ ದೊರತುದೇ ತಡ,

ಶುಕ್ರವಾರದ ಪ್ಲೇನ್‌ನಲ್ಲಿ ಸೀಟು ಬುಕ್ ಮಾಡಬೇಕೆಂದು ಏರ್ ಇಂಡಿಯಾ ಆಫೀಸಿಗೆ ಫೋನ್ ಮಾಡಿದ. ಆದರೆ ಶುಕ್ರವಾರ, ಶನಿವಾರದವರೆಗೆ ಸೀಟ್‌ಗಳೆಲ್ಲಾ ಬುಕ್ಕಾಗಿದ್ದವು. ನಂತರ ರೈಲ್ವೆನಲ್ಲಾದರೂ ಹೋದರಾಯ್ತೆಂದು ಫೋನ್ ಮಾಡಿದಾಗ ಎ.ಸಿ. ಮತ್ತು ಫಸ್ಟ್ ಕ್ಲಾಸಿನ ಸೀಟ್‌ಗಳೆಲ್ಲಾ ಮುಗಿದಿದ್ದವು. ಸ್ಲೀಪಿಂಗ್‌ನ ಮೂರು ಬರ್ತ್‌ಗಳು ಮಾತ್ರ ಖಾಲಿ ಇರುವುದಾಗಿ ತಿಳಿಸಿದರು. ಅದಾದರೂ ಸಿಕ್ಕಿತಲ್ಲಾ ಎಂದು ಸಂತೋಷವಾಯ್ತು. ಅವೂ ಕೂಡ ಮುಗಿದು ಹೋದರೆ ಎಂಬ ಆತಂಕದಿಂದ ಕೂಡಲೇ ಬಾಸ್ ಪರವಾನಗಿ ತೆಗೆದುಕೊಂಡು ಸ್ಕೂಟರನ್ನು ಸ್ಟೇಷನ್ ಕಡೆ ದೌಡಾಯಿಸಿದ. ಸ್ಟೇಷನ್ ಮುಟ್ಟುವುದರಲ್ಲಿ ಆ ಸೀಟುಗಳೂ ಭರ್ತಿಯಾದರೆ ಎಂಬ ಆತಂಕದಲ್ಲಿ ಸ್ಕೂಟರಿನ ಆಕ್ಸಿಲೇಟರನ್ನು ಒತ್ತಿದ. ಸೇಶನ್ ಸೇರಿ ವಿಚಾರಿಸಿದಾಗ ಪುಣ್ಯಕ್ಕೆ ರಿಜರ್ವೇಷನ್ ದೊರೆಯಿತು. ತಕ್ಷಣ ಪಲ್ಲವಿಗೆ ತಾನು ಹೊರಡುವ ಬಗ್ಗೆ ಟೆಲಿಗ್ರಾಂ ಕೊಟ್ಟು ಬಂದ. ಊರಿಗೆ ಹೊರಡುವ ಸಂತಸದಲ್ಲಿ ಅವನಿಗೆ ಸ್ವರ್ಗ ಮೂರೇ ಗೇಣು ಎನ್ನಿಸಿತು. ಎಲ್ಲಾ ಕೆಲಸವನ್ನು ಸರಸರನೆ ಮುಗಿಸಿ ಮನೆಯ ಕಡೆ ಹೊರಟ. ಮನೆಗೆ ಕೀಲಿ ಹಾಕಿಕೊಂಡು ಹೋಗುವುದು ಈ ದಿನಗಳಲ್ಲಿ ಸುರಕ್ಷಿತವಲ್ಲವೆಂದು ಬಗೆದು ಸ್ಕೂಟರನ್ನು ತನ್ನ ಗೆಳೆಯ ರಮೇಶನ ಮನೆಯ ಕಡೆಗೆ ತಿರುಗಿಸಿದ. ತಾನು ಬರುವವರೆಗೂ ತಮ್ಮ ಮನೆಯಲ್ಲೇ ರಾತ್ರಿ ಮಲಗಬೇಕೆಂದು ಹೇಳಿ ಮನೆಗೆ ಹಿಂತಿರುಗಿದ. ಮನೆಯಲ್ಲಿಯೂ ಮಾಡಬೇಕಾದ ವ್ಯವಸ್ಥೆಗಳನ್ನೂ ಮುಗಿಸಿದ. ಶುಕ್ರವಾರ ಬಂದೇ ಬಿಟ್ಟಿತು. ಗುರುವಾರವೇ ಪೇಟೆಯಿಂದ ತರಬೇಕಾದುದನ್ನೆಲ್ಲಾ ತಂದು ಪ್ಯಾಕಿಂಗ್ ಮುಗಿಸಿದ್ದ. ಊರಿಗೆ ಹೋದಾಗ ರಜೆ ಇರಲೆಂದು ಶುಕ್ರವಾರದ ರಾತ್ರಿ ಹನ್ನೊಂದಕ್ಕೆ ರೈಲಿದ್ದುದರಿಂದ ಆ ದಿನವೂ ಆಫೀಸಿಗೆ ಹೋದ. ಆಫೀಸಿನಿಂದ ಬರುವಾಗ ರಾತ್ರಿ ಊಟವನ್ನು ಮುಗಿಸಿಕೊಂಡು ಮನೆಗೆ ಬಂದಾಗ ಗಂಟೆ ಎಂಟಾಗಿತ್ತು. ಸಾಮಾನನ್ನೆಲ್ಲಾ ಹೊಂದಿಸಿ ರೆಡಿಯಾಗುವ ಹೊತ್ತಿಗೆ ರಮೇಶನೂ ಬಂದ. ಅವನಿಗೆ ಹೇಳಬೇಕಾದುದುನ್ನೆಲ್ಲಾ ಹೇಳಿ ಒಂದು ಆಟೋ ತೆಗೆದುಕೊಂಡು ಬಂದು ಹೊರಡುವ ಹೊತ್ತಿಗೆ ಗಂಟೆ ಹತ್ತಾಗಿತ್ತು. ಟ್ರಾಫಿಕ್ಕನ್ನೆಲ್ಲಾ ದಾಟಿಕೊಂಡು ಸ್ಟೇಶನ್ನಿಗೆ ಹತ್ತುಮುಕ್ಕಾಲರ ಸುಮಾರಿಗೆ ಹೋದ. ಗಡಿಬಿಡಿಯಿಂದ ಸಾಮಾನ್ನೆಲ್ಲಾ ತೆಗೆದುಕೊಂಡು ಸ್ಟೇಶನ್ ಒಳಗೆ ಹೋಗುತ್ತಿದ್ದಂತೆಯೇ ರಾತ್ರಿ ಹನ್ನೊಂದು ಗಂಟೆಗೆ ಹೊರಡಬೇಕಾಗಿದ್ದ ಟ್ರೇನು ಕಾರಣಾಂತರದಿಂದ ಮರುದಿನ ಬೆಳಿಗ್ಗೆ ಆರು ಗಂಟೆಗೆ ಹೊರಡುವುದಾಗಿ ತಿಳಿದುಬಂದಿತು. ಈ ಸಮಾಚಾರವನ್ನು ಸಂಜೆಯೇ ಟಿ.ವಿ.ಯಲ್ಲಿ ಪ್ರಸಾರ ಮಾಡಿದ್ದರಂತೆ. ಆದರೆ ಇವನು ತನ್ನ ಕೆಲಸದಲ್ಲಿ, ಹೊರಡುವ ಗಡಿಬಿಡಿಯಲ್ಲಿ ಟಿ.ವಿ.ಯನ್ನೇ ಹಾಕಿರಲಿಲ್ಲ. ಹಾಗಾಗಿ ವೇಳೆಯಲ್ಲಾದ ಬದಲಾವಣೆ ಅವನಿಗೆ ಗೊತ್ತಾಗಲೇ ಇಲ್ಲ. ನಿರಾಶನಾಗಿ ಮನೆಗೆ ಹಿದಿರುಗಿದ. ಪುನಃ ನಾಲ್ಕೂವರೆಗೆ

ಎದ್ದು ಐದು ಗಂಟೆಗೆ ಮನೆಯಿಂದ ಹೊರಡಬೇಕಲ್ಲ ಎನ್ನುವ ಬೇಸರ ಒಂದು ಕಡೆಯಾದರೆ, ಊರು ಸೇರುವ ಸಮಯದ ಅರ್ಧ ದಿನ ಮುಂದಕ್ಕೆ ಹೋಗಿ ಅರ್ಧ ದಿನದ ರಜೆ ವ್ಯರ್ಥವಾಯಿತಲ್ಲಾ ಎಂಬ ಚಿಂತೆ ಮತ್ತೊಂದು ಕಡೆ. ಎಲ್ಲಕ್ಕಿಂತ ಹೆಚ್ಚಾಗಿ ಮುದ್ದು ಮಗಳನ್ನು ನೋಡುವ ಸಮಯ ಇನ್ನೂ ಮುಂದೆ ಹೋಯಿತಲ್ಲ ಎಂಬ ನಿರಾಸೆ ಅವನನ್ನು ಮುತ್ತಿ ತುಂಬಾ ನಿರುತ್ಸಾಹಿಯಾಗಿ ಮಾಡಿದವು. ಹೊರಡುವಾಗ ಇದ್ದ ಉತ್ಸಾಹಕ್ಕೆ ನೀರೆರಚಿದಂತಾಯ್ತು. ಹಾಸಿಗೆಯಲ್ಲಿ ಉರುಳಿದ. ಆದರೆ ನಿದ್ದೆ ಹತ್ತಿ ಏಳುವುದು ಲೇಟಾಗಿ ರೈಲು ತಪ್ಪಿದರೆ ಎಂಬ ಆತಂಕದಲ್ಲಿ ನಿದ್ದೆಯೇ ಹತ್ತಲಿಲ್ಲ. ಈ ರೈಲು ತಪ್ಪಿದರೆ ರಿಜರ್ವೇಷನ್ ದೊರೆಯುವುದು ಮತ್ತೆಷ್ಟು ದಿನಕ್ಕೋ ಎಂಬ ಆತಂಕದಲ್ಲಿ ಎಷ್ಟು ಪ್ರಯತ್ನಿಸಿದರೂ ನಿದ್ದೆ ಹತ್ತಿರ ಸುಳಿಯಲಿಲ್ಲ. ಮನಸ್ಸು ಮಡದಿಯ ಕಡೆಗೆ ಓಡಿತು. 'ರೈಲು ತಡವಾದುದು ತಿಳಿದು ಪಲ್ಲವಿಗೂ ನಿರಾಸೆಯಾಗಿರಬೇಕು. ಮುನ್ನವೇ ವಿಷಯ ತಿಳಿಯದಿದ್ದರೆ ಅವರುಗಳೂ ರಐಲು ಬಳಿ ಬಂದು ನಿರಾಸೆಗೊಂಡು ಹೋಗಿರುತ್ತಾರೆ. ಸ್ವಂತ ಕಾರಿರುವುದರಿಂದ ನನ್ನಷ್ಟು ತೊಂದರೆಯಾಗುವುದಿಲ್ಲ' ಎಂದು ಏನೇನೋ ಯೋಚಿಸುತ್ತಿದ್ದಂತೆಯೇ ನಾಲ್ಕೂವರೆಯಾಯಿತು. ಗಡಬಡಿಸಿ ಎದ್ದು ರಮೇಶನ ಸಹಾಯದಿಂದ ಹೊರಡುವ ಸಿದ್ಧತೆ ಮಾಡಿಕೊಂಡ. ಹಿಂದಿನ ರಾತ್ರಿ ಬಂದ ರಿಕ್ಷಾದವನಿಗೆ ಬರಲು ತಿಳಿಸಿದ್ದಾನಾಗಿ ಅವನು ಐದು ಗಂಟೆಗೆ ಸರಿಯಾಗಿ ಬಂದ. ತಕ್ಷಣವೇ ಹೊರಟು ವೇಳೆಗೆ ಸರಿಯಾಗಿ ಸ್ಟೇಷನ್ ತಲುಪಿದ. ಪುಣ್ಯಕ್ಕೆ ರೈಲಿನ ವೇಳೆಯಲ್ಲಿ ಮತ್ತೆ ಯಾವ ಬದಲಾವಣೆಯೂ ಆಗಿರದೇ ಸಮಯಕ್ಕೆ ಸರಿಯಾಗಿ ರೈಲು ಹೊರಟಿತು. 'ಅಂತೂ ಊರಿಗೆ ಈಗಲಾದರೂ ಹೊರಡಲು ಸಾಧ್ಯವಾಯಿತಲ್ಲಾ' ಎಂದು ಶಾಶ್ವತ ಸಮಾಧಾನದ ಉಸಿರುಬಿಟ್ಟ.

ಪಲ್ಲವಿ, ಮಗಳು ದಿವ್ಯ ಹಾಗೂ ತಂದೆ-ತಾಯ್ಗಳೊಡನೆ ಶುಕ್ರವಾರವೇ ಬೆಂಗಳೂರಿನಲ್ಲಿದ್ದ ಚಿಕ್ಕಪ್ಪನ ಮನೆಗೆ ಹೋದಳು. ಶಾಶ್ವತ ಶನಿವಾರರಾತ್ರಿ ಬರುವುದಿದ್ದರೂ ಸ್ನೇಹಳ ಮನೆಗೆ ಹೋಗಿ ತನ್ನ ಪ್ಲಾನನ್ನು ಕರಗತ ಮಾಡಬೇಕಿತ್ತು. ಎಂಟು ತಿಂಗಳ ನಂತರ ಬರುವ ಶಾಶ್ವತನಿಗೆ ಬಗೆಬಗೆಯ ತಿಂಡಿ-ತನಿಸುಗಳನ್ನು ಅವನು ಬರುವುದರಲ್ಲಿ ರೆಡಿಮಾಡಬೇಕೆಂದು ಅಂದುಕೊಂಡಿದ್ದಳು. ಶಾಶ್ವತನಿಗೆ ಬೇರೆ ಯಾರೂ ಮಾಡಿದ ಅಡಿಗೆಗಿಂತ ಪಲ್ಲವಿಯ ಕೈನ ಅಡಿಗೆಯೆಂದರೆ ಬಹಳ ಇಷ್ಟ. ಶುಕ್ರವಾರ ಸಂಜೆ ಗೆಳತಿಯರ ಮನೆಗೆ ಹೋಗಿಬಂದಳು. ಶನಿವಾರ ಮಧ್ಯಾಹ್ನದಿಂದಲೇ ಬಗೆಬಗೆಯ ಅಡಿಗೆ ತಯಾರಿಸಿದಳು. ಸಂಜೆ ಆರು ಗಂಟೆಯ ಸುಮಾರಿಗೆ ಅವರ ತಂದೆ ಟ್ರೈನ್ ಟೈಂ ವಿಚಾರಿಸಲು ಸ್ಟೇಷನ್‌ಗೆ ಫೋನ್ ಮಾಡಿದಾಗಲೇ ಟ್ರೈನ್ ದೆಹಲಿಯಿಂದ ಅರ್ಧ ದಿನ ತಡವಾಗಿ ಹೊರಟ ಅಂಶ

ತಿಳಿದದ್ದು. ಅವರುಗಳೂ ಸಹ ಊರಿನಿಂದ ಪ್ರಯಾಣ, ಬೆಂಗಳೂರಿನ ಓಡಾಟಗಳಲ್ಲಿ ಟಿ.ವಿ.ಯನ್ನು ನೋಡುವುದಿರಲಿ, ಪೇಪರ್ ಸಹ ಓದಿರಲಿಲ್ಲ. ಬೇರೆಯವರೂ ಸಹ ಈ ಬಗ್ಗೆ ಲಕ್ಷ್ಯ ಕೊಟ್ಟಿರಲಿಲ್ಲವಾಗಿ ಈ ವಿಷಯ ಯಾರೂ ಗಮನಿಸಿರಲಿಲ್ಲ. ಟ್ರೈನ್ ರಾತ್ರಿ ಎರಡಕ್ಕೆ ಬರುತ್ತದೆ ಎಂದು ತಿಳಿಯಿತು. ಹಾಗಾಗಿ ಸ್ನೇಹಳ ಮಗಳನ್ನು ಸ್ಟೇಷನ್‌ಗೆ ಕರೆದುಕೊಂಡು ಹೋಗಬೇಕೆಂದು ಹಾಕಿದ್ದ ಪಲ್ಲವಿಯ ಪ್ಲಾನು ಬುಡಮೇಲಾಯ್ತು. ಯಾವ ಪ್ಲಾನೂ ಬೇಡ. ಎರಡು ಗಂಟೆಗಳಾದರೂ ಟ್ರೈನ್ ಬಂದು ಶಾಶ್ವತನನ್ನು ನೋಡಿದರೆ ಸಾಕೆನ್ನಿಸಿತ್ತು. ರಾತ್ರಿ ಒಂದೂವರೆ ಗಂಟೆಗೇ ತಂದೆ–ಮಗಳಿಬ್ಬರೂ ದಿವ್ಯಳನ್ನು ಕರೆದುಕೊಂಡು ಸ್ಟೇಷನ್‌ಗೆ ಕಾರಿನಲ್ಲಿ ಹೊರಟರು. ಸುನಂದಮ್ಮನೂ ಹೊರಟಾಗ 'ಪಲ್ಲವಿ' ಯಾಕಮ್ಮಾ ಸುಮ್ನೇ ನಿದ್ದೆಗೆಟ್ಟು ಬರುತ್ತೀ, ಮಧ್ಯೆ ಡಿಸ್ಟರ್ಬ್ ಆದರೆ ನಿನಗೆ ನಿದ್ದೆ ಹತ್ತೋದು ಕಷ್ಟ. ಇನ್ನೊಂದು ಗಂಟೆಲಿ ಇಲ್ಲಿಗೇ ಬಂದುಬಿಡ್ತೀವಲ್ಲ ಎಂದು ಹೇಳಿ ತಂದೆ–ಮಗಳಿಬ್ಬರೂ ದಿವ್ಯಳೊಂದಿಗೆ ಹೊರಟರು. ಸ್ಟೇಷನ್ ತಲುಪುತ್ತಲೇ ಸುದ್ದಿಯೊಂದು ಕಾದಿತ್ತು. ಗುಂತಕಲ್ ಬಳಿ ಯಾವ್ದೋ ಗೂಡ್ಸ್ ಗಾಡಿಯೊಂದು ಹಳಿತಪ್ಪಿದುದರಿಂದ ಈ ರೈಲು ಇನ್ನೂ ಮೂರು ತಾಸು ತಡವಾಗಿ ಐದು ಗಂಟೆ ಸುಮಾರಿಗೆ ಬರುತ್ತದೆ ಎಂದು ತಿಳಿದಾಗ ತಂದೆ–ಮಗಳಿಬ್ಬರ ಸಹನೆಯ ಕಟ್ಟೆಯೊಡೆಯಿತು. ಆದರೆ ಏನೂ ಮಾಡುವಂತಿಲ್ಲ. ಅಸಾಹಯಕತೆಯಿಂದ ಪರಿಸ್ಥಿತಿಗೆ ಹೊಂದಿಕೊಳ್ಳಲೇಬೇಕಿತ್ತು. ಇನ್ನೂ ಮೂರು ಗಂಟೆ ಸ್ಟೇಷನ್‌ನಲ್ಲಿ ಕಾಯುವುದಕ್ಕಿಂತ ಮನೆಗೆ ಹೋಗಿ ಒಂದೆರಡು ಗಂಟೆ ಅಡ್ಡಾಗಬಹುದೆಂದುಕೊಂಡು ಮನೆಯ ದಾರಿ ಹಿಡಿದರು. ಮನೆಗೆ ಹೋಗುತ್ತಲೇ ಗಂಡನ ನಿರೀಕ್ಷೆಯಲ್ಲಿ ಮಗಳು ನಿದ್ದೆ ಮಾಡುವುದಿಲ್ಲವೆಂದು ಗೊತ್ತಿದ್ದ ಅವಳ ತಂದೆ 'ಪಲ್ಲೂ ನಾಲ್ಕುವರೆಗೆ ಸರಿಯಾಗಿ ಎಚ್ಚರ ಮಾಡಿಬಿಡಮ್ಮಾ' ಎಂದು ಹೇಳಿ, ಹೇಗೂ ಎಬ್ಬಿಸುತ್ತಾಳೆ ಎಂದುಕೊಂಡು ನಿಶ್ಚಿಂತೆಯಿಂದ ನಿದ್ದೆ ಹೋದರು ಆಕೆಯ ತಂದೆ. ಅಲ್ಲಿಯವರೆಗೆ ನಿದ್ದೆಯೇ ಸರಿಯಾಗಿ ಆಗಿರಲಿಲ್ಲವಾಗಿ ಬೆಳಗಿನ ಝಾವದ ತಂಗಾಳಿಗೆ ಗಾಢ ನಿದ್ದೆಯು ಬಂದುಬಿಟ್ಟಿತು. ತಂದೆ–ತಾಯ್ಗಳಿಬ್ಬರೂ ಮಹಡಿಯ ಮೇಲಿನ ರೂಂನಲ್ಲಿ ಮಲಗಿದ್ದರೆ ಪಲ್ಲವಿ ಮಗಳೊಂದಿಗೆ ಕೆಳಗಿನ ಕೊಠಡಿಯಲ್ಲಿ ಮಲಗಿದ್ದಳು. ನಿದ್ದೆ ಬರದೆ ಅತ್ತಿಂದಿತ್ತ ಹೊರಳುತ್ತಾ ಶಾಶ್ವತನ ಬಗ್ಗೆ ಏನೇನೋ ಯೋಚಿಸುತ್ತಲೇ ಸಮಯ ಕಳೆಯಿತು. ನಾಲ್ಕೂವರೆಯನ್ನು ಗೋಡೆಯ ಮೇಲಿನ ಗಡಿಯಾರ ತೋರಿಸಿದಾಗ ಗಡಬಡಿಸಿ ಎದ್ದಳು. ಅಪ್ಪಾಜಿ ಎದ್ದು ತಯಾರಾಗಿ, ಹೊರಡುವುದರಲ್ಲಿ ಲೇಟಾಗಬಾರದೆಂದು ಸರಸರನೆ ಮೆಟ್ಟಿಲೇರತೊಡಗಿದಳು. ಅವಸರದಲ್ಲಿ ಕಾಲೂ ಜಾರಿತು. ಬಲಗಾಲಿನ ಪಾದ ತಿರುಚಿದಂತಾಗಿ ಬಿದ್ದುಬಿಟ್ಟಳು. ಮೇಲೆ ಏಳಹೋದರೆ ಕಾಲಿನಲ್ಲಿ ಅಗಾಧವಾದ ನೋವು, ಕಾಲನ್ನು ಸರಿಸಲೂ ಬಾರದು. ನೋವಿನಿಂದ ನರಳಿದಳು. ಟ್ರೈನ್‌ಗೆ

ಲೇಟಾಗುತ್ತಿದೆ. ಪಲ್ಲವಿಗೆ ಏನು ಮಾಡಲೂ ತೋಚದೆ ಅಳು ಬಂದುಬಿಟ್ಟಿತು. ಮಗಳು ಹೇಗೂ ಎಳಿಸುತ್ತಾಳೆಂದು ಆಕೆಯ ತಂದೆಯೂ ನಿಶ್ಚಿಂತೆಯಿಂದ ಮಲಗಿಬಿಟ್ಟಿದ್ದರು. ಆಗಲೇ ಐದರ ಸಮಯ. ದಿವ್ಯಳಿಗೆ ಎಚ್ಚರಾಯ್ತು. ಅಮ್ಮ ಪಕ್ಕದಲ್ಲಿ ಇಲ್ಲದುದನ್ನು ನೋಡಿ ಅಳತೊಡಗಿದಳು. ಪಲ್ಲವಿಗೆ ಮಗಳ ಅಳು ಕೇಳಿದರೂ ಕಾಲಿನ ನೋವಿನಿಂದಾಗಿ ಯಾರ ಸಹಾಯವೂ ಇಲ್ಲದೇ ತಾನೇ ಏಳಲು ಆಗುವಂತಿರಲಿಲ್ಲ. ಆಗ ತಾಯಿಯನ್ನು ಕಾಣದೇ ಮಗು ಚೀರತೊಡಗಿತು. ಮಗುವಿನ ಚೀರಾಟದಿಂದಾಗ ಮನೆಮಂದಿಗೆಲ್ಲಾ ಎಚ್ಚರರಾಗಿ ದಡಬಡಿಸಿ ಎಂದಾಗಲೇ ಪಲ್ಲವಿ ಬಿದ್ದು ಕಾಲಿಗೆ ನೋವಾದ ವಿಚಾರ ತಿಳಿದದ್ದು.

'ಪಲ್ಲವಿ, ಯಾಕಮ್ಮಾ? ಹೇಗೆ ಬಿದ್ದೆ. ಏನಾಯ್ತು' ಎಂದು ಗಾಬರಿಯಿಂದ ಸುನಂದಮ್ಮ ವಿಚಾರಿಸಿದರು.

ಅಮ್ಮಾ ರೈಲಿಗೆ ಲೇಟಾಯ್ತು. ಅಪ್ಪಾಜಿಗೆ ಬೇಗ ಹೊರಡಲು ಹವಿಳು. ನನ್ನನ್ನು ಸ್ವಲ್ಪ ಮೇಲೆಳಿಸು' ಎಂದಳು. ಟೈಂ ಆಗಲೇ ಐದೂ ಹತ್ತಾಗಿತ್ತು. ಸದಾನಂದ ಬೇಗ ರೆಡಿಯಾಗಿ ಹೊರಟರು. ಯಾರು ಎಷ್ಟು ಬೇಡವೆಂದರೂ ಪಲ್ಲವಿಯೂ ಕುಂಟುತ್ತಾ ಹೋಗಿ ಕಾರಲ್ಲಿ ಕುಳಿತಳು. ತುಂಬಾ ಸ್ಪೀಡಾಗಿಯೇ ಕಾರನ್ನು ನಡೆಸಿ ನಿಲ್ದಾಣ ತಲ್ಪಿದಾಗ, ಟೈಂ ಐದೂವರೆಯ ಮೇಲಾಗಿತ್ತು. ವಿಚಾರಿಸಿದ್ದರಲ್ಲಿ ರೈಲು ಐದು ಗಂಟೆಗೆ ಸರಿಯಾಗಿ ಬಂದಿತೆಂದು ತಿಳಿಯಿತು. ಸ್ಟೇಷನ್ ಎಲ್ಲಾ ಹುಡುಕಿದರು. ಕಾಯುತ್ತಾ ನಿರೀಕ್ಷಕರ ಕೋಣೆಯಲ್ಲೇನಾದರೂ ಕುಳಿತರಬಹುದೆಂದು ಅಲ್ಲಿಯೂ ನೋಡಿದರು. ಶಾಶ್ವತ ಎಲ್ಲಿಯೂ ಕಾಣಲಿಲ್ಲ.

'ನಾವು ಸ್ಟೇಷನ್ ಕಡೆ ಹೊರಟಾಗ ಅವರು ಮನೆಕಡೆ ಹೊರಟಿರಬಹುದು. ಈಗ ಮನೆ ತಲ್ಪರುತ್ತಾರೆ. ನಾವೀಗ ಮನೆಗೆ ಹೋಗೋಣ'ವೆಂದು ಪಲ್ಲವಿ ಹೇಳಿದಾಗ ಸದಾನಂದಗೂ ಸಹ ಹಾಗಾಗಿರಲಿಕ್ಕೂ ಸಾಕು ಎನಿಸಿ ಕಾರನ್ನು ಮನೆಯ ಕಡೆಗೆ ನಡೆಸಿದರು. ಗೇಟಿನ ಬಳಿ ಕಾರಿನ ಸಪ್ಪಳವಾಗುತ್ತಲೇ ಪಲ್ಲವಿಯ ಅಮ್ಮ, ಚಿಕ್ಕಮ್ಮ, ಚಿಕ್ಕಪ್ಪನ ಮಗ ದೀಪಕ್, ಎಲ್ಲರೂ ಬಾಗಿಲಿಗೆ ಬಂದರು. ಪಲ್ಲವಿ ಶಾಶ್ವತ್ ಸಹ ಓಡಿ ಬರುತ್ತಾನೆ ಎಂದು ನಿರೀಕ್ಷಿಸಿದ್ದಳು. ಆದರೆ ಅವನೆಲ್ಲೂ ಕಾಣಿಸಲಿಲ್ಲ. ಆದರೆ ಕಾರು ಬಾಗಿಲಿಗೆ ಬರುತ್ತಿದ್ದಂತೆಯೇ ಎಲ್ಲರೂ ಒಟ್ಟಾಗಿ 'ಶಾಶ್ವತ ಬರಲಿಲ್ಲವೇ' ಎಂದಾಗ ಪಲ್ಲವಿ ಎಲ್ಲರೂ ತನ್ನನ್ನ ಕಾಡಿಸಲು ಹೀಗೆ ಮಾಡುತ್ತಿದ್ದಾರೆಂದು ಊಹಿಸಿ 'ನನಗೆಲ್ಲಾ ಗೊತ್ತು ಶಾಶ್ವತ್ ಒಳಗೆ ಬಚ್ಚಿಟ್ಟುಕೊಂಡಿರುವುದು' ಎಂದಳು. ಶಾಶ್ವತ್ ಮನೆಗೆ ಬಂದಿಲ್ಲವೆಂದು ಎಲ್ಲರೊಂದಾಗಿ ಹೇಳಿದರೂ ಪಲ್ಲವಿ ನಂಬಲಿಲ್ಲ. ತಾನೇ ಹೋಗಿ ಮನೆಯೆಲ್ಲಾ ಹುಡುಕಿ ಬಂದಳು. ಆಗ ಅವಳಿಗೆ ಶಾಶ್ವತ್ ಬಂದಿಲ್ಲದಿರುವ ವಿಚಾರ ಖಚಿತವಾಯ್ತು.

ಇಷ್ಟರವರೆಗೆ ಅನುಭವಿಸಿದ ಆತಂಕವೆಲ್ಲಾ ಒಟ್ಟುಗೂಡಿ ನಿರಾಸೆಯೂ ಜೊತೆಗೂಡಿ ಅವಳಿಗೆ ದುಃಖ ಉಮ್ಮಳಿಸಿ ಬಂತು. ಮುಖಮುಚ್ಚಿಕೊಂಡು ಬಿಕ್ಕಳಿಸತೊಡಗಿದಳು. 'ಶಾಶ್ವತ್ ಮನೆಗೂ ಬಂದಿಲ್ಲ. ಸ್ಟೇಷನ್‌ನಲ್ಲೂ ಇಲ್ಲ. ಹಾಗಾದರೆ ಮತ್ತೆಲ್ಲಿಗೆ ಹೋದರು' ಎಂದು ಯೋಚಿಸುತ್ತಾ ಆಕೆಗೆ ಗಾಬರಿಯಾಯ್ತು. ಇಲ್ಲದ ಕಲ್ಪನೆಗಳು ಮನಸ್ಸಿನಲ್ಲಿ ಮೂಡಿ ಭಯಗೊಂಡಳು.

ಸುನಂದಮ್ಮನದು ಸಮಾಧಾನದ ಸ್ವಭಾವ. ಬೇಗ ಗಾಬರಿಗೊಳ್ಳುವವರಲ್ಲ. ಎಂತಹ ಸಂದರ್ಭದಲ್ಲೂ ಮನಸ್ಸನ್ನು ಅಸ್ತವ್ಯಸ್ತಗೊಳಿಸಿಕೊಳ್ಳದೆ ಶಾಂತವಾಗಿ ಯೋಚಿಸುವರು. ಈ ಸಂದರ್ಭದಲ್ಲೂ ಗಡಿಬಿಡಿಗೊಳ್ಳದೆ.

'ಏಕೆ ಹಾಗೆ ಗಾಬರಿಯಾಗ್ತಿ? ಇನ್ನೊಂದು ಸ್ವಲ್ಪ ಹೊತ್ನಲ್ಲಿ ಬರ್ತಾರೆ ನೋಡು. ಅವರ ಜೊತೇಲಿ ಅವರ ಸ್ನೇಹಿತರ್‍ಯಾರಾದರೂ ಬಂದಿರಬಹುದು. ನಾವ್ಯಾರೂ ಸ್ಟೇಷನ್‌ಗೆ ಬಂದಿದ್ದುದನ್ನು ನೋಡಿ ಅವರ ಸ್ನೇಹಿತರು ಒತ್ತಾಯದಿಂದ ತಮ್ಮ ಮನೆಗೆ ಕರೆದುಕೊಂಡು ಹೋಗಿರಬಹುದು.'

'ಮನೆ ಇದ್ದೂ ಬೇರೆಯವರ ಮನೆಗೆ ಯಾಕಮ್ಮಾ ಹೋಗ್ತಾರೆ? ಖಂಡಿತಾ ಇಲ್ಲಿಗೇ ಬರ್ತಿದ್ರು. ಮಗಳನ್ನು ನೋಡೋದು ಬಿಟ್ಟು ಬೇರೆಯವರ ಮನೆಗೆ ಅವ್ರೆಂದೂ ಹೋಗೋಕೆ ಸಾಧ್ಯವಿಲ್ಲ.'

'ಅದು ಸರಿ, ಆದ್ರೆ, ನೀನವರಿಗೆ ಬೆಂಗ್ಳೂರಿಗೆ ಬಂದ್ರೂ ಬರ್ತೀನಿ, ಇಲ್ದೆ ಇದ್ರೆ ಇಲ್ಲಾಂತ ತಿಳಿಸ್ದಿದ್ದೀನಿಂತ ಅಂದಿದ್ಯಲ್ಲ. ಸ್ಟೇಷನ್‌ನಲ್ಲಿ ನಾವ್ಯಾರೂ ಇಲ್ಲದುದನ್ನು ನೋಡಿ ನಾವ್ಯಾರೂ ಬೆಂಗಳೂರಿಗೇ ಬಂದಿಲ್ಲ ಅಂದ್ಕೊಂಡಿರಬಹುದು.'

'ಹಾಗಂದ್ಕೊಂಡ್ರೂ ಏನಾಯ್ತಮ್ಮ. ಮನೆಗೆ ಬರಬಹುದಿತ್ತಲ್ಲಾ. ಫೋನಾದ್ರೂ ಮಾಡಬಹುದಿತ್ತಲ್ಲ.'

ಸುನಂದಮ್ಮನಿಗೂ, ಆಗ ಫೋನಾದ್ರೂ ಮಾಡುತ್ತಿದ್ದರು ಎನ್ನಿಸಿತು. ಹಾಗೆಂದು ಒಪ್ಪಿಕೊಂಡರೆ ಮಗಳ ಆತಂಕ ಮತ್ತಷ್ಟು ಹೆಚ್ಚಾದೀತೆಂದು ಅವರ ಸ್ನೇಹಿತರ ಬಲವಂತಕ್ಕೆ ಹೋಗಿರಬಹುದು. ನೀನು ಬೆಂಗಳೂರಿಗೆ ಬರದಿರುವಾಗ ಮಗಳನ್ನೂ ಕೂಡಲೇ ನೋಡಲು ಆಗದಿರುವಾಗ ಫೋನ್ ಮಾಡಿ ನಿಮ್ಮ ಚಿಕ್ಕಪ್ಪಾಜೀಗಾದ್ರೂ ಏಕೆ ತೊಂದ್ರೆ ಕೊಡಬೇಕೆಂದು ಕೊಂಡಿರಬೇಕು. ನಿಮ್ಮ ಚಿಕ್ಕಪ್ಪಾಜಿ ರೂಂ ಮೇಲೆ. ಫೋನ್ ಕೆಳಗಿರುವುದು ನಿಮ್ಮೆಜಮಾನರಿಗೆ ಗೊತ್ತು. ಅದ್ಕೆ ನಿದ್ದೆ ಹೊತ್ನಲ್ಲಿ ಸುಮ್ನೆ ಏಕೆ ಡಿಸ್ಟರ್ಬ್ ಮಾಡಬೇಕು ಎಂದ್ಕೊಂಡು ತಮ್ಮ ಫ್ರೆಂಡ್ ಮನೆಗೆ ಹೋಗಿರ್ತಾರೆ ಅಥವಾ ಯಾವ್ದಾದ್ರೂ ಲಾಡ್ಜಿಂಗ್‌ಗಾದ್ರೂ ಹೋಗಿರ್ತಾರೆ. ಪ್ರಯಾಣದಿಂದ ಆಯಾಸವಾಗಿರ್‌ಬಹುದು. ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು

ಒಂಭತ್ತರ ಹೊತ್ತಿಗೆ ಫ್ರೆಷ್ ಆಗಿ ಹಾಜರಾಗ್ತಾರೆ ನೋಡು' ಎಂದಾಗ 'ಇರಬಹುದು' ಎನ್ನಿಸಿ ಪಲ್ಲವಿಗೆ ಸಮಾಧಾನವಾಯ್ತು.

ಪ್ರತಿ ಕ್ಷಣವೂ ಶಾಶ್ವತನ ಹಾದಿ ಕಾಯುತ್ತಾ ಎಲ್ಲರೂ ಬಾಗಿಲಕಡೆಗೆ ನೋಡುತ್ತಿದ್ದರು. ಯಾವುದೇ ಕಾರು ಹಾರ್ನ್ ಮಾಡಿದರೂ ಆಟೋ ಶಬ್ದವಾದರೂ ಶಾಶ್ವತ್ ಬಂದಿರಬೇಕೆಂದು ಬಾಗಿಲ ಕಡೆ ಧಾವಿಸುತ್ತಿದ್ದರು. ಪಲ್ಲವಿಯಂತೂ ಕುಂಟುತ್ತಲೆ ಬಾಗಿಲಿಗೆ ಹೋಗಿ ಇಣುಕುತ್ತಿದ್ದಳು. ಗಂಟೆ ಒಂಭತ್ತಾಯಿತು. ಹತ್ತಾಯಿತ. ಶಾಶ್ವತನ ಸುಳಿವಿಲ್ಲ. ಸ್ನೇಹಿತ ಪ್ರಭಾಶಂಕರನ ಮನೆಗಾದರೂ ಹೇಳಿಕಳಿಸೋಣವೆಂದರೆ ಅವರ ವಿಳಾಸವೂ ಗೊತ್ತಿಲ್ಲ. ಎಲ್ಲರಿಗೂ ಏನು ಮಾಡಬೇಕೆಂಬುದೇ ತೋಚದಾಯ್ತು. ಪಲ್ಲವಿಯಂತೂ ಆತಂಕದಿಂದ ಚಡಪಡಿಸುತ್ತಿದ್ದಳು. ಹೊತ್ತು ಕಳೆದಂತೆ ಎಂತಹ ಪ್ರಸಂಗದಲ್ಲಿಯೂ ಸಮಾಧಾನ ಕಳೆದುಕೊಳ್ಳದಿದ್ದ ಸುನಂದಮ್ಮನಿಗೂ ಈಗ ಕಳವಳವಾಗತೊಡಗಿತು. 'ತಮ್ಮೂರಾದದಾವಣಗೆರೆಗೇನಾದರೂ ಹೋಗಿರಬಹುದೇ' ಎಂದುಕೊಂಡರೂ 'ಮಗಳನ್ನು ನೋಡುವ ಅಷ್ಟು ಕಾತುರವಿದ್ದ ಅವರು ಹಾಗೆ ಹೋಗಿರಲಾರರು' ಎಂದು ಒಂದು ಕ್ಷಣ ಅನ್ನಿಸಿದರೆ ಮರಕ್ಷಣವೇ 'ಇಷ್ಟು ತಿಂಗಳ ಮೇಲೆ ಊರಿಗೆ ಬಂದರೂ ಯಾರೂ ಸ್ಟೇಷನ್‌ಗೆ ಬಂದಿಲ್ಲವೆಂದು ಬೇಸರಗೊಂಡು ತಮ್ಮ ಊರಿಗೇನಾದರೂ ಹೋಗಿಬಿಟ್ಟಿದ್ದರೇ' ಎಂಬ ಆಲೋಚನೆಯೂ ಸುಳಿದುಹೋಯಿತು. ಆದರೆ ಆ ವೇಳೆಯಲ್ಲಿ ಆ ಕಡೆ ಹೋಗುವ ಯಾವ ಟ್ರೈನೂ ಇರಲಿಲ್ಲ. ಆದರೂ ನೋಡೋಣವೆಂದು ದಾವಣಗೆರೆಯ ಅವರ ಮನೆಗೂ ಫೋನ್ ಮಾಡಿದರು.

ದಾವಣಗೆರೆಯಲ್ಲಿದ್ದ ಶಾಶ್ವತನ ತಾಯಿ 'ಈಗಾಗಲೇ ಮಗ ಬೆಂಗಳೂರಿಗೆ ಬಂದಿರುತ್ತಾನೆ. ಪಾಪ ಮಗಳು ಹುಟ್ಟಿ ನಾಲ್ಕು ತಿಂಗಳು ಮುಗಿದಿದ್ದರೂ ಮಗಳನ್ನು ನೋಡದೆ ಇದ್ದ ಅವನಿಗೆ ಈಗ ಎಷ್ಟು ಸಂತೋಷ ಆಗಿರಬೇಕು. ಬೆರೆಯವರ ಮಕ್ಕಳನ್ನು ಕಂಡರೆ ಅವನಿಗೆಷ್ಟು ಪ್ರೀತಿ. ಈಗಂತೂ ಮಗಳನ್ನು ತೊಡೆಯಿಂದ ಇಳಿಸುವುದಿಲ್ಲ. ಊರಿಗೆ ಬಂದ ತಕ್ಷಣ ಫೋನ್ ಮಾಡಲು ಹೇಳಿದ್ದೆ. ಫೋನ್ ಬರಲಿಲ್ಲ. ಪಾಪ ಮಗಳನ್ನು ಮುದ್ದಾಡುವ ಸಂತೋಷದಲ್ಲಿ ಜಗತ್ತೇ ಮರೆತು ಹೋಗಿರಬೇಕು. ಫೋನ್ ಮಾಡುವ ನೆನಪಾದರೂ ಹೇಗೆ ಬರಲು ಸಾಧ್ಯ? ಇರಲಿ, ಮಡದಿ–ಮಗಳ ಭೇಟಿ ಎಷ್ಟೋ ತಿಂಗಳ ನಂತರವಾಗಿದೆ. ನಿಧಾನವಾಗಿ ಮಾಡಲಿ. ನಾಳೆ ಮಾಡಿದರೂ ತಪ್ಪಲ್ಲ. ಅವನು ಖುಷಿಯಾಗಿದ್ದಾನಲ್ಲ ಅದು ಮುಖ್ಯ' ಎಂದುಕೊಂಡು ಸರಸಮ್ಮ ಕುಳಿತಿದ್ದಂತೆಯೇ ಫೋನು ಟ್ರಿನ್‌ಗುಟ್ಟಿತ್ತು. ಆಗ 'ಪಾಪ ಆ ಸಂತೋಷದಲ್ಲೂ ಅಮ್ಮನನ್ನು ಮರೆತಿಲ್ಲ. ಅವನಂತಹ ಮಕ್ಕಳು

ಈಗಿನ ಕಾಲದಲ್ಲಿ ಅಪರೂಪ. ಹೆಂಡತಿ ಎಂದರೆ ಪ್ರಾಣಕ್ಕಿಂತಿ ಪ್ರೀತಿ. ಹಾಗೆಂತ ತಂದೆ-ತಾಯ್ಗಳ ಬಗ್ಗೆ ಅಲಕ್ಷ್ಯವಿಲ್ಲ. ನಮ್ಮ ಬಗ್ಗೆಯೂ ಅಷ್ಟೇ ಮಮತೆ' ಎಂದುಕೊಳ್ಳುತ್ತಾ ಫೋನ್ ಎತ್ತಿ 'ಹಲೋ ಶಾಶ್ವತ್ ಎಂದರು.

'ನಾನು ಸದಾನಂದ್ ಬೆಂಗಳೂರಿನಿಂದ ಮಾತಾಡ್ತಿರೋದು. ಶಾಶ್ವತ್ ಇಲ್ಲಿಗೆ ಬಂದಿಲ್ಲ. ನಾವು ಸ್ಟೇಷನ್‌ಗೆ ಹೋಗುವುದು ಸ್ವಲ್ಪ ತಡವಾಯ್ತು. ಆದ್ದರಿಂದ ಅವ್ನ ನಮ್ಗೆ ಸಿಕ್ಕಿಲಿಲ್ಲ. ಅಲ್ಗೇನಾದ್ರೂ ಬಂದುಬಿಟ್ರೇನೋಂತ ಫೋನ್ ಮಾಡ್ದೆ.'

'ಇಲ್ಲಲ್ಲ ! ಈಗಾಗ್ಲೆ ಮಧ್ಯಾಹ್ನ ಮೂರು ಘಂಟೆ. ಟ್ರೈನು ಎಷ್ಟು ಹೊತ್ತಿಗ್ಬಂತು? ಯಾಕೆ ಬರಲಿಲ್ಲ? ಏನಾಯ್ತು?' ಎಂದು ಸರಸಮ್ಮ ಗಾಬರಿಯಾಗಿ ಪ್ರಶ್ನೆಗಳ ಸುರಿಮಳೆಯನ್ನೇ ಕರೆದರು ಘೋನಿನಲ್ಲಿ.

'ಇಲ್ಲ ಗಾಬರಿಯಾಗಬೇಡಿ ಬಹುಶಃ ಅರಸೀಕೆರೆಗೆ ಹೋಗಿರಬಹುದು. ಅಲ್ಲಿ ವಿಚಾರ್ಸಿ ನಿಮಗೆ ತಿಳಿಸ್ತೀವಿ' ಎಂದು ಹೇಳಿ ಫೋನ್ ಕೆಳಗಿಟ್ಟರು.

ಶಾಶ್ವತ್ ಅಂದು ಶನಿವಾರ ಬೆಳಿಗ್ಗೆ ದೆಹಲಿಯಿಂದ ಟ್ರೈನು ಹತ್ತುತ್ತಲೆ 'ನಾಡಿದ್ದು ರಾತ್ರಿ ಬೆಂಗಳೂರು ಮುಟ್ಟುತ್ತೇನೆ. ಪಲ್ಲವಿ ಬೆಂಗಳೂರಿಗೆ ಬರುವುದು ಅನುಮಾನ ಎಂದು ಬರೆದಿದ್ದರೂ ಅವಳು ಬಂದೇ ಬಂದಿರುತ್ತಾಳೆ. ದಿವ್ಯ ಹೇಗಿರಬಹುದು? ನನ್ನಂತಿರಬಹುದೋ ಅವರಮ್ಮನಂತಿರಬಹುದೋ, ಈಗಿನ್ನೂ ನಾಲ್ಕು ತಿಂಗಳು, ನಾನು ಅಪರಿಚಿತನೆಂದು ತಿಳಿಯಲಿಕ್ಕಿಲ್ಲ. ನನ್ನ ಬಳಿ ಬರಬಹುದು' ಎಂದು ಏನೇನೋ ಯೋಚಿಸುತ್ತಲೇ ಸಮಯ ಕಳೆದ. ಗುಂತಕಲ್ ದಾಟಿದ ಮೇಲೆ ಬೆಂಗಳೂರು ಇನ್ನೇನು ಬಂದೇಬಿಡ್ತು ಎನ್ನುವಾಗರೈಲು ನಿಂತಿತು. ಅಲ್ಲಿ ಗೂಡ್ಸ್ ಗಾಡಿಯೊಂದು ಬಿದ್ದು ಹಳಿಯೆಲ್ಲಾ ಕಿತ್ತು ಹೋಗಿ ರಿಪೇರಿ ಕೆಲಸ ನಡೆಯುತ್ತಿತ್ತಂತೆ. ರೈಲು ಹೊರಡಲು ಇನ್ನೂ ಮೂರು ತಾಸಾದರೂ ಬೇಕಾಗುವುದೆಂದು ತಿಳಿಯಿತು. ಆಗ ಅವನಿಗಾದ ಬೇಸರ ಅಷ್ಟಿಷ್ಟಲ್ಲ. ಆದರೂ ನಿರ್ವಾಹವಿಲ್ಲ, ಕಾಯಲೇಬೇಕು, 'ಇನ್ಮುಂದೆ ಈ ಟ್ರೈನುಗಳಲ್ಲಿ ಪ್ರಯಾಣವೇ ಮಾಡಬಾರದು. ಮೊದಲೇ ದೂರ ಪ್ರಯಾಣ, ಜೊತೆಗೆ ಇಂತಹ ಅಡೆ-ತಡೆಗಳು ಬೇರೆ. ನಮ್ಮ ದೇಶದಲ್ಲಿ ಈ ಪರಿಸ್ಥಿತಿಗಳು ಇನ್ನಾವ ಕಾಲಕ್ಕೆ ಸರಿಹೋಗುತ್ತವೆಯೇ ಏನೋ' ಎಂದುಕೊಂಡ. ಪರದೇಶದಲ್ಲಿಯ ಸುವ್ಯವಸ್ಥೆಯನ್ನು ನೋಡಿ ಬಂದಿದ್ದ ಅವನಿಗೆ ಎಲ್ಲದಕ್ಕೂ ಅಲ್ಲಿಯ ಹಾಗೂ ಇಲ್ಲಿಯ ಸ್ಥಿತಿಯನ್ನು ಹೋಲಿಸಿ ನಿರಾಸೆ ಎನ್ನಿಸುತ್ತಿತ್ತು. ನಮ್ಮ ದೇಶದ ಸ್ಥಿತಿಯನ್ನು ಹೋಲಿಸಿ ನಿರಾಸೆ ಎನ್ನಿಸುತ್ತಿತ್ತು. ನಮ್ಮ ದೇಶದ ಸ್ಥಿತಿಯನ್ನು ಹೇಗಾದರೂ ನಾವು ಭಾರತೀಯರು ಸುಧಾರಿಸಬೇಕು ಎಂದು ಯೋಚಿಸುತ್ತಿದ್ದ. ಹೀಗೆ ಏನೇನೋ ಆಲೋಚಿಸುತ್ತಿದ್ದಂತೆಯೇ ಮೂರು ತಾಸು ಕಳೆದು ರೈಲು

ಮುಂದೆ ಹೊರಟಿತು. ಬೆಳಗಿನ ಐದಕ್ಕೆ ಬೆಂಗಳೂರು ತಲ್ಪಿದಾಗ 'ಪಲ್ಲವಿ ಬಂದರೂ ಬಂದಿರಬಹುದು' ಎಂಬ ಆಸೆಯಿಂದಲೇ ರೈಲಿಳಿದ. ಸುತ್ತಮುತ್ತ ಕಣ್ಣು ಹಾಯಿಸಿದಾಗ ಯಾರೂ ಕಾಣಿಸಲಿಲ್ಲ. ಅವಳು ಬರದಂತೆ ಆಕೆಗೆ ಬರಲಾಗಿಲ್ಲ ಎಂದುಕೊಂಡ. ಅದಷ್ಟು ಬೇಗ ಅರಸೀಕೆರೆಗೆ ಹೋಗಿ ಮಡದಿ ಮಗ್ಗಳನ್ನು ನೋಡಬೇಕು ಎಂದುಕೊಳ್ಳುತ್ತಾ ಯಾವುದಾದರೂ ರೈಲು ಕೂಡಲೇ ಹೊರಡುವುದಿದೆಯೇ ಎಂದು ವಿಚಾರಿಸಿದಾಗ ಯಾವುದೂ ಇಲ್ಲವೆಂದು ತಿಳಿಯಿತು. ಸಮೀಪದಲ್ಲೇ ಇದ್ದ ಬಸ್‌ಸ್ಟಾಂಡಿನಲ್ಲಿ ವಿಚಾರಿಸಲು ಹೋದಾಗ ತಿಪಟೂರಿನ ಬಸ್ಸೊಂದು ಹೊರಟುನಿಂತಿತ್ತು. ಅರಸೀಕೆರೆ ತಿಪಟೂರಿನಿಂದ ಬಹಳ ದೂರವೇನಿಲ್ಲ. ಅಲ್ಲೇನಾದರೂ ವ್ಯವಸ್ಥೆ ಮಾಡಿಕೊಂಡರಾಯ್ತೆಂದು ಬಸ್ ಏರಿದ. ಬಸ್ಸಲ್ಲಿ ಒಂದು ಸೀಟೂ ಖಾಲಿ ಇರಲಿಲ್ಲ.

'ನಿಂತಕೊಂಡೇ ಹೋಗಬೇಕಾಗುತ್ತದೆ ಸಾರ್' ಎಂದ ಕಂಡಕ್ಟರ್.

'ನಿಲ್ಲಲಿಕ್ಕಾದ್ರೂ ಜಾಗ ಕೊಡ್ತೀಯಲ್ಲಪ್ಪ. ಟಿಕೇಟ್ ಕೊಡು' ಎಂದ. ಊರಿಗೆ ಹೋಗುವ ಆತುರದಲ್ಲಿ ಇದ್ದ ಶಾಶ್ವತ್. ಬಸ್ ಸಹ ಆರ್ಡಿನರಿಯದು. ಸಣ್ಣ ಸಣ್ಣ ಹಳ್ಳಿಗಳಿಗೂ ನಿಲ್ಲುತ್ತಾ ಮುಂದೆ ಸಾಗಿತ್ತು. ಕಡೆಗೆ ಬಸ್ ಯಾವುದಾದರೂ ಇದೆಯೇ ಎಂದು ವಿಚಾರಿಸಿದ್ದರಲ್ಲಿ ಹನ್ನೊಂದೂವರೆಗೆ ಒಂದು ಬಸ್ ಇರುವುದಾಗಿ ತಿಳಿಯಿತು. ಆದರೆ ಇನ್ನೊಂದು ತಾಸು ಕಾಯುವಷ್ಟು ತಾಳ್ಮೆ ಅವನಿಗಿರಲಿಲ್ಲ. ಅಲ್ಲಲ್ಲಿ ಅಡ್ಡಾಡಿ, ಒಂದು ಟ್ಯಾಕ್ಸಿ ಗೊತ್ತು ಮಾಡಿಕೊಂಡು ಹನ್ನೊಂದರ ಹೊತ್ತಿಗೆ ಹೊರಟ. ತಿಪಟೂರು ಬಿಟ್ಟು ಐದು ಕಿಲೋಮೀಟರ್ ಹೋಗಿರಬೇಕು. ಟ್ಯಾಕ್ಸಿ ಕೆಟ್ಟು ನಿಂತಿತು. ಓಹ್! ಶಾಶ್ವತನಿಗಾದ ನಿರಾಸೆ ಅಷ್ಟಿಷ್ಟಲ್ಲ. ನಾನು ಹೊರಟ ಘಳಿಗೆಯ ಸರಿ ಇಲ್ಲ. ಇಂದು ಸಂಜೆಗಾದರೂ ಊರು ಸೇರುತ್ತೇನೋ ಇಲ್ಲವೋ' ಎಂದುಕೊಳ್ಳುವಷ್ಟು ಆತಂಕ ಉಂಟಾಯಿತು.

'ಏನಪ್ಪ ಡ್ರೈವರ್, ನಾನು ಅರ್ಜೆಂಟ್ ಹೋಗ್ಬೇಕಾಗಿತ್ತು. ದುಡ್ಡು ಎಷ್ಟು ಕೊಡ್ಬೇಕು ಹೇಳು. ಯಾವ್ದಾದ್ರೂ ಬಸ್‌ಗೆ ಹೋಗಿಬಿಡ್ತೀನಿ.'

'ಹಂಗಂದ್ರೆ ಹೇಗೆ ಸಾರ್. ಅರ್ಧಗಂಟೆ ಒಳ್ಗೆ ರಿಪೇರಿ ಮಾಡಿಬಿಡ್ತೀನಿ. ಅರ್ಧ ದಾರೀಲಿ ಗಿರಾಕಿ ಕಳ್ಕೊಂಡ್ರೆ ಬಡವನ ಗತಿ ಏನು' ಎಂದ. ಆದರೆ ಅರ್ಧಗಂಟೆ ಕಳೆದರೂ ಗಾಡಿ ರಿಪೇರಿಯಾಗಲಿಲ್ಲ. 'ಅರಸೀಕೆರೆಗೆ ಫೋನ್ ಮಾಡಿ ವಿಷಯ ತಿಳ್ಸೋಣ. ಕಾರ್ ಕಳಿಸಬಹುದು. ಈ ಫಜೀತಿ ಸಾಕು' ಎಂದುಕೊಂಡು ಅಲ್ಲೇ ಸಮೀಪದಲ್ಲಿದ್ದ ಒಂದು ಇಂಡಸ್ಟ್ರೀಗೆ ಹೋಗಿ ಫೋನ್ ಮಾಡಿದ. ಆದರೆ ಫೋನ್ ಸರಿಯಾಗಿ ವರ್ಕ್ ಮಾಡದೇ ಆ ಕಡೆ ಹೇಳಿದುದೇನೂ

ಕೇಳಿಸುತ್ತಿರಲಿಲ್ಲ. ಕೊನೆಗೆ ದೆಹಲಿಯಿಂದ ನಿಮ್ಮ ಸಂಬಂಧಿಕರು ಟ್ಯಾಕ್ಸಿಯಲ್ಲಿ ಬರುತ್ತಿದ್ದಾರೆ. ದಾರಿಯಲ್ಲಿ ಟ್ಯಾಕ್ಸಿ ಕೆಟ್ಟಿದೆ. ಏನೂ ತೊಂದರೆಯಾಗಿಲ್ಲ. ಇಷ್ಟರಲ್ಲೇ ಬರುತ್ತಾರೆಂದು ತಿಳಿಸಿಬಿಡಿ ಎಂದು ಎಕ್ಸ್‌ಚೇಂಜ್‌ನವರಿಗೆ ಮೆಸೇಜ್ ಕೊಡಲು ಹೇಳಿಬಂದ. ಇಷ್ಟರಲ್ಲಿ ಶಾಶ್ವತನ ಸಹನೆ ಕಳೆದು ಬೇಸರದಿಂದ ಎಷ್ಟು ಕೊಡ್ಬೇಕು ಹೇಳಪ್ಪ ನಿನ್ನ ರಿಪೇರಿ ಆಗೋತನ್ಕಾ ನನಗೆ ಕಾಯೋಕಾಗೋದಿಲ್ಲ.'

'ಪೂರ್ತಿ ಹಣ ಕೊಟ್ಬಿಡಿ ಸಾರ್. ಇನ್ನೊಂದು ಸ್ವಲ್ಪ ಹೊತ್ತು ಇದ್ದಿದ್ರೆ ರಿಪೇರಿ ಮುಗ್ಸಿ ನಾನೇ ಕರ್‍ಕೊಂಡು ಹೋಗ್ತಿದ್ದೆ.' ಇನ್ನೆಷ್ಟು ದೂರ ಇರೋದು ಮಹಾ' ಎಂದ. ಇವ್ನ ಹತ್ರ ಚರ್ಚೆ ಮಾಡಿ ಉಪಯೋಗವಿಲ್ಲವೆಂದುಕೊಂಡು ಶಾಶ್ವತ್ ಪೂರ್ತಿ ಟ್ಯಾಕ್ಸಿ ಛಾರ್ಜು ಕೊಟ್ಟ. ಬಸ್ಸೊಂದು ಬಂತು. ಕೈ ಮಾಡಿದ. ಬಸ್ ಫುಲ್ ಇತ್ತು. ಡ್ರೈವರ್ ನಿಲ್ಲಿಸದೇ ಬುರ್ ಎಂದು ಹೋಗಿಬಿಟ್ಟ. ಶಾಶ್ವತ್ ನಿರುಪಾಯನಾಗಿ ಮತ್ತೊಂದು ಬಸ್ಸಿಗಾಗಿ ಕಾಯುತ್ತಾ ನಿಂತ. ಈಗ ಒಂದು ಮೆಟಡೋರ್ ಬಂತು. ಕೈ ಮಾಡಿದ. ಪುಣ್ಯಕ್ಕೆ ಡ್ರೈವರ್ ನಿಲ್ಲಿಸಿದ. ಅದೂ ತುಂಬಿ ತುಳುಕುತ್ತಿತ್ತು. ಅದನ್ನು ನೋಡಿ ಒಂದು ಕ್ಷಣ ಶಾಶ್ವತನ ಮನಸ್ಸು ಒಳಗೆ ಹೋಗಲು ಹಿಂಜರಿಯಿತು. ಆದರೆ ಎಷ್ಟು ಹೊತ್ತಿಗೆ ಊರು ಸೇರುವೆನೋ ಈ ಆತಂಕದ ಸ್ಥಿತಿಯಿಂದ ಪಾರಾದೇನೋ ಎನ್ನಿಸಿದ್ದ ಶಾಶ್ವತ್ 'ಅರಸೀಕೆರೆ ಏನೂ ದೂರವಿಲ್ಲ. ಇಷ್ಟೇ ಕಷ್ಟಪಟ್ಟಿದ್ದೇನೆ. ಇನ್ನೊಂದು ಹತ್ತು ನಿಮಿಷ ಹೇಗಾದರೂ ಒದ್ದಾಡಿದರಾಯ್ತು' ಎಂದುಕೊಂಡು ಒಳನುಗ್ಗಿದ. ಮೆಟಡೋರ್ ಹೊರಟಿತು.

ಅರಸೀಕೆರೆಯ ಮನೆಯಲ್ಲಿ ಅಜ್ಜಿಯೊಬ್ಬರನ್ನು ಬಿಟ್ಟು ಶಾಶ್ವತ್‌ನನ್ನು ಕರೆದುಕೊಂಡು ಬರಲು ಎಲ್ಲರೂ ಬೆಂಗಳೂರಿಗೆ ಹೋಗಿದ್ದರು. ಎಲ್ಲರೂ ಶಾಶ್ವತನೊಂದಿಗೆ ಈಗ ಬರಬಹುದು, ಆಗ ಬರಬಹುದೆಂದು ಅಜ್ಜಿ ಬೆಳಗಿನಿಂದ ನಿರೀಕ್ಷಿಸುತ್ತಿದ್ದರು. ಫೋನ್ ಶಬ್ದ ಮಾಡಿತು. 'ಬೆಂಗಳೂರಿನ ಫೋನಿರಬೇಕು. ಅವರುಗಳು ಬರುವ ಬಗ್ಗೆ ಹೇಳ್ತಾರೇನೋ ಎಂದುಕೊಂಡು ಫೋನೆತ್ತಿದ್ದರು ಅಜ್ಜಿ. ಆದರೆ ಅದೇ ಊರಿನ ಟೆಲಿಫೋನ್ ಎಕ್ಸೇಂಜ್‌ನವರೊಬ್ಬರು 'ಯಾರೋ ನಿಮ್ಮ ಬಂಧುಗಳೊಬ್ಬರು ದೆಹಲಿಯಿಂದ ಬರುತ್ತಿದ್ದಾರೆ. ತಿಪಟೂರು ಮತ್ತು ಅರಸೀಕೆರೆ ನಡುವೆ ಕಾರು ಕೆಟ್ಟುಹೋಗಿದೆಯೆಂತೆ. ಅವರಿಗೇನೂ ತೊಂದರೆಯಾಗಿಲ್ಲ' ಎಂದು ಮೆಸೇಜ್ ಕೊಟ್ಟರು. ಇದನ್ನು ಕೇಳಿದ ಅಜ್ಜಿಗೆ ಗಾಬರಿಯಾಯಿತು. ದೆಹಲಿಯಿಂದ ಕಾರ್‌ನಲ್ಲಿ ನಮ್ಮ ಬಂಧುಗಳು ಬರುವವರು ಯಾರು? ಶಾಶ್ವತ್ ಬೆಂಗಳೂರಿಗೆ ಬಂದಿರುತ್ತಾನೆ. ಅವರೆಲ್ಲಾ ಕೂಡಿಕೊಂಡು ಕಾರಿನಲ್ಲಿ ಬರುತ್ತಾರೆ. ಹೀಗಿರಬೇಕಾದರೆ ಇದೇನು ಸುದ್ದಿ 'ಕಾರು ಕೆಟ್ಟಿದೆ. ಆದರೆ ಅವರಿಗೇನೂ ತೊಂದರೆಯಾಗಿಲ್ಲ' ಎಂದು ತಿಳಿಸಿದ್ದಾರೆಂದರೆ ಏನೋ ತೊಂದರೆಯಾಗಿರಬೇಕು.

ನಾನು ಗಾಬರಿಯಾಗಬಾರದೆಂದು ಹಾಗೆ ಹೇಳಿದ್ದಾರೋ ಏನೋ. ಈಗೇನು ಮಾಡಲಿ. ಮನೆಯಲ್ಲಿ ಕಾರೂ ಎಲ್ಲ. ಹೋಗಿ ನೋಡಿಕೊಂಡು ಬರುವವರೂ ಇಲ್ಲ' ಎಂದು ಅಜ್ಜಿ ಆತಂಕದಿಂದ ಛಡಪಡಿಸಹತ್ತಿದರು. ಕಾರು ಕೆಟ್ಟು ಹೋಗಿದೆಯೋ ಆಕ್ಸಿಡೆಂಟೇ ಆಗಿದೆಯೋ ಎಂದು ಅವರಿಗೆ ತುಂಬಾ ಗಾಬರಿಯಾಗಿ ಹೊರಕ್ಕೂ ಒಳಕ್ಕೂ ಓಡಾಡುತ್ತಿದ್ದಂತೆಯೇ ಅವರ ಮಗಳ ಮಗ ಶಶಿ ಮೈಸೂರಿಂದ ದಾವಣಗೆರೆಗೆ ಹೋಗುವ ದಾರಿಯಲ್ಲಿ ಹೆಂಡತಿಯೊಡನೆ ಕಾರಿನಲ್ಲಿ ಅಜ್ಜಿ ಮನೆಗೆ ಬಂದಿಳಿದ. ಅಜ್ಜಿಗೆ ಜೀವ ಬಂದಂತಾಯ್ತು. ಒಂದೇ ಉಸಿರಿಗೆ ಪರಿಸ್ಥಿತಿಯನ್ನೆಲ್ಲಾ ಮೊಮ್ಮನಿಗೆ ವಿವರಿಸಿದರು. ಕೂಡಲೇ ಚಾಣಾಕ್ಷನಾದರ ಶಶಿ 'ಏನ್ ಗಾಬಾರಿಯಾಗಬೇಡ್ರಿ ಅಜ್ಜಿ. ಮಾಮಂಗೂ ಶಾಶ್ವತ್‌ಗೂ ಬೆಂಗಳೂರಲ್ಲಿ ಭೇಟ್ಟಿನೇ ಆದಂತಿಲ್ಲ. ಅದಕ್ಕೆ ಶಾಶ್ವತ್ ಟ್ಯಾಕ್ಸಿ ಮಾಡಿಕೊಂಡು ಹೋರಟಿರಬೇಕು. ಬರ್ತಾ ದಾರೀಲಿ ಅರಸೀಕೆರೆ ಸಮೀಪದಲ್ಲಿ ಟ್ಯಾಕ್ಸಿ ಕೆಟ್ಟುಹೋಗಿದೆ. ನಾನು ಹೋಗಿ ಈಗ್ಲೆ ಕರ್ಕೊಂಡು ಬಂದು ಬಿಡ್ತೀನಿ. ನೀವೇನೂ ಚಿಂತೆ ಮಾಡ್ಬೇಡಿ ಎಂದು ಅಜ್ಜಿಗೂ ಹೆಂಡತಿಗೂ ಹೇಳಿ ಮುಖ ಸಹ ತೊಳೆದುಕೊಳ್ಳದೇ ಬಂದಂತೆಯೇ ಕಾರನ್ನು ತಿಪಟೂರು ಕಡೆಗೆ ತಿರುಗಿಸಿದ. ಕೆಲವೇ ಕಿಲೋಮೀಟರ್ ದೂರದಲ್ಲಿ ಟ್ಯಾಕ್ಸಿಯವನೊಬ್ಬ ರಿಪೇರಿ ಮಾಡುತ್ತಾ ರಸ್ತೆ ಬದಿಯಲ್ಲಿದ್ದ. ಆದರೆ ಬೇರೆ ಯಾರೂ ಕಾಣಲಿಲ್ಲ. ಅವನನ್ನೇ ವಿಚಾರಿಸಿದಾಗ ವಿಷಯ ತಿಳಿಯಿತಲ್ಲದೇ ಆಗತಾನೇ ಮೆಟಡೋರೊಂದರಲ್ಲಿ ಅರಸೀಕೆರೆಗೆ ಹೋದರೆಂದು ತಿಳಿಸಿದ. ಶಶಿ ಕಾರನ್ನು ಪುನಃ ಅರಸೀಕೆರೆಯ ಕಡೆಗೆ ತಿರುಗಿಸಿ ಜೋರಾಗಿ ಹೊರಟ. ಕಾರು ಬಸಸ್ಟ್ಯಾಂಡ್ ತಲುಪಿತು. ಮೆಟಡೋರ್ ಸಹ ಕರ್ಕಶವಾಗಿ ಶಬ್ದ ಮಾಡುತ್ತಾ ಪಕ್ಕದಲ್ಲೇ ನಿಂತಿತು. ಸುಸ್ತಾಗಿದ್ದ ಶಾಶ್ವತ್ ಒದ್ದಾಡಿಕೊಂಡ ಕೆಳಗಿಳಿದ. ಇದ್ರಲ್ಲೇ ಬಂದಿರಬೇಕೆಂದು ಬಾಗಿಲ ಬಳಿಯೇ ಕಾಯುತ್ತಿದ್ದ ಶಶಿಯನ್ನು ನೋಡಿ ಶಾಶ್ವತ್ ಸಮಾಧಾನದ ಉಸಿರುಬಿಟ್ಟ. ಶಶಿಗೂ ವಿವರಗಳೇನೂ ಗೊತ್ತಿರಲಿಲ್ಲ. ಆದರೆ ಮಾತನಾಡಲು ಇದು ಸಮಯವಲ್ಲವೆಂದರಿತು ಶಾಶ್ವತನ ಸಾಮಾನುಗಳನ್ನು ಇಬ್ಬರೂ ಕಾರಿನ ಡಿಕ್ಕಿಯಲ್ಲಿಟ್ಟರು.

'ಸದ್ಯ ಊರು ಮುಟ್ಟಿದೆ ಇನ್ನೆರಡು ನಿಮಿಷಗಳಲ್ಲಿ ದಿವ್ಯಳ ದಿವ್ಯದರ್ಶನ' ಎಂದು ಮನಸ್ಸಿನಲ್ಲಿಯೇ ಹಿಗ್ಗುತ್ತಾ ಶಾಶ್ವತ್ ಕಾರು ಹತ್ತಿದ. ಶಶಿ ಕಾರು ಸ್ಟಾರ್ಟ್ ಮಾಡಿದ. ಅಂತೂ ಮನೆಮುಟ್ಟಿದರು. ಕಾರಿನ ಹಾರ್ನ್ ಕೇಳಿದ ತಕ್ಷಣ ಆಳು ಬಂದು ಗೇಟ್ ತೆಗೆದ. ಬಾಗಿಲಿಗೆ ಅಜ್ಜಿ ಮತ್ತು ಶಶಿಯ ಹೆಂಡತಿ ಬಂದರು. ದಿವ್ಯ ಕಾಣಲಿಲ್ಲ. ಪಲ್ಲವಿಯ ಸುಳಿರಿಲ್ಲ. ಅತ್ತೆ-ಮಾವ ಯಾರೂ ಇಲ್ಲ.

'ನಾನಿಷ್ಟು ಪರದಾಡಿಕೊಂಡು ಬಂದರೆ ಇವರಿಗೆಲ್ಲಾ ತಮಾಷೆ, ಮನೆಯಲ್ಲಿ

ಕೂತವರಿಗೆ ಹೊರಗೆ ನಾನು ಪಟ್ಟಿರುವ ಪಾಡು ಏನು ಗೊತ್ತು? ಇವರ ತಮಾಷೆ ಯಾರಿಗೆ ಬೇಕು. ಇದನ್ನೆಲ್ಲಾ ಎಂಜಾಯ್ ಮಾಡುವ ಸ್ಥಿತಿಯಲ್ಲೇ ನಾನಿಲ್ಲ' ಎಂದು ಮನಸ್ಸಿನಲ್ಲೇ ಅಂದುಕೊಳ್ಳುತ್ತಾ ಕಾರಿಳಿದು ಮೆಟ್ಟಲೇರಿ ಒಳನಡೆದ. ಒಳಗೂ ಯಾರೂ ಕಾಣುತ್ತಿಲ್ಲ. ಆತುರವನ್ನು ಹತ್ತಿಕ್ಕಿಕೊಳ್ಳಲಾರದೇ 'ಅಜ್ಜಿ ಪಲ್ಲವಿ ಎಲ್ಲಿ?' ಎಂದ.

ಇಲ್ಲಪ್ಪ ಅವ್ರಿನ್ನೂ ಬೆಂಗಳೂರಲ್ಲೇ ಇದ್ದಾರೆ. ನಿನಗೆ ಸಿಗಲಿಲ್ವೆ. ನೀವೆಲ್ಲಾ ಒಟ್ಟಿಗೆ ಬರ್ತೀತಿ ಅಂದ್ಕೊಂಡಿದ್ದೆ' ಎಂದಾಗ ಶಾಶ್ವತನಿಗಾದ ನಿರಾಸೆಗೆ ಎಲ್ಲೆ ಇರಲಿಲ್ಲ. ಅಷ್ಟರಲ್ಲಿ ಫೋನ್ ಟ್ರಿನ್‌ಗುಟ್ಟಿತು. ಶಾಶ್ವತನೇ ಫೋನ್ ತೆಗೆದುಕೊಂಡು 'ಹಲೋ' ಎಂದ.

'ಯಾರು ಅಮ್ಮಾನೇ? ಶಾಶ್ವತ ಅಲ್ಲೇನಾದ್ರೂ ಬಂದಿದಾರೇನಮ್ಮ. ಸ್ಟೇಷನ್‌ಗೆ ಹೋಗೋದು ಸ್ವಲ್ಪ ಲೇಟಾಗಿಬಿಡ್ತು ನಮ್ಗೆ ಅವ್ರ ಭೇಟ್ಟೀನೆ ಆಗಿಲ್ಲ. ಅಲ್ಲೇನಾದ್ರೂ ಬಂದಿದಾರೇನೋಂತ ಬೆಳಗಿನಿಂದ ಫೋನ್ ಟ್ರೈ ಮಾಡಿದ್ದಕ್ಕೆ ಈಗ ಸಿಕ್ತು' ಎಂದು ಸದಾನಂದ ಆ ಕಡೆಯಿಂದ ಹೇಳಿದರು.

'ನಾನೇ ಶಾಶ್ವತ್ ಮಾತಾಡ್ತಾ ಇರೋದು, ಈಗ್ತಾನೆ ಬಂದೆ. ಬಂದವನೇ ನಿರಾಸೆಯಿಂದ ಕುಳಿತಿದ್ದೀನಿ.'

'ನೀವಾ ಶಾಶ್ವತ್. ಅಬ್ಬಾ ನಮಗೆಲ್ಲಾ ಎಷ್ಟು ಚಿಂತೆಯಾಗಿತ್ತು. ಇರಲಿ, ಈ ಕ್ಷಣ ಹೊರಟು ಬರ್ತೀವಿ' ಎಂದು ಹೇಳಿದರು. ಶಾಶ್ವತ್ ಫೋನ್ ಕೆಳಗಿಟ್ಟು, ಕೈಕಾಲು ತೊಳೆದುಕೊಂಡು ಬಂದವನೆ, ವಿಶ್ರಾಂತಿಗೆಂದು ಬೆಡ್‌ರೂಂಗೆ ಹೋದ.

■

# ೧೨. ಔದಾರ್ಯ

ಆವರ ಎಂದಿನಂತೆ ಹಾಲು ಕರೆದುಕೊಂಡು ದನದ ಕೊಟ್ಟಿಗೆಯಿಂದ ಹೊರಬರತ್ತಿದ್ದಂತೆಯೇ ಕೋಪಮ್ಮ,

'ಜವರಾ ಹಾಲನ್ನು ಸೀದಾ ಒಳಗೆ ತೆಗೆದುಕೊಂಡು ಹೋಗು, ಯಾವ ಬಟ್ಟಲಿಗೂ, ಹಾಕಬೇಡ'

ಎಂದು ಅಧಿಕಾರವಾಣಿಯಿಂದ ಅಜ್ಞಾಪಿಸಿದಾಗ ಜವರ ತಬ್ಬಿಬ್ಬಾದ. ಹಾಲುಕರೆದುಕೊಂಡು ಕೊಳದಪ್ಪಲೆಯಲ್ಲಿ ತಂದ ಹಾಲನ್ನು ಚೊಂಬಿನಲ್ಲಿ ತುಂಬಿ, ತುಂಬಿ ಓಣಿಯ ಜನರು ಬಾಗಿಲ ಹತ್ತಿರವಿದ್ದ ಹಾಸುಗಲ್ಲಿನ ಮೇಲೆ ಇಟ್ಟಿರುತ್ತಿದ್ದ ಬಟ್ಟಲುಗಳಿಗೆ ಸುರುವಿ, ಉಳಿದ ಹಾಲನ್ನು ಒಳಗೆ ತೆಗೆದುಕೊಂಡು ಹೋಗುತ್ತಿದ್ದುದು ಅವನು ದಿನವೂ ಅನುಸರಿಸುತ್ತಿದ್ದ ವಾಡಿಕೆ. ಇಂದೂ ಹಾಗೆ ಮಾಡಬೇಕೆನ್ನಿಸುವಷ್ಟರಲ್ಲಿ ಈ ಆಜ್ಞಾಪನೆ ಸಿಕ್ಕಿತ್ತು. ಕೋಪಮ್ಮನ ಮಾತನ್ನು ಮೀರಿ ನಡೆಯುವವರು ಆ ಮನೆಯಲ್ಲಿ ಶಾಂತಯ್ಯನವರ ಹೊರತು ಬೇರೆ ಯಾರು ಇರಲಿಲ್ಲ.

ಕೋಪಮ್ಮನ ನಿಜವಾದ ಹೆಸರು ಯಾರಿಗೂ ಗೊತ್ತಿಲ್ಲ. ಐದು ವರ್ಷದ ಮಗುವಿದ್ದಾಗಲೇ ಮದುವೆಯಾಗಿ ಎಂಟನೆಯ ವರ್ಷಕ್ಕೇ ವಿಧವೆಯಾಗಿದ್ದುದರಿಂದ ಆಕೆ ಗಂಡನಮನೆ ಮೆಟ್ಟಲು ಸಹ ತುಳಿಯದೆ ತೌರಿನಲ್ಲೇ ಉಳಿದಿದ್ದಳು. ಈಗ ಆಕೆಯ ಬಾಲ್ಯದ ಗುಣಸ್ವಭಾವದ ಬಗ್ಗೆ ಗೊತ್ತಿದ್ದವರು ಶಾಂತಯ್ಯನವರ ಹೊರತು, ಮತ್ಯಾರೂ ಇರಲಿಲ್ಲ. ಈಗಿದ್ದವರಿಗೆ ಗೊತ್ತಿದ್ದುದು ಆಕೆಯ ಕೋಪದ ಸ್ವಭಾವ ಮಾತ್ರ. ಶಾಂತಯ್ಯನವರ ಪತ್ನಿ ರುದ್ರಮ್ಮನನ್ನು ಮನೆತುಂಬಿಸಿಕೊಂಡು ಬಂದಾಗಿನಿಂದ ಶಾಂತಯ್ಯನವರನ್ನು ಬಿಟ್ಟರೆ ಕೋಪಮ್ಮನೇ ಮನೆಯ ಎರಡನೆಯ ಯಜಮಾನಿ. ಅಣ್ಣ ಶಾಂತಯ್ಯ ಊರಪಂಚಾಯಿತಿ ಮಾಡಲೆಂದೋ, ಸಾಮಾಜಿಕ ಕೆಲಸಗಳಿಗೆಂದೋ ಯಾವಾಗಲೂ, ಮನೆಯಿಂದ ಹೊರಗೇ ಹೆಚ್ಚಾಗಿರುತ್ತಿದ್ದರು. ದಿನವಿಡೀ ಬಿಡುವಿಲ್ಲದೆ ದುಡಿಯುತ್ತಿದ್ದರು ನಿಜ. ಆದರೆ ಸಮಾಜಕ್ಕಾಗಿ. ಮನೆಯ ಜವಾಬ್ದಾರಿಗಳಿಗೆ ಅವರಿಗೆ ಸಮಯವೇ ಇರುತ್ತಿರಲಿಲ್ಲ. ಹಾಗಾಗಿ ಕೋಪಮ್ಮನೇ ಮನೆಯ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದುದಲ್ಲದೆ, ಹೊಲ, ತೋಟ, ಗದ್ದೆಗಳ, ಉಸ್ತುವಾರಿ, ಆಳು-ಕಾಳುಗಳ ಕೆಲಸ, ಲೆಕ್ಕಾಚಾರ ಎಲ್ಲವನ್ನೂ ನಿರ್ವಹಿಸುತ್ತಾ

ಶಾಂತಯ್ಯನವರ ಬಲಗೈಯ್ಯಾಗಿ ದುಡಿಯುತ್ತಿದ್ದಳು. ಆಕೆ ಸಿಟ್ಟು ಬಂದು ಗುಡಿಗಿದರೆ ಎಲ್ಲರೂ ಥರಗುಡುತ್ತಿದ್ದರು. ಹಾಗಾಗಿಯೇ ಆಕೆಗೆ 'ಕೋಪಮ್ಮ' ಎಂಬ ಅಡ್ಡಹೆಸರು ಬಿದ್ದಿತೆಂದು ಮನೆಯ ಹಿರಿಯ ಆಳು ಶಿವಪ್ಪ ಹೇಳುತ್ತಿದ್ದ. ಕೋಪಮ್ಮಗೆ ಸಿಟ್ಟು ಹೆಚ್ಚು ಎಂದ ಮಾತ್ರಕ್ಕೆ ಆಕೆ ಕೆಟ್ಟವಳೇನೂ ಇರಲಿಲ್ಲ. ಏನಾದರೂ, ಯಾರಾದರೂ ತಪ್ಪಿ ನಡೆದರೆ ಆಕೆಯಿಂದ ಸಹಿಸುವುದಾಗುತ್ತಿರಲಿಲ್ಲ. ಎಲ್ಲರೂ ಶಿಸ್ತಿನಿಂದ, ಪ್ರಾಮಾಣಿಕತೆಯಿಂದ ನಡೆಯಬೇಕೆಂಬುದು ಆಕೆಯ ಇಚ್ಛೆ. ಅದನ್ನು ತಪ್ಪಿ ನಡೆದವನ ಸ್ಥಿತಿ ಮನೆಯಲ್ಲಿ ದೇವರೇ ಗತಿ. 'ಆಕೆಗೆ ಸಿಟ್ಟು ಹೆಚ್ಚು. ಆದರೆ ಕೆಟ್ಟವಳಿರಲಿಲ್ಲ. ಮಾತಷ್ಟೇ ಒರಟು. ಹೃದಯ ಹೂವಿನ ಹಂದರ. ಅಣ್ಣ ಹಾಗೂ ಅಣ್ಣನ ಸಂಸಾರವೆಂದರೆ ಪಂಚಪ್ರಾಣ. ಸ್ವಂತದ್ದಾದ ಇಷ್ಟ ಗುರಿಗಳು ಇಲ್ಲದ ಆಕೆಗೆ ಅಣ್ಣನ ಮನೆಯ ಅಭಿವೃದ್ಧಿಯೇ ಜೀವನದ ಪರಮಗುರಿಯಾಗಿತ್ತು. ಹಾಗಾಗಿ ಹಗಲಿರುಳೂ ನಿಷ್ಠೆಯಿಂದ ಆ ಗುರಿ ಸಾಧನೆಗಾಗಿ ದುಡಿಯುತ್ತಿದ್ದಳು. ಶಾಂತಯ್ಯನವರ ಶ್ರೀಮಂತಿಕೆಗೆ ಕೋಪಮ್ಮನ ನಿಸ್ಪೃಹತೆಯ ದುಡಿತವೇ ಕಾರಣವೆಂಬ ಮಾತು, ಇಡೀ ಊರಿಗೇ ಗೊತ್ತಿದ್ದ ವಿಷಯ. ಆಸ್ತಿಯಿಂದ ಸಾಕಷ್ಟು ಆದಾಯ ಬರುವಂತೆ, ಬಂದ ಆದಾಯದಲ್ಲಿ ಒಂದು ಪೈಸೆಯೂ ವ್ಯರ್ಥವಾಗದಂತೆ ನೋಡಿಕೊಳ್ಳುವಲ್ಲಿ ಕೋಪಮ್ಮ ಚತುರ ಚಾಣಾಕ್ಷೆ. ಆಕೆಯ ಕಣ್ಣಿಗೆ ಮಣ್ಣೆರಚಲು ಯಾವ ಬಂಧುಗಳಿಗೂ, ಆಳುಕಾಳುಗಳಿಗೂ ಸಾಧ್ಯವಿರಲಿಲ್ಲ. ತನ್ನ ಜೀವನವನ್ನೇ ಅಣ್ಣನ ಸಂಸಾರಕ್ಕಾಗಿ ತೇಯುತ್ತಿದ್ದ ಶ್ರದ್ಧಾಜೀವಿ ಕೋಪಮ್ಮ. ಹೀಗೆ ಸ್ವಂತ ಯಾವ ಸುಖಕ್ಕೆ ಆಸೆ ಪಡದೆ, ತನ್ನ ಶ್ರೇಯಸ್ಸಿಗಾಗಿಯೇ ಜೀವನವನ್ನು ಸವೆಸುತ್ತಿರುವ ತಂಗಿಯ ಬಗ್ಗೆ ಶಾಂತಯ್ಯನವರಿಗೆ ತುಂಬಾ ಪ್ರೀತಿ. ಆಕೆಯ ಕರ್ತವ್ಯ ದಕ್ಷತೆ ಹಾಗೂ, ನೀತಿ ಜೀವನದ ಬಗ್ಗೆ ಅವರಿಗೆ ಬಹಳ ಅಭಿಮಾನ.

ಹತ್ತೊಂಬತ್ತನೆಯ ಶತಮಾನದ ಕೊನೆಯ ಕಾಲವದು. ಆಗಿನ್ನೂ ಈಗಿನಂತೆ ಲೂನಾ, ಸ್ಕೂಟರ್ ಕಾರುಗಳು ಇರಲಿಲ್ಲ. ಅನುಕೂಲಸ್ಥರ ಮನೆಯವರು ದೊಡ್ಡ, ದೊಡ್ಡ ಕುದುರೆಗಳನ್ನೂ, ಕುದುರೆಯ ಗಾಡಿಗಳನ್ನು ಇಟ್ಟುಕೊಳ್ಳುತ್ತಿದ್ದರು. ಸಾಮಾನ್ಯರು ಎತ್ತಿನ ಮೇಲೆ ಅಥವಾ ಎತ್ತಿನ ಬಂಡಿಯಲ್ಲಿ ಪಯಣಿಸುತ್ತಿದ್ದರು. ಕೋಪಮ್ಮ ಸಹ ಹೊಲ-ತೋಟ, ಗದ್ದೆಗಳಿಗೆ ಹೋಗುವಾಗ ಕುದುರೆಯ ಮೇಲೆಯೇ ಹೋಗುತ್ತಿದ್ದಳು. ಸೀರೆಯನ್ನು ಕಚ್ಚೆಯಾಗಿ ಬಿಗಿದು, ನೆಗೆದು ಕುದುರೆಯ ಜೀನಿನ ಮೇಲ ಕುಳಿತು ಆಕೆ ಹೊರಟರೆ, ದಾರಿಯಲ್ಲಿಯ ಜನ ಸರಿದು ನಿಲ್ಲುತ್ತಿದ್ದರು. ಧೈರ್ಯದಲ್ಲಿ, ಪೌರುಷದಲ್ಲಿ, ದಕ್ಷತೆಯಲ್ಲಿ ಆಕೆ ಹೆಣ್ಣಿನಾಕಾರದ ಗಂಡಾಗಿದ್ದಳು. ಅನೇಕ ಗಂಡಸರಿಗೆ ಆಕೆಯಷ್ಟು ಧೈರ್ಯವಿರುವುದಿಲ್ಲವೆಂದರೆ ಅತಿಶಯೋಕ್ತಿ ಏನಲ್ಲ. ಆಕೆ ಯುವ ವಯಸ್ಸಿನಲ್ಲಿ ಒಂಟಿಯಾಗಿ ತೋಟದ ಹಾದಿಯಲ್ಲಿ ಹೋಗುವಾಗಲೂ ಸಹ, ಆಕೆಯನ್ನು ಚೇಷ್ಟೆಗಾಗಿಯಾದರೂ ಕೆಣಕಿ ಮಾತನಾಡಿಸಬಲ್ಲ ಎದೆಗಾರಿಕೆ

ಯಾವ ಗಂಡಸಿಗೂ ಇರಲಿಲ್ಲವೆಂದು ಆ ಪ್ರಾಂತದ ಜನರೆಲ್ಲಾ ಮಾತನಾಡಿಕೊಳ್ಳುತ್ತಿದ್ದರು. ಅಂತಹ ನೀತಿವಂತ ಗಡಸುಗಾತಿಯಾಗಿದ್ದಳಾಕೆ.

ಕೋಪಮ್ಮ ಜಿಪುಣಿಯಲ್ಲದಿದ್ದರೂ ಅತಿಯಾದ ಧಾರಾಳತನ ಆಕೆಗೆ ಸೇರುತ್ತಿರಲಿಲ್ಲ. ಆದರೆ ಅಣ್ಣ ಶಾಂತಯ್ಯ ಅತೀವ ಉದಾರಿ. ದಾನ-ಧರ್ಮದಲ್ಲಿ ಇತ್ತಿದ ಕೈ. ಯಾರಾದರೂ ಬೇಡಲು ಬಂದರೆ, ಹಿಂದೆ-ಮುಂದೆ ಆಲೋಚಿಸದೆ, ಕೈಲಿದ್ದುದನ್ನು ಕೊಟ್ಟುಬಿಡುತ್ತಿದ್ದರು. ಹಾಗಾಗಿ ಎಷ್ಟೋ ಜನ ಸ್ವಾರ್ಥಿಗಳು ಅದರ ದುರುಪಯೋಗಮಾಡಿಕೊಳ್ಳುತ್ತಿದ್ದುದೂ ಉಂಟು. ಕೋಪಮ್ಮನೇ ಇಲ್ಲದಿದ್ದರೆ, ಶಾಂತಯ್ಯನವರು ತಮ್ಮ ಉದಾರಗುಣದಿಂದ ಎಂದೋ ಬರಿಗೈಯ್ಯಾಗುತ್ತಿದ್ದರು. ಈ ಮಾತನ್ನು ರುದ್ರಮ್ಮನವರೇ ಅನೇಕ ಸಾರಿ ಹೇಳುತ್ತಿದ್ದರು. ಮನೆಯಲ್ಲಿ ಕೊಡಗಟ್ಟಲೆ ಹಾಲು ಕರೆಯುತ್ತಿತ್ತು. ಅದರಿಂದ ಬೆಣ್ಣೆ ತೆಗೆದು ಮಾರಾಟ ಮಾಡಬೇಕು. ಉಳಿದ ಮಜ್ಜಿಗೆಯನ್ನು ಬಡಬಗ್ಗರಿಗೆ ಹಂಚಲಿ ಎಂಬುದು ಕೋಪಮ್ಮನ ವ್ಯವಹಾರ ಜಾಣತನ. ನಂಟೂ ರತ್ನ ಎರಡೂ ಉಳಿಯಬೇಕೆಂಬ ಹಂಚಿಕೆ ಆಕೆಯದು. ಮನೆಗೆ ಆದಾಯವೂ ಆಗಬೇಕು. ಬಡಬಗ್ಗರಿಗೆ ಸ್ವಲ್ಪ ಸಹಾಯವೂ ಆಗಬೇಕೆಂಬುದು ಆಕೆಯ ವಿಚಾರ. ಆದರೆ ಶಾಂತಯ್ಯನವರಿಗೆ ಹಾಗಲ್ಲ. "ಎಷ್ಟೊಂದು ಬಡಜನರ ಮಕ್ಕಳು ಹಾಲೇ ಇಲ್ಲದೆ ಬೆಳೆಯುತ್ತಾರೆ. ದೇವರೇನು ನಮಗೆ ಹಾಲು ಮಾರಿ ಬದುಕುವ ಸ್ಥಿತಿಕೊಟ್ಟಿಲ್ಲ. ಬಡಮಕ್ಕಳೂ ಕುಡಿಯಲಿ' ಎಂದಾಗ ಕೋಪಮ್ಮ, "ನಮ್ಮೂರಲ್ಲೆಲ್ಲಾ ಬಡಜನರೇ ಹೆಚ್ಚು. ಅವರಿಗೆಲ್ಲಾ ಕೊಟ್ಟು ಪೂರೈಸಲಾಗುತ್ತಾ? ಹಾಲು ಕುಡಿದುಬಿಟ್ಟರೆ ಅವರ ಬಡತನ ನೀಗುತ್ತಾ" ಎಂದು ಹೇಳುತ್ತಿದ್ದಳು.

ಬಡತನ ನಮಗೆ ನೀಗಿಸಲಾಗದಿದ್ದರೆ ಹೋಗಲಿ. ನಮ್ಮ ಓಣಿಯ ಎಳೆಯ ಮಕ್ಕಳು ದಿನಕ್ಕೊಮ್ಮೆಯಾದರೂ ಒಂದು ಬಟ್ಟಲು ಹಾಲು ಕುಡಿದು ಬೆಳೆಯಲಿ. 'ಅಳಿಲು ಸೇವೆ, ಮಳಲು ಭಕ್ತಿ,' ದೇವರು ನಮಗೆ ಕೊಟ್ಟಿದ್ದರಲ್ಲಿ ಒಂದು ತುತ್ತು ಸುತ್ತಮುತ್ತಲಿನವರೊಡನೆ ಹಂಚಿ ತಿನ್ನಬೇಕು" ಎಂದು ಹೇಳಿ, ಓಣಿಯ ಬಡಜನರೆಲ್ಲಾ ದಿನವೂ ತಮ್ಮ ಮನೆಗೆ ಬಂದು ಹಾಲುತೆಗೆದುಕೊಂಡು ಹೋಗಬೇಕೆಂದು ತಿಳಿಸಿದ್ದರು. ಆದ್ದರಿಂದ ಹಾಲು ಬೇಕಾದವರೆಲ್ಲಾ ದಿನವೂ ಬಟ್ಟಲುಗಳನ್ನು ತಂದು ಅವರ ಮನೆಯ ಮುಂದಿದ್ದ ಹಾಸುಗಲ್ಲಿನ ಮೇಲಿಟ್ಟು ಹೋಗುತ್ತಿದ್ದರು. ಆಳು ಜವರ, ಬೆಳಗಿನ ಒಂಭತ್ತು ಗಂಟೆಗೆ ಹಾಲು ಕರೆದು, ಒಳಗೆಹಾಲಿನ ಕೊಳದಪ್ಪಲೆ ತೆಗೆದುಕೊಂಡು ಹೋಗುವಾಗ ಅಲ್ಲಿದ್ದ ಬಟ್ಟಲುಗಳಿಗೆಲ್ಲಾ ಸುರುವಿ, ಉಳಿದ ಹಾಲನ್ನು ಒಳಗೆ ತೆಗೆದುಕೊಂಡು ಹೋಗುತ್ತಿದ್ದ. ಈ ವ್ಯವಸ್ಥೆ ತಪ್ಪಿಸಬೇಕೆಂಬುದು ಕೋಪಮ್ಮನ ಒಳ ಆಲೋಚನೆ ಆದರೆ ಶಾಂತಯ್ಯನವರ ದೃಢ ನಿರ್ಧಾರದ ಮುಂದೆ ಆಲೋಚನೆ ಫಲಕಾರಿಯಾಗಿರಲಿಲ್ಲ.

ಸುಮಾರಾಗಿ ಶಾಂತಯ್ಯನವರು ಮನೆಯಲ್ಲಿರುತ್ತಿದ್ದುದೇ ಕಡಿಮೆ. ಒಂದಲ್ಲ ಒಂದು ಕೆಲಸಕ್ಕಾಗಿ, ಮೇಲಿಂದ ಮೇಲೆ ಪರೂರಿಗೆ ಹೋಗುತ್ತಿದ್ದರು. ಒಂದು ದಿನ ಹತ್ತಿರದ ಹಳ್ಳಿಯಲ್ಲಿ ಅಡಿಕೆ ಕೆಡವಿಸುವ ಒಂದೆರಡು ದಿನದ ಕೆಲಸವಿತ್ತು. ಶಾಂತಯ್ಯನವೇ ಕುದುರೆಯ ಮೇಲೆ ಹೋದರು. ಈ ಸಮಯ ಸಾಧಿಸಿ ಕೋಪಮ್ಮ, ಬಟ್ಟಲುಗಳಿಗೆ ಹಾಲು ಸುರಿಯದೆ ಎಲ್ಲಾ ಹಾಲನ್ನೂ ಒಳಗೇ ಒಯ್ಯಬೇಕೆಂದು ಜವರನಿಗೆ ಆಜ್ಞಾಪಿಸಿದಳು. ಹೀಗೆ ಮಾಡುವುದು ಯಜಮಾನರಿಗೆ ಒಪ್ಪಿಗೆ ಇಲ್ಲವೆಂದು ಜವರನಿಗೆ ಗೊತ್ತು. ಆದರೆ ಅವರಿಲ್ಲದಾಗ ಕೋಪಮ್ಮನ ಮಾತನ್ನು ಮೀರಲು ಬರುವಂತಿರಲಿಲ್ಲ. ಹಾಗಾಗಿ ತುಟಿ ಎರಡು ಮಾಡದೆ. ಹಾಗೆಯೇ ಮಾಡಿದ. ಓಣಿಯವರೆಲ್ಲಾ ಒಬ್ಬರ ಮುಖ ಒಬ್ಬರು ನೋಡಿಕೊಳ್ಳುತ್ತಾ ಬಟ್ಟಲುಗಳನ್ನು ತೆಗೆದುಕೊಂಡು ಹೋದರು.

ಶಾಂತಯ್ಯನವರ ಕೆಲಸ ಹಳ್ಳಿಯಲ್ಲಿ ಒಂದೇ ದಿನಕ್ಕೆ ಮುಗಿಯಿತು. ಆ ತೋಟದಲ್ಲೇಕೋ ಈ ಸಾರಿ ಫಸಲು ಚೆನ್ನಾಗಿರಲಿಲ್ಲ. ಅಲ್ಲದೆ ಇಬ್ಬರು ಕೊನೆಕಾರರು ಬಂದಿದ್ದರು. ಹಾಗಾಗಿ ಎರಡು ದಿನಗಳಲ್ಲಿ ಕೆಡವಬೇಕಾದ ಅಡಿಕೆಯನ್ನು ಒಂದೇ ದಿನದಲ್ಲಿ ಕೆಡವಿದ್ದರು. ಆದುದರಿಂದ ಮರುದಿನ ಒಂಭತ್ತು ಗಂಟೆಗಾಗಲೇ ಊರಿಗೆ ಬಂದರು. ಅವರ ಕುದುರೆ ಕಾಂಪೌಂಡಿನ ಬಳಿಗೆ ಕಾಲಿಡುವುದಕ್ಕೂ, ತಮ್ಮ ಹೊಲದಲ್ಲಿ ಕೂಲಿಕೆಲಸಕ್ಕೆ ಬರುತ್ತಿದ್ದ. ಕಲ್ಲವ್ವನ ಮಗಳು ಶಾವಂತ್ರಿ ಖಾಲಿ ಬಟ್ಟಲನ್ನು ಹಿಡಿದುಕೊಂಡು ಕಾಂಪೌಂಡು ದಾಟುವುದಕ್ಕೂ ಸರಿಹೋಯಿತು. 'ಇದೇಕೋ ಈ ಹುಡುಗಿ ಬರೀ ಬಟ್ಟಲನ್ನು ಹಿಡಿದುಕೊಂಡು ಹೋಗುತ್ತಿದ್ದಾಳಲ್ಲಾ?' ಎಂದುಕೊಳ್ಳುತ್ತಲೇ ಕುದುರೆಯನ್ನು ಮನೆಯ ಮುಂದೆ ಓಡಿಸಿದಾಗ ಮೊದಲು ಕಣ್ಣಿಗೆ ಬಿದ್ದವನು ಜವರ.

'ಯಾಕೋ ಜವರಾ! ಶಾವಂತ್ರಿ ಖಾಲಿ ಬಟ್ಲು ಹಿಡ್ಕೊಂಡು ಹೋದ್ಲು ಹಾಲ್ಯಾಕೆ ಕೊಡಲಿಲ್ಲ ಎಂದರು ಜವರನಿಗೆ. ಇದ್ದ ವಿಚಾರ ಹೇಳದೆ ವಿಧಿ ಇರಲಿಲ್ಲ. ಏನಾದರೂ ಸುಳ್ಳು ಹೇಳಿದರೆ ಮುಂದೆ ಆಗಬಹುದಾದ ಅನಾಹುತ ನೆನೆದು ಇದ್ದ ವಿಚಾರ ತಿಳಿಸಿಬಿಟ್ಟ. ವಿಚಾರ ತಿಳಿದು ಶಾಂತಯ್ಯನವರ ಕೋಪ ನೆತ್ತಿಗೇರಿತು. ಶಾಂತ ಸ್ವಭಾವದ ಶಾಂತಯ್ಯನವರು ಕೋಪಗೊಳ್ಳುತ್ತಿದ್ದುದು ಬಹು ಅಪರೂಪ. ಸಿಟ್ಟಿನಿಂದ ಮುಖ ಮೆಣಸಿನಕಾಯಿಯಂತಾಯಿತು. ಕುದುರೆಯಿಂದ ಇಳಿದವರೇ ಅಲ್ಲಿದ್ದ ಕೋಲನ್ನು ತೆಗೆದುಕೊಂಡು ತಮ್ಮನ್ನು ತಾವೇ ಹೊಡೆದುಕೊಳ್ಳ ಹತ್ತಿದರು. ಮನೆಯವರೆಲ್ಲಾ ಹೆದರಿ ಕಂಗಾಲಾದರೂ, ಯಾರಿಗೂ ಬಂದು ಬಿಡಿಸಿಕೊಳ್ಳುವ ಧೈರ್ಯವಾಗಲಿಲ್ಲ. ಕೋಪಮ್ಮನಂತೂ ಅಣ್ಣನ ಕಣ್ಣಿಗೇ ಬೀಳದಂತೆ ಒಳಮನೆಯಲ್ಲಿ ಮರೆಯಾಗಿಬಿಟ್ಟಿದ್ದಳು. ಆಗ ರುದ್ರಮ್ಮನೇ ದೊಡ್ಡ

ಸಹಾಸಮಾಡಿ ಮುಂದೆ ಬಂದು, ಕೈಮುಗಿದು, ಕಾಲಿಗೆ ಬಿದ್ದು ಕೈಯ್ಯಲ್ಲಿನ ಕೋಲು ಕಿತ್ತುಕೊಂಡು ಸ್ವಲ್ಪ ಸಮಾಧಾನಕ್ಕೆ ತಂದಳು. ಎಷ್ಟೋ ಹೊತ್ತಿನ ನಂತರ ಸಿಟ್ಟೆಲ್ಲಾ ಇಳಿದ ಮೇಲೆ, 'ಬೋರ ದಿನವೂ ಹಾಲಿಗೆ ಬರುತ್ತಿದ್ದವರೆಲ್ಲರ ಮನೆಗೆ ಹೋಗಿ ನಾಳೆ ದೊಡ್ಡ, ದೊಡ್ಡ ಬಟ್ಟಲು ತರಬೇಕೆಂದು ಹೇಳು' ಎಂದು ಹೇಳಿ ಕಳಿಸಿದರು. ಮರುದಿನ ಬವಳಿಗ್ಗೆ ತಾವೇ ಎದುರಿಗಿದ್ದು ಕರೆದ. ಹಾಲನ್ನೆಲ್ಲಾ ಓಣಿಯವರ ಬಟ್ಟಲುಗಳಿಗೆ ಸುರುವಿಸಿ ಖಾಲಿ ಕೊಳಗವನ್ನು ಒಳಕ್ಕೆ ಕಳುಹಿಸಿದರು. ಆ ದಿನ ಮನೆಯ ಮಕ್ಕಳಿಗೆಲ್ಲಾ, ಹಾಲಿಲ್ಲದೆ ಒಣ, ಒಣ. ಆಗ ತಮ್ಮ ಮುಂದೆ ಹಾದು ಹೋದ ಕೋಪಮ್ಮನಿಗೆ ಕೇಳಿಸಲೆಂದೇ, 'ಮಕ್ಕಳಿಗೆ ಹಾಲಿಲ್ಲದಿದ್ದರೆ ಏನಾಗುತ್ತದೆ ಎಂಬುದು ಅರ್ಥವಾಗಲಿ' ಎಂದು ತಮ್ಮಷ್ಟಕ್ಕೇ ತಾವೇ ಹೇಳಿಕೊಂಡರು. ಆಗ ಕೋಪಮ್ಮನಿಗೆ, 'ಹಾಗಾದರೆ ಪ್ರಪಂಚದಲ್ಲಿರೋ ಮಕ್ಕಳಿಗೆಲ್ಲಾ ಬಟ್ಟೆ, ಹೊಟ್ಟೆ ತುಂಬಾ ಅನ್ನದ ವ್ಯವಸ್ಥೆ ಮಾಡಿ' ಎಂಬ ಮಾತು ತುಟಿಯ ತನಕ ಬಂದರೂ, ಹೊರಗೆ ಹೇಳಲು ಧೈರ್ಯವಾಗದೇ ಸುಮ್ಮನೆ ಹೋದಳು.

ಮೆಚ್ಚೋಲ್ಲ. ದಾನಾ ಮಾಡಿದ್ರೂ ಕೀರ್ತಿ ಬರ್ಲೀಂತ ಮಾಡ್ಬಾರ್ದು. ಎಡಗೈಲಿ ದಾನಮಾಡಿದ್ದು ಬಲಗೈಗೆ ಗೊತ್ತಾಗಬಾರ್ದು. ಬಲಗೈಲಿ ದಾನಮಾಡಿದ್ದು ಎಡಗೈಗೆ ತಿಳಿಬಾರ್ದು. ಅದು ನಿಜವಾದ ದಾನ' ಎಂದು ವಿವೇಕ ಹೇಳುತ್ತಿದ್ದರು. ತಂದೆಯ ಬುದ್ಧಿವಾದದ ಮಾತುಗಳನ್ನು ಲಿಂಗಯ್ಯ ಬಾಲ್ಯದಿಂದಲೇ ಅರಿತು ತನ್ನಲ್ಲಿ ಅಳವಡಿಸಿಕೊಂಡಿದ್ದ. ತಾನು ಶಾಲೆಗೆ ಹೋಗುವ ವಯಸ್ಸಿನಲ್ಲಿಯೇ ಅನೇಕ ಬಡ ಹುಡುಗರ ಗೆಳೆತನ ಮಾಡಿಕೊಂಡಿದ್ದ. ಅವರಿಗೆ ಬೇಕಾದ ಪುಸ್ತಕ, ಲೆಕ್ಕಣಿ, ಮಸಿದೌತಿ, ಬಟ್ಟೆ-ಬರೆ, ಫೀಸು ಎಲ್ಲದಕ್ಕೂ ಸಹಾಯ ಮಾಡುತ್ತಿದ್ದ. ಇದನ್ನು ಗಮನಿಸಿದ ಶಾಂತಯ್ಯನವರಿಗೆ ಒಳಗೊಳಗೇ ಖುಷಿ. ಅಪ್ರತ್ಯಕ್ಷವಾಗಿ, ಮಗನ ಈ ಗುಣಗಳನ್ನು ಪ್ರೋತ್ಸಾಹಿಸುತ್ತಿದ್ದರು. ಹೀಗಾಗಿ ಲಿಂಗಯ್ಯ ಉದಾರತೆಯೇ ಮೂರ್ತಿವೆತ್ತಂತೆ ರೂಪುಗೊಂಡ. ಆದರೆ ಕೋಪಮ್ಮನಿಗೆ ಇದನ್ನೆಲ್ಲಾ ನೋಡಿದರೆ ಕೋಪ, ಆತಂಕ. 'ಮನುಷ್ಯ ಬರೀ ಧಾರಾಳತವನ್ನು ಬೆಳೆಸಿಕೊಂಡರೆ ಸಾಲದು. ದುಡಿಮೆ ಇದ್ದ ಕಾಲದಲ್ಲಿ ನಾಲ್ಕು ಕಾಸನ್ನು ಆಪತ್ಕಾಲಕ್ಕೆಂದು ಹಿಂದಕ್ಕೆ ಹಾಕುತ್ತಿರಬೇಕು. ಸುಖದ ಕಾಲದಲ್ಲಿ ಸುತ್ತ ಮುತ್ತ ಓಡಾಡುವ ಜನ, ಆಪತ್ಕಾಲದಲ್ಲಿ ದೂರ ಸರಿಯುತ್ತಾರೆ. ದೇವರು ಕೊಟ್ಟ ಕಾಲಕ್ಕೆ ದಾನ ಮಾಡುವುದು ಒಳ್ಳೆಯ ಗುಣವಾದರೂ, ದಾನ ಕೊಡುವಂತಹ ಸ್ಥಿತಿ ಇರುವಂತೆ ನೋಡಿಕೊಳ್ಳಬೇಕಾದುದೂ ಅವಶ್ಯ ಎಂಬುದು ಕೋಪಮ್ಮನ ವಿಚಾರ. ಅದಕ್ಕಾಗಿ ಆಕೆ ಲಿಂಗಯ್ಯನ ಸ್ವಭಾವದ ಬಗ್ಗೆ ಮಾತು ಬಂದಾಗ.'

'ಅಣ್ಣನ ಮಾತು ಬೇರೆ. ಆತನೆಷ್ಟೇ ಉದಾರಿಯಾದರೂ ಒಂದು ಕಡೆ

ಸೋರಿ ಹೋದರೆ ಮತ್ತೊಂದು ಕಡೆ ಗಂಟು ಮಾಡಲು ನಾನಿದ್ದೇನೆ. ಆದರೆ ಲಿಮಗಯ್ಯನ ಮಾತು ಹಾಗಲ್ಲ. ಅವನ ಅಕ್ಕ-ತಂಗಿಯರು ಮೂವರಿದ್ದರೂ ಅವರೆಲ್ಲಾ ಗಂಡನ ಮನೆ ಸೇರಿದ್ದಾರೆ. ವರ್ಷಕ್ಕೆ ಒಂದೆರಡು ಬಾರಿ ಬಂದು ತವರಿನಲ್ಲಿ ಉಂಡುಟ್ಟು ಸುಖಪಟ್ಟು ಮತ್ತುಷ್ಟು ಇಲ್ಲಿಂದಲೇ ಕಟ್ಟಿಕೊಂಡು ಹೋಗುವವರು' ಎಂದು ಕೋಪಮ್ಮ ಒಳಗೇ ಚಿಂತಿಸುತ್ತಿದ್ದಳು. ಅವನಿಗೆ ಮನೆಯ ಕೆಲಸದ ಜವಾಬ್ದಾರಿಯ ಅರಿವುಂಟು ಮಾಡಬೇಕೆಂದು ಒಮ್ಮೊಮ್ಮೆ 'ಲಿಂಗಣ್ಣಾ ಈ ದಿನ ಕೆರೆಹಿಂದಿನ ತೋಟಕ್ಕೆ ಹೋಗೋಣ ಬಾ. ಈ ಬಾರಿ ಅಡಿಕೆ ಫಸಲು ತುಂಬಾ ಬಿಟ್ಟಿದೆ. ಒಂದೊಂದು ಮರದಲ್ಲಿ ಮೂರು ನಾಲ್ಕು ಗೊನೆಗಳು ತೊನೆದಾಡುತ್ತಿವೆ. ಹೋದ ಬೇಸಗೆಯಲ್ಲಿ ಅಗ್ತೆ ಕಡಿಸಿ, ಗಬ್ಡು ಹೇರಿಸಿದ್ದೆ. ಪ್ರತಿ ಗಿಡಕ್ಕೂ ಎಲೆಬಳ್ಳಿ ಹಾಕ್ಸಿದ್ದೀನಿ. ಹಂಗಾಗಿ ರೈತರೂ ಮರಕ್ಕೆ ಗೊಬ್ಬರ ಚೆನ್ನಾಗಿ ಕೊಟ್ಟಿದ್ದಾರೆ' ಎಂದು ಕರೆದು ಕುದುರೆಯ ಮೇಲೆ ಕೂರಿಸಿಕೊಂಡು ತೋಟಕ್ಕೆ ಕರೆದುಕೊಂಡು ಹೋಗುತ್ತಿದ್ದಳು. ಆದರೆ ಲಿಂಗಯ್ಯಗೆ ಈ ಕೆಲಸಕ್ಕಿಂತ ತಂದೆಯ ಜೊತೆಗೆ ಹೋಗಿ ತಂದೆ ನಿರ್ವಹಿಸುವುದನ್ನು ನೋಡುವುದೇ ಬಹಳ ಇಷ್ಟವಾಗುತ್ತಿತ್ತು. ಅಲ್ಲೆಲ್ಲಾ ಜನರು ತಂದೆಯನ್ನು ದೇವರೆಂಬಷ್ಟು ಪ್ರೀತ್ಯಾದರಗಳಿಂದ ಕಾಣುವುದು, ಬಡವರ ಕಷ್ಟ ನಿವಾರಣೆಗಾಗಿ ಅವರು ಸಂತೋಷಗೊಳ್ಳುವುದು, ಅವರಿಗೆ ಸಹಾಯ ಒದಗಿದಾಗ ಅವರು ಹಿಗ್ಗುವುದನ್ನು ನೋಡುತ್ತಿದ್ದ. ಮಾಡಿದವರಿಗೆ ತಕ್ಷಣದ ಪ್ರತಿಫಲ ಅನುಭವಿಸಲು ಸಿಕ್ಕುತ್ತಿತ್ತು. ಇದನ್ನು ನೋಡಿದ ಲಿಂಗಯ್ಯ ತಾನು ಹೀಗೆಯೇ ಮಾಡಬೇಕೆಂದುಕೊಳ್ಳುತ್ತಿದ್ದ. ಇವನ ಒಲವು ನೋಡಿ, ಕೋಪಮ್ಮಗೆ ಮತೆತನಕ್ಕಿದ್ದ ಅಣ್ಣನ ಒಬ್ಬನೇ ಒಬ್ಬ ಮಗನ ಭವಿಷ್ಯದ ಬಗ್ಗೆ ಚಿಂತೆಯಾಗುತ್ತಿತ್ತು. ಆದರೆ ಅಸಾಹಯಕಳಾಗಿ ಸುಮ್ಮನಾಗುತ್ತಿದ್ದಳು. ಕೊನೆಗೆ ಒಬ್ಬ ದಕ್ಷಳೂ, ಚತುರೆಯೂ ಆದ ಹೆಂಡತಿಯನ್ನಾದರೂ ಸರಿಯಾಗಿ ವಿಚಾರಿಸಿ ನೋಡಿ ಮಾಡಬೇಕೆಂದುಕೊಂಡಳು.

ಲಿಂಗಯ್ಯನ ಮದುವೆಯ ಮಾತು ಬಂದಾಗ ರುದ್ರಮ್ಮ ತನ್ನ ಹಿರಿಯ ಮಗಳ ಮಗಳನ್ನು ತರಬೇಕೆಂದು ಅಪೇಕ್ಷಿಸಿದಳು. ಮಗಳೂ ಸಹ ತನ್ನ ತವರಿನ ಸಂಬಂಧ ಉಳಿಸಿಕೊಳ್ಳಬೇಕೆಂದು ಅಪ್ಪನಿಗೆ ಗಂಟೇ ಬಿದ್ದಳು. ಗೌರಿಯನ್ನು ಕೋಪಮ್ಮ ಚೆನ್ನಾಗಿ ಬಲ್ಲಳು. ಇಲ್ಲಿ ಆಕೆ ನಆಲ್ಕು ಜನ ಅಣ್ಣ-ತಮ್ಮಂದಿರಿಗೆ ಒಬ್ಬಳೇ ಒಬ್ಬ ಮಗಳಾಗಿದ್ದಳು. ಎಲ್ಲರಿಗೂ ಬರೀಗಂಡು ಮಕ್ಕಳೇ. ಗೌರಿಯ ತಂದೆಗೆ ಮಾತ್ರ ನಾಲ್ಕು ಜನ ಗಂಡುಮಕ್ಕಳ ನಂತರ ಏಕಮಾತ್ರ ಪುತ್ರಿಯಾಗಿ ಹುಟ್ಟಿ ಎಲ್ಲರ ಕಣ್ಮಣಿಯಾಗಿದ್ದಳು. ಹೀಗೆ ಅಪ್ಪ, ಚಿಕ್ಕಪ್ಪ, ದೊಡ್ಡಪ್ಪ ಇವರುಗಳ ಅತೀ ಮುದ್ದಿನ ಮಗಳಾದ ಇವಳು ಈ ಮನೆಯ ಏಕಮಾತ್ರ ಸೊಸೆಯಾಗಿ

ಬಂದರೆ ಸಮಾಜದ ಕೆಲಸದ ಆಸಕ್ತಿಯುಳ್ಳ ಗಂಡನನ್ನು ಕೌಟುಂಬಿಕ ಜವಾಬ್ದಾರಿಗಳ ಕಡೆ ಗಮನ ಹರಿಸುವಂತೆ ಮಾಡಲು ಶಕ್ತಳಾಗುವುದಿಲ್ಲ ಎಂದು ಅರಿತಿದ್ದಳು ಕೋಪಮ್ಮ. ಮನೆಯ ಹೆಣ್ಣು ಮಗಳ ಮಗಳೆ ಸೊಸೆಯಾಗಿ ಬರಲೆಂಬ ಆಸೆಯಿದ್ದರೂ ತನ್ನ ಅಣ್ಣನ ಮನೆತನದ ಅಭಿವೃದ್ಧಿಯ ದೃಷ್ಟಿಯಿಂದ ಈ ಸಂಬಂಧ ಸರಿಯಾಗುವುದಿಲ್ಲವೆಂಬುದು ಕೋಪಮ್ಮನ ಎಣಿಕೆ. ಆದರೆ ಎಲ್ಲರ ಮನಸ್ಸು ಗೌರಿಯಂತೆ ಸುಲ್ಲಕ್ಷಣವೆಂತೆಯಾದ ಗೌರಿಯನ್ನೇ ತರಲು ನಿಶ್ಚಯಿಸಿರುವಾಗ ತಾನು ಒಡಕು ಧ್ವನಿ ತೆಗೆಯುವುದು ಸರಿಯಲ್ಲವೆಂದು ಸುಮ್ಮನಾಗಿಬಿಟ್ಟಳು. ಹಾಗಾಗಿ ಗೌರಿ ಲಿಂಗಯ್ಯನ ಮನೆಯನ್ನು, ಮನವನ್ನು ತುಂಬಿದಳು. ವರ್ಷಗಳುರುಳಿದವು. ಕೋಪಮ್ಮನಿಗೂ ವಯಸ್ಸಾಯಿತು. ಆದರೂ ತನ್ನ ಕೈಲಾದಷ್ಟು ದುಡಿಯುವದನ್ನು ಮಾತ್ರ ನಿಲ್ಲಿಸಲಿಲ್ಲವಾಗಿ ಎಷ್ಟೇ ಧಾರಾಳತನ ಮಾಡಿದರೂ ಮನೆ ಎಂದಿನಂತೆ ನಡೆಯುತ್ತಿತ್ತು. ಆ ಊರಿಗೆ ಪ್ರತಿ ವರ್ಷ ಪ್ಲೇಗ್ ರೋಗ ಬರುತ್ತಿತ್ತು. ಆಗ ಇಡೀ ಊರಿನವರೆಲ್ಲಾ ಊರು ಬಿಟ್ಟು ಒಂದೆರಡು ತಿಂಗಳು ಊರನ್ನೇ ಖಾಲಿಮಾಡಿ ಊರ ಹೊರಗೆ ಕ್ಯಾಂಪ್ ಹಾಕಿಕೊಂಡು ವಾಸಿಸುತ್ತಿದ್ದು, ರೋಗ ಕಡಿಮೆಯಾದ ಮೇಲೆ ಹಿಂತಿರುಗಿ ಬರುತ್ತಿದ್ದರು. ಹಾಗೊಂದು ವರ್ಷ ಊರಿಗೆ ಪ್ಲೇಗ್ ಬಂದಾಗ ಕೋಪಮ್ಮ ಆ ರೋಗಕ್ಕೆ ಬಲಿಯಾದಳು. ಆಗ ಶಾಂತಯ್ಯನವರು, ಮನೆಯ ಕಾರುಭಾರ ಹಾಗೂ ಲೆಕ್ಕಪತ್ರ ನೋಡಿಕೊಳ್ಳಲು ಒಬ್ಬ ಕರಣಿಕರನ್ನು ಗೊತ್ತುಮಾಡಿಕೊಂಡರು. ಅವರು ದಿನವೂ ನಿಗದಿತ ವೇಳೆಗೆ ಬಂದು ಹೇಳಿದ ಕೆಲಸವನ್ನು ಮಾಡಿ ಹೋಗುತ್ತಿದ್ದರು. ನಿಷ್ಠೆಯಿಂದ ಕೆಲಸ ಮಾಡುತ್ತಿದ್ದರಾದರೂ ಕೋಪಮ್ಮನ ಕೆಲಸದ ಒಂದಂಶಕ್ಕೂ ಹತ್ತುತ್ತಿರಲಿಲ್ಲ. ಆಕೆ ಮನೆಗೆ ತನ್ನನ್ನೇ ಅರ್ಪಿಸಿಕೊಂಡು ದುಡಿಯುತ್ತಿದ್ದಳು. ಮೊದಲಿನಿಂದಲೂ ಎಲ್ಲವನ್ನೂ ನಿರ್ವಹಿಸಿಕೊಂಡು ಬಂದ ಆಕೆಗೆ ಎಲ್ಲಿ ಏನು ಹೇಗೆ ಏಕೆ ಎಂಬುದೆಲ್ಲಾ ಥಟ್ಟನೆ ಗೋಚರವಾಗಿಬಿಡುತ್ತಿತ್ತು. ಶಾಂತಯ್ಯನವರಿಗೆ ಯಾವುದರ ಹಿಡಿತವೂ ಇದ್ದಿಲ್ಲ. ಕರಣಿಕರಿಗೆ ಸಮಗ್ರ ಕಲ್ಪನೆಯೂ ಇರಲಿಲ್ಲ. ಜೊತೆಗೆ ಸಮಯಕ್ಕೆ ಸರಿಯಾಗಿ ಕೈಲಾದಷ್ಟು ಕೆಲಸವನ್ನು ಮಾಡಿಹೋಗುವ ಸ್ವಭಾವ. ಧಣಿಗೆ ಲಾಭ-ನಷ್ಟವಾಗುವುದರ ಕಲ್ಪನೆ ಅವರಿಗಿರಲಿಲ್ಲ.

ಒಮ್ಮೆ ವ್ಯಾಪಾರದಲ್ಲಿ ಭಾರೀ ಪೆಟ್ಟುಬಿದ್ದಿತು. ಸಕಾಲಕ್ಕೆ ಕೆಲಸಮಾಡಿಸದೆ ಇದ್ದುದರಿಂದ ಹೊಲ-ಗದ್ದೆಗಳ ಉತ್ಪನ್ನವೂ ಕಡಿಮೆಯಾಗಿತ್ತು. ಅಡಿಕೆ ತೆಂಗಿನ ತೋಟಕ್ಕೆ ಸರಿಯಾಗಿ ಗೊಬ್ಬರ-ಗೋಡಿನ ವ್ಯವಸ್ಥೆಯಾಗದೆ, ಅಗತೆ ಕಡಿಸದೆ ಫಲಸೂ ಸಹ ಆ ವರ್ಷ ಬಹಳ ಕಡಿಮೆಯಾಗಿತ್ತು. ಹೀಗಾಗಿ ಅಸಾಮಿಯಿಂದ, ವ್ಯಾಪಾರಕ್ಕಾಗಿ ತಂದೆ ಹಣ ಮುಟ್ಟಿಸುವುದೇ ದುಸ್ತರವಾಯ್ತು. ಇದುವರೆಗೂ ಶಾಂತಯ್ಯನವರಿಗೆ ಹಣದ ಕೊರತೆಯೇ ಗೊತ್ತಿರಲಿಲ್ಲ. ಕೊಡುವವರಿಗೆ ಮಾತಿಗೆ

ಸರಿಯಾಗಿ ಹೇಳಿ ಟೈಂಗೆ ಹಣ ಕೊಟ್ಟುಬಿಡುತ್ತಿದ್ದರು. ಈ ಸಾರಿ ಮಾತಿಗೆ ತಪ್ಪುವಂತಹ ಸ್ಥಿತಿ ಬಂದು ಮನಸ್ಸಿಗೆ ಬಹಳ ಕಷ್ಟವಾಗಿತ್ತು. ಆಸ್ತಿಯನ್ನು ಒತ್ತೆ ಇಟ್ಟು ಹಣ ತೆಗೆಯಲಿಕ್ಕೆ ಮನೆತನದ ಗಔರವದ ಪ್ರಶ್ನೆ ಮುಂದೆ ಬರುತ್ತಿತ್ತು. ಇಷ್ಟು ದೊಡ್ಡದಾಗಿ ಬಾಳಿದ ತಾವು ಸಮಾಜದಲ್ಲಿ ನಗೆಪಾಟಲಿಗೆ ಗುರಿಯಾಗಬೇಕಾದಿತೆಂಬ ಅಂಜಿಕೆ ಬೇರೆ. ಹೀಗಾಗಿ ಹಗಲಿರುಳೂ ಚಿಂತಿಸುತ್ತಿದ್ದರು. ಊಟ ಸರಿಯಾಗಿ ಹೋಗುತ್ತಿರಲಿಲ್ಲ. ನಿದ್ದೆ ಮಾಡುತ್ತಿರಲಿಲ್ಲ. ಇದನ್ನೆಲ್ಲಾ ಗಮನಿಸಿದ ರುದ್ರಮ್ಮನಿಗೆ ಗಂಡ ಯಾವುದೋ ಗಂಡಾಂತರಕ್ಕೆ ಗುರಿಯಾಗಿದ್ದಾರೆಂದು ತಿಳಿದುಹೋಯ್ತು. ಆದರೆ ಆಕೆಗೆ ಕೇಳುವ ಧೈರ್ಯವಿರಲಿಲ್ಲ. ಶಾಂತಯ್ಯನವರು ಯಾವ ವಿಷಯವನ್ನು ಎಂದೂ ಹೆಂಡತಿಯೊಡನೆ ಮಾತನಾಡಿದವರಲ್ಲ. ಆಕೆಯೊಡನೆ ಕುಟುಂಬದ ಸುಖ-ದುಃಖಗಳನ್ನು ಹಂಚಿಕೊಂಡು ಮಾತನಾಡುವುದೂ ಗೊತ್ತಿರಲಿಲ್ಲ. ಈಕೆಯೂ ಎಂದೂ 'ಇದು ಏಕೆ' ಎಂದು ಪ್ರಶ್ನಿಸಿದವಳಲ್ಲ. ಕೋಪಮ್ಮನ ಯಜಮಾನಿಕೆಯಲ್ಲಿ ಎಲ್ಲವೂ ಸುಗಮವಾಗಿ ನಡೆದುಕೊಂಡು ಹೋಗುತ್ತಿತ್ತಾಗಿ ಎಲ್ಲರೂ ತಿಂದುಂಡುಕೊಂಡು ಸುಖವಾಗಿದ್ದರು. ಈಗ ರುದ್ರಮ್ಮನಿಗೆ ಪರಿಸ್ಥಿತಿಯಲ್ಲಿ ಬದಲಾವಣೆ ಢಾಳವಾಗಿ ಗೋಚರಿಸಿತು ಎಂದೂ ಗಂಡನನ್ನು ಏನನ್ನೂ ಕೇಳದ ಆಕೆಗೆ ಇಂದು 'ಹೀಗೇಕೆ' ಎಂದು ಕೇಳುವ ಧೈರ್ಯವಾಗಲಿಲ್ಲ. ಆದರೂ ಗಂಡನ ಚಿಂತೆಗೆ ಕಾರಣ ತಿಳಿದುಕೊಳ್ಳಲೇಬೇಕೆನ್ನಿಸಿ ಕರಣಿಕರನ್ನು ಕರೆದು ಗುಪ್ತವಾಗಿ ಕೇಳಿದಳು. ಆಗ ಪರಿಸ್ಥಿತಿಯ ಅರಿವಾಯ್ತು. ಮಧ್ಯಾಹ್ನ ಗಂಡ ಊಟಕ್ಕೆ ಬಂದಾಗ ರುದ್ರಮ್ಮ ಊಟಕ್ಕೆ ಬಡಿಸಿ, ಊಟವಾದ ನಂತರ ಎಲೆ-ಅಡಿಕೆ ಕೊಟ್ಟು ನಂತರ ಒಂದು ರೇಷ್ಮೆಯ ಬಟ್ಟೆಯ ಗಂಟನ್ನೂ ಕೊಟ್ಟಳು. ಆಗ ಶಾಂತಯ್ಯನವರು ಅತೀವ ಕುತೂಹಲದಿಂದ ಬಿಚ್ಚಿ ನೋಡಿದರೆ ಗಂಟಿನ ತುಂಬಾಗ ಜಗ ಜಗಿಸುವ ಒಡವೆ ವಸ್ತುಗಳು ತುಂಬಿದ್ದವು. ಆಶ್ಚರ್ಯದಿಂದ ಶಾಂತಯ್ಯ, ಇದೇಕೆಂದು ಪ್ರಶ್ನಿಸಿದರು. ಆಗ ರುದ್ರಮ್ಮ 'ನೀವು ಕಣ್ಣಿಗೆ ನಿದ್ದೆ ಇಲ್ಲದೆ ಊಟ ಸಹ ಸರಿಯಾಗಿ ಮಾಡದೆ ಚಿಂತೆಯಿಂದ ಒದ್ದಾಡುತ್ತಿರುವಾಗ ನಾನು ಈ ಒಡವೆಗಳನ್ನು ಹಾಕಿಕೊಂಡು ಯಾವ ಸಂತೋಷ ಪಡಲಿ ಇವುಗಳನ್ನು ಮಾರಿ ನಿಮ್ಮ ಹಣದ ತೊಂದರೆಯನ್ನು ನಿವಾರಿಕೊಳ್ಳಿ' ಎಂದಳು. ಆಗ ಶಾಂತಯ್ಯನವರು 'ಹೆಂಡತಿಯ ಮೈಮೇಲಿನ ಒಡವೆ ಮಾರಿ ಮರ್ಯಾದೆ ಉಳಿಸಿಕೊಳ್ಳುವ ಸ್ಥಿತಿ ಬಂದಿತೆ' ಎಂದು ಕಣ್ಣೀರು ಹಾಕಿದರು. ಆದರೆ ಸದ್ಗೃಹಿಣಿಯಾದ ರುದ್ರಮ್ಮ 'ನೀವು ದುಃಖಪಡುವ ಕಾರಣವಿಲ್ಲ. ನನಗೆ ಒಡವೆಗಿಂತ ನಿಮ್ಮ ಸಂತೋಷ, ಗೌರವ ಮುಖ್ಯ. ನಿಮಗೆ ಅನುಕೂಲವಾದ ತಕ್ಷಣ ಪುನಃ ಮಾಡಿಸಿಕೊಡುವಿರಂತೆ. ಮೊದಲು ಇವುಗಳನ್ನು ತೆಗೆದುಕೊಂಡು ಹೋಗಿ ನಿಮ್ಮ ಸಮಸ್ಯೆ ಬಗೆಹರಿಸಿಕೊಂಡು ಬಂದು ರಾತ್ರಿ ಕಣ್ತುಂಬಾ ನಿದ್ದೆಮಾಡಿ' ಎಂದಳು. ಹೆಂಡತಿಯ ಉದಾರ ಹೃದಯದಿಂದ ಶಾಂತಯ್ಯನವರ ಹೃದಯ

ತುಂಬಿ ಬಂದಿತು. ಕೋಪಮ್ಮ ಹೇಳುತ್ತಿದ್ದ ಎಚ್ಚರಿಕೆಯ ಮಾತುಗಳು ನೆನಪಿಗೆ ಬಂದು 'ಅವಳ ಸಲಹೆಗೆ ಸ್ವಲ್ಪವಾದರೂ ಬೆಲೆ ಕೊಟ್ಟಿದ್ದರೆ ಇಂದು ಈ ಸ್ಥಿತಿ ಬರುತ್ತಿರಲಿಲ್ಲ ಎಂದುಕೊಂಡರು.

ಆಗಿನ ಕಷ್ಟವೇನೊ ಮುಗಿಯಿತು. ಆದರೆ ಆರ್ಥಿಕ ಪರಿಸ್ಥಿತಿ ಮೊದಲಿನಂತೆ ಸುಧಾರಿಸಲೇ ಇಲ್ಲ. ಹೆಂಡತಿಗೆ ಪುನಃ ಒಡವೆ ಮಾಡಿಸಲೂ ಆಗಲಿಲ್ಲ. ಒಳಗೇಕೊರಗುತ್ತಾ ಒಂದು ದಿನ ಶಾಂತಯ್ಯನವರು ಕೊನೆಯುಸಿರೆಳೆದರು. ಇವರ ಅಗಲಿಕೆ ರುದ್ರಮ್ಮನನ್ನು ಜರ್ಝರಿತಳನ್ನಾಗಿ ಮಾಡಿತು. ಮರುವರ್ಷವೇ ರುದ್ರಮ್ಮನೂ ಗಂಡನ ದಾರಿ ಹಿಡಿದಳು. ಈಗ ಲಿಂಗಯ್ಯ ಹಾಗೂ ಗೌರಿಯದೇ ಎಲ್ಲಾ ಜವಾಬ್ದಾರಿಯಾಯಿತು. ಲಿಂಗಯ್ಯ ತಂದೆಯಿಂದ ಉದಾರತೆಯನ್ನು ಸಂಪೂರ್ಣ ಮೈಗೂಡಿಸಿಕೊಂಡಿದ್ದ. ಸಾರ್ವಜನಿಕ ಕೆಲಸ ಮಾಡುವುದೆಂದರೆ ಅವನಿಗೆ ಎಲ್ಲಿಲ್ಲದ ಹುರುಪು. ಹಾಗಾಗಿ ಜನರು ಅವನನ್ನು ಹುರುಪಿಗೆಬ್ಬಿಸಿ ತಮ್ಮೆಲ್ಲಾ ಕೆಲಸ ತೂಗಿಸಿಕೊಳ್ಳುತ್ತಿದ್ದರು. ಸಾರ್ವಜನಿಕರಿಗಾಗಿ ಮನೆಯನ್ನು ನಿರ್ಲಕ್ಷಿಸಿ ಹಗಲಿರುಳೂ ದುಡಿಯುತ್ತಿದ್ದ ಇವನನ್ನು ನೋಡಿ ಎಲ್ಲಾ ಕವಎಲಸಕ್ಕೂ ಇವನನ್ನೇ ಮುಂದೆ ನಿಲ್ಲಿಸುತ್ತಿದ್ದರು. ಮುನಿಸಿಪಾಲಿಟಿ ಎಲೆಕ್ಷನ್‌ಗೆ ನಿಲ್ಲಿಸಿ ಆರಿಸಿ ತಂದು ಇವನನ್ನೇ ಪ್ರೆಸಿಡೆಂಟ್ ಮಾಡಿದರು. ಮೈಸೂರು ರಾಜ್ಯದ ಅಸೆಂಬ್ಲಿಗೆ ಹುರಿದುಂಬಿಸಿ ನಿಲ್ಲಿಸುತ್ತಿದ್ದರು. ಜನಾನುರಾಗಿಯಾಗಿದ್ದ, ಹೇಗೆಂದರೆ ಹಾಗೆ ಹಣ ಖರ್ಚುಮಾಡುತ್ತಿದ್ದ ಅವನನ್ನೇ ಪ್ರತಿ ಸಾರಿ ಎಲೆಕ್ಷನ್‌ನಲ್ಲೂ ಗೆಲ್ಲಿಸುತ್ತಿದ್ದರು. ಡಿಸ್ಟ್ರಿಕ್ಟ್ ಬೋರ್ಡ್‌ನ ಸದಸ್ಯನನ್ನಾಗಿ ಮಾಡಿದರು. ಸ್ಕೂಲ್‌ಬೋರ್ಡ್ ಮೆಂಬರಾಗಿ ಆರಿಸಿದರು. ಹೀಗೆ ಹಲವು ಹದಿನೆಂಟು ಸ್ಥಾನಗಳನ್ನು ವಹಿಸಿಕೊಂಡು ದಿನವೂ ಒಂದಲ್ಲ ಒಂದು ಕೆಲಸಕ್ಕಾಗಿ ಇಡೀ ದಿನ ಮನೆಯಿಂದ ದೂರವಿರಬೇಕಾಗುತ್ತಿತ್ತು. ರಾತ್ರಿ ಮಲಗಿದಾಗಲೇ ದೇಹಕ್ಕೆ ವಿಶ್ರಾಂತಿ. ಗೌರಿಗಾದರೂ ತಮ್ಮ ಮನೆಯ ಆದಾಯವೆಷ್ಟು ಖರ್ಚೆಷ್ಟು ಎಂಬುದನ್ನು ಯೋಚಿಸಿಯೇ ಗೊತ್ತಿರಲಿಲ್ಲ. ಹಣಕ್ಕಾಗಿ ಲೆಕ್ಕ ಹಾಕುವುದನ್ನು ಅವಳು ಕಂಡಿರಲೂ ಇಲ್ಲ, ಕೇಳಿರಲೂ ಇಲ್ಲ. ಅಂತಹದು ಬೇಕೆಂದು ಹೇಳುವುದು ಅದನ್ನು ತರಿಸಿಕೊಳ್ಳುವುದು ಇಷ್ಟೇ ಗೊತ್ತಿದ್ದುದು ಆಕೆಗೆ. ಮನೆಯ ಕರಣಿಕರಿಗೆ ಹೇಳಿ ಎಷ್ಟು ಬೇಕೋ ಅಷ್ಟು ದುಡ್ಡನ್ನು ತರಿಸಿಕೊಂಡು ಖರ್ಚುಮಾಡುತ್ತಿದ್ದಳು. ಕರಣಿಕರು ಹಣವಿಲ್ಲದ ವಿಚಾರವನ್ನು ಲಿಂಗಯ್ಯಗೆ ಹೇಳಿದಾಗ ಆಸ್ತಿ ಒತ್ತೆ ಇಟ್ಟು ಹಣ ತರಿಸುತ್ತಿದ್ದ. ಶಾಂತಯ್ಯನವರು ಉತ್ತಮ ದರ್ಜೆಯ ಆಸ್ತಿಮಾಡಿದ್ದರು. ಊರಿನ ಅನೇಕರಿಗೆ ಈ ಆಸ್ತಿಯ ಮೇಲೆ ಕಣ್ಣಿತ್ತು. ಈಗ ಲಿಂಗಯ್ಯ ಹಣಬೇಕಾದಾಗ ಹಣವಿದ್ದ ಮಂದಿ ನಾ ಮುಂದು ತಾ ಮುಂದೆಂದು ಸಾಲಕೊಡುತ್ತಿದ್ದರು. ಇಷ್ಟಾದರೂ ಲಿಂಗಯ್ಯನಾಗಲೀ ಗೌರಿಯಾಗಲೀ ತಾವು ಹಣ ಖರ್ಚು ಮಾಡುವ ವಿಧಾನದಲ್ಲಿ

ಯಾವ ಬದಲಾವಣೆಯನ್ನೂ ಮಾಡಿಕೊಳ್ಳಲಿಲ್ಲ. ಜಮೀನು ಒಂದೊಂದಾಗಿ ಕೈ ಬಿಡಹತ್ತಿದವು. ಆದರೆ ಲಿಂಗಯ್ಯನ ಉದಾರತೆಯಲ್ಲಿ ಯಾವ ಕೊರತೆಯೂ ಉಂಟಾಗಲಿಲ್ಲ.

ಒಮ್ಮೆ ಲೋಯರ ಸೆಕೆಂಡರಿ ಪರೀಕ್ಷೆ ಬಂತು. ಆಗ ಡಿಸ್ಟ್ರಿಕ್ಟ್‌ನಲ್ಲಿ ಒಂದೇ ಸೆಂಟರಿನಲ್ಲಿ ಪರೀಕ್ಷೆ ನಡೆಯುತ್ತಿತ್ತು. ಓದುವವರ ಸಂಖ್ಯೆ ಕಡಿಮೆ ಇದ್ದ ಕಾಲವದು. ಪರಸ್ಥಳದಿಂದ ಬಂದವರಿಗೆ ಅನಾನುಕೂಲವಾಗದಿರಲೆಂದು ಲಿಂಗಯ್ಯ ಆ ಊರಿನಲ್ಲಿದ್ದ ತಮ್ಮ ಬಂಗಲೆಯಲ್ಲೇ ಎಲ್ಲಾ ವಿದ್ಯಾರ್ಥಿಗಳಿಗೂ ಊಟ ವಸತಿಯ ಏರ್ಪಾಟನ್ನು ಪ್ರತಿವರ್ಷವೂ ಮಾಡುತ್ತಿದ್ದ. ಅದೇ ರೀತಿ ಈ ಸಾರಿಯೂ ವ್ಯವಸ್ಥೆ ಮಾಡಿದ್ದ. ಪರೀಕ್ಷೆ ನಡೆಯುವ ದಿನಗಳ ಮಧ್ಯೆ ಯುಗಾದಿ ಹಬ್ಬ ಬಂದಿತು. ಆಗ ಲಿಂಗಯ್ಯನಿಗೆ ಒಂದು ವಿಚಾರ ಹೊಳೆಯಿತು. ಈ ದಿನ ಮಕ್ಕಳು ತಮ್ಮ ತಮ್ಮ ಮನೆಗಳಲ್ಲಿ ಇದ್ದಿದ್ದರೆ ತಲೆಗೆ ಎಣ್ಣೆನೀರು ಸ್ನಾನ ಮಾಡುತ್ತಿದ್ದರು. ಹೋಳಿಗೆ ಊಟ ಮಾಡುತ್ತಿದ್ದರು, ಹೊಸಬಟ್ಟೆ ಹಾಕಿಕೊಳ್ಳುತ್ತಿದ್ದರು. ಈಗ ಪರೀಕ್ಷೆ ಇರುವುದರಿಂದ ಆ ಸುಖ ಮಕ್ಕಳಿಗಿಲ್ಲವಾಗಿದೆ ಎನ್ನಿಸಿತು. ಯೋಚನೆ ಬಂದದ್ದೇ ತಡ, ಆ ಎಲ್ಲಾ ಹುಡುಗರಿಗೂ ಎಣ್ಣೆ ನೀರು ಹಾಕಿಸುವ, ಹೋಳಿಗೆ ಊಟ ಮಾಡಿಸುವ ವ್ಯವಸ್ಥೆ ಮಾಡಿಸಿದ. ಇಷ್ಟೇ ಸಾಲದೆಂಬಂತೆ ಎಲ್ಲಾ ಮಕ್ಕಳಿಗೂ ಒಂದು ಜೊತೆ ಹೊಸ ಡ್ರೆಸ್ ಹೊಲಿಸಿಕೊಳ್ಳಲು ಸಾಕಾಗುವಷ್ಟು ಬಟ್ಟೆ ತರಿಸಿಕೊಟ್ಟ. ಹೀಗಿತ್ತು ಲಿಂಗಯ್ಯನ ಔದಾರ್ಯದ ವೈಖರಿ.

ಮನೆಯಲ್ಲೂ ಅಷ್ಟೇ. ದಿನಾ ಒಂದಲ್ಲ ಒಂದು ಪೂಜೆ ಅಥವಾ ವ್ರತ. ಅನೇಕ ಬಡವಿದ್ಯಾರ್ಥಿಗಳು ವಾರಾನ್ನಕ್ಕೆ ಬಂದರೆ, ಕೆಲವರು ನಿತ್ಯವೂ ಊಟಮಾಡಿ ಹೋಗುತ್ತಿದ್ದರು. ಇನ್ನೂ ಕೆಲವರು ಮನೆಯಲ್ಲೇ ಇದ್ದರು. ಗಣಪತಿ ಹಬ್ಬವನ್ನಂತೂ ಅತ್ಯಂತ ವೈಭವದಿಂದ ಇವರ ಮನೆಯಲ್ಲಿ ಆಚರಿಸುತ್ತಿದ್ದರು. ಓಲಗ ಸಮೇತ ಗಣೇಶನನ್ನು ತಂದು ಇಪ್ಪತ್ತೊಂದು ದಿನ ಮನೆಯಲ್ಲಿ ಇಡುತ್ತಿದ್ದರು. ಆ ದಿನಗಳಲ್ಲಿ ದಿನವೂ ಸ್ವಾಮಿಗಳಿಂದ ಪೂಜೆ ರುದ್ರಾಭಿಷೇಕಗಳಾಗಬೇಕಿತ್ತು. ಇಪ್ಪತ್ತೊಂದನೆಯ ದಿನ ಊರಿಗೆಲ್ಲಾ ಊಟ. ತಮ್ಮ ಜನದವರಿಗೂ ಆಳುಕಾಳಿಗೂ ತಮ್ಮ ಮನೆಯಲ್ಲೇ ಊಟದ ಏರ್ಪಾಟಾದರೆ ಉಳಿದವರಿಗೆ ಪ್ರತಿಯೊಂದು ಜಾತಿಯವರಿಗೂ ಒಂದೊಂದು ಕಡೆ ಅವರ ಜಾತಿಯವರಿಂದಲೇ ಅಡಿಗೆ ಮಾಡಿಸಿ ಊಟದ ವ್ಯವಸ್ಥೆ ಮಾಡಿಸುತ್ತಿದ್ದ. ಏಕೆಂದರೆ ಸ್ವತಂತ್ರ ಬರುವ ಮೊದಲು ಜನರೆಲ್ಲಾ ಜಾತೀಯ ಭಾವನೆಯಿಂದಾಗಿ ಉಚ್ಛಕುಲದ ಜನರು ಬೇರೆ ಜಾತಿಯವರ ಮನೆಯಲ್ಲಿ ಊಟಮಾಡುತ್ತಿರಲಿಲ್ಲ. ನಂತರ ಎಲ್ಲಾ ಊಟವಾದ ನಂತರ ಗಣೇಶನನ್ನು ಕೊಂಬು ಕಹಳೆ ಓಲಗೆ ವಾದ್ಯಸಮೇತ ಕೆರೆಗೆ ಒಯ್ದು ವಿಸರ್ಜನೆ ಮಾಡಲಾಗುತ್ತಿತ್ತು.

ಹೀಗೆ ಅರ್ಥವಿಲ್ಲದ ದುಂದುಗಾರಿಕೆಯ ಸಂಪ್ರದಾಯ ವಿವೇಕವಿಲ್ಲದ ಔದಾರ್ಯಗಳಿಂದಲಿಂಗಯ್ಯನಿಗೆ ಎಷ್ಟು ಹಣ ಬಂದರೂ ಸಾಲುತ್ತಿರಲಿಲ್ಲ. ಹೀಗೆಲ್ಲಾ ಖರ್ಚು ಮಾಡದಿದ್ದರೆ ಅವನಿಗೆ ನೆಮ್ಮದಿ ಇರುತ್ತಿರಲಿಲ್ಲ. ಮನೆಯಲ್ಲಿ ಬಎಳೆದ ಹೆಣ್ಣುಮಕ್ಕಳಿದ್ದರೂ ಅವರಿಗೆ ವರನೋಡುವ ಬಗ್ಗೆ ವಿಚಾರಿಸಲೂ ವೇಳೆ ಸಿಕ್ಕುತ್ತಿರಲಿಲ್ಲ. ಹೊಲಗದ್ದೆ ತೋಟ ಮನೆ ಒಂದೊಂದೇ ಸಾಲಗಾರರ ಪಾಲಾದವು. ಎಲೆಕ್ಷನ್‌ನಲ್ಲಿ ಹಣ ಖರ್ಚುಮಾಡಲು ಸಾಧ್ಯವಿಲ್ಲವಾಗಿ ಜನ ದೂರ ದೂರ ಸರಿದರು. ಆನಬಲವಿಲ್ಲ, ಧನಬಲವಿಲ್ಲ. ಚುನಾವಣೆಯಲ್ಲೂ ಗೆಲ್ಲಲಿಲ್ಲ. ಮೊದಲು ಅವನು ಹೊರಟರೆ ಸಾಕು ಹಿಂದೆ ಮುಂದೆ ಸತ್ತುತ್ತಿದ್ದ ಜನ ಈಗ ಅವನೊಡನೆ ಅಡ್ಡಾಡಲು ಹಿಂದು-ಮುಂದು ನೋಡತೊಡಗಿದರು. ಮಗನ ಮದುವೆಯನ್ನೇನೋ ಅದ್ದೂರಿಯಾಗಿ ಮಾಡಿ ಮುಗಿಸಿದ್ದ. ಮೆರವಣಿಗೆ ನೋಡಲು ಸುತ್ತುಮುತ್ತಲಿನ ಹಳ್ಳಿಯ ಜನಸೇರಿ, ಮೆರವಣಿಗೆ ಎರಡು ಫರ್ಲಾಂಗ್ ದೂರದಷ್ಟು ಉದ್ದವಿತ್ತು. ಪಲ್ಲಕ್ಕಿಯಲ್ಲಿ ಮೆರವಣಿಗೆಯಾದಾಗ ಮನೆಮನೆಯವರು ತಮ್ಮ ಬಾಗಿಲಲ್ಲಿ ಆರತಿ ಎತ್ತುತ್ತಿದ್ದರು. ಆರತಿ ತಟ್ಟೆಗೆ ಮದುಮಗ ಒಂದೊಂದು ಸವರನ್ ಹಾಕಿದ್ದ. ಈಗ ಅದೆಲ್ಲಾ ಗತ ವೈಭವ. ಈಗ ಹೆಣ್ಣು ಮಕ್ಕಳಿಗೆ ಮದುವೆ ಮಾಡಲೂ ಹಣವಿಲ್ಲ. ಹಣವಿಲ್ಲವಾಗಿ ಒಳ್ಳೆಯ ಸಂಬಂಧಗಳೂ ಬರುತ್ತಿಲ್ಲ. ಲಿಂಗಯ್ಯನ ಕಣ್ಣುಗಳು ಈಗ ತೆರೆಯಹತ್ತಿದವು. ಆದರೇನು ಕಾಲಮಿಂಚಿತ್ತು. ದಿನ ನಿತ್ಯದ ಜೀವನಕ್ಕೂ ಹಣದ ಕೊರತೆ ಕಾಡಿಸುತ್ತಿತ್ತು. ಅಂದು ಮನೆ ತುಂಬಾ ತುಂಬಿರುತ್ತಿದ್ದ ಬಂಧು-ಬಾಧವರಾರೂ ತಿರುಗಿ ಸಹ ನೋಡಲಿಲ್ಲ. ಯಾವ ಸಾರ್ವಜನಿಕರೂ ನೆರವಿಗೆ ಬರಲಿಲ್ಲ. ಆದರೂ ಯಾರಾದರೂ ಹಳಬರು ಸಿಕ್ಕರೆ 'ಯಾಕೆ ಕೊರಗ್ತೀರಿ ಲಿಂಗಯ್ನೋರೆ ನಿಮ್ಮದು ದಾನ ಮಾಡಿದ ಮನೆ. ನಿಮ್ಮ ಮನೆತನದವರು ಹಾಲು ಕೊಟ್ಟಂತೆ ನಾವು ನೀರು ಕೊಡೋಕೆ ಸಾಧ್ಯವಿಲ್ಲ. ದೇವರು ಕಾದೇ ಕಾಯುತ್ತಾನೆ' ಎನ್ನುತ್ತಿದ್ದರು. ಆದರೆ ದೂರಾಲೋಚನೆ ಇಲ್ಲದೆ ಜೀವನ ಮಾಡುವವರಿಗೆ ದೇವರು ಬೆನ್ನು ಕಟ್ಟುವುದಿಲ್ಲ ಎಂಬ ವಿವೇಕ ಮಾತನ್ನು ಮಾತ್ರ ಯಾರೂ ಹೇಳುತ್ತಿರಲಿಲ್ಲ. ಒಮ್ಮೆ ಜೀವನ ಬಹು ಕಷ್ಟವಾದಾಗ ತನ್ನ ಆಪ್ತ ಸ್ನೇಹಿತನಾಗಿದ್ದವನ ಮನೆಗೆ ಹೋಗಿ ನೆರವು ಕೇಳಿದಾಗ 'ನಾನು ಬಹಳ ಕಷ್ಟದಲ್ಲಿದ್ದೇನೆ. ನೀನೇನಪ್ಪ ಶ್ರೀಮಂತ ಮನೆತನದವನು. ಎಷ್ಟಲ್ಲಾಂದರು ಸ್ವಲ್ಪವಲ್ಲ ಸ್ವಲ್ಪವಿದ್ದೇ ಇರುತ್ತೆ ಮತ್ತು ಕೆಟ್ಟರೆ ಜೋಳಕ್ಕೆ ಕಡೆಯೆ. ನಿಮ್ಮ ಊರ ಮುಂದಿನ ಹೊಲ ಇದ್ಯಲ್ಲ. ಅದನ್ನ ಕೊಡೋ ಹಂಗಿದ್ರೆ ಹೇಳು. ನಿಮ್ಮ ಬೀಗರು ಹೊಲಸಿಕ್ಕರೆ ತೊಗೋಬೇಕು ಎನ್ನುತ್ತಿದ್ದರು' ಎಂದು ಹೇಳಿದಾಗ ಬಂದ ಸಿಟ್ಟನ್ನು 'ಬಡವನ ಸಿಟ್ಟು ದವಡೆಗೆ ಮೂಲ' ಎಂಬುದನ್ನು ಜ್ಞಾಪಿಸಿಕೊಂಡು ಹಾಗೆ ನುಂಗಿಕೊಂಡು ಮನೆಗೆ ಹಿಂತಿರುಗಿದ.

ಮಗನಿಗೂ ಮಕ್ಕಳಾಗಿದ್ದರು. ಹೆಣ್ಣು ಮಕ್ಕಳು ಬೆಳೆದು ನಿಂತಿದ್ದರು. ಮೊಮ್ಮಕ್ಕಳನ್ನು ಓದಿಸಲು ಹಣವಿಲ್ಲ. ಮಕ್ಕಳಿಗೆ ಮದುವೆ ಮಾಡಲು ದುಡ್ಡಿಲ್ಲ. ಹಗಲಿರುಳೂ ಚಿಂತೆಯೇ ಚಿಂತೆ. 'ಚಿತಾ ದಹತಿ ನಿರ್ಜೀವಂ ಚಿಂತಾ ದಹತಿ ಸಜೀವಂ' ಎಂಬಂತೆ ಚಿಂತೆಯಲ್ಲಿಯೇ ಬೆಂದು ಬೆಂದು ದೇಹ ಬಲಗುಂದಿತು. ಎಲುಬಿನ ಹಂದರವಾದ. ದೇಹದಲ್ಲಿ ರೋಗ ಗೂಡಿ ಮಾಡಿಕೊಂಡಿತು. ಡಾಕ್ಟರ್ ಬಳಿ ಹೋದಾಗ ಪರೀಕ್ಷಿಸಿ ಕ್ಷಯರೋಗವೆಂದು ಹೇಳಿದರು. ಅದಕ್ಕೆ ಔಷಧಿಯೇ ಇನ್ನೂ ಕಂಡುಹಿಡಿದಿರಲಿಲ್ಲ. ಮೊದಲೇ ಚಿಂತೆಯಿಂದ ಕೂಡಿದ ಅವನಿಗೆ ರೋಗದ ಹೆಸರು ಗಾಬರಿಗೊಳಿಸಿತು. ಅಲ್ಲಿಂದ ಎರಡು ತಿಂಗಳಲ್ಲೇ ಇಹಲೋಕ ಯಾತ್ರೆ ಮುಗಿಸಿದ ಲಿಂಗಯ್ಯ. ಲಿಂಗಯ್ಯನ ಈ ಅಂತ್ಯಕ್ಕೆ ಯಾರು ಹೊಣೆ?

■

## ಅನುಬಂಧ

## ಸಾಮಾನ್ಯ ಓದುಗನನ್ನು ತಟ್ಟುವ ಸಹಜ ಕಥೆಗಳು

ಲಲಿತಾಂಬಾ ವೃಷಭೇಂದ್ರ ಸ್ವಾಮಿ ಕನ್ನಡ ಬರಹ ಕ್ರಿಯೆಯಲ್ಲಿ ಪಳಗಿದವರೇ! ಇವರ ಬರಹಗಳಲ್ಲಿ ಹೆಚ್ಚಾಗಿ ಬದುಕನ್ನು ಸಾಚಾ ಆಗಿ ಕಂಡು ಚಿಂತನೆಗೈವ ಮನೋಭೀಷ್ಟೆ ಹೆಚ್ಚು ತುಂಬಿಕೊಂಡಿದೆ. ಅವರ ಈ ಅಭೀಪ್ಸೆಗೆ ಪ್ರಸ್ತುತ ಈ ಕಥಾ ಬರವಣಿಗೆಯೂ ಹೊರತಾಗಿಲ್ಲ.

ಈ ಕೃತಿ "ಬೇರೊಂದು ಮರವೆರಡು" ಕನ್ನಡ ಕಥಾ ಬರಹಕ್ಕೆ ಲೇಖಕಿಯವರ ಮೊದಲ ಕಾಣಿಕೆ. ಖಂಡವಿದೆಕೋ ಮಾಂಸವಿದೆಕೋ". ಯೋಗಾಯೋಗ, ವರ್ಗ ತಂದ ಸ್ವರ್ಗ, ತೀರ್ಪು, ಹಸಿರು ಸೀರೆ, ಗಂಡು ಮಗುವೇ ಬೇಕು, ಹತ್ಯೆ, ಬೇರೊಂದು ಮರವೆರಡು, ಹೀಗೂ ನಡೆಯೋದುಂಟೆ, ಪೂರ್ವ ಪಶ್ಚಿಮ, ಆತಂಕ-ಔದಾರ್ಯ ಎಂಬ ಕಥೆಗಳು ಇಲ್ಲಿ ಸಂಕಲಗೊಂಡಿವೆ.

ಸಣ್ಣ ಕಥೆಗಳ ಕಲಾತ್ಮಕತೆಯು ತಂತ್ರಕೌಶಲ್ಯದ ಕಸರತ್ತಾಗಿರದೇ ಸಹಜ ಬರವಣಿಗೆಯ ಸ್ರವಿಸುವಿಕೆ ಇಲ್ಲಿ ಸಫಲತೆ.

ಬದುಕನ್ನು ಮೇಲ್ಪದರಿನಲ್ಲಿ ಪರೀಕ್ಷಿಸಿ, ಅಲ್ಲಿ ಕಾಣುವ ಆಗುಹೋಗು ನಡೆನುಡಿಗಳನ್ನು ಸಾಚಾರೀತಿಯಲ್ಲಿ ಗ್ರಹಿಸಿ ಚಿತ್ರಿಸುವ ಕಥೆಗಳು. ಅಪರೂಪದ ಕಥಾ ವಸ್ತುಗಳನ್ನೊಳಗೊಂಡಿವೆ ಎನ್ನಲಡ್ಡಿ ಇಲ್ಲದಿದ್ದರೂ, ಸ್ವಂತ ನೋಟದ ಹುಡುಕಾಟದಲ್ಲಿ ದೊರೆತ ಅನುಭವದ ವಿವಿಧತೆ ಓದುಗನಿಗೆ ಲಭಿಸುತ್ತಿದೆ. ಕಥಾ ವಸ್ತುಗಳು ಬಹುತೇಕ ಶಿಷ್ಟ ಮಧ್ಯಮ ವರ್ಗದ ಜನರ ಕೌಟುಂಬಿಕ ಜೀವನದ ಒಳಗಡೆ ಇಣುಕಿ ಅಭಿವ್ಯಕ್ತಿಸಿದ್ದಾಗಿದೆ. ಆ ಬದುಕಿನಲ್ಲಿ ಸಾಮಾನ್ಯಗೊಳ್ಳುವ ತುಡಿತ, ಮಿಡಿತ, ಬಾಂಧವ್ಯ, ವಿರಸ, ವೈಧವ್ಯ, ಕರಬುತನ, ಸಂಕಟ, ಸಮಸ್ಯೆಗಳೆಲ್ಲವನ್ನು ಪಾತ್ರಗಳ ಪರಸ್ಪರ ಸಂಭಾಷಣೆಗಳ ಮೂಲಕ ಲೇಖಕಿಯ ಸ್ವಯಂ ನಿರೂಪಣೆಯ ಮೂಲಕವೂ ಮನಮುಟ್ಟುವಂತೆ ತೆರೆದಿಡುತ್ತಾರೆ. ಜೀವನ ನಡವಳಿಕೆಗಳನ್ನು ಭಾವನಾತ್ಮಕ ಅನುಸಂಧಾನಗೊಳಿಸಿ ನಿರೂಪಸಿರುವುದೇ ಹೆಚ್ಚಿನ ಕಥಾ ಮಾರ್ಗವಾಗಿದೆ.

ಹಲವು ಕಥೆಗಳು ನಮ್ಮ ದೂರದರ್ಶನದ ಜನಪ್ರಿಯ ಧಾರಾವಾಹಿಗಳನ್ನು ನೆನಪಿಸುತ್ತವೆ. ಸಾಮಾಜಿಕತೆಯ ವಸ್ತುವಿಗಿಂತಲೂ ಕೌಟುಂಬಿಕ, ಬದುಕಿನ ಒಳಹೊರಗನ್ನು ವಿಶ್ಲೇಷಿಸುವುದರಲ್ಲೇ ಕಥೆಗಳು ಹೆಚ್ಚಿನ ಆಸಕ್ತಿ ತೋರಿಕೊಂಡಿವೆ. ತಂತ್ರಗಳ ಕಸರತ್ತುಗಳಿಲ್ಲ, ಶೈಲಿಯ ಹೇರ್ಳಿಕೆಯೂ ಇಲ್ಲ. ಎಲ್ಲವೂ ಸರಳ, ಮುಕ್ತ, ಒಂದೇ ವಿಧಾನ. ಆದರೆ ಲೇಖಕಿ "ಬೇರೊಂದು ಮರವೆರಡು" ಕಥೆಯಲ್ಲಿ ಮಾತ್ರ ಭಿನ್ನವಾದ ತಂತ್ರವನ್ನು ಬಳಸಿದ್ದಾರೆ. ತಾಯಿ, ಪಾರ್ವತಿ, ಮಗ– ಈ ಮೂರು ಪಾತ್ರಗಳು ತಮ್ಮ ಸ್ವಗತ ಭಾಷಣದ ಮೂಲಕ ತೋಡಿಕೊಳ್ಳುವ ವಿಧಾನವೇ ಕಥೆಯ ಹಂದರವಾಗಿ ಪ್ರತ್ಯೇಕತೆಯನ್ನು ಸಾಧಿಸಿದೆ. ಕಥೆಗಳು ಹುಟ್ಟಿಕೊಂಡಿರುವುದು ಮೌಖಿಕ ನಿರೂಪಣೆಯಲ್ಲಿ ತಾನೆ? ಈ ಕಥೆಗಳು ಮೌಖಿಕ ಕಥಾ ನಿರೂಪಣೆಯು ಬರಹಕ್ಕಿಳಿಸಿದಂಥ ಸರಳತೆಯಿಂದೊಡಗೂಡಿದ್ದು ಸಾಮಾನ್ಯ ಓದುಗನನ್ನು ಸುಲಭವಾಗಿ ತಟ್ಟಿ ಸ್ಪಂದಿಸುವ ಬಗೆಯನ್ನು ಹೊಂದಿವೆ.

ಸಂಯುಕ್ತ ಕರ್ನಾಟಕ
೯-೧೨-೨೦೦೧ –ನಾ.ಸು. ಭರತನಹಳ್ಳಿ

■

ಶ್ರೀಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರ
ಗುರುಪೀಠಾರೋಹಣ ರಜತಮಹೋತ್ಸವದ ಪ್ರಕಟಣೆಗಳು

ರಜತ ರಶ್ಮಿ – ೧೬

# ಮನದ ಮಲ್ಲಿಗೆ

ಶ್ರೀಮತಿ ಲಲಿತಾಂಬ ವೃಷಭೇಂದ್ರಸ್ವಾಮಿ

ಶ್ರೀ ಸಿದ್ಧವೀರ ಶಿವಾಚಾರ್ಯ ಜ್ಞಾನ ಪ್ರಕಾಶನ
ಪುರ – ೫೮೩ ೨೧೯ (ತಾ. ಹೂವಿನಗಡಗಲಿ, ಜಿ. ಬಳ್ಳಾರಿ)

ಶ್ರೀ ಸೋಗಿ ಪುರವರ್ಗ ಕಟ್ಟಿಮನೆಮಠದ

ಶ್ರೀ ಷ. ಬ್ರ. ಚಂದ್ರಶೇಖರ ಶಿವಾಚಾರ್ಯ
ಸ್ವಾಮಿಗಳವರು, ಪುರ

# ಸನ್ನುಡಿ

ಸನ್ನಡತೆಯೇ ಸದ್ಗತಿಗಾಧಾರ
ಸನ್ನುಡಿಯೇ ಆನಂದದ ಸಾಗರ
ಚೆನ್ನುಡಿಯ ಮನ್ನಿಸಿ ನಡೆವುದೇ
ಎನ್ನ ಬದುಕಿನ ಗುರಿಯಯ್ಯಾ

ಮಾನವ ಓರ್ವ ವಿಚಾರಶೀಲ ಪ್ರಾಣಿ ! ಒಳಿತು ಕೆಡಕುಗಳನ್ನು ಅರಿಯಬಲ್ಲ, ಒರೆದು ನೋಡಬಲ್ಲ ! ಆದರೆ ಅರಿವು ಮೂಡಿಸಲು ಗುರುಬೇಕಲ್ಲವೆ ? ಅಂತೆಯೇ ಬಲ್ಲವರು ಜೀವನಕ್ಕೊಂದು ಗುರಿಬೇಕು, ಜೀವಿಗೊಬ್ಬ ಗುರುಬೇಕು ! ಎಂದು ಹೇಳಿದ್ದಾರೆ, ಹಾಗೆ ಬಾಳಿದವರಿದ್ದಾರೆ. ಅಂಥ ಹಿರಿಯ ಜೀವಿಗಳ ಜೀವನ, ಧ್ಯೇಯ – ಧೋರಣೆ, ಮಾನವೀಯ ಮೌಲ್ಯಗಳಿಗಾಗಿ ಬಾಳಿ ಬದುಕಿದ ಬಗೆ, ನಾಡು ನುಡಿಗಾಗಿ, ಧರ್ಮ –ಸಂಸ್ಕೃತಿಗಾಗಿ ದುಡಿದ, ಮಿಡಿದ ರೀತಿ ನೀತಿಗಳನ್ನು ನಾಡಿನ ಹಿರಿ –ಕಿರಿಯರೆಲ್ಲರಿಗೂ ಅರುಹುವುದು ಈ ಕಿರಿಯ ಪುಸ್ತಕಗಳ ಧ್ಯೇಯವಾಗಿದೆ !

ಗುರುಗಳ ಪೀಠಾರೋಹಣದ ರಜತಮಹೋತ್ಸವ ಆಚರಿಸುವ ನಿರ್ಧಾರ ಕೈಗೊಂಡ ಶ್ರೀ ಮಠದ ಸದ್ಭಕ್ತರಿಗೆ, ಸದಭಿಮಾನಿಗಳಿಗೆ, ಸಾಹಿತಿಗಳಿಗೆ ಬದುಕಿನ ಉದ್ದೇಶ ಬರೀ ಉತ್ಸವವಲ್ಲ! ಅದು ಕ್ಷಣಕಾಲ ಕಣ್ಮನಗಳಿಗೆ ರಂಜನೆ ನೀಡೀತು ! ಮನಸ್ಸನ್ನಾವರಿಸಿ ಗುಂಗಿನಲ್ಲಿರಿಸೀತು ! ಆದರೆ ಚಿರಂತನ ಬೆಳಕನ್ನು ನೀಡಲಾರದು, ಕಾರಣ ರಜತಮಹೋತ್ಸವ ಅರ್ಥಪೂರ್ಣವಾಗ ಬೇಕಾದರೆ ಸಾರ್ಥಕ ಬದುಕನ್ನು ಬದುಕಿದ ಮಹಾತ್ಮರ, ಗಣ್ಯ –ಮಾನ್ಯರ ಪರಿಚಯವನ್ನು ನಾಡಿನ ಮಹಾಜನತೆಗೆ

ಮಾಡಿಕೊಡುವ ಉಪ್ಪತ್ತೈದು ಕೃತಿಗಳನ್ನು ಪ್ರಕಟಿಸಲು ಸಲಹೆ ಮಾಡಿದೆವು. ಸಂತೋಷದಿಂದ ಒಪ್ಪಿ ಕಾರ್ಯ ಕರ್ತರು, ಸಾಹಿತಿಗಳು "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲದಲ್ಲ !" ಎಂಬಂತೆ ಸಾಹಿತ್ಯಕ್ಕಳಿವಿಲ್ಲವೆಂದು ಭಾವಿಸಿ ಚಿರಂತನ ಕಾರ್ಯಗೈದು ಸಮಸ್ತ ಜನತೆಯ ಹೊಗಳಿಕೆಗೆ ಪಾತ್ರರಾಗಿದ್ದಾರೆ.

ಪುಸ್ತಕ ಓದುಗರ ಹಸ್ತಸೇರಲು ವಾಸ್ತವವಾಗಿ ಹಣಬೇಕು ಈ ವಿಚಾರ ನಮ್ಮ ಅಭಿಮಾನಿ ಭಕ್ತರಿಗೆ ತಿಳಿಸಿದಾಗ ನಾ ಮುಂದೆ ತಾ ಮುಂದೆ ಎಂದು ಪುಸ್ತಕ ಪ್ರಕಟಣೆಗೆ ಧನಸಹಾಯ ಮಾಡಿದ್ದಾರೆ. ಆ ಗುಣಾಢ್ಯರಾದ ಧನಾಢ್ಯರಿಗೆ ಶ್ರೀ ಜಗದ್ಗುರು ಪಂಚಾಚಾರ್ಯರು ಸಂಪತ್ತನ್ನು ಸದ್ವಿನಿಯೋಗ ಮಾಡುವ ಸನ್ನಡತೆಯನ್ನು ಅನುಗ್ರಹಿಸಿಲಿ !

ಈ ಭಾಗದ ಜನತೆಯ ಮೇಲೆ, ನಮ್ಮ ಆರಾಧ್ಯ ಗುರುಗಳಾದ ಲಿಂ, ಶ್ರೀ ಸಿದ್ಧವೀರ ಶಿವಾಚಾರ್ಯ ಸ್ವಾಮಿಗಳವರ ಅಪೂರ್ವ ಪ್ರಭಾವವಾಗಿದೆ. ಅವರ ಭಕ್ತ ಸಮೂಹ, ಅಂಥ ಗುರುವಿನ ಕರಸಂಜಾತರಾದ ನಮ್ಮನ್ನು ರಜತಮಹೋತ್ಸವದ ನೆಪದಲ್ಲಿ ಈ ರೀತಿ ಗೌರವಿಸುತ್ತಿರುವುದು ಅವರ ಅಭಿಮಾನದ ಸಂಕೇತವಾಗಿದೆ. ಗುರುಭಕ್ತಿಶೀಲರಾದ ಭಕ್ತವೃಂದವು ಪುಸ್ತಕಗಳನ್ನೋದಿ ಅರಿತು ಆಚರಿಸಿ ಒಳ್ಳೆಯ ವಿಚಾರಗಳನ್ನು ಮೆಲಕು ಹಾಕಲಿ, ಸನ್ನುಡಿ, ಸನ್ನಡತೆಗಳು ಅವರ ಬಾಳಿನ ಹಾಸು – ಹೊಕ್ಕುಗಳಾಗಲಿ !

ಒಳ್ಳೆಯದನ್ನೇ ಆಡಿರಿ, ಒಳ್ಳೆಯದನ್ನೇ ಮಾಡಿರಿ; ಅಂಥ ಸದ್ಬುದ್ಧಿಯನ್ನು ಶ್ರೀ ಜಗದ್ಗುರು ಪಂಚಾಚಾರ್ಯರು ತಮ್ಮೆಲ್ಲರಿಗೂ ಅನುಗ್ರಹಿಸಲಿ.

ಇತ್ಯಾಶಿಷ ಃ

■

## ನುಡಿಮಲ್ಲಿಗೆ

ಬಹಳ ಹಿಂದಿನಿಂದಲೂ ಮಹಿಳೆಯರು ವಿಚಾರ ಸಾಹಿತ್ಯದ ಕಡೆಗೆ ಗಮನ ಕೊಟ್ಟಿಲ್ಲ ಎಂದು ದೊಡ್ಡ ದೊಡ್ಡ ವಿದ್ವಾಂಸರು, ಸಾಹಿತಿಗಳು ಹೇಳುತ್ತಿದ್ದುದನ್ನು ಪತ್ರಿಕೆಗಳಲ್ಲಿ ಓದಿದಾಗ, ನಾನು ಬರೆದಿರುವ ಲೇಖನಗಳಲ್ಲಿ ಉತ್ತಮವಾದವುಗಳನ್ನು ಆರಿಸಿ ಒಂದು ಸಂಕಲನವನ್ನು ಪ್ರಕಟಿಸಬೇಕೆಂದು ಆಸೆಯಾಗುತ್ತಿತ್ತು. ಆಗಿರಲೇ ಇಲ್ಲ.

ಮಠದ ಷ. ಬ್ರ. ಶ್ರೀ ಚಂದ್ರಶೇಖರ ಶಿವಾಚಾರ್ಯರ ಪೀಠಾರೋಹಣದ ರಜತ ಮಹೋತ್ಸವದ ಸಮಿತಿಯವರು ಹೊರತರಲು ಉದ್ದೇಶಿಸಿದ ೨೫ ಪುಸ್ತಕಗಳಲ್ಲಿ ಇದೂ ಒಂದಾಗುವ ಯೋಗವಿತ್ತೆಂದು ಕಾಣುತ್ತದದೆ.ರಜತ ಮಹೋತ್ಸವದ ಮಾಲಿಕೆಯಲ್ಲಿ ನನ್ನ ಈ ಪುಸ್ತಕ ಹೊರಬುವಲ್ಲಿ ಆಸ್ಥೆವಹಿಸಿದ ವಿಜಯನಗರ ಕಾಲೇಜಿನ ಕನ್ನಡ ಉಪನ್ಯಾಸಕರಾದ ಶ್ರೀ ಎ. ಎಸ್. ರುದ್ರಪ್ಪ ಅವರಿಗೆ, ಹಾಗೂ ರಜತ ಮಹೋತ್ಸವ ಸಮಿತಿಯವರಿಗೆ ಕೃತಜ್ಞಳಾಗಿದ್ದೇನೆ.

– ಲಲಿತಾಂಬಾ ವೃಷಭೇಂದ್ರಸ್ವಾಮಿ

■

# ಆಪದ್ಬಾಂಧವ ಪದ್ಮಪ್ಪ ಜೈನರ

ಧಾರವಾಡದ ಜಿಲ್ಲೆ ಮುಂಡರಗಿ ತಾಲೂಕಿನ ಕೊರ್ಲಹಳ್ಳಿ ತುಂಗಭದ್ರೆಯ ದಡದಲ್ಲಿ ಒಂದು ಗ್ರಾಮ. ಮೊಧಮೊದಲು ಬಡಗ್ರಾಮವಾಗಿದ್ದ ಕೊರ್ಲಹಳ್ಳಿ ಇತ್ತೀಚೆಗೆ ನೀರಾವರಿ ಹಾಗೂ ಆಧುನಿಕ ಕೃಷಿ ತಂತ್ರಜ್ಞಾನದಿಂದ ಪ್ರಗತಿಪರ ಗ್ರಾಮವೆನಸಿದೆ. ಶ್ರೀ ಹೊಂಬಪ್ಪ ಜೈನರ ಆ ಗ್ರಾಮದ ದೊಡ್ಡ ಜಮೀನುದಾರರು. ಆದರೆ ಅವರಿಗೆ ಗಂಡು ಸಂತಾನವಿರಲಿಲ್ಲ. ಶ್ರೀ ಪದ್ಮಪ್ಪ ಜೈನರ ಅವರನ್ನು ದತ್ತು ಸ್ವೀಕರಿಸಿದರು. ಸ್ವಭಾವತಃ ಧರ್ಮಭೀರು ಹಾಗೂ ಶ್ರಮಜೀವಿಯಾದ ಪದ್ಮಪ್ಪನವರು ತಾಲ್ಲೂಕಿನ ಗಣ್ಯವ್ಯಕ್ತಿಗಳಲ್ಲೊಬ್ಬರೆನಿಸಿದರು. ಕೃಷಿ ಕಾಯಯಕದೊಂದಿಗೆ ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿ ಸಾರ್ವಜನಿಕ ಜೀವಿಯೆನಿಸಿದರು.

ಶ್ರೀಮತಿ ಜಾನಮ್ಮ ಮತ್ತು ಪದ್ಮಪ್ಪನವರು ಶ್ರೀ ಹೊಂಬಪ್ಪನವರ ಕುಟುಂಬಕ್ಕೆ ಮೂವರು ಪುತ್ರರು ಹಾಗೂ ಇಬ್ಬರು. ಪುತ್ರಿಯರನ್ನು ಕಾಣಿಕೆಯಾಗಿ ನೀಡಿದರು. ಅವರಲ್ಲಿ ಬಾಬೂರಾವ್ ಎಂಬ ಕಿರಿಯ ಪುತ್ರ ಇಂದು ಜನಪ್ರಿಯ ವ್ಯಕ್ತಿಯಾಗಿ ತಂದೆಯ ಆದರ್ಶಗಳನ್ನೇ ಪಾಲಿಸುತ್ತ ತಾಲ್ಲೂಕಿನ ಮುಂಧಾಲಳಗಳಲ್ಲಿ ಒಬ್ಬರೆನಿಸಿದ್ದಾರೆ. ೧೯೭೫ರಲ್ಲಿ ತಂದೆ ಪದ್ಮಪ್ಪನವರು ಜಿನೈಕ್ಯರಾದ ನಂತರ ಬಾಬೂರಾವ್ ದೊಡ್ಡ ಕುಟುಂಬದ ಹೊಣೆಹೊರುವುದರ ಜೊಗೆಗೆ ಗ್ರಾಮದ ಮುನ್ನಡೆಯಲ್ಲಿಯೂ ಪ್ರಮುಖ ಪಾತ್ರವಹಿಸುತ್ತಿದ್ದಾರೆ. ತಂದೆಯ ಹೆಸರು ಚಿರಸ್ಥಾಯಿ ಆಗಲೆಂದು ಗ್ರಾಮದ ಹಿರಿಯ ಪ್ರಾಥಮಿಕ ಶಾಲೆಗೆ ಬೆಲೆ ಬಾಳುವ ಒಮದು ಎಕರೆ ನಿವೇಶನ ನೀಡಿದ್ದಾರೆ. ಇವರ ಸತ್ಕಾರ್ಯ ಸದ್ವಿಚಾರಗಳಿಗೆ ಅಣ್ಣಂದಿರಾದ ಶ್ರೀ ಚಂದ್ರನಾಥ  ಹಾಗೂ ಡಾ. ಧರಣೇಂದ್ರ ಅವರು ಪೋಷಕರಾಗಿದ್ದಾರೆ.

ಪುರದ ಪಟ್ಟಾಧ್ಯಕ್ಷರಾದ ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳಲ್ಲಿ ದಿ. ಪದ್ಮಪ್ಪನವರಿಎಗ ಅಪಾರ ಭಕ್ತಿ ವಿಶ್ವಾಸವಿತ್ತು. ಅದನ್ನು ಉಳಿಸಲು ಶ್ರೀ ಬಾಬುರಾ ಜೈನರ್ ಈ ಕಿರುಕೃತಿಯ ಪ್ರಕಟಣೆಗೆ ಮುಂದಾದರು. ಅವರಿಗೂ ಅವರ ಕುಟುಂಬ ವರ್ಗಕ್ಕೂ ಸಕಲ ಸನ್ಮಂಗಲಗನ್ನು ಹಾರೈಸೋಣ.

– ಪ್ರಕಾಶಕರು

■

## ಪ್ರಕಾಶಕರ ನುಡಿ

ಪ್ರಾಚೀನ ಕಾಲದಿಂದಲೂ ಜನಮನವನ್ನು ಬೆಳಗುತ್ತ ಧಾರ್ಮಿಕ ಪರಂಪರೆಯನ್ನು ಕಾಪಾಡಿಕೊಂಡು ಬಂದಿರುವ ನಮ್ಮ ನಾಡಿನ ಅಸಂಖ್ಯಾತ ವೀರಶೈವ ಮಠಗಳಲ್ಲಿ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನಪುರಗ್ರಾಮದಲ್ಲಿರುವ ಶ್ರೀ ಸೋಗಿ ಪುರವರ್ಗ ಕಟ್ಟೆಮನೆ ಮಠವೂ ಒಂದು. ಈ ಮಠದ ಅಸಾಧಾರಣ ವ್ಯಕ್ತಿತ್ವದಿಂದಾಗಿ ಈ ಭಾಗದ ಜನಮನದಲ್ಲಿ ಹಸಿರಾಗಿ ನಿಂತವರು. ಅಂಥ ಪೂಜ್ಯರ ಕರುಣೆಯ ಕಂದ ಈಗಿನ ಪೀಠಾಧಿಪತಿ ಶ್ರೀ ಚಂದ್ರಶೇಖರ ಶಿವಾಚಾರ್ಯರು. ಪ್ರಸ್ತುತ ಈ ಮಠದ ಶ್ರೇಯೋಭಿವೃದ್ಧಿಗೆ ಹಗಲಿರುಳು ಶ್ರಮಿಸುತ್ತಿರುವ ಶ್ರೀ ಚಂದ್ರಶೇಖರ ಶಿವಾಚಾರ್ಯರು ಈ ಗುರು ಪೀಟವನ್ನಲಂಕರಿಸಿ ಇಪ್ಪತ್ತೈದು ಸಂವತ್ಸಗಳು ಸಂದವು. ಈ ಕಾಲು ಶತಮಾನದ ಅವಧಿಯಲ್ಲಿ ಅವರ ಕಾರ್ಯ ಚಟುವಟಿಕೆಗಳು ಈ ಭಾಗದ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿ, ಶೈಕ್ಷಣಿಕ ಜೀವನವನ್ನು ಹಸನುಗೊಳಿಸಿವೆ. ಕೀರ್ತಿ ಪ್ರಚಾರಗಲನ್ನು ಅಪೇಕ್ಷಿಸದೆ ಪೂಜ್ಯ ಶ್ರೀಗಳವರು ಎಲೆಮರೆಯ ಕಾಯಿಯಂತಿದ್ದು, ತಮ್ಮನ್ನು ತಾವು ಗಂಧದಂತೆ ಸವೆಸಿಕೊಂಡವರು. ಮಾತಿಗಿಂತ ಕೃತಿಯನ್ನು ನಂಬಿದವರು. ಕಾಯಕನಿಷ್ಠೆ, ಧಾರ್ಮಿಕ ಪ್ರವೃತ್ತಿ, ಶಿಷ್ಯವಾತ್ಸಲ್ಯ, ಸರಳ ಜೀವನಶೈಲಿಗಳಿಂದಾಗಿ ಅವರು ಆದರ್ಶಕ್ಕೆ ಆದರ್ಶವಾಗಿದ್ದಾರೆ.

ಶ್ರೀ ಚಂದ್ರಶೇಖರ ಪೀಠಾರೋಹಣ ರಜತಮಹೋತ್ಸವ, ಈ ಭಾಗದ ಜನತೆಗೆ ಅತ್ಯಂತ ಸಂತೋಷದ – ಅಭಿಮಾನದ ಸಂಗತಿಯಾಗಿದೆ. ಈ ಸಂತೋಷ ಅಭಿಮಾನಗಳು ಉಕ್ಕಿ ಹರಿದು ಮರೆಯಾಗಬಾರದೆಂಬ ಉದ್ದೇಶದಿಂದ ಜನ ಸಾಮಾನ್ಯರ ಜ್ಞಾನದಾಹವನ್ನು ಹಿಂಗಿಸುವಂಥ ಇಪ್ಪತ್ತೈದು ಕಿರು ಪುಸ್ತಿಕೆಗಳನ್ನು ಹೊರತರಲು ಯೋಜನೆ ಹಾಕಿಕೊಳ್ಳಲಾಯಿತು. ಶ್ರೀಗಳ ಆದೇಶಮ ಕಾರ್ಯಕರ್ತರ ನಿರಂತರ ಪರಿಶ್ರಮ, ಸಂಪಾದಕರ ಮಂಡಳಿಯವರ ಕಾರ್ಯ ವಿಧಾನ, ಉದಾರಿಗಳ ಅಪಾರ ಕೊಡುಗೆ, ಭಕ್ತ ಸಮೂಹದ ನಿರ್ವ್ಯಾಜ್ಯ ಪ್ರೀತಿ ವಿಶ್ವಾಸ ಈ ಕಿರು ಕೃತಿಗಳು ಮೈದಾಳಲು ಪ್ರೇರಕವಾಗಿವೆ. ಅವುಗಳಲ್ಲಿ ಒಂದು ಈಗ ನಿಮ್ಮ ಕೈಯಲ್ಲಿದೆ. ಈ ಪುಸ್ತಿಕೆಯಲ್ಲಿ ಮೂಡಿಬಂದ ಅಭಿಪ್ರಾಯಗಳಿಗೆ ಲೇಖಕರೇ ಹೊಣೆಯೆಂದು ಬೇರೆ ಹೇಳಬೇಕಾಗಿಲ್ಲ.

ರಜತೋತಗ್ಸವ ಸಮಿತಿಯ ಬಿನ್ನಹವನ್ನು ಮನ್ನಿಸಿ, ಪ್ರಸ್ತುತ ಮನದ ಮಲ್ಲಿಗೆ ಕೃತಿಯನ್ನು ಬರೆದುಕೊಟ್ಟ ಶ್ರೀಮತಿ ಲಲಿತಾಂಬಾ ವೃಷಭೇಂದ್ರಸ್ವಾಮಿ ಅವರಿಗೂ ಹಾಗೂ ಗ್ರಂಥ ದಾನಿಗಳಾದ ಶ್ರೀ ಬಾಬಣ್ಣ ಜೈನರ, ಕೊರ್ಲಹಳ್ಳಿ ಅವರಿಗೆ,

ಅಂದವಾಗಿ ಮುದ್ರಿಸಿಕೊಟ್ಟ ಪ್ರಭು ಪ್ರೆಸ್ಸಿನ ಶ್ರೀ ಶಾಂತವೀರ ಜಂಗಮನಿ ಹಾಗೂ ಕಾರ್ಮಿಕರಿಗೆ ಕೃತಜ್ಞತೆಗಳು

ಉತ್ಸಾಹದ ಚಿಲುಮೆಗಳೆನಿಸಿದ ಶ್ರೀ ಸೊಪ್ಪಿನ ಬಾಳಪ್ಪ, ಕೊಂಬಳಿ; ಶ್ರೀ ಪಂಚಾಕ್ಷರಗೌಡ, ನವಲಿ; ಶ್ರೀ ವಿಶ್ವಾನಂದ ಸ್ವಾಮಿ, ಪುರ ಅವರು ನೀಡಿದ ಸಹಕಾರ, ಪ್ರೋತ್ಸಾಹ ಅವಿಸ್ಮರಣೀಯ ! ಅನುಪಮ ! ಅವರಿಗೆ ಅನಂತ ಧನ್ಯವಾದಗಳು.

ಪುರ — ಅ. ಸಿ. ಹಿರೇಮಠ

ತಾ : ೧೮.೨.೧೯೯೪ ಪ್ರಧಾನ ಸಂಪಾದಕರು

ಶ್ರೀ ಸಿದ್ಧವೀರ ಶಿವಾಚಾರ್ಯ ಜ್ಞಾನ ಪ್ರಕಾಶನ

■

# ಮನದ ಮಲ್ಲಿಗೆ

## ಧರ್ಮ ಮತ್ತು ರಾಜಕಾರಣ

ಭಾರತದಲ್ಲೀಗ ಧರ್ಮದ ಹೆಸರಿನಲ್ಲಿ ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಅನೇಕ ಸಮಸ್ಯೆಗಳು, ಅನ್ಯಾಯಗಳು ಹಾಗೂ ಗೊಂದಲಗಳು ಉಂಟಾಗುತ್ತಿವೆ. ಹಾಗಾಗಿ ಕೆಲವರಿಗೆ. 'ಧರ್ಮವನ್ನು ರಾಜಕೀಯದಿಂದ ದೂರವಿಡಬೇಕು' ಎಂಬ ಅನಿಸಿಕೆ ಉಂಟಾಗಿದೆ.

ಇಲ್ಲಿ ಏಳುವ ಪ್ರಶ್ನೆ ಧರ್ಮವನ್ನು ರಾಜಕೀಯದಿಂದ ದೂರವಿಡಲು ಸಾಧ್ಯವೆ? ಎಂಬುದು. ಏಕೆಂದರೆ 'ಧರ್ಮ' ವ್ಯಕ್ತಿಯಲ್ಲಿ ಅಡಕವಾಗಿರುವ, ಅವನಲ್ಲೇ ಒಂದಾಗಿರುವ, ಅವನ ವ್ಯಕ್ತಿತ್ವದಲ್ಲೇ ಸೇರಿಕೊಂಡಿರುವ ಅಂಶ. ಧರ್ಮಬಿಟ್ಟು ವ್ಯಕ್ತಿಯಿಲ್ಲ. ವ್ಯಕ್ತಿಬಿಟ್ಟು ಧರ್ಮವಿಲ್ಲ. ವ್ಯಕ್ತಿ ರಾಜಕೀಯದಲ್ಲಿ ಕೆಲಸ ಮಾಡುವಾಗ, ಅವನಲ್ಲಿರುವ ಧಾರ್ಮಿಕ ಭಾವನೆ ಅವನಿಗೆ ಅರಿವಿದ್ದೋ ಇಲ್ಲದೆಯೋ ಕೆಲಸ ಮಾಡುತ್ತಿರುತ್ತದೆ. ಆದ್ದರಿಂದ ವ್ಯಕ್ತಿ ರಾಜಕೀಯದಲ್ಲಿ ಭಾಗವಹಿಸುತ್ತಿರುವಾಗ ಧರ್ಮವನ್ನು ರಾಜಕೀಯದಿಂದ ಹರಗಿಡುವುದು ಅಸಾಧ್ಯ.

ಆದರೆ, ಧರ್ಮವನ್ನು ರಾಜಕೀಯದಿಂದ ದೂರವಿರಿಸುವ ವಿಚಾರವೇಕೆ ? ಎಲ್ಲ ಕೆಲಸಗಳೂ ಧರ್ಮಯುತವಾಗಿಯೇ ನಡೆಯಬೇಕು ; ಏಕೆಂದರೆ ಧರ್ಮವು ಯಾವಾಗಲೂ ನೀತಿಯ ನೆಲಗಟ್ಟಿನ ಮೇಲೆಯೇ ನಿಂತಿರುತ್ತದೆ. ಹಾಗಿಲ್ಲದಿದ್ದಲ್ಲಿ ಅಹು ಧರ್ಮವೆನಿಸಿಕೊಳ್ಳುವುದೇ ಇಲ್ಲ. ಯಾವ ಧರ್ಮವೂ ಹಿಂಸೆಯನ್ನಾಗಲೀ, ದ್ವೇಷವನ್ನಾಗಲೀ, ಕ್ರೌರ್ಯವನ್ನಾಗಲೀ ಬೋಧಿಸುವುದಿಲ್ಲ. ಧರ್ಮದ ವಿಕೃತ ರೂಪ ಹಿಂಸೆಯ ಆಕಾರ ತಾಳುತ್ತದೆ. ಕ್ರೌರ್ಯವನ್ನು ಪ್ರಚೋದಿಸುತ್ತದೆ. ಸ್ವಾರ್ಥಿಯಾದ. ದುಷ್ಟನಾದ ವ್ಯಕ್ತಿಯು ಧರ್ಮವನ್ನು ವಿಕೃತಗೊಳಿಸಿ ತನ್ನ ಸ್ವಾರ್ಥ ರಕ್ಷಣೆಗೆ ಗುರಾಣಿಯಂತೆ ಉಪಯೋಗಿಸಿಕೊಳ್ಳುತ್ತಾನೆ ಅಷ್ಟೆ. ನಿಜವಾದ ಧರ್ಮ ಪರಧರ್ಮವನ್ನು ಗೌರವಿಸುತ್ತದೆ. ಪರರ ಹಿತಕ್ಕೆ ಇಂಬುಗೊಡುತ್ತದೆ. ಅಹಿಂಸೆಗೆ ಒತ್ತು ಕೊಡುತ್ತದೆ. ಹಾಗೆಯೇ ನಿಜವಾದ ಧಾರ್ಮಿಕ ವ್ಯಕ್ತಿ. ತನ್ನವರ, ತನ್ನ ಸಮಾದವರ, ತನ್ನ ದೇಶಧವರ, ಏಕೆ ಇಡೀ ಮಾನವ ಜನಾಂಗದ ಒಳಿತನ್ನು ಬಯಸುತ್ತಾನೆ. ಧಾರ್ಮಿಕತೆ ಇಲ್ಲದವನು ಎಲ್ಲರ ಸಂಕಷ್ಟಗಳಿಗೆ ಕಾರಣನಾಗುತ್ತಾನೆ. ದುರ್ಯೋಧನನು

ಧಾರ್ಮಿಕ ನೀತಿಯನ್ನನುಸರಿಸಿ ನಡೆದಿದ್ದರೆ ಮಹಾಭಾರತದ ಯುದ್ಧವಾಗುತ್ತಿರಲಿಲ್ಲ. ಅದರಿಂದಾದ ಸಾವು ನೋವುಗಳು, ಕಷ್ಟ ನಷ್ಟಗಳೂ ಇಲ್ಲವಾಗುತ್ತಿದ್ದವು.

ಧಾರ್ಮಿಕ ವ್ಯಕ್ತಿಯಾದ ಬುದ್ಧ 'ಆಸೆಯೇ ದುಃಖಕ್ಕೆ ಮೂಲ' ಎನ್ನುವ ಸತ್ಯವನ್ನು ಕಂಡುಕೊಂಡ. ಆ ಸತ್ಯ ತತ್ತ್ವವನ್ನು ತನ್ನ ಜೀವನಕ್ಕಷ್ಟೇ ಉಪಯೋಗಿಸಿಕೊಂಡು ಸುಮ್ಮನಾಗಬಹುದಿತ್ತು. ಆದರೆ, ಮಾನವರೆಲ್ಲಾ ಈ ಆಸೆಯ ಬೆನ್ನುಹತ್ತಿ ಮೋಸ, ದ್ವೇಷ, ಕುತಂತ್ರಗಳನ್ನೆಸಗುತ್ತ ತಮಗೂ ಅನ್ಯಾಯ ಮಾಡಿಕೊಳ್ಳುತ್ತ, ಬೇರೆಯವರನ್ನೂ ದುಃಖಕ್ಕೆ ಈಡು ಮಾಡುತ್ತಾರೆ. ಆದುದರಿಂದ ಮಾನವರು ಹೀಗೆ ಮಾಡದೆ ಆಸೆಯನ್ನು ಗೆದ್ದು ತಾವೂ ಸುಖವಾಗಿದ್ದು ಬೇರೆಯವರನ್ನೂ ಸುಖದಿಂದ ಬಾಳಗೊಡಲಿ ಎಂದಾಶಿಸಿ ಧರ್ಮ ಬೋಧೆಯನ್ನು ಪ್ರಾರಂಭಿಸಿದ. ಜಗತ್ತಿನ ಜನರೆಲ್ಲಾ ದುಃಖವಿಲ್ಲದಂತೆ ಬಾಳಬೇಕೆಂಬುದು ಅವನ ಮುಖ್ಯ ಗುರಿಯಾಗಿತ್ತು.

ಶರಣರು, ಹಸನಾದ ಬಾಳಿಗೆಬೇಕಾದ ಜೀವನ ಮೌಲ್ಯಗಳನ್ನು ಮಾರ್ಗಗಳನ್ನು ತಮ್ಮ ತ್ಮಮ ಅನುಬವದಿಂದ ಕಂಡುಕೊಂಡರು. ಅದನ್ನು ಅವರು ಜೀವನಕ್ಕಷ್ಟೇ ಮಾರ್ಗದರ್ಶಿಯಾಘಿ ಇಟ್ಟುಕೊಳ್ಳಬಹುದಿತ್ತು. ಆದರೆ ಸದಾ ಕಾಲವೂ ಮಾನವರಿಗೆ ಈ ಮಾರ್ಗದರ್ಶನ ದೊರೆಯಲೆಂದು ಅವುಗಳನ್ನು ವಚನರೂಪದಲ್ಲಿ ಅವರು ಬರೆದಿಟ್ಟಿದ್ದಾರೆ. ಅಷ್ಟೇ ಅಲ್ಲ ತಮ್ಮ ಪ್ರಾಣಕ್ಕಿಂತ ಹೆಚ್ಚಿನ ರೀತಿಯಲ್ಲಿ ವಚನಗಳ ರಕ್ಷಣೆಗೆ ವ್ಯವಸ್ಥೆಮಾಡಿ ಸಮಾಜಕ್ಕೆ ಬಿಟ್ಟು ಹೋಗಿದ್ದಾರೆ. ಇವು ಉತ್ತಮ ಬದುಕಿಗೆ ಸಹಕಾರಿಯಾದ ಧರ್ಮಮಾರ್ಗಗಳನ್ನು ಬೋಧಿಸುತ್ತವೆ. ಧಾರ್ಮಿಕ ಮನೋಭಾವದ ವ್ಯಕ್ತಿಗಳು ಸಂಕುಚಿತ ಸ್ವಭಾವದವರಾಗದೆ ಇಡೀ ಮಾನವ ಜನಾಂಗದ ಉದ್ಧಾರ ಹಾಗೂ ಸೌಖ್ಯವನ್ನು ಗುರಿಯಾಗಿಟ್ಟುಕೊಂಡಿರುತ್ತಾರೆ. ದಾಸರೂ ಅಷ್ಟೇ 'ದೇವರ ನಾಮ'ಗಳ ಮೂಲಕ ಇಡೀ ಮಾನವ ಜನಾಂಗಕ್ಕೇ ಮಾರ್ಗದರ್ಶನ ಮಾಡಿದ್ದಾರೆ. ಜೀವನದಲ್ಲಿ ಬರುವ ಕಷ್ಟಗಳನ್ನು ಹೇಗೆ ಎದುರಿಸಬೇಕು, ಹೇಗೆ ಒಳಿತಾಗಿ ಬದುಕಬೇಕು, ಎಲ್ಲರೊಡನೆ ಸ್ನೇಹ ಮತ್ತು ಪ್ರೀತಿಯ ಜೀವನವನ್ನು ಹೇಗೆ ನಡೆಸಬೇಕೆನ್ನುವುದರ ಬಗ್ಗೆ ವಿವರಿಸಿದ್ದಾರೆ.

ಹೀಗೆ ಧಾರ್ಮಿಕ ವ್ಯಕ್ತಿಗಳು ಉತ್ತಮ ರೀತಿ ನೀತಿಗಲನ್ನು, ತತ್ತ್ವಗಳನ್ನು ಒಂದು ಕೋಮಿನ ಜನರು ಪಾಲಿಸಲಿ, ಅವರ ಕ್ಷೇಮಕ್ಕಷ್ಟೇ ಸೀಮಿವಾಗಲಿ ಎಂದು ಎಂದಿಗೂ ಬಯಸಿಲ್ಲ. ಅವರೆಲ್ಲರ ಉದ್ದೇಶ, ಇಡೀ ಮಾನವ ಜನಾಂಗದ ಕ್ಷೇಮ ಸಾಧನೆ. ಅವರ ಅನುಯಾಯಿಗಲು ತಮ್ಮದೇ ಒಂದು ಗುಂಪುಮಾಡಿಕೊಂಡು ತಾವು ಬೇರೆ ಎಂಬಂತೆ ಬದುಕುತ್ತ, ಮೇಲು ಕೀಳುಗಳ ಭಾವನೆಯನ್ನು ಸರಿಯಾದ ತಿಳುವಳಿಕೆ ಪಡೆಯದ ಜನರಲ್ಲಿ ತುಂಬುತ್ತ, ಧರ್ಮದ ಹೆಸರಿನಲ್ಲಿ ಜಗಳ, ದ್ವೇಷ, ರಕ್ತಪಾತಗಳಿಗೆ ಎಡೆಮಾಡುತ್ತಿರುವುದು. "ಧರ್ಮ, ಮನೆಯಿಂದ ಹೊರಗೆ ಬಂದರೆ

ಸಮಾಜ ಜೀವನದಲ್ಲಿ, ರಾಜಕೀಯ ಜೀವನದಲ್ಲಿ ಪ್ರವೇಶಿಸಿದರೆ ಕೆಡಕು ಮಾಡುತ್ತದೆ" ಎಂಬ ಅಭಿಪ್ರಾಯಕ್ಕೆ ಎಡೆಮಾಡಿಕೊಡುತ್ತಿದೆ.

ಎಲ್ಲಾ ಧರ್ಮಗಳಲ್ಲೂ ಉತ್ತಮ ತತ್ತ್ವಗಳು ಅಡಕವಾಗಿವೆ. ಆ ತತ್ತ್ವಗಳ ಪ್ರತಿಪಾದಕರನ್ನು ಧರ್ಮಸಂಸ್ಥಾಪಕರೆಂದು ಕರೆದು, ಅವರ ಅನುಯಾಯಿಗಳನ್ನು ಒಂದು ಪ್ರತ್ಯೇಕ ಜಾತಿಯವರೆಂದು ಮಾಡಿಕೊಂಡು, ಧರ್ಮವನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ಜನ ಧರ್ಮದ ಹೆಸರಿನಲ್ಲಿ ಬಡಿದಾಡತೊಡಗಿರುವುದು ತುಂಬಾ ವಿಷಾದನೀಯ ಹಾಗೂ ಖಂಡನೀಯ. ಮನುಷ್ಯನ ಜೀವನದಲ್ಲಿ ಹೆಜ್ಜೆ ಹೆಜ್ಜಗೂ ಧರ್ಮಬೇಕು. ಒಬ್ಬ ವ್ಯಕ್ತಿ ಕುಟುಂಬ ಜೀವಿಯಾಗಿ ಕುಟುಂಬಧರ್ಮ ಪಾಲಿಸಬೇಕಾಗುತ್ತದೆ. ಸಮಾಜ ಜೀವಿಯಾಗಿ, ಸಮಾಜ ಧರ್ಮಕ್ಕೆ ಅನುಗುಣವಾಗಿ ನಡೆಯಬೇಕಾಗುತ್ತದೆ. ವೃತ್ತಿಪರವಾಗಿವೃತ್ತಿ ಧರ್ಮಕ್ಕೆ ತಕ್ಕಂತೆ ಕೆಲಸ ಮಾಡಬೇಕಾಗುತ್ತದೆ ರಾಜಕೀಯ ಕ್ಷೇತ್ರದಲ್ಲಿ ರಾಜಕೀಯ ಧರ್ಮಕ್ಕೆ ಅನುಸಾರವಾಗಿ ವರ್ತಿಸಬೇಕಗುತ್ತದೆ. ನಿಜವಾದ ಧಾರ್ಮಿಕ ವ್ಯಕ್ತಿ ತಾನು ಪಾತ್ರವಹಿಸುವ ಎಲ್ಲ ಕ್ಷೇತ್ರಗಳಲ್ಲಿ ಎಲ್ಲರ ಒಳಿತೂ ಆಗುವಂತೆ ಧರ್ಮರೀತಿಯಿಂದ ಬದುಕುತ್ತಾನೆ. ಹೀಗಿರುವಾಗ ಧರ್ಮವನ್ನು ರಾಜಕಾರಣದಿಂದ ದೂರವಿರಿಸಬೇಕಾದರೆ, ರಾಜಕಾರಣದಲ್ಲಿ ನೀತಿ ಇಲ್ಲದಂತಾಗಬೇಕು ಎಂದು ಅರ್ಥವಾಗುತ್ತದೆ. ಇದು ಸರಿಯಲ್ಲ. ಸ್ವಾರ್ಥ ಮೂಲವಾದ ಧರ್ಮವನ್ನು ರಾಜಕಾರಣದಲ್ಲಿ ಬೆರೆಸಬಾರದು ಅಷ್ಟೆ.

ಭಾರತದಲ್ಲಿ ಪ್ರಜಾರಾಜ್ಯ ಬರುವ ಮೊದಲು, ಬಹಳಷ್ಟು ಜನರಲ್ಲಿ ನಿಜವಾದ ಧಾರ್ಮಿಕ ಬಾವನೆ ಇತ್ತು. ಮನೆಯ ಒಲಗೆ ತಮ್ಮ ಜಾತಿ ಹಾಗೂ ಧಾರ್ಮಿಕವಾದ ಆಚರಣೆಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಾ ಸಾಮಾಜಿಹಾಗೂ ರಾಜಕೀಯ ಜೀವನದಲ್ಲಿ ತಮ್ಮ ಜಾತಿ ಪಂಥಗಳನ್ನು ಮರೆತು ಜನರು ಸಮಾಜದ, ರಾಷ್ಟ್ರದ ಹಾಗೂ ಜನಾಂಗದ ಒಳಿತಿಗಾಗಿ ಸಹಕಾರದಿಂದ ಕೆಲಸ ಮಾಡುತ್ತಿದ್ದರು. ಆದರೆ ಪ್ರಜಾರಾಜ್ಯ ಸ್ಥಾಪನೆಯಾದ ಮೇಲೆ ಅನೇಕ ಮತ, ಜಾತಿ, ಪಂಥಗಳೀಗರುವ ಈ ದೇಶದಲ್ಲಿ, ಮತೀಯವಾದ ಸಮಸ್ಯೆಗೋಗೆ ಅವಕಾಶವಾಗಬಾರದೆಂದು ಸಂವಿಧಾನ ರಚಕರು ಭಾರತನ್ನು ತಮಗೆ ಬೇಕಾದ ಧರ್ಮವನ್ನು ಸ್ವೀಕರಿಸಲು ಆಯಾ ಧರ್ಮದ ಕಟ್ಟು ಪಾಡಿಗೆ ತಕ್ಕಂತೆ ಬದುಕಲು ಸ್ವತಂತ್ರರು. ಆದರೆ ಒಬ್ಬರ ಧಾರ್ಮಿಕ ಭಾವನೆ ಇನ್ನೊಬ್ಬರ ಧಾರ್ಮಿಕ ಭಾವನೆಗೆ ಯಾವುದೇ ರೀತಿಯಲ್ಲಿ ಅಡ್ಡಿಯನ್ನುಂಟುಮಾಡಬಾರದು. ರಾಷ್ಟ್ರದ ದೃಷ್ಟಿಯಲ್ಲಿ ಎಲ್ಲ ಧರ್ಮೀಯರೂ ಸಮಾನ ಎಂಬುದು ಇದರ ಮುಖ್ಯ ಸಾರ.

ಭಾರತವನ್ನು ಜಾತ್ಯಾತೀತ ರಾಷ್ಟ್ರವೆಂದು ಘೋಷಿಸಿದ ಉದ್ದೇಶ. ದೇಶದಲ್ಲಿ ಜಾತಿಯ ಕಾರಣಗಳಿಂದಾಗಿ ಸಮಸ್ಯೆಗಳು ಏಳಬಾರದು ಎಂದು. ಆದರೆ, ಜಾತ್ಯಾತೀತ

ರಾಷ್ಟ್ರದ ಪ್ರಜೆಗೆ ಬೇಕದ ಸರಿಯಾದ ಅರಿವನ್ನು, ಶಿಕ್ಷಣವನ್ನು ಜನರಿಗೆ ಕೊಡಲಿಲ್ಲ. ಅಷ್ಟೇ ಅಲ್ಲ ವಿಷಯಗಳನ್ನು ಜನರು ದುರುಪಯೋಗ ಮಾಡಿಕೊಳ್ಳಲು ಆಸ್ಪದವಾಗುವಂತಹ ರೀತಿಯಲ್ಲಿ ಸರ್ಕಾರವು ತನ್ನ ಅಭಿವೃದ್ಧಿ ಯೋಜನೆಗಳಲ್ಲಿ ಜಾತಿಯನ್ನೇ ತನ್ನ ಆಧಾರವಾಗಿ ಇಟ್ಟುಕೊಳ್ಳಬೇಕಾದಂತಹ ಕ್ರಮಗಳನ್ನು ಜಾರಿಗೆ ತಂದಿತು. ಅಲ್ಲದೆ ಚುನಾವಣೆಗಳಲ್ಲಿ ಗೆಲ್ಲಲು ರಾಜಕಾರಣಿಗಳು ಜಾತಿಯನ್ನು ಧರ್ಮದಿಂದ, ಧಾರ್ಮಿಕ ತತ್ತ್ವಗಳಿಂದ ಪ್ರತ್ಯೇಕಿಸಿ, ಸಂಕುಚಿತ ಜಾತೀಯತೆಯನ್ನು ಮುಂದು ಮಾಡಿ ಜಾತಿ ಜಾತಿಗಳಲ್ಲಿ ದ್ವೇಷ ಬಿತ್ತಿ ತಮ್ಮ ಸವಾರ್ಥ ಸಾಧಿಸಿಕೊಳ್ಳತೊಡಗಿದರು. ರಾಜಕಾರಣಿಗಳೂ, ರಾಜಕೀಯ ಪಕ್ಷಗಳೂ, ತಮ್ಮ ವೈಯಕ್ತಿಕವಾಗ ಹಾಗೂ ಪಕ್ಷದ ಗೆಲುವನ್ನು ಮುಖ್ಯ ಗುರಿಯನ್ನಫಿ ಇಟ್ಟುಕೊಂಡರೇ ಹೊರತು ಇಂತಹ ವರ್ತನೆಗಳು ದೇಶದ ಮೇಲೆ, ಪೀಳಿಗೆಯ ಮೇಲೆ, ಭವಿಷ್ಯತ್ತಿನ ಮೇಲೆ ಎಂತಹ ದುಷ್ಪರಿಣಾಮ ಉಂಟುಮಾಡುವುದೆಂಬುದರ ಬಗ್ಗೆ ಸ್ವಲ್ಪವೂ ಯೋಚಿಸಲಿಲ್ಲ. ಅವರಲ್ಲಿಯ ಪೈಪೋಟಿ, ಸ್ವಾರ್ಥ, ಆದೂರ ದೃಷ್ಟಿ, ತಾತ್ಕಾಲಿಕ ಲಾಭಗಳ ಕಡೆಗಿನ ಗಮನ, ಸಾಮಾನ್ಯ ಜನರು ಸಂಕುಚಿತ ಭಾವನೆ ಬೆಳೆಸಿಕೊಂಡು ಜಾತೀಯ ಗುಂಪುಗಾರಿಕೆ ಮಾಡಿಕೊಂಡು ತಮ್ಮ ತಮ್ಮಲ್ಲಿಯೇ ಬಡಿದಾಡಲು ಮಾಗ್ ಮಡಿಕೊಟ್ಟಿತು. ಈ ಪರಿಸ್ತಿತಿಯಲ್ಲಿ ಜನರು ತಾವು ವತಿಸುವ ರಿತಿಯೇ ಸರಿ; ಇದೇ ಧರ್ಮ ಎಂದು ತಿಳಿಯುವಂತೆ ಮಾಡಿದ ರಾಜಕಾರಣಿಯ ಕುತಂತ್ರ ಇಷ್ಟು ಗೊಂದಲಗಳಿಗೆ ಜಾತಿ ಹೆಸರಿನಲ್ಲಿ ದೇಶ ವಿನಾಶವಾಗುವಂತೆ ರಾಜಕಾರಣವೂ ರೂಪುಗೊಳ್ಳಲು ಕಾರಣವಾಯಿತು. ಜನರು ಧರ್ಮದ ತಿರುಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಎಲ್ಲ ಧರ್ಮಗಳ ಮೂಲತತ್ವ ಒಂದೇ, ದೇವರು ಒಬ್ಬನೇ. ಆ ದೇವರ ದೃಷ್ಟಿಯಲ್ಲಿ ಸರ್ವರೂ ಸಮನರು ಎಂಬ ಅಂಶವನ್ನು ಜನರಿಗೆ ಜಾತ್ಯಾತೀತ ರಾಷ್ಟ್ರದಲ್ಲಿ ಮನಗಾಣಿಸಬೇಕು. ಅಲ್ಲದೇ ಜಾತಿಯ ಆಧಾರವನ್ನು ಸರ್ಕಾರ ಯಾವ ವಿಷಯದಲ್ಲೂ ಮುಂದೆ ಮಾಡಬಾರದು. ಹೀಗಾಗಿದ್ದೇ ಆದಲ್ಲಿ ಜನರು ತಮ್ಮ ಲಾಭಕ್ಕಗಿ ಧರ್ಮವನ್ನು ತಮಗೆ ಬೇಕಾದಂತೆ ಅರ್ಥೈಸುವುದಲ್ಲದೆ ಧರ್ಮದ ತತ್ವಗಳ ಬಗ್ಗೆ ಲಕ್ಷ್ಯಕೊಡದೆ ಜಾತಿಯ ವಿಷಯಕ್ಕೇ ಲಕ್ಷ್ಯಕೊಡುತ್ತಾ ಅದನ್ನು ಹೇಗೆ ಉಪಯೋಗಿಸಿಕೊಂಡರೆ ತಮಗೆ ಹೆಚ್ಚು ಲಾಭವಾಗುತ್ತದೆ ಎಂಬುದಕ್ಕೆ ಗಮನ ಕೊಡುತ್ತಾರೆ. ಆಗ ಜನರಲ್ಲಿ ನಿಜವಾದ ಧಾರ್ಮಿಕ ಭಾವನೆ ಬರುಬರುತ್ತಾ ಇಲ್ಲವಾಗಿಬಿಡುತ್ತದೆ. ಜಾತಿಯ ಹೆಸರಿನಲ್ಲಿ ರಾಜಕೀಯ ಮಾಡಿ ದೇಶಕ್ಕೆ ಗಂಡಾಂತರ ತಂದುಬಿಡುತ್ತಾರೆ. ಆದ್ದರಿಂದ ಧರ್ಮ–ರಾಜಕಾರಣ ಕೂಡಿ ಇರಬಾರದು ಎಂಬ ಅನಿಸಿಕೆ ಕೆಲವರಲ್ಲಿ ಉಂಟಾಗಲು ಆಸ್ಪದವಾಗಿದೆ. ಅದು ತಪ್ಪು. ಮನುಷ್ಯ ನಿಜವಾಗಿ ಧಾರ್ಮಿಕ ಭಾವನೆ ಉಳ್ಳವನಾಗಿದ್ದರೆ, ಅವನ ರಾಜಕಾರಣ ರಾಷ್ಟ್ರದ ಹಿತವನ್ನು ಸಾಧಿಸುತ್ತದೆ. ಸಾಮ್ರಾಟ್ ಅಶೋಕ ಧಾರ್ಮಿಕ ವ್ಯಕ್ತಿಯಾಗಿದ್ದ. ರಾಮಾಯಣ

ಕಾಲದ ಶ್ರೀರಾಮ ಧರ್ಮದಲ್ಲಿ ಸಂಪೂರ್ಣ ಶ್ರದ್ಧೆಯುಳ್ಳವನಾಗಿದ್ದ. ಮಹಾ ಭಾರತದ ಧರ್ಮರಾಯ ಧರ್ಮ ನಿಷ್ಠೆಯುಳ್ಳವನಾಗಿದ್ದ. ಅವರ ರಾಜನೀತಿಯನ್ನು ನಾವು ಇಂದಿಗೂ ಗೌರವಿಸುತ್ತೇವೆ, ಅನುಕರಿಸಲು ಆಶಿಸುತ್ತೇವೆ. ಆ ರೀತಿಯಲ್ಲಿ ಧರ್ಮ ರಾಜಕಾರಣದಲ್ಲಿ ಇರಬೇಕು. ಆದರೆ ಜಾತೀಯತೆಯನ್ನು ಒಳಗೊಂಡಿರಬಾರದು- ಸ್ವಾರ್ಥಮೂಲವಾಗಿರಬಾರದು.

## ನೀತಿ ಶಿಕ್ಷಣ

ಇಂದಿನ ಸಾಮಾಜದಲ್ಲಿ ಎಲ್ಲೆಲ್ಲೂ ಅಶಾಂತಿ, ಅತೃಪ್ತಿ, ಅಸಮಾಧಾನಗಳು ತುಂಬಿವೆ. ಮೋಸ, ದ್ವೇಷ, ಕುತಂತ್ರ, ಅಸಹನೆ, ಅಪ್ರಮಾಣಿಕತೆ, ಸ್ವಾರ್ಥ, ಹೊಟ್ಟೆ ಕಿಚ್ಚು ಮುಂತಾದ ದುರ್ಗುಣಗಳು ಜನಜೀವನದಲ್ಲಿ ಹಾಸುಹೊಕ್ಕಾಗಿ ಬಿಟ್ಟಿವೆ. 'ಉತ್ತಮ ಮೌಲ್ಯಗಳನ್ನು ಹೊಂದಿ ಬದುಕುವುದೇ ದುಸ್ತ' ಎನ್ನುವ ಮಟ್ಟಿಗೆ ಮೌಲ್ಯಗಳ ಅಪಮೌಲ್ಯವಾಗಿರುವುದನ್ನು ಎಲ್ಲೆಡೆ ಕಾಣುತ್ತಿದ್ದೇವೆ. ಇಂತಹ ಪರಿಸ್ಥಿತಿಯಲ್ಲಿ ಯಾರೂ ನೆಮ್ಮದಿಯ ಜೀವನವನ್ನು ಬದುಕುವುದು ಅಸಾಧ್ಯ ಎನ್ನುವಂಥ ಪರಿಸ್ತಿತಿ ದಿನದಿನಕ್ಕೂ ವಿಸ್ತಾರಗೊಳ್ಳುತ್ತಾ ಹೋಗುತ್ತಿದೆ.

ಮೇಲೆ ಹೇಳಿದಂತಹ ಪರಿಸ್ಥಿತಿಯಿಂದ ನಮ್ಮಲ್ಲಿಯ ಧಾರ್ಮಿಕ, ರಾಜಕೀಯ, ಸಾಮಾಜಿಕ ಮುಂತಾದ ಎಲ್ಲ ಅಭಿವೃದ್ಧಿ ಕಾರ್ಯಗಳು ವಿಫಲವಾಗುತ್ತಿದೆ. ಮನುಷ್ಯ ಎಷ್ಟೇ ಬುದ್ಧಿವಂತನಿದ್ದರೂ ನೀತಿಯುತ ನಡುವಳಿಕೆಹೊಂದಿದವನಾಗಿಲ್ಲದಿದ್ದರೆ, ನೆಮ್ಮದಿಯ ಬದುಕು ಬದುಕಲಾಗುವುದಿಲ್ಲ. ವಿಜ್ಞಾನ ಸಾಧಿಸಿರುವ ಅದ್ಭುತಗಳು ಅನೇಕ. ಅಸಾಧ್ಯಗಳನ್ನು ಸಾಧ್ಯವಾಗಿಸಬಲ್ಲ ಅನೇಕ ಸಂಶೋಧನೆಗಳನ್ನು ಮಾಡಿದ್ದಾರೆ. ಆದರೆ ಇವಾವವೂ ಜನರಲ್ಲಿ ನೆಮ್ಮದಿಯನ್ನಾಗಲೀ, ಆತ್ಮವಿಶ್ವಾಸವನ್ನಾಗಲೀ ಉಂಟುಮಾಡಲು ಶಕ್ತವಾಗಿಲ್ಲ. ಉತ್ತಮ ಮೌಲ್ಯಗಳಾದ ಸಹನೆ, ಪ್ರಾಮಾಣಿಕತೆ, ಸಹಕಾರ, ಕೃತಜ್ಞತೆ, ಪ್ರೀತಿ-ವಿಶ್ವಾಸದಿಂದ ತುಮಬಿದ ನಡೆ, ಕಷ್ಟಪಟ್ಟು ದುಡಿಯುವ ಮನೋಬಾವ, ಭ್ರಾತೃಭಾವ,ಪರೋಪಕಾರ ಮುಂಥಾದ ಗುಣಗಳನ್ನು ಅಳವಡಿಸಿಕೊಂಡಾಗ ಮಾತ್ರ ಮಾನವನಲ್ಲಿರುವ ಬುದ್ಧಿವಂತಿಕೆ ಅವನ ಸುಖಕ್ಕೆ ಸಹಾಯಕವಾಗುತ್ತದೆ. ಸತ್ಪ್ರಯತ್ನಗಳು ಸಫಲವಾಗುತ್ತವೆ. ಈ ಮೌಲ್ಯಗಳಿಲ್ಲದ ಆಧುನಿಕತೆ, ವೈಜ್ಞಾನಿಕ ಸಾಧನೆಗಳು. ಸಂಪತ್ತು ಮಾನವನಲ್ಲಿ ವಿಷಯಲೋಲುಪತೆಯ ಮನೋಭಾವನೆಯನ್ನು ಉಂಟುಮಾಡುತ್ತವೆ. ಆದುದರಿಂದ ಉತ್ತಮ ಮೌಲ್ಯಗಳನ್ನು ಹೊಂದಿದ ನೀತಿವಂತ ಪೀಳಿಗೆಯ ನಿರ್ಮಾಣ ಅಗತ್ಯ. ಯಾವುದೇ ಕೆಲಸವು ನೀತಿಯ ನೆಲಗಟ್ಟಿನಮೇಲೆ ನಿಂತಿದ್ದರ ಮಾತ್ರ ಅದು ಉತ್ತಮ ಫಲ ನೀಡಬಲ್ಲದು. ಇಲ್ಲದಿದ್ದಲ್ಲಿ ಇಂದಲ್ಲ ನಾಳೆ ವಿನಾಶ ಖಂಡಿತ. ಇಂದಿನ ಪೀಳಿಗೆಯಲ್ಲಿ ಹೆಚ್ಚಾಗಿ ಬೇಜವಾಬ್ದಾರಿಯುತ ನಡುವಳಿಕೆಯನ್ನು ಕಾಣುತ್ತಿದ್ದೇವೆ. ಕೊಲೆ-ಸುಲಿಗೆಗಳಲ್ಲಿ,

ಡಕಾಯತಿ, ದರೋಡೆಗಳಲ್ಲಿ ಹೆಚ್ಚಾಗಿ ಇಪ್ಪತ್ತರಿಂದ ಇಪ್ಪತ್ತೈದು–ಮೂವತ್ತು ವಯಸ್ಸಿನ ಯುವಕರೆ ಇರುವುದನ್ನು ಗಮನಿಸಿದರೆ, ನೀತಿಯುತ ಮಾರ್ಗದರ್ಶನವಿಲ್ಲದ ಪೀಳಿಗೆಯ ನಿರ್ಮಾಣವಾಗುತ್ತಿರುವುದು ಸ್ಪಷ್ಟವಾಗಿ ಕಾಣಬರುತ್ತದೆ. ಹೀಗಾಗಿ ಸಾಮಾಜಿಕ ಅಶಾಂತಿ, ಭಯದ ವಾತಾವರಣ, ಅನಿಶ್ಚಿತ ಪರಿಸ್ಥಿತಿಗಳು ಉಂಟಾಗಿವೆ. ಬಹಳಷ್ಟು ಜನರು ಗುರು ಇಲ್ಲದೆದ ಅಡ್ಡಾಡುವುದರಲ್ಲಿ, ಮಾದಕ ದ್ರವ್ಯ ಸೇವನೆಯಲಿ, ಅನೀತಿಯ ಬದುಕಿನಲ್ಲಿ ಆಸಕ್ತರಾಗಿದ್ದಾರೆ. ಜನರಿಗೆ ಐಷಾರಾಮಿ ಜೀವನ ಬೇಕಾಗಿದೆ. ದುಡಿಯದೆ ಎಲ್ಲ ಸುಖ ಬೇಕೆಂಬ ಸುಲಲೋಲುಪತೆಯ ಮನೋಭಾವ ಕಾಣುತ್ತಿದೆ. ಇಂತಹ ಪರಿಸ್ಥಿತಿಗೆ ಕಾರಣ ಅನೇಕ. ಪಾಲಕರಲ್ಲಿ, ಸಮಾಜದಲ್ಲಿ, ಶಿಕ್ಷಣ ಕ್ಷೇತ್ರದಲ್ಲಿ ಮಕ್ಕಳಿಗೆ ಮಾರ್ಗದರ್ಶನವಾಗಬಲ್ಲ, ಉತ್ತಮ ನಡುವಳಿಕೆಯುಳ್ಳ ಜನರ ಉದಾಹರಣೆ ವಿರಳವಾಗಿದೆ. ಬಾಲ್ಯದಿಂದಲೂ ಮಕ್ಕಳಿಗೆ ಉತ್ತಮವಾದ ಬೋಧನೆ, ಪರಿಸರ ಉದಾಹರಣೆಗಳ ಮೂಲಕ ಸಧ್ಯದ ಪರಿಸ್ಥಿತಿಯನ್ನು ಸುಧಾರಿಸಬಹುದಾಗಿದೆ.

ಪ್ರಾಚೀನ ಕಾಲದಲ್ಲಿ ಚಾರಿತ್ರ್ಯ ನಿರ್ಮಾಣಕ್ಕೆ ಬೋಧನೆಯಲ್ಲಿ ಹೆಚ್ಚು ಮಹತ್ವ ಕೊಡುತ್ತಿದ್ದರು. ಹಾಗಾಗಿ ವಿದ್ಯಾವಂತರಾದವರು ಸಚ್ಚಾರಿತ್ರ್ಯ ಉಳ್ಳವರಾಗಿಯೇ ಇರುತ್ತಿದ್ದರು. ಈಗಲೂ ಶಿಕ್ಷಣ ಸಂಸ್ಥೆಗಳು ಈ ದಿಶೆಯಲ್ಲಿ ಕಾರ್ಯೋನ್ಮುಖವಾಗಬೇಕು. ಜೊತೆಗೆ ಮನೆ ಹಾಗೂ ಸಮಾಜದಲ್ಲಿಯೂ ಉತ್ತಮ ನಿದರ್ಶನ. ಮಾರ್ಗದರ್ಶನ ಅಗತ್ಯ.

ಶಾಳೆಯಲ್ಲಿ ಮಗುವಿಗೆ ಪ್ರಾರಂಭದಿಂದಲೂ ಆಯಾ ವಯಸ್ಸಿಗೆ ಅನುಗುಣವಾಗಿ ನೈತಿಕ ಶಿಕ್ಷಣ ದೊರೆಯುವಂತಾಗಬೇಕು. ಆ ಮೂಲಕ ಮಕ್ಕಳು ಪ್ರಜ್ಞಾವಂತರೂ, ಉತ್ತಮ ನಡೆಯುಳ್ಳವರೂ, ಹೊಣೆಗಾರ ವ್ಯಕ್ತಿಗಳೂ ಆಗುವಂತೆ ಮಾಡಬಹುದು. ಇದನ್ನರಿತು ಎಲ್ಲಾ ಶಿಕ್ಷಣ ಆರೋಗಗಳೂ, ಶಿಕ್ಷಣ ತಜ್ಞರೂ ಅನೇಕ ರೀತಿಯ ಶಿಫಾರಸುಗಳನ್ನು ಮಾಡಿದ್ದನ್ನು ಕಾಣುತ್ತೇವೆ.

ಕ್ರಿಶ. ೧೮೮೨ ಶಿಕ್ಷಣ ಆಯೋಗ ಮೊದಲ್ಗೊಂಡು, ಸರ್ ರಾಧಾಕೃಷ್ಣ ಆಯೋಗ, ಪ್ರಕಾಶ್ ಸಮಿತಿ, ಡಾ. ಸಂಪೂರ್ಣಾನಂದ ಸಮಿತಿ, ಕೊಠಾರಿ ಆಯೋಗ ಮುಂತಾದುವೆಲ್ಲವೂ ಕೂಡ ಈ ಬಗ್ಗೆ ಸಲಹೆ ನೀಡಿವೆ. ಕೊಠಾರಿ ಆಯೋಗವು ಶಾಲಾ ವೇಳಾಪತ್ರಿಕೆಯಲ್ಲಿ ನೈತಿಕ ಶಿಕ್ಷಣಕ್ಕಾಗಿಯೇ ಪ್ರತ್ಯೇಕ ಅವಧಿಗಳನ್ನು ಮೀಸಲಿಡಬೇಕೆಂದು ನಿರ್ದಿಷ್ಟ ಸಲಹೆ ಕೊಟ್ಟಿದೆ. ಕರ್ನಾಟಕದಲ್ಲಿ ೧೯೭೯–೮೦ ರಿಂದ ನೈತಿಕ ಶಿಕ್ಷಣವನ್ನು ಮಾಧ್ಯಮಿಕ ಶಾಲೆಗಳಲ್ಲಿ ಬೋಧಿಸಬೇಕೆಂಬ ನಿಯಮವನ್ನು ಜಾರಿಗೆ ತರಲಾಗಿದೆ. ಆದರೆ ಇದರ ಪಠ್ಯವು ಸರಿಯಾಗಿ ವ್ಯವಸ್ಥೆಯಾಗಿಲ್ಲ. ಇದು ಪರೀಕ್ಷಾ ವಿಷಯವಾಗಿಲ್ಲವೆಂಬ ಕಾರಣದಿಂದ ಶಾಲೆಗಳು ಇದಕ್ಕೆ ಅವಶ್ಯಕವಾದ ಮಹತ್ವ ಕೊಡತುತ್ತಿಲ್ಲ. ಇದೇನು ಮಹತ್ವದ ವಿಸಯವಲ್ಲವೆಂಬಂತೆ ಪರಿಗಣಿಸಿ, ಆ

ಅವಧಿಯನ್ನು ಬೇರಾವುದೋ ವಿಷಯ್ಕಕೆ ಉಪಯೋಗಿಸಿಕೊಳ್ಳುವುದು ಸರ್ವೇಸಾಮಾನ್ಯವಾಗಿಬಿಟ್ಟಿದೆ. ಕೆಲವು ಶಿಕ್ಷಕರು ನೈತಿಕ ಶಿಕ್ಷಣದ ಕ್ಲಾಸಿಗೆ ಹೋವುಗುದಿಲ್ಲ., ಆಗ ಮಕ್ಕಳು ಬೇಜವಾಬ್ದಾರಿಯಿಂದ ನಡೆಯುವ ವರ್ತನೆಯನ್ನು ನೈ.ಶಿ. ಅವಧಿಯಲ್ಲಿ ಕಲಿಯಲು ಅವಕಾಶವಾಗುತ್ತದೆ. ಕೆಲವು ಶಿಕ್ಷಕರು ಹೋದರೂ, ಗುರಿ ಇಲ್ಲದೆ ಕಥೆ ಅಥವಾ ಹಾಡುಗಳನ್ನು ಹೇಳಿಸುತ್ತಾ ಅವಧಿಯನ್ನು ಮುಗಿಸುತ್ತಾರೆ. ನೀತಿ ಬೋಧನೆಯ ಬಗ್ಗೆ ಇರುವ ಶಿಕ್ಷಕರ ಈ ರೀತಿಯನ್ನು ಧೋರಣೆಯಿಂದ ಮಕ್ಕಳಿಗೂ ಆ ಬಗ್ಗೆ ಅಲಕ್ಷ್ಯ ಉಂಟಾಗಿದೆ. ಈ ರೀತಿ ಬಹಳಷ್ಟು ಶಾಲೆಗಳಲ್ಲಿ ನೈತಿಕ ಶಿಕ್ಷಣಕ್ಕಾಗಿ ಇಟ್ಟಿರುವ ಅವಧಿ ವ್ಯರ್ಥವಾಗುತ್ತಿರುವುದಲ್ಲದೇ. ಬೇಜವಾಬ್ದಾರಿತನ ಬೆಳೆಯಲಿಕ್ಕೂ ಕಾರಣವಾಗಿದೆ.

ಆದೆರ ಶಾಲೆಗಲೂ ಈ ವಿಷಯದಲ್ಲಿ ಎಚ್ಚರಿಕೆವಹಿಸುವುದು ಅಗತ್ಯವಾದುದು, ಮಗುವಿನಲ್ಲಿ ನೀತಿಯುತಾದ ನಡುವಳಿಕೆ ಜ್ಞಾನಾರ್ಜನೆಯಷ್ಟೇ ಮಹತ್ವದ್ದು. ಆದುದರಿಮದ ನೀತಿಬೋಧೇಯ ಅವಧಿಯನ್ನು ಸದುಪಯೋಗಪಡಿಸಿಕೊಳ್ಳುವುದರ ಜೊತೆಗೆ ಉಳಿದ ಉಷಯಗಳನ್ನು ಬೋಧಿಸುವಾಗಲೂ ಅವಕಾಶ ಸಿಕ್ಕಾಗಲೆಲ್ಲ ಆ ಸುಸಂಧಿಯನ್ನು ಬಳಸಿಕೊಂಡು ಮಕ್ಕಳಿಗೆ ಮಾರ್ಗದರ್ಶನ ಮಾಡಬೆಕು. ಆಟದ ಸಮಯದಲ್ಲಿ. ಸಹಪಠ್ಯ ಚಟುವಟಿಕೆಗಳನ್ನು ನಡೆಸುವಾಗ ಅನೇಕ ಸಂದರ್ಭಗಳು ದೊರೆಯುತ್ತದೆ. ಇವುಗಳನ್ನೆಲ್ಲಾ ಉಪಯೋಗಿಸಿಕೊಂಖಡು ಮಕ್ಕಳಲ್ಲಿ ಸಚ್ಚಾರಿತ್ರ್ಯ ಬೆಳೆಯುವಂತೆ ಮಾಡಿ ದೇಶದ ಏಳ್ಗೆಗೆ, ನೆಮ್ಮದಿಗೆ ಸಹಾಯಕವಾಗುವಂತೆ ಮಾಡುವುದು ಮುಖ್ಯವಾಗಿ ಶಿಕ್ಷಕರ ಹೊಣೆಯಾಗಿದೆ.

## ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ?

ನಾವು ಮಕ್ಕಳನ್ನು ಗಮನಿಸಿ ನೋಡಿದರೆ ಒಂದೊಂದರ ಸ್ವಭಾವ ಒಂದೊಂದು ರೀತಿ. ಅವರ ಮುಖ್ಯ ಸ್ವಭಾವಗಳಿಗನುಸರಿಸಿ ಅವರನ್ನು ಬೇರೆ. ಬೇರೆ ಗುಂಪುಗಳನ್ನಾಗಿ ವಿಂಗಡಿಸಬಹುದು. ಹಾಗೆ ವಿಂಗಡಿಸಿದರೆ ಗುಂಪುಗಳಲ್ಲಿ ಬುದ್ಧಿವಂತರಿದ್ದು ಒಳ್ಳೆದು ಸ್ವಭಾವ, ವಿಚಾರ ಹಾಗೂ ಧ್ಯೇಯಗಳಿದ್ದರೂ ಸಹ ಅವರು ಏನನ್ನೂ ಸಾಧಿಸುವುದಿಲ್ಲ. ಹಾಗೇಕೆ? ಎಂದು ವಿಚಾರಿಸಿದರೆ ಅದರ ಕಾರಣ ತಿಳಿಯಬಹುದು.

ಈ ಬುದ್ಧಿವಂತ ಮಕ್ಕಳು ಮನಸ್ಸಿಟ್ಟು ಮಾಡಿದರೆ ಅದ್ಭುತವನ್ನೂ ಸಾಧಿಸಬಲ್ಲರು. ಸಾಧಿಸಬೇಕೆಂದು ವಿಚಾರವನ್ನೂ ಮಾಡುತ್ತಾರೆ. ಆದರೆ ಏನನ್ನೂ ಸಾಧಿಸುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಸೋಮಾರಿತನ. ವಿಚಾರಗಳಿದ್ದರೂ ದೃಢನಿರ್ಧಾರ ಇಲ್ಲದೆಯಿರುವುದರಿಂದ ಕರ್ಯ ಪ್ರವೃತ್ತರಾವುದೇ ಇಲ್ಲ. ಹಿಡಿದ ಕೆಲಸವನ್ನು

ಯೋಚಿಸಿಕೊಳ್ಳುವಂತೆ ಮುಗಿಸಬೇಕಾದರೆ ಸತತವಾದ ಪ್ರಯತ್ನ ಕಾರ್ಯಸಾಧನಾ ಮನೋಭಾವ ಚುರುಕುತನಬೇಕು. ದೃಢಸಂಕಲ್ಪವಿಲ್ಲದಿದ್ದರೆ ಎಂತಹ ಸಾಮರ್ಥ್ಯವಿದ್ದರು ಏನನ್ನೂ ಮಾಡಲಾರ. ಆದ್ದರಿಂದ ಮಗುವಿನಲ್ಲಿ ಬಾಲ್ಯದಿಂದಲೂ ಹಿಡಿದ ಕೆಲಸವನ್ನು ಬಿಡದಂತೆ ಮಾಡಿಮುಗಿಸುವ ದೃಢನಿರ್ಧಾರ ಪ್ರವೃತ್ತಿ ಬೆಳೆಸುವುದು ಅವಶ್ಯಕ.

ಹುಟ್ಟುತ್ತಲೇ ಈ ದೃಢನಿರ್ಧಾರ ಪ್ರವೃತ್ತಿ ಮಕ್ಕಳಲ್ಲಿ ಬಂದಿರುವುದಿಲ್ಲ. ಅದನ್ನು ಮಗುವಿನಲ್ಲಿ ಪ್ರಯತ್ನ ಪಟ್ಟು ಬೆಳೆಳೆಸಬಾಕಾಗುತ್ತದೆ. ಹಿರಿಯರು ದೃಢಮನಸ್ಸು ಬಎಳೆಯಲು ಸಹಾಕವಾಗುವಂತಹ ಅವಕಾಶಗಳನ್ನು ಮಢಿಕೊಡಬೇಕು. ಅವುಗಳನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸಿ ಮುಗಿಸುವಂತೆ ಲಕ್ಷ್ಯವಹಿಸಬೇಕು. ಅದರಿಮದ ಈ ಪ್ರವೃತ್ತಿ ರೂಪಿತವಾಗಲು ಸಹಾಯಕವಾಗುತ್ತದೆ. ಇಂತಹ ಮಾರ್ಗದರ್ಶನ ಮಗು ಪುಟ್ಟದಾರಿಗುವಾಗಿನಿಮದಲೇ ಪ್ರಾರಂಭವಾಗಬೇಕು. ಹುಟ್ಟಿದ ಕೆಲವು ತಿಂಗಳಲ್ಲಿ ಮಗು ಬಣ್ಣಬಣ್ಣದ ವಸ್ತುಗಳಿಂದ ಆಕರ್ಷಿತವಾಗುವುದು, ಬರುಬರುತ್ತ ಅದನ್ನು ಹಿಡಿದುಕೊಳ್ಳಬೇಕೆಂದು ಆಶಿಸುತ್ತದೆ. ಆ ಆಸೆಯಿಂದ ಕೈಮುಂದಕ್ಕೆ ಚಾಚಿ ಪ್ರಯತ್ನಶೀಲವಾಗುತ್ತದೆ. ಆಗ ಹಿರಯರಾದವರು ಮಗು ಪ್ರಯತ್ನ ಪಡದೆ ದೊರೆಯಲು ಅವಕಾಶವಾಗದಂತೆ ನೋಡಿಬೇಕು. ಅದು ಸ್ವಲ್ಪಸ್ವಲ್ಪ ನಡೆಯಲು ಕಲಿತ ಮೇಲೆ ಮಗುವಿಗೆ ಇಷ್ಟವಾದ ಸಾಮಾನುಗಳನ್ನು ಸುಲಭವಾಗಿ ಕೈಗೆ ಎಟುಕದಂತೆ ಇಡುವುದೊಳ್ಳೆಯದು. ಏಕೆಂದರೆ ತನಗೆ ಬೇಕಾದುದನ್ನು ಪಡೆಯಲು ಮಗು ಪ್ರಯತ್ನ ಮಾಡಿಪಡೆಯುವುದನ್ನು ಕಲಿಯುತ್ತದೆ. ಆದ್ದರಿಂದ ಅಂತಹ ಸಂದರ್ಭಗಳಲ್ಲಿ ಮಗುವಿನ ಸಹಾಹಯಕ್ಕೆ ಹೋಗದೆ ಸುಮ್ಮನಿದ್ದರೆ ಮಗುವೇ ಪ್ರಯತ್ನ ಪಡುತ್ತದೆ. ಅದು ಸುಲಭವಾಗಿ ಎಟುಕದಿದ್ದರೆ ಪಡೆಯಲು ಏನು ಮಾಡಬೇಕೆಂದು ಯೋಚಿಸುತ್ತದೆ. ಆಗ ಪಕ್ಕದಲ್ಲಿರುವ ದಿಂಬನ್ನೋ, ಪುಸ್ತಕವನ್ನೋ, ಮಣೆಯನ್ನೋ ಹಾಕಿಕೊಮಡು ಅದರ ಮೇಲೆ ನಿಂತು ತನಗೆ ಬೇಕಾದ ಆಟಿಗೆಯನ್ನು ತೆಗೆದುಕೊಳ್ಳಲು ಪ್ರಯತ್ನಿಸುವ ದೃಶ್ಯ ರಂಜನೀಯ. ಹಿರಿಯರು ಸ್ವಲ್ಪ ತಾಳ್ಮೆ ವಹಸಿದರೆ ಮಾತ್ರ ಈ ಆನಂದ ಅನುಭವಿಸಲು ಸಾಧ್ಯ. ಸ್ವಪ್ರಯತ್ನದಿಂದ ತನಗೆ ಬೇಕಾದ ಸಾಮಾನನ್ನು ಪಡೆದುಕೊಂಡಾಗ ಮಗುವಿಗಾಗುವ ಆನಂದವನ್ನು ಅಂತಹ ಅವಕಾಶ ಒದಗಿಸಿಯೇ ನೋಡಬೇಕು. ಇಬ್ಬರಿಗೂ ಆಗುವ ಆನಂದದ ಜೊತೆಗೆ ಇನ್ನೊಂದು ಲಾಭವೂ ಇದೆ. ಮಗು ಬಯಸಿದ್ದಯುದನ್ನು ಪಡೆಯಲು ಪ್ರಯತ್ನ ಪಡಬೇಕು ಎಂಬ ಅಂಶವನ್ನು ತನ್ನ ಗುರಿ ಸಾಧಿಸಲು ಸತತ ಪ್ರಯತ್ನ ಪಡಬೇಕು ಎನ್ನುವುದು ಕಲಿಯುತ್ತದೆ.

ಮಕ್ಕಳು ಒಂದು ಒಂದೂವರೆ ವರ್ಷದವರಾಗುತ್ತಲೇ ತಾವೇ ಸ್ವತಃ

ಊಟಮಾಡಬೇಕೆಂದು ಇಚ್ಛಿಸುತ್ತವೆ. ಬಹಳ ಮಕ್ಕಳಿರುವ ಮನೆಗಳಲ್ಲಿ ಹಿರಿಯರಿಗೆ ಇಷ್ಟಕ್ಕೆಲ್ಲ ಗಮನಕೊಡಲು ಸಮಯವಿರುವುದಿಲ್ಲ. ಆಗ ಮಕ್ಕಳ ಇಚ್ಛೆ ಸುಲಭವಾಗಿ ಈಡೇರುತ್ತದೆ. ಆದರೆ ಒಂದೂ, ಎರಡೂ ಮಕ್ಕಳಿರುವ ಈಗಿನ ಕಾಲದಲ್ಲಿ ಪಾಲಕರು ಸತತವೂ ಮಗುವಿನ ಕಡೆ ಲಕ್ಷ್ಯ ಕೊಡುತ್ತಿರುತ್ತಾರೆ ಮಗುವು ತಾನೇ ಊಟ ಮಾಡಲುಬಿಟ್ಟರೆ ಊಟದ ಮನೆಯನ್ನೆಲ್ಲ ಹೊಲಸು ಮಾಡುತ್ತದೆ ಎಂದೋ, ಬಟ್ಟೆ, ಬರೆ ಮೈ ಕೈ ಮುಸುತೆ ಮಾಡಿಕೊಳ್ಳುತ್ತದೆ ಎಂದೋ ತಾಯಿಯಾಗಲಿ, ತಂದೆಯಾಗಲಿ ತಾವೇ ಊಟ ಮಾಡಿಸಿ ಬಿಡುತ್ತಾರೆ. ತಾಯಿ ನೌಕರಿಯಲ್ಲಿದ್ದರಂತೂ ಮಗುವಿಗೆ ತಾನೇ ಊಟ ಮಾಡಲು ಅವಕಾಶ ಸಿಕ್ಕುವುದು ವಿರಳ. ಏಕೆಂದರೆ ಅದಕ್ಕೆ ತಾನೇ ಊಟ ಮಾಡಲು ವೇಳೆ ಬೇಕಾಗುತ್ತದೆ. ಅದಾದನಂತರ ಮಗುವು ಮಾಡಿದ ರಂಪವನ್ನೆಲ್ಲ ಸ್ವಚ್ಛಗೊಳಿಸಲು ಮತ್ತಷ್ಟು ವೇಳೆ ಬೇಕು. ಅಷ್ಟು ಸಮಯ ಮಾಡಿಸುವ ಕೆಲಸವನ್ನು ಗಡಿಬಿಡಿಯಲ್ಲಿ ಮಾಡಿಮುಗಿಸಿಬಿಡುತ್ತಾಳೆ. ಹೀಗೆ ಮಾಡುವುದರಿಂದ ಮಗುವಿಗೆ ಮೊದಮೊದಲು ಅಸಮಾಧಾನವಾಗುತ್ತದೆ. ನಂತರ ಇದೇ ರೂಢಿಯಾಗಿ ಬೇರೆಯಾರಾದರೂ ಊಟಮಾಡಿಸಿದರೆ ಅದಕ್ಕೆ ಸಮಾಧಾನವಾಗುತ್ತದೆ. ಆರೇಳುವರ್ಷ ವಯಸ್ಸಾದರೂ ಅಮ್ಮ ಬಂದು ಊಟಮಾಡಿಸುವವರೆವಿಗೂ ಹಸಿದುಕೊಂಡೇ ಇರುವಂತಹ ಸೋಮಾರಿತನದ ಪ್ರವೃತ್ತಿ ಬೆಳೆದುಬಿಡುತ್ತದೆ.

ಮಗುವಿಗೆ ಸುಮಾರು ಮೂರುವರ್ಷಗಳಾದಾಗ ತನ್ನೆಲ್ಲ ಕೆಲಸಗಳನ್ನು ತಾನೇ ಮಾಡಿಕೊಳ್ಳಬೇಕೆಂಬ ಸಹಜ ಪ್ರವೃತ್ತಿ ಮೊಳೆಯುತ್ತದೆ. ತನ್ನ ಷೂ ತಾನೇ ಕಟ್ಟಿಕೊಳ್ಳಬೇಕು. ಸ್ನಾನ ಮಾಡುವಾಗ ತಾನೇ ಮೈ ಉಜ್ಜಿಕೊಳ್ಳಬೇಕು. ಬಟ್ಟೆ ತಾನೇ ಹಾಕಿಕೊಳ್ಳಬೇಕು. ಹೀಗೆ ಎಲ್ಲದರಲ್ಲಿಯೂ ತನ್ನದೊಂದು ಕೈಯಿಡಲು ಪ್ರಯತ್ನಿಸುತ್ತದೆ. ಈ ಅವಧಿ ಅತ್ಯಮೂಲ್ಯವಾದುದು. ಹಿರಿಯರಾದವರು ಮುಖ್ಯವಾಗಿ ತಂದೆ ತಾಯಿಗಳು ಈ ಅವಧಿಯ ಲಾಭ ಪಡೆದು ಮಗುವಿನಲ್ಲಿ ಸ್ವಾವಲಂಬನೆ ಶಿಸ್ತು ದೃಢ ಸಂಕಲ್ಪಗಳನ್ನು ಬೆಳೆಯಿಸಬೇಕು; ಈಗ ಅಲಕ್ಷ್ಯ ಮಾಡಿದರೆ ಅಥವಾ ಅವಕಾಶ ಮಾಡಿಕೊಡದಿದ್ದರೆ ಮುಮದೆ ಪಶ್ಚಾತ್ತಾಪ ಪಡಬೇಕಾಗುವುದು. ಅಲ್ಲದೆ ಮಗುವಿಗೂ ಪರಿಸ್ಥಿತಿಗೆ ಹೊಂದಿಕೊಂಡು ನಡೆಯುವ ಪ್ರವೃತ್ತಿ ಬೆಳೆಯದೇ ವ್ಯಥೆಗೆ ಗುರಿಯಾಗಬಹುದು. ಒಂದು ಗಿಡವನ್ನು ಚಿಕ್ಕದಿದ್ದಾಗ ಬೇಕಾದ ಆಕಾರಕ್ಕೆ ಮಣಿಸಬಹುದು. ಅದೇ ಮರವಾಗಿ ಬೆಳೆದಾಗ ದುಸ್ಸಾಧ್ಯವಾಗುತ್ತದೆ.

ಮಗುವಿಗೆ ತನಗೆ ಬೇಕದ ಕೆಲಸಗಳನ್ನು ತಾನೇ ಮಾಡಿಕೊಳ್ಳಲು ಕಲಿಸಿದ ನಂತರ ಬೇರೆಯವರಿಗಾಗಿ ಮನೆಯ ಸಣ್ಣ ಪುಟ್ಟ ಕೆಲಸಗಳನ್ನು ಮಾಡುವುದನ್ನು ಕಲಿಸಬೇಕು. ದೃಢ ನಿರ್ಧಾರ ಪ್ರವೃತ್ತಿ ಮೊಳೆಯಲು ಮಗುವು ಬೇರೆಯವರಿಗಾಗಿ

ಮಾಡುವ ಕೆಲಸಗಳು ಬಹು ಮುಖ್ಯವಾದ ಪರಿಣಾಮವನ್ನು ಉಂಟುಮಾಡುತ್ತವೆ. ಅಂತಹ ಅವಕಾಶಗಳಿಲ್ಲದಿದ್ದರೆ ಅವನು ಸ್ವಾರ್ಥಿಯಾಗಿ ಬೆಳೆಯಬಹುದು. ಹಾಗಾದರೆ ನಾಲ್ಕು ಜನರ ಮಧ್ಯೆ ಪರಸ್ಪರ ಸಹಾಯಕವಾಗಬೇಕಾದ ಸನ್ನಿವೇಶಗಳಲ್ಲಿ ಇವನು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಾನೆ. ಅಲ್ಲದೇ ಬೇರೆಯವರ ದೂಷಣೆಗೆ ಗುರಿಯಾಗಿ ದುಃಖಿತನಾಗುತ್ತಾನೆ. ಆದ್ದರಿಂದ ಅವನು ದೊಡ್ಡವನಾದಂತೆ ಅವನು ಕೆಲಸ ಮಾಡಬೇಕಾದ ಕ್ಷೇತ್ರವೂ ವಿಸ್ತಾರವಾಗಬೇಕು. ಎಷ್ಟೇ ಸೌಲಭ್ಯಗಳಿದ್ದರೂ ಕೆಲವು ಕೆಲಸಗಳನ್ನು ಅವನೇ ಮಾಡುವಂತೆ ನೋಡಿಕೊಳ್ಳಬೇಕು. ಇಲ್ಲವೆ ಅವನ ಪುಸ್ತಕ ಉಡುಗೆ ಊಟ ಮುಂತಾದವುಗಳಲ್ಲೂ ಹಿರಿಯರು ಅವರಿಗೆ ಸಹಾರ ಮಾಡುತ್ತಾ ಹೋದರೆ ಎಲ್ಲ ಕೆಲಸಗಳಿಗೂ ಪರರನ್ನು ಅವಲಂಬಿಸುವ ಸ್ವಭಾವ ಅವನಲ್ಲಿ ಬೆಳೆಯುತ್ತದೆ. ಮೈಗಳ್ಳನೂ, ಸೋಮಾರಿಯೂ ಆಗುತ್ತಾನೆ. ಯಾವ ಕೆಲಸ ಮಾಡಲೂ ಅವನಿಗೆ ನಿರುತ್ಸಾಹ, ಬೇಜಾರು ತನಗೆ ಬೇಕಾದ್ದನ್ನು ಮಾತ್ರ ಮಾಡುವುದು ಬೇಡವಾದ್ದನ್ನು ಬಿಡುವುದು. ಅವಶ್ಯಕತೆಯನ್ನನುಡರಿಸಿ ಕೆಲಸ ಮಾಡುವುದನ್ನು ಬಿಟ್ಟು ಬೇಕಾದಾಗ ಮಾಡುವುದು ಬೇಡವಾದಾಗ ಬಿಡುವುದು ಯಾವಾಗಲೋ ಊಟ ಯಾವಾಗಲೋ ನಿದ್ದೆ ಮುಂತಾದ ಬೇಜವಾಬ್ದಾರಿಯ ಪ್ರವೃತ್ತಿ ಬೆಳೆಯುವುದು. ಅಲ್ಲದೆ ಆಲಸಿಯೂ ವಿಲಸಿಯೂ ಅಗುವನು. ಹೀಗಾಗಬಾರದೆಂದು ತಂದೆ ತಾಯಿಗಳು ಬಯಸುವುದಾದರೆ ಮಗು ಹುಟ್ಟಿದಾಗಿನಿಂದಲೂ ಅವರು ಎಚ್ಚರಿಕೆವಹಿಸಿ ಬೆಳೆಸಬೇಕು. ಹಾಗಿಲ್ಲದಿದ್ದರೆ ಆಕಸ್ಮಾತ್ತಾದ ಕಾರಣಗಳು ಮಗುವಿನ ಬೆಳವಣಿಗೆಯ ಮೇಲೆ ಪರಣಾಮ ಬಿರುತ್ತವೆ. ಆ ಪರಿಣಾಮಗಳು ಅಪೇಕ್ಷಣೀಯವಾದವುಗಳೂ ಆಗಿರಬಹುದೂ. ಆದರೆ ಅನಪೇಕ್ಷಣೀಯವಾಗಿರುವುದೇ ಹೆಚ್ಚು. ಆದ್ದರಿಂದ ಈ ದಿಶೆಯಲ್ಲಿ ತಂದೆ ತಾಯಿಗಳ ಕರ್ತವ್ಯ ಬಹಳ ಮಹತ್ವದ್ದಾಗಿರುತ್ತದೆ. ಮಗುವಿನ ಹಿತದೃಷ್ಟಿಯಿಂದ ತಮ್ಮ ಮನಸ್ಸಿಗೆ ವಿರುದ್ಧವಾದರೂ, ಮಗುವಿನ ಅಸಂತೋಷಕರವಾದರೂ ಕೆಲವೊಂದು ಕೆಲಸಗಳನ್ನು ಮಗುವಿನಿಂದಲೇ ಮಾಡಿಸಬೇಕಾಗುತ್ತದೆ. ಹಾಗೆ ಮಾಡಿಸುವಾಗಲೂ ಮಗುವಿಎಗ ತೀವ್ರ ಅಸಮಾಧಾನ ಆಗದ ರೀತಿಯಲ್ಲಿ ಮಾಡಿಸಬೆಕು. ಈ ದೃಢ ನಿರ್ಧಾರ ಪ್ರವೃತ್ತಿ ತಂದೆ ತಾಯಿಗಳಲ್ಲಿ ಇಲ್ಲದಿದ್ದರೆ ಮಗುವಿನಲ್ಲೂ ಅದನ್ನು ಬಎಳೆಯಿಸದ ದೋಷಕ್ಕೆ ಅವರು ಗುರಿಯಾಗಬೇಕಾಗುತ್ತದೆ. ಮಗುವು ಅಸಂತೋಷಗೊಳ್ಳುವುದೆಂದು ಅವರು ಅವನ ಇಚ್ಛೆಗನುಸರಿಸಿ ನಡೆದರೆ ತಾನು ಅಸಮಾಧಾನ ವ್ಯಕ್ತಪಡಿಸಿ ತನಗೆ ಬೇಡವಾದುದನ್ನು ತಪ್ಪಿಸಿಕೊಳ್ಳಬಹುದೆಂಬ ಮನೋಭಾವನೆ ಅವನಲ್ಲಿ ಬೆಳೆಯಲು ಅವಕಾಶವಾಗುತ್ತದೆ. ಹಾಗಾದಾಗ ಎಲ್ಲದಕ್ಕೂ ಕುಂಟು ನೆಪ ಒಡ್ಡಿ ಆಲಸೀ ಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತಾನೆ. ಹಾಗಿಲ್ಲದೆ ಅವಶ್ಯಕವಾದುದನ್ನು ಮಾಡಲೇಬೇಕೆಂಬ ಪರಿಸ್ಥಿತಿಯನ್ನು ತಂದೆ ತಾಯಿಗಳು ಉಂಟಮಾಡಿದರೆ ತನಗಿಷ್ಟವಿರಲಿ ಇಲ್ಲದಿರಲಿ ಕೆಲವೊಂದು

ಕರ್ತವ್ಯಗಳನ್ನು ತಾನು ಮಾಡಲೇಬೇಕಗುತ್ತದೆ ಎಂಬ ಅಂಶದ ಅರಿವು ಬಿಡದೆ ತನ್ನ ಹತೋಟಿಯಲ್ಲಿಟ್ಟುಕೊಂಡು ಜವಾಬ್ದಾರಿಯಿಂದ ಕೆಲಸ ಮಾಡಲು ಕಲಿಯುತ್ತಾನೆ.

ಹೀಗೆ ಅಪೇಕ್ಷಣೀಯ ಪ್ರವೃತ್ತಿಗಳನ್ನು ಮಕ್ಕಳಲ್ಲಿ ಬೆಳೆಸಬೇಕಾದರೆ ಮುನ್ನೆಚ್ಚರಿಕೆಯು ಅಗತ್ಯ. ಗಿಡವಾಗಿದ್ದಾಗಲೇ ಬಗ್ಗಿಸಬೇಕೆ ಹೊರತು ಮರವಾದಾಗ ಬಗ್ಗಿಸುವುದು ಅಸಾಧ್ಯ.

(ಲೇಖನ ಒಂದನ್ನು ಓದಿದಾಗ ಉಂಟಾದ ಸ್ಫೂರ್ತಿಯಿಂದ ಬರೆದದ್ದು)

**ಇವನು ಹೀಗೇಕೆ?**

ಸಮಾನದಲ್ಲಿ ಒಬ್ಬೊಬ್ಬರ ಸ್ವಭಾವ ಒಂದೊಂದು ರೀತಿ. ಕೆಲವರ ಸ್ವಭಾವ ಬೇರೆಯವರೊಡನೆ ತುಂಬಾ ಸ್ನೇಹಪರವಾಗಿರುತ್ತದೆ. ಮತ್ತೆ ಕೆಲವರು ತದ್ವಿರುದ್ಧ. ಎಲ್ಲರಲ್ಲಿಯೂ ದ್ವೇಷವನ್ನೇ ಕಾಣುವ, ಟೀಕಿಸುವ, ಮತ್ಸರದಿಂದ ವರ್ತಿಸುವ ನಡೆಯವರಾಗಿರುತ್ತಾರೆ. ಕೆಲವರು ಸಾಧ್ಯವಾದಾಗಲೆಲ್ಲ ಇತರರಿಗೆ ನೆರವು ನೀಡಲು ಮುಂದಾದರೆ, ಮತ್ತೆ ಕೆಲವರಿಗೆ ತೊಂದರೆಯಾಗುವಂತೆ ಮಾಡದಿದ್ದರೆ, ಕಿರಿಕಿರಿ ಆಗುವಂತೆ ಕಾಡಿಸದಿದ್ದರೆ, ಸಮಾಧಾನವೇ ಇರುವುದಿಲ್ಲ. ಇತರರು ನೆಮ್ಮದಿಯಿಂದ ಇರುವುದನ್ನು ಕಂಡರೆ ಕಸಿವಿಸಿ, ಸಂಕಟ, ನಗುನಗುತ್ತಾ ಇರುವವರನ್ನು ಸಮಸ್ಯೆಗಳಲ್ಲಿ ತೊಡಗಿಸಿದಾಗಲೇ ಇವರಿಗೆ ತಿಂದ ಆಹಾರ ಜೀರ್ಣ. ಇಲ್ಲದಿದ್ದರೆ ಅಜೀರ್ಣ. ಹೀಗೆ ವಿಭಿನ್ನ ಸ್ವಭಾವದ ಜನಗಳನ್ನು ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ಕಾಣುತ್ತೇವೆ. ದುಷ್ಟ ಸ್ವಭಾವದ ಜನರು ಇಲ್ಲದೆಹೋಗಿದ್ದರೆ ಭೂಮಿ ಸ್ವರ್ಗವಾಗುತ್ತಿತ್ತು. ಸಮಸ್ಯೆಗಳೇ ಇರುತ್ತಿರಲಿಲ್ಲ. ಸಮಸ್ಯೆಗಳೇ ಇಲ್ಲದಿದ್ದರೆ ಹುಚ್ಚಸ್ಪತ್ರೆಗಳಾಗಲಿ, ಜನರಲ್ ಆಸ್ಪತ್ರೆಗಳಾಗಲಿ, ಕೋರ್ಟು–ಕಛೇರಿಗಳಾಗಲೀ, ಪೊಲೀಸ್ ಖಾತೆ, ಸಿ.ಐ.ಡಿ. ಖಾತೆ ಮುಂತಾದವುಗಳೆಲ್ಲ ಇರುವ ಅವಶ್ಯಕತೆಯೇ ಬರುತ್ತಿರಲಿಲ್ಲ. ಆಗ ಸರ್ಕಾರಕ್ಕೆ ಬಹಳಷ್ಟು ಹಣ ಉಳಿಯುತ್ತಿತ್ತೇನೋ ಜಿನ. ಆದರೆ ಆ ಖಾತೆಗಳಲ್ಲಿ ಕೆಲಸ ಮಡುತ್ತಿರುವ ಈಗಿರುವ ಉದ್ಯೋಗಿಗಳೆಲ್ಲ ನಿರುದ್ಯೋಗಿಗಳಾಗಿ ನಿರುದ್ಯೋಗ ಸಮಸ್ಯೆ ಮತ್ತಷ್ಟು ಹೆಚ್ಚುತ್ತಿರಲಿಲ್ಲವೆ ? ಆ ದೃಷ್ಟಿಯಿಂದ ಸಮಾಜದಲ್ಲಿ ಒಳ್ಳೆಯವರು, ಕೆಟ್ಟವರು ಕೂಡಿಯೇ ಇರುವುದು ಒಂದು ಉಪಕಾರವೇ ಸರಿ. ಒಳ್ಳೆಯವರಿರುವುದರಿಂದ ಕೆಟ್ಟವರು ತಮ್ಮ ಕೆಟ್ಟತನವನ್ನು ತೋರಿಸಲಿಕ್ಕೆ ಅಥವಾ ಅವರನ್ನು ಕಾಡಲಿಕ್ಕೆ ಸಾಧ್ಯವಾಗುತ್ತದೆ. ಒಳ್ಳೆಯವರೂ ಸಹ ಅವರ ಹಿಂಸೆಯಿಂದ ಪಾರಾಗಲಿಕ್ಕೆ ಹೋರಾಡಬೇಕಾಗುತ್ತದೆ. ಹೀಗೆ ಜೀವನದಲ್ಲಿ ಬೇವು–ಬೆಲ್ಲ ಎರಡೂ ಜೊತೆ ಜೊತೆಯಾಗಿರಲು ಸಾಧ್ಯ.

ಮಾನವರಲ್ಲಿ, ಕೆಲವರಲ್ಲಿ ಅಪೇಕ್ಷಣೀಯವಾದ ಗುಣಗಳು, ಮತ್ತೆ ಕೆಲವರಲ್ಲಿ

ದುಸ್ಸಹನೀಯವಾದ ಸ್ವಭಾವಗಳು ಬೆಳೆಯಲು ಬೇರೆ ಬೇರೆ ಕಾರಣಗಳಿರುತ್ತವೆ. ಮಕ್ಕಳು ಬೆಳೆಯುವ ವಯಸ್ಸಿನಲ್ಲಿ ಅವರಿಗೆ ಸಿಕ್ಕುವ ಸ್ನೇಹ, ತಂದೆ ತಾಯಿಯ ನಡೆನುಡಿ, ಕೌಟುಂಬಿಕ ಪರಿಸ್ಥಿತಿ, ನೆರೆಹೊರೆಯವರ ಮನೋಭಾವ, ದೊರೆಯುವ ಅವಕಾಶಗಳು, ಸಂಪರ್ಕಕ್ಕೆ ಬರುವ ಜನ, ವಿವಿಧ ಸಂದರ್ಭಗಳಲ್ಲಿ ಅವರಿಗಾಗುವ ಅನುಭವಗಳು; ಶಿಕ್ಷಣ, ಶಿಕ್ಷಕ ಹಗೂ ಶಿಕ್ಷಣದ ಪ್ರಭಾವ ಮಕ್ಕಳು ದೊಡ್ಡವ್ರಆದಾಗ ಯಾವ ಸ್ವಭಾವದವರಾಗುತ್ತಾರೆ ಎಂಬುದನ್ನು ನಿರ್ಧರಿಸುವ ಮುಖ್ಯಾಂಶಗಳು. ಈ ಅಂಶಗಳು ಹೆಚ್ಚಾಗಿ ಮಗುವಿನ ಕೌಟುಂಬಿಕ ಮಟ್ಟವನ್ನು ಅವಲಂಬಿಸಿರುತ್ತವೆ. ವ್ಯಕ್ತಿಯ ಸ್ವಭಾವಗಳನ್ನು ಕೂಲಂಕುಶವಾಗಿ ಪರೀಕ್ಷಿಸಿದ್ರೆ ಅವರು ಬೆಳೆದ ಹಿನ್ನೆಲೆಯನ್ನು ಬಹು ಸುಲಭವಾಗಿ ಕಂಡುಕೊಳ್ಳಬಹುದು. ಬೆಳೆಯುವ ವಯಸ್ಸಿನಲ್ಲಿ ಹೀಗೆಯೇ ಆಗಿರಬಹುದೆಂದು ಬಹು ಕರಾರುವಕ್ಕಾಗಿ ಊಹಿಸಬಹುದು.

ಇದೊಂದು ಉದಾಹರಣೆಯನ್ನು ಗೆರೆದುಕೊಳ್ಳೋಣ. ಒಬ್ಬ ವ್ಯಕ್ತಿ ಒಂದು ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದ. ಸುಖವಾಗಿ ನೆಮ್ಮದಿಯಿಂದ ಜೀವನ ಮಾಡುವಷ್ಟು ಸಂಬಳವೂ ಬರುತ್ತಿತ್ತು. ನೋಡಲು ಸೌಮ್ಯ ಹಾಗೂ ಸಭ್ಯನಿದ್ದ. ಕೆಲಸವನ್ನೂ ಅಷ್ಟೇ. ಅತಿಯಾಗಿ ಮಾಡಹೋಗುತ್ತಿರಲಿಲ್ಲ. ಮಾಡಲೇಬೇಕಾದ ಕೆಲಸವನ್ನು ಯಾರ ಆಕ್ಷೇಪಣೆಗೂ ಅವಕಾಶವಿಲ್ಲದಂತೆ ಮಾಡಿ ಮುಗಿಸುತ್ತಿದ್ದ. ಮಾಡುವ ಕೆಲಸದಲ್ಲಿ ಆತ್ಮೀಯತೆಯಾಗಲಿ, ಮಮತೆಯಾಗಲಿ, ಶ್ರದ್ಧೆಯಾಗಲಿ ಇರುತ್ತಿರಲಿಲ್ಲ. ಆದರೆ ಮೈಮೇಲೆ ಬಂದ ಕೆಲಸವನ್ನು ಬೇಕೆಂದರೂ ತಪ್ಪು ಹುಡುಕಲು ಸಾಧ್ಯವಿಲ್ಲದಷ್ಟು ಅಚ್ಚುಕಟ್ಟಾಗಿ ಮಾಡಿ ಮುಗಿಸುತ್ತಿದ್ದ. ಹೀಗಾಗಿ ಆತನಿಗೆ ಯಾವ ಸಮಸ್ಯೆಗಳೂ ಇರಲಿಲ್ಲ. ತನ್ನ ಮೇಲೆ ಯಾವ ದೂರೂ ಬರದಂತೆ ಜಾಗರೂಕನಾಗಿರುತ್ತಿದ್ದ ವ್ಯಕ್ತಿ ತಾನಿದ್ದ ಪರಿಸರದಲ್ಲಿಯ ಜನಗಳಲ್ಲಿ ಮನಸ್ತಾಪಗಳು, ವಿರಸಗಳು, ಜಗಳಗಳು, ನೋವುಗಳು ತುಂಬಿ ಉಳಿದವರೆಲ್ಲಾ ಸಮಸ್ಯೆಗಳಲ್ಲಿ ಇರುಕಿ ಬಿದ್ದಾಡುವಂತೆ ಮಾಡುತ್ತಿದ್ದ. ತನ್ನೊಡನಿದ್ದ ಜನರು ಕಷ್ಟಪಡುತ್ತಿದ್ದರೆ ಇವನು ಮಾತ್ರ ಇವೆಲ್ಲವುಗಳಿಂದ ಹೊರಗೆ, ತಮಾಷೆ ನೋಡಿಕೊಂಡು ಒಳಗೊಳಗೇ ಸಂತೋಷಪಡುತ್ತಿದ್ದ ಹೊರಗೆ ತೋರಿಸುವಷ್ಟು ಧೈರ್ಯವಿರಲಿಲ್ಲ.

ಹಾಗಾದರೆ ಈ ವ್ಯಕ್ತಿ ಹೀಗೇಕೆ ? ಈ ವ್ಯಕ್ತಿಯು ನೌಕರಿಯಲ್ಲಿ ತೋರಿಸುತ್ತಿದ್ದ ನಡುವಳಿಕೆಯಲ್ಲಿ ಕೂಲಿಯ ಮನೋಭಾವವನ್ನು ಕಾಣುತ್ತೇವೆ. ಇವನು ದೊಡ್ಡ ಹಿನ್ನೆಲೆಯಿಂದ ಬಂದಿರಲಿಕ್ಕೆ ಸಾಧ್ಯವೇ ಇಲ್ಲ. ಯಜಮಾನನು ಕಠಿಣವಾದ ನಡುವಳಿಕೆಯವನಿರಬೇಕು. ಆದ್ದರಿಂದ ಯಜಮಾನ ವಹಿಸಿಕೊಟ್ಟಷ್ಟು ಕೆಲಸವನ್ನು ಅವನಿಗೆ ಬಯ್ಯಲು ಆಸ್ಪದವಿಲ್ಲದಂತೆ ಮಡಿ ಮುಗಿಸುವಷ್ಟೇ ಇವನ ಗುರಿ. ಕೆಲಸದ ಬಗ್ಗೆ ಆತ್ಮೀಯತೆಯಿಲ್ಲ. ಕೆಲಸ ಶ್ರೇಷ್ಠಮಟ್ಟದ್ದಾಗಬೇಕೆಂಬ ನಿಷ್ಠೆ ಇಲ್ಲ. ಕೇವಲ

ಹೊಟ್ಟೆ ಹೊರೆದುಕೊಳ್ಳುವ ಮನೋಭಾವ. ಈತನ ಬಾಲ್ಯ ಬಹಳ ಬಡತನದ್ದಿರಬಹುದು. ಆದ್ದರಿಂದ ಯಾರದೋ ಆಶ್ರಯಕ್ಕೆ ಒಳಗಾಗಿರಬಹುದು. ಆ ಪರಿಸ್ಥಿತಿಯಲ್ಲಿ ತನಗೆ ಆದ ಅಸಮಾಧಾನವನ್ನು ತೋರಿಸಿಕೊಳ್ಳಲು ಅಥವಾ ಪ್ರತಿಭಟಿಸಲು ಅವಕಾಶವಿಲ್ಲವಾಗಿ ಅಸಹಾಯಕತೆಯಿಂದ ಎಲ್ಲವನ್ನೂ ನುಂಗಿಕೊಂಡಿರಬೇಕು. ಆದರೆ ಒಳಗೆ ಸುಖವಾಗಿರುವವರ ಬಗೆಗೆ ಹೊಟ್ಟೆ ಕಿಚ್ಚು ಬೆಳೆಸಿಕೊಂಡಿರುತ್ತಾನೆ. ಈ ಗುಣ ಅವನು ಬೆಳೆಬೆಳೆದಂತೆ ಅವನೊಡನೆಯೇ ಬಲವಾಗುತ್ತ ಬೆಳೆದಿರುತ್ತದೆ. ಬಾಲ್ಯದಲ್ಲಿ ಯಾವ ಪರಿಸ್ಥಿತಿಯನ್ನು ಧೈರ್ಯದಿಂದ ಎದುರಿಸಿದ ಅನುಭವವಿಲ್ಲ. ಅದಹಾಯಕತೆಯಿಂದ ಮೂಲ ಸೇರಿರುತ್ತಾನೆ. ಆದುದರಿಂದ ಈಗಲೂ ಧೈರ್ಯದಿಂದ ಏನೂ ಮಾಡಲಾರ. ಆ ಅಸಹಾಯಕತೆಯಿಂದ ಬೆಳೆದ ಅಸಹನೆ ಆಗ ತೋರಿಸಲೂ ಆಸ್ಪದವಿರಲಿಲ್ಲ. ಆದರೆ ಈಗ ಸ್ಥಾನಮಾನಗಳಿಮದ ಆಸ್ಪದ ದೊರೆತಿದೆಯಾದರೂ ಹೇಡಿತನ ವ್ಯಕ್ತಿತ್ವದಲ್ಲಿ ಮನೆಮಾಡಿ ಬಿಟ್ಟಿದೆ. ಆದರೆ ಸುಖದಲ್ಲಿರುವವರ ಬಗ್ಗೆ ಸೇಡುತೀರಿಸಿಕೊಳ್ಳಬೇಕೆಂಬ ಮನೋಭಾವವಿದ್ದರೂ ನೇರವಾಗಿ ಏನನ್ನೂ ಮಾಡಲಾರ. ಆದರೆ ಕುತಂತ್ರದಿಂದ ತನ್ನ ಮೇಲೆ ಅಪವಾದ ಬರದ ರೀತಿಯಲ್ಲಿ ಎಲ್ಲರಿಗೂ ಕಿರುಕುಳಕೊಟ್ಟು ಬಾಲ್ಯದ ಸೇಡನ್ನು ಈಗ ತೀರಿಸಿಕೊಳ್ಳುತ್ತಾನೆ ಎಂದು ಅವನು ಹೀಗೇಕಾದ ಎಂಬ ಕಾರಣವನ್ನು ಊಹಿಸಬಹುದು.

## ಒಳ್ಳೆಯತನದ ಕೃತ್ರಿಮದ ಮುಖವಾಡ

ಒಮ್ಮೆ ನಾನು ರಾತ್ರಿ ಪ್ರಯಾಣ ಮಾಡಬೇಕಿತ್ತು. ಸ್ಲೀಪಿಂಗ್ ಬರ್ತ್‌ನಲ್ಲಿ ಹೋಗಬೇಕೆಂದು ಹೋಗಿ ನೋಡಿದರೆ ಅದರಲ್ಲಿ ಸ್ಥಳವೇ ಇರಲಿಲ್ಲ. ಆ ಬೋಗಿಗೆ ಹೊಂದಿಯೇ ಒಂದು ಕಟ್ ಕಂಪಾರ್ಟ್‌ಮೆಂಟ್ ಇತ್ತು. ಅದರಲ್ಲಿ ನಾಲ್ಕು ಜನರಿಗೆ ಮಾತ್ರ ಸ್ಥಳ. ಆಗಲೇ ಮೂರು ಜನ ಮಲಗಿದ್ದರು. ಆ ಬೋಗಿಮುಂದೆ ಒಬ್ಬ ವ್ಯಕ್ತಿ ನಿಂತಿದ್ದ. ಆ ಬೋಗಿಯಲ್ಲೇ ಹೋದರಾಯಿತೆಂದು ಹತ್ತಲು ಹೋದೆ. "ಇದು ರಿಜರ್ವ್‌ಕಂಪಾರ್ಟ್‌ಮೆಂಟ್" ಎಂದು ನಿಂದಿದವನು ಎಚ್ಚರಿಸಿದ. ಆಗ ನಮಗೊಂದು ರಿಜರ್ವ್‌ಸೀಟೇ ಬೇಕಾಗಿದೆ ಎಂದು ನಮ್ಮ ತಂದೆ ಹೇಳಿದರು. ಆತನಿಗಂದ ನಕಾಋದ ಉತ್ತರ ಬಂದಿತು. ಕಾಯ್ದಿಟ್ಟ ಬೇಗಿಯಲ್ಲಾದರೆ ಒಂಟಿಯಾಗಿ ಪ್ರಯಾಣಿಸಬೇಕಗಿದ್ದ ನಾನು ನಿಶ್ಚಿಂತೆಯಾಗಿ ಹೋಗಲು ಸಹಾಯವಾಗುತ್ತದೆಂದು ತಿಳಿದು ರಿಕ್ವೆಸ್ಟಿಂಗ್ ಟೋನಿನಲ್ಲಿ ನಾನೊಬ್ಬಳೇ ಹೆಣ್ಣು ಮಹಳಿದ್ದೀನಿ, ದಯವಿಟ್ಟು ಒಂದು ಸೀಟು ಕೊಡಿ ಎಂದೆ. ಕೇಳುತ್ತಿದ್ದಂತೆಯೇ ಆತ "ಹತ್ತಿ" ಎಂದು ಬಿಟ್ಟ. ಕೂಡಲೇ ಸಾಮಾನುಗಳನ್ನು ನಮ್ಮ ತಂದೆ ತುಂಬಿಸಿಯೇ ಬಿಟ್ಟರು. ಆದೆರ ನಾನೊಬ್ಬಳೇ ಇರುವಳೆಂಬ ವಿಚಾರ ತಿಳಿದ ತಕ್ಷಣ ಆತ ಒಪ್ಪಿದುದನ್ನು ನೋಡಿ ನನ್ನ ತಲೆ

ಬೇರೆಯಾಗಿಯೇ ವಿಚಾರ ಮಾಡತೊಡಗಿತು. ಅವನು ಟಿ. ಟಿ.ಯ ಉಡುಗೆಯಲ್ಲಿರಲಿಲ್ಲ. ಬೋಗಿ ಮೇಲೆ ರಿಜರ್ವ್ ಎಂದು ಬರೆದಿರಲಿ.. ಆ ಬಗ್ಗೆ ವಿಷಯ ತಿಳಿದುಕೊಳ್ಳೋಣವೆಂದರೆ ಆ ಅಪರಾತ್ರಿಯಲ್ಲಿ ಬೇರೆ ಯಾರೂ ಕಾಣಲಿಲ್ಲ. ಅನೇಕ ರೀತಿಯ ಮೋಸದ ಘಟನೆಗಳ ಬಗೆಗೆ ಓದಿದ್ದ, ಕೇಳಿದ್ದ ನನಗೆ ಸಾದಾ ಉಡುಪಿನ ಟಿ.ಟಿ.ಯ ಬಗ್ಗೆ ಸಂಶಯ ಬಂದಿತು. ಕೂಡಲೇ ಬೇರೆ ಬೋಗಿಗೆ ಬದಲಾಯಿಸೋಣವೆಂದು ನಮ್ಮ ತಂದೆಗೆ ಹೇಳಿದೆ. ಆಗಲೇ ಟ್ರೈನ್ ಹೊರಡುವುದರಲ್ಲಿತ್ತು. ಕೊನೆಯ ಘಳಿಗೆಯ ನನ್ನ ನಿರ್ಧಾರದಿಂದ ನಮ್ಮ ತಂದೆಯವರಿಗೆ ಗಡಿಬಿಡಿಯಾಯ್ತು. ಜೊತೆಗೆ ಸಿಟ್ಟೂ ಬಂತು. ಆದರೆ ನಾನು ಮಾತ್ರ ನಿರ್ಧಾರ ಬದಲಿಸಲಿಲ್ಲ. ಈ ಒಂದು ಕ್ಷಣ ನಾನು ನಿರ್ಧಾರ ಬದಲಿಸದಿದ್ದರೆ ಇಡೀ ರಾತ್ರಿ ನಾನು ತಾನೇ ಒದ್ದಾಡಬೇಕು ಎಂಬುದು ನನ್ನ ತರ್ಕ. ಟಿ.ಟಿ. ದಿಗ್ಭ್ರಾಂತನಾಗಿ ನೋಡುತ್ತಿದ್ದಂತೆಯೇ ನಾನು ಬೇರೆ ಬೋಗಿಗೆ ಬದಲಾಯಿಸಿಯೇ ಬಿಟ್ಟೆ. ಬೆಳಗಾದ ಮೇಲೆ ಒಂದು ಸ್ಟೇಷನ್ ಬಳಿ ಆ ಟಿ.ಟಿ. ಬಂದು "ಏನಮ್ಮಾ ನನ್ನ ಬಗ್ಗೆ ಅಪನಂಬಿಕೆ ಪಟ್ಟಿರಾ" ಎಂದ "ಹೌದು ನೀವು ಟಿ.ಟಿ.ಯ ಗುರ್ತುಗಳನ್ನು ಒಂದನ್ನೂ ಹಾಕದಿರುವಾಗ ನಂಬುವುದು ಹೇಗೆ" ಎಂದೆ. ಸುಮ್ಮನಾದ.

ಮತ್ತೊಂಮೆ ಪ್ರಯಾಣ ಮಾಡುತ್ತಿದ್ದೆ. ಆದಿನ ಆ ಟಿ.ಟಿ. ಬಂದಿದ್ದ ವೃತ್ತಿಯ ಉಡುಪಿನಲ್ಲಿ, ನನ್ನನ್ನು ನೋಡಿದವನೇ ಬೋಗಿಯ ಬಳಿ ಬಂದು, "ಈಗಾದರೂ ನನ್ನನ್ನು ನಂಬುತ್ತೀರಾ, ರಾತ್ರಿ ಒಬ್ಬರೇ ಪ್ರಯಾಣ ಮಾಡುತ್ತೀರೆಂದು ತಿಳಿದಾಗ, ಈಗ ಕೆಟ್ಟ ಕಾಲ ನಮ್ಮ ಅಕ್ಕತಂಗಿಯರಂತೆ ನೀವೂ ಅಲ್ಲವೆ? ಸಹಾಯ ಮಾಡೋಣವೆಂದು ಕೂಡಲೇ ಒಪ್ಪಿದರೆ ನನ್ನ ಬಗ್ಗೆಯೇ ಅಪನಂಬಿಕೆ ಪಟ್ಟಿರಿ" ಎಂದ. ನಿಜಾಂಶ ತಿಳಿದು ನನಗೆ ಬಹಳ ಕೆಟ್ಟೆನಿಸಿತು.

ಪರಿಚಿತರು ಸಿಕ್ಕಾಗ ಕೆಲಸವಿಲ್ಲದಿದ್ದರೂ ಸೌಜನ್ಯಕ್ಕಾಗಿ ಮುಖದಮೇಲೆ ಮಂದಹಾಸ ಬೀರುವುದು ಅಥವಾ ಏನಾದರೂ ಮಾತನಾಡಿಸುವುದೂ ವಾಡಿಕೆ. ಆದರೆ ಈ ಯಾಂತ್ರಿಕ ಮನೋಭಾವದ ಕಾಲದಲ್ಲಿ ವ್ಯವಹಾರಸ್ಥ ಜನರು ಒಂದು ಜಗುವನ್ನಾಗಲೀ, ಒಂದು ಮಾತನ್ನಾಗಲೀ, ಲಾಭವಿಲ್ಲದೆ, ಅಗತ್ಯವಿಲ್ಲದೆ ಕಳೆದಕೊಳ್ಳಲು ಸಿದ್ಧರಿರುವುದಿಲ್ಲ. ಈ ನಡೆಯು ಸಾಂಕ್ರಾಮಿಕ ರೋಗದಂತೆ ದೊಡ್ಡವರಿಂದ ಹಿಡಿದು ಬೆಳೆಯುತ್ತಿರುವ ಪೀಳಿಗೆಯವರೆವಿಗೂ ಪಸರಿಸಿದೆ. ಮಾತನಾಡುವುದೇ ಇಷ್ಟು ತುಟ್ಟಿಯಾದಾಗ ಇನ್ನೊಬ್ಬರಿಗೆ ಉಪಕಾರ ಮಾಡುವುದಂತೂ ದೂರವೇ ಉಳಿಯಿತು. ಉಪಕಾರ ಮಾಡಬೇಕಾದರೆ ಮುಂದೆ ಯಾವುದೋ ವೈಯಕ್ತಿಕ ಲಾಭ ಮಾಡಿಕೊಳ್ಳುವ ಮುಂದಾಲೋಚನೆಯಿಂದಲೇ ಮಾಡುತ್ತಾರೆ. ಇನ್ನೊಬ್ಬರಿಗೆ ಏನಾದರೂ ಸಹಾಯಮಾಡಲು ಸಾಧ್ಯವಾದ ಹಣ, ಅಧಿಕಾರ, ಸ್ಥಾನಮಾನಗಳಿದ್ದರಂತೂ

ಮುಗಿಯಿತು. ಅಂತಹರು ತಮಗೆ ಅಗತ್ಯವಿಲ್ಲದವರಿಂದ ಬಹುದೂರ. ಅವರೇನಾದರೂ ಇವರ ಹತ್ತಿರ ಬಂದರೆ ಇವರು ಅವರಿಗೆ ನಿಲುಕದಷ್ಟು ಎತ್ತರಕ್ಕೆ ಹೋಗಿಬಿಡುತ್ತಾರೆ. ಜೊತೆಗೆ ಇನ್ನೊಬ್ಬರಿಂದ ಏನೂ ಲಾಭವಾಗದೆಯೂ ಸಹಾಯ ಮಾಡಲು ಮುಂದೆ ಬರುತ್ತಾರೆಂದರೆ ಸಾಮಾನ್ಯವಾಗಿ ಅಲ್ಲೇನೋ ದುರುದ್ಧೇಶವಿರುತ್ತದೆ. ಜೀವನದಲ್ಲಿ ಇಂತಹ ಸ್ಥಿತಿಯನ್ನೇ ಬಹಳವಾಗಿ ಕಂಡಿದ್ದೆ. ಕೇಳಿದ್ದೆನಾಗಿ ಆ ರೈಲ್ವೆ ಟಿ.ಟಿ. ಸುಲಭವಾಗಿ ಸಹಾಯ ಮಾಡಲು ಮುಂದೆ ಬಂದಾಗ ಅವನ ಉದ್ದೇಶದ ಬಗ್ಗೆ ಅನುಮಾನ ಬಂದಿತ್ತು.

ಈ ಘಟನೆ ನೆನಸಿಕೊಂಡಾಗಲೆಲ್ಲಾ ಎಂಥ ಕಾಲ ಬಂದಿತಲ್ಲಾ ಎಂದು ಬೇಜಾರಾಗುತ್ತದೆ. ಒಳ್ಳೆಯವರು ಒಳ್ಳೆಯತನವನ್ನು ನಿಜವಾಗಿಯೇ ತೋರಿಸಿದರೂ ಅದನ್ನು ನಂಬದಂತಹ, ಇದರಲ್ಲೇನೋ ಕೃತ್ರಿಮವಿದೆ. ಮೋಸವಿದೆ ಎಂದು ಶಂಕಿಸುವ ಸ್ಥಿತಿ ಬಂದುಬಿಟ್ಟಿದೆ. ಈ ಪರಿಸ್ಥಿತಿಯಿಂದಾಗಿ ಬರಬರುತ್ತಾ ಒಳ್ಳೆಯತನವನ್ನು ಉಳಿಸಿಕೊಂಡ ಕೆಲವರು, ಅಳಿಸಿಕೊಂಡರೆ ಮುಂದೆ ಗತಿ ಎಂದು ಕಳವಳವಾಗುತ್ತದೆ.

**ಶಿಕ್ಷಣ**

ಶಿಕ್ಷಣ ಮಾನವನಿಗೆ ಅಗತ್ಯವಾದ ಒಂದು ಸಂಸ್ಕಾರ. ವ್ಯಕ್ತಿ ಯಾವುದೇ ಸಮಾಜದಲ್ಲಿರಲಿ, ಯಾವ ದೇಶದವನಾಗಿರಲಿ ಯಾವುದೇ ಪ್ರಕಾರದ ಸರಕಾರವನ್ನು ಪಡೆದಿದ್ದರೂ ಶಿಕ್ಷಣ ಪಡೆಯುವುದು ಅತ್ಯವಶ್ಯ. ಏಕೆಂದರೆ ಯೋಗ್ಯ ಶಿಕ್ಷಣ ಮನುಷ್ಯನಲ್ಲಿರಬಹುದಾದ ಅನಾಗರೀಕತೆಯನ್ನು, ದಾನವತೆಯನ್ನು, ಪ್ರಾಣಿತ್ವವನ್ನು, ಪರಾವಲಂಬನೆಯನ್ನು, ಸ್ವಾರ್ಥವನ್ನು ಹೋಗಲಾಡಿಸಬಲ್ಲದು. ವ್ಯಕ್ತಿಯಲ್ಲಿ ವಿಚಾರಶಕ್ತಿಯನ್ನು ಕುದುರಿಸಿ ಜೀವನದ ಯಾವುದೇ ಪರಿಸ್ಥಿತಿಯನ್ನು ಸಮರ್ಥವಾಗಿ ಎದರುಇಸಲಬಲಲ್ ಶಕ್ತಿಯನ್ನು ವ್ಯಕ್ತಿ ಪಡೆಯುವಂತೆ ಮಾಡಿದರೆ ಅವನ್ನನು ಸುಶಿಕ್ಷಿತ ವ್ಯಕ್ತಿ ಎಂದು ಕರೆಯಬಹುದು.

ಶಿಕ್ಷಣ ಎಂದರೆ, ಓದು-ಬರಹ ಕಲಿಯುವುದು ಎಂಬ ಭಾವನೆ ಸಾಮಾನ್ಯವಾದುದು. ಆದರೆ ಸರಿಯಾದ ರೀತಿಯಲ್ಲಿ ಕೊಡಲ್ಪಟ್ಟ ಶಿಕ್ಷಣ, ವ್ಯಕ್ತಿಯ ಸುಪ್ತಶಕ್ತಿಯನ್ನು ವಿಕಸನಗೊಳಿಸಿ, ಅವನಲ್ಲಿ ಸರ್ವತೋಮುಖವಾದ ಬೆಳವಣಿಗೆಯನ್ನುಂಟುಮಾಡಿ, ಅವನು ತನ್ನ ಜೀವನವನ್ನು ನೆಮ್ಮದಿಯುತವಾಗಿ ಮಾಡಿಕೊಂಡು ತಾನಿರುವ ಪರಿಸರವೂ ನೆಮ್ಮದಿಯುತವಾಗಿರುವಂತೆ ಆಗಲು ಸಹಾಯಕವಾಗುವ ವ್ಯಕ್ತಿತ್ವವನ್ನು ಉಂಟುಮಾಡುತ್ತದೆ. ಅಂತಹ ವ್ಯಕ್ತಿಜೀವನದಲ್ಲಿ ಬರುವ ಎಲ್ಲ ರೀತಿಯ ಸಂದರ್ಭಗಳಲ್ಲಿ ಪರಿಣಾಮಕಾರಿಯಾದ ಪ್ರತಿಕ್ರಿಯೆಯನ್ನು ತೋರಿಬಲ್ಲ, ಸಮತೋಲನ ವ್ಯಕ್ತಿತ್ವವನ್ನು ಪಡೆಯಲು ಸಹಾಯಕವಾಗುತ್ತದೆ.

ಇಂದು ಹಿಂದೆಂದಿಗಿಂತಲೂ ಹೆಚ್ಚಾಗಿ ಶಿಕ್ಷಣದ ಗುರಿಯ ಬಗೆ, ಶಿಕ್ಷಣ ಮೂಲಕ ಸಾಧಿಸಬೇಕಾದ ಅಂಶಗಳ ಬಗ್ಗೆ ಪರಿಣಿತರು ವಿಚಾರ ಮಾಡುತ್ತಿದ್ದಾರೆ. ಶಿಕ್ಷಣದ ಗುರಿಯ ವ್ಯಾಪ್ತಿ ವಿಶಾಲವಾಗಿ ಆಗುತ್ತ ಹೋಗುತ್ತದೆ. ಇದರ ಅಂತಿಮ ಗುರಿ ವಿಶ್ವಭ್ರಾತೃತ್ವ ಸಾಧಿಸುವುದು. ಈಗ ಜಗತ್ತು ಮೊದಲಿನಂತೆ ಇಲ್ಲ. ಪ್ರಪಂಚದ ಯಾವುದೋ ಒಂದು ಮೂಲೆಯ ಘಟನೆ ಇಡೀ ಜಗತ್ತಿನ ಮೇಲೆ ಪರಿಣಾಮ ಬೀರುವಷ್ಟರಮಟ್ಟಿಗೆ ಜಗತ್ತಿನ ಎಲ್ಲ ಭಾಗಗಳ ಸಂಬಂಧ ಒಂದಕ್ಕೊಂದು ಅಂಟಿಕೊಂಡಿದೆ. ಜಗತ್ತಿನ ಯಾವುದೋ ಒಂದು ದೇಶದ ಒಬ್ಬ ವ್ಯಕ್ತಿಯ ನಿರ್ಣಯ ಇಡೀ ಭೂ ಭಾಗದ ಮಾನವರ ಆಗುಹೋಗುಗಳನ್ನು ನಿರ್ಣಯಿಸುವ ಪರಿಣಾಮ ಸಹ ಬೀರಬಹುದು. ಶಿಕ್ಷಣವನ್ನು ಈ ಹಿನ್ನೆಲೆಯಲ್ಲಿ ಕೊಡಬೇಕಾಗಿರುವುದರಿಂದ ಶಿಕ್ಷಣದ ಗುರಿ ಸಂಕೀರ್ಣಗೊಳ್ಳುವುದು, ತನ್ನ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುವುದು ಸಹಜವಾಗಿದೆ.

ಆದರೆ ಈಗ ನಾವು ಕೊಡುತ್ತಿರುವ ಶಿಕ್ಷಣ ಈ ಎಲ್ಲ ಅವಶ್ಯಕತೆಗಳನ್ನು ಪೂರೈಸಲು ಸಮರ್ಥವಾಗಿದೆಯೇ ಎಂದು ಯೋಚಿಸಿದರೆ ನಮಗೆ ಸಿರುವ ಉತ್ತರ ನಿರಾಶಾದಾಯಕವಾಗಿದೆ. ಪುಸ್ತಕದಲ್ಲಿ, ಭಾಷಣಗಳಲ್ಲಿ, ಚರ್ಚೆಗಳಲ್ಲಿ ಶಿಕ್ಷಣದ ಬಗ್ಗೆ ದೊಡ್ಡ ದೊಡ್ಡ ಮಾತುಗಳನ್ನೇನೋ ಉಪಯೋಗಿಸುತ್ತೇವೆ. ಆದರೆ ಯಾಕ್ಕೃತಹ ಅದನ್ನು ಸಾಧಿಸುತ್ತಿಲ್ಲ, ಶಿಕ್ಷಣದ ಗುರಿ ಓದುಬರಹಗಳನ್ನು ಮಾತ್ರ ಕಲಿಸಲು ಸೀಮಿತವಾಗುತ್ತಿದೆ. ಓದುಬರಹ ಕಲಿಯುವುದರ ಮೂಲಕ ವಿಷಯ ಸಂಗ್ರಹಣೆ, ವಿಷಯ ಸಂಗ್ರಹಣೆ ಮೂಲಕ ಪರೀಕ್ಷೆಗಳನ್ನು ಪಾಸು ಮಾಡಿ ಪದವಿಗಳನ್ನು ಗಿಟ್ಟಿಸುವುದು ಪದವಿಗಳ ಸಹಾಯದಿಂದ ಉದ್ಯೋಗವನ್ನು ಪಡೆಯುವುದೇ ಶಿಕ್ಷಣದ ಧ್ಯೇಯವಾಗಿಬಿಟ್ಟಿದೆ. ಈಗ ಶಿಕ್ಷಣಾರ್ಥಿಗಳ ಸಂಖ್ಯೆ, ಶಿಕ್ಷಣ ಪಡೆದವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ಜಗತ್ತು ನಾಗರೀಕತೆಯಲ್ಲಿ, ವಿಜ್ಞಾನದಲ್ಲಿ ಮುಂದುವರಿಯುತ್ತಿದೆ. ಆದರೆ ಮನುಷ್ಯನ ಸ್ವಭಾವದಲ್ಲಿ ಮಾನವೀಯತೆ ಕಡಿಮೆಯಾಗಿ ಸ್ವಾರ್ಥ. ಮೋಸಗಳ ತಾಂಡವ ನೃತ್ಯ ಎಲ್ಲೆಡೆ ಕಾಣುತ್ತಿದೆ. ಶತ-ಶತಮಾನಗಳ ಹಿಂದೆ ಪ್ರಾಣಿದೆಶೆಯಲ್ಲಿದ್ದ ಮಾನವನಿಗಿಂತಲೂ ಕ್ರೂರಿಯಾಗಿ, ಸ್ವಾರ್ಥಿಯಾಗಿ ಈಗಿನ ಶಿಕ್ಷಣ ಪಡೆದ ವ್ಯಕ್ತಿ ಜೀವಿಸುತ್ತಿರುವುದುಮಾನವನ ಒಂದು ದುರಂತ.

ಎಂದಿಗಿಂತಲೂ ಹೆಚ್ಚಾಗಿ ಇಂದು ಶಿಕ್ಷಣದ ಗುರಿಯ ಬಗ್ಗೆ ಪರಿಣಿತರು ಚಿಂತಿಸಿದರೂ ಇಂದಿನ ಪರಿಸ್ಥಿತಿ ಉಂಟಾಗಲು ಕಾರಣವೇನು ಎಂಬ ಪ್ರಶ್ನೆ ಸಹಜವಾಗಿಯೇ ಉಂಟಾಗುತ್ತದೆ. ಇದಕ್ಕೆ ಶಿಕ್ಷಣ ನೀಡುವ ವ್ಯಕ್ತಿಗೆ ತನ್ನ ಹೊಣೆಗಾರಿಕೆಯ ಸಂಪೂರ್ಣ ಪರಿಚಯವಿದ್ದರೆ ಆ ಹೊಣೆಗಾರಿಕೆಯನ್ನು

ನಿರ್ವಹಿಸಬಲ್ಲ ವ್ಯಕ್ತಿತ್ವವಾಗಲೀ, ತರಬೇತಿಯಾಗಲೀ, ಸಂಸ್ಕಾರವಾಗಲೀ ಇಲ್ಲದಿರುವುದು ಮತ್ತೊಂದು ಕಾರಣ. ಶಿಕ್ಷಣದ ಗುರಿ (ಸರ್ವ ವ್ಯಾಪ್ತಿಯಾಗಿದ್ದರೂ) ಒಂದಿನ ಶಿಕ್ಷಣ ಓದುಬರಹಕ್ಕಷ್ಟೇ ಹೆಚ್ಚು ಮಹತ್ವ ಕೊಟ್ಟಿದ್ದರಿಂದ ಉಳಿದ ಯಾವ ಗುರಿಗಳೂ ಸಾಧಿತವಾಗುತ್ತಾ ಇಲ್ಲ. ಶಿಕ್ಷಣವು ಮನುಷ್ಯನಲ್ಲಿರುವ ಹುಟ್ಟು ಸ್ವಭಾವಗಳನ್ನು ಉದಾತ್ತೀಕರಿಸಬೇಕು; ಅವನು ತನ್ನ ಕಾಲಮೇಲೆ ತಾನು ನಿಂತುಕೊಳ್ಳುವ ಶಕ್ತಿಕೊಡಬೇಕು; ಇತರರೂ ತನ್ನಂತೆ ಎಂದು ಬಗೆದು ಉಳಿದವರೊಡನೆ ಸ್ನೇಹ-ಸಹಕಾರದಿಂದ ನಡೆದುಕೊಳ್ಳಬೇಕು; ತಾನು ಬೇರೆಯವರಿಎ ಹೊರೆಯಾಗದೆ ದುಡಿದುತಿನ್ನುವ ಮನೋಭಾವ ಪಡೆದಿರಬೇಕು; ಆ ವ್ಯಕ್ತಿಯಲ್ಲಿರುವ ಸುಪ್ತಶಕ್ತಿಗಳೆಲ್ಲಾ ಸಂಪೂರ್ಣವಾಗಿ ವಿಕಸನಗೊಳ್ಳಬೇಕು; ದೈಹಿಕವಾಗಿ, ಮಾನಸಿಕವಾಗಿ, ಆರೋಗ್ಯವಂತನಾಗಿರಬೇಕು. ಜ್ಞಾನಸಂಪಾದನೆ ಮಾಡಿಕೊಂಡಿರಬೇಕು.

ಆದರೆ ಇಂದಿನ ಶಿಕ್ಷಕನು ಇವುಗಳೆಲ್ಲದರ ಬಗೆಗೆ ಗಮನ ಕೊಡುತ್ತಿಲ್ಲ. ಅವನ ಗುರಿ ಕೇವಲ ಓದುಬರಹ ಕಲಿಸುವುದಾಗಿದೆ. ಹೀಗಾಗಿ ಶಿಕ್ಷಣ ಪಡೆದ ವ್ಯಕ್ತಿಗಳಲ್ಲಿ ಬಹಳಷ್ಟು ಜನತು ಪದವೀಧರರಾಗಿದ್ದಾರೆಯೇ ಹೊರತು ನಿಜವಾದ ಅರ್ಥದಲ್ಲಿ ಅವರು ಶಿಕ್ಷಕರಲ್ಲ. ಓದುಬರಹ ಅವರಲ್ಲಿ ಸ್ವಂತ ಉದ್ಯೋಗ ಮಾಡುವ ಶಕ್ತಿಯನ್ನು ಕೊಡುತ್ತಿಲ್ಲವಾಗಿ ನಿರುದ್ಯೋಗ ಸಮಸ್ಯೆ ಬೃಹದಾಕಾರವಾಗಿ ಬೆಳೆದಿದೆ. ಈ ಶಿಕ್ಷಣದಲ್ಲಿ ಬಿಡುವಿನ ವೇಳೆಯ ಸದುಪಯೋಗ ಮಾಡಿಕೊಳ್ಳಲು ಗಮನವಿಟ್ಟಿಲ್ಲವಾಗಿ ಮಕ್ಕಳು ಬಿಡುವಿನ ವೇಳೆಯನ್ನು ವ್ಯರ್ಥವಾಗಿ ಕಳೆದು ಸೋಮಾರಿತನ ಮೈಗೂಡಿಸಿಕೊಳ್ಳುತ್ತಾರೆ. ಅಥವಾ ಸಮಾಜಕ್ಕೂ ಹಾಗೂ ವ್ಯಕ್ತಿಗೂ ಹಾನಿಕಾರಕವಾದಂತಹ ಕೆಲಸಗಳಲ್ಲಿ ತೊಡಗಿರುವುದನ್ನು ನಾವು ನಿತ್ಯವೂ ಕಾಣಬೇಕಾಗಿದೆ. ಅವರ ಸುಪ್ತಶಕ್ತಿಗಳ ವಿಕಸನಕ್ಕೆ ಸೂಕ್ತ ಅವಕಾಶವಿಲ್ಲವಾಗಿ ಮಕ್ಕಳು ಅತೃಪ್ತಿ ಅಸಮಾಧಾನಗೊಂಡು ಅಶಿಸ್ತಿನ ನಡುವಳಿಕೆಗಳಲ್ಲಿ ತೊಡಗಿದ್ದಾರೆ. ಶಿಕ್ಷಣವು ಮಕ್ಕಳಲ್ಲಿರುವ ಮೂಲ ಪ್ರವೃತ್ತಿಗಳನ್ನು ಉದಾತ್ತೀಕರಿಸಿ ಉತ್ತಮ ವ್ಯಕ್ತಿಗಳನ್ನು ರೂಪಿಸುವ ಹೊಣೆಗಾರಿಕೆಯಿಂದ ಹೊರತಾಗಿದೆ. ಆದುದರಿಂದಲೇ ಶಿಕ್ಷಿತ ಜನರೂ ಸಹ ಸಮಾಜಬಾಹಿರ ಕೆಲಸಗಳಲ್ಲಿ ನಿರತರಾಗಿರುವುದನ್ನು ಕಾಣುತ್ತಿದ್ದೇವೆ. ಇಂದಿನ ಬಹುತೇಕ ವಿದ್ಯಾವಂತರು ತಮ್ಮ ಸ್ವಾರ್ಥಕ್ಕಾಗಿ ಯಾವ ಮಟ್ಟಕ್ಕಾದರೂ ಇಳಿಯುವ ಮಟ್ಟಿಗೆ ಹೋಗಿದ್ದಾರೆ. ಜನರನ್ನು ಮೋಸಗೊಳಿಸಿ ತಮಗೆ ಲಾಭ ಮಾಡಿಕೊಳ್ಳಲು ಏನನ್ನಾದರೂ ಮಾಡಬಲ್ಲರು, ಶೋಷಣೆಮಾಡಬಲ್ಲರು, ಕೊಲೆಮಾಡಬಲ್ಲರು, ದರೋಡೆಮಾಡಬಲ್ಲರು ಇಲ್ಲಿ ಸಂಬಂಧ, ಸ್ನೇಹ, ಗುರು, ಶಿಷ್ಯ ಭಾವನೆ, ಪ್ರೀತಿ, ಅಭಿಮಾನ ಯಾವುದಕ್ಕೂ ಬೆಲೆ ಇಲ್ಲ. ಎಲ್ಲ ರೀತಿಯ ಮೌಲ್ಯಗಳೂ ಬುಡಮೇಲು.

ಜಗತ್ತಿನಾದ್ಯಂತ ದೌರ್ಜನ್ಯ, ದ್ವೇಷ, ತ್ವೇಷದ ವಾತಾವರಣ. ವಿಶ್ವ ಭ್ರಾತೃತ್ವ ಭಾವನೆ ಬರೀ ಪುಸ್ತಕೀಯ ಪದ. ದಿನ ದಿನಕ್ಕೂ ಸಂಕುಚಿತ ಮನೋಭಾವವನ್ನು ಪೋಷಿಸಿಕೊಂಡು, ಹೆಚ್ಚಿಸಿಕೊಂಡು ಹೋಗುತ್ತಿದ್ದಾನೆ. ಈ ಸ್ಥಿತಿ ಎಂದಿಗೂ ಯಾರಿಗೂ ಕ್ಷೇಮವಲ್ಲ.

ಅದಷ್ಟು ಬೇಗ ಸಸುವಿಚಾರಿಗಳೂ ಎಚ್ಚೆತ್ತು ಪೀಳಿಗೆಯಲ್ಲಿ ಉತ್ತಮವಾದ ನಡೆನುಡಿಗಳನ್ನು ಶ್ರೇಷ್ಠಗುರಿಗಳನ್ನು ಉದಾತ್ತ ಸಂಸ್ಕೃತಿಗಳನ್ನು ಬೆಳಸಿ ವ್ಯಕ್ತಿ, ಸಮಾಜ, ರಾಷ್ಟ್ರ ಜಗತ್ತು ಉತ್ತಮ ರೀತಿಯಿಂದ ಬಾಳುವಂತಹ ಸ್ಥಿತಿ ಉಂಟು ಮಾಡಲು ಬೇಕಾದ ಶಿಕ್ಷಣ ಕೊಡಲು ಕಾರ್ಯಪ್ರವೃತ್ತರಾಗಬೇಕು. ಆ ಮೂಲಕ ಗಗನ ಕುಸುಮವಾಗಿರುವ ವಿಶ್ವ ಭ್ರಾತೃತ್ವ ಭಾವನೆ ಎಲ್ಲರ ಕೈಗೆ ಎಟಕುವಂತಾಗಬೇಕು.

### ಯುವಶಕ್ತಿ–ರಾಷ್ಟ್ರಶಕ್ತಿ

ಇಂದಿನ ಕೂಗು – ಯುವಜನರಿಗೆ ಅವಕಾಶ ಕೊಡಿ, ಮುದುಕರನ್ನು ಹೊರದೂಡಿ; ಹಳೆಯದೆಲ್ಲವೂ ಹೋಗಲಿ, ಎಲ್ಲಾ ಕಡೆ ಹೊಸದು ಬರಲಿ. ಜಿಡ್ಡು ಹಿಡಿದ ವಿಚಾರಗಳು, ಮುಗ್ಗಸುಬಂದ ಕಾರ್ಯನೀತಿಗಳು ಇಲ್ಲವಾಗಬೇಕು. ಕ್ರಾಂತಿಯ ಕಹಳೆ ಊದಬೇಕು. ಹಳೆಯ ಜನ ಹೋಗುವವರೆಗೆ ಹೊಸ ವಿಚಾರಗಳಿಗೆ ಎಡೆ ಇರುವುದಿಲ್ಲ. ಹಳಬರು ಬದಲಾವಣೆಗೆ ಹೊಂದಿಕೊಳ್ಳುವುದಿಲ್ಲ; ಹೊಸ ವಿಚಾರಗಳಿಗೆ ಸಹಕಾರ ತೋರುವುದಿಲ್ಲವೆಂಬುದು ಯುವ ಪೀಳಿಗೆಯ ಆಪಾದನೆ.

ಈ ಆಪಾದನೆ ಸತ್ಯಕ್ಕೆ ದೂರವಾದುದೇನಲ್ಲ. ಸಾಮಾಜಿಕ ಮೌಲ್ಯಗಳು ನಿರಂತರ ಬದಲಾವಣೆ ಹೊಂದುತ್ತಿರುತ್ತವೆ. ವೈಜ್ಞಾನಿಕ ಪ್ರಗತಿ, ಸಾಮಾಜಿಕ ಜೀವನದಲ್ಲಿ, ವಿಚಾರಗಳಲ್ಲಿ ಮಹತ್ತರ ಬದಲಾವಣೆಗಳನ್ನು ತಂದಿದೆ. ಈ ಸನ್ನಿವೇಶದಲ್ಲಿಯೂ ಬದಲಾವಣೆಗೆ ಮನ್ನಣೆ ಕೊಡದ ಜನ ಸ್ಥಾನಗಳನ್ನಾಕ್ರಮಿಸಿಕೊಂಡು ಕುಳಿತರೆ, ಕಾರ್ಯಕ್ಕೂ ವಿಚಾರಕ್ಕೂ ಘರ್ಷಣೆಯಾಗುವುದು ಸಹಜ. ಘರ್ಷಣೆ, ಅಶಾಂತಿ, ಅತೃಪ್ತಿಗಳನ್ನು ಆಶಿಸ್ತು ಆಂದೋಲನಗಳನ್ನು ತರುತ್ತದೆ ಎಂದಾದರೆ ಇದಕ್ಕೆ ಪರಿಹಾರವೇನು? ಯುವಪೀಳಿಗೆಗೆ ಎಲ್ಲಾ ಜವಾಬ್ದಾರಿಯನ್ನು ಹೊರಿಸಿ, ಹಳಬರನ್ನು ಜವಾಬ್ದಾರಿಯುತ ಸ್ಥಾನಗಳಿಂದ ಇಳಿಸುವುದು ಸೂಕ್ತ ಪರಿಹಾರವೆ ಎಂದು ಯೋಚಿಸಬೇಕು.

ಹೌದು. ಇದೇ ಸೂಕ್ತ; ಪರಿಹಾರ ಎಂದು ಭಾವಿಸುವುದು ಮೇಲ್ನೋಟಕ್ಕೆ ಸರಿ ಎನ್ನಿಸುತ್ತದೆ. ಆದರೆ ಈ ಬಗೆಗೆ ಆಳವಾಗಿ ವಿಚಾರವಂತರೆಲ್ಲಾ ಯೋಚಿಸಬೇಕು. ಹಾಗಾದರೆ ಇಂತಹ ಪರಿಹಾರದಿಂದ ಏನಾಗಬಹುದು? ಜವಾಬ್ದಾರಿಯುತ ಸ್ಥಾನಗಳನ್ನು ಪಡೆದು, ಮಹತ್ತರ ವಿಚಾರಗಳ ಬಗೆಗೆ ನಿರ್ಣಯ ತೆಗೆದುಕೊಂಡು

ದೇಶವನ್ನು ಪ್ರಗತಿಯತ್ತ, ಜನತೆಯನ್ನು ತೃಪ್ತಿ, ನೆಮ್ಮದಿಯತ್ತ, ರಾಷ್ಟ್ರವನ್ನು ಘನತೆ-ಗೌರವಗಳತ್ತ ಮುನ್ನಡೆಸಿಕೊಂಡು ಹೋಗಬಲ್ಲದೆ ? ಅಂತಹ ಮಾರ್ಗದರ್ಶನ, ತರಬೇತಿ, ಶಿಕ್ಷಣ, ಸಾಮರ್ಥ್ಯ, ದಕ್ಷತೆಗಳು ನಮ್ಮ ಯುವ ಪೀಳಿಗೆಗೆ ದೊರೆತಿದೆಯೆ ಎಂದು ವಿವೇಚಿಸುವುದ ಸೂಕ್ತ.

ದಿನವೂ ಪತ್ರಿಕೆಯೋದುತ್ತಿದ್ದಾಗ, ಸಾಮಾಜಿಕ ಘಟನೆಗಳನ್ನು ಅವಲೋಕಿಸಿದಾಗ, ಕೌಟುಂಬಿಕ ಜೀವನಗಳನ್ನು ಪರೀಕ್ಷಿಸಿದಾಗ ನಾವು ಕಾಣುವುದೇನು? ಇಂದಿನ ಬಹುಪಾಲು ಯುವಕರು ಸ್ವಾರ್ಥಪರರಾಗಿದ್ದಾರೆ; ಅಶಿಸ್ತು ದುರ್ನಡತೆ, ಬೇಜವಾಬ್ದಾರಿತನಗಳ ಧ್ಯೋತಕವಾಗಿದ್ದಾರೆ. ಯುವಪೀಳಿಗೆಯಲಿ ಸೋಮಾರಿತನ, ಮೋಜು ಮಾಡುವ ಮನೋಭಾವ, ದುಷ್ಟ ಚಾಪಲ್ಯಗಳು ಮನೆಮಾಡಿವೆ. ಕಷ್ಟಪಡದೇ ಸುಖ ಬೇಕು, ಸಾಧನೆ ಇಲ್ಲದೆ ಪ್ರತಿಫಲ, ಕಡಿಮೆ ಶ್ರಮದಿಂದ ಹೆಚ್ಚು ಲಾಭಬೇಕು ಅವರಿಗೆ. ಇದು ಯುವಕರ ಮೇಲಿನ ಹಳಬರ ಆಪಾದನೆಯಲ್ಲ. ದೈನಂದಿನ ಘಟನೆಗಳನ್ನು ಅವಲೋಕಿಸಿದರೆ ಯುವ ಪೀಳಿಗೆ ಎತ್ತ ಸಾಗುತ್ತಿದೆ ಎಂದು ಚಿಂತೆಯಾಗುತ್ತದೆ. ಸ್ವಾರ್ಥಕ್ಕೆ, ಸುಖಕ್ಕೆ, ಮೋಜಿಗೆ, ಸೋಮಾರಿತನಕ್ಕೆ ಮಾರುಹೋಗಿರುವ ಯುವಕರು ಏನೆಲ್ಲಾ ಕಾರ್ಯಗಳನ್ನೆಸಗುತ್ತಿದ್ದಾರೆ ಎಂದು ದಃಖವಾಗುತ್ತದೆ. ರಾಷ್ಟ್ರದ ಸ್ಥಿತಿ, ಜನತೆಯ ಗತಿ ಏನು ಎಂದು ಗಾಬರಿಪಡುವಂತಾಗುತ್ತದೆ. ಇಂದು ನಡೆಯುತ್ತಿರುವ ಅನೇಕ ಅತ್ಯಾಚಾರ, ಅನಾಚಾರ, ಭ್ರಷ್ಟಾಚಾರಗಳಲ್ಲಿ ಯುವ ಪೀಳಿಗೆಯ ಹಸ್ತಕ್ಷೇಪವಿರುವುದನ್ನು ಕಾಣುತ್ತಿದ್ದೇವೆ. ಇದರ ಹಿನ್ನಲೆಯಲ್ಲಿ ಮುದುಕರಿದ್ದಾರೋ, ಹಳಬರಿದ್ದಾರೋ, ಅತೃಪ್ತರಿದ್ದಾರೋ, ಸ್ವಾರ್ಥಿಗಳಿದ್ದಾರೋ, ಗೊತ್ತಿಲ್ಲ. ಯಾರಾದರೂ ಇರಲಿ ಅದು ಮುಖ್ಯವಲ್ಲ. ಆದರೆ ನೇರವಾಗಿ ಇಂತಹ ದುಷ್ಟ, ಬೇಜವಾಬ್ದಾರಿಯುತ ಘಟನೆಗಳಲ್ಲಿ ಪ್ರಜ್ಞಾವಂತ ಯುವಪೀಳಿಗೆ ಭಾಗವಹಿಸುವುದು ಯೋಗ್ಯವೇ? ಯುವಕನು ಸರಿಯಾದ ರೀತಿಯಲ್ಲಿ ತರಬೇತಿ ಪಡೆದವನಾಗಿದ್ದರೆ ದುಷ್ಟ ವ್ಯವಹಾರಗಳಲ್ಲಿ ಅವನ ಕೈವಾಡವಿರುವುದಿಲ್ಲ. ಯಾವುದೇ ಕೆಲಸವಾದಾಗಲೂ ದೂರದೃಷ್ಟಿಯಿಂದ ವಿಚಾರ ಮಾಡುತ್ತಾನೆ; ಎಂತಹ ಪರಿಸ್ತಿತಿಯಲ್ಲಿಯೂ ಮಾನಸಿಕ ಸಮತೋಲನವನ್ನು ಕಳೆದುಕೊಳ್ಳವುದಿಲ್ಲ.

ತನಗೆ ದೊರೆತ ಜವಾಬ್ದಾರಿಯುತ ಸ್ಥಾನವನ್ನು ರಾಷ್ಟ್ರದ ಗೌರವವನ್ನು ಎತ್ತಿ ಹಿಡಿಯಲು, ಜನತೆಯಲ್ಲಿ ಶಾಂತಿ, ಸುವ್ಯವಸ್ಥೆ ಉಂಟು ಮಾಡಲು ಪೀಳಿಗೆ ನೆಮ್ಮದಿ, ತೃಪ್ತಿಯಿಂದ ಪ್ರಗತಿಪಡೆಯುವಂತೆ ಮಾಡಲು ಉಪಯೋಗಿಸುತ್ತಾನೆ. ಆದರೆ ಇಂದು ನಮ್ಮ ಯುವ ಪೀಳಿಗೆಯ ಬಹುಪಾಲುಮಂದಿ ಹಾಗಿಲ್ಲ. ಜನರು ಅನಿಷ್ಟ ಪರಿಸ್ಥಿತಿಯಿಂದ ಅತೃಪ್ತರಾದಾಗ, ಇಡೀ ಜನಾಂಗದ ಕಷ್ಟದ ಬಗ್ಗೆ ಚಿಂತಿಸುವ

ಯುವ ವೈಯಕ್ತಿಕವಾಗಿ ಲಾಭದಾಯಕವಾದಾಗ, ಹಿಂದೆ ಸರಿಯುತ್ತಾನೆ. ತನ್ನ ಸ್ವಂತದ ಲಾಭವಾಗುವಂತಿದ್ದರೆ ಎಂತಹ ಹೇಸಿಗೆ ಕೆಲಸ ಮಾಡಲಿಕ್ಕೂ ಹಿಂದೆ-ಮುಂದೆ ನೋಡುವುದಿಲ್ಲ. ಕಪಟ ನಾಟಕವಾಡಬಲ್ಲ, ವಂಚನೆ ಮಾಡಬಲ್ಲ, ಸೋಗು ಹಾಕಬಲ್ಲ, ನ್ಯಾಯ-ಅನ್ಯಾಯ ವಿಮರ್ಶೆಯನ್ನು ತೋರಿಕೆಗಾಗಿ, ಸ್ವಾರ್ಥ ಸಾಧನೆಗಗಿ ಸೋಗುಹಾಕಿ ನಡೆಯಬಲ್ಲ. ಹೀಗೆ ಇಂದಿನ ಯುವ ಪೀಳಿಗೆಯ ಬಗ್ಗೆ ಬರೆಯುತ್ತಾ ಹೋದರೆ ನಿರಾಶೆಯೇ ಎದುರಾಗುತ್ತದೆ.

ಅಂದರೆ ಯುವಕರೆಲ್ಲಾ ಹಾಗಿದ್ದಾರೆಂದು ಅರ್ಥವಲ್ಲ. ಇದು ಬಹುಪಾಲು ಮಂದಿಯ ಕಥೆ. ಯುವಕರಲ್ಲಿ ಶಕ್ತಿ, ಸಾಮರ್ಥ್ಯ, ದಕ್ಷತೆ, ಕರ್ತೃತ್ವ ಶಕ್ತಿ ಅಪಾರವಾಗಿರುತ್ತದೆ. ಅದರ ಉಪಯೋಗವಾಗುವಂತಹ ತರಬೇತಿ ಅವರಿಗೆ ಸಿಕ್ಕಬೇಕು. ಮಾರ್ಗದರ್ಶನ ದೊರೆಯಬೇಕು, ಮಾದರಿ ವ್ಯಕ್ತಿತ್ವ ಮುಂದಿರಬೇಕು. ಬಾಲ್ಯದಿಂದಲೂ ಕ್ರಮ-ಕ್ರಮವಾಗಿ ಹೊಣೆಗಾರಿಕೆಯುಳ್ಳ ಕೆಲಸವನ್ನು ವಹಿಸಿ ಅವರ ಕಾರ್ಯ ವಿದಾನವನ್ನು ಸೂಕ್ಷ್ಮವಾಗಿ ದೂರದಿಂದ ಗಮನಿಸಬೇಕು. ತಪ್ಪಿದಾಗ ಸೂಕ್ತ ಮಾರ್ಗದರ್ಶನ ದೊರೆಯುವಹಾಗಿರುವುದು ಅಗತ್ಯ. ಯುವಕರು ತಮಗೆ ಕೊಟ್ಟ ಹೊಣೆಗಾರಿಕೆಯನ್ನು ಸಮರ್ಥವಾಗಿ ನಿರ್ವಹಿಸಬಲ್ಲರು ಎಂದು ಮನವರಿಕೆಯಾದ ನಂತರ ಹೊಣೆಗಾರ ಸ್ಥಾನಗಳನ್ನು ವಹಿಸಬೇಕೆ ವಿನಃ, ಹುವಕರೆಂಬ ಕಾರಣಕ್ಕಾಗಿ ಜವಾಬ್ದಾರಿ ಹೊರಿಸಿದರೆ, ಹೊತ್ತುಕೊಂಡರೆ ಅವರು ಹೊಣೆಗೇಡಿಗಳಾಗಿ ನಡೆಯುತ್ತಾರೆ. ರಾಷ್ಟ್ರವನ್ನು ವಿನಾಶದತ್ತ, ಜನತೆಯನ್ನು ಅಶಾಂತಿಯತ್ತ, ಭವಿಷ್ಯವನ್ನು ಶೂನ್ಯದತ್ತ ಒಯ್ಯುತ್ತಾರೆ.

ಯುವಜನಾಂಗದಲ್ಲಿ ಶಕ್ತಿ ಇದೆ. ಉತ್ಸಾಹವಿದೆ. ಆದರೆ ಅವುಗಳ ಸದುಪಯೋಗವಾಗುವಂತಹ ಮಾರ್ಗದರ್ಶನದ ಕೊರತೆಯ ಕಾರಣ ಯುವ ಶಕ್ತಿ ದುರುಪಯೋಗವಾಗುತ್ತಿದೆ. ಅವರ ಕರ್ತೃತ್ವ ಶಕ್ತಿ, ಉತಾಹ ವ್ಯರ್ಥವಾಗಿ ಹೋಗುತ್ತಿರುವುದೊಂದೇ ಅಲ್ಲ, ಅದು ಅನರ್ಥಗಳಿಗಾಗಿ ವಿನಿಯೋಗವಾಗುತ್ತಿದೆ. ಇದರ ನಿಯಂತ್ರಣವಾಗದಿದ್ದರೆ ರಾಷ್ಟ್ರಕ್ಕೆ ಉಜ್ವಲ ಭವಿಷ್ಯವಿಲ್ಲವಾಗುತ್ತದೆ.

ಒಂದು ಕುಟುಂಬದ ಯಜಮಾನ ದೂರದೃಷ್ಟಿಯುಳ್ಳವನೂ ಮನೆತನದ ಬಗೆಗೆ ಅಭಿಮಾನ ಉಳ್ಳವನೂ ಆಗಿದ್ದರೆ, ತನಗೆ ವಯಸ್ಸಾದಂತೆ ಗೃಹಕೃತ್ಯದ ಹೊಣೆಗಾರಿಕೆಯನ್ನು ಹೊರಲು ತನ್ನ ಮಗನನ್ನು ಹಂತ ಹಂತವಾಗಿ ಅಣಿಗೊಳಿಸುತ್ತಾನೆ. ಮುಂದೆ ಮನೆತನದ ಜವಾಬ್ದಾರಿಗಳನ್ನು ಸುಸೂತ್ರವಾಗಿ ಸಾಗಿಸಲು ಬೇಕಾದ ದಕ್ಷತೆ, ತಿಳುವಳಿಕೆ, ಜವಾಬ್ದಾರಿಯುತ ಭಾವನೆಗಳನ್ನು ತನ್ನ ಜೊತೆಗೆ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತಾ. ಸಮಸ್ಯೆ ಬಂದಲ್ಲಿ, ಸೂಕ್ತ ಪರಿಹಾರ ತಿಳಿಸಿ, ಅವನಿಂದಲೇ ಸಮಸ್ಯೆಗಳು ಬಗೆಹರಿಯುವಂತೆ ನೋಡುತ್ತಾನೆ. ಅವನು

ಅಂತಹ ಹೊಣೆಗಾರಿಕೆ ಹೊರುವಂತಹ ದಕ್ಷತೆ ಪಡೆದನೆಂದು ಅರಿವಾದಕೂಡಲೇ ತಾನು ಹಿಂದೆ ಸರಿದು, ಅವನಿಗೆ ಹೊಣೆಗಾರಿಕೆ ಸಂಪೂರ್ಣವಾಗಿ ವಹಿಸಿ, ದೂರದಿಂದಲೇ ಮಗನ ಲಕ್ಷ್ಯಕ್ಕೆ ಬಾರದಂತೆ, ಅವನ ಕಾರ್ಯಕ್ಷಮತೆಯನ್ನು ಅವಲೋಕಿಸುತ್ತಾನೆ. ಅವನು ಸಮರ್ಥವಾಗಿ ನಡೆಸಿಕೊಂಡು ಹೋದರೆ ತಾನು ಸಂಪೂರ್ಣವಾಗಿ ಹಿಂದೆ ಸರಿದು ನಿಶ್ಚಿಂತೆಯಿಂದ, ನೆಮ್ಮದಿಯಿಂದ ವೃದ್ಧಾಪ್ಯ ಕಳೆಯುತ್ತಾನೆ. ಹಾಗೆಯೇ ನಮ್ಮ ಸಮಾಜದ ಹಿರಿಯರು ಕುರ್ಚಿಯನ್ನು ತಮ್ಮ ಗುತ್ತಿಗೆಯನ್ನಾಗಿ ಮಾಡಿಕೊಂಡು ಯುವಜನಾಂಗಕ್ಕೆ ಅವಕಾಶವೇ ಇಲ್ಲದಂತೆ ಬಾಗಿಲನ್ನು ಮುಚ್ಚಿ ಕುಳಿತರೂ ಒಳ್ಳೆಯದಲ್ಲ. ಸರಿಯಾದ ತರಬೇತಿಯನ್ನು ಕೊಟ್ಟು ಅವರನ್ನು ಆರ್ಯ ನಿರ್ವಹಣೆಗೆ ಸಮರ್ಥಖುಅಗುವಂತೆ ಪಳಗಿಸದೆ, ತಾವು ಹಿಂದೆ ಸರಿದು ಯುವಕರಿಗೆ ಜವಾಬ್ದಾರಿ ವಹಿಸಿ ನಿಶ್ಚಿಂತರಾಗುವುದೂ ಒಳಿತಲ್ಲ. ಸಮಾಜದ ಬಗೆಗೆ, ರಾಷ್ಟ್ರದ ಬಗೆಗೆ ತಮ್ಮ ಸ್ವಂತ ಕುಟುಂಬದ ಬಗೆಗಿರುವಂತಹ ಕಳಕಳಿಯಿಂದ ಚಿಂತಿಸಬೇಕು. ಪ್ರತಿಯೊಬ್ಬರು ಸ್ವಇಚ್ಛೆಯಿಂದ ಸಮಾಜದ ಒಳಿತಿಗಾಗಿ ತಮಗೆ ಸಾಧ್ಯವಾದಂತಹ ಕಾರ್ಯವನ್ನು ನಿರ್ವಹಿಸಿ, ಉತ್ತಮ ಮೌಲ್ಯಗಳಿಗೆ ಬೆಲೆಕೊಡುವಂತಹ ದಕ್ಷತೆ, ಪ್ರಾಮಾಣಿಕತೆಗಳನ್ನು ಸ್ವತಃ ಪಡೆದಿರುವಂತಹ. ಸ್ವಾರ್ಥಕ್ಕಾಗಿ ಸಮಾಜವನ್ನು ಶೋಷಣೆ ಮಾಡುವಂತಹ ಉತ್ತಮ ಪೀಳಿಗೆಯ ಉಗಮಕ್ಕೆ ಸಹಾಯಕವಾಗಬೇಕು. ಅಂದಾಗ ಮಾತ್ರ ಭ್ರಷ್ಟಾಚಾರಕ್ಕೆ, ಸ್ವಾರ್ಥಕ್ಕೆ, ಸೋಗಿನ ಜೀವನಕ್ಕೆ, ಮೋಸಗಾರಿಕೆಯಿಂದ ಜೀವನ ನಡೆಸುವ ಡಂಭಾಚಾರಕ್ಕೆ ಕೊಡಲಿಪೆಟ್ಟು ಬೀಳುತ್ತದೆ. ಆಗ ನಮ್ಮ ರಾಷ್ಟ್ರದ ಉದ್ಧಾರವಾಗುವುದು, ಜನತೆ ನೆಮ್ಮದಿಯಿಂದ ಬದುಕಬಲ್ಲದು.

## ದಲಿತರು ಯಾರು?

ಈಗ ಎಲ್ಲೆಲ್ಲಿ ನೋಡಿದರು ದಲಿತರ ಬಗ್ಗೆ ಮಾತು. ಬರೀ ಮಾತೇ ಅಲ್ಲ. ಕವನ, ಕಾದಂಬರಿ, ಕಥೆ, ನಾಟಕ, ಲೇಖನಗಳ ರಚನೆಯೂ ಸಾಕಷ್ಟು ಆಗಿವೆ. ಭಾಷಣಗಳಿಗಂತೂ ಕೊನೆ–ಮೊದಲಿಲ್ಲ. ಅನೇಕ ವರ್ಗಗಳವರು ನಾವು ದಲಿತರು' ಎಂದು ಹೇಳಿಕೊಳ್ಳುತ್ತಾರೆ. ಹಾಗಾದರೆ ಈ ದಲಿತರು ಯಾರು?

ದಲಿತರು ಎಂಬ ಪದ ಸಾಮಾನ್ಯವಾಗಿ 'ತುಳಿಯಲ್ಪಟ್ಟವರು' ಎಂಬ ಅರ್ಥವನ್ನು ಕೊಡುತ್ತದೆ. ವಿಶಾಲಾರ್ಥದಲ್ಲಿ ಶೋಷಣೆಗೆ ಒಳಗಾದವರು. ಅನ್ಯಾಯಕ್ಕೆ ಬಲಿಯಾದವರು, ಅಸಹಾಯಕತೆಗೆ ಗುರಿಯಾದವರು, ನೋವು–ನರಳಿಕೆಗೆ ತುತ್ತಾಗಿಸಲ್ಪಟ್ಟವರು ಎಂದು ಹೇಳಬಹುದು. ಅಂದರೆ ಯಾರು ಸಾಮಾಜಿಕ ಪರಿಸ್ಥಿತಿಯಿಂದ ಸಮಾಜದಲ್ಲಿ ನೋವಿಗೆ ಗುರಿಯಾಗುತ್ತಾರೋ ಅವರನ್ನು ದಲಿತರು ಎನ್ನಬಹುದು. ಮೇಲ್ವರ್ಗದ ಜಾತಿಯವರು, ಕೆಳವರ್ಗದ ಜಾತಿಯವರನ್ನು,

ಶ್ರೀಮಂತರು ಬಡವರನ್ನು, ಅಧಿಕಾರಿಗಳು ತಮ್ಮ ಕೈಕೆಳಗಿನವರನ್ನು ನೋಬಿಗೆ ಈಡುಮಾಡಿರಬಹುದು. ಉದ್ದಿಮೆದಾರರು, ಪ್ಲಾಂಟರರುಗಳು ತಮ್ಮಲ್ಲಿಯ ಕೆಲಸಗಾರರನ್ನು, ಸರ್ಕಾರ ಪ್ರಜೆಗಳನ್ನು ಹಿಂಸೆಗೆ ಗುರಿಮಾಡಿರಬಹುದು. ಕೆಲವು ಪೀತ ಪತ್ರಿಕೆಗಳು ತಮ್ಮ ಸ್ವಾರ್ಥಕ್ಕಾಗಿ, ಕೆಲವರನ್ನೂ, ಕೆಲವೊಂದು ಗುಂಪಿನವರನ್ನು ತೇಜೋವಧೆ ಮಾಡಿರಬಹುದು. ಹೀಗೆ ನನ ವರ್ಗಗಳಿಂದ ಅನ್ಯಾಯಕ್ಕೆ ಒಳಗಾದವರು, ತುಳಿಯಲ್ಪಟ್ಟವರು. ಶೋಷಿಸಲ್ಪಟ್ಟವರು, ಅನ್ಯಾಯಕ್ಕೆ ಗುರಿಯಾದವರು ಎಲ್ಲರೂ ದಲಿತರೆ. ಒಟ್ಟಿನಲ್ಲಿ ಯಾವುದೇ ಕಾರಣದಿಂದಾಗಲೀ, ತುಳಿಯಲ್ಪಟ್ಟಿದ್ದರೆ, ಹತ್ತಿಕ್ಕಲ್ಪಟ್ಟಿದ್ದರೆ, ಅಸಹಾಯಕತೆಯಿಂದ ಬೇಯುವಂತೆ ನಿರುಪಾಯ ಸ್ಥಿತಿಗೆ ಗುರಿಮಾಡಲ್ಪಟ್ಟಿದ್ದರೆ ಅಂಥವರೆಲ್ಲರೂ ದಲಿತರ ಗುಂಪಿಗೆ ಸೇರಲ್ಪಡುತ್ತಾರೆ.

ನಾವು ಸಮಾಜದಲ್ಲಿ ಜನರು ಅನೇಕ ರೀತಿಯಲ್ಲಿ ತುಳಿಯಲ್ಪಟ್ಟುದನ್ನು ಕಾಣುತ್ತೇನೆ. ಇಂತಹ ಪರಿಸ್ಥಿತಿ ಸಮಾಜ ಹುಟ್ಟಿ ಬಂದಂದಿನಿಂದಲೂ ಬೇರೆ ಬೇರೆ ರೀತಿಯಲ್ಲಿ ಬೆಳೆದುಕೊಂಡು ಬಂದಿದೆ. ಅನೇಕ ದಾರ್ಶನಿಕರು, ಉದಾತ್ತ ವ್ಯಕ್ತಿಗಳು ಇದನ್ನು ಪ್ರತಿಭಟಿಸಿಕೊಳ್ಳುತ್ತಲೇ ಬಂದಿದ್ದಾರೆ. ಅಂತಹವರ ಪ್ರತಿಭಟನೆ, ಜನರಲ್ಲಿ ವಿದ್ಯಾಪ್ರಸಾರ, ಜನರಲ್ಲಿ ಜಾಗೃತಿಯನ್ನುಂಟು ಮಾಡಿದೆ. ತುಳಿಯಲ್ಪಟ್ಟ ಜನ ಮೊದಲಿನಂತೆ ನಿರುಪಾಯರಾಗಿ ಸಹಿಸದೆ, ಸಿಡಿದೇಳತೊಡಗಿದ್ದರೆ ಆಯಾ ಮೇಲ್ವರ್ಗದ ಗುಂಪಿನ ಉದಾತ್ತ ವ್ಯಕ್ತಿಗಳೂ ಇಂತಹ ಜನರ ಬೆಂಬಲಕ್ಕೆ ನಿಂತಿದ್ದಾರೆ. ಪರಿಣಾಮಕಾರಿಯಾಗಿ ಎದುರಿಸಲು ಸಾಹಿತ್ಯ ರಚನೆಯಾಗಿದೆ. ಆದರೆ ಪ್ರತಿಭಟನೆಯ ಮಾಗದಲ್ಲಿಯೂ ಒಂದು ಶೋಷಣೆಯ ವರ್ಗ ಹುಟ್ಟಿಕೊಂಡಿದೆ. ಈ 'ದಲಿತ'ರ ಕಾಲವಾದುದರಿಂದ ದಲಿತಶಾಹಿತ್ಯ ಕ್ಕೆ ಪ್ರೋತ್ಸಾಹ ಬರುವುದೆಂದು ತಿಳಿದು ನಿಜವಾದ ಕಳಕಳಿ ಇಲ್ಲದೆ ಲಾಭ ಪಡೆಯುವ ಸಲುವಾಗಿ ದಲಿತ ಸಾಹಿತ್ಯ ರಚನೆಗೆ ತೊಡಗಿದ್ದಾರೆ. ಅದರ ಪ್ರಯತ್ನ ಸ್ವಂತ ಲಾಭಕ್ಕೆ ಮಾತ್ರ ಸೀಮಿತ. ಕೆಲವರು ರಾಜಕಾರಣಿಗಳು ದಲಿತರ ಉದ್ಧಾರಕ್ಕೆಂಬಂತೆ ಭಾಷಣಗಳನ್ನು ಮಾಡುತ್ತಾರೆ. ಆದರೆ ದಲಿತೋದ್ಧಾರಕ್ಕಾರ್ಯ ಮಾತ್ರ ಏನೂ ಇಲ್ಲ. ಜನರ ಬೆಂಬಲ ಪಡೆದುಕೊಂಡು, ತಮ್ಮ ಬೇಳೆ ಬೇಯಿಸಿಕೊಂಡು ಹಿಂದೆ ಸರಿಯುತ್ತಾರೆ. ಕೆಲವು ಸಮಾಜ ಕಾರ್ಯಕರ್ತರ ಸೋಗಿನಲ್ಲಿ ಕೆಲವೊಂದು ವರ್ಗಗಳ, ಕೆಲವೊಂದು ಹಳ್ಳಿಗಳ ಮುಖಂಡರಂತೆ ನಟಿಸುತ್ತಾರೆ. ಅವರಿಗೆ ಅನುಕಂಪ ತೋರಿಸುತ್ತಾರೆ. ಭಾಷಣಗಳನ್ನೇರ್ಪಡಿಸುತ್ತಾರೆ. ಏನೋ ಕೆಲಸ ಮಾಡುತ್ತಿರುವಂತೆ ಸೋಗುಹಾಕಿ ಹಳ್ಳಿಗರ, ಅಜ್ಞಾನಿಗಳ ಮುಖಂಡರಾಗುತ್ತಾರೆ. ಆ ಅಸಾಹಯಕ ಜನ ತಮಗೇನೋ ಒಳ್ಳೆಯದಾಗುವುದೆಂದು ಈ ಮುಖಂಡನ ಕೈಗೊಂಬೆಗಳಾಗಿ ನಡೆಯುತ್ತಾರೆ. ಆದರೆ ಒಳಹೊಕ್ಕು ನೋಡಿದರೆ ಯಾವುದೇ ರೀತಿಯಲ್ಲೂ ಆ ದಲಿತರ ಉದ್ಧಾರವಾಗಿರುವುದಿಲ್ಲ. ಈ ಸೋಗಿನ ಸಮಾಜ ಉದ್ಧಾರಕನ ಕೈಯ್ಯಲ್ಲೇ. ಆ

ಊರಿನ ಓಟುಗಳಿರುತ್ತವೆ. ಚುನಾವಣೆ ಬಂದಾಗ ಊರಿಗೆ ಊರೇ ಆ ಸಮಾಜ-ಸುಧಾರಕ ಹೇಳಿದ ವ್ಯಕ್ತಿಗೆ, ಪಕ್ಷಕ್ಕೆ ಓಟುಕೊಡುತ್ತದೆ. ಹಾಗಾಗಿ ರಾಜಕೀಯ ಪಕ್ಷಗಳಿಂದ ಆ ಮನುಷ್ಯನಿಗೆ ಹೇರಳವಾದ ಲಾಭ. ಯಾವ ಪಕ್ಷದಿಂದ ಹೆಚ್ಚು ಲಾಭ ಬರುತ್ತದೆಯೋ ಆ ಪಕ್ಷಕ್ಕೆ ಹೆಚ್ಚು ಓಟು ಕೊಡಿಸುತ್ತಾನೆ. ಈ ಸಮಾಜಕರ್ತ. ಇವರು ಹೇಳಿದವರಿಗೆ ಓಟು ಕೊಟ್ಟರೆ ತಮ್ಮ, ತಮ್ಮ ಜನಾಂಗದ, ತಮ್ಮ ಹಳ್ಳಿಯ ಸ್ಥಿತಿ ಸುಧಾರಿಸುತ್ತದೆಯೆಂದು ನಂಬಿ, ಅವನು ಹೇಳಿದಂತೆ ಕೇಳುತ್ತಾರೆ. ಆದರೆ ಪರಿಸ್ಥಿತಿ ಇದ್ದಂತೆಯೇ ಇರುತ್ತದೆ. ಆಗಲೂ ಈ ಧೂರ್ತ ಓಟು ತೆಗೆದುಕೊಂಡವರನ್ನು ದೂಷಿಸಿ, ತಾನು ಒಳ್ಳೆಯವನೆಂಬಂತೆಯೇ ಆ ಜನಕ್ಕೆ ನಂಬಿಸಿ, ಮತ್ತೂ ಆ ಜನ ತನ್ನ ಕೈಲೇ ಇರುವಮತೆ ಮಾಡಿಕೊಳ್ಳುತ್ತಾನೆ. ಇದು ಒಂದು ರೀತಿಯ ಶೋಷಣೆ. ದುಷ್ಟ ಅಧಿಕಾರಿಗಳು ತಮ್ಮ ಅಧೀನದಲ್ಲಿ ಕೆಲಸ ಮಡುವವರನ್ನು ಅಸಹಾಯಕರನ್ನಾಗಿ ಮಾಡಿ ಸ್ವಾರ್ಥ ಸಾಧಿಸಿಕೊಳ್ಳುತ್ತಾರೆ, ದರ್ಪತೋರಿಸಿ ತಮ್ಮನ್ನು ಮೆರೆಸಿಕೊಳ್ಳುತ್ತಾರೆ. ಅಸಹಾಯಕತೆಗೆ ಗುರಿಮಾಡಿ ನೋವಿಗೀಡುಮಾಡುತ್ತಾರೆ. ಕೆಲವು ಅಧಿಕಾರಿಗಳು ಕೆಳಗಿನವರು ತಮಗಾಗಿ ಸೇವೆ ಮಡುವುದನ್ನು ನಿರೀಕ್ಷಿಸಬಹುದು. ತಮಗೆ ಲಾಭವಾಗುವಂತೆ ಮಾಡಿದರೆ ಮಾತ್ರ ಅವರಿಗೆ ಕಿರುಕುಳ ಕೊಡದಿರುತ್ತಾರೆ. ಅಧಿಕಾರಿಯ ದುಷ್ಟ ಚಟಗಳಿಗೆ ಸೌಲತ್ತು ಮಾಡಿಕೊಟ್ಟವರಿಗೆ ಅಧಿಕಾರದ ದುರುಪಯೋಗದಿಂದ ಲಾಭವಾಗುವಂತೆ ಮಾಡುತ್ತಾನೆ. ತನ್ನ ಕೃಪಾಕಟಾಕ್ಷಕ್ಕೆ ಪಾತ್ರರಾಗುವಂತೆ ನಿಯಮಗಳನ್ನು ಉಪಯೋಗಿಸಿಕೊಳ್ಳುತ್ಥಾನೆ. ಹೀಗೆ ನಡೆದುಕೊಳ್ಳದಿದ್ದವರಿಗೆ ಅದೇ ನಿಯಮಗಳನ್ನಾಗಿ ಮಾಡುತ್ತಾನೆ. ಕೆಲಸ ಮಾಡುವುದು ದುರ್ಭರವಾಗಿಸುತ್ತಾನೆ. ಅವರಿಗೆ ವ್ಯಕ್ತಿತ್ವವಾಗಲೀ, ಸ್ವಾಭಿಮಾನವಾಗಲೀ ಇರಬಾರದೆಂಬಂತೆ ಪೀಡಿಸಿ ಕಾಡಿಸುತ್ತಾನೆ. ಈ ರೀತಿಯಾಗಿ ಹಿಂಸೆಗೊಳಗಾದ ಜನರೂ ದಲಿತರೆ.

ಕೆಲವೊಂದು ಪೀತ ಪತ್ರಿಕಗೆಗಲೂ ತಮ್ಮ ಪತ್ರಿಕಾ ತತ್ತ್ವನ್ನು ಗಾಳಿಗೆ ತೂರಿ, ಹಣದ ಆಸೆಗಾಗಿ ಬರೆಯುತ್ತವೆ. ಅದರ ಹುದ್ದರಿಗಳೆಂದರೆ ದೊಡ್ಡ ದೊಡ್ಡ ವ್ಯಕ್ತಿಗಳು ಅಥವ ಅಧಿಕಾರಿಗಳು,ಅವರ ತೇಜೋವಧೆ ಮಾಡಲೂ ಹಿಂಜರಿಯುವುದಿಲ್ಲ. ತಮಗೆ ಆ ವ್ಯಕ್ತಿಗಳು ಅನುಕೂಲಕರರಾಗಿಲ್ಲದಿದ್ದರೆ, ತಮಗೆ ಲಾಭ ಮಾಡಿಕೊಡದಿದ್ದೆರ, ಅಂತಹವರ ಬಗೆಗ ಇಲ್ಲಸಲ್ಲದ ಪ್ರಚಾರ ಮಾಡುತ್ತವೆ. ಕಡ್ಡಿಯನ್ನು ಗುಡ್ಡಮಾಡಿ ಆ ವ್ಯಕ್ತಿಯ ಮುಖಕ್ಕೇ ಮಸಿ ಬಳಿಯಲು ಪ್ರಯತ್ನಿಸುತ್ತವೆ. ಇಂತಹ ಪ್ರಯತ್ನಗಳಿಂದ ಕೆಲಸಲ ವ್ಯಕ್ತಿತ್ವಕ್ಕೇ ಧಕ್ಕೆಯುಂಟಾಗಬಹುದು. ಇದೂ ಒಂದು ರೀತಿಯ ಶೋಷಣೆ. ಇಂತಹ ಶೋಷಣೆಗೆ ಒಳಗಾದವರೂ ದಲಿತರೆ.

ಕೆಲವು ಸಾಹಿತಿಗಳು ದಲಿತ ಸಾಹಿತ್ಯವನ್ನು ರಚಿಸಿ, ಜನರನ್ನು ಕೆರಳಿಸಬಹುದು

ಅಥವಾ ದಲಿತರ ಬೆಂಬಲವನ್ನು ಪಡೆಯಬಹುದು. ನಂತರ ದಲಿತರ ಮುಖಂಡರಾಗಿ ಎಲ್ಲ ಮುಖಂಡರ ಪರಿಚಯ, ಸಾಮೀಪ್ಯ ಪಡೆಯುತ್ತಾರೆ. ಅವರ ಮಾತಿಗೆ ಒಂದು ರೀತಿಯ ಬೆಲೆ-ಬಲ ಬರುತ್ತದೆ. ಅದರ ಬಲದಿಂದ ತಮ್ಮ ಸ್ವಾರ್ಥ ಸಾಧಿಸಿಕೊಳ್ಳುತ್ತಾರೆ. ದಲಿತರನ್ನು ನಡುವೆಯೇ ಕೈಬಿಡುತ್ತಾರೆ. ಇದೊಂದು ಆಧುನಿಕ ರೀತಿಯ ಶೋಷಣೆ.

ಉತ್ತಮ ಸ್ಥಿತಿಯಲ್ಲಿ ಇರುವವರು ಕಡಿಮೆ ಸ್ಥಿತಿಯಲ್ಲಿರುವವರನ್ನು (ಸ್ಥಾನದಲ್ಲಿ, ಹಣದಲ್ಲಿ, ಜಾತಿಯಲ್ಲಿ, ರೂಪದಲ್ಲಿ, ಶಕ್ತಿಯಲ್ಲಿ – ಎಲ್ಲ ವಿಧಗಳಲ್ಲೂ) ಶೋಷಿಸುವದು ಒಂದು ರೀತಿಯ ಸಾಮಾಜಿಕ ಲಕ್ಷಣವೆಂದೇ ಕಾಣುತ್ತದೆ. ಏಕೆಂದರೆ ಮಾನವರಲ್ಲಿ ಎಲ್ಲರೂ ಉದಾತ್ತರಿರುವುದಿಲ್ಲ. ಸ್ವಾರ್ಥಿಗಳಾದವರು ದುಷ್ಟರದವರೂ ಯಾವುದೇ ಕಾರಣದಿಂದ ತಾವು ಉತ್ತಮ ಸ್ಥತಿಯಲ್ಲಿದ್ರೆ, ದುರ್ಲಾಭ ಪಡೆಯಲಯು ಹವಣಿಸುತ್ತಾರೆ. ಇ ಸ್ಥಿತಿಯುನ್ನು ನವು ಎಲ್ಲ ಕಾಲದಲ್ಲೂ ಒಂದಲ್ಲ ಒಮದುಇ ರೀತಿಯಲ್ಲಿ ಇರುವುದನ್ನು ಕಾಣಬಹುದು. ಆಸದರೆ ಈ ರಈತಿಯ ನಡುವಳಿಗೆ ಹೆಷಚ್ಚುತ್ತ ಹೋಗುವುದು. ಅಂತಹವರ ಸಂಖದಯೆ ಬಳೆಯುವುದು ಅನಾಗರೀಕತೆಯ ಲಕ್ಷಣ. ಈ ಪ್ರವೃತ್ತಿ ಸಾಮಾಜಿಕ ಆರೋಗ್ಯಕ್ಕೆ ಮರಕ. ಆದುದರಿಂದ ಇದರ ತಡೆಗಟ್ಟುವಿಕೆಯ ಅನಿಮಾರ್ಯ. ಉತ್ತಮ ಸ್ಥಿತಿಯಲ್ಲಿರುವವರು ಮಾನವೀಯ ಗುಣವುಳ್ಳವರಾದರೆ ಇಂತಹ ಶೋಷಣೆಗೆ ಅವಕಾಶವಿರುವುದಿಲ್ಲ. ಸಾಮಾನ್ಯ ಜನರು ಸುಶಿಕ್ಷಿರತೂ, ತಮ್ಮ ಹಕ್ಕು ಬಾಧ್ಯಯತೆಗಳನ್ನು ಅರಿತು ನ್ಯಾಯಕ್ಕಾಗಿ ಹೋರಾಟ ನಡೆಸುವಷ್ಟು ಧೈರ್ಯವಂತರೂ. ಸಂಘಟನಾ ಚತುರರೂ ಆದಾಗ ಈ ಶೋಷಣೆ ಕಡಿಮೆಯಾಗುತ್ತದೆ. ದಲಿತರ ಸಂಖ್ಯೆ ಇಳಿಮುಖವಾಗುತ್ತದೆ. ಇದಕ್ಕೆ ಉತ್ತಮ ಶಿಕ್ಷಣ ಅಗತ್ಯ.

### ಭಾರತದ ರಾಷ್ಟ್ರೀಯ ಐಕ್ಯದ ಟೊಳ್ಳು – ಗಟ್ಟಿ

ಭಾರತವಿಂದು ವಿಜಯದ ಹೊಸ್ತಿಲಿನ ಮೇಲೆ ನಿಂತಿದೆ. ಇದೀಗ ಸುಸಮಯ ನಾವು ನಡೆದುಬಮಧ ಧಾರಿಯ ಸಿಂಹಾವಲೋಕನಕ್ಕೆ. ಬಾರತೀಯರ ತ್ಯಾಗ, ದೇಶಪ್ರೇಮ, ನಿಸ್ವಾರ್ಥತೆ, ಒಗ್ಗಟ್ಟಿನ ಫಲವಾಗಿ ಪರಕೀಯರ ಆಡಳಿತ ಭಾರತದಲ್ಲಿ ಆಡಳಿತ ಭಾರತದಲ್ಲಿ ಕೊನೆಗೊಂಡು ಆಗಲೇ ಕಾಲು ಶತಮಾನ ಕಳೆಯುತ್ತಾ ಬಂದಿತು. ಸ್ವತಂತ್ರ ಭಾರತ, ಬಲಿಷ್ಠ ರಾಷ್ಟ್ರವಾಗಿ, ಅವನತ ಜನತೆಯನ್ನು ಮೇಲೆತ್ತುವ ನೈತಿಕ ಧೈರ್ಯ, ಭೌತಿಕ ಸಾಮರ್ಥ್ಯ ಪಡೆದಿದೆ. ಈ ವರ್ಷದ ಪ್ರಜಾರಾಜ್ಯ ಉತ್ಸವಕ್ಕೆ ಇನ್ನೂ ವಿಶೇಷ ಕಳೆ ಏರಿದೆ. ಇದು ಹೊರನೋಟ. ಆದರೆ, ಸಮಾಜದ ಒಳದನಿ ಏನು?

'ಪ್ರಜಾ ಸರ್ಕಾರ' ಎಷ್ಟು ಹಿತವಾದ ಮಾತು ! ಅದರ ಅರ್ಥವಂತೂ ಅತ್ಯಂತ ಮೋಹಕ ! ಇಲ್ಲಿ ಪ್ರಜೆಗಳದ್ದೇ ಸರ್ಕಾರ ; ಪ್ರಜೆಗಳಿಗಾಗಿಯೇ. ಪ್ರಜೆಗಳಿಂದಲೇ ರಚಿತವಾದ ಸರ್ಕಾರ ! ಪ್ರತಿ ಪ್ರಜೆಯೂ ಸರ್ಕಾರದ ಅಂಶ: ಪ್ರತಿಯೊಬ್ಬ ಪ್ರಜೆಯ ಹಿತ ಸರ್ಕಾರದ ಗುರಿ. ಅಂದರೆ ಪ್ರಜಾರಾಜ್ಯದ ಪ್ರಜೆ ಅತ್ಯಂತ ಸುಖಿ. ಯಾರ ದಬ್ಬಾಳಿಕೆಗೂ ಅವನು ಒಳಗಾಗಬೇಕಿಲ್ಲ. ಯಾರೂ ಅವನಮೇಲೆ ದೌರ್ಜನ್ಯ ತೋರಿಸುವಂತಿಲ್ಲ; ಯಾವ ರೀತಿಯ ಅನ್ಯಾಯವೂ ಅವನಿಗಾಗಲು ಸಾಧ್ಯವಿಲ್ಲ; ತನಗೆ ದೊರೆಯಬೇಕಾದುದನ್ನು, ಸಲ್ಲಬೇಕಾದುದನ್ನು ಪಡೆದುಕೊಳ್ಳಲು ಪೂರ್ಣ ಹಕ್ಕುಳ್ಳವನು ಪ್ರಜೆ. ಒಬ್ಬರ ಹಿತವನ್ನು ಮತ್ತೊಬ್ಬರು ಕಡೆಗಣಿಸುವಂತಿಲ್ಲ. ಯೋಗ್ಯತೆಗೆ ತಕ್ಕ ಪ್ರತಿಫಲ ಪ್ರತಿಯೊಬ್ಬರಿಗೂ. ಇದೇ ಅಲ್ಲವೆ ಪ್ರತಿಯೊಬ್ಬರಿಗೂ. ಇದೇ ಅಲ್ಲವೆ ಪ್ರತಿಯೊಬ್ಬ ಭಾರತೀಯನೂ ಪ್ರಜಾರಾಜ್ಯ ರಚನೆಯಾದಾಗ ಕಟ್ಟಿಕೊಂಡ ಕನಸು ! ಈಗಲೂ ಬಡಜನತೆ ಎದುರು ನೋಡುತ್ತಿರುವ ಸುಖೀರಾಜ್ಯ !!

ಆದರೆ ಆದುದೇನು ? ಆಗುತ್ತಿರುವುದೇನು? ಭಾರತೀಯ ವ್ಯಕ್ತಿತ್ವ ಕಳೆದುಕೊಂಡಿದ್ದಾನೆ. ಪೌರುಷವಿಲ್ಲದವನಾಗಿ ಅವನೀಗ ಕೇವಲ ಪರಿಸ್ಥಿತಿಯ ಕೈಗೊಂಬೆ. 'ಸಿಕ್ಕದವರಿಗೆ ಸೀರುಂಡೆ' ಎಂಬ ಗಾದೆಯಂತೆ ದಕ್ಕಿದವನಿಗೆ ದಕ್ಕಿತು, ಇಲ್ಲದವನಿಗೆ ಇಲ್ಲ. ದಕ್ಕುತ್ತಿರುವುದಾದರೂ ಯಾರಿಗೆ ? ಸಮರ್ಥನಿದ್ದವನಿಗೆ ದಕ್ಕಿ, ಅಸಮರ್ಥನಿಗೆ ದಕ್ಕದೇ ಇದ್ದರೆ ಪ್ರಶ್ನೆಯೇ ಇಲ್ಲ. ಆದರೆ ಹಾಗೆಲ್ಲಿ ಆಗುತ್ತಿದೆ ?

**ಇಂದಿನ ಪ್ರಜಾರಾಜ್ಯ :**

ಪ್ರತಿಯೊಬ್ಬರಿಗೂ ಹಕ್ಕಿದೆ. ಏನು ಬೇಕಾದರೂ ಮಾಡಲು ಸಾಧ್ಯವಿದೆ. ಏನು ಬೇಕಾದರೂ ಮಾಡಿ ಜನಬಲ, ಸ್ಥಾನಬಲಗಳಿದ್ದರೆ ಸಮಾಜದಲ್ಲಿ ಗೌರವ ಸ್ಥಾನ ಪಡೆದು ಜಯದುಂದುಭಿಯನ್ನು ಮೊಳಗಿಸುತ್ತಾ ಬದುಕಬಹುದು. ಕೊಲೆ ಮಾಡಿ ಅಥವಾ ಮಾಡಿಸಿ ಅದರ ಶಿಕ್ಷೆಯನ್ನು ಅನುಭವಿಸದೆ ಸಮಾಜದ ಗಣ್ಯವ್ಯಕ್ತಿಯಾಗಿ ಬಾಳಲು ಪ್ರಜಾ ಸರ್ಕಾರದಲ್ಲಿ ಅವಕಾಶವುಂಟು. 'ಹೌದು' ಎನ್ನುವುದನ್ನು 'ಇಲ್ಲ' ಎನ್ನಿಸಬಹುದು. 'ಇಲ್ಲ'ಎನ್ನುವುದನ್ನು 'ಹೌದು' ಎನ್ನಿಸಬಹುದು. ಪ್ರತಿಯೊಬ್ಬ ಪ್ರಜೆಗೂ ಮೂಲಭೂತ ಹಕ್ಕುಗಳಿರುವಾಗ ಹೀಗೇಕೆ? ಅನ್ಯಾಯ, ಅರಾಜಕತೆಗಳಿಗೆ ಅವಕಾಶವೇಕೆ ? ಉತ್ತರವಿಷ್ಟೆ : "ಪ್ರಜಾ ಸರ್ಕಾರದಲ್ಲಿ ಎಲೆಕ್ಷನ್ ಮೂಲಕ ಯಾರು, ಯಾವಾಗ ಯಾವ ಸ್ಥಾನಕ್ಕೆ ಬರುತ್ತಾರೋ ? ಯಾಕಪ್ಪಾ ಸುಮ್ಮನೆ ನಿಷ್ಠೂರ; ಆದದ್ದಾಗಲಿ. ಯಾರಿಗೋ ಏನೋ ಆದರೆ ಅದರಲ್ಲಿ ನಾವೇಕೆ ತಲೆಹಾಕಬೇಕು? ಬೇರೆಯವರಿಗಾಗುವ ಅನ್ಯಾಯ ತಪ್ಪಿಸುವ ಸಲುವಾಗಿ ನಾವೇಕೆ ಮತ್ತೊಬ್ಬರ ವಿರೋಧ ಕಟ್ಟಿಕೊಂಡು ನಮ್ಮ ಜೀವನವನ್ನು ಸಮಸ್ಯೆ ಮಾಡಿಕೊಳ್ಳಬೇಕು.

ಅಥವಾ ನಮ್ಮ ನೆಮ್ಮದಿಗೆ ಭಂಗ ತಂದುಕೊಳ್ಳಬೇಕು? 'ದಾರಿಯಲ್ಲಿ ಹೋಗುವ ದೆವ್ವನ್ನನು ಮನೆಹೊಕ್ಕು ಹೋಗು' ಎಂದು ಕರೆಯುವ ಈ ಹುಚ್ಚುತನ ಯಾರು ಹೇಳಿದ್ದಾರು? ನಮ್ಮ ತಂಟೆಗೆ ಬರದಿದ್ದರಾಯ್ತು. ನಮಗೆ ಅನುಕೂಲಕರವಾದ ಪರಿಸ್ಥಿತಿಗಳಿದ್ದರಾಯ್ತು. ಯಾರಿಗೇನಾದರೂ ಆಗಲಿ. ಯಾರು ಏನಾದರು ಮಾಡಿಕೊಳ್ಳಲಿ" ಎಂದು ಈಗಿನ 'ಪ್ರಜಾ ರಾಜ್ಯ'ದ ಜನಸಾಮಾನ್ಯರ ಧ್ವನಿ ಪರಂಪರೆ, ವಿಚಾರಧಾರೆ.

**ಅಸಹಾಯಕ ಪರಿಸ್ಥಿತಿ :**

ಇಂದಿನ ಸಮಾಜದಲ್ಲಿ ಯಾವನಾದರೊಬ್ಬನು ಅಸಹಾಯಕ ಪರಿಸ್ಥಿತಿಗೋಮ ಅನ್ಯಾಯಕ್ಕೋ ಒಳಗಾದರೆ, ಪ್ರಸಂಗವನ್ನು ತಾನೊಬ್ಬನೇ ಒಂಟಿಯಾಗಿ ಎದುರಿಸಬೇಕಾಗುತ್ತದೆ. ಸಮಾಜದ ನೈತಿಕ ಬೆಂಬಲ ಅವನಿಗೆ ದೊರೆಯುವುದಿಲ್ಲ. ಅಧಿಕಾರ, ಹಣ, ಮೆಜಾರಿಟಿ ಜನ, ಪುಂಡುಗಾರಿಕೆಗಳ ಎದುರು ಒಬ್ಬ ವ್ಯಕ್ತಿ ಅವನೆಷ್ಟೇ ನ್ಯಾಯ ಪರಿಸ್ಥಿತಿಯಲ್ಲಿದ್ದರೂ ಹೋರಾಡಿ, ಜಯಗಳಿಸಲು ಅಸಾಧ್ಯವಾಗುತ್ತದೆ. ಒಂಟಿತನ ಅವನನ್ನು ಧೃತಿಗೆಡಿಸಬಹುದು. ಇಂತಹ ಅಸಹಾಯ ಪರಿಸ್ಥಿತಿ, ನೈತಿಕತೆಗೆ ಸ್ಥಾನವಿಲ್ಲದ ಸಮಾಜದಲ್ಲಿ ಪ್ರತಿಯೊಬ್ಬರ ಪಾಲಿಗೂ ಬರಬಹುದು. ಇಂದು 'ಇವರ' ಸರತಿಯಾದರೆ, ನಾಳೆ 'ಮತ್ತೊಬ್ಬರದು', ಮುರುದಿವಸ 'ಮಗುದೊಬ್ಬರದು' !ವ್ಯಕ್ತಿಯು ಹಣ, ಜನ, ಅಧಿಕಾರದ ಬಲವನ್ನು ಹೊಂದಿರುವತನಕ ಸ್ವಾರ್ಥಿಗಳು ಪರಾಕು ಹೇಳಿಕೊಂಡು ಓಡಾಡುತ್ತಿರುತ್ತಾರೆ. ಆದರೆ ಅದೇ ವ್ಯಕ್ತಿ, ಯಾವದೋ ಕಾರಣದಿಂದ ಅದನ್ನು ಕಳೆದುಕೊಂಡನೆಂದರೆ, 'ಪರಾಕು' ಹೇಳುತ್ತಿದ್ದ ಗುಂಪೇ ವ ತಿರುಗಿಬೀಳುತ್ತದೆ. ಹೀಗೆ ಒಂದು ತತ್ತ್ವದ ಆಧಾರವಿಲ್ಲದೆ ಪರರ ಕೃಪೆಯ ಮೇಲೆಯೇ ಅವಲಂಬಿಸಿರು ಜನತೆ, ಮೇಲು ಮೇಲೆ ಹೋರಾಟ ನಡೆಸುವಂತೆ ಕಂಡರೂ, ಒಳಗೆ ಅತೃಪ್ತಿಯನ್ನು ಅನುಭವಿಸುತ್ತಿದೆ. ಅತೃಪ್ತಿಯ ಪರಿಣಾಮ ಎಂದಿಗೂ ಒಳಿತಾಗಿರುವುದಿಲ್ಲ. ಆದುದರಿಂದ ಸಮಾಜದಲ್ಲಿ ನೈತಿಕ ಬೆಂಬಲದ ವಾತಾವರಣವಿದ್ದರೆ, ನ್ಯಾಯವಾದ ವ್ಯಕ್ತಿ 'ಒಂಟಿ'ಯಾಗುವ ಪ್ರಸಂಗ ಬರುವುದಿಲ್ಲ; ಅನ್ಯಾಯಕ್ಕೆ ಒಳಗಾಗುವುದಿಲ್ಲ. ಇಂತಹ ಪರಿಸ್ಥಿತಿ ನಮ್ಮ ದೇಶದಲ್ಲಿ ಬಹುಶಃ ಪ್ರಜಾರಾಜ್ಯ ಬರುವುದಕ್ಕೆ ಮೊದಲಿತ್ತು. ಆಗ ಯೋಗ್ಯರಾದವೆಲ್ಲಾ,ಹಣ, ಅಧಿಕಾರಗಳಿಲ್ಲದಿದ್ದರೂ ಧೈರ್ಯದಿಂದ, ನೆಮ್ಮದಿಯಿಂದ ಬಾಳಬಹುದಿತ್ತು. ಯಾವುದೇ ವ್ಯಕ್ತಿಯು ಅನ್ಯಾಯಕ್ಕೆ ಒಳಗಾದರೆ, ಇಡೀ ಸಮಾಜವೇ ಒಂದಾಗಿ, ಅವನ ಬೆಂಬಲಕ್ಕೆ ನಿಲ್ಲುತ್ತಿತ್ತು. ಎಂತಹ ಪ್ರಸಂಗ ಬಂದರೂ ಧೃತಿಗೆಡದೆ ಮಾನವ ಬದುಕುತ್ತಿದ್ದ. ಆದರೆ ಈಗ 'ಗೆದ್ದ ಎತ್ತಿನ ಬಾಲ ಹಿಡಿಯುವ' ಬಾಲಬುಡುಕ ಪೀಳಿಗೆ ತಲೆ ಎತ್ತಿದೆ. ಈ ಪೀಳಿಗೆಗೆ ತನ್ನದೇ ಆದ ತತ್ವವಿಲ್ಲ; ನೈತಿಕವಾದ ಗುರಿ ಇಲ್ಲ. "ಗಾಳಿ ಬಂದಾಗ

ತೂರಿಕೊ" ಎಂಬುದೇ ಇಂದಿನ ಬೀಜಮಂತ್ರ. "ಮಳೆಬಮದ ಕಡೆ ಛತ್ರಿ ಹಿಡಿ" ಎಂಬುದು ಜೀವನದ ಸೂತ್ರ. ಈ ಅನುಭವದ ನುಡಿಗಳು ಜೀವನದಲ್ಲಿ ಯಾವಾಗಲೋ ಒಮ್ಮೆ ಧ್ಯೇಯ ಸಾಧನೆಯ ದೃಷ್ಟಿಯಿಂದ ಅನುಸರಿಸಬೇಕಾದ ಅಣಿಮುತ್ತುಗಳೇನೋ ನಿಜ. ಆದರೆ ಅವುಗಳನ್ನು ಪ್ರಜಾರಾಜ್ಯಗದಲ್ಲಿ ಸ್ವಾರ್ಥ ಸಾಧನೆಯ 'ಕಾಲುದಾರಿ'ಗಳನ್ನಾಗಿ ಉಪಯೋಗಿಸಿಕೊಳ್ಳಲಾಗುತ್ತಿದೆ. ಇಂತಹ ಪರಿಸರದಲ್ಲಿ "ಹುಚ್ಚು ಮುಂಡೆ ಮದ್ವೇಲಿ ಉಂಡವನೇ ಜಾಣ" ಎಂದುಕೊಂಡು ಜನತೆ ಹೊಟ್ಟೆ ತುಂಬಿಸಿಕೊಳ್ಳಹತ್ತಿದೆ. ಹಾಗೆ ಮಾಡಲಾರದವರು ಹುಚ್ಚರು, ವ್ಯವಹಾರಹೀನರು, ಬಾಳು ಬರದವರು. ಏಕೆಂದರೆ, ಇಂದಿನ ತತ್ವದಂತೆ ನಡೆಯಲಾರದವನು ಪ್ರತಿಕ್ಷಣವೂ ಹೋರಾಟವನ್ನೆದುರಿಸಿ ಹೆಜ್ಜೆ ಮುಂದಿಡಬೇಕು. ಆದರೂ ಅಡ್ಡಿ ಇಲ್ಲ. ಕೊನೆಗಾದರೂ ಸತ್ಫಲ ದೊರೆಯುವುದೆಂಬ ಭರವಸೆ ಉಂಟೆ? ಇಲ್ಲವೇ ಇಲ್ಲ. ಹಾಗಿರುವಾಗ ಜನತೆ ಯಾವ ಧೈರ್ಯದ ಮೇಲೆ, ಯಾವ ಆಧಾರದ ಮೇಲೆ ಸಮಸ್ಯಾಯವಾದ ಮಾರ್ಗವನ್ನು ಅನುಸರಿಸೀತು ? ಅದಕ್ಕಾಗಿಯೇ ಜನ ಈಗ ಪೌರುಷಹೀನರಾಗಿದ್ದಾರೆ; ಮೂಕ ಪಶುಗಳಾಗಿದ್ದಾರೆ.

**ಪ್ರಜಾರಾಜ್ಯದಲ್ಲೂ ಪರತಂತ್ರ :**

ಅಧಿಕಾರ, ಹಣ, ದುಷ್ಟಶಕ್ತಿಗಳ ಮುಂದೆ ನಿರ್ವೀರ್ಯರಾಗಿ, ಅವನತ ಮುಖದಿಂದ ಬದುಕುತ್ತಿದ್ದಾರೆ. ಹಾಗಿಲ್ಲದಿದ್ದರೆ ಮಾರ್ಗವಿಲ್ಲ. ಇನ್ನೂ ಅಪಮಾನಕರ ಸ್ಥಿತಿ ಎದುರಿಸಬೇಕಾದೀತು. ನ್ಯಾಯಕ್ಕೆ ಬೆಲೆಯನ್ನುಳಿಸಿಕೊಂಡಿಲ್ಲದ ಸಮಾಜ, ಯೋಗ್ಯನಿಗೆ ಅನಯಾಯವಾಯ್ತೆಂದು ಮರುಗುವ ಬದಲು ಸೋತವನನ್ನು ಕಡೆಗಣಿಸುತ್ತಿದೆ. ಅದಕ್ಕಾಗಿಯೇ ಮನುಷ್ಯ ಅಧಿಕಾರದ ಬೆನ್ನುಹತ್ತಿದ್ದಾನೆ. ಹಣದ ಕಾಲು ಹಿಡಿಯುತ್ತಿದ್ದಾನೆ. ಅವುಗಳನ್ನು ಪಡೆಯಲು ಏನೆಲ್ಲ ಮಾಡುತ್ತಾನೆ. ಅವುಗಳನ್ನು ಪಡೆಯಲು ದ್ವೇಷ, ಮೋಸ, ವಂಚನೆ, ಕುತಂತ್ರ ಎಲ್ಲವನ್ನೂ ಮಾಡುತ್ತಾನೆ. ಕಾರಣ, ಅವುಗಳನ್ನು ತನಗೆ ನಿರ್ಭಯ, ಪ್ರಯತ್ನಿಸಿ ದೊರೆಯದಿದ್ದರೆ, ದೊರೆತವನ ಕೃಪಾ ಕಟಾಕ್ಷವನ್ನಾದರೂ ಪಡೆಯಲು ಪರದಾಡುತ್ತಾನೆ. ಸ್ವಾಭಿಮಾನ, ಸ್ವಂತ ವ್ಯಕ್ತಿತ್ವ ಇದ್ದರೆ ಬದುಕುವುದು ಈಗ ಸಾಧ್ಯವಿಲ್ಲ ಎಂಬುದು ಬಹುಜನರ, ಏಕೆ ಎಲ್ಲರ ಅಭಿಮತವಾಗಿದೆ. 'ಕಾರ್ಯವಾಸಿ ಕತ್ತೆ ಕಾಲ್ಕಟ್ಟು' ಎಂಬಂತೆ, ನಡೆಯುವದೇ ಜಾಣತನ ಎನ್ನುವದು ಬಹುಜನರ ನಂಬಿಕೆ.

**ಅಧಿಕಾರ-ಹಣದ ಪದತಲದಲ್ಲಿ :**

ಹಣದ ಮುಂದೆ ತಲೆಬಾಗು. ಇಲ್ಲದಿದ್ದಲ್ಲಿ ಅದು ನಿನಗಿಲ್ಲವಾಗುತ್ತದೆ. ಜನಬಲವಿರುವವರನ್ನು ವಿರೋಧಿಸಬೇಡ. ಏಕೆಂದರೆ ಮೆಜಾರಿಟಿಯ ಬಲದಿಂದ

ಏನನ್ನಾದರೂ ಮಾಡುವ ಶಕ್ತಿ ಇರುತ್ತದೆಯವರಿಗೆ,. ಈ ರೀತಿಯ ಪರಿಸ್ಥಿತಿಯಿಂದ, ವಿಚಾರದಿಂದ ಪ್ರಜಾರಾಜ್ಯದಲ್ಲಿ ಜನತೆ ಹೇಡಿಗಳಂತೆ ಬದುಕಹತ್ತಿದೆ.

ಅಧಿಕಾರದ ಮಂದಿಯಾದರೂ ಹೆಚ್ಚಾಗಿ ಅಧಃಪತನದ ಹಾದಿ ಹಿಡಿಯುತ್ತಿರುವುದೇಕೆ ? ಅಧಿಕಾರವೂ ಡೆಮಾಕ್ರೆಸಿಯಲ್ಲಿ ನಾಲ್ಕಾರು ಜನಗಳ ಬೆಂಬಲದಿಂದಲೇ ಬಂದಿರುತ್ತದೆ. ಎಲೆಕ್ಷನ್ ಮೂಲಕವೋ, ಸೆಲೆಕ್ಷನ್ ಮೂಲಕವೋ, ನಾಮಿನೇಷನ್‌ನ್ನಿಂದಲೋ ಯಾವುದರಿಂದ ಅಧಿಕಾರಕ್ಕೆ ಬರಬೇಕೆಂದರೂ ಈಗಿನ ಕಾಲದಲ್ಲಿ ಬಹಳಮಾಡಿ ಯಾರೋ ಜನರ ಬೆಂಬಲ, ಯಾರದೋ ಹಣದ ಬೆಂಬಲ, ಯಾರದೋ ವಶೀಲಿ ಹೀಗೆ ಅನೇಕ ರೀತಿಗಳಲ್ಲಿ ಜನರ 'ಉಪಕಾರ;ದ ಬಲದಿಂದ ಪಡೆದುದಾದಾಗ, ತನಗೆ ಬೆಂಬಲಿಸಿದವರನ್ನು ಆ ವ್ಯಕ್ತಿ ತೃಪ್ತಿಪಡಿಸಬೇಕಾಗುತ್ತದೆ ಅಥವಾ ಅವನು ಆ ಸ್ಥಾನಕ್ಕೆ ಬರುವಂತೆ ಸಹಾಯ ಮಾಡಿದ ಜನ ತಮ್ಮ ಸ್ವಾರ್ಥಕ್ಕೆ ಅನುಕೂಲವಾಗುವಂತೆ ಅವನ ಅಧಿಕಾರವನ್ನು ಉಪಯೋಗಿಸಿಕೊಳ್ಳುವಂತೆ ಒತ್ತಾಯಿಸಲೂಬಹುದು. ಅದಿಕಾರದಲ್ಲಿದ್ದವರ ಪರಿಸ್ಥಿಯೂ ಕಷ್ಟಕರವಾದುದು. ಈ ಒತ್ತಾಯಗಳಿಗೆ, ಒತ್ತಡಗಳಿಗೆ ಅವನು ಮಣಿಯದಿದ್ದರೆ ಅವನಿಗೆ ಆ ಸ್ಥಾನದಲ್ಲಿ ಉಳಿಗಾಲವಿಲ್ಲ, ಬೆಂಬಲವಿಲ್ಲ. ಹಾಗಾಗಿ ಅಧಿಕಾರಬೇಕಾದ ಮನುಷ್ಯ ಮಣಿಯುತ್ತಾನೆ. ಹಾಗೆ ಮಣಿಯದೆ ಅಧಿಕಾರ ಕಳೆದುಕೊಂಡರೂ ಅವನ ತತ್ತ್ವನಿಷ್ಠೆಯನ್ನು ಕೊಂಡಾಡುವ ಜನತೆ ಇಲ್ಲ. ಬದಲಗಿ ಅವನನ್ನು ಹುಮಬನೆನ್ನಬಹುದು. ಹೀಗಾಗಿ ಅವನ ಸ್ಥಿತಿ ಹೀನಾಯವಾಗುತ್ತದೆ. ಆದುದರಿಂದ ಮಣಿದು ನಡೆಯುವ ಮಂದಿಯೇ ಹೆಚ್ಚು. ಈ ರೀತಿ ಪ್ರಜಾರಾಜ್ಯ ಬಂದಮೇಲೆ ಭಾರತೀಯರು ಕುರಿಗಳಾಗುತ್ತಿದ್ದಾರೆ. ಕುರಿಗಳನ್ನು ನಿರ್ಮಿಸುವುದು ಡೆಮಾಕ್ರೆಸಿಯ ಕುರುಹಾದರೆ, ಮನುಷ್ಯರನ್ನು ಮನುಷ್ಯರನ್ನಾಗಿ ಉಳಿಸಬಲ್ಲ ಮತ್ತಾವುದಾದರೂ 'ಕ್ರೆಸಿ' ಮೇಲಲ್ಲವೆ ಎಂಬುದಾಗಿ ವಿಚಾರವಂತರು ಯೋಚಿಸಿದರೆ ಅಸಹಜವೇನಲ್ಲ.

ಮೊನ್ನಿನ ಯುದ್ಧದಲ್ಲಿ ಜಗತ್ತೇ ಮೆಚ್ಚುವಂತಹ ಇಂದಿರಾಜಿಯವರ ನಾಯಕತ್ವ ಅದಕ್ಕೆ ತಕ್ಕ ಒಕ್ಕಟ್ಟು, ಬೆಂಬಲ ದೇಶದಲ್ಲಿ ಎಲ್ಲೆಲ್ಲೂ ಕಾಣಿಸಿತು. ಜನತೆ ತನ್ನ ಭಿನ್ನತೆಯನ್ನೆಲ್ಲ ಮರೆತು, ಒಕ್ಕಟ್ಟಿನಿಂದ ನಾಯಕತ್ವಕ್ಕೆ ನೈತಿಕ ಬೆಂಬಲ ನೀಡಿತು. ಅದರ ಫಲವಾಗಿ ಇಂದು ಭಾರತ ವಿಶ್ವದ ದೃಷ್ಟಿಯಲ್ಲಿ ಹೆಮ್ಮೆಯಿಂದ ತಲೆಎತ್ತಿ ನಿಲ್ಲುವಂತಾಗಿದೆ. ಇದೇ ರೀತಿ ಜನತೆ ತನ್ನ ಆಂತರಿಕ ಜೀವನದಲ್ಲೂ 'ನ್ಯಾಯ'ವಾಗಿ ಬದುಕಿದರೆ, 'ನೈತಿಕ;ವಾಗಿ ಬಾಳಿದರೆ ನನಸಾದೀತು. ಈ ಟೊಳ್ಳು, ಗಟ್ಟಿಯಾಗುವಂತೆ ಮಾಡಲು ಪ್ರಜಾರಾಜ್ಯದ ಪ್ರಜೆಗಳೆಲ್ಲ ಪ್ರಯತ್ನಿಸುವರೆ ?

## ಮಗುವಿಗೆ ಹೆಸರೇನಿಡಬೇಕು ?

ಹಿಂದಿನ ಕಆಲದಲ್ಲಿ ಮಕ್ಕಳಿಗೆ ಹೆಸರನ್ನಿಡುವಾಗ ಶಿವ, ಶಂಕರ, ಈಶ್ವರ, ರಾಮ, ಕೃಷ್ಣ, ನರಾಯಣ, ಲಕ್ಷ್ಮಿ, ಪಾರ್ವತಿ, ಸರಸ್ವತಿ, ಗೌರಿ ಎಂದು ದೇವರುಗಳ ಹೆಸರನ್ನು ಹೆಚ್ಚಾಗಿ ಇಡುತ್ತಿದ್ದರು. ಇದಕ್ಕೆ ಹಿನ್ನೆಲೆ ಏನಿರಬಹುದೆಂದು ವಿಚಾರಿಸಿದರೆ ಬಹುಶಃ ಆಗಿನ ಕಾಲದಲ್ಲಿ ಬಹಳಷ್ಟು ಜನರಿಗೆ ಸುಖ, ಶಾಂತಿ, ಸಮಾಧಾನಗಳು ದೊರೆತು ನೆಮ್ಮದಿ ಇತ್ತೆಂದು ತೋರುತ್ತದೆ. ಹಾಗಾಗಿ ಭಗವಂತನಿಗೆ ಕೃತಜ್ಞತೆ ಸಲ್ಲಿಸಲು, ಅವನ ನಾಮವನ್ನು ಸದಾ ಜಪಿಸಲು ಸಾಧ್ಯವಾಗುವಂತೆ ಮಕ್ಕಳಿಗೆ ದೇವರ ಹೆಸರಿಡುತ್ತಿದ್ದರೆಂದು ಕಾಣುತ್ತದೆ ಅಥವಾ ಅವರುಗಳಿಗೆ ಜೀವನದಲ್ಲಿ ಬೇಕಾದುದು ದೊರೆತು, "ಇನ್ನೇನಪ್ಪಾ ಬೇಕು, ದೇವರ ಧ್ಯಾನ ಮಾಡಿಕೊಂಡು ಕಾಲ ಕಳೆಯೋಣ" ಎಂದು ಹಾಗೇ ಮಕ್ಕಳಿಗೆ ಹೆಸರಿಡುತ್ತಿದ್ದರೋ ಏನೋ, ಅಂತೂ ಹಿಂದಿನವರು ತಮ್ಮ ಮಕ್ಕಳಿಗೆ ಇಡುತ್ತಿದ್ದ ಹೆಸರಿನ ಹಿಂದೆ ಅವರ ಆಸ್ತಿಕ ಮನೋಭಾವ, ಧಾರ್ಮಿಕ ನಂಬಿಕೆ ಎದ್ದು ಕಾಣುತ್ತದೆ.

ಆದರೆ ಈಗಿನ ಕಾಲದಲ್ಲಿ ಹೆಸರಿಡುವ ವಿಷಯದಲ್ಲಿ ಕ್ರಾಂತಿಕಾರಕ ಬದಲಾವಣೆಯಾಗಿದೆ. ಬಹುಮಂದಿಗೆ ಅದೊಂದು ಸಮಸ್ಯೆಯೇ. ಗರ್ಭಿಣಿಯಾದಂದಿನಿಂದ ಹಿಡಿದು ಮಗುವಿನ ನಾಮಕರಣದ ದಿನ ಬರುವವರೆವಿಗೂ ಆ ಬಗ್ಗೆ ಚರ್ಚೆಯೋ ಚರ್ಚೆ. ಗಂಡಹೆಂಡಿರಲ್ಲಿ ಗೆಳೆಯ ಗೆಳತಿಯರಲ್ಲಿ ಬಂಧು ಬಾಂಧವರಲ್ಲಿ ನೆರೆ ಹೊರೆಯವರಲ್ಲಿ ಇದೆ ಪ್ರಸ್ತಾಪ. ಯಾರಿಂದ ಏನೇ ಸಲಹೆ ಬಂದರೂ ಸಮಸ್ಯೆ ನಾಮಕರಣದ ದಿನದವರೆಗೆ ಬಗೆ ಹರಿಯುವುದೇ ಇಲ್ಲ. ಅಂತೂ ಆದಿನ ನಿರ್ಧರಿಸಲೇ ಬೇಕಾದ್ದರಿಮದ ನಿರ್ಣಯವಾಗಿಹೋಗುತ್ತದೆ. ಸಾಮಾನ್ಯವಾಗಿ ಈಗಿನವರು ಆರಿಸುವ ಹೆಸರುಗಳು ಕ್ಷೇಮ, ಕುಶಲ, ಸ್ನೇಹ, ಪ್ರೀತಿ, ಸುಮತಿ, ಮಮತಾ, ತೃಪ್ತಿ, ನಿರ್ಮಲ, ವಾತ್ಸಲ್ಯ, ಧೀನಬಂಧು, ದಯಾಳು, ಧರ್ಮೇಂದ್ರ, ಆನಂದ, ವಿಶ್ವಾಸ್, ಸತ್ಯ ಮೊದಲಾದವು. ಈ ಬದಲಾವಣೆಗೆ ಕಾರಣವೇನಿರಬಹುದೆಂದು ಯೋಚಿಸಿದರೆ ಹೂರಣ ಹೊರಗೆ ಬೀಳುತ್ತದೆ. ಇದು ಒಬ್ಬಿಬ್ಬರ ಇಷ್ಟವಲ್ಲ, ಇಡೀ ಸಮಾಜದ ದೃಷ್ಟಿ ಹಾಗೆ ತಿರುಗಿದೆ. ಆದುದರಿಂದ ಇದನ್ನು ಸಮ,ಆಜದ ಹಿನ್ನೆಲೆಯಲ್ಲಿ ವಿವೇಚಿಸಬೇಕಾಗುತ್ತದೆ.

ಇಂದಿನ ಸಮಾಜವನ್ನು ವಿಶ್ಲೇಷಿಸಿದರೆ ಸಮಾಜಿಕ ಮೌಲ್ಯಗಳಲ್ಲಿ ಮಹತ್ತರ ಬದಲಾವಣೆಗಳಾಗಿವೆ. ಆ ಬದಲಾವಣೆಗಳು ಒಳ್ಳೆಯವೇ ಕೆಟ್ಟವೇ ಎಂದು ವಿಚಾರಿಸುವುದು ಬೇರೆ ಪ್ರಶ್ನೆ. ಆದರೆ ಈಗಿರುವ ಸಮಾಜದಲ್ಲಿ ಬಹುಮಂದಿಯ ಅನುಭವವನ್ನು ಕೇಳಿದರೆ ಅಥವಾ ರೈಲಿನಲ್ಲಿ, ಬಸ್ಸಿನಲ್ಲಿ ಬಸ್‌ಸ್ಟಾಪಿನಲ್ಲಿ ಅಂದರೆ ಜನ ಕೂಡುವ ಸ್ಥಳಗಳಲ್ಲಿ ನಿಂತೋ ಕುಳಿತೋ ನಮ್ಮ ಕಿವಿಗಳನ್ನು ಜನರಾಡುವ

ಮಾತುಗಳ ಕಡೆಗೆ ನಿಮಿರಿಸಿದರೆ ಬಹುತೇಕ ಎಲ್ಲರೂ ಅತೃಪ್ತಿ, ಅಶಾಂತಿ, ಅಸಮಾಧಾನಗಳಲ್ಲೇ ಮುಳುಗಿದ್ದಾರೆ ಎನಿಸುತ್ತದೆ. ಅವರಿಗೆ ಜೀವನದಲ್ಲಿ ಬೇಕಾದುದು ದೊರೆಯುತ್ತಿಲ್ಲ.

ಎಲ್ಲೆಲ್ಲಿಯೂ ಪ್ರೀತಿ, ಸ್ನೇಹ, ಮಮತೆ, ನ್ಯಾಯ, ನೀತಿ, ಸತ್ಯಗಳು ಕಾಣದಾಗಿ ಜೀವನದಲ್ಲಿ ಅತೃಪ್ತಿ ಅಸಮಾಧಾನ ತುಂಬಿದೆ ಎನಿಸಿ "ನಮಗೆ ಪ್ರೀತಿಬೇಕು, ಸ್ನೇಹಬೇಕು, ನ್ಯಾಯ, ನೀತಿ, ಸತ್ಯಬೇಕು, ವಿಶ್ವಾಸ ದೊರೆಯಬೇಕು" ಎಂಬ ಹಳಹಳಿಯ ಭಾವನೆ ಎಲ್ಲರ ಮಾತಿನಲ್ಲೂ ಕಾಣಬರುತ್ತಿದೆ. ಅಂದಮೇಲೆ ಸಮಾಜದಲ್ಲಿ ಜೀವನದ ನೆಮ್ಮದಿಗೆ ಅವಶ್ಯಕವಾದ ಪ್ರೀತಿ ವಿಶ್ವಾಸ, ಮಮತೆಗಳ ಕೊರತೆಯುಂಟಾಗಿ ಜನಕ್ಕೆ ಅವು ಬೇಕೆಬೇಕು ಅನ್ನಿಸಿದೆ. ಬೇಕೆಂದ ತಕ್ಷಣ ಪಡೆಯಲು ಅವನ್ನು ಪೇಟೆಯಲ್ಲಿ ಕೊಂಡುತರಬಹುದೇ? ಬೇಡಿಪಡೆಯಬಹುದೇ? ಜಗಳಬಾಡಿ ಕಿತ್ತುಕೊಳ್ಳಲು ಸಾಧ್ಯವೇ? ಇವೆಲ್ಲವೂ ಅಸಾಧ್ಯ. ಅದಕ್ಕಾಗಿ ಸಮಾಜ ತನ್ನ ಕುದಿಯುತ್ತಿರುವ ಹೃದಯಕ್ಕೆ ಸಮಾಧಾನ ತಂದುಕೊಳ್ಳಲು ಮೇಲೆ ಹೇಳಿಯುವ ಹೆಸರುಗಳನ್ನು ಮಕ್ಕಳಿಗೆ ಇಟ್ಟು ಅವುಗಳನ್ನು ಹೇಳಿ ಹೇಳಿಯಾದರೂ ನೆಮ್ಮದಿ ತಂದುಕೊಳ್ಳಬೇಕೆಂದು ಆಶಿಸಿರಬೇಕು. ಅಂದರೆ ಈ ಹೆಸರುಗಳನ್ನು ಕೆಲವರಿಟ್ಟಿರೂ ಇದು ಇಡೀ ಸಮಾಜದ ಮನಸ್ಸಿನ ಪ್ರತೀಕ ಕೆಲವರ ಮೂಲಕ ವ್ಯಕ್ತಗೊಂಡಿದೆಯಷ್ಟೆ. ಇಟ್ಟವರಿಗೆ ಆ ಕೊರತೆ ಇತ್ತು. ಇಡದವರಿಗೆ ಆ ಕೊರತೆ ಇಲ್ಲವೆಂದರ್ಥವಲ್ಲ. ಒಟ್ಟಿನಲ್ಲಿ ಯಾವ ರೀತಿಯಿಂದಲಾದರೂ ತಳಮಳಿಸುವ ಆತ್ಮಕ್ಕೆ ಶಂತಿ ತಂದುಕೊಳ್ಳಬೆಕು. ಇಲ್ಲದಿದ್ದರೆ ವ್ಯಕ್ತಿಯ ಜೀವನ ದರ್ಭರವಾಗುತ್ತದೆ. ಅದರೆ ಇಂತಹ ಮಾರ್ಗದಿಂದ ದೊರೆತ ನೆಮ್ಮದಿ, ಶಾಂತಿ ಎಷ್ಟು ದಿನ ತಾನೇ ಉಳಿಯಲು ಸಾಧ್ಯ? ಅದು ತಾತ್ಕಾಲಿಕ. ಅತೃಪ್ತ ವಾತಾವರಣದಲ್ಲಿ ಕೆಲಕಾಲ ಹೇಗೋ ನಿಭಾಯಿಸಬಹುದು. ಆದರೆ ಜೀವಮಾನವೆಲ್ಲ ಹಾಗೆ ಇರಲು ಹೇಗೆ ಸಾಧ್ಯ? ಯಾವಾಗ ಸಮಾಜದಲ್ಲಿ ಸ್ನೇಹ, ವಿಶ್ವಾಸ ಮುಂತಾದವುಗಳು ಕಡಿಮೆಯಾಗುತ್ತವೆಯೋ, ಪ್ರೀತಿ, ಮಮತೆಗೆ ಬೆಲೆಯಿಲ್ಲದಾಗುತ್ತದೆಯೋ, ನ್ಯಾಯ, ನೀತಿ, ನಿಷ್ಠೆಗಳು ಕಸದಮೂಲೆಗೆ ನೂಕಲ್ಪಡುತ್ತವೆಯೋ, ದಯೆ, ದಾಕ್ಷಣ್ಯಗಳು ಹೇಳ ಹೆಸರಿಲ್ಲದಂತಾಗುವುವೋ ಆಗ ಅಶಾಂತಿ, ಅತೃಪ್ತಿ, ಅಸಮಾಧಾನಗಳು ಪಸರಿಸುವುದು ಸಹಜ. ಈಗಿನ ವಾತಾವರಣದಲ್ಲಿ ಯಾರನ್ನು ನಂಬಬೇಕೊ, ಯಾರನ್ನು ಬಿಡಬೇಕೊ ತಿಳಿಯದು. ವಿಶ್ವಾಸಕ್ಕೆ ಇವರು ಅರ್ಹರೇ ಇಲ್ಲವೇ ಎಂದು ನಿರ್ಧರಿಸುವುದು ಕಷ್ಟ ಸ್ನೇಹಿತನೇ ಅಲ್ಲವೇ ಎಂಬ ಅನುಮಾನ ನಿಜವಾದ ಸ್ನೇಹಿತರಲ್ಲಿಯೂ ಉಂಟಾಗುವ ಕಾಲ. ಹೀಗಾಗಿ ಯಾರನ್ನೂ ನಂಬುವಂತಿಲ್ಲ. ವಿಶ್ವಾಸದ್ರೋಹ ಬಂಧು-ಬಾಂಧವರಲ್ಲಿ, ಸ್ನೇಹಿತರಲ್ಲಿ, ತಂದೆ-ಮಕ್ಕಳಲ್ಲಿ, ಅಣ್ಣ-ತಮ್ಮಂದಿರಲ್ಲಿ, ನೆರೆಹೊರೆಯವರಲ್ಲಿ ಎಲ್ಲರಲ್ಲೂ ಮೈಗೂಡಿ ಬರತೊಡಗಿದೆ. ಜನರು ತೋರಿಸುವ ವಿಶ್ವಾಸ ಆಡುವ ಪ್ರೀತಿಯ

ಮಾತು ಯಾವುದೋ ಸ್ವಾರ್ಥ ಸಾಧನೆಗೆ ಎಂದು ತಿಳಿದಾಗ ಆಗುವ ನೋವು ಅನುಭವಿಸಿದವರಿಗೇ ಗೊತ್ತಾಗಬೇಕು.

ಅಕ್ಕನ ವಚನದಲ್ಲಿ ನೊಂದ ನೋವ ನೋಯದವರೆತ್ತ ಬಲ್ಲರು ಎಂಬ ಸಾಲು ನೆನಪಿಗೆ ಬರುತ್ತದೆ. ಅಂತೂ ಇಂತು ಅನ್ನ ಕುದಿಯತೊಡಗಿದೆ. ಎಷ್ಟು ಬೇಗ ಕುದಿಯುತ್ತದೆಯೋ ಅಷ್ಟು ಬೇಗ ಅನ್ನವಾಗುತ್ತದೆ. ಆದರೆ ಆ ಕುದಿ ಅನ್ನವೆಲ್ಲಾಸೀದು ಊಟ ಮಾಡಲಾರದಂತೆ ಆಗಬಾರದು ಅಷ್ಟೆ, ಅನ್ನ ಮಾಡುವ ಗೃಹಿಣಿ ಅದಕ್ಕೆ ಅವಕಾಸ ಕೊಡದೆ ಹದವಾದ ಅನ್ನ ತಯಾರಿಸಿ ಮನೆಯವರಿಗೆಲ್ಲಾ ಉಣಬಡಿಸಿ ಹಸಿವನ್ನು ತಣಿಸುವಂತೆ ಸಮಾಜಸ್ವಾಸ್ಥ್ಯದ ಜವಾಬ್ದಾರಿ ಹೊತ್ತ ಎಲ್ಲರೂ ಜನರಲ್ಲಿ ಕುದಿ ಅತಿಯಾಗಿ ಮಾನವತೆಯೇ ಇಲ್ಲದಾಗುವುದಕ್ಕೆ ಅವಕಾಶವಾಗುವಂತೆ ನೋಡಿಕೊಳ್ಳಬೇಕು. ಸಮಾಜದಲ್ಲಿ ಒಡಕನ್ನು ಹೆಚ್ಚಿಸಿ ಒಬ್ಬರಮೇಲೆ ಒಬ್ಬರನ್ನು ಎತ್ತಿಕಟ್ಟಿ ಇಬ್ಬರೂ ನಾಶವಾಗುವಂತೆ ಮಾಡಿ ಮಧ್ಯ ಸ್ವಾರ್ಥ ಸಾಧಿಸಿಕೊಳ್ಳುವ ಕುತಂತ್ರಿಗಳು ತಲೆಯೆತ್ತಲು ಸಾಧ್ಯವಾಗದಂತಹ ಸಮಾಜ ಬೆಳಸಬೇಕು. ಆಗ ಮಾತ್ರ ಜನರು ನೆಮ್ಮದಿಯಿಂದ ಇರಲು ಸಾಧ್ಯ. ಉಪಯುಕ್ತವಾದ ಕಾರ್ಯಸಾಧಿಸಲೂ ಆದೀತು. ಇಲ್ಲದಿದ್ದಲ್ಲಿ ವೇಳೆ ಬುದ್ಧಿ ಶಕ್ತಿ ಎಲ್ಲವನ್ನು ಕುತಂತ್ರದ ಕುಶಲತೆಯುಳ್ಳವರು ಕುತಂತ್ರ ಮಾಡುವುದಕ್ಕೂ ಅದರಲ್ಲಿ ಕುಶಲತೆ ಇಲ್ಲದವರು ಅಥವಾ ಅದು ಸರಿಯಲ್ಲ ಎಂದುಕೊಂಡವರು ಕುತಂತ್ರದ ಪರಿಣಾಮ ತಮ್ಮ ಮೇಲಾಗದಂತೆ ಎಚ್ಚರದಿಂದಿರುವುದಕ್ಕೂ ಉಪಯೋಗಿಸಬೇಕಾಗುತ್ತದೆ. ಪ್ರಮಾದವಶಾತ್ ಕುತಂತ್ರಿಗಳ ಕೈಮೇಲಾಗಿ ಉಳಿದವರು ಮಾನಸಿಕವಾಗಿ ಜರ್ಝರಿತರಾಗುವ ಪ್ರಸಂಗಗಳೇ ಹೆಚ್ಚಾದರೆ ಕಾಲಾನುಕ್ರಮದಲ್ಲಿ ಸಮಾಜದ ಮೌಲ್ಯವೇ ಬದಲಾಗುತ್ತದೆ. ಯಾವುದಕ್ಕೆ ಸಮಾಜದಲ್ಲಿ ಹೆಚ್ಚು ಸ್ಥಾನವಿದೆಯೋ ಅದನ್ನೇ ಬಹುಸಂಖ್ಯಾತ ಜನರು ಬೆಳೆಸಿಕೊಳ್ಳುತ್ತಾರೆ. ಹೀಗೆ ಸಮಾಜದಲ್ಲಿ ಎಚ್ಚೆತ್ತಕೊಳ್ಳದಿದ್ದರೆ ಸಮಾಜದ ಅಧೋಗತಿಗೆ ಕಾರಣರಾಗುತ್ತಾರೆ. ಎಷ್ಟೋ ಆದರ್ಶ ವ್ಯಕ್ತಿಗಳು ತಮ್ಮ ಸಂತೋಷಗಳನ್ನು ತ್ಯಾಗಮಾಡಿ ತಮ್ಮ ಜೀವನವನ್ನೇ ಮುಡಿಪಿಟ್ಟು ಸಾಧಿಸಿದ ಸಮಾಜಿಕ ಉನ್ನತ ನಡೆನುಡಿಗಳು ನಿಧಾನವಾಗಿ ಜಾರಿ ಸಮಾಜದಲ್ಲಿ ಕಣ್ಮರೆಯಾಗುತ್ತಿವೆ. ಹೀಗಾಗುವುದು ಬೇಡ ಎಂಬುದು ಎಲ್ಲರ ಇಚ್ಛೆಯಲ್ಲವೆ ? ಹಾಗಾದರೆ ಒಳಿತನ್ನು ಸಾಧಿಸುವ ಕಾರ್ಯಕರ್ತರು ಮುಂದಾಗಬೇಕು. ಉಳಿದ ಸಾಮಾಜಿಕ ವ್ಯಕ್ತಿಗಳೆಲ್ಲರೂ ಸಮಾಜದ ಒಳಿತಿಗಾಗಿ ಶ್ರಮಿಸುವವರಿಗೆ ಬೆಂಬಲವಾಗಿ ನಿಲ್ಲಬೇಕು. ಆಗ ನಮಗೂ ನಿಮಗೂ ಎಲ್ಲರಿಗೂ ಮಂಗಲವಾಗಲು ಸಾಧ್ಯ. ಯಾವಾಗಲೂ ಒಳಿತನ್ನು ಸಾಧಿಸುವ ಪ್ರಯತ್ನ ಮಾಡಿದವರು ಒಬ್ಬರೇ ! ಬುದ್ಧ ಒಬ್ಬನೇ, ಬಸವ ಒಬ್ಬನೇ; ರಾಜಾರಾಮ್ ಮೋಹನರಾಯ್ ಒಬ್ಬನೇ; ಗಾಂಧಿ

ಒಬ್ಬನೇ. ಅವರ ಪ್ರಯತ್ನ ಫಲಿಸಿದುದು ಅಸಂಖ್ಯಾತ ಬೆಂಬಲಿಗರ ಬಲದಿಂದ. ಒಳ್ಳೆಯದಕ್ಕೆ ಬೆನ್ನು ಚಪ್ಪರಿಸುವ, ಕೆಟ್ಟದ್ದಕ್ಕೆ ಕಾಲುಹಿಡಿದು ಜಗ್ಗುವ ಮನೋಭಾವವನ್ನು ಜರು ತಾಳಿದಾಗ ಮಾತ್ರ ನಿಜವಾದ ಸುಖಿ ಸಮಾಜ ರೂಪುಗೊಳ್ಳಲು ಸಾಧ್ಯ. ಆಗ ಹೆಸರನ್ನಿಡುವುದೇ ಒಂದು ಸಮಸ್ಯೆಯಾಗಿ ಉಳಿಯುವುದಿಲ್ಲ. ಸುಖವಾಗಿ ಹಿರಿಯರ ದೇವರ ಆದರ್ಶವಾದಿಗಳ ಅಥವಾ ಯಾವುದೊ ಒಂದು ಸುಂದರವಾದ ಹೆಸರನ್ನು ಆರಿಸಿ ತಮ್ಮ ಗಮನವನ್ನು ನಿಜವಾದ ಸಮಸ್ಯೆಗಳ ಕಡೆ ಗಮನಹರಿಸಬಹುದು.

## ಪಾಶ್ಚಾತ್ಯರ ಪ್ರಭಾವದಿಂದ

## ಕಲಿಯಬೇಕಾದುದು – ಬೇಡವಾದುದು

ಒಂದು ದಿನ ಸಂಜೆ ಅಪರೂಪವಾಗಿ ನಮ್ಮಿಬ್ಬರಿಗೂ (ನನಗೂ ನಮ್ಮವರಿಗೂ) ಒಮ್ಮೆಗೇ ಬಿಡುವು ದೊರಕಿತ್ತು. ಈ ಸದವಕಾಶವನ್ನು ತಪ್ಪಿಸಿಕೊಳ್ಳಬಾರದೆಂದು ಅಡ್ಡಾಡಿಕೊಂಡು ಬರಬೇಕೆಂದು ಅಣಿಯಾದೆವು. ಅಷ್ಟರಲ್ಲಿ ಮಿನಿಸ್ಕರ್ಟ್, ಬಾಬ್‌ಕಟ್, ಲಿಪ್‌ಸ್ಟಿಕ್, ಹೈಹೀಲ್ಡ್ ಷೂ ಹಾಕಿಕೊಂಡು ಯಾರೋ ಒಬ್ಬ ಹೆಣ್ಣುಮಗಳು ಮುಂಬಾಗಿಲಿಗೆ ನಗುತ್ತ ಬಂದಳು, ನನಗೆ ಅಪರಿಚಿತಳಾದ ಈಕೆ ಇವರಿಗೇನಾದರೂ ಪರಿಚಯವೆ ಎಂದು 'ಇವರ' ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿದೆ. "ಈ ಹೆಣ್ಣು ನಿನ್ನ ಗೆಳತಿಯೆ' ಎಂಬ ಆಶ್ಚರ್ಯಚಕಿತ ದೃಷ್ಟಿಯಿಂದ 'ಇವರೂ' ನನ್ನನ್ನು ದಿಟ್ಟಿಸಿದರು ! ಅಷ್ಟರಲ್ಲಿ ನಮ್ಮಿಬ್ಬರ ಸ್ಥಿತಿ ಅರ್ಥ ಮಾಡಿಕೊಂಡಂತೆ ಬಂದಾಕೆ, 'ಏನೇ ಇಷ್ಟು ಬೇಗ ಮರೆತು ಬಿಟ್ಟೆಯಾ?' ಎಂದು ಕೈ ಕುಲುಕಿಸಿದಾಗ ಮಾತಿನ ಧಾಟಿಯಿಂದ ಬಂದಾಕೆ ನನ್ನ ಬಾಲ್ಯದ ಗೆಳತಿ ಸರಸು ಎಂದು ಗುರುತು ಹತ್ತಿತು! ಆಕೆ ಡಾಕ್ಟರನಾದ ತನ್ನ ಗಂಡನೊಡನೆ ಇಂಗ್ಲೆಂಡಿಗೆ ಮೂರು ವರುಷಗಳ ಹಿಂದೆ ಹೋಗಿದ್ದಳು. ಇಷ್ಟರಲ್ಲಿಯೆ ಬರುತ್ತಾಳೆಂಬ ಸುದ್ದಿ ಕೇಳಿದ್ದೆ, ಖಚಿತವಾಗಿ ಎಂದು ಎಂಬುದನ್ನು ನನ್ನ ಬಿಡುವಿಲ್ಲದ ಕೆಲಸಗಳಲ್ಲಿ ತಿಳಿದುಕೊಳ್ಳುವದಾಗಿರಲಿಲ್ಲ. ಬಹಳ ದಿನಗಳ ನಂತರ ಭೆಟ್ಟಿಯಾದ ಆಕೆಯನ್ನು ನೋಡಿ, ಅಡ್ಡಾಡಿಕೊಂಡುಬರಲು ಅವರಿಗೊಬ್ಬರಿಗೇ ಹೇಳಿದೆ.

## ಭಾರತದಲ್ಲಿ ಹುಟ್ಟುವುದೂ ಪಾಪ !?

ಇಂಗ್ಲೆಂಡಿನ ಜೀವನದ ರೀತಿ–ನೀತಿಗಳನ್ನು ಕೇಳಿ ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ಮಾತಿಗಾರಂಭಿಸಿದೆ. ಅಲ್ಲಿಯವರ ವಿಷಯ ಹೇಳುವದಕ್ಕಿಂತ ಹೆಚ್ಚಾಗಿ ಇಲ್ಲಿಯವರ ಲೋಪದೋಷಗಳನ್ನು ಎತ್ತಿಯಾಡತೊಡಗಿದಳು ಆಕೆ. ಮಾತು ಎತ್ತಿದರೆ 'ಇಂಡಿಯಾದಲ್ಲಿ ಹೀಗೆ, ಇಂಡಿಯಾದಲ್ಲಿ ಹಾಗೆ, ಇಲ್ಲಿಯ

ಜನರಿಗೆ ಮ್ಯಾನರ್ಸ್ ಗೊತ್ತಿಲ್ಲ, ಜೀವಿಸುವದೂ ಗೊತ್ತಿಲ್ಲ.' ಹೀಗೆ ಒಂದಲ್ಲ, ಎರಡಲ್ಲ, ಭಾರತೀಯವಾದುದನ್ನೆಲ್ಲಾ ಜರೆದಳು.

ಇಲ್ಲಿ ಹುಟ್ಟುವದೇ ಬದುಕುವದೇ ಒಂದು ಪಾಪವೆಂಬಂತೆ ಮಾತನಾಡಿದಳು ! ಇಲ್ಲಿಯ ಪದ್ಧತಿಗಳು ಅರ್ಥಶೂನ್ಯ; ರೂಢಿಗಳು ಅಸಹ್ಯ ಆಕೆಗೆ. ಬಳೆ ತೊಡುವುದು, ಕುಂಕುಮವಿಡುವುದು, ಸ್ಲೀವ್‌ಲೆಸ್ ಬ್ಲೌಸ್ ಹಾಕದಿರುವುದು – ಇವೆಲ್ಲಾ ಅನಾಗರಿಕ ಲಕ್ಷಣಗಳಂತೆ ! ತಾನು ಇಂಗ್ಲೆಂಡಿನಲ್ಲಿ ಇದ್ದಾಗ ಎಂದೂ ಕುಂಕುಮ ಬಳೆಗಳನ್ನಿಡುತ್ತಿರಲಿಲ್ಲವೆಂದಳು. ಮನಸ್ಸಿನಲ್ಲಿ 'ಷಹಭಾಸ್ ಹುಡುಗಿ' ಎಂದುಕೊಂಡೆ. 'ಇದೆಲ್ಲ ಇರಲಿ, ಇಷ್ಟು ವರ್ಷ ಅಲ್ಲಿದ್ದೆಯಲ್ಲಾ ಏನು ಕಲಿತುಕೊಂಡೆ' ಎಂದೆ. ಉತ್ತರ 'ಏನೂ ಇಲ್ಲ.' ಆದರೆ ಮಾತ್ರ ಇಂಡಿಯಾದಲ್ಲಿ ಅದು ಬದಲಾಗಬೇಕು. ಇದು ಬದಲಾಗಬೇಕು. ಇಲ್ಲಿಯ ಹೆಂಗಸರು ತುಂಬಾ ಕೆಲಸಕ್ಕೆ ಬಾರದವರು. ಅಲ್ಲಿಯವರು ತುಂಬಾ ದಿಟ್ಟೆಯರಾಗಿರುತ್ತಾರೆ. ಹೇಗೆಂದರೆ ಹಾಗೆ ಪುರುಷ ಅವಳನ್ನು ನಡೆಸಿಕೊಳ್ಳುವಂತಿಲ್ಲ. ಹಾಗೇನಾದರೂ ನಡೆದರೆ ವಿಚ್ಛೇದನ ಮಾಡಿಕೊಳ್ಳುತ್ತಾಳೆ. ಅಂತಹವಳನ್ನು ಸಮಾಜವೂ ತಿರಸ್ಕಾರದಿದಮ ಕಾಣುವುದಿಲ್ಲ. ಇನ್ನೂ ಅನೇಕ ರೀತಿಯ ಒಪ್ಪಬಹುದಾದ, ಒಪ್ಪಲಾರದ ಅಭಿಪ್ರಾಯ ಸೂಚಿಸಿದಳು. ಬಹು ಕಾಲ ಮಾತನಾಡಿ ಚಹದ ನಂತರ ಮನೆಗೆ ಹೋದಳು.

ಆ ದಿನವೆಲ್ಲ ತಲೆಯಲ್ಲಿ ಅವಳ ವಿಚಾರಗಳೆ. ನಿಜ; ನಮ್ಮಲ್ಲಿ ಅಂಧ ಶ್ರದ್ಧೆ, ಕುರುಡು ನಂಬಿಕೆಗಳು ತುಂಬಿವೆ. ಅವು ಹೋಗಬೇಕು. ಹೆಣ್ಣಿನ ಸ್ಥಿತಿ ಇನ್ನೂ ಅನೇಕ ಮನೆಗಳಲ್ಲಿ ಚಿಂತಾಜನಕವಾಗಿಯೇ ಇದೆ. ಭಾರತದಲ್ಲಿಯೇ ಶತಶತಮಾನಗಳಿಂದ ಅನೇಕ ಮಹನೀಯರು 'ಅಲ್ಲ'ದವುಗಳ ವಿರುದ್ಧ ಹೋರಾಡಿದರೂ ಅವನ್ನು ಸಮೂಲ ನಾಶಮಾಡಲಾಗಿಲ್ಲ. ವಿಚಾರ ಮಾಡುತ್ತ ಕುಳಿತರೆ ಅನೇಕ ಪದ್ಧತಿಗಳು ಮುಖ್ಯವಾಗಿ ಮದುವೆ ಪದ್ಧತಿಗಳು ಬಡ ಭಾರತೀಯರನ್ನು ಇನ್ನೂ ಬವಣೆಗೊಳಿಸುವಂತಹುಗಳು. ಹೆಣ್ಣುಮಗಳು ಓದುವ, ನೌಕರಿ ಮಾಡುವ ಅಥವಾ ಸಮಾಜದಲ್ಲಿ ಸ್ವಲ್ಪ ಸ್ವತಂತ್ರವಾಗಿ ಕೆಲಸ ನಿರ್ವಹಿಸುವ ವಿಚಾರಗಳಲ್ಲಿ ಇನ್ನು ಅನೇಕ ಹಳ್ಳಿಗಳ ಜನರಿಗೆ ವಿಶಾಲ ಮನೋಭಾವನೆಗಳಿಲ್ಲ. ಶಿಕ್ಷಿತ ಸಮಾಜದ ಕೆಲವು ಪುರುಷರಷ್ಟೇ ಏಕೆ, ಸ್ವತಃ ಸ್ತ್ರೀಯೆ ತನಗೆ ಅದು ಯೋಗ್ಯವಲ್ಲ ಎಂದು ಈಗಲೂ ವಾದಿಸುವ ಉದಾಹರಣೆಗಳಿಗೂ ಕಡಿಮೆ ಇಲ್ಲ! ಆದರೆ ಇದು ಸಲ್ಲದ ವಿಚಾರ.

**ಕಲಿತ ತಾಯಿ, ಬೆಳೆವ ಮಗು :**

ಸ್ತ್ರೀ ಅಜ್ಞಾನಿ, ಅನನುಭವಿ, ಅಂಧಾನುಕರಣೆಯವಳಾದರೆ, ಆ ಸಮಾಜ

ಮುಂದುವರೆಯುತ್ತಿರುವ ಜಗತ್ತಿಗೆ ಹೊಂದಿಕೊಂಡು ನಡೆಯಲಾರದು. ಹುಟ್ಟಿದ ಮಗು ಬುನಾದಿಯ ವಯಸ್ಸಿನಲ್ಲಿ ಹೆಚ್ಚಾಗಿ ತಾಯಿಯ ಸಮೀಪ ವರ್ತಿಯಾಗಿಯೆ ಬೆಳೆಯುವದರಿಂದ, ಆಕೆಯಲ್ಲಿರುವ ಜ್ಞಾನವಾಗಲಿ, ಅಜ್ಞನವಾಗಲಿ ಬೆಳೆಯುತ್ತಿರುವ ಆ ಮಗುವಿನ ಮೇಲೆ ಪ್ರಭಾವ ಬೀರದಿರಲು ಸಾಧ್ಯವಿಲ್ಲ. ಮಿಗಿಲಾಗಿ ಆಧುನಿಕ ಕಾಲದ ಅವಶ್ಯಕತೆಗಳು, ಜೀವನಮಟ್ಟ, ಹೆಚ್ಚಿನ ಆದಾಯವನ್ನು ನಿರೀಕ್ಷಿಸುವುದರಿಂದ ಹೆಣ್ಣು ವಿದ್ಯಾವಂತಳಾಗುವುದನ್ನು ನೌಕರಿ ಮಾಡುವುದನ್ನು ಪಾಶ್ಚಾತ್ಯರಿಂದ ಕಲಿತು ನಮ್ಮ ಸಮಸ್ಯೆಗಳನ್ನು ನಿವಾರಿಸುವುದರಲ್ಲಿ ತಪ್ಪೇನು? ಬೆಳೆಯುತ್ತಿರುವ ನಗರಗಳಲ್ಲಿ ಮನೆಯೊಂದು ದಿಕ್ಕು, ಆಫೀಸು ಇನ್ನೊಂದು ದಿಕ್ಕು, ಪೇಟೆ ಮತ್ತೊಂದು ದಿಕ್ಕು. ಹೀಗಿರುವಾಗ ಆಫೀಸಿಗೆ ಹೋದ ಗಂಡನೇ ಮನೆಯ ಅವಶ್ಯಕತೆಗಳನ್ನು ನಿರ್ವಹಿಸಬೇಕು ಎಂದರೆ ಸಾಧ್ಯವೇ? ಆಗ ನೌಕರಿಯಲ್ಲಿರದ ಸ್ತ್ರೀ ತನ್ನ ಬಿಡುವಿನ ಸಮಯದಲ್ಲಿ ಮನೆಯ ಜವಾಬ್ದಾರಿಗಳನ್ನು ನಿರ್ವಹಿಸಲು ಹೊರಗೆ ಹೋದರೆ ಆಕೆ 'ಹೊಸಿಲು ದಾಟಿದ ಹೆಣ್ಣು' ಎಂದೇಕೆ ಬೆರಳು ತೋರಬೇಕು? ಓ ದಿಸೆಯಲ್ಲಿ ನಾವು ಪಾಶ್ಚಾತ್ಯರ ಅನುಕರಣೆ ಮಾಡಿ ನಮ್ಮ ಹಳೆಯ ವಿಚಾರಗಲನ್ನು ಕಡೆಗಣಿಸಿದರೆ ನಷ್ಟಕ್ಕಿಂತ ಲಾಭವೇ ಹೆಚ್ಚು.

**ಸೀರೆ-ಕುಂಕುಮ-ಬಳ :**

ಆದರೆ ಕುಂಕುಮ-ಬಳೆ, ಭಾರತೀಯ ರೀತಿಯ ಉಪುಟುಗಳನ್ನು ಉಪಯೋಗಿಸದೆ ಇದ್ದರೆ ನಷ್ಟವೇನೂ ಆಗುವುದಿಲ್ಲ ಎನ್ನುವವರಿದ್ದಾರೆ. ಈ ವೇಷಭೂಷಣಗಳು ಹೆಣ್ತನಕ್ಕೊಂದು ಗಾಂಭೀರ್ಯ ಮತ್ತು ಗೌರವ ತಂದು ಕೊಡುತ್ತವೆ. ಬೇರಾವ ದೇಶದಲ್ಲಿಯೂ ಇಲ್ಲದ, ನಮ್ಮದೇ ಆದ ಸಂಸ್ಕೃತಿಯನು ಎತ್ತಿ ತೋರಿಸುತ್ತವೆ. ಇವುಗಳನ್ನು ಉಳಿಸಿಕೊಳ್ಳುವುದರಿಂದ ಘನತೆ ಹೆಚ್ಚುವುದು. ಆರ್ಷೆಯವೂ, ನಮ್ಮ ಸಂಸ್ಕೃತಿ ವೈಶಿಷ್ಟ್ಯವೂ ಆದ ರೀತಿ-ನೀತಿಗಳನ್ನು ಉಳಿಸಿಕೊಂಡು ಭಾರತೀಯತೆಯನ್ನು ಅನ್ಯರಿಗೆ ತೋರಿಸಬಹುದು. ವಿಕ್ಟೋರಿಯಾ ಮಹಾರಾಣಿ ಭಾರತೀಯ ಸ್ತ್ರೀಯರ ನಯ ನಾಜೂಕಿನ ಉಡಿಗೆ-ನಡಿಗೆಗಳನ್ನು ಬಹುವಾಗಿ ಮೆಚ್ಚಿ ಅರಮನೆಯಲ್ಲಿ ತಲೆಯ ಮೇಲೆ ಭಾರವಾದ ಪುಸ್ತಕ ಹೊತ್ತು ನಮ್ಮಂತೆ ನಡೆಯುವುದನ್ನು ಕಲಿಯುತ್ತಿದ್ದರಂತೆ; ಆದರೆ ಭಾರತೀಯವಾದುದೆಲ್ಲ ಸರ್ವಶ್ರೇಷ್ಠವೆಂಬುದೂ ಅಸಲ್ಲ. ಮೂಢನಂಬಿಕೆಗಳನ್ನು ತೊಡದುಹಾಕಬೇಕು.

ನಮ್ಮ ನೆರೆಯವರೊಬ್ಬರ ಅತ್ತೆ ಬಲು ಮಡಿ. ಲವಗ ಸೊಸೆ ಮಾಡಿದ ಅಡಿಗೆ ಸಹ ಅವರಿಗೆ ಮೈಲಿಗೆ. ದಿನಕ್ಕೆರಡು ಬಾರಿ ಸ್ನಾನ ಆಗಲೇಬೇಕು; ಮಡಿ ಬದಲಿಸಬಲೇಬೇಕು. ಅವರ 'ಮಡಿ' ಅವಾಂತರದಲ್ಲಿ ಮಕ್ಕಳಿಗೆ ಬೈಗುಳದ ಸುರಿಮಳೆ; ಹೊತ್ತಿಗೆ ಸರಿಯಾಗಿ ಊಟವಿಲ್ಲ. ಹೀಗೆ ಏನೇನೋ ಅನಾನುಕೂಲಗಳು. ಆದರೆ

ಆ ಅತ್ತೆ ಆಕಸ್ಮಾತ್ ನಮ್ಮ ಪಕ್ಕದಿಂದ ಹೊರಟರೆ, ಕಿಮುಟು ವಾಸನೆ, ಹೊಟ್ಟೆಯೆಲ್ಲಾ ತೊಳಸಿದಂತಾಗುತ್ತಿತ್ತು ! ಕಾರಣ, ಅವರು ದಿನಕ್ಕೆ ಎರಡು ಸಾರಿ ಸ್ನಾನ ಮಾಡುತ್ತಿದ್ದರಾದರೂ ಮೈ ಉಜ್ಜುವ ಅಥವಾ ಸೀರೆಯನ್ನು ಕೊಳೆ ಹೋಗುವಂತೆ ತೊಳೆಯುವ ಹವ್ಯಾಸಕ್ಕೆ ಹೋಗುತ್ತಿರಲಿಲ್ಲವೆಂದು ಕಾಣುತ್ತೆ. ಮೈಮೇಲೆ ನೀರು ಸುರಿದುಕೊಂಡರೆ, ಸೀರೆಯನ್ನು ನೀರಿನಲ್ಲಿ ಅದ್ದಿ ಹಿಂಡಿ ಹಾಕಿದರೆ ಮಡಿಯಾಗಿ ಬಿಡುತ್ತಿತ್ತು ! ಇಂತಹ ಪದ್ಧತಿಗಳೆಲ್ಲವೂ ಖಂಡಿತಾ ಹೋಗಬೇಕು. ನಾವು ಇನ್ನೊಂದು ಊರಲ್ಲಿದ್ದಾಗ, ಮತ್ತೊಬ್ಬ ನೆರೆಯವರಿದ್ದವರು, ಆ ಮನೆಯಾತನಿಗೆ ಬಹುವಾಗಿ ಪೂಜೆ ಉಪವಾಸಗಳ ಗೀಳು. ಆಗಾಗ್ಗೆ ಸ್ವಾಮಿಗಳನ್ನು ಕರೆಸಿ ಪೂಜೆ ನಡೆಸುತ್ತಿದ್ದರು. ಆ ಊರಲೆಲ್ಲಾ ಪೂಜೆ, ಆಚರಣೆಗಳಿಗೆ ಆತ ಪ್ರಸಿದ್ಧಿಯಲ್ಲಿದ್ದ . ಆದರೆ ಬಲೆಗೆ ಬೀಳಬಹುದಾದ ಹೆಣ್ಣಿನ ಬೆನ್ನು ಹತ್ತುತ್ತಿದ್ದ ! ಆತನ ಹೆಂಡತಿ ಮಕ್ಕಳ ಕಷ್ಟವಂತೂ ವಿವರಿಸಲಸದಳವಾಗಿತ್ತು. ಇಂತಹ ಅರ್ಥಶೂನ್ಯ ಬಾಹ್ಯಾಡಂಬರದ ಪೂಜೆ ನಿಲ್ಲಿಸಲಡ್ಡಿ ಇಲ್ಲ. ತನ್ನ ಕರ್ತವ್ಯವನ್ನು ನಿಷ್ಠೆಯಿಂದ ನ್ಯಾಯವಾಗಿ ಮಾಡಿದರೆ ಅದಕ್ಕಿಂತ ಮಿಗಿಲಾದ ಪೂಜೆ ಮತ್ತೊಂದಿಲ್ಲವೆಂದೆ ಬಸವಣ್ಣನವರ ನುಡಿ ಅನುಕರಣೀಯ.

**ವಿವಾಹ–ವಿಚ್ಛೇದನ :**

ತನಗೆ ಶಕ್ತಿ ಇರಲಿ, ಇಲ್ಲದಿರಲಿ, ಹಬ್ಬ, ಮದುವೆ, ತಿಥಿ ಮುಂತಾದ ಕಾರಣಗಳಿಗಗಿ ಹಣ ತೆತ್ತು. ಋಣಭಾರದಿಂದ ನೆಲ ಹತ್ತುವ ಪದ್ಧತಿಗಳಿಂದ 'ಅಪ್ಪ ಹಾಕಿದ ಆಲದ ಮರ'ವೆಂದು ನೇಣು ಹಾಕಿಕೊಳ್ಳಬೇಕಿಲ್ಲ. ಅಂತಹ ಪದ್ಧತಿಗಳಲ್ಲಿ ಪಾಶ್ಚಾತ್ಯರ ರೀತಿ–ಅನುಕರಣೀಯ, ಅಪೇಕ್ಷಣೀಯ. ಆದರೆ ನಮ್ಮ ಪ್ರಕಾರ 'ವಿವಾಹ' ಒಂದು ಪವಿತ್ರ ಬಂಧನ. ಪಾಶ್ಚಾತ್ಯರಿಗೆ ಹಾಗಿಲ್ಲ. ವಿಚ್ಛೇದನದ ಮೂಲಕ ಅನೇಕ ಬಾರಿ ನಡೆಯಬಹುದಾದ ಘಟನೆ. ಇದನ್ನು 'ನಾವು ಅನುಕರಿಸುವುದು ಯೋಗ್ಯವೆ?' ಎಂದು ವಿಚಾರಿಸಿದರೆ, ಅನೇಕ ವಿರಸ ದಾಂಪತ್ಯಗಳನ್ನು ಕಂಡಾಗ ಯೋಗ್ಯವೆನಿಸಬಹುದು. ಮುಖ್ಯವಾಗಿ ಹೆಣ್ಣನ್ನು ಪುರುಷನು ತನ್ನ ಮನೆಯ ಗೃಹಲಕ್ಷ್ಮಿ, ತನ್ನ ಮನೆತನವನ್ನು ಮುಂದಕ್ಕೆ ತರುವ ಮಹಾಲಕ್ಷ್ಮಿ ಎಂದು ತಿಳಿಯುವ ಬದಲು ತನ್ನ ಸೊತ್ತು ಮತ್ತು ತೊತ್ತು ಎಂದುಕೊಂಡು, ಅವಳ ಜೀವಮಾನವನ್ನು ಮಣ್ಣುಪಾಲುಗೊಳಿಸಿರುವ ಘಟನೆಗಲನ್ನು ನೋಡಿದ, ಅನುಬವಿಸಿದ ಅನೇಕರು ವಿಚ್ಛೇದನ ಪುನರ್ವಿವಾಹ ಯೋಗ್ಯವೆಂದು ವಾದಿಸಬಹುದು. ಆದರೆ ನಮ್ಮಲ್ಲಿ ಪುನರ್ವಿವಾಹ ಪದ್ಧತಿ ಪುರುಷನಿಗೆ ಮೊದಲಿಂದಲೂ ಇದ್ದು, ಸ್ತ್ರೀಗೆ ಇಲ್ಲದಿದ್ದು ಸ್ತ್ರೀಗೆ ಅನ್ಯಾಯವಾಗಲು ಹೆಚ್ಚಾಗಿ ಕಾರಣವಾಯ್ತು. ಅದರ ಬದಲು ಇಬ್ಬರಿಗೂ ವಿಚ್ಛೇದನಕ್ಕಾಗಲೀ ಪುನರ್ವಿವಾಹಕ್ಕಾಗಲೀ ಅವಕಾಶ ಇಲ್ಲದೆ ಸ್ತ್ರೀ ವಿದ್ಯಾವಂತಳೂ. ವಿಚಾರವಂತಳೂ ಆಗಲು ಬಾಲ್ಯದಿಂದ ಅವಕಾಶ ಸಿಕ್ಕರೆ ಸಮಾಜದಲ್ಲಿ ಹೆಣ್ಣನ್ನು

ತೊತ್ತಿನಂತೆ ನಡೆಸಿಕೊಳ್ಳುವ ರೂಢಿ ಸಂಪೂರ್ಣ ಅಳಿಸಬಹುದು. ವಿವಾಹ ವಿಚ್ಛೇದನ ವಿಶೇಷ ಸನ್ನಿವೇಷಗಳಲ್ಲಿ ಮಾತ್ರ ಬಳಕೆಯಾಗಬೇಕಲ್ಲದೆ, ಸಾರ್ವತ್ರಿಕವಾಗಬಾರದು. ಪಟ್ಟಣಗಳಲ್ಲಿ ಹೆಣ್ಣು ಮಕ್ಕಳು ಓದುವುದು, ನೌಕರಿಗೆ ಹೋಗುವುದು, ಮನೆಯ ಅನೇಕ ಕೆಲಸಗಳಿಗಾಗಿ ಪೇಟೆಗೆ ಹೋಗುವುದು ಸರ್ವೇಸಾಧಾರಣವೆನಿಸಿದಂತೆ, ಹಳ್ಳಿಗಳಲ್ಲಿ ಸಣ್ಣ ಸಣ್ಣ ಊರುಗಳಲ್ಲಿ ಇಂಥ ಸುಧಾರಿತ ರೀತಿಯನ್ನು ಅನುಸರಿಸುವ ಮಹಿಳೆಯನ್ನು ಅಗೌರವ ದೃಷ್ಟಿಯಿಂದ ನೋಡುವುದು ಸರ್ವೇಸಾಮಾನ್ಯವಾಗಿ ಬಿಟ್ಟಿದೆ. ಪ್ರಿಂಟೆಡ್ ಸೀರೆ ಉಡುವುದು ಸಹ ನಮ್ಮ ಮನೆತನದ ಗೌರವಕ್ಕೆ ಕುಂದು ಎಂದು ತಿಳಿಯುವಷ್ಟರ ಮಟ್ಟಿಗೆ ಮೂಢ ಪದ್ಧತಿಗಳು ನಮ್ಮ ಹಳ್ಳಿಗರಲ್ಲಿ ಬೇರು ಬಿಟ್ಟಿವೆ. ಇಂತಹವುಗಲು ಸಮೂಲ ನಾಶವಾಗಬೇಕು.

**ಸ್ವಾರ್ಥ–ಸ್ವಾಭಿಮಾನ :**

ಒಂದು ಸಣ್ಣ ಕಾರಣಕ್ಕಾಗಿ, ಹಠಕ್ಕಾಗಿ, ದ್ವೇಷ ಸಾಧನೆಗಾಗಿ ಗೌರವದ ಪ್ರಶ್ನೆ ಎಂಬ ಕಾರಣ ಮುಂದಿಟ್ಟು ಜೀವನಪರ್ಯಂತ ಕೋರ್ಟಿಗೆ ಅಲೆದಾಡುವ, ಕೊಲೆ ಮಾಡಲು ಹೇಸದ, ಮ–ಮನೆತನಗಳನ್ನು ನಾಶಮಾಡುವ ಅನಿಷ್ಟ ಚಟಗಳನ್ನು ಭಾರತೀಯರಾದ ನಾವು ಬಿಡಬೇಕು. ಸ್ವಾರ್ಥಸಾಧನೆಗಾಗಿ ಸಾರ್ವಜನಿಕ ಹಣವನ್ನು ಕಬಳಿಸುವ ಮನೋಭಾವ ಹೋಗಿ 'ದೇಶದ ಸ್ಥಿತಿ ಉತ್ತಮಗೊಂಡರೆ ನನ್ನ ಸ್ಥಿತಿಯೂ ಉತ್ತಮವಾಗೇ ಆಗುತ್ತದೆ. ವೈಯಕ್ತಿಕವಾಗಿ ನಾನೆಷ್ಟೇ ಗಳಿಸಿಕೊಂಡರೂ ಬಡತನದಿಂದ ದೇಶವೇ ಮುಳುಗುವ ಸ್ತಿತಿ ತಂದರೆ ಅಥವಾ ಬಂದರೆ ನಾನು ಮಾತ್ರ ಸುಖವಾಗಿರಲು ಸಾಧ್ಯವಿಲ್ಲ' ಎಂಬ ಅರಿವು ಮೂಡಿ ದೇಶಕ್ಕಾಗಿ ಏನನ್ನೂ ತ್ಯಾಗ ಮಾಡಲು ಸಿದ್ಧರಿರುವ ಅನೇಕ ಪಾಶ್ಚಾತ್ಯರನ್ನು ಹಿಂಬಾಲಿಸಬೇಕಾಗಿದೆ. ಇಂತಹ ದಿಸೆಗಳಲ್ಲಿ ಅನುಕರಣೆ ಮಾಡುವುದನ್ನು ಬಿಟ್ಟು ಮಿನಿಸ್ಕರ್ಟ್ ಹಾಕುವದರಲ್ಲಿ, ಬಾಬ್‌ಕಟ್ ಮಾಡಿಕೊಳ್ಳುವದರಲ್ಲಿ, ಕುಂಕುಮ ಬಳೆ ನಿಷೇಧಿಸುವದರಲ್ಲಿ ಪಾಶ್ಚಾತ್ಯರನ್ನು ಅನುಕರಿಸುವದರಿಂದಾಗುವ ಪ್ರಯೋಜನವಾದರೂ ಏನು ?

**ಪತ್ರಿಕೆಗಳ ಹೊಣೆಗಾರಿಕೆ**

ಪತ್ರಿಕ ವ್ಯವಸಾಯ ಬಹು ಜವಾಬ್ದಾರಿಯುತವಾದ ಹೊಣೆಗಾರಿಕೆಯನ್ನು ಹೊತ್ತಿದೆ ; ಅನೇಕ ಪತ್ರಿಕೆಗಳು ತಮ್ಮ ಕರ್ತವ್ಯವನ್ನು, ಜವಾಬ್ದಾರಿಯನ್ನು ಬಹಳ ಎಚ್ಚರಿಕೆಯಿಂದ ನಿರ್ವಹಿಸುತ್ತವೆ. ಇದು ಅಗತ್ಯವೂ ಹೌದು. ಏಕೆಮದರೆ ಪತ್ರಿಕೆಯಲ್ಲಿ ಬಂದ ಅಭಿಪ್ರಾಯಗಳನ್ನು ಜನರು ಸಾಮಾನ್ಯವಾಗಿ ನಂಬುತ್ತಾರೆ. ಅದು ನಿಜವೋ ಸುಳ್ಳೋ ಎಂದು ವಿಮರ್ಷಿಸಲು ಹೋಗುವುದಿಲ್ಲ. ಸ್ಥಾನಿಕ ವಿಚಾರಗಳನ್ನೇ ಸರಿಯಾಗಿ ತಿಳಿದುಕೊಳ್ಳಲು ಅಸಾಧ್ಯವಾದಂತಹ ಪರಿಸ್ಥಿತಿಯಲ್ಲಿ, ಬೇರೆ ಊರಿನವರ, ಬೇರೆ

ರಾಜ್ಯದ, ಬೇರೆ ದೇಶದ ವಿಷಯಗಳಿಗೆ ಜನರು ಪತ್ರಿಕೆಗಳನ್ನೇ ಅವಲಂಬಿಸುತ್ತಾರೆ. ಹೀಗಿರುವಾಗ ಪತ್ರಿಕೆ ಜನರನ್ನು ತಪ್ಪು ದಾರಿಗೆಳೆಯುವ, ತಪ್ಪು ತಿಳಿವಳಿಕೆಗೆ ಆಸ್ಪದ ಕೊಡುವುದಕ್ಕೆ ಅವಕಾಶವಾಗದಂತಹ ರೀತಿಯಲ್ಲಿ, ತನ್ನ ಪವಿತ್ರ ಹೊಣೆಗಾರಿಕೆಯನ್ನು ನಿರ್ವಹಿಸಿ, ಯಾರಿಗೂ, ಯಾವುದಕ್ಕೂ ಅಪಚಾರವಾಗದಂತೆ ನೋಡಿಕೊಳ್ಳಬೇಕು. ಆದರೆ, ದುರದೃಷ್ಟದಿಂದ ಕೆಲವು ಪತ್ರಿಕೆಗಳು ಪೀತ ಪತ್ರಿಕೆಗಳಾಗಿ ಜನರನ್ನು, ಸಮಾನವನ್ನು, ಒಳ್ಳೆಯವರನ್ನು ಕೆಟ್ಟದೆಂಬಂತೆ ಚಿತ್ರಿಸುವುದು ಪತ್ರಿಕಾ ವ್ಯವಸಾಯದ ಘನತೆಗೆ ಕುಂದುಂಟು ಮಾಡುತ್ತದೆ.

ಪತ್ರಿಕೆಗಳ ಬಲದಿಂದ ಏನೆಲ್ಲ ಒಳಿತನ್ನು ಸಾಧಿಸಲು ಸಾಧಯವಿದೆ . ತತ್ವಬದ್ಧವಾದ, ಉದಾತ್ತ ಧ್ಯೇಯವುಳ್ಳ ಪತ್ರಿಕೆ ಉತ್ತಮವಾದ ಆಡಳಿತನ್ನು ರಾಷ್ಟ್ರಕ್ಕೆ ಒದಗಿಸಬಲ್ಲ ನಿರ್ಮಿಸಬಲ್ಲದು. ದುಷ್ಟ ಸಮಾಜದ ದೋಷಗಳನ್ನು ಬಯಲಿಗೆಳೆಯುವ ಮೂಲಕ ಅವುಗಳನ್ನು ನಿರ್ಮೂಲಗೊಳಿಸಿ, ಶಿಷ್ಟ ಸಮಾಜ ರೂಪಿಸಲು ಸಹಾಯಕವಾಗಬಲ್ಲದು. ಅಲ್ಲದೆ ಸೃಜನಶೀಲವ್ಯಕ್ತಿಗಳನ್ನು, ಘಟನೆ ಗೌರವಗಳ ವ್ಯಕ್ತಿಗಳನ್ನು ಎತ್ತಿಹಿಡಿಯಬಲ್ಲದು. ಒಳಿತಿಗೆ ಒತ್ತುಕೊಟ್ಟು ಎತ್ತಿಹಿಡಿದು, ಎಲ್ಲರೂ ಒಳಿತನ್ನು ಮೆಚ್ಚುವಂತೆ, ಕೆಡುಕನ್ನು ಕಡೆಗಣಿಸುವ ಸ್ವಭಾವವನ್ನು ಜನತೆಯಲ್ಲಿ ಬೆಳೆಯುವಂತೆ ಮಾಡಲೂ ಬಹುದು. ಯಾರ ಬಗೆಗೂ ಇಲ್ಲದ ವರ್ಣನೆ ಮಾಡದೆ, ಮತ್ಯಾರ ಬಗೆಗೆ ಸುಳ್ಳು ಅವಹೇಳನ ಮಾಡದೆ ಸತ್ಯ ರೀತಿಯಿಂದ ವಿಷಯಗಳನ್ನು ತಿಳಿಸಿದರೆ ಪತ್ರಿಕೆ ಸಮಾಜಕ್ಕೆ ದೊಡ್ಡ ಉಪಕಾರ ಮಾಡಿದಂತೆ.

ಪತ್ರಿಕೆಗಳ ಗೌರವ ಹಾಗೂ ಮಹತ್ವ ಅದರಲ್ಲಿ ಪ್ರಕಟವಾಗುವ ವಿಷಯಗಳ ಸತ್ಯತೆ ಹಾಗೂ ಸಂಪಾದಕನ ಮನೋಭಾವವನ್ನು ಅವಲಂಬಿಸಿರುತ್ತದೆ. ಚಿಲ್ಲರೆ ಮಾತುಗಳನ್ನು, ಬೇಜವಾಬ್ದಾರಿ ಸಂಗತಿಗಳನ್ನು, ತೂಕವಿಲ್ಲದ ಬರಹಗಳನ್ನು ಬರೆಯುವ ಪತ್ರಿಕೆಗಳು ತಾತ್ಕಾಲಿಕವಾಗಿ ಜನರ ಗಮನವನ್ನು ಸೆಳೆದರೂ, ಕಾಲಾನುಕ್ರಮದಲ್ಲಿ ತಮ್ಮ ಮೌಲ್ಯವನ್ನು ಕಳೆದುಕೊಳ್ಳುತ್ತವೆ. ಗೌರವಾನ್ವಿತ ವ್ಯಕ್ತಿಗಳು, ಸಂಸ್ಥೆಗಳು ಅಂತಹ ಕೆಳದರ್ಜೆಯ ಪತ್ರಿಕೆಗಳನ್ನು ಕೊಳ್ಳುವುದೂ ಅವಮಾನಕರವೆಂದು ಭಾವಿಸಲೂಬಹುದು. ಶಿಕ್ಷಕ ವೃತ್ತಿ ಎಷ್ಟು ಪವಿತ್ರವಾದುದೋ ಪತ್ರಿಕಾ ವ್ಯವಸಾಯವೂ ಅಷ್ಟೇ ಮಹತ್ತರವಾದುದೆಂದು ಪತ್ರಕರ್ತ ತಿಳಿದಷ್ಟೂ ಸಮಾಜಕ್ಕೆ ಆರೋಗ್ಯಕರ.

ಸಾಮಾನ್ಯವಾಗಿ, ಮುಖ್ಯಪಟ್ಟಣಗಳಲ್ಲಿ ಸ್ಥಳೀಯ ಪತ್ರಿಕೆಗಳು ಪ್ರಕಟವಾಗುತ್ತವೆ. ಇವು ಸ್ಥಳೀಯವಾದ ಲೋಪ-ದೊಷಗಳ್ನನು ಕಂಡುಹಿಡಿದು ಅವುಗಳನ್ನು ಪ್ರಕಟಿಸುವುದರ ಮೂಲಕ ಅನ್ಯಾಯವನ್ನು ಬಯಲಿಗೆಳೆದು ಸಾರ್ವಜನಿಕರ ಗಮನಕ್ಕೆ ತರಬಹುದು. ಆ ಮೂಲಕ ಆ ದೋಷಗಳನ್ನು ನಿವಾರಿಸಿ ತಮ್ಮ ಪ್ರದೇಶದ

ಜನಜೀವನ, ಸಾಮಾಜಿಕ ಜೀವನ, ಶಿಕ್ಷಣಕ್ಷೇತ್ರ ಶುದ್ಧವಾಗುವಂತೆ, ಸಮರ್ಥವಾಗಿ ಕೆಲಸ ಮಾಡುವಂತೆ ಮಾಡಿ, ಅಲ್ಲಿಯ ಜನರ ನೀತಿ, ನಡತೆ, ದಕ್ಷತೆಗಳು ಉತ್ತಮಗೊಳ್ಳುವಂಗತೆ ಎಸಗಬಹುದು. ಆ ಪ್ರದೇಶದ ಶ್ರೇಷ್ಠ, ಪ್ರಾಮಾಣೀಕ ದಕ್ಷ ವ್ಯಕ್ತಿಗಳ ಹಾಗೂ ಸಂಸ್ಥೆಗಳ ಸಾಧನೆಗಳನ್ನೂ ಹಾಗೂ ವ್ಯಕ್ತಿತ್ವವನ್ನೂ ಎತ್ತಿಹಿಡಿದು ಸಮಾಜದ ಇತರರು ಅನುಸರಿಸುವಂತೆ ಉತ್ಸಾಹಿಸಬಹುದು. ಕುಂದು-ಕೊರತೆಗಳನ್ನು, ಲೋಪ-ದೋಷಗಳನ್ನು ಬೆಳಕಿಗೆ ತಂದರೆ ಅವುಗಳ ನಿವಾರಣೆಯಾಗುವ ಸಾಧ್ಯತೆ ಇದೆ. ಇಂತಹ ಕೆಲಸ ಮಾಡುವಾಗ ಅತೀ ಜಾಗರೂಕತೆ ಅವಶ್ಯ. ಹಾರಿಕೆಯ ಸುದ್ದಿಗಳನ್ನು ಕೇಳಿಯಾಗಲಿ, ಕುತಂತ್ರಿಗಳ-ಕುತ್ಸಿತರ, ಈರ್ಷೆ ಹಾಗೂ ಅಸಹನೆಯವರ ಬೇಜವಾಬ್ದಾರಿ ಮಾತುಗಳಿಗೆ ಬೆಲೆ ಕೊಟ್ಟಾಗಲೀ, ಪ್ರಕಟಿಸಬಾರದು. ದೊರೆತ ವಿಷಯಗಳು ಎಷ್ಟರ ಮಟ್ಟಿಗೆ ಪ್ರಮಾಣಿಕ ಎಂಬುದನ್ನು ಪರೀಕ್ಷಿಸಿ ಒರೆಗೆ ಹಚ್ಚಿ ನಂತರ ಪ್ರಕಟಿಸಿದರೆ ನಿರೀಕ್ಷಿತ ಉದ್ದೇಶ ಫಲಿಸುತ್ತದೆ. ಇಲ್ಲದಿದ್ದರೆ ಆಗಬಾರದ ಅನ್ಯಾಯಗಳು ಆಗಲೂ ಸಾಧ್ಯುವಿದೆ.

ದುರಾದೃಷ್ಟವಶಾತ್ ನಮ್ಮ ಕೆಲವು ಪತ್ರಿಕೆಗಳು, ದುಷ್ಟರ ಹಾಗೂ ಸ್ವಾರ್ಥಿಗಳ ಪ್ರಭಾವಕ್ಕೆ ಒಳಗಾಗಿ ಸತ್ಯಕ್ಕೆ ದೂರವಾದ, ಸಮಾಜಕ್ಕೆ, ವ್ಯಕ್ತಿಗಳಿಗೆ ದ್ರೋಹವನ್ನೆಸಗುವ ರೀತಿಯಲ್ಲಿ ಈ ಮಾಧ್ಯಮವನ್ನು ಉಪಯೋಗಿಸುತಿತಿರುವುದು ಶೋಚನೀಯ. ಹಣದ ಸಂಪಾದನೆಯಾಗಲೀ, ಸ್ವಜನ ಪಕ್ಷಪಾತವಾಗಲೀ ಪತ್ರಿಕೆಗಳ ಉದ್ದೇಶವಾಗಬಾರದು. ಈ ದಿಶೆಯಲ್ಲಿ ಪತ್ರಿಕೆಗಳು ಹೋದದ್ದೇ ಆದರೆ ಆಮಿಷಕ್ಕೆ ಬಲಿಯಾಗಿ ದುಷ್ಟರ ಕೈಗೊಂಬೆಗಳಾಗಬಹುದು. ಹಾಗಾದಾಗ ಪತ್ರಿಕೆಗಳ ಪ್ರಭಾವದಿಂದ ಸಮಾಜವು ದುಷ್ಟರನ್ನು ಒಳ್ಳೆಯವರೆಂದೂ, ಒಳ್ಳೆಯವರನ್ನು ದುಷ್ಟರೆಂದೂ ತಪ್ಪಾಗಿ ಗುರ್ತಿಸುವ ಸಾಧ್ಯತೆ ಇದೆ. ದುಷ್ಟರಿಗೆ ಮನ್ನಣೆ ಶಿಷ್ಟರಿಗೆ ಅನಾದರ ಉಂಟಾಗುವ ಸಮಾಜದಲ್ಲಿ ಉತ್ತಮ ಬೆಳವಣಿಗೆಯಾಗಲೀ, ಅಭಿವೃದ್ಧಿಯಾಗಲೀ ಉಂಟಾಗಲು ಸಾಧ್ಯವಿಲ್ಲ.

ಉತ್ತಮ ಧ್ಯೇಯವಿಲ್ಲದ ಪತ್ರಿಕೆಗಳು ತಮ್ಮ ಪತ್ರಿಕೆಯಲ್ಲಿ ಪ್ರಕಟವಾಗುವುದೆಲ್ಲ ಸತ್ಯ ಎಂಬುದನ್ನು ಬಿಂಬಿಸಲು ಕೆಲವೊಂದು ತಂತ್ರಗಳನ್ನು ಬಳಸುತ್ತವೆ. ಉದಾಹರಣೆಗೆ-ಸಾರ್ವಜನಿಕವಾಗಿ ಜನಜನಿತವಾದ, ಜನರ ಸಿಟ್ಟಿಗೆ ಕಾರಣವಾದ ಸಾಮಾಜಿಕ ಅಥವಾ ದೊಡ್ಡವ್ಯಕ್ತಿಯ ದೋಷವನ್ನು ಅತೀ ಪರಿಣಾಮಕಾರಿಯಾಗಿ ಎತ್ತಿ ಬರೆಯುತ್ತವೆ. ಜನರ ವಿಶ್ವಾಸವನ್ನು ಗಳಿಸಿಕೊಂಡು ನಂತರ ತಮಗೆ ಬೇಕಾದ ಸುಳ್ಳನ್ನು, ಸತ್ಯದ ತಲೆಯ ಮೇಲೆ ಹಡೆದಂತೆ ಪ್ರಕಟಿಸುತ್ತವೆ. ಎರಡನೆಳಯದಾಗಿ ಅನೇಕ ಸತ್ಯಸಂಗತಿಗಳ ನಡುವೆ ತಮಗೆ ಆಸಕ್ತಿ ಇದ್ದ ವಿಷಯ ಒಂದನ್ನು, ಇದ್ದ ವಿಚಾರವನ್ನು ತಿರುಚಿ, ತಮಗೆ ಬೇಕಾದ ಅಭಿಪ್ರಾಯ ಮೂಡುವಂತೆ ಪ್ರಕಟಿಸಿ,

ಇದೂ ಸಹ ನಿಜ ಎಂದು ಜನ ನಂಬುವಂತೆ ಮಾಡುವುದು. ಆಗ ಚಿಕಿತ್ಸಕ ಬುದ್ಧಿ ಇಲ್ಲದ ಜನ ಎಲ್ಲವನ್ನೂ ಸತ್ಯವೆಂದು ನಂಬಿದಾಗ ಪರಿಣಾಮ ಅನ್ಯಾಯಕರವಗಿ ಆಗುತ್ತದೆ. ಹೀಗೆ ಪತ್ರಿಕೆಯವರು ತಮ್ಮಲ್ಲಿರುವ ಮಾಧ್ಯಮದ ದುರುಪಯೋಗ ಮಾಡಿಕೊಳ್ಳುವುದು ಆತ್ಮದ್ರೋಹ ಮತ್ತು ರಾಷ್ಟ್ರದ್ರೋಹವಾಗುತ್ತದೆ.

ಪತ್ರಿಕೆಗಳು ಹೀಗೆ ಮಾಡದೆ, ಹೊಣೆಯರಿತು ನಡೆದು ವೃತ್ತಿಯ ಪವಿತ್ರತೆಯನ್ನು ಕಾಪಾಡಿಕೊಳ್ಳಬೇಕು. ಪತ್ರಿಕಾಸಂಘಗಳನ್ನು ಮಾಡಿಕೊಂಡು, ಈ ವ್ಯವಸಾಯದಲ್ಲಿ ಕಂಡುಬರುವ ದೋಷಗಳನ್ನು ಆಗಿಂದಾಗಲೇ ತೊಡೆದುಹಾಕುತ್ತಾ ಈ ಕ್ಷೇತ್ರದಲ್ಲಿ ಬಂದ ಯಾರೂ ಕೆಳದರ್ಜೆಗೆ ಇಳಿಯದಂತೆ ತಡೆಗಟ್ಟಬೇಕು. ಅದಕ್ಕೆ ತಮ್ಮದೇ ಆದ ನೀತಿಗಳನ್ನು ಅನುಸರಿಸಲು ಸಾಧ್ಯವಿದೆ. ಸರ್ಕಾರ ಹಾಗೂ ಸಮಾಜವೂ ನಿಯಂತ್ರಣ ಮಾಡಬಹುದು. ಯಾವುದಾದರೂ ಪತ್ರಿಕೆಗಳಲಿ ಬಹಳಷ್ಟು ವಿಷಯಗಳನ್ನು ಬೇಜವಾಬ್ದಾರಿಯಿಂದ ಅಥವಾ ದುರುದ್ದೇಶದಿಂದ ಪ್ರಕಟಣೆ ಮಾಡಿರುವುದು ಕಂಡುಬಂದರೆ, ಅಂತಹ ಪತ್ರಿಕೆಗಳಿಗೆ ಸಹಾಯ ಸಲ್ಲಿಸುವ, ಪತ್ರಿಕೆಯ ಲೈಸನ್ಸನ್ನೇ ರದ್ದುಗೊಳಿಸುವ ತೀರ್ಮಾನ ತೆಗೆದುಕೊಳ್ಳುವ ಮೂಲಕ, ಅವುಗಳಿಂದಾಗುವ ಅನ್ಯಾಯವನ್ನು ತಡೆಗಟ್ಟಬಹುದು. ಆದರೆ ಈಗ ಎಲ್ಲಾ ಕ್ಷೇತ್ರಗಳಲ್ಲೂ 'ರಾಜಕೀಯದ' ಕೈ ಮೇಲಾಗಿ ಕೆಲ ದೊಡ್ಡ ವ್ಯಕ್ತಿಗಳೇ ಪೀತ ಪತ್ರಿಕೆಗಳಿಗೆ ಬೆಂಬಲ ನೀಡಿ, ಅಂತಹ ಕೆಳಮಟ್ಟದ ಪತ್ರಿಕೆಗಳ ಶಕ್ತಿ ಕುಂದುವಂತೆ ಮಾಡುವುದು ಕಷ್ಟವಾಗಬಹುದು.

ಪತ್ರಿಕಾ ಸ್ವಾತಂತ್ರವಿರುವುದು ಅಗತ್ಯ. ಸ್ವಾತಂತ್ರವಿದುರು ಅಗತ್ಯವಾದಂತೆ, ಸ್ವೇಚ್ಛಾಚಾರಕ್ಕೆ ನಿಯಂತ್ರಣವಿರುವುದೂ ಅಗತ್ಯ. ಪತ್ರಿಕೆಯು ಕುತಂತ್ರಗಳ ಸ್ವಾರ್ಥಸಾಧನೆಯ ಅಸ್ತ್ರವಾಗಬಾರದು. ಪತ್ರಿಕೆಗಳು ದುಷ್ಪಪ್ರಭಾವಕ್ಕೆ ಬಲಿಯಾಗದೇ ಸುಖೀ ಸಮಾಜ ಹಾಗೂ ಗೌರವಾನ್ವಿತ ರಾಷ್ಟ್ರ ರೂಪಿಸುವ ಕಾರ್ಯಕ್ಕೆ ನೆರವಾಗಬೇಕು.

ಸಾಮಾಜಿಕ ಪಿಡುಗು ತೊಡೆದುಹಾಕುವದು ಹೇಗೆ ?

ಭಾರತದ ಪ್ರಾಚೀನ ಇತಿಹಾಸ ಓದಿದಾಗ, ಭಾರತೀಯನಿಗೆ ತಾನು ಭಾರತೀಯನೆಂದು ಹೇಳಿಕೊಳ್ಳಲು ಹೆಮ್ಮೆ ಎನಿಸುತ್ತದೆ. ದೇಶವೋ ಸಂಪದ್ಭರಿತ ! ಸೇರಿನಲ್ಲಿ ಅಳೆಯುವಷ್ಟು ಮುತ್ತು ರತ್ನ, ಜನರೋ ಸಂತುಷ್ಟರು. ಪರದೇಶದವರು ಇಲ್ಲಿಯ ಸಂಸ್ಕೃತಿಗೆ ಮಾರುಹೋಗಿ ಇದನ್ನು ಒಪ್ಪಿಕೊಂಡು ಅಪ್ಪಿಕೊಳ್ಳಲು ಬಂದವರೆಷ್ಟೋಮಂದಿ. ಇಲ್ಲಿಯ ನೈತಿಕಮಟ್ಟ ಅನುಕರಣೀಯ. ದಿನವಿಡೀ ಮನೆಯ ಬಾಗಿಲು ತೆಗೆದು ಮನೆಯಲ್ಲಿ ಯಾರೂ ಇಲ್ಲದಿದ್ದರೂ ಮನೆಯ ಸಾಮಾನುಗಳೆಲ್ಲ ಭದ್ರ. ಯಾರು ಎಲ್ಲಿಗೆ ಹೋಗಿ ಬರಲೂ ನಿಶ್ಚಿಂತೆ. ಒಂಟಿಯಾಗಿ ನಾಡನ್ನೆಲ್ಲ

ಸಂಚರಿಸಿದರೂ ಅವರ ಗೌರವಕ್ಕೆ ಕುಂದಿಲ್ಲದಂತೆ ಬದುಕಿದಂತಹ ನೀತಿವಂತ ಪುರುಷ ಸಮಾಜ ಆಶ್ರಯಿಸಿ ಬಂದವರ, ಅಸಹಾಯಕರ ನೆರವಿಗಾಗಿ ತಮ್ಮದನ್ನೆಲ್ಲವನ್ನೂ ತ್ಯಾಗಮಾಡಲು ಸಿದ್ಧರಿದ್ದ ಪರೋಪಕಾರ ಮನೋಭಾವದ ಜನರಿದ್ದ ಅಂದಿನ ಭಾರತವೆಲ್ಲಿ ? ಮನೆಯಲ್ಲಿದ್ದರೂ ಸುರಕ್ಷತೆಯಿಲ್ಲದ, ತಂದೆ-ತಾಯಿ, ಬಂಧು, ಬಳಗದೊಡನೆ ಬಾಗಿಲು ಹಾಕಿಕೊಂಡು ಒಳಗಿದ್ದರೂ ಬಾಗಿಲು ಮುರಿದು, ಬಟ್ಟೆ ಹರಿದು ಬೆತ್ತಲೆಗೊಳಿಸಿ ಮಾನಾಪರಣ ಮಾಡುವ ಇಂದಿನ ಪುಂಡ ಗಂಡುಗಳನ್ನೊಳಗೊಂಡ ಇಂದಿನ ಭಾರತವೆಲ್ಲಿ ? ಅಂದಿನ ದಿನವನ್ನು ನೋಡಿ ಹೆಮ್ಮೆಪಟ್ಟ ನಾವು ಇಂದಿನ ದಿನದ ಘಟನೆಗಳಿಂದ ನಾಚಿಕೆ ಪಡುವಂತಾಗಿದೆ.

ಇಂದಿನ ಭಾರತದಲ್ಲಿ ನಡೆಯುವ ಸ್ಥಿತಿ ನೋಡಿದವರು ನಿಕೃಷ್ಟವಾಗಿ ಕಾಣುವಂತಹ ಗತಿ; ಒಮ್ಮೆ ಭಾರತೀಯರೊಬ್ಬರು ವಿದೇಶಕ್ಕೆ ಹೋದಾಗ ಅಲ್ಲಿ ಚಿನ್ನ ಸೋವಿಯೆಂದು ತಿಳಿದು ಸ್ವಲ್ಪ ಕೊಂಡರಾಯ್ತೆಂದು ಅಂಗಡಿಗೆ ಹೋದರಂತೆ. ಅಲ್ಲಿಯ ಕಡಿಮೆ ದರ ಕೇಳಿ ಇವರಿಗೆ ದಂಗಾಯಿತು. ಇಷ್ಟೊಂದು ಸೋವಿ ಹೇಗೆ ಸಾಧ್ಯ ? ಏನಾದರೂ ಮೋಸವಿರಬೇಕು ಎನ್ನಿಸಿ, 'ಏನ್ರೀ ಶುದ್ಧ ಬಂಗಾರತಾನೇ ಏನೂ ಮೋಸವಿಲ್ಲವಲ್ಲಾ' ಎಂದರು. ಆಗ ಅಂಗಡಿಯವನು, 'ನಾವೇನು ಇಂಡಿಯಾದವರೇನ್ರಿ ಮೋಸಮಾಡಲಿಕ್ಕ' ಎಂದನಂತೆ. ಭಾರತದಲ್ಲಿ ಆಹಾರದಲ್ಲಿಯೂ, ಔಷಧದಲ್ಲಿಯೂ ಕಲಬೆರಕೆಯನ್ನು ಕಂಡಿದ್ದ ಆ ಭಾರತೀಯನಿಗೆ ಅಂಗಡಿಯವನು ಅಪಮಾನವಾಗುವಂತಹ ಮಾತನಾಡಿದರೂ ತಲೆತಗ್ಗಿಸುವಂತಾಯಿತೇ ವಿನಃ ಪ್ರತಿಭಟಿಸಿ ಮಾತನಾಡಲು ಬಾಯೇ ಬರಲಿಲ್ಲವಂತೆ. ಹೀಗೆ ನಮ್ಮ ದೇಶದ ನೈತಿಕ ಅಧಃಪತನದಿಂದಾಗಿ ಭಾರತೀಯನು ತಲೆತಗ್ಗಿಸಿ ಬಾಳುವಂತಾಗಿದೆ.

ದಿನದಿನಕ್ಕೂ ಭಾರತದಲ್ಲಿ ನೀತಿಯ ಅಧಃಪತನವಾಗುತ್ತಿದೆ. ಉತ್ತಮ ಮೌಲ್ಯಗಳನ್ನು ಇಟ್ಟುಕೊಂಡು ಬದುಕುವವರ ಸಂಖ್ಯೆ ಕಡಿಮೆಯಾಗುತ್ತಿದೆ. ಆದರ್ಶವಾಗಿ ಬಾಳುವವನ ಮಾರ್ಗ ಕಲ್ಲು-ಮುಳ್ಳು. ಬ್ರಿಟಿಷರ ಕಾಲದಲ್ಲಿ ನಿಸ್ವಾರ್ಥಿಯಾಗಿ, ರಾಷ್ಟ್ರಾಭಿಮಾನಿಯಾಗಿ, ನೀತಿವಂತನಾಗಿ ಏನೆಲ್ಲ ಮಾಡಲು ಸಿದ್ಧನಿದ್ದ ಭಾರತೀಯ ಇಂದು ಸ್ವಾರ್ಥಿ, ಕುತಂತ್ರಿ, ದುರಭಿಮಾನಿ, ಮೋಸಗಾರ, ಸೋಮಾರಿ, ಕೊಲೆಗಡುಕ, ಅನೀತಿವಂತ, ಮೋಜುಗಾರ ಎಲ್ಲ ಆಗಿದ್ದಾನೆ. ಹೀಗಿದ್ದಾಗಲೇ ಬದುಕಲು ಸಾಧ್ಯ ಎನ್ನುವಂತಹ ಪರಿಸ್ಥಿತಿ ನಿರ್ಮಿಸಿ ಅಲ್ಲೊಬ್ಬರು, ಇಲ್ಲೊಬ್ಬರು ಉಳಿದಿರುವ ಯೋಗ್ಯರೂ ಸಹ ದಾರಿ ತಪ್ಪುವ ಹಗೆ ಆಗಿದೆ. ಎಲ್ಲೋ ಒಬ್ಬರು ಉಳಿದ ಯೋಗ್ಯರಿಗೆ ಜೀವನ ದುರ್ಭರ ಎನ್ನಿಸುತ್ತಿದೆ. ಈ ಅನೀತಿವಂತ ನೀತಿವಂತನನ್ನು ಸಹಿಸುತ್ತಿಲ್ಲ. ಏನಾದರೂ ಮಾಡಿ ಅವನನ್ನು ತಮ್ಮ

ದಾರಿಯನ್ನೇ ಹಿಡಿಯುವಂತೆ ಮಾಡುವ ಪ್ರಯತ್ನ ಸತತವಾಗಿ ನಡೆದೇ ಇರುತ್ತದೆ. ಅವನನ್ನು ಅಸಹಾಯಕನನ್ನಾಗಿ ಮಾಡಿಯೋ, ಸಮಸ್ಯೆಯಲ್ಲಿ ಮುಳುಗಿಸಿಯೋ, ಹೀನಾಯವಾಗಿ ಕಂಡೋ, ತಮ್ಮ ಸಹಾಯ ಕೇಳುವ ಸ್ಥಿತಿ ನಿರ್ಮಿಸಿಯೋ ಅವನ ಹಾದಿ ತಪ್ಪಿಸಲು ಪ್ರಯತ್ನಿಸುತ್ತಾರೆ. ಇಂತಹ ಪ್ರಸಂಗಗಳಿಗೆ ಅಂಜಿ, ಸೋತು ದುಷ್ಟರೊಡನೆ ಬೆರೆತು ನಿಂತರೆ ಅಲ್ಲೊಬ್ಬರು, ಇಲ್ಲೊಬ್ಬರು ಇರುವ ಕೆಲವೇ ಮಂದಿ ಯೋಗ್ಯರ ಸಂಖ್ಯೆ ಮತ್ತು ಕಡಿಮೆಯಾಗುತ್ತದೆ. ಒಂದು ವೇಳೆ ಇವರ ಪ್ರಭಾವಕ್ಕೆ ಅವನು ಬಲಿಯಾಗದೆ ಇದ್ದರೆ ಇವರಿಗೆ ಅವನ್ನು ಸಹಿಸಿಕೊಳ್ಳಲು ಸಾಧ್ಯವೇ ಇಲ್ಲ. ತಾವೆಲ್ಲ ಹೀಗಿರುವಾಗ ಇವನೊಬ್ಬ ತಾನೇ ಪ್ರತ್ಯೇಕವೆಂಬಂತೆ ತೋರಿಸಿಕೊಂಡು ತಮಗೆಲ್ಲ ಮಸಿಬಳಿಯುವ ಪ್ರಯತ್ನ ಮಾಡುತ್ತಾನೆಂದುಕೊಳ್ಳುತ್ತಾರೆ. ಇವನ ಕೀರ್ತಿ ತಮಗೆ ಅಪಕೀರ್ತಿ ಎನಿಸುತ್ತದೆ. ಅವರಿಗೆ ಆಗ ಅಪಪ್ರಚಾರ ಮುಂತಾದ ಮಾರ್ಗಗಳಿಂದ ಆ ಮನುಷ್ಯನ ಹೆಸರಿಗೆ ಕಲಂಕವನ್ನು ಮೃದು ಮನಸ್ಸನನ್ನು ಬೆಳಸಿಕೊಂಡಿದ್ದರೆ ಮುಗಿಯಿತು ಅವನ ಕಥೆ ಅಪಮಾನದಿಂದ, ಅಸಹಾಯಕತೆಯಿಮದ ಸಮಸ್ಯೆಗಳಿಂದ ಕೊರಗಿ ಸೊರಗುತ್ತಾನೆ. ಆದರೆ ನೈತಿಕ ಬಲದಂತೆ ಅವನು ಆತ್ಮಬಲವನ್ನೂ ಬೆಳೆಸಿಕೊಂಡಿದ್ದರೆ ಇದಕ್ಕಾವುದಕ್ಕೂ ಅಂದೆ, ಅಳುಕತದೆ ತನ್ನ ನೇರ ದಾರಿಯಲ್ಲಿ ಮುಂದೆ ಸಾಗುತ್ತಾನೆ. ಆದರೆ ಇಂತಹ ಗಟ್ಟಿತನ ಎಷ್ಟು ಮಂದಿಗೆ ಇದೆ ? ಈ ನೇರಮಾರ್ಗ ಅತಿ ದುರ್ಗಮ, ಈ ಮಾರ್ಗದಲ್ಲಿ ಅವ ಒಂಟಿ. ಜೊತೆಗಾರರು ಸಿಕ್ಕುವುದೂ ಕಷ್ಟ ಹಾಗಾಗಿ, ಒಂಟಿಯಾಗಿ ಸಾಗಬಲ್ಲಲ ಬಲಿಷ್ಠ ಮನಸ್ಸಿನ ಮಾನವ ಮಾತ್ರ ನೇರಮಾರ್ಗದಲ್ಲಿ ಉಳಿಯುತ್ತಾನೆ.

ಭಾರತೀಯ ಹೀಗೇಕಾದರು ? ಹೀಗಾದರಲ್ಲ ಎಂದು ದುಃಖವೆನಿಸುತ್ತದೆ. ಇಂದಿನ ಪರಿಸ್ಥಿತಿಯಿಂದ ಯಾರಿಗೂ ನೆಮ್ಮದಿ ಇಲ್ಲ. ಭದ್ರತೆಯಾಗಲೀ, ಭರವಸೆಯಾಗಲೀ ಇಲ್ಲ. ಸರಕಾರವನ್ನು ನಂಬಿಕುಳಿತುಕೊಳ್ಳುವಂತಿಲ್ಲ. ಅಲ್ಲಿರುವವರೂ ಈ ಜನವೇ ಆತನೇ. ಕಾಯುವವನೇ ಕೊಲ್ಲುವವನಾದರೆ ಬದುಕುವುದಾದರೂ ಹೇಗೆ ? ತಾಯಿಯೇ ವಿಷ ಉಣ್ಣಿಸುವ ಪರಿಸ್ಥಿತಿಯಲ್ಲಿ ಮಗು ಉಳಿಯುವುದು. ಸಾಧ್ಯವೇ ?

ಈ ನೈತಿಕ ಅಧಃಪತನಕ್ಕೆ ಕಾರಣವೇನು ಎಂದು ಯೋಚಿಸಿದಾಗ ಇದಕ್ಕೆ ಮೂಲ ಪ್ರಜಾತಂತ್ರ ಮಾದರಿಯ ಸರಕಾರ ಎನ್ನಿಸುತ್ತದೆ. ಈ ರೀತಿಯ ಸರ್ಕಾರ ಪಡೆಯುವುದು ನಾಗರೀಕತೆಯ ಲಕ್ಷಣ; ಮುಂದುವರಿದುದರ ಸಂಕೇತ, ಹೌದು. ಆದರೆ ಅದರ ಬೆಲೆಯನ್ನೇ ತಿಳಿಯದವನ ಕೈಯ್ಯಲ್ಲಿ, ಅದಕ್ಕೆ ತಕ್ಕುದಾದ ತರಬೇತಿಯನ್ನೇ ಪಡೆಯದವನ ಕೈಯಲ್ಲಿ ಹೊಣೆಗಾರಿಕೆಗಳು ಸಿಕ್ಕು ಪ್ರಜಾಪ್ರಭುತ್ವದ ಬೇರಿಗೆ ಗೆದ್ದಲು ಹತ್ತುವಂತೆ ಆಗಿದೆ. ಜಾತ್ಯಾತೀತ ರಾಷ್ಟ್ರವೆಂದು ಭಾರತದ

ಸಂವಿಧಾನದಲ್ಲಿ ನಿರೂಪಿಸಿದ್ದಾರೆ. ಆದರೆ, ಇಲ್ಲಿ ನಡೆಯುವುದೆಲ್ಲಾ ಜಾತಿಯ ಆಧಾರದ ಮೇಲೆಯೇ. ಓಟಿಗಾಗಿ, ಮೊದಲೇ ಹಲವು ಹದಿನೆಂಟು ನೂರು ಜಾತಿಗಳನ್ನೊಳಗೊಂಡಿದ್ದ ಭಾರತ ದೇಶ ಹದಿನೆಂಟು ಸಾವಿರ ಹೋಳಾಗಿ ಹೋಗಿದೆ. ಈ ದೇಶ ಭಾಷೆಯ ಹೆಸರಿನಲ್ಲಿ, ಜಾತಿಯ ಹೆಸರಿನಲ್ಲಿ, ಪ್ರಾಂತದ ಹೆಸರಿನಲ್ಲಿ, ನಾಯಕನ ಹೆಸರಿನಲ್ಲಿ ಒಡೆದು ನುಚ್ಚು ನೂರಾಗುತ್ತಿದೆ. ಅಧಿಕಾರದ ಬೆನ್ನು ಹತ್ತಿರುವ ಸ್ವಾರ್ಥ ರಾಜಕಾರಣಿ ಜನರನ್ನು ಆಮಿಷಕ್ಕೆ ಒಳಗು ಮಾಡಿ ಸಾಮಾನ್ಯ ಜನತೆಯನ್ನು ಸ್ವಾರ್ಥಿಯನ್ನಾಗಿ, ಸೋಮಾರಿಯನ್ನಾಗಿ ಬೆಳೆಸುತ್ತಿದ್ದಾನೆ. ಜನರು ಅವನ ಪ್ರಭಾವಕ್ಕೆ ಸಿಕ್ಕು ಒಕ್ಕಟ್ಟನ್ನು ಮರೆತು ಒಳಜಗಳಕ್ಕೆ ತೊಡಗಿದ್ದಾರೆ. ವಿಶಾಲ ಸಂಕುಚಿತಗೊಳ್ಳುತ್ತಾ ಹೋಗುತ್ತಿದೆ. ಒಬ್ಬ ಭಾರತೀಯನು ಇನ್ನೊಬ್ಬ ಭಾರತೀಯನನ್ನು ನೋಡುವಾಗ ಇವನು ಉತ್ತರ ಭಾರತದವನು, ದಕ್ಷಿಣ ಭಾರತದವನು ಎಂಬ ದೃಷ್ಟಿಯಿಂದ ನೋಡುತ್ತಾನೆ. ನಂತರ ಇವನು ತನ್ನ ರಾಜ್ಯದವನೋ, ಬೇರೆ ರಾಜ್ಯದವನೋ ಎಂದು ಪರೀಕ್ಷಿಸುತ್ತಾನೆ. ಆಮೇಲೆ ತನ್ನ ರಾಜ್ಯದಲ್ಲಿ ಉತ್ತರದವನೋ, ದಕ್ಷಿಣದವನೋ, ಪೂರ್ವದವನೋ, ಪಶ್ಚಿಮದವನೋ ಎಂದು ಗಮನಿಸುತ್ತಾನೆ. ನಂತರ ಇವನ ಜಿಲ್ಲೆ ಯಾವುದು, ತಾಲ್ಲೂಕು ಯಾವುದು, ಊರಾವುದು ಎಂಬ ಪ್ರಶ್ನೆ ಏಳುತ್ತದೆ. ಇಲ್ಲಿಗೂ ಮುಗಿಯುವುದಿಲ್ಲ ಅವನ ವಿಶ್ಲೇಷಣೆ. ಈಗ ಎರಡನೆಯ ಹಂತ ಪ್ರಾರಂಭ. ಇವ ಯಾವ ಜಾಥಿ, ಯಾವ ಪಂಗಡ ಹೀಗೆ ಇನ್ನೂ ಅನೇಕ ರೀತಿಯಲ್ಲಿ ಹಿಂಜುತ್ತಾ, ಒಕ್ಕಟ್ಟು ಮಾಯವಾಗಿ, ಸಹಕಾರ ಇಲ್ಲವಾಗಿ, ಸಹಾಯ ದೊರೆಯದಾಗಿ ಭಾರತೀಯ, ಜನ ಸಂಖ್ಯಾಸ್ಫೋಟ ಸ್ಥಿತಿಯಲ್ಲೂ ಒಂಟಿಯಾಗಿ ಬದುಕುತ್ತಿದ್ದಾನೆ. ವ್ಯಕ್ತಿಯನ್ನು ಅವಲೋಕಿಸುವಾಗ ಮೌಲ್ಯಗಳು ಗೌಣವಾಗಿವೆ ಉದಾತ್ತ ಭಾವನೆಗಳನ್ನು ವಿಶಾಲ ಮನೋಭಾವವನ್ನು ಹೊಂದಿರುವ ವ್ಯಕ್ತಿ ಇಂದು 'ಅವ್ಯವಹಾರಿ' ಎಂಬ ಪಟ್ಟ ಕಟ್ಟಿಸಿಕೊಳ್ಳುವಂತಾಗಿದೆ.

ಈ ರೀತಿಯ ಸಮಾಜ ಹೀಗೇ ಮುಂದುವರಿದರೆ ವಿನಾಶ ಕಟ್ಟಿಟ್ಟ ಬುತ್ತಿ. ಪ್ರಜಾಸತ್ತೆಯಂತೂ ಬದುಕಲು ಸಾಧ್ಯವೇ ಇಲ್ಲ. ಈಗಿರುವ ವಾತಾವರಣದಲ್ಲಿ ಜನರ ಮನೋಭಾವವು ಮೊದಲಾಗಬೇಕಾದರೆ ಕ್ಷಿಪ್ರಕ್ರಾಂತಿಯಾಗಬೇಕಷ್ಟೆ. ಆದರೆ ನಮ್ಮ ದೇಶದ ಜನರಿಗೆ ಅದು ಒಗ್ಗದ ಮಾತು. ಆದುದರಿಂದ ಇಂದಲ್ಲ ನಾಳೆಯಾದರೂ ಉತ್ತಮ ಸಮಾಜ ನಿರ್ಮಿಸುವ ಒಂದು ಯೋಜನೆ ಅವಶ್ಯ. ಪೀಳಿಗೆ ಸಂಪೂರ್ಣ ಬದಲಾಗಬೇಕದರೆ ಸರಿಯಾದ ಬುನಾದಿಯನ್ನು ಬಾಲ್ಯದಿಂದಲೆ ಹಾಕಬೇಕಗುವುದು. ಅದಕ್ಕೆ ಮನೆ ಹಾಗೂ ಸಮಾಜದ ಸಹಕಾರ ಬೇಕಾದರೂ ಶಿಕ್ಷಣ ಮಹತ್ತರ ಜವಾಬ್ದಾರಿ ಹೊರಬೇಕಾಗುತ್ತದೆ. ಮುಖ್ಯವಾಗಿ ಪೂರ್ವ ಪ್ರಾಥಮಿಕ, ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣದ ಮುಖ್ಯ ಗುರಿ ಪ್ರಜಾರಾಜ್ಯಕ್ಕೆ

ಅನುಗುಣವಾದ ಮೌಲ್ಯಗಳನ್ನು ಮಕ್ಕಳಲ್ಲಿ ಮೂಡಿಸುವಂತಿರಬೇಕು. ಶಿಕ್ಷಣ ಪಡೆದ ಪ್ರತಿ ಮಗುವಿನಲ್ಲೂ ಅಂತಹ ಭಾವನೆಗಳು ಮೂಡುವಂತಹ ಯೋಜನೆ ಅತ್ಯಗತ್ಯ. ಶಿಕ್ಷಣದ ಗುರಿಯನ್ನು ಹಾಳೆಗಳ ಮೇಲೆ ಬರೆದಿಟ್ಟು ಶಿಕ್ಷಣದಲ್ಲಿ ಅದನ್ನು ಸಾಧಿಸಲಾಗದಿದ್ದರೆ ಆ ಕಾಗದದ ಮೇಲಿನ ಬರಹಕ್ಕೆ ಕುರುಡು ಕವಡೆಯಷ್ಟೂ ಬೆಲೆಬಾರದು.

ಯೋಜನಾ ಬದ್ಧವಾದ, ಪರಿಣಾಮಕಾರಿಯಾದ ಪ್ರಯತ್ನ ಕೈಗೊಂಡರೆ ಇದು ಅಸಾಧ್ಯವಾದುದೇನಲ್ಲ. ಪ್ರತಿಯೊಂದು ಶಾಲೆಯೂ ನಿರೀಕ್ಷಿತ ಗುರಿ ಸಾಧಿಸುವಂತೆ ನೋಡಿಕೊಳ್ಳುವುದು ಇಲಾಖೆಯ ಕರ್ತವ್ಯವಾಗಬೇಕು. ಹೆಜ್ಜೆ ಹೆಜ್ಜೆಗೂ ಪರಿಶೀಲಿಸಲು ಅಸಾಧ್ಯವಾದರೆ, ಯೋಗ್ಯ ವಿಚಾರವಾದಿಗಲು, ಪ್ರಜಾಸತ್ತಾತ್ಮಕ ಭಾವನೆಯುಳ್ಳವರೂ ಸಾರ್ವಜನಿಕ ಕೆಲಸದಲ್ಲಿ ನಿಜವಾದ ಆಸ್ಥೆ ಉಳ್ಳವರೂ ಆದಂತಹ ಸ್ಥಾನಿಕ ವ್ಯಕ್ತಿಗಳ ಒಂದು ಕಮೀಟಿಯನ್ನು ನೇಮಿಸಿ ಪ್ರತಿ ಶಾಲೆಯೂ ಉತ್ತಮ ರೀತಿಯಲ್ಲಿ ಕೆಲಸ ಮಾಡುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಅದಕ್ಕೆ ಒಪ್ಪಿಸಬೇಕು. ಅದೇ ಊರಿನ ಜನರು ತಮ್ಮ ಊರಿನ ಶಾಲೆಗಳ ಬಗ್ಗೆ ಆಸ್ಥೆ ವಹಿಸಿದಾಗ ಮಾತ್ರ ನಿರೀಕ್ಷಿತಫಲ ದೊರೆಯಲು ಸಾಧ್ಯ.

ಶಾಲೆಯಲ್ಲಿ ಕೆಲಸ ಮಾಡುವ ಶಿಕ್ಷಕರು ಯಾವುದೇ ವಿಷಯ ಬೋಧಿಸಲಿ, ಪ್ರಸಂಗ ಬಂದಾಗಲೆಲ್ಲಾ ಮಕ್ಕಳಲ್ಲಿ ರಾಷ್ಟ್ರೀಯ ಭಾವನೆ ಬೆಳೆಯುವಂತೆ ಮಾನವೀಯ ಗುಣ, ಮೊಳೆಯುವಂತೆ, ಸಹಕರ ಮನೋಬಾವ ಉದಯಿಸುವಂತೆ ವಿಷಯಗಳನ್ನು ಉಪಯೋಗಿಸಿಕೊಂಡು ಸಂಧರ್ಭಾನಸಾರ ಬೋಧಿಸಿದರೆ ಬೆಳೆಯುವ ವಯಸ್ಸಿನ ಮಕ್ಕಳ ಮನಸ್ಸಿನ ಮೇಲೆ ಅಚ್ಚಳೀಯದ ಪ್ರಭಾವ ಉಂಟಾಗುತ್ತದೆ. ಶಾಲೆಯ ಚಟುವಟಿಕೆಗಳಲ್ಲಿ, ವಾತಾವರಣದಲ್ಲಿ ಉತ್ತಮ ಗುಣಗಳನ್ನು ಪೋಷಿಸುವಂತಹ ಸನ್ನಿವೇಶಗಳು ಮಕ್ಕಳಿಗೆ ದೊರೆಯಲು ಅವಕಾಶಗಳನ್ನು ನಿರ್ಮಿಸಬೇಕು. ಆಟದ ಬಯಲಲ್ಲಿ ಮಕ್ಕಳ ಶೀಲಸಂವರ್ಧನೆಗೆ, ನಾಯಕತ್ವದ ತರಬೇತಿಗೆ, ನಿಯಮಗಳನ್ನು ಗೌರವಿಸುವಂತಹ ರೂಢಿಯ ಬೆಳವಣಿಗೆಗೆ ಸಹಾಯಕವಾಗುವಂತೆ ಮಾಡಲು ಬರುತ್ತದೆ. ಆಟವನ್ನು ಅಪೇಕ್ಷಿಸದ ಮಕ್ಕಳಾರಿದ್ದಾರೆ ? ಆಟದ ಬಯಲಿನ ಚಟುವಟಿಕೆಗಳನ್ನು ಸಮರ್ಥವಾಗಿ ನಿರ್ವಹಿಸಿದರೆ ರಾಷ್ಟ್ರಪ್ರೇಮಿಗಳನ್ನು, ನಿಸ್ವಾರ್ಥ ಕಾರ್ಯಕರ್ತರನ್ನು, ದಕ್ಷ ವ್ಯಕ್ತಿಗಳನ್ನು ರೂಪಿಸಲು ಸಾಧ್ಯ. ಅದಕ್ಕಾಘಿಯೇ ಆಟದ ಬಯಲನ್ನು 'ಪ್ರಜಾರಾಜ್ಯದ ತೊಟ್ಟಿಲು' ಎಂದು ಕರೆಯುತ್ತಾರೆ. ಆಟದ ಮೂಲಕ ಮಕ್ಕಳಲ್ಲಿ ನಿಮಯಗಳಿಗೆ ಬದ್ಧರಾಗಿ ನಡೆಯುವಂತಹ, ತಮ್ಮ ವೈಯಕ್ತಿಕ ಲಾಭಗಳಿಗೆ ಮಹತ್ವಕೊಡದೆ, ತಮ್ಮ ಸಂಘ – ಸಂಸ್ಥೆಗಳಿಗಾಗಿ ಕೆಲಸ ಮಡುವ ಮನೋಭಾವ ಬರುವಂತೆ ಮಾಢಲು ಸಾಧ್ಯವಿದೆ. ಆಟದ ಅನೇಕ ಸಂದರ್ಭಗಳಲ್ಲಿ ಮಕ್ಕಳೂ

ಆತ್ಮವಿಶ್ವಾಸದಿಂದ ಮುನ್ನುಗ್ಗಬೇಕಾಗುತ್ತದೆ. ಸ್ವಇಚ್ಛೆಯಿಂದ ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ. ಸಹಕರಿಸಿ ಕೆಲಸಮಾಡಿ, ಉಳಿದವರಿಗೂ ಸಹಾಯ ಮಾಡಬೇಕಾಗುತ್ತದೆ. ಅಂದರೆ ಈ ಜವಾಬ್ದಾರಿಗಳ ಮೂಲಕ, ಹೊಟ್ಟೆಕಿಚ್ಚುಪಡುವ ಬೇರೆಯವರ ನಾಶಕ್ಕೆ ಹೊಂಚುಹಾಕುವ ಸಣ್ಣತನ ಇಲ್ಲವಾಗಿಸಬಹುದು. ಶೀಘ್ರವಾದ ಯೋಗ್ಯ ನಿರ್ಣಯವನ್ನು ತಕ್ಷಣವೇ ತೆಗೆದುಕೊಳ್ಳಬೇಕಾದ ಅವಕಾಶಗಳೂ ಸಾಕಷ್ಟು ದೊರೆಯುತ್ತವೆ. ಸೋಲು ಗೆಲುವನ್ನು ಸಮಾನವಾಗಿ ಸ್ವೀಕರಿಸುವ ಮನೋಭಾವ ಬೆಳೆಸಿ, ಈಗಿರುವ ರಾಜಕೀಯ ಕಚ್ಚಾಟ, ಮೇಲಾಟ ಇಲ್ಲದಂತೆ ಮಾಡಲು ಸಾಧ್ಯವಾಗುತ್ತದೆ. ನಾಯಕನಾಗಿ ಎಲ್ಲರ ಸಹಕಾರ ಪಡೆದು, ನಿಯಮಕ್ಕನುಸಾರಿವಾಗಿ ಆಟಗಳನ್ನು ಆಡಿ, ಎಲ್ಲರ ಒಳಿತಿಗಾಗಿ ದುಡಿವ ಸ್ವಭಾವ ಮೂಡುವಂತೆ ಮಾಡಬಹುದು. ಉತ್ತಮ ಸ್ಥಾನ ಸಿಕ್ಕಾಗ, ಕೇವಲ ಸ್ವಾರ್ಥ ಸಾಧನೆಗೆ ಅದನ್ನು ಬಳಸಿಕೊಳ್ಳುವ, ಕರ್ತವ್ಯವನ್ನು ಕಡೆಗಣಿಸುವ ಈಗಿರುವ ಕ್ಷುಲ್ಲಕತನಗಳು ಇಲ್ಲವಾಗುವಂತೆ ಮಾಡಬಹದು. ಅಲ್ಲದೆ ನಾಯಕನಿಗೆ ವಿಧೇಯತೆಯಿಂದ ನಡೆದುಕೊಳ್ಳುತ್ತಾ ಅವನೊಡನೆ ಗುರಿಸಾಧನೆಗೆ ಸಹಕರಿಸುವ ಮೂಲಕ ಸಹಕಾರೀ ಗುಣವನ್ನು ಪೋಷಿಸಲು ಸಾಧ್ಯ. ಹೀಗೆ ಅನೇಕ ರೀತಿಯಲ್ಲಿ ಪ್ರಜಾಸತ್ತಾತ್ಮಕ ದೇಶಕ್ಕೆ ಬೇಕಾದ ನಡೆಯುಳ್ಳ ಪೀಳಿಗೆಯನ್ನು ರೂಪಿಸಲು ಸಾಧ್ಯವಿದೆ. ಇಂತಹ ರಾಷ್ಟ್ರಕಟ್ಟುವ ಕೆಲಸಕ್ಕೆ ಜನ ಮುಂದಾಗಬೇಕು. ಶಿಕ್ಷಣದ ಗುರಿಸಾಧನೆಗೆ ಎಲ್ಲರೂ ಸಹಕಾರದ ಹಸ್ತ ಚಾಚಬೇಕು. ಜನತೆಯ ಪಾತ್ರ ಪ್ರಜಾ ರಾಜ್ಯದಲ್ಲಿ ಎಂತಹ ಪರಿಸ್ಥಿತಿ ಇರುತ್ತೋ ಅದಕ್ಕೆ ಹೊಂದಿಕೊಂಡು ಅಸಹಾಯಕತೆಯಿಂದ ಕುರಿಗಳಂತೆ ಬದುಕುವುದಲ್ಲ. ಉತ್ತಮ ಸಮಾಜ ಕಟ್ಟುವಲ್ಲಿ ತಮ್ಮ ಪಾಲಿನ ಕರ್ತವ್ಯವನ್ನು ಪರಿಣಾಮಕಾರಿಯಾಗಿ ಮಾಡಲು ಟೊಂಕಕಟ್ಟಿ ನಿಲ್ಲಬೇಕು. ಆಗ ಇಂದಲ್ಲ ಮುಂದಾದರೂ, ಮುಂದಿನ ಪೀಳಿಗೆಯಾದರೂ ಈಗಿರುವ ಸಾಮಾಜಿಕ ಪಿಡುಗಿನಿಂದ ಪಾರಾಗಿ, ನೆಮ್ಮದಿಯ ಉಸಿರಾಡಲು ಸಾಧ್ಯವಾಗುತ್ತದೆ.

## ವರ್ಗ ಹೋರಾಟ ಬೇಡ

ಶತಶತಮಾನಗಳಿಂದ ಸಮಾಜದಲ್ಲಿ ಜಾತಿಯ ಭಾವನೆ ಬೆಳೆದುಬಂದಿದೆ. ತಾವೇ ಮಾಡಿಕೊಂಡ ಈ ಜಾತಿಯಲ್ಲಿ ಕೆಲವರನ್ನು ಉಚ್ಚ ವರ್ಗದವರೆಂದೂ ಕೆಲವರನ್ನು ಕೆಳವರ್ಗದವರೆಂದೂ ಪರಿಗಣಿಸುತ್ತಿದ್ದರು. ಉಚ್ಚ ವರ್ಗದ ಜನ ಕಳವರ್ಗದ ಜನರನ್ನು ಕೀಳಾಗಿ ಕಾಣುತ್ತಾ, ಅವರ ಶೋಷಣೆಯನ್ನು ಮಾಡಿಕೊಮಡು ಬಂದಿದೆ. ಇಷ್ಟು ದಿನಗಳವರೆಗೆ ತಮ್ಮನ್ನು ಹೀನ ಸ್ಥಿತಿಯಲ್ಲಿಟ್ಟು ಮೇಲ್ವರ್ಗದ ಜನ ಶೋಷಿಸುತ್ತಾರೆಂಬ ಅರಿವು ಇಲ್ಲದಷ್ಟು ಕೆಳವರ್ಗದ ಜನ ಅಜ್ಞಾನದಲ್ಲಿದ್ದರು. ಅದರಿಂದಲೇ ಅವರಿಗೆ ಅಸಹನೀಯವಾದ ಪರಿಸ್ಥಿತಿಯಿದಮ ಮಾನಸಿಕ ನೋವು

ಇರಲಿಲ್ಲ. ಆದರೆ ಕಾಲಾನುಕ್ರಮದಲ್ಲಿ ಉಚ್ಚ ಕುಲದ ಉತ್ತಮ ವ್ಯಕ್ತಿಗಳು ಮನುಷ್ಯ ಮನುಷ್ಯನಲ್ಲೇ ತಾರತಮ್ಯ ಮಾಡುವುದನ್ನು ಜಾತಿಯ ಕಾರಣಕ್ಕಾಗಿ ಕೆಲವರನ್ನು ಅನೇಕ ರೀತಿಯ ಸೌಲಭ್ಯಗಳಿಂದ ವಂಚಿತರಾಗಿ ಮಾಡುವುದನ್ನು ಪ್ರತಿಭಟಿಸಿದರು. ಅಲ್ಲದೆ ಹಿಂದುಳಿದವರಲ್ಲಿ ವಿಚಾರಶಕ್ತಿಯನ್ನೂ ಮುಂದುವರೆದವರಲ್ಲಿ ತಾವು ಮಾಡುತ್ತಿರುವ ತಪ್ಪಿನ ಪ್ರಜ್ಞೆಯನ್ನೂ ಉಂಟುಮಾಡುವ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡರು. ಹಾಗಾಗಿ ಜನತೆಯಲ್ಲಿ ಈಗ ಸರಿಯಾದ ವಿಚಾರ ಮೂಡತೊಡಗಿದೆ.

ಇಂತಹ ಪರಿಸ್ಥಿತಿಯಲ್ಲಿ ಸಮಾಜದವರೆಲ್ಲರೂ ಸರಿಯಾದ ತಿಳುವಳಿಕೆಯಿಂದ ನಡೆದು, ಹಿಂದುಳಿದವರ ಕೈಹಿಡಿದು ತಮ್ಮೊಡನೆ ಮುಂದೆ ಕರೆದು ಕೊಳ್ಳುವಂತಹ, ಹಿಂದುಳಿದವರು ತಾವೂ ಮುಂದುವರಿಯಬೇಕೆಂದು ಉತ್ಸಾಹದಿಂದ ಪ್ರಯತ್ನಿಸುವಂತಹ ಸ್ನೇಹಪರ, ಪ್ರೀತಿಮಯ, ಪ್ರಗತಿದಾಯಕವಾದ ವಾತಾವರಣ ಉಂಟುಮಾಡುವುದು ಸರ್ವರ ಹಿತದೃಷ್ಟಿಯಿಂದಲೂ ಹಿತಕರವಾದ ದ್ವೇಷರಹಿತ ವಾತಾವರಣ್ಣ ಅಗತ್ಯ. ಅಂದು ಹಿಂದುಳಿದವರು ಅನ್ಯಾಯಕ್ಕೆ ಒಳಗಾಗುವಂತೆ ಮುಂದುವರಿದ ಜನ ಮಾಡಿದರೆಮದು, ಇಂದು ಅವರನ್ನು ಅನ್ಯಾಯಕ್ಕೆ ಒಳಗಾಗುವಂತಹ ವಾತಾವರಣ ನಿರ್ಮಿಸುವುದು, ದ್ವೇಷದ ಭಾವನೆಗೆ ಎಡೆಗೊಡುವಂತಹ ಮಾತನಾಡುವುದು ವರ್ಗವರ್ಗಗಳ ಬಡಿದಾಟಕ್ಕೆ ಪ್ರೋತ್ಸಾಹ ಕೊಟ್ಟಂತಾಗುತ್ತದೆ. ನಮಗೆ ಬೇಕಾದುದು ಎಲ್ಲರೂ ನೆಮ್ಮದಿ ಪಡೆಯುವ ಸ್ಥಿತಿಯೋ ಅಥವಾ ಅದ ಅನ್ಯಾಯಕ್ಕೆ ಪ್ರತೀಕಾರ ಮಾಡುವುದೇ ಮುಖ್ಯಗುರಿಯೋ ಎಂಬುದನ್ನು ಮೊದಲು ನಿರ್ಧಾರಿಸಬೇಕಾಗಿದೆ. ಸರ್ವರ ಹಿತ ಸಾಧಿಸುವುದು ಗುರಿಯಾಗಿದ್ದರೆ, ಮುಂದುವರಿದ ಜನಾಂಗವು ಹಿಂದುಳಿದ ತನ್ನ ಸೋದರರ ಬಗೆಗೆ ಪ್ರೀತ್ಯಾದರದಿಂದ, ಸ್ನೇಹದಿಂದ ಸಹಕರಿಸಿ ಅವರ ಏಳ್ಗೆಗೆ ಬೇಕಾದ್ದನ್ನು ಸ್ವಪ್ರೇರಣೆಯಿಂದ ಮಾಡಬೇಕು. ಹಿಂದುಳಿದವರು ಸಹ ಸದವಕಾಶವನ್ನು ಸದುಪಯೋಗಪಡಿಸಿಕೊಂಡು ಎಲ್ಲರ ಸ್ನೇ, ಸಹಕಾರಗಳೊಂದಿಗೆ ಮುಂದೆ ಬಂದು ಪ್ರವಾಹದೊಂದಿಗೆ ಕೂಡಿಕೊಳ್ಳಬೇಕು. ಅದಿಲ್ಲದೆ ಹಿಂದಿನ ಸಮಾಜದಲ್ಲಾದ ತಪ್ಪಿಗೆ ಇಂದಿನ ಮುಂದುವರಿದವರನ್ನು ಹಿಂದೆ ಹಾಕಿ, ಹಿಂದುಳಿದವರು ಮುಂದೆ ಹೋಗುವುದೇ ಸರಿಯಾದ ದಾರಿ ಎಂದು ಭಾವಿಸಿದಲ್ಲಿ ಇದೇ ರೀತಿಯ ಶೋಷಣೆಗೆ ಶತಶತಮಾನಗಳಿಂದ ಒಳಗಾದ ಇನ್ನೊಂದು ವರ್ಗವನ್ನೂ ನೆನಪಿಗೆ ತಂದುಕೊಳ್ಳಬೇಕಾಗುತ್ತದೆ.

ಮಹಿಳೆ ಈಗಿನ ಸಮಾಜದಲ್ಲಿ ಉತ್ತಮ ಸ್ಥಾನ ಪಡೆದಿದ್ದಾಳೆ ಎನ್ನುವುದು ಕೆಲವರ ಅನಿಸಿಕೆ. ಇದು ನಿಜವಲ್ಲ. ಇಂದಿಗೂ ಬಹಳಷ್ಟು ಮಹಿಳೆಯರು ಶೋಷಣೆಗೆ ಒಳಗಾಗಿ ಅಸಹಾಕತೆಯಿಂದ ಬದುಕುತ್ತಿದ್ದಾರೆ. ಹಿಂದಿನ ಕಾಲದಲ್ಲಿಯಂತೂ ಅವರ ಸ್ಥಿತಿ ದಾರುಣ. ಶತಶತಮಾನಗಳಿಂದ ಪುರುಷನು ಅವಳನ್ನು ತೊತ್ತಿನಂತೆ,

ಪ್ರಾಣಿಯಂತೆ ಒಂದು ಭೋಗವಸ್ತುವಿನಂತೆ ಕಾಣುತ್ತಾ ಬಂದಿದ್ದಾನೆ. ಆಕೆ ಅನುಭವಿಸಿರುವ ಮೂಕಶೋಕ ಮಾತುಗಳಲ್ಲಿ ವರ್ಣಿಸಲು ಅಸದಳ, ಆದರೆ ಕುಟುಂಬದಲ್ಲಿ, ಜೀವನದಲ್ಲಿ ಆಕೆಯ ಪಾತ್ರ ಎಂದಿನಿಮದಲೂ ಅತ್ಯಂತ ಮಹತ್ವವಾದದ್ದು. ಆದರೂ ಪುರುಷ ಜನಾಂಗ ಆಕೆಯನ್ನು ಬಹು ಹೀನವಾಗಿ ಕಾಣುತ್ತಾ ಬಂದಿದೆ ಎಂಬುದು ಎಲ್ಲರಿಗೂ ತಿಳಿದ ವಿಷಯ. ಕೆಲವೊಂದು ಉದಾತ್ತ ಹೃದಯದ ವಿಚಾರಪರರಾದ ಪುರುಷರು ಆಕೆಯ ಬಗ್ಗೆ ಸರಿಯಾಗಿ ವಿಚಾರ ಮಾಡಿ, ಆಕೆಯ ಪರಿಸ್ಥಿತಿ ಉತ್ತಮವಾಗುವವರೆಗೂ ಸಮಾಜದ ಏಳ್ಗೆಯಾಗುವುದಿಲ್ಲ ಎಂಬುದನ್ನು ಕಂಡುಕೊಂಡರು. ಆಕೆ ವಿಚಾರಪರಳಾಗಲು, ವಿದ್ಯಾವಂತಳಾಗಲು ಕೌಟುಂಬಿಕ ಹಾಗೂ ಸಾಮಾಜಿಕ ಜೀವನದಲ್ಲಿ ಸಮರ್ಥವಾದ ಪಾತ್ರವಹಿಸಲು ಬೇಕಾದ ವಾತಾವರಣ ಮೂಡಿಸಿದರು. ಆಕೆಯು ಎಚ್ಚೆತ್ತು ಎದ್ದುನಿಲ್ಲುವಂತೆ ಮಾಡಿದರು. ಕೈಹಿಡಿದು ಮುನ್ನಡೆಸಿದರು. ಪುರುಷರಿಗೂ ತಾವು ಮಾಡುತ್ತಿದ್ದ ಅನ್ಯಾಯದ ಅರಿವುಂಟ ಮಾಡಿ ಮಹಿಳೆಯು ಮುಂದುವರಿಯಲಿಕ್ಕೆ ಪ್ರೋತ್ಸಾಹ ಕೊಡುವಂತಹ ಮನೋಭೂಮಿಕೆ ನಿರ್ಮಿಸಿದರು. ಹಾಗಾಗಿ ಈಗ ಅನೇಕ ಮಹಿಳೆಯರ ವಿದ್ಯಾವಂತರಾಗುತ್ತಿದ್ದಾರೆ. ಜೀವನದ ಎಲ್ಲ ರಂಗದಲ್ಲಿಯೂ ಅವರು ಭಾಗವಹಿಸುತ್ತಿರುವುದನ್ನು ಕಾಣುತ್ತಿದ್ದೇವೆ. ಕೆಲವು ಪ್ರಜ್ಞಾವಂತ ಮಹಿಳೆಯರು ತಮ್ಮನ್ನು ಶೋಷಿಸುವುದಕ್ಕೆ ಆಸ್ಪದಕೊಡದಷ್ಟು ಎಚ್ಚರಗೊಂಡಿದ್ದಾರೆ. ಅನೇಕ ಪುರುಷರೂ ಸಹ ಮಹಳೆ ಹಿಂದುಳಿದಿರಬೇಕೆಂದು ಅಪೇಕ್ಷಿಸುವುದಿಲ್ಲ, ಇದು ಶುಭ ಲಕ್ಷಣ.

ಆದರೆ ಸ್ತ್ರೀ, ತಾನು ಶತ ಶತಮಾನಗಳಿಂದ ಪುರುಷನ ಶೋಷಣೆಗೆ ಒಳಗಾಗಿದ್ದೇನೆ. ಪುರುಷ ತನಗೆ ಅನ್ಯಾಯ ಮಾಡಿದ್ದಾನೆ, ಆದುದರಿಂದ ಈಗ ಅದರ ಸೇಡನ್ನು ಪುರುಷನ ಮೇಲೆ ತೀರಿಸಿಕೊಳ್ಳಬೇಕೆಂದು ಬಯಸುವುದು ಯೋಗ್ಯವಾದೀತೆ? ಮಹಿಳೆ ಅಂತಹ ನಡಾವಳಿಕೆಯನ್ನು ಕುಟುಂಬದಲ್ಲಿ ತೋರಿಸಿದರೆ ಮನೆಯ ಜನರಲ್ಲಿ ನೆಮ್ಮದಿ ಉಳಿಯಲು ಸಾಧ್ಯವೆ? ಪ್ರಗತಿ ಆದೀತೆ ? ಹಿಂದಿನ ಸಾಮಾಜಿಕ ಸ್ಥಿತಿಗೆ ಇಂದಿನ ಸಮಾಜದಲ್ಲಿ ಪ್ರತೀಕಾರ ತೆಗೆದುಕೊಳ್ಳುವುದೇ ನ್ಯಾಯವಾದ ಮಾರ್ಗ ಎನ್ನುವುದಾದರೆ ಈಗ ಮಹಿಳೆ ಪುರುಷನ ಮೇಲೆ ದಬ್ಬಾಳಿಕೆ ನಡೆಸಬೇಕೆಂದು ಅರ್ಥವಾಗುತ್ತದೆ. ಇದೆಲ್ಲ ಅನಾಗರೀಕತೆಯ ಲಕ್ಷಣ. ಸಾಮಾಜಿಕ ಜೀವನದಲ್ಲಿ ಸತತ ಬದಲಾವಣೆಗಳು ಆಗುತ್ತಿರುತ್ತವೆ. ಆಗೊಂದು ರೀತಿ ಇತ್ತು, ಈಗೊಂದು ರೀತಿ ಇದೆ. ಹಿಂದಿನ ತಪ್ಪುಗಳನ್ನರಿತು ಇಂದಿನ ಜೀವನವನ್ನು ಸರಿಗೊಳಿಸಿಕೊಳ್ಳುವಲ್ಲಿ ಜಾಣತನವಿದೆ. ಸಮಾಜದಲ್ಲಿ ಸೇಡಿನ ಕಿಡಿಯನ್ನು ಹತ್ತಿಸಿ ಸುಧಾರಣೆ ತರುವುದಕ್ಕಿಂತಲೂ ಅರುವಿನ ಪ್ರಜ್ಞೆಯನ್ನು ಮೂಡಿಸಿ ತರುವ ಸುಧಾರಣೆ ಶಾಶ್ವತವಾದದ್ದು ಮತ್ತು ಹಿತವಾದದ್ದು. ಹೆಣ್ಣುಮಕ್ಕಳ ಸ್ಥಿತಿ ಹಿಂದುಳಿದವರಿಗಿಂತಲೂ

ಹೀನಾಯವಾಗಿದ್ದುದು. ಅವರು ದ್ವೇಷ ತೀರಿಸಿಕೊಳ್ಳುವ ಮನೋಭಾವ ತೋರಿಸದಿದ್ದರೂ ಸುಧಾರಸುತ್ತಾ ನಡೆದಿದೆ. ಇನ್ನೂ ಉತ್ತಮಗೊಳ್ಳುವ ಶುಭಲಕ್ಷಣಗಳು ಕಾಣುತ್ತಿವೆ. ಈ ಸುಧಾರಣೆಗಾಗಿ ಮಹಳೆ, ಪುರುಷ ಪ್ರತಿಸ್ಪರ್ಧಿಯಾಗಿ ಕುಸ್ತಿಯ ಕಣಕ್ಕಿಳಿಯಲಿಲ್ಲ. ಪುರುಷನೊಡನೆ ಸಂತೋಷದಿಂದ ಸಹಬಾಳ್ವೆ ನಡೆಸುತ್ತಲೇ ಮುಂದೆ ಬರುತ್ತಿದ್ದಾಳೆ. ಇವಳ ಉದಾಹರಣೆಯನ್ನೇ ಮುಂದೆ ಮಾಡಿಕೊಂಡು ಹಿಂದುಳಿದ ಜನಾಂಗವು ಮುಂದೆ ಬರುವ ಸಮರ್ಥ ಕಾರ್ಯಕ್ರಮಗಳನ್ನು ಯೋಜಿಸಿಕೊಳ್ಳುವುದು ಒಳ್ಳೆಯದು. ಸೇಡಿನ ಮನೋಭಾವನೆಯಿಂದ ಒಳಿತಿಗಿಂತ ಕೆಡುಕೇ ಹೆಚ್ಚು. ಜನ ರೊಚ್ಚಿಗೆದ್ದರೆ ಸಮಾಜದ ಸರ್ವನಾಶವಾಗುವುದರಲ್ಲಿ ಸಂಶಯವಿಲ್ಲ. ದ್ವೇಷದ ದಳ್ಳುರಿಯಲ್ಲಿ ಎಲ್ಲರೂ ಬೆಂದುಹೋಗಬಹುದು. ಆದ್ದರಿಂದ ಜನರು, ಮುಂದುವರಿದವರು ಹಿಂದೆ ಬೀಳದಂತೆ, ಹಿಂದುಳಿದವರು ಮುಂದೆ ಬರುವಂತೆ ಒಬ್ಬರಿಗೊಬ್ಬರು ಸ್ನೇಹ ಸಹಕಾರ ನೀಡುವಂತೆ ಯೋಜನೆಗಳನ್ನು ಹಾಕಿಕೊಳ್ಳಬೇಕು – ವರ್ಗ ಹೋರಾಟ ನಿರ್ಮಾಣವಾಗುವಂತಹ ಕಾರ್ಯಕ್ರಮ ನಾಗರೀಕತೆಯ ವಿನಾಶಕ್ಕೆ ಹಾದಿ, ಸಂಸ್ಕೃತಿಗೆ ಕೊಡಲಿಪೆಟ್ಟು.

### ಹೆಣ್ಣಿನ ನೋವಿಗೆ ಯಾರು ಕಾರಣ ?

ಈಗಿನ ಕಾಲದಲ್ಲಿ ಅತ್ತೆಯಾಗಿರುವುದು ಕತ್ತೆಗಿಂತಲೂ ಕಡೆ – ಇದು ಇಂದಿನ ಅನೇಕ ಅತ್ತೆಯರ ಪ್ರಲಾಪ. ತಾವು ಸೊಸೆಯರಾಗಿ ಬಾಳಿದೆವು ಆದರೆ ತಮ್ಮ ಸೊಸೆಯರು ಬರುವಷ್ಟರಲ್ಲಿ ಕಾಲ ಬದಲಾವಣೆಯಾಗಿ ತಾವು ಅತ್ತೆಯರಗಲು ಅವ್ಕಾಕಾಶವಾಗಲಿಲ್ಲವಲ್ಲಾ ಎಂಬುದೇ ಅವರ ಅಸಹನೀಯ ನೋವಿಗೆ ಕಾರಣ.

ಹಿಂದೆ ಸೊಸೆಯ ಸ್ಥಿತಿ ದಾರುಣ. ಬಹುಪಾಲು ಮಂದಿ ಅತ್ತೆಯರು ಮನೆಗೆ ಸೊಸೆಯಾಗಿ ಬಂದವಳೂ, ಒಬ್ಬ ಹೆಣ್ಣು; ಆಕೆಗೂ ಆಸೆ–ಆಕಾಂಕ್ಷೆಗಳಿರುತ್ತವೆ; ತನ್ನ ಹುಟ್ಟಿದ ಮನೆ ಬಿಟ್ಟು ಸೇರಿದ ಮನೆಯನ್ನು ಬೆಳೆಸಲಿ ಏಕಾಕಿಯಾಗಿ ಬಂದವಳು; ಆಕೆ ಸುಖವಾಗಿದ್ದರೆ ತನ್ನ ಮಗನ ಬಾಳನ್ನೂ ಸುಖವಾಗಿ ಇಡಬಲ್ಲಳು; ಥಾನು ಹೇಗೆ ಈ ಮನೆಗೆ ಆಶಾಸೌಧ ಕಟ್ಟಿಕೊಂಡು ಬಂದೆನೋ ಹಾಗೆ ಇಂದು ಆಕೆ ಬಂದಿದ್ದಾಳೆ; ಆ ಸೌಧ ಕುಸಿದು ಬಿದ್ದರೆ ತಾನು ನೊಂದಂತೆ ತನ್ನ ಮಗನ ಹೆಂಡತಿಯೂ ನೊಂದಾಳು ಎಂಬ ಮಾನವೀಯ ವಿಚಾರವನ್ನು ಮರೆತು, ತನ್ನ ಮನೆಯ ಸುಖವನ್ನು ಸೂರೆಗೊಳ್ಳಲು ಬಂದ, ತನ್ನ ಮಗನ ಪ್ರೇಮವನ್ನು ಅಪಹರಿಸಲು ಬಂದ ಪರರ ಮನೆಯ ಹೆಣ್ಣು ಎಂದು ತಿಳಿದು ತೊತ್ತಿನಂತೆ ನಡೆಸಿಕೊಳ್ಳುತ್ತಿದ್ದಳು. ಈ ನಡೆ–ನುಡಿ ಹೆಣ್ಣನ್ನು ದೇವಿಯನ್ನಾಗಿಸುವ ಬದಲು ರಕ್ಕಸಿಯನ್ನಾಗಿಸುತ್ತಿತ್ತು.

ಗುಲಾಮತನ :

ಹಿಂದಿನ ಸಮಾಜ ವ್ಯವಸ್ಥೆಯಲ್ಲಿ ಈ ರಕ್ಕಸ ಪ್ರವೃತ್ತಿಗೆ ಪೂರಕವಾದ ಪರಿಸ್ಥಿತಿ ಮತ್ತು ಪದ್ಧತಿಗಳಿದ್ದವು. ಅತೀ ಚಿಕ್ಕ ವಯಸ್ಸಿನಲ್ಲಿಯೇ ಹುಡುಗಿಯ ಲಗ್ನವಾಗಿ ಬಿಡುತ್ತಿತ್ತು. ಲಗ್ನವಾಗುವಾಗ ಹೆಣ್ಣಿನ ತಂದೆತಾಯಿಗಳಿಗೆ ತೆರಕೊಟ್ಟು ಹೆಣ್ಣನ್ನು ಮಾಡಿಕೊಳ್ಳುತ್ತಿದ್ದರಾಗಿ ಆಕೆಯನ್ನು ಕೊಂಡುತಂದಂತಹ ಮನೋಭಾವದಿಂದ ಗಂಡನ ಮನೆಯವರು ಆಕೆಯೊಡನೆ ನಡೆದುಕೊಳ್ಳುತ್ತಿದ್ದರು. ಆಗಿನ ಕಾಲದಲ್ಲಿ ಹೆಣ್ಣು ಮಕ್ಕಳಿಗೆ ವಿದ್ಯೆ ಕಲಿಯುವುದಕಾಗಲೀ, ಲೋಕಾನುಬವ ಪಡೆಯುವುದಕ್ಕಾಗಲೀ, ಜ್ಞಾನಾಭಿವೃದ್ಧಿ ಮಾಡಿಕೊಳ್ಳಲಾಗಲೀ ಅವಕಾಶಗಳಿರುತ್ತಿರಲಿಲ್ಲ. ನಾಲ್ಕು ಗೋಡೆಗಳ ಮಧ್ಯೆ ಸಂಕುಚಿತ, ಸಾಂಪ್ರದಾಯಿಕ ವಾತಾವರಣದಲ್ಲಿ ಬೆಳೆದು ಬಾಳಬೇಕಾದ ಆಕೆ 'ಹೀಗಿರಬೇಕಾದುದೇ ತನ್ನ ಕರ್ತವ್ಯ, ತನ್ನ ಧರ್ಮ, ಇದೇ ತನ್ನ ಪರಮಾರ್ಥ ಸಾಧನೆ' ಎಂದುಕೊಂಡು ಪಾಲಿಗೆ ಬಂದದ್ದು ಪಂಚಾಮೃತ ಎಂಬ ಭಾವನೆಯಿಮದ ಮೂಕ ಪಶುವಿನಂತೆ ಬದುಕುತ್ತಿದ್ದಳು. ಎಷ್ಟೇ ತ್ರಾಸಾದರೂ ತನ್ನ ಹಣೆಯಬರಹ ಎಂದುಕೊಂಡು ಜೀವನ ನೂಕುತ್ತಿದ್ದಳು. ಬಹುಪಾಲು ಹೆಣ್ಣು ಮಕ್ಕಳ ಜೀವನ ಹಿಂದಿನ ಗುಲಾಮರ ಸ್ತಿತಿಗಿಂತ ಯಾವ ರೀತಿಯಲ್ಲೂ ಕಡಿಮೆ ಇರುತ್ತಿರಲಿಲ್ಲ. ಇಷ್ಟೆಲ್ಲಾ ಸಹಿಸಿಕೊಂಡು ಬದುಕುಳಿದಳೆಂದರೆ ವಯಸ್ಸಾದ ನಂತರ ತಾನೂ ಅತ್ತೆಯಾಗಬಹುದಿತ್ತು ಅಷ್ಟೆ.

ಅತ್ತೆಯ ದರ್ಪ ಅಷ್ಟು ನಿರಾತಂಕವಾಗಿ ನಡೆಯಲು ಅನೇಕ ಕಾರಣಗಳು ಇದ್ದವು.

ಆಗ ಸಾರಿಗೆ ಸಂಪರ್ಕಗಳ ಅನುಕೂಲ ಇರಲಿಲ್ಲ. ತವರಿಗೆ ಆಕೆ ಹೋಗುವುದು. ತವರಿನವರು ಮಗಳ ಮನೆಗೆ ಮೇಲಿಂದಮೇಲೆ ಬರುವುದು ಸುಲಭಸಾಧ್ಯವಾಗಿರಲಿಲ್ಲ. ಅಲ್ಲಿಯ ಸಮಾಚಾರ ಇಲ್ಲಿಯವರಿಗೆ ಇಲ್ಲಿಯ ಸಮಾಚಾರ ಅಲ್ಲಿಯವರಿಗೆ ಮುಟ್ಟುವುದೂ ಕಠಣವಾಗಿತ್ತು. ಜೊತೆಗೆ ಬೀಗರ ಮನೆಗೆ ಮೇಲಿಂದ ಮೇಲೆ ಹೋಗಿ ಬರುವುದು ಅಪಮಾನಕರವೆಂಬ ಭಾವನೆ. ಹೀಗಾಗಿ ಒಂಟಿಯಾಗಿ ಬಂದ ಹುಡುಗಿಯನ್ನು ಇವರು ಮರ್ಜಿ ಬಂದಂತೆ ನಡೆಸಿಕೊಳ್ಳಲು ಅವಕಾಶವಾಗುತ್ತಿತ್ತು. ಗಂಡಸರಿಗಾದರೂ ಅಷ್ಟೆ. ಈಗಿನಂತೆ ಆಗ ವಿಧವಿಧವಾದ ಉದ್ಯೋಗಾವಕಾಶಗಳಿರುತ್ತಿರಲಿಲ್ಲ. ಹಿರಿಯರು ಮಾಡಿದ ಆಸ್ತಿಯನ್ನು ಅವಲಂಬಿಸಿಯೇ ಮನೆತನದ ಪ್ರತಿಒಬ್ಬರೂ ಜೀವನ ನಡೆಸಬೇಕಾಗುತ್ತಿತ್ತು. ಈ ರೀತಿಯ ವ್ಯವಸ್ಥೆಯಲ್ಲಿ ಮನೆಯ ಹಿರಿಯ ವ್ಯಕ್ತಿ ಯಜಮಾನನಾಗಿಯೂ ಕುಟುಂಬದ ಇತರರೆಲ್ಲರೂ ಅವನ ಒಡೆತನಕ್ಕೆ ಒಳಗಾಗಿ ಅವನ ಆಜ್ಞೆಯನ್ನು ವಿಧೇಯತೆಯಿಂದ ಪಾಲಿಸಿಕೊಂಡು ಮನೆತನದ ಕೆಲಸ ಕಾರ್ಯಗಳಲ್ಲಿ ಸಹಕರಿಸುತ್ತಿದ್ದರು.

ಕಿರಿಯರಿಗಂತೂ ಅಲ್ಲಿ ಆಜ್ಞಾನುವರ್ತಿಗಳಾಗಿ ನಡೆಯುವುದನ್ನು ಬಿಟ್ಟು ಬೇರೊಂದು ಗತಿ ಇರಲಿಲ್ಲ. ಹೆಣ್ಣಿನ ಗೋಳನ್ನಂತೂ ಕೇಳುವವರೇ ಇರಲಿಲ್ಲ. ಮೂಕಪಶುವಿನಂತೆ ನೋವನ್ನೆಲ್ಲಾ ನುಂಗಿಕೊಂಡು ನೋವೇ ಜೀವನವೆಂಬಂತೆ ಬದುಕುತ್ತಿದ್ದರು. ಆದರೆ ಆಕೆಯು ನೆರಳಿನಲ್ಲಿ ಬೆಳೆದ ಮಕ್ಕಳಿಗೆ ಮಾತ್ರ ತಾಯಿಯ ಮೂಕ ಶೋಕ, ದಾರುಣ ಸ್ಥಿತಿ ಅರಿವಾಗಿ ಅವರಿಗೆ ತಾಯಿಯ ಬಗ್ಗೆ ಒಂದು ರೀತಿಯ ಮಮತೆ ಕಾಣುತ್ತಿದ್ದುದರಿಂದ ಆಕೆಗೂ ಅವರ ಬಗ್ಗೆ ಒಂದು ಗಾಢವಾದ ಪ್ರೇಮ ಮೂಡುತ್ತಿತ್ತು. ಹೀಗೆ ಆಗಿನ ಸಮಾಜದಲ್ಲಿ ತಾಯಿ–ಮಕ್ಕಳಲ್ಲಿ ಸಹಜವಾಗಿ ಇರುತ್ತಿದ್ದ ಪ್ರೇಮ ಇನ್ನೂ ಗಾಢವಾಗಿ ಬೇರು ಬಿಡುತ್ತಿತ್ತು. ಆದರೆ ತಾಯಿಯ ವ್ಯಕ್ತಿತ್ವ ಸ್ವಭಾವಿಕವಾದುದಿರುತ್ತಿರಲಿಲ್ಲ. ಹತ್ತಿಕ್ಕಲ್ಪಟ್ಟು ಜೀವಿಸಿದ ಆಕೆ ತನ್ನ ಅತೃಪ್ತಿ ಅಸಮಾಧಾನಗಳನ್ನು ತೋರಿಸಿಕೊಳ್ಳಲು ಅವಕಾಶವಿಲ್ಲದೆ ಅವಳಲ್ಲಿಯೇ ಅಡಗಿ ಆಕೆಯ ವ್ಯಕ್ತಿತ್ವದ ಮೇಲೆ ಅನಪೇಕ್ಷಣೀಯ ಪ್ರಭಾವ ಬೀರುತ್ತಿದ್ದುವು. ಭಿನ್ನವಾದ ವ್ಯಕ್ತಿತ್ವ ರೂಪುಗೊಳ್ಳುತ್ತಿತ್ತು. ಅಷ್ಟು ಹೊತ್ತಿಗೆ ಆಕೆ ಅತ್ತೆಯ ಪಟ್ಟ ಕಟ್ಟಿಕೊಳ್ಳಲು ಸಿದ್ಧಳಾಗಿ ತನನ್ ರೋಷ, ಸೇಡು, ದ್ವೇಷಸ ಎಲ್ಲವನ್ನೂ ಹೊಸದಾಗಿ ಬಂದ, ಅಸಹಾಯಕ ಸ್ಥಿತಿಯಲ್ಲಿದ್ದ ತನ್ನ ಸೊಸೆಯ ಮೇಲೆ ತೀರಿಸಿಕೊಳ್ಳುತ್ತಿದ್ದಳು.

**ತಾಯಿಯಿಂದಲೇ ದಾಂಪತ್ಯ ವಿರಸ !**

ಮೊದಲಿಂದಲೂ ತಾಯಿಯ ಬಗ್ಗೆ ಉದಾತ್ತ ಭಾವನೆ, ಆಳವಾದ ಪ್ರೀತಿಗಳನ್ನು ಬೆಳೆಸಿಕೊಂಡ ಮಕ್ಕಳಿಗೆ, ಹೊಸದಾಗಿ ಬಂದ ಹೆಂಡತಿಯ ಸದ್ಗುಣಗಳು ಬೆಳಕಿಗೆ ಬರುವ ಮೊದಲೇ ತಾಯಿ ಆಕೆಯಲ್ಲಿ ತೋರಿಸುವ ದೋಷಗಳೇ ಕಂಡು ಮೊದಲಿನಿಂದಲೇ ಆಕೆಯ ಬಗ್ಗೆ ಅಸಮಾಧನ ಮೊಳೆಯುತ್ತಿತ್ತು. ಅಪಮಾನದಿಂದ ಹೆಂಡತಿಯನ್ನು ಕಾಣುತ್ತಿದ್ದ ಅವನು ಆಕೆಯಲ್ಲಿ ಒಳ್ಳೆಯದನ್ನು ಕಾಣಲು ಸಾಧ್ಯವೇ ಇರಲಿಲ್ಲ. ಅಂತಹ ಪ್ರಯತ್ನವನ್ನೂ ಮಾಡುತ್ತಿರಲಿಲ್ಲ. ಜೊತೆಗೆ ಬೇರೆಲ್ಲಿಯೂ ಪ್ರೀತಿ ಸೆಲೆಯನ್ನೇ ಕಾಣದೆ, ಮಗನಿಂದ ಮಾತ್ರ ನೆಮ್ಮದಿ ಕಂಡ ತಾಯಿ, ಮಗನ ಪ್ರೀತಿ ತನಗೇ ಮೀಸಲಾಗಿರಬೇಕು. ಅದೆಲ್ಲಲಿ ಬೇರೊಂದು ಹೆಣ್ಣಿನ ಸ್ವತ್ತಾಗುವುದೋ ಎಂಬ ಭಯದಿಂದ, ಮಗನಿಗೆ ತನ್ನ ಮೇಲಿರುವ ಮಮತೆಯ ದುರ್ಲಾಭ ಪಡೆದು ಮೇಲಿಂದ ಮೇಲೆ ಹೆಂಡತಿಯಲ್ಲಿ ಅವನಿಗೆ ದೋಷಗಳೇ ಕಾಣುವಂತೆ ಪ್ರಯತ್ನ ಮಾಡುತ್ತಿದ್ದಳು. ಇಷ್ಟೇ ಅಲ್ಲದೆ ಆಕೆಯ ಸುಗುಣಗಳೂ ಅವನ ಕಣ್ಣಿಗೆ ಬೀಳದಷ್ಟು ಜಾಗರೂಕತೆ ವಹಿಸುತ್ತಿದ್ದಳು. ಹೆಂಡತಿಯಾದವಳು ತನ್ನ ಮಗನಿಗೂ ತನಗೂ ಬೇಕಾದುದೆಲ್ಲವನ್ನೂ ಮಾಡಿಕೊಂಡಿರಬೇಕೇ ಹೊರತು ಗಂಡನ ಪ್ರೀತಿಯ ಮಡದಿಯಾಗಿ ಬಾಳಬಾರದು. ಇದು ಅತ್ತೆಯಾದ ಹೆಣ್ಣಿನ ಗುರಿ. ಹೀಗೆ ತಾಯಿಯ ಪ್ರೇರಣೆಯಿಂದ ಪ್ರಚೋದಿತನಾದ ಗಂಡ ಮೊದಲಿನಿಂದಲೂ ತನ್ನಲ್ಲಿ ದೋಷಗಳನ್ನೇ

ಕಾಣುವುದರಿಂದ ಆತನ ಬಗ್ಗೆ ಆಕೆಗೆ ಅಸಮಾಧಾನ ಬೆಳೆದರೆ ಅಸಹಜವೇನಲ್ಲ. ಹೀಗೆ ತಾಯಿಯೇ ಮಗ–ಸೊಸೆಯರ ಅಸ ಅಸಮಾಧಾನಕ್ಕೆ ಕಾರಣವಾಗುತ್ತಿದ್ದಳು. ಹೀಗೆ ಮಾಡುವುದರಿಂದ ತನ್ನ ಮಗನ ಜೀವನವೇ ವಿರಸಮಯವಾಗುವುದೆಂಬುದರ ಕಡೆಗೆ ಆಕೆಯ ಲಕ್ಷ್ಯವಿಲ್ಲ. ತ್ಯಾಗಿ ಎನ್ನಿಸಿಕೊಂಡ ಹೆಣ್ಣು ಈ ವಿಷಯದಲ್ಲಿ ಅತ್ಯಂತ ಸ್ವಾರ್ಥಿಯಾಗಿ ಬಾಳಿರುವ ಉದಾಹರಣೆಗಳಿಗೇನೂ ಕೊರತೆಯಿಲ್ಲ.

**'ತೆರ' ಹೋಗಿ 'ವರದಕ್ಷಿಣೆ' :**

ಈ ಅಧ್ಯಾಯ ಈಚೀಚೆಗೆ ಮುಕ್ತಾಯವಾಗುತ್ತಾ ಬರುತ್ತಿದೆ. ಪರಿವರ್ತನಕಾಲ ಪ್ರಾರಂಭವಾಗಿ ತಿರುವು–ಮುರುವು ಪರಿಸ್ಥಿತಿ ಕಾಣುತ್ತಿದೆ. ಈ ತಿರುವು ಮುರುವಿಗೆ ಮಗನಾದವನು ನಿಷ್ಪಕ್ಷಪಾತ ದೃಷ್ಟಿ ಬೆಳೆಸಿಕೊಂಡು ವಿಶಾಲ ಮನಸ್ಸು ಬೆಳೆಸಿಕೊಂಡಿರುವುದು ಒಂದು ಕಾರಣವಾದರೆ, ಈಗಿನ ಸಾಮಾಜಿಕ ಹಿನ್ನೆಲೆಯೂ ಮತ್ತೊಂದು ಮುಖ್ಯ ಕಾರಣ. ಈಗ ಹೆಣ್ಣು ವಿದ್ಯಾವತಿಯಾಗಿದ್ದಾಳೆ. ಲೋಕಾನುಭವಕ್ಕೆ ಸಾಕಷ್ಟು ಅವಕಾಶಗಳಿವೆ. ಬಾಲ್ಯವಿವಾಹ ಪದ್ಧತಿ ನಿಂತು ಪ್ರೌಢ ವಿವಾಹ ರೂಢಿ ಪ್ರಚಲಿತವಾಗಿರುವುದರಿಂದ ಆಕೆಗೆ ವಿವೇಚನಾಶಕ್ತಿ ಬಂದಮೇಲೆಯೇ ಆಕೆಗೆ ವಿವಾಹವಾಗುತ್ತದೆ. ಈಗ ಆಕೆಯನ್ನು ಮೊದಲಿನಂತೆ ಅಸಹಾಯಕ ಸ್ಥಿತಿಯಲ್ಲಿಡಲು ಸಾಧ್ಯವಿಲ್ಲ. ಹುಡುಗನಿಗಾದರೂ ಅಷ್ಟೇ. ಉದ್ಯೋಗಾವಕಾಶಗಳು ಅನೇಕ, ತನ್ನ ಇಂದಿನ ಮುಂದಿನ ಜೀವನಕ್ಕೆಲ್ಲಾ ಕುಟುಂಬದವರನ್ನೋ, ಹಿರಿಯ ಆಸ್ತಿಯನ್ನೋ ಅವಲಂಬಿಸಬೇಕಾಗಿಲ್ಲ. ತನ್ನ ಕಾಲಮೇಲೆ ತಾನು ನಿಲ್ಲುವ ಶಕ್ತಿ ಪಡೆದು ಬಾಳಬೇಕಾಗಿದೆ. ಮನೆ–ಊರು ಬಿಟ್ಟು ಹೊರ ಜಗತ್ತಿನಲ್ಲಿ ಬದುಕಬೇಕು. ಉದ್ಯೋಗ ಸಿಕ್ಕಲ್ಲಿ ನೆಲೆ ನಿಲ್ಲಬೇಕು. ಬೇರೆಯವರ ಆಸರೆ ಇಲ್ಲದೆ ಜೀವನ ಪ್ರಾರಂಭಿಸಬೇಕು. ಅದಕ್ಕಾಗಿ ಕನ್ಯಾದಾತೃಗಳ ನೆರವು ನಿರೀಕ್ಷಿಸುತ್ತರೆ. ಹೀಗಾಗಿ ಹಿಂದಿನ ತೆರ ಪದ್ಧತಿ ಅಳಿಸಿ ಹೋಗಿ ವರದಕ್ಷಿಣೆ ತಲೆ ಎತ್ತಿ ನಿಂತಿದೆ. ಹಿಂದೆ ತೆರ ಕೊಟ್ಟು ಯಜಮಾನಿಕೆ ಪಡೆಯುತ್ತಿದ್ದರೆಂದ ಮೇಲೆ, ಓದಿಗೆ ಸಹಾಯ ನೀಡುವ, ನೌಕರಿ ದೊರೆಯಲು ಪ್ರಭಾವ ಬಿರುವ, ಬಾಳ್ವೆ ಪ್ರಾರಂಭಿಸಲು ಸಕಲ ವ್ಯವಸ್ಥೆ ಮಾಡಿಕೊಡುವ ತಂದೆ ತಾಯಿಗಳನ್ನು ಪಡೆದಿರುವ ಹೆಂಡತಿಯ ಬೆಲೆ ಗಂಡಿನ ಜೀವನದಲ್ಲಿ ಹೆಚ್ಚುವುದೂ ಸಹಜ. ಈಗಿನ ವಿಶಾಲ ಮನೋಭಾವದ ಸಾರಿಗೆ ಸಂಪರ್ಕದ ವ್ಯವಸ್ಥೆ ತವರಿನವರನ್ನು ಮಗಳ ಮನೆಯ ಸಮೀಪಕ್ಕೆ ತಂದುಬಿಟ್ಟಿದೆ.

**ಪೈಪೋಟಿಯೇ ದುಃಖಕ್ಕೆ ಮೂಲ :**

ಮೊದಲು ವ್ಯವಸಾಯವೇ ಮೂಲ ಉದ್ಯೋಗವಾಗಿದ್ದುದರಿಂದ ವರ್ಷದಲ್ಲಿ ಅನೇಕ ತಿಂಗಳು ಬಿಡುವು ದೊರೆತು ಮನೆಯ ಮುಖ್ಯ ವ್ಯವಸ್ಥೆಗಳನ್ನು ಗಂಡಸರೇ ನೋಡಿಕೊಳ್ಳುತ್ತಿದ್ದರು. ಆದರೆ ಈಗಿನ ಬಿಡುವಿಲ್ಲದ ದುಡಿಮೆಯಲ್ಲಿ ಸಂಜೆ ಮನೆಗೆ

ಬರುವ ಪುರುಷನಿಗೆ ಮನೆಯ ವ್ಯವಸ್ಥೆ ನೋಡಿ .ಕೊಳ್ಳಲು ಬಿಡುವಾಗಲೀ, ಮನಸ್ಸಾಗಲೀ ಇರುವುದಿಲ್ಲ. ಹಾಗಾಗಿ ಮನೆಯ ಯಜಮಾನಿಕೆಯನ್ನೆಲ್ಲಾ ಹೆಂಡತಿಯೇ ಮಾಡಬೇಕಾಧ ಪರಿಸ್ಥಿತಿ ಉಂಟಾಗಿದೆ. ಆದುದರಿಂದ ತಾಯಿಯ ಪಾತ್ರ ಈಗಿನ ಸಾಮಾಜಿಕ ಸನ್ನಿವೇಶದಲ್ಲಿ ಬಹು ಕಡಿಮೆ. ಹಿಂದೆ, ಹೆಂಡತಿಯ ಬಗ್ಗೆ ಮೆಚ್ಚುಗೆ ಮೂಡದಂತೆ ಎಚ್ಚರಿಕೆ ವಹಿಸುತ್ತಿದ್ದ ತಾಯಿಯಂತೆ ಇಂದು ತಾಯಿಯ ಬಗ್ಗೆ ಪ್ರೇಮ ಉಳಿಯದಂತೆ ಪ್ರಯತ್ನಿಸುತ್ತಿದ್ದಾಳೆ ಸೊಸೆ.

ಅಂತೂ ಆಗಲೂ ಈಗಲೂ ಹೆಣ್ಣು ಅತ್ತೆಯಾಗಿಯೋ ಸೊಸೆಯಾಗಿಯೋ ನೋವನ್ನನುಭವಿಸುವ ಸ್ಥಿತಿಗೆ ಬಹಳ ಮಟ್ಟಿಗೆ ಹೆಣ್ಣೇ ಕಾರಣಳಾಗಿದಾಳೆ. ಇವರಿಬ್ಬರ ಪೈಪೋಟಿಯೇ ಅವರನ್ನು ದುಃಖಕ್ಕೆ ಗುರಿಯಾಗಿಸುವುದಲ್ಲದೆ, ಮನೆಯ ವಾತಾವರಣವನ್ನೇ ಕಲುಷಿತಗೊಳಿಸುತ್ತದೆ. ಮಗಲಂತೆ ಸೊಸೆಯನ್ನು ಕಂಡ ತಾವೂ ನೆಮ್ಮದಿಯಿಂದಿದ್ದು ತಮ್ಮ ಮಕ್ಕಳು ಸುಖದಾಂಪತ್ಯ ಜೀವನ ನಡೆಸುವಂತೆ ಸಹಕರಿಸಿ ಬಾಳಿರುವ, ಬಾಳುತ್ತಿರುವ ತಾಯಂದಿರೂ ಇದ್ದಾರೆ. ತಾಯಿಯಂತೆ ಅತ್ತೆಯನ್ನು ಕಾಣುತ್ತಾ ಆಕೆಗೂ ನೆಮ್ಮದಿ ಕೊಟ್ಟು ಗಂಡನು ಆ ಕಡೆ ಸಾಯಲೋ ಈ ಕಡೆ ಬೇಯಲೋ ಎಂಬ ಉಭಯ ಸಂಕಟಕ್ಕೆ ಗುರಿಯಾಗದಂತೆ ಆನಂದದಿಂದ ಬಾಳುತ್ತಿರುವ ಜಣ ಸೊಸೆಯಂದಿರೂ ಇದ್ದಾರೆ.. ಆದರೆ ಪ್ರಸ್ತುತ ಪರಿಸ್ತಿತಿಯಲ್ಲಿ ಹಳೆಯ ಕಾಲದ ಅತ್ತೆಯರೂ ಆಧುನಿಕ ಕಾಲದ ಸೊಸೆಯರೂ ಇರುವ ಕಾಲವಾದುದರಿಮದ ಇಬ್ಬರ ವಿಚಾರಗಳೂ ಪೂರ್ವ–ಪಶ್ಚಿಮವಾದಂತಾಗಿ ಮಗ ಹೆಂಡತಿಯ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟರೆ ತಾಯಿ, ತಾಯಿಯ ಕಡೆಗಿದ್ದರೆ ಹೆಂಡತಿ ವ್ಯಥೆಗೆ ಗುರಿಯಾಗಿರಬೇಕಾಗಿದೆ. ಯಾರೊಬ್ಬರಿಗೆ ನೋವಾದರೂ ಸಂಸಾರಗಳಲ್ಲಿ ಸಮರಸ ಉಳಿಯದು.

ಅತ್ತೆ–ಸೊಸೆಯರು ಪ್ರೇಮದಿಂದಿದ್ದ ಮನೆಯಲ್ಲಿ ನೆಮ್ಮದಿಯ ವಾತಾವರಣ ಉಂಟಾಗಬೇಕಾದರೆ ಅತ್ತೆಯ ಬಗ್ಗೆ ತಾಯಿಯಂತಹ ಭಾವನೆ ಸೊಸೆಯೊಬ್ಬಳಿಗೆ ಇದ್ದರೂ ಸಾಲದು, ಸೊಸೆ ತನ್ನ ಮಗಳ ಸಮಾನ ಎಂಬ ಅರಿವು ಅತ್ತೆಯೊಬ್ಬಳಿಗಿದ್ದರೂ ಸಾಲದು. ಅಂತಹ ಯೋಗ್ಯ ಭಾವನೆ ಇಬ್ಬರಿಗೂ ಬೇಕು. ಇಬ್ಬರೂ ತಪ್ಪಿ ನಡೆಯದಂತೆ, ಯಾರಿಗೂ ಅನ್ಯಾಯವಾಗದಂತೆ ನೋಡಿಕೊಂಡು ಹೋಗುವ ಜಾಣ್ಮೆ, ಸಾಮರ್ಥ್ಯ ಮುಖ್ಯ ಪುರುಷನಿಗಿರಬೇಕು. ಆಗ ಈ ತಿರುವು ಮುರುವು ಪರಿಸ್ಥಿತಿ ಹತೋಟಿಗೆ ಬರುತ್ತದೆ. ನಂತರ ತಾಯಿಗೆ ದೊರೆಯಬೇಕಾದ ಗೌರವ ಹೆಂಡತಿಗೆ ಸಿಕ್ಕಬೇಕಾದ ಸ್ಥಾನ–ಆದರಗಳು ದೊರೆತು ಗಂಡ–ಗಂಡನಾಗಿ, ಮಗ–ಮಗನಾಗಿ ಉಳಿದು ಹೆಣ್ಣೇ ಹೆಣ್ಣನ್ನು ನೋಯಿಸುವ ಪರಿಸ್ಥಿತಿ ಮಾಯವಾಗುತ್ತದೆ.

ಸ್ವಾತಂತ್ರ್ಯ :

ಸ್ವಾತಂತ್ರ್ಯ ದೊರೆತು ಇಲ್ಲಿಗೆ ಇಪ್ಪತ್ತೂರು ವರುಷಗಳು ಗತಿಸಿದವು. ಈ ಅವಧಿಯಲ್ಲಿ ನಾವು ಸಾಧಿಸಿದುದೇನು? ಪರಕೀಯರ ಆಡಳಿತದಿಂದ ಬಿಡುಗಡೆ ಪಡೆದು ನಮ್ಮ ಜನತೆ ಈಗ ಹೇಗಿದೆ ಎನ್ನುವ ವಿಚಾರ. ಸ್ವಾತಂತ್ರ್ಯ ದಿನಾಚರಣೆಯ ದಿನವಂತೂ ಬಂದೇ ಬರುತ್ತದೆ.

ಸ್ವಾತಂತ್ರ್ಯಪೂರ್ವದಲ್ಲಿ ಭಾರತೀಯರ ಸ್ಥಿತಿ ಹೀನವಾಗಿತ್ತು. ಅಸಹಾಯಕವಾಗಿತ್ತು. ಪರಕೀಯರ ದಬ್ಬಾಳಿಕೆಯಿಂದ ಜನತೆ ಮುದುಡಿ ಕುಳಿತಿತ್ತು. ನಮ್ಮ ದೇಶದ ಸಂಪತ್ತಿನಿಂದ ಸುಖಪಡುತ್ತಿದ್ದ ಆ ಜನ. ನಮ್ಮ ಪ್ರಗತಿಯ ಬಗ್ಗೆ ಚಿಂತಿಸುತ್ತಿರಲಿಲ್ಲ. ಪ್ರಯತ್ನಿಸುತ್ತಿರಲಿಲ್ಲ. ಇದರಿಂದ ಜನತೆಯ ಹೃದಯ ಕುದಿಯುತ್ತಿತ್ತು. ಅಸಹಾಯಕತೆಯಿಂದ ಬೇಯುತ್ತಿತ್ತು. ಪರತಂತ್ರದ ಶೃಂಖಲೆಯಿಂದ ಬಿಡುಗಡೆ ಪಡೆಯಲು ಎಲ್ಲರೂ ಒಂದು ಗೂಡಿದರು. ಒಕ್ಕಟ್ಟಿನಿಂದ ಹೋರಾಡಿದರು. ಜಯಶೀಲ್ಯರಾದರು.

ಇಂದಿನ ಇವರು :

ನಮ್ಮ ದೇಶ ನಮ್ಮದೆ ಆದಾಗ ಪುನಃ ಹೊಡೆದಾಟ ಬಡಿದಾಟಗಳಾಗಿ ಮೊದಲಿನ ಸ್ಥಿತಿಯೇ ಬಾರದಿರಲೆಂದು ಸಣ್ಣಪುಟ್ಟ ರಾಜ್ಯಗಳ ಅಸ್ತಿತ್ವವನ್ನು ಕೊನೆಗಾಣಿಸಿದರು. ಆದರೆ ಆಡಳಿತ ಸೌಕರ್ಯಕ್ಕೆಮದು ಈ ವಿಶಾಲವಾದ ನಾಡನ್ನು ಅನೇಕ ಭಾಗಗಳನ್ನಾಗಿ ವಿಂಗಡಿಸಿದರು. ಭಾಷಾವಾರು ಪ್ರಾಂತ ರಚನೆಯಾದರೆ ಪ್ರತಿ ಪ್ರಾಂತದ ಸ್ಥಿತಿಯೂ ಎಲ್ಲಾ ಕ್ಷೇತ್ರಗಳಲ್ಲಿಯೂ ಉತ್ತಮಗೊಳ್ಳುವುದು, ಆಯಾ ಪ್ರಾಂತದ ಜನರು ಹುಮ್ಮಸ್ಸಿನಿಂದ ತಮ್ಮ ಪ್ರಾಂತದ ಸರ್ವತೋಮುಖವಾದ ಅಭಿವೃದ್ಧಿಗಾಗಿ ದುಡಿಯುವರೆಂಬ ಮಹತ್ವಾಕಾಂಕ್ಷೆಯಿಂದ. ದೇಶದ ಹಿರಿಯರು ಭಾಷಾವಾರು ಪ್ರಾಂತ ರಚನೆ ಮಾಡಿದರು. ಪ್ರತೀ ಪ್ರಾಂತ ಪ್ರಗತಿಯಾದರೆ ಇಡೀ ರಾಷ್ಟ್ರದ ಪ್ರಗತಿಯಾಗುವುದೆಂಬ ವಿಶಾಲ ದೃಷ್ಟಿಯೇ ಇದರ ರಚನೆಗೆ ಕಾರಣ. ಆದರೆ ಆದದ್ದೇನು? ಜನರ ಸಂಕುಚಿತ ಬಾವನೆ ಈ ಉದ್ದೇಶ ಸಫಲತೆಗೆ ಅಡ್ಡಬಂದಿತು. ರಾಷ್ಟ್ರದ ಐಕ್ಯತೆಗೆ ಕೊಡಲಿ ಪೆಟ್ಟನ್ನು ಹಾಕಿತು. ರಾಜ್ಯ-ರಾಜ್ಯಗಳಲ್ಲಿ ದ್ವೇಷ ಮೊಳೆತು ವಿವಾಗಳೆದ್ದಿವೆ. ಎಲ್ಲೆಲ್ಲಿಯೂ ಹಾಹಾಕಾರ, ಅನ್ಯಾಯ, ಸ್ವಾರ್ಥ, ಕುಟಿಲತೆ. ಬಿಡದೆ ನೇರವಾಗಿ ನಡೆದವರನ್ನು ಮೂರ್ಖರೆಂದು ಪರಿಗಣಿಸಲ್ಪಡುವಂತಾಗಿದೆ. ಕೆಲವರಿಗೆ ಸಕಲ ಸುಖ-ಭೋಗಗಳನ್ನು ಅನುಭವಿಸಲ್ಪಡುವಂತಾಗಿದೆ. ಕೆಲವರಿಗೆ ಸಕಲ ಸುಖ-ಭೋಗಗಳನ್ನು ಅನುಭವಿಸುವ ಅವಕಾಶ, ಮತ್ತೆ ಕೆಲವರಿಗೆ ತಿನ್ನಲೂ ಕೂಳಿಲ್ಲದೆ, ದುಡಿಯಲೂ ಮಾರ್ಗವಿಲ್ಲದೆ ಜೀವಿತವೆ ದುರ್ಭರವೆನನುವ ಸ್ಥಿತಿ. ಈ ದುಃಸ್ಥಿತಿಯನ್ನು ಬಹುಪಾಲು ಜನರು ಅನುಭವಿಸುತ್ತಿರುವಾಗ ಇದ್ದವರಾದರೂ

ಸಂತೋಷ ಅನುಭವಿಸಲು ಶಕ್ಯವೆ ? ಹೀಗಾಗಿ ಎಲ್ಲರಲ್ಲಿಯೂ ಅಶಾಂತಿ. ಅತೃಪ್ತಿ ಉಂಟಾಗಿದೆ. ಒಂದು ಪ್ರಾಂತವರನ್ನು ಮತ್ತೊಂದು ಪ್ರಾಂತದವರು ಪರಕೀಯರಂತೆ ಕಾಣಹತ್ತಿದ್ದಾರೆ.

**ರಾಜ್ಯಗಳ ಒಳ-ಹೊರಗೆ :**

ಇದು ಪ್ರಾಂತ್ಯ-ಪ್ರಾಂತ್ಯಗಳ ಪರಿಸ್ಥಿತಿಯಾದರೆ, ಪ್ರಾಂತ್ಯದ ಒಳಗಡೆ ನಡೆಯುತ್ತಿರುವುದೇನು ! ಪ್ರತಿಯೊಬ್ಬರಿಗೂ ಹಿತವಾದರೆ ಎಲ್ಲರ ಹಿತವೂ ಆಗುವುದೆಂಬ ಭಾವನೆಯ ಬುನಾದಿಯೇ ಬುಡಮೇಲಾಗಿದೆ. ಒಂದೇ ಪ್ರಾಂತದಲ್ಲಿಯ ಒಂದು ಗುಂಪಿನವರು ಮತ್ತೊಂದು ಗುಂಪಿನವರನ್ನು ದ್ವೇಷಿಸುವ, ಹತ್ತಿಕ್ಕುವ ಪ್ರಯತ್ನ ಸರ್ವೇ ಸಾಮಾನ್ಯವಾಗಿ ನಡೆಯುತ್ತಿದೆ ಎನ್ನಬಹುದು. ಇವರ ನಾಶವನ್ನು ಅವರು ಬಯಸುವದು, ಅವರ ನಾಶವನ್ನು ಇವರು ಬಯಸುವುದು ಇದರಿಂದ ಕೊನೆಗೆ ಸರ್ವರ ನಾಶವಾಗುವುದು. ಇಂತಹುದುನ್ನು ಬಿಟ್ಟು ಇವರ ಒಳಿತನ್ನು ಅವರು ಬಯಸಿ ಅವರ ಒಳಿತನ್ನು ಇವರು ಬಯಸಿದರೆ ಸರ್ವರ ಒಳಿತೂ ಆಗಬಹುದೆಂಬ ಸುಲಭ ಸತ್ಯ ಗೋಚರವಾಗದೆ ಅನೇಕ ಅನ್ಯಾಯಗಳಿಗೆ ಅವಕಾಶವಾಗಿದೆ. ಕನ್ನಡ ನಾಡನ್ನು ಉದಾರಣೆಗೆ ತೆಗೆದುಕೊಂಡರೆ ಇಲ್ಲಿಯೂ ಅದೇ ಪಾಡು.

**ಜಾತಿದ್ವೇಷ, ವ್ಯಕ್ತಿದೋಷ :**

ನಮ್ಮಲ್ಲಿ ಜಾತೀಯತೆ ತಾಂಡವವಾಡುತ್ತಿದೆ. ಈ ಕಾರಣದಿಂದಾಗಿ ಕನ್ನಡ ಜನತೆ ಗುಂಪುಗಾರಿಕೆಯಲ್ಲಿ ತೊಡಗಿದೆ. ಇದರಿಂದ ಅನೇಕ ಅನ್ಯಾಯಗಳು ಉಂಟಾಗಲು ಅವಕಾಶವಾಗಿದೆ. ಸಮಾಜದಲ್ಲಿ ಸ್ನೇಹಕ್ಕಿಂತ ಹೆಚ್ಚು ದ್ವೇಷಪೂರಿತ ವಾತಾವರಣ ತಲೆದೋರಿದೆ. ಒಂದು ಜಾತಿಯವರು ಮತ್ತೊಂದು ಜಾತಿಯವರನ್ನು ದ್ವೇಷಿಸಿ ಕೊನೆಗೆ ತಮ್ಮ ತಮ್ಮಲ್ಲಾದರೂ ಒಗ್ಗಟ್ಟಿನಿಂದ ಇದ್ದಾರೆನ್ನೋಣವೆ ? ಅದೂ ಇಲ್ಲ. ಒಳಪಂಗಡಗಳಲ್ಲಿ ಘರ್ಷಣೆ ಅಯೋಗ್ಯ ರೀತಿಯ ಸ್ಪರ್ಧೆ. ಕಡೆಗೆ ಈ ಸಂಕುಚಿತತೆ ಬರಬರುತ್ತ ಮನೆ-ಮನೆತನಗಳ ವ್ಯಕ್ತಿ-ವ್ಯಕ್ತಿಗಳ ದ್ವೇಷಕ್ಕೆ ಕಾರಣೌಆಗುವುದರಲ್ಲಿ ಅನುಮನವಿಲ್ಲ. ಹಿಂದಿನವರು ಜಾತಿಯ ಬಗ್ಗೆ ಬಹು ಅಭಿಮಾನಿಗಳಾಗಿದ್ದರು. ಜೊತೆಗೆ ಕಟ್ಟುನಿಟ್ಟಿನವರೂ ಆಗಿದ್ದರು. ಆದರೆ ಒಂದು ಜಾತಿಯವರು ಮತ್ತೊಂದು ಜಾತಿಯವರನ್ನು ದ್ವೇಷಿಸುತ್ತಿದ್ದ ಉದಾಹರಣೆಗಳು ಕಡಿಮೆ.

ಸ್ವಾರ್ಥಿಗಳಾದ ಕೆಲವರು ತಮ್ಮ ಸ್ವಾರ್ಥಸಾಧನೆಗಾಗಿ ಕೆಲವು ವಿಷ ಬೀಜಗಳನ್ನು ಸಮಾಜದಲ್ಲಿ ಬಿತ್ತಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಾರೆ. ಅದರ ಫಲವನ್ನು ಎಲ್ಲರೂ ಸೇವಿಸಬೇಕಾಗಿ ಬಂದು ಅದರ ಕಹಿಯನ್ನು ಬಹುಜನರು ಸವಿಯಬೇಕಾಗುತ್ತದೆ.

ಬಿತ್ತಿದವರಿಗೂ ಅದರ ಸವಿ ಒಂದಲ್ಲ ಒಂದು ಬಾರಿ ಹತ್ತಬಹದು ! ಆದರೆ ಆ ಕ್ಷಣದಲ್ಲಿ ಮಾತ್ರ ಸ್ವಾರ್ಥ ಸಾಧಕರಿಗೆ ಲಾಭವಾಗುತ್ತದೆ. ಆದರೆ ಆಗ, ಯಾವ ಗೋಜಿಗೂ ಹೋಗದೆ ತಮ್ಮ ಸ್ಥಿತಿಯಾಗುತ್ತದೆ. ತಾಯಿಯನ್ನು ಕಾಡಿಸದೆ ಸಮಾಧಾನವಾಗಿದ್ದುದರ ಪ್ರತಿಫಲ ಹೊಟ್ಟೆ ತುಂಬುವಷ್ಟೂ ಹಾಲಿಲ್ಲದೆ ಸಂಕಟಪಡಬೇಕಾದುದು. ಅತ್ತರೆ ಮಾತ್ರ ತಾಯಿ ಹಾಲೂಡಿಸುತ್ತಾಳೆ ಎಂಬ ಅನುಭವವಾದರೆ ಮಗು ಅಲುವ ಚಟವನ್ನು ಬೆಳೆಸಿಕೊಳ್ಳಬಹುದು. ನಂತರ ತಾಯಿಗೂ ಮಗುವಿನ ಕಾಟ–ಮಗುವಿಗೂ ಅಸಮಾಧಾನದ ದುಶ್ಚಟ. ಹಾಗೆಯೇ ಸಂಕುಚಿತ ಮನೋಭಾವ ಬೆಳೆಸಿಕೊಳ್ಳುವುದರಿಂದಲೇ ಲಾಭವಾಗುವ ಪರಿಸ್ಥಿತಿ ಇದ್ದರೆ, ಎಲ್ಲರೂ ಅದನ್ನೇ ಬೆಳೆಸಿಕೊಳ್ಳಬಹುದು. ಆಗ ಸಮಾಜದಲ್ಲಿ ಅನಪೇಕ್ಷಣೀಯವಾದ ಅತೃಪ್ತಿ, ಸಮಾಧಾಣ, ದ್ವೇಷ, ಅಸಹನೆ, ಮಾತ್ಸರ್ಯ ಮುಂತಾದ ದುಷ್ಟ ಪ್ರವೃತ್ತಿಗಳು ತಾಂಡವವಾಡತೊಡಗುತ್ತವೆ. ಆದ್ದರಿಂದ ಇದಕ್ಕೆ ಮೂಲವನ್ನು ಕಂಡುಹಿಡಿದು ನಾಶಗೊಳಿಸಬೇಕೇ ಹೊರತು, ಸಮಾಜ ಜೀವಿಗಳ ವಿನಾಶವಾಗಬಾರದು.

**ಏಕೀಕರಣ–ಛಿದ್ರೀಕರಣ :**

ಈ ಸಂಕುಚಿತತೆ ಬರೀ ಜಾತೀಯತೆಗೆ ಸೀಮಿತವಾಗಿಲ್ಲ. ಕರ್ನಾಟಕವೆಲ್ಲ ಒಂದಾಗಬೇಕೆಂದು ಬಯಸಿದ ಕನ್ನಡಿಗರು ಈಗ ವರ್ತಿಸುತ್ತಿರುವ ರೀತಿ ವಿಚಿತ್ರ, ಕರ್ನಾಟಕದ ಒಂದು ಭಾಗದವರು ಮತ್ತೊಂದು ಭಾಗದವರನ್ನು ಪರಕೀಯರಂತೆ, ಪರದೇಶದವರಂತೆ ನಡೆಸಿಕೊಳ್ಳುವ, ಕಾಣುವ, ಮಾತನಾಡುವ, ಟೀಕಿಸುವ ರೀತಿ ಕರ್ನಾಟಕದ ಏಕೀಕರಣ ಒಂದು ಭ್ರಮೆ ಎನ್ನಿಸುವಂತೆ ಮಾಡಿದೆ. ವಿಶಾಲ ಭಾವನೆ ಇದ್ದವರು, ಇಂತಹ ನಡತೆಗಳಿಂದ ಸಿಡಿದೇಳುವಂತಾಗುತ್ತದೆ. ಪೂರ್ವ–ಪಶ್ಚಿಮಗಳು ಒಂದುಕಡೆ ಸೇರುವುದು ಎಷ್ಟು ಅಶಕ್ಯವೋ ಅಷ್ಟೇ ಅಶಕ್ಯೆಂಬಂತೆ ಒಂದೇ ಪ್ರಾಂತ್ಯದ ಜನರು ಬದುಕಿದರೆ ಯಾರದಾದರೂ ಕಲ್ಯಾಣವಾಗಲು ಸಾಧ್ಯವೆ ? ಕನ್ನಡಿಗರಾದ ನಾವೆಲ್ಲ ಒಂದು ಎಂಬ ಭಾವನೆಯನ್ನೇ ಬೆಳೆಸಿಕೊಳ್ಳಲಾರದ ನಾವು, ನಾವೆಲ್ಲ ಭಾರತೀಯರು ಎಂಬ ರೀತಿಯಲ್ಲಿ ಬಾಳಬಲ್ಲವೆ ? ಅನೈಕ್ಯ ಭಾವನೆಗಳು ಸಂಪೂರ್ಣ ಬೇರು ಬಿಡುವ ಮೊದಲೇ ಎಚ್ಚತ್ತುಕೊಳ್ಳದಿದ್ದಲ್ಲಿ ಭಾರತ ಪುನಃ ಛಿದ್ರ-ವಿಚ್ಛಿದ್ರವಾಗುವುದು ಅಸಂಭವವೇನಲ್ಲ. ಎಲ್ಲರೂ ಬೆರೆತು ಬಾಳುವ ಸನ್ನಿವೇಶ ಬಂದಾಗ ಸ್ನೇಹವೃದ್ಧಿ ಮಾಡಿಕೊಳ್ಳುವ ಮಾರ್ಗ ಅನುಸರಿಸುವುದು ಒಳಿತು ಅದು ಬಿಟ್ಟು ದ್ವೇಷ ಭಾವನೆ ಮೂಡಿಸುವ, ಅನೈಕ್ಯತೆಯನ್ನು ಹೆಚ್ಚಿಸುವ ಮಾತುಗಳನ್ನು ಒಬ್ಬಿಬ್ಬರು ಆಡಿದರೂ ಅದು ಇಡೀ ವಾತಾವರಣವನ್ನೇ ಕಲಕಬಲ್ಲದು.

ತಮ್ಮದುದರ ಬಗ್ಗೆ ಒಂದು ರೀತಿಯ ಅಭಿಮಾನ ಸ್ವಾಭಾವಿಕ, ಆದರೆ

ಅಭಿಮಾನದ ಅತಿರೇಕದಿಂದ ಬೇರೆಯವರಿಗೂ ತಮ್ಮ ರೀತಿ-ನೀತಿಗಳ ಬಗ್ಗೆ ಅಷ್ಟೇ ಅಭಿಮಾನವಿರುತ್ತದೆ ಎಂಬುದನ್ನು ಮರೆತು ಮಾತಾಡಬಾರದು ತಮ್ಮದು ಒಳ್ಳೆಯದು ಎಂದು ಹೇಳಿಕೊಳ್ಳುವ ಉತ್ಸಾಹದಲ್ಲಿ ಇನ್ನೊಬ್ಬರು ಸರಿಯಲ್ಲಿ ಎಂದು ಟೀಕೆ ಮಾಡುವುದು ಸಮಂಜಸವಲ್ಲ. ತಮಗೆ ಅಭ್ಯಾಸವಿಲ್ಲದುದು ಸರಿಯಲ್ಲವೆಂದೆನಿಸುವುದು ಸಹಜ. ಹೊಸದಾಗಿ ಹಂಡನ ಮನೆಗೆ ಹೋದ ಹೆಣ್ಣು ಪ್ರಾರಂಭದಲ್ಲಿ ತನ್ನ ತವರು ಮನೆಯದೆಲ್ಲವೂ ಸರಿ, ಹೊಸ ವಾತಾವರಣದಲ್ಲಿರುವುದೆಲ್ಲ ಅವ್ಯವಸ್ಥೆ ಎಂದುಕೊಳ್ಳುವಳು. ಆದರೆ ವಾಸ್ತವವಾಗಿ ಎಲ್ಲದರಲ್ಲೂ ದೋಷವಿರುವುದಿಲ್ಲ. ಹಾಗೆಯೇ ಆಕೆಯ ತೌರಿನಲ್ಲಿದ್ದುದೆಲ್ಲವೂ ಒಳ್ಳೆಯದೂ ಆಗಿರುವುದಿಲ್ಲ. ಒಳಿತು-ಕೆಡುಕು ಎರಡುಕಡೆಯೂ ಇರುತ್ತದೆ. ಆದರೆ ಆಕೆಗೆ ಹೊಸದಕ್ಕೆ ಹೊಂದಿಕೊಳ್ಳುವ ಮನಸ್ಸುಬೇಕು. ಗಂಡನ ಮನೆಯವರಿಗೆ ಆಕೆಯಲ್ಲಿ ಅಭಿಮಾನ-ಆತ್ಮೀಯತೆ ಹುಟ್ಟಿಸುವಂತಹ ಅವಕಾಶ ಉಂಟುಮಾಡುವ ದೊಡ್ಡತನಬೇಕು. ಆಗ ಮಾತ್ರ ಎರಡರಲ್ಲಿಯೂ ಇರುವ ಒಳಿತು-ಕೆಡುಕುಗಲೂ ಸ್ಪಷ್ಟವಾಗಿ ಗೋಚರಿಸುತ್ತವೆ. ಸಮರಸ ಜೀವನ ಎಲ್ಲರಿಗೂ ದೊರೆಯುತ್ತದೆ. ಇದೇ ರೀತಿ ಸಮಾಜದಲ್ಲಿಯೂ ಅರಿತು ಬೆರೆತರೆ ಉಚಿತ ಮಾರ್ಪಾಟು ಖಂಡಿತ. ಹಾಗಲ್ಲದೆ ಒಬ್ಬರನ್ನೊಬ್ಬರು ಟೀಕಿಸುತ್ತ ಕುಳಿತರೆ ಎಲ್ಲರ ಸುಖ-ಶಾಂತಿ ಸಮಾಧಿಯಾಗುವುದು.

ದ್ವೇಷಭಾವನೆ ಜಾತಿ ಮತ್ತು ಪ್ರದೇಶ ಇಷ್ಟಕ್ಕೇ ಮುಕ್ತಾಯವಾಗಿಲ್ಲ. ಭಾಷೆ, ಊಟ, ಪದ್ಧತಿ ಇವುಗಳಲ್ಲೂ ಕಾಣುತ್ತಿದೆ. ಆಡುವ ಭಾಷೆ ಒಂದೇ ಆದರೂ ಒಂದೇ ಭಾಷೆಯಲ್ಲಿ ಅನೇಕ ಉಪಬಾಷೆಗಳಿರುತ್ತವೆ. ಅವುಗಳಲ್ಲಿ ಒಂದು ಹೆಚ್ಚು. ಮತ್ತೊಂದು ಕಡಿಮೆ ಎಂದು ಭಾವಿಸುವುದು ತಪ್ಪು. ಪ್ರತಿಯೊಂದು ಉಪಭಾಷೆಯೂ ಪರಿಸರದ ಅನೇಕ ಪ್ರಭಾವಗಳಿಂದ ಬೆಳೆದು ಬಂದಿರುತ್ತದೆ. ಅದರಲ್ಲಿ ಹೆಚ್ಚುವುದು- ಕಡಿಮೆಯಾಗುವುದು? ಒಳ್ಳೆಯದಾವುದು-ಕೆಟ್ಟದಾವುದು ? ಭಾಷೆಯ ಬಗ್ಗೆ ವಿಶಾಲವಾಗಿ ವಿವೇಚಿಷಿದರೆ ಸುಧಾರಿತ ಹಾಗೂ ಗ್ರಾಮ್ಯ ಎಂದು ವಿಭಜಿಸಬಹುದು ಅಷ್ಟೆ. ವಿದ್ಯಾವಂತ ಅಥವಾ ನಾಗರೀಕನಾದ ವ್ಯಕ್ತಿ ಭಾಷೆಯನ್ನು ಸ್ವಲ್ಪ ನಯವಾಗಿ ಉಪಯೋಗಿಸಬಹುದು. ಸುಧಾರಿತ ವಾತಾವರಣದಲ್ಲಿ ಬೆಳೆಯದಿದ್ದ ವ್ಯಕ್ತಿಯ ಮಾತು ಭಾಷೆಗಳೂ ಸ್ಥಾನದಲ್ಲಿ ಸಮವೆಂದು ಗಣಿಸಬಹುದು; ಹೆಚ್ಚು ಅಥವಾ ಕಡಿಮೆ ಎಂದು ತಿಳಿಯುವುದು ಸಮಂಜಸವಲ್ಲ. ವಿಶಾಲವಾದ ಲೋಕಾನುಭವ ಪಡೆದು ಆಳವಾಗಿ ವಿಚಾರ ಮಾಡಿದಾಗ ಇಂತಹ ಅಂತರವನ್ನು ಕಾಣುವುದು ಎಷ್ಟು ಬುದ್ಧಿಗೇಡಿತನ ಎನ್ನಿಸದಿರದು.

ಊಟ ಹಾಗೂ ನಡೆ-ನುಡಿಗಳಿಗೆ ಅಲ್ಲಿನ ಭೌಗೋಳಿಕ ಅಂಶಗಲನ್ನು

ಆಧರಿಸಿರುವ ಐತಿಹಾಸಿಕ ಘಟನೆಗಳೇ ಕಾರಣವಾಗಿರುತ್ತವೆ. ಆದುದರಿಂದ ಜಿಲ್ಲೆಯಿಂದ ಜಿಲ್ಲೆಗೆ ಭಾಷೆ, ರೀತಿ, ನೀತಿ, ಸ್ವಭಾವ, ರುಚಿ ಮುಂತಾದವುಗಳಲ್ಲಿ ಭಿನ್ನತೆ ಕಂಡು ಬರುತ್ತದೆ. ಹೀಗೆ ವ್ಯಕ್ತಿ ಸಾಮರ್ಥ್ಯಕ್ಕೆ ಮೀರಿದ ಸಂಗತಿಗಳು ಅವರ ಜೀವನ ರೀತಿಗೆ ಕಾರಣವಾಗಿರುವಾಗ ಒಬ್ಬರನ್ನೊಬ್ಬರು ಟೀಕಿಸುವುದು ಅರ್ಥಶೂನ್ಯವಾಗಿ ಕಾಣುತ್ತದೆ. ನಮ್ಮದಲ್ಲವೆಂಬ ಕಾರಣಕ್ಕಾಗಿ ಒಳಿತನ್ನು ಕಾಣಲಾರದ, ನಮ್ಮದಾದುದಕ್ಕಾಗಿ ಕೆಟ್ಟದರಲ್ಲೂ ಒಳಿತನ್ನು ಕಾಣುವ ಪ್ರವೃತ್ತಿ ಬೆಳೆಸಿಕೊಳ್ಳುವುದು ಅವಿಚಾರಿಗಳಿಗೆ ಸರಿತೋರಬಹುದೇ ಹೊರತು ವಿಚಾರವಂತರಿಗಲ್ಲ. ಎಲ್ಲಿಯೇ ಇರಲಿ, ಯಾರೇ ಆಗಲಿ, ಒಳ್ಳೆಯದನ್ನು ಮೆಚ್ಚಿ ಕೆಟ್ಟದನ್ನು ಖಂಡಿಸುವ ಮನೋಭಾವ ಸರಿ. ಯೋಗ್ಯರನ್ನು ಯಾವುದೋ ಕಾರಣದಿಂದ ಹತ್ತಿಕ್ಕಿದರೆ ಕೇವಲ ಒಬ್ಬ ವ್ಯಕ್ತಿಯ ಪ್ರಗತಿ ಹಾಳಾಗುವುದಿಲ್ಲ. ಇಡೀ ಸಮಾಜವನ್ನೇ ಅಧೋಗತಿಗೆ ನೂಕಿದಂತಾಗುತ್ತದೆ. ಏಕೆಂದರೆ ಒಂದು ಕೊಡ ಹಾಲನ್ನು ಕೆಡಿಸಲು ಒಂದೇ ಹನಿ ಹುಳಿ ಸಾಕು. ಹತ್ತಿಕ್ಕಲ್ಪಟ್ಟ ವ್ಯಕ್ತಿ ಸಮಾಜಘಾತುಕನಾಗಿರಬಹುದು. ಅಂತಹ ಒಬ್ಬ ಘಾತುಕ ವ್ಯಕ್ತಿ ಒಬ್ಬನಿದ್ದರೂ ಸಾಕು. ಅವನೇ ಅನೇಕ ಜನರ ಪ್ರಗತಿಯನ್ನು ಕುಂಠಿಸಲು ಕಾರಣನಾಗುತ್ತಾನೆ. ಹೀಗೆ ಅನ್ಯಾಯಕ್ಕೆ ಒಳಪಟ್ಟವರ ನಡವಳಿಕೆಯಿಂದ ಸಮಾಜದ ಮತ್ತಷ್ಟು ಜನರು ದುಷ್ಟವೃತ್ತಿಗೆ ಇಳಿಯುತ್ತಾರೆ. ಹೀಗೆ ಬೆಳೆಯುತ್ತಾ, ಬೆಳೆಯುತ್ತಾ ದುಷ್ಟರ ಸಂಖ್ಯೆ ಹೆಚ್ಚಿ ಇಡೀ ಮಾನವತೆಯ ವಿನಾಶಕ್ಕೆ ಕಾರಣವಾಗಬಹುದು. ವಿನಾಶದ ಹೋಮದಲ್ಲಿ ಬಲಿಯಾಗುವವರು ಕೇವಲ ಅವರೆ ಅಲ್ಲ, ನಾವೂ ಸಹ ಎಂಬ ಅರಿವು ಎಲ್ಲರಲ್ಲಿಯೂ ಮೂಡಬೇಕು. ಈಗ ಜನರಲ್ಲಿ ಸುವಿಚಾರಗಳಿಲ್ಲ ಎಂದು ಅರ್ಥವಲ್ಲ. ಎಲ್ಲರಿಗೂ ನೆಮ್ಮದಿಯ ವಾತಾವರಣವಿರಬೇಕೆಂಬ ಆಸೆ ಇದ್ದೇ ಇದೆ. ಕೆಟ್ಟದು–ಒಳ್ಳೆಯದರ ಪರಿವೆ ಇದೆ. ಆದರೂ ಈಚೆಗೆ ಯಾವುದೋ ಕಾರಣದಿಂದ ವಿಚ್ಛಿದ್ರ ಅನ್ನಿಸಿದರೂ ಪ್ರತಿಯೊಬ್ಬರೂ ಪರಿಸ್ಥಿತಿಯ ಯಾವುದೋ ಒತ್ತಡದಿಂದ ಅದರಲ್ಲಿ ಪ್ರವೃತ್ತರಾಗಿರುವ ಸ್ಥಿತಿ ಎಲ್ಲೆಲ್ಲಿಯೂ ಕಂಡುಬರುತ್ತದೆ. ಇದು ಹೀಗೆಯೇ ಬೆಳೆಯುತ್ತಾ ಹೋದರೆ, ಅನಪೇಕ್ಷಣೀಯ ದುಷ್ಟ ಪ್ರವೃತ್ತಿ ಸಮಾಜದಲ್ಲಿ ಹೆಚ್ಚಿ ಮಾನವತೆಯನ್ನು ಅಳಿಸಿ ದಾನವತೆಯನ್ನು ಪೋಷಿಸೀತೆಂಬ ತಳಮಳಕ್ಕೆ ಎಡೆಗೊಟ್ಟಿದೆ. ಅಣುಬಾಂಬು ಪ್ರಪಂಚವನ್ನೇ ಸುಡುವಷ್ಟು ಭಯಂಕರವಾದರೆ, ದುಷ್ಟ ಪ್ರವೃತ್ತಿ, ವ್ಯಕ್ತಿತ್ವವನ್ನೇ ನಾಶಮಾಡುವಷ್ಟು ಕ್ರೂರ.

## ತಾನು ನಿಂತಿರುವ ಕೊಂಬೆಯನ್ನು ತಾನೇ ಕಡಿದರೆ...

ವಿಶ್ವವೇ ಒಂದು ಕುಟುಂಬ, ಇಡೀ ಜನಾಂಗವೇ ಅದರ ಸದಸ್ಯರು ಎಂಬ ವಿಶ್ವಭ್ರಾತೃತ್ವವನ್ನೇ ಬೆಳೆಸಿಕೊಳ್ಳಬೇಕಾದ ಪರಿಸ್ಥಿತಿ ಈಗ ವಿಶ್ವದ ಜನ ಜಗತ್ತಿನ ಸುಖಶಾಂತಿಗಾಗಿ ರೂಪಿಸಿಕೊಂಡಿರುವ ವಿಶ್ವಸಂಸ್ಥೆಗೂ ಇಪ್ಪತ್ತೈದು

ತುಂಬಿತು. (೧೯೭೦ರಲ್ಲಿ ಬರೆದ ಲೇಖನ) ಹಿಂದಿನ ಅನಾಗರಿಕ ಪ್ರವೃತ್ತಿ ಅಳಿಸಿ, ನಾಗರಿಕ, ಸುಸಂಸ್ಕೃತ ಹಾಗೂ ಮಾನವೀಯ ನಡವಳಿಕೆಗಳು ಎಲ್ಲರಲ್ಲಿ ಮೂಡಬೇಕಾದ ಈ ಕಾಲದಲ್ಲಿ ಅಮಾನುಷ ಪ್ರವೃತ್ತಿ ಬೆಳೆಯಲು ಪ್ರೋತ್ಸಾಹಕ ವಾತಾವರಣವಿರುವುದು ದುರ್ದೈವದ ಸಂಗತಿ. ಎಲ್ಲರೊಡನೆಯೂ ಸ್ನೇಹವಾಗಿರುವದು, ಪ್ರೀತಿ ವಿಶ್ವಾಸಗಳ ವಾತಾವರಣದಲ್ಲಿ ಬೆಳೆಯುವುದು, ಉತ್ಸಾಹ ಮತ್ತು ಸಂತೋಷದಿಂದಿರುವುದು ಯಾರಿಗೆ ತಾನೆ ಬೇಡ ? ನಿನ್ನಿಂದ ನನ್ನ ನನ್ನಿಂದ ನಿನ್ನ ಸರ್ವನಾಶವಾಗುವುದು ಯಾರಿಗೆ ತಾನೆ ಹಿತವಾಗಲು ಸಾಧ್ಯ ? ಆದರೂ ಪರಿಸ್ಥಿತಿಯ ಪ್ರಭಾವದಿಂದ ಒಂದಲ್ಲ ಒಂದು ರೀತಿಯಾಗಿ ಎಲ್ಲರೂ ಸರ್ವನಾಶದ ಸಿದ್ಧತೆಗೆ ಸಹಾಯಕರಾಗುತ್ತಿರುವುದು ಎಲ್ಲೆಡೆ ಕಾಣಬರುತ್ತಿದೆ. ಆದರೆ ಇದನ್ನೆಂದೂ ಆಗಗೊಡಬಾರದು. ಇಂದು ಮಾನವರು ಆಗರೀಕತೆಯಲ್ಲಿ, ವಿದ್ಯೆಯಲ್ಲಿ, ತಿಳಿವಿನಲ್ಲಿ ಹಿಂದೆಂದೂ ಹೋಗದಷ್ಟು ಮುಂದೆ ಪ್ರಗತಿಪಥದಲ್ಲಿ ಸಾಗಿದ್ದಾರೆ. ಆ ವಿಶೇಷ ಬುದ್ಧಿ ತಾನು ನಿಂತ ಕೊಂಬೆಯನ್ನು ತಾನೇ ಕಡಿದುಕೊಳ್ಳುವಷ್ಟು ಮೂರ್ಖತನವನ್ನು ತಂದುಕೊಟ್ಟರೆ ಹಿಂದೆ ಇದ್ದ ಅನಾಗರಿಕ ಸ್ಥಿತಿಯೇ ಉತ್ತಮವಾಗಿತ್ತೇನೋ ಎಂದು ಅಂದುಕೊಳ್ಳುವಂತಾಗುತ್ತದೆ. ಆದುದರಿಂದ ಭಾರತೀಯರು ದುಷ್ಪ್ರವೃತ್ತಿಯ ದಹನ ಮಾಡಿ ಒಕ್ಕಟ್ಟಿನಿಂದ ಬಾಳುವುದನ್ನು ಬೆಳೆಸಿಕೊಳ್ಳಬೇಕು. ದೋಷಗಳಿದ್ದರೆ ಅವನ್ನು ಹೋಗಲಾಡಿಸಿಕೊಳ್ಳಬೇಕಷ್ಟೆ. ಸಾಧ್ಯವಾದರೆ ಭಾರತದ ಇಡಿತನವನ್ನು ಉಳಿಸಿ, ಬಡತನವನ್ನು ಅಳಿಸಿ ಸುಖಶಾಂತಿಗಳ ಬೀಡಾಗಿಸುವುದು ಸರ್ವರ ಕರ್ತವ್ಯ. ರಾಷ್ಟ್ರ-ನಾಡು-ನುಡಿಗಳ ಸಂಘಟಿತ ಪ್ರಯತ್ನವೆ ಭಾರತೀಯರೆಲ್ಲರ ಏಕೈಕ ಗುರಿಯಾಗಬೇಕು. ಆ ಗುರಿಯ ಸಾಧನೆಗಾಗಿ ಸರ್ವರೂ ಪ್ರಯತ್ನಿಸಬೇಕು. ಜನತೆಯ ಸುಖ-ಶಾಂತಿಗೆ, ರಾಷ್ಟ್ರ-ರಾಜ್ಯಗಳ ಪ್ರಗತಿಗೆ ಅಡ್ಡಿ ತರುವ ವ್ಯಕ್ತಿ-ಕೃತಿ-ಸಂಸ್ಥೆಗಳನ್ನು ಕಾಯಿದೆಯ ಒಲದಿಂದ ಹತ್ತಿಕ್ಕಬೇಕು. ಜನರ ಮನಸ್ಸನ್ನು ಕಟ್ಟುವ ಕೆಲಸ ಆಗಬೇಕು. ಸತ್ಯಕ್ಕೆ, ಧರ್ಮಕ್ಕೆ, ಕರ್ತವ್ಯಕ್ಕೆ ಮಾನ್ಯತೆ ಒದಗಬೇಕು. ಆಗತಾನೇ ನಾವು ಪಡೆದ ಸ್ವಾತಂತ್ರ್ಯಕ್ಕೆ ಅರ್ಥವಿದೆ. ಭವಿಷ್ಯವಿದೆ. ವಿಶ್ವ-ರಾಷ್ಟ್ರ-ನಾಡು ಜನತೆಗೆ ಶಾಂತಿ-ಪ್ರಗತಿ ಸಾಧ್ಯವಿದೆ.

## ಸ್ವಾತಂತ್ರ್ಯ

ಬಿಸಿಲಲ್ಲಿ ಬೆಂದ ಬಂದವನಿಗೆ ನೆರಳಿನ ಬೆಲೆಯು ಚೆನ್ನಾಗಿ ಅರ್ಥವಾಗುತ್ತದೆ. ಹಾಗೆಯೇ ಪರತಂತ್ರದಲ್ಲಿ ಬವಣೆಪಟ್ಟವರು ಸ್ವಾತಂತ್ರ್ಯದ ಮಹತ್ವವನ್ನು ಚನ್ನಾಗಿ ಅರಿತುಕೊಳ್ಳಬಲ್ಲರು. ಸ್ವಾತಂತ್ರ್ಯವಿಲ್ಲದ ವ್ಯಕ್ತಿಯ ಬದುಕು ಬದುಕಲ್ಲ. ಉತ್ತಮ ಮಾನಸಿಕ ಆರೋಗ್ಯಕ್ಕೆ ಅಗತ್ಯವಾದ ಅಂಶಗಳಲ್ಲಿ ಸ್ವಾತಂತ್ರ್ಯವೂ ಒಂದು. ಸ್ವತಂತ್ರವಾಗಿ ವಿಚಾರ ಮಾಡಲು ಅಸ್ಪದವಿಲ್ಲದಂತೆ ಬೆಳೆದ ಮನುಷ್ಯನಲ್ಲಿ ಪೂರ್ಣವ್ಯಕ್ತಿತ್ವ

ವಿಕಸನಗೊಳ್ಳಲಾರದು. ಸ್ವಾತಂತ್ರ್ಯ ಮನುಷ್ಯನ ಮೂಲಭೂತ ಅವಶ್ಯಕತೆಗಳ ಒಂದು ಮುಖ್ಯ ಅಂಶ.

ನಮ್ಮ ದೇಶ ಪರತಂತ್ರದಲ್ಲಿದ್ದಾಗ ನಾವು ಅನುಭವಿಸಿದ ಅನ್ಯಾಯಗಳೆಷ್ಟು ಸಹಿಸಿದ ಅಪಮಾನಗಳೆಷ್ಟು? ಅಸಹಾಯಕತೆಯಿಂದ ತಲ್ಲಣಿಸಿ, ತತ್ತರಿಸಿ ಹೋದ ಉದಾಹರಣೆಗಳಿಗೇನು ಕಡಿಮೆಯೇ? ಅದಕ್ಕಾಗಿಯೇ ಗೋಖಲೆ, ಟಿಳಕ, ಗಾಂಧೀಜಿ, ಸುಭಾಷಚಂದ್ರಬೋಸ್ ಮುಂತಾದ ಮಹನೀಯರು ದೇಶವನ್ನು ಎಂದರೆ ಭಾರತೀಯರನ್ನು ಪರತಂತ್ರದಿಂದ ಮುಕ್ತರನ್ನಾಗಿಸಿ ಸ್ವತಂತ್ರರನ್ನಾಗಿ ಮಾಡುವ ಸಲುವಾಗಿ ಪಟ್ಟ ಬವಣೆ ಅಷ್ಟಿಷ್ಟಲ್ಲ. ಅವರುಗಳು ತಮ್ಮ ಮನೆ-ಮಠ, ಮಡದಿ-ಮಕ್ಕಳನ್ನು ತೊರೆದು ಗುಂಡಿನ ಬಾಯಿಗೆ ಎದೆಯೊಡ್ಡಿ, ಧೈರ್ಯದಿಂದ, ಸಹನೆಯಿಂದ, ಹೋರಾಟ ಮಾಡಿ ಭಾರತಕ್ಕೆ ತಂದುಕೊಟ್ಟಿರುವ ಸ್ವಾತಂತ್ರ್ಯ ಅತ್ಯಮೂಲ್ಯ. ಅಷ್ಟು ಕಷ್ಟ ಪಟ್ಟು ನಮ್ಮ ದೇಶ ನಾಯಕರು ಸಂಪಾದಿಸಿದ ಸ್ವಾತಂತ್ರ್ಯದ ಬೆಲೆಯನ್ನು ಇಂದಿನ ಜನಾಂಗ ಅರಿಯದಾಗಿದೆ. ಆ ಮಹಾನೀಯರು ನಿಸ್ವಾರ್ಥತೆಯಿಂದ ಗಳಿಸಿದ ಸ್ವಾತಂತ್ರ್ಯವನ್ನು ಇಂದಿನವರು ಮೌಲ್ಯಗಳನ್ನು ಗಾಳಿಗೆ ತೂರುವ ಮೂಲಕ, ಸ್ವಾರ್ಥವೇ ಸರ್ವಸ್ವದಂತೆ ಬಾಳುವ ಮೂಲಕ, ಸಣ್ಣ, ಸಣ್ಣ ಕಾರಣಗಳಿಗಾಗಿ ಹೊಡೆದಾಡುತ್ತಾ, ಕೊಲೆ-ಸುಲಿಗೆ, ದರೋಡೆಗಳ ಮೂಲಕ ಚೆಲ್ಲಟವಾಡುತ್ತಾ ಪಡೆದ ಸ್ವಾತಂತ್ರ್ಯ ಮಣ್ಣುಗೂಡುವಂತೆ ಮಾಡುತ್ತಿದ್ದಾರೆ.

ಇಂದಿನ ಪೀಳಿಗೆಗೆ ಸ್ವಾತಂತ್ರ್ಯದ ಸರಿಯಾದ ಅರ್ಥವೇ ಗೊತ್ತಿಲ್ಲವೇನೋ ಎನ್ನಿಸುತ್ತದೆ. ತಮ್ಮ ಮನಬಂದಂತೆ ನಡೆಯುವುದನ್ನೇ ಸ್ವಾತಂತ್ರ್ಯವೆಂಧೂ ಬಗೆದಂತಿದೆ. ಲಂಗು-ಲಗಾಮಿಲ್ಲದ ಸ್ವಾತಂತ್ರ್ಯ ಸ್ವೇಚ್ಛಾಚಾರವಾಗುವುದೇ ಪ್ರಜೆಗಳಿಗೆ ಅನೇಕ ರೀತಿಯ ಸ್ವಾತಂತ್ರ್ಯಗಳಿರುವುದು ನಿಜ. ನಮ್ಮ ಈ ಪ್ರಜಾ ಪ್ರಭುತ್ವ ರಾಷ್ಟ್ರದ ಪ್ರಜೆ ತನಗೆ ಬೇಕಾದ ಯಾವುದೋ ಧರ್ಮದ ಅನುಯಾಯಿಯಾಗಲು ಸ್ವತಂತ್ರನಾಗಿರುತ್ತಾನೆ. ದೇಶದ ಯಾವುದೇ ಭಾಗದಲ್ಲಿ ಬೇಕಾದರೂ ವಾಸಿಸಬಹುದು. ತನಗೆ ಇಷ್ಟಬಂದ ಯಾವುದೇ ಉದ್ಯಗ ಕೈಗೊಳ್ಳಲು ಅವನಿಗೆ ಸ್ವಾತಂತ್ರ್ಯವಿದೆ. ತನಗೆ ಬೇಕಾದ ಶಿಕಷಣ ಪಡೆಯುವ ಹಕ್ಕೂ ಅವನಿಗುಂಟು. ತನ್ನ ಅಭಿಪ್ರಾಯಗಳನ್ನು ನಿರ್ಭಯವಾಗಿ ಬರಹದ ಮೂಲಕವಾಗಿಯಾಗಲೀ, ಮಾತಿನ ಮೂಲಕವಾಗಿಯಾಗಲೀ ಅಭಿವ್ಯಕ್ತಿಸುವ ಸ್ವಾತಂತ್ರ್ಯ ಪ್ರತಿಯೊಬ್ಬ ಪ್ರಜೆಗೂ ಇದೆ. ಹಾಗೆಂದ ಮಾತ್ರಕ್ಕೆ ತನಗೆ ಬೇಕಾದುದನ್ನೆಲ್ಲಾ ಮಾಡಲು, ತನಗನ್ನಿಸಿದುದನ್ನೆಲ್ಲಾ ಯಾವ ಅಂಕೆ-ಶಂಕೆ ಇಲ್ಲದೆ ಅಭಿವ್ಯಕ್ತಿಸಬಹುದು, ಅದನ್ನು ತಡೆಗಟ್ಟಲು ಸಾಧ್ಯವಿಲ್ಲ ಎಂದರ್ಥವಲ್ಲ. ಪ್ರತಿಯೊಬ್ಬ ಪ್ರಜೆಯೂ ಅರಿತಿಬೇಕು. ತಾನು ನಡೆಯುವ ರೀತಿ, ಅಭಿವ್ಯಕ್ತಿಸುವ ಅಭಿಪ್ರಾಯ ಬೇರೆಯವರ ಸ್ವಾತಂತ್ರ್ಯಕ್ಕೆ ಅಡ್ಡಿ ಮಾಡಬಾರದು.

ಬೇರೆಯವರ ಭಾವನೆಗಳನ್ನು ಕೆರಳಿಸುವಂತಿರಬಾರದು; ಅನ್ಯರ ನೋವಿಗೆ ಕಾರಣವಾಗಿರಬಾರದು ಎಂಬ ಮೂಲಭೂತ ಜ್ಞಾನವನ್ನು ಪ್ರತಿಯೊಬ್ಬ ಪೌರನೂ ಪಡೆದಿದ್ದರೆ ಅನೇಕ ಗೊಂದಲಗಳಿಗೆ, ವಿರಸಗಳಿಗೆ, ಅಹಿತರ ಘಟನೆಗಳಿಗೆ ಅವಕಾಸವಾಗುವುದಿಲ್ಲ.

ಸ್ವಾತಂತ್ರ್ಯವಿದ್ದಾಗಲೂ ವ್ಯಕ್ತಿ ಸ್ವಯಂ ನಿಯಂತ್ರಣ ಮಾಡಿಕೊಳ್ಳಲು ಸಮರ್ಥನಿರಬೇಕು. ಒಂದು ರಸ್ತೆಯ ಮೇಲೆ ನಡೆಯುವ ಅಥವಾ ವಾಹನವನ್ನು ನಡೆಸುವ ಸ್ವಾತಂತ್ರ್ಯ ಎಲ್ಲ ನಾಗರಿಕರಿಗೂ ಉಂಟು. ಹಾಗೆಂದು ವಾಹನವನ್ನು ರಸ್ತೆಯ ಮೇಲೆ ತೆಗೆದುಕೊಂಡು ಹೋಗುತ್ತಿರುವಾಗ, ಒಬ್ಬ ವ್ಯಕ್ತಿಯೋ, ಪ್ರಾಣಿಯೋ ಮತ್ತೊಂದು ವಾಹನವೋ ಅಕಸ್ಮಾತ್ತಾಗಿ ಎದುರಿಗೆ ಬಂದರೆ, ರಸ್ತೆಯ ಮಧ್ಯದಲ್ಲಿ ಹೋಗುವ ಸ್ವಾತಂತ್ರ್ಯ ವಾಹನ ನಡೆಸುವವನಿಗೆ ಇದ್ದರೂ ತನಗಾಗಲೀ, ಎದುರು ಬಂದವರಿಗಾಗಲೀ ಆಗಬಹುದಾದ ಅನಾಹುತವನ್ನು ತಪ್ಪಿಸಲೋಸುಗ, ವಾಹನವನ್ನು ಪಕ್ಕಕ್ಕೆ ಸರಿಸಿಕೊಂಡು ಸುರಕ್ಷಿತ ಮಾರ್ಗದಲ್ಲಿ ಒಯ್ಯಬೇಕಾಗುತ್ತದೆ. ಹಾಗೆ ಮಾಡದಿದ್ದರೆ ಆಗಬಹುದಾದ ಪರಿಣಾಮವನ್ನು ನಾವೆಲ್ಲಾ ಕಲ್ಪಿಸಿಕೊಳ್ಳಬಹುದು. ಇದೇ ರೀತಿ ನಾಗರಿಕತೆಗೆ ದೊರೆತಿರುವ ಇತರೆ ರಾಷ್ಟ್ರೀಯ ಸ್ವಾತಂತ್ರ್ಯದ ಹಕ್ಕುಗಳ ಬಗೆಗೂ ಅನ್ವಯವಾಗತ್ತದೆ. ಸ್ವಾತಂತ್ರ್ಯವನ್ನು ಇತಿ–ಮಿತಿಗಳ ಬಗ್ಗೆ ಯೋಚಿಸದೆ, ಲಂಗು–ಲಗಾಮಿಲ್ಲದ ಕುದುರೆಯಂತೆ ಓಡಿಸಿ, ಅದರ ಪರಿಣಾಮದ ಕಡೆಗೆ ವಿಚಾರ ಮಾಡದಿದ್ದರೆ ತಪ್ಪಾಗುತ್ತದ.ಎ ಖಿಂಂ ಟಣಛ್ಝಿ ಽ ಣಂಂ ಛಚಿಜ. ಅತಿಯಾದಾಗ ಅಮೃತವೂ ವಿಷವಾಗುತ್ತದೆ. "ನಮಗೆ ಸ್ವಾತಂತ್ರ್ಯವಿದೆ. ನಮಗೆ ತಿಳಿದಂತೆ ಮಾಡುತ್ತೇವೆ. ನಿಮಗೆ ಅದು ಹಿಡಿಸುವುದಿಲ್ಲವೆಂದು ನಮಗಿರುವ ಸ್ವಾತಂತ್ರ್ಯವನ್ನು ಏಕೆ ಮೊಟಕುಗೊಳಿಸಿಕೊಳ್ಳಬೇಕು" ಎಂಬುದು ಕೆಲವರ ವಾದ. ಆದರೆ ಅಗತ್ಯವಿಲ್ಲದೆ ಅಂಶಗಳಿಗಾಗಿ ಸ್ವಾತಂತ್ರ್ಯ ಬಳಕೆ, ಅದರಿಮದ ದುಷ್ಪರಿಣಾಮಗಳಿಗೆ ಕಾರಣವಾದರೆ, ಆ ವ್ಯಕ್ತಿ ಸ್ವತಂತ್ರ ವಿಚಾರದ ಸ್ವೇಚ್ಛಾಚಾರಿ ಎಂಬ ಅಪವಾದಕ್ಕೆ ಗುರಿಯಾಗುತ್ತಾನೆ. ಆದುದರಿಂದ ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಸಿಕ್ಕಿರುವ ಸ್ವಾತಂತ್ರ್ಯದ ದುರ್ಬಳಕೆಯಾಗದಂತೆ ಎಚ್ಚರಿಕೆ ವಹಿಸಿದರೆ ತನಗೂ ಕ್ಷೇಮ, ಇತರರಿಗೂ ಹಿತ. ವ್ಯಕ್ತಿಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯದ ಜೊತೆಗೇ ಜವಾಬ್ದಾರಿ, ಕರ್ತವ್ಯ, ಬಾಧ್ಯತೆಗಳೂ ಇರುತ್ತವೆಯೆಂಬುದನ್ನು ನಾವು ಮರೆಯಬಾರದು.

**ಸೀತೆ – ಮಹಾಮಾತೆ**

ಸೀತೆ ಎಂದೊಡನೆ ಪಂಚ ಮಹಾಪತಿವ್ರತೆಯರಲ್ಲಿ ಒಬ್ಬಳಾದ ಮಹಾಸತಿಯ ಚಿತ್ರ ನಮ್ಮ ಕಣ್ಣು ಮುಂದೆ ಬಂದು ನಿಲ್ಲುತ್ತದೆ. ನಂತರ ಮನಸ್ಸು ರಾಮಾಯಣವನ್ನೆಲ್ಲಾ ಅವಲೋಕಿಸಿ ಸೀತೆಯು ಬದುಕಿದ ರೀತಿಯನ್ನು ನೋಡುತ್ತದೆ. ಅಗ ಮ,ದುವೆಯಾದ

ದಿನದಿಂದ ಭೂಮಿಯೊಳಗೆ ಸೇರುವವರೆಗೆ ನೋವನ್ನೇ ಹಾಸಿಕೊಂಡು, ಚಿಂತೆಯನ್ನೇ ಹೊದ್ದು ಜೀವನದುದ್ದಕ್ಕೂ ಆದರ್ಶವನ್ನೇ ಬಾಳಿದ ಸತೀಶಿರೋಮಣಿಯ ವ್ಯಕ್ತಿತ್ವ ಗೋಚರವಾಗುತ್ತದೆ.

ಸೀತೆ ಜನಕರಾಜನ ಸಾಕುಮಗಳು. ಜನಕ ಅವಳನ್ನು ಅತ್ಯಂತ ಪ್ರೀತಿಯಿಂದ ಪೋಷಿಸಿ ಬೆಳೆಸಿದ. ಆಕೆಯ ವಿವಾಹವನ್ನು ಅಪ್ರತಿಮ ವೀರನೂ, ಗುಣಾನ್ವಿತನೂ, ಸೂರ್ಯವಂಶದ ರಾಜಕುಮಾರನೂ, ಅಯೋಧ್ಯೆಯ ಯುವ ರಾಜನೂ ಆದ ಶ್ರೀರಾಮನೊಡನೆ ಮಾಡುವುದಾಗಿ ನಿರ್ಧರಿಸಿದ. ಈ ನಿರ್ಧಾರದಿಂದ ಸೀತೆ ಸುಖದ, ವೈಭವದ, ಆನಂದದ ಅನೇಕ ಕನಸು ಕಂಡಿರಬೇಕು. ತನ್ನ ಅದೃಷ್ಟಕ್ಕೆ ಪವೇ ಇಲ್ಲವೆಂದು ಹಿಗ್ಗಿರಲೂಬಹುದು. ಶೂರನೂ, ಧೀರನೂ, ಸದ್ಗುಣನೂ, ಆದರ್ಶ ಪುರುಷನೂ, ಲೋಕದಲ್ಲೇ ಅಪರೂಪ ವ್ಯಕ್ತಿ ಎನಿಸಿದ ಶ್ರೀರಾಮನೇ ತನ್ನ ಪತಿಯಾಗಿ ಆಗುವನೆಂದು ತಿಳಿದಾಗ ಭಾಗ್ಯಕ್ಕೆ ಎಣೆಯಿಲ್ಲವೆಂದು ಆಕೆ ಭಾವಿಸಿರಲೂ ಸಾಕು.

ಮದುವೆಯ ಸಡಗರ ಮುಗಿಯುತ್ತಿದ್ದಂತೆಯೇ ದಶರಥನು ರಾಮನಿಗೆ ಪಟ್ಟಕಟ್ಟಬೇಕೆಂದು ನಿಧರಿಸಿದನು. ಪಟ್ಟಾಬಿಷೇಜಕದ ಸಿದ್ಧತೆಗಳು ಪ್ರಾರಂಭವಾದುದು. ಅರಮನೆಯಲ್ಲಿಯೇ ಅಲ್ಲದೆ ಇಡಿ ಅಯೋಧ್ಯೆಯಲ್ಲಿ ಸಡಗರದ ವಾತಾವರಣ ತುಂಬಿ ತುಳುಕಾಡುತ್ತಿತ್ತು. ಆಗ ಸೀತೆಯನ್ನು ಕುರಿತ ಜನರೆಲ್ಲರೂ, "ಹುಟ್ಟಿದರೆ ಸೀತೆಯಂತೆ ಅದೃಷ್ಟರಾಗಿ ಹುಟ್ಟಬೇಕು" ಎಂದು ಕೊಂಡಿರಬಹುದು. ಅಸುಂಯಾಪರರಾದವರು ಅವಳ ಅದೃಷ್ಟವನ್ನು ಕಂಡು ಕರುಬಿ ಸಂಕಟಪಟ್ಟಿರಲೂಬಹುದು. ಇಂತಹ ಸನ್ನಿವೇಶದಲ್ಲಿ ಬರಸಿಡಿಲಿನಂತಹ ಸುರ್ದದಿ ಎರಗಿಬಂದಿತು. ಪರ್ವತದ ತುಟ್ಟತುದಿಯನ್ನೇರಿದಾಗಕಾಲುಜಾರಿ ನೆಲ್ಕಕೆ ಅಪ್ಪಳಿಸಿಬಿದ್ದಂತೆ ಎಲ್ಲರೂ ಸಂತೋಷಸಗರದಲ್ಲಿ ಮುಳುಗಿದ್ದಾಗ ರಾಮನ ವನವಾಸದ ಸುದ್ಧಿ ಬಂದಿತು. ಸಾಧಾರಣ ಸ್ತ್ರೀ ಅಗಿದ್ದಿದ್ದರೆ ಅವಳ ಜಂಘಾಬಲವೇ ಉಡುಗಿಹೋಗುತ್ತಿತ್ತು, ದುಃಖದಿಂದ ತತ್ತರಿಸಿ ಹೋಗುತ್ತಿದ್ದಳು, ಬಿದ್ದು ಬೋರಾಡಿ ಅಳುತ್ತಿದ್ದಳು. ಆದರೆ ಸಾಧ್ವಿಯಾದ ಸೀತೆ ಸುಖ, ದುಃಖ ಎರಡನ್ನೂ ಸಮನಾಗಿ ಸ್ವೀಕರಿಸಿದಳು. ಶ್ರೀರಾಮನು ಪಿತೃವಾಕ್ಯ ಪರಿಪಾಲನೆ ಮಾಡುವಲ್ಲಿ ಸಂತೋಷದಿಂದ ಸಹಕರಿಸಿದಳು. ಪತಿಯ ನೆರಳಿನಂತೆ ಅವನೆಲ್ಲ ಮಾರ್ಗದಲ್ಲೂ ಅನುಸರಿಸಿ ಹೋಗುವುದು ಪತ್ನಿಯ ಕರ್ತವ್ಯವೆಂದು ಬಗೆದು ಮಾರ್ಗದಲ್ಲೂ ಅನುಸರಿಸಿ ಹೋಗುವುದು ಪತ್ನಿಯ ಕರ್ತವ್ಯವೆಂದು ಬಗೆದು ಅವನೊಡನೆ ಹದಿನಾಲ್ಕು ವರ್ಷದ ವನವಾಸಕ್ಕೆ ಸಿದ್ಧಳಾಗಿ ಹೊರಟಳು. ಅವಳು ಮನಸ್ಸು ಮಾಡಿದ್ದರೆ ಅರಮನೆಯಲ್ಲಿಯೇ ಇರಬಹುದಿತ್ತು. ತೌರುಮನೆಗೆ ಹೋಗಬಹುದಿತ್ತು.

ಅರಮನೆಯಲ್ಲಿ ರಾಜಭೋಗಗಳನ್ನು ಅನುಭವಿಸುತ್ತ ರಮನ ನಿರೀಕ್ಷೆಯಲ್ಲಿ ಕಾಲ ನೂಕಬಹುದಿತ್ತು. ಆದರೆ ಆಕೆ ಪತಿಯೊಡನಿರುವ ಅರಣ್ಯವಾಸವೇ ಅರಮನೆವಾಸವೆಂದು ಅವನಿಲ್ಲದ ಅರಮನೆಯೇ ಅರಣ್ಯವಾಸವೆದು ಬಗೆದು ಸುಖ, ಸಂಪತ್ತುಗಳನ್ನು ತ್ಯಜಿಸಿ ನಾರುಮಡಿಯುಟ್ಟು ರಾಮನನ್ನು ನೆರಳಿನಂತೆ ಹಿಂಬಾಲಿಸಿದಳು.

ಅರಣ್ಯದಲ್ಲಿ ನಾನಾ ರೀತಿಯ ಕಷ್ಟಗಳನ್ನು ಅನುಭವಿಸಬೇಕಾಯ್ತು. ಆದರೂ ರಾಮ ಜೊತೆಯಲ್ಲಿದ್ದುದರಿಂದ ಅವುಗಳನ್ನೆಲ್ಲಾ ಸಂತೋಷದಿಂದಲೇ ಅನುಭವಿಸಿದಳು. ಆದರೆ ರಾವಣನು ಆಕೆಯನ್ನು ಮೋಸದಿಂದ ಅಪಹರಿಸಿ ಲಂಕೆಯಲ್ಲಿಟ್ಟು ತನ್ನ ಅರಸಿಯಾಗಬೇಕೆಂದು ಬೆನ್ನು ಹತ್ತಿದಾಗ ಅವಳ ಜೀವನ ಆತಂಕಪೂರಿತ. ಯಾವುದೇ ಅಂಶಕ್ಕೂ ಒಳಗಾಗದೆ ಧ್ಯಾನನಿರತಳಾಗಿ ರಾಮನ ಬರುವನ್ನು ಆತ್ಮವಿಶ್ವಾಸದಿಂದ ನಿರೀಕ್ಷಿಸುತ್ತಾ ಬಂದ ಆಪತ್ತುಗಳನ್ನೆಲ್ಲಾ ಎದೆಗುಂದದೆ ಧೈರ್ಯವಾಗಿ ದೃಢಮನಸ್ಸಿನಿಂದ ಎದುರಿಸುತ್ತಾಳೆ. ಆಕೆಯ ಆತ್ಮಶಕ್ತಿಯ ಬಲದ ಪ್ರಭಾವವೋ ಎಂಬಂತೆ ರಾಮ ರಾವಣರಿಗೆ ಯುದ್ಧವಾಗಿ, ಯುದ್ಧದಲ್ಲಿ ರಾವಣ ಹತಗೊಂಡ ಸೀತೆ ರಾಮನನ್ನು ಕೂಡಿಕೊಂಡುದನ್ನು ಓದಿದಾಗ ಓದುಗರಿಗೆ ಒಂದು ರೀತಿಯ ಸಂತೋಷವಾಗುತ್ತದೆ. ಸಮಾಧಾನದ ನಿಟ್ಟುಸುರು ಹೊಮ್ಮುತ್ತದೆ.

ಪತಿವ್ರತೆಯಾದ ಸೀತೆ ಮೃದುಭಾಷಿಣಿ. ಒಳಿತೇ ಮೈವೆತ್ತಂತಹ ಪರಿಶುದ್ಧತೆ, ಪವಿತ್ರತೆಗಳೇ ಮೂರ್ತಿವೆತ್ತಂತ ಮಾನಿನಿ. ಆಕೆಯ ಅದರ್ಶ ಕಷ್ಟಸಹಿಷ್ಣುತೆ, ಧೈಯ, ಸಮಾಧಾನ, ವಿವೇಕ, ಬುದ್ಧಿಮತ್ತೆ ಸಾಹಿತ್ಯದ ವಿವರಣೆಗೂ ಮಿಗಿಲು, ಇಂತಹ ದಿವ್ಯ ವ್ಯಕ್ತಿತ್ವದ ಆಕೆ ಒಮ್ಮೆ ಮಾತ್ರ ವಿವೇಕ ಮೀರಿದಂತೆ ಮಾತನಾಡುತ್ತಾಳೆ. ಮಾರೀಚನ ಮೋಸಕ್ಕೆ ರಾಮ ಒಳಗಾದಾಗ ರಾಮ ಅಪಾಯಕ್ಕೆ ಗುರಿಯಾಗಿದ್ದಾನೆಂದೂ ಸೀತೆ ತಿಳಿದು ಲಕ್ಷ್ಮಣನನ್ನು ಅವನ ಸಹಾಯಕ್ಕೆ ಹೋಗಲು ಹೇಳುತ್ತಾಳೆ. ಸೀತೆಯೊಬ್ಬಳನ್ನೇ ಬಿಟ್ಟು ಹೋಗುವುದಕ್ಕೆ ಲಕ್ಷ್ಮಣ ಒಪ್ಪುವುದಿಲ್ಲ. ರಾಮನಿಗೆ ಅಪಾಯವಾದೀತೆಂಬ ದಿಗಿಲಿನಲ್ಲಿ ಸೀತೆ ವಿವೇಕವನ್ನು ಕಳೆದುಕೊಂಡ ರೀತಿಯಲ್ಲಿ ಲಕ್ಷ್ಮಣನಿಗೆ ಮಾತನಾಡುತ್ತಾಳೆ. ಇದೊಂದು ಸನ್ನಿವೇಶವನ್ನು ಬಿಟ್ಟರೆ ಆಕೆ ಎಲ್ಲ ಪ್ರಸಂಗಗಳಲ್ಲೂ ಅತ್ಯಂತ ಆದರ್ಶ ರೀತಿಯಲ್ಲಿ ವರ್ತಿಸಿದ್ದಾಳೆ.

ಅನೇಕ ವರ್ಷ ಜೊತೆಗೂಡಿ ಬಾಳಿ ಅವಳನ್ನು ಅರ್ಥಮಾಡಿಕೊಂಡ ಮೇಲೂ ರಾಮನು ಗರ್ಭಿಣಿಯಾದ ಸೀತೆಯನ್ನು ಸಾಮಾನ್ಯ ಪ್ರಜೆಗಳ ಮಾತಿಗೆ ಬೆಲೆಕೊಟ್ಟು ನಿರ್ದಯನಾಗಿ ಕಾಡಿಗೆ ಕಳಿಸಿಬಿಡುತ್ತಾನೆ. ಆಗಲೂ ಆಕೆ ರಾಮನ ಮೇಲೆ ಕೋಪಗೊಳ್ಳದೆ ದುಃಖವನ್ನು ಅನುಭವಿಸುತ್ತ, "ರಾಘವನದು ತಪ್ಪಲ್ಲ ಇದು ತನ್ನದೇ ದುರಾದೃಷ್ಟ" ಎಂದು ತನ್ನನ್ನೇ ಹಳಿದುಕೊಂಡು ಮನಸ್ಸನ್ನು ಗಟ್ಟಿಮಾಡಿಕೊಂಡು

ಕರ್ತವ್ಯ ನಿರ್ವಹಿಸುತ್ತಾಳೆ. ಋಷ್ಯಾಶ್ರಮದಲ್ಲಿ ಲವ, ಕಶರಿಗೆ ಜನ್ಮವಿತ್ತು, ವಾಲ್ಮೀಕಿಗಳ ಮಾರ್ಗದರ್ಶನದಲ್ಲಿ ಸೂರ್ಯವಂಶದ ಅರಸು ಕುಮಾರರಿಗೆ ಬೇಕಾದ ಶಿಕ್ಷಣ ಕೊಡಿಸುತ್ತ, ಮುಂದೆ ಬರಬಹುದಾದ ಸುದಿನಗಲ ಹಾದಿಕಾಯುತ್ತಾ ಇರುತ್ತಾಳೆ.

ರಾಮನ ಸ್ವಮೇಧ್ಯಾಗದ ಕುದುರೆಯನ್ನು ಲವ-ಕುಶರು ಕಟ್ಟಿ ಹಾಕಿದಾಗ ರಾಮನು ತನ್ನ ಮಕ್ಕಳೆಂಬ ತಿಳುವಳಿಕೆಯಿಲ್ಲದೆ ಅವರೊಡನೆ ಯುದ್ಧ ಮಾಡುತ್ತಾನೆ. ಲವ-ಕುಳರು ತಂದೆಯ ಪರಿಚಯವಿಲ್ಲದುದರೀಮದ ಅವನೊಡನೆಯೇ ಶೌರ್ಯದಿಮದ ಹೋರಾಡುತ್ತಾರೆ. ಸೀತೆ ಬಂದ ಪ್ರಸಂಗದಲ್ಲಿ ನಿಜಾಂಶ ವ್ಯಕ್ತವಾಗುತ್ತದೆ. ನಂತರ ಸೀತೆಯನ್ನು ಅರಮನೆಗೆ ಕರೆತರುವ ಪ್ರಸಂಗದಲ್ಲೂ, ಪ್ರಜೆಗಳಿಗೆ ನಂಬಿಕೆ ಹುಟ್ಟಿಸುವ ಸಲುವಾಗಿ ಸಾರ್ವಜನಿಕವಾಗಿ ಅಗ್ನಿ ಪರೀಕ್ಷೆಗೆ ಒಳಗಾಗಿ ಸೀತೆ ತನ್ನ ಪಾವಿತ್ರತೆಯನ್ನು ಸಾಧಿಸಿ ತೋರಿಸಬೇಕೆಂದು ಹೇಳುತ್ತಾನೆ. ಆಗ ಸೀತೆಗಾದ ದುಃಖಕ್ಕೆ, ಅಪಮಾನಕ್ಕೆ ಪಾರವಿಲ್ಲ. ಇಷ್ಟೆಲ್ಲ ಪ್ರಸಂಗಗಳಲ್ಲೂ ಅತ್ಯಂತ ದೃಢತೆಯಿಂದ ಧರ್ಮಕ್ಕೆ ಚ್ಯುತಿಬಾರದ ರೀತಿಯಲ್ಲಿ ಬದುಕಿದರೂ ಒಬ್ಬ ಸಾಮಾನ್ಯ ಹೆಣ್ಣನ್ನು ನಡೆಸಿಕೊಂಡ ರೀತಿಯಲ್ಲಿ ಅವಳನ್ನು ಪರೀಕ್ಷಿಸಲು ಉದ್ದೇಶಿಸಿದಾಗ ಇನ್ನು ಬದುಕುವುದು ಬೇಡ ಎನ್ನಿಸಿರಬೇಕು ಆಕೆಗೆ. ಕರ್ತವ್ಯ ಪಾಲನೆ ಹೆಸರಿನಲ್ಲಿ ರಾಜನ ಧರ್ಮ ಎಂಬ ಕಟ್ಟಳೆಯಲ್ಲಿ ಅವನು ಸೀತೆಯೊಡನೆ ನಡೆದುಕೊಂಡ ರೀತಿ ಯಾರಿಗಾದರೂ ಅಮಾನುಷ, ಅನ್ಯಾಯ ಎನಿಸದಿರದು. ಸೀತೆಗಷ್ಟೇ ಅಲ್ಲ ರಾಮನು ಸ್ತ್ರೀ ಕುಲಕ್ಕೆ ಘೋರ ಅಪಮಾನಮಾಡಿದ ಎನ್ನಿಸುತ್ತೆ. ಅಂತಹ ಸಂದರ್ಭದಲ್ಲೂ ಸೀತೆ ರಾಮನ ಬಗೆಗೆ ಒಂದು ಕೆಟ್ಟ ಮಾತನ್ನು ಆಡುವುದಿಲ್ಲ. ಆದರ ಈ ಘಟನೆಯಿಂದ ಅವಳ ಹೃದಯ ದುಃಖದಿಂದ ಬಿರಿಯುತ್ತದೆ. "ಭೂಮಿಥಾಯೇ ಭಾಯ್ಬಿಟ್ಟು ನನ್ನನ್ನು ನಿನ್ನ ಗರ್ಭದಲ್ಲಿ ಅಡಗಿಸಿಕೊ" ಎಂದು ಕಲ್ಲೂ ಕರಗುವಂತೆ ರೋಧಿಸುತ್ತಾಳೆ. ಭೂಮಾತೆಗೆ ಹೃದಯ ಕರಗಿ ತಾಯಿ ಮಗಳನ್ನು ಆಲಂಗಿಸಿಕೊಳ್ಳುವಂತೆ ಸೀತೆಯನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡ ಸನ್ನಿವೇಶ ಹೃದಯವಿದ್ರಾವಕ.

ಹೀಗೆ ಸೀತೆ ಆದರ್ಶವಂತನಾದ ರಾಮನನ್ನು ಕೈಹಿಡಿದಾಗಿನಿಂದಲೂ ದುಃಖವನ್ನು ಬೆನ್ನಿಗೆ ಕಟ್ಟಿಕೊಂಡೇ ಬದುಕುತ್ತಾಳೆ. ಆಕೆಯ ತಾಳ್ಮೆ, ವರ್ಣನಾತೀತ. ತನ್ನ ಗುಣ, ಸ್ವಭಾವಗಳಿಂದ 'ಸೀತೆ ಮಹಾ ಮಾತೆ' ಎನ್ನಿಸಿದ್ದಾಳೆ.

### ದೇವರ ನ್ಯಾಯ ನಿರ್ಣಯ

ಇಂದಿನ ದಿನಗಳಲ್ಲಿ ಬಹಳಷ್ಟು ಜನರು ಜನಮೆಚ್ಚು ಶುದ್ಧರಾಗಿರುವರಲ್ಲದೆ ಮನಮೆಚ್ಚು ಶುದ್ಧರಾಗಿಲ್ಲ. ತಮ್ಮ ವೈಯಕ್ತಿಕ ಜೀವನ ಹೊಲಸಿನಿಂದ ತುಂಬಿದ್ದರೂ,

ಮನಸಸ್ಸು ದುರಾಲೋಚನೆಯಿಂದ ಕೂಡಿದ್ದರೂ, ಪ್ರಚಾರ ಮಾಡಿಸಿಕೊಳ್ಳುವುದರಮೂಲಕ, ಬಣ್ಣದ ಮಾತನ್ನು ಆಡುವುದರ ಮೂಲಕ ತಾವು ಬಹಳ ಪರಿಶುದ್ಧರೆಂಬಂತೆ ಆದರ್ಶವ್ಯಕ್ತಿಗಳೆಂಬಂತೆ ಹೊರ ಜಗತ್ತಿಗೆ ಬಿಂಬಿಸುತ್ತಾರೆ. ಇದು ಆತ್ಮವಂಚನೆ. ಅವರು ಸತತವಾಗಿತಮ್ಮ ದೋಷಗಳನ್ನು ಮುಚ್ಚಿಕೊಳ್ಳಲು, ಅನೇಕ ವಿಧಗಳಿಂದ ಪ್ರಯತ್ನಿಸುತ್ತಾರೆ. ತಮ್ಮ ಕೊಳಕು ಕಾಣದಂತಿರಲು ಮತ್ತು ತಮ್ಮಂತೆಯೇ ಉಳಿದವರೂ ಇದ್ದಾರೆಂದು ತುಂಬಿದ್ದಾರೆಂದು ಕಾಣಿಸಲು ಪ್ರಯತ್ನಿಸುತ್ತಾತೆ. ಇಂತಹ ನಡವಳಿಕೆ ಕ್ಷುಲ್ಲಕ ಜನರ ಸಹಜಗುಣ. ಆದರೆ ಇದರಿಂದ ಅವರು ಹೊರ ಜಗತ್ತನ್ನು ವಂಚಿಸುತ್ತಿದ್ದರೂ, ಒಳಗಣ ಅವರಮನಸ್ಸು ಪ್ರಕ್ಷುಬ್ಧಗೊಂಡಿರುತ್ತದೆ. ಅವರೆಷ್ಟೇ ಹೊರಗೆ ಗೆಲುವಿನ ಸೊಗು ಹಾಕುತ್ತಿದ್ದರೂ ಅವರ ಒಳಗಿನ ಅಂತರಾತ್ಮ ಕೊರೆಯುತ್ತಿರುತ್ತದೆ. ಮನಸ್ಸಿನ ಶಾಂತಿಯನ್ನು ಕದಡುತ್ತದೆ. ಇಷ್ಟೇ ಅಲ್ಲ, ದೇವರ ನಿಯಮ, ಒಳಿತನ್ನು ಒಳಿತಾಗಿಯೂ, ಕೆಡುಕನ್ನು ಕೆಡುಕಾಗಿಯೂ ಗುರುತಿಸುತ್ತದೆ. ಹಾಗಾಗಿ ಒಂದಲ್ಲ ಒಂದು ದಿನ ಒಳ್ಳೆಯದು ಒಳ್ಳೆಯದಾಗಿಯೇ ಎದ್ದು ನಿಲ್ಲುತ್ತದೆ. ಕೆಟ್ಟದ್ದು ಕೆಟ್ಟದ್ದಾಗಿಯೇ ಕಾಣಿಸಿಕೊಳ್ಳುತ್ತದೆ. ಸತ್ಯಮೇವ ಜಯತೆ ಎನ್ನವುದು ಕಟು ಸತ್ಯವಾದರೂ ಕೆಲವರ ಜೀವನದಲ್ಲಿ ಬಹುಬೇಗ ಸತ್ಯವ್ಯಕ್ತವಾಗುತ್ತದೆ. ಮತ್ತೆ ಕೆಲವರ ಜೀವನದಲ್ಲಿ ಬಹಳ ನಿಧಾನವಾಗಿ ಆಗುತ್ತದೆ. ದುಷ್ಟನಾದವನಿಗೆ ದೇವರು ನಿರ್ಣಯ ತೆಗೆದುಕೊಳ್ಳುವುದರಲ್ಲಿ ತಡಮಾಡಿದಾಗ, ದುಷ್ಟ ತಾನು ಗೆದ್ದೆ ಎಂದು ಮೆರೆಯುತ್ತಾನೆ. ತನ್ನೆಲ್ಲಾ ಹುಳುಕನ್ನು ಮುಚ್ಚಿಕೊಂಡು ದೊಡ್ಡವನಂತೆ ಸೋಗು ಹಾಕಿಕೊಂಡು ಓಡಾಡುತ್ತಿರುತ್ತಾನೆ. ಒಳ್ಳೆಯವನಿಗೆ ಸಿಗಬೇಕಾದ ಪುರಸ್ಕಾರ ತಡವಾದಾಗ, ಅವನು ಜೀವನದಲ್ಲೇ ನಿರಾಶೆಗೊಳ್ಳುತ್ತಾನೆ. ದೇವರನ್ನು ಹಳಿಯುತ್ತಾನೆ. ಸತ್ಯಕ್ಕೆ ಕಲವಿಲ್ಲ ಎಂದು ಭಾವಿಸಿಕೊಳ್ಳುತ್ತಾನೆ. ಆದರೆ ದೇವರ ಲೆಕ್ಕಾಚಾರವೇ ಬೇರೆ ಇರುತ್ತದೆ. ದೇವರ ಲೆಕ್ಕಾಚಾರಕ್ಕೆ ಆಧಾರಗಳು ಯಾವವೋ ನಮಗೆ ಗೊತ್ತಿಲ್ಲ. ತನ್ನ ಲೆಕ್ಕಾಚಾರದಂತೆ ಅವನು ಕೆಲವು ಸಾರಿ ದುಷ್ಟರಿಗೆ ಬೇಗ ತಕ್ಕ ಶಿಕ್ಷೆಯಾಗುವಂತೆ ಮಾಡಿ ಬುದ್ಧಿ ಕಲಿಸುತ್ತಾನೆ. ಒಳ್ಳೆಯವರಿಗೆ ಕಷ್ಟ ಬರದಂತೆ ನೋಡಿಕೊಳ್ಳುತ್ತಾನೆ. ಆದರೆ ಮತ್ತೆ ಕೆಲವು ಸಆರಿ ಒಳ್ಳೆಯುವರೂ ಬಹಳ ಕಾಲ ನೊಂದು, ಬೆಂದು ರೋಸಿಹೋಗುವಷ್ಟರವರೆಗೆ ಅವರ ಕಡೆ ಗಮನಕೊಡುವುದೇ ಇಲ್ಲ. ದುಷ್ಟರಿಗೂ ಸಹ ಅವರು ಕೆಟ್ಟು ಮರೆಯಲು ಬಹುದೀರ್ಘ ಅವಕಾಶ ಕೊಟ್ಟುಬಿಡುತ್ತಾನೆ. ಹೀಗೆ ಮಾಡುವಲ್ಲಿ ಅವನ ಹಂಚಿಕೆ ಏನಿದೆಯೋ ಬಲ್ಲವರಾರು? ಆಧರೆ ಕೊನೆಗಮದು ದಿನ ಮಾತ್ರ ಯಾರಿಗೆ ಯಾವುದು ಸೂಕ್ತವೋ, ಯಾರು ಯಾವುದಕ್ಕೆ ಅರ್ಹರೋ ಅದನ್ನೇ ಕೊಡುತ್ತಾನೆ. ಒಬ್ಬರಿಗೆ ಮುಂದಾಗಬಹುದು, ಮತ್ತೊಬ್ಬರಿಗೆ ಹಿಂದಾಗಬಹುದು. ಆದರೆ ದೇವರ ನ್ಯಾಯ ನಿರ್ಣಯ ಮಾತ್ರ ಕಟ್ಟಿಟ್ಟ ಬುತ್ತಿ. ಈ

ಅಂಶವನ್ನು ಮಾನವ ತಿಳಿದು ನಡೆದರೆ ತಾನೂ ಸುಖವಾಗಿರಬಹುದು. ತನ್ನ ಪರಿಸರದಲ್ಲಿರುವವರಿಗೂ ನೆಮ್ಮದಿಯಿಂದ ಬಾಳಲು ಅವಕಾಶ ಕೊಡಬಹುದು. (ಆದರೆ ದುಃಖದ ಸಂಗತಿ ಏನೆಂದರೆ, ಮನುಷ್ಯ ತನ್ನನ್ನು ಪಾಪಕೂಟದಲ್ಲಿ ಬೀಳಿಸಿಕೊಳ್ಳುತ್ತಾ ಇತರರನ್ನು ಸಂಕಟದ ಸಾಗರದಲ್ಲಿ ಮುಳುಗಿಸುತ್ತಾನೆ.) ಶಿಕ್ಷಣದ ಗುರಿಯಾದರೂ ಇದೇ ಅಲ್ಲವೇ? ಸರಿಯಾದ ರೀತಿಯಲ್ಲಿ ಶಿಕ್ಷಣ ಪಡೆದವನು ಎಂದರೆ ನಿಜವಾದ ಅರ್ತದಲ್ಲಿ ಸಉಶಿಕ್ಷಿತನಾದವನು ತಾನೂ ನೆಮ್ಮದಿಯಂದ ಬಾಳುವುದಲ್ಲದೆ, ತನ್ನ ಪರಿಸರದಲ್ಲಿಯೂ ನೆಮ್ಮದಿಯ ವಾತಾವರಣ ಉಂಟು ಮಾಡಲು ಪ್ರಯತ್ನಿಸುತ್ತಿರುತ್ತಾನೆ. ಉತ್ತಮ ವ್ಯಕ್ತಿಯ ನಡೆ–ನುಡಿ ಎಲ್ಲರಿಗೂ ಪ್ರೀತಿ ಬರುವಂತಿರುತ್ತದೆ. ಉತ್ತಮ ವ್ಯಕ್ತಿತ್ವ ರೂಪಿಸಿಕೊಂಡು ಸತತವೂ ಅದನ್ನು ಉಳಿಸಿಕೊಳ್ಳಲು ಮನುಷ್ಯ ಪ್ರಯತ್ನಿಸಬೇಕು. ಇಲ್ಲದಿದ್ದಲ್ಲಿ ಜೀವನದ ಪರಿಸರದಲ್ಲಿ ವಯಕ್ತಿ ಯಾವುದೇ ಆಮಿಷಕ್ಕೆ ಬಲಿಯಾಗಬಹುದು. ಕ್ಷುಲಕ ಕಾರಣಕ್ಕೇ ಸಿಟ್ಟಿಗೆದ್ದು ಅನಾಹುತ ಮಾಡಬಹುದು. ಕೆಲವು ಪ್ರಸಂಗಗಳಲ್ಲಿ ಗರ್ವದಿಂದ ಮೆರೆಯಬಹುದು. ಇಲ್ಲವೇ ಕೀಳು ಮೋಹಕ್ಕೆ ಒಳಗಾಗಿ ತಳಮಟ್ಟಕ್ಕೆ ಇಳಿಯಬಹುದು. ಬೇರೆಯವರ ಒಳಿತನ್ನು ಸಹಿಸದೇ, ಹೊಟ್ಟೆಯಕಿಚ್ಚಿನಿಂದ ಅಸುರನಾಗಿ ವರ್ತಿಸಬಹುದು. ಹೀಗೆ ಮಾನವ ಯಾವಾಗ ಬೇಕಾದರೂ ಕಾಮ, ಕ್ರೋಧ, ಮದ, ಮೋಹ, ಮಾತ್ಸರ್ಯಗಳಿಗೆ ಒಳಗಾಗುವ ಸಾಧ್ಯತೆ ಇದೆ. ಆದುದರಿಂದ ಈ ಬಗ್ಗೆ ಸದಾ ಜಾಗರೂಕತೆಯಿಂದ ಇದ್ದರೆ ಮಾತ್ರ ಈ ಪಂಚ ಶತೃಗಳಿಂದ ಆಗ ಬಹುದಾದ ವಿನಾಶವನ್ನು ತಪ್ಪಿಸಬಹುದು. ಈ ಪಂಚಶತ್ರುಗಳನ್ನು ನಿಗ್ರಹಿಸುವುದು ಸುಲಭದ ಮಾತಲ್ಲವೆಂಬುದುನ್ನು ಶರಣರೂ ಅನೇಕ ರಈತಿ ವ್ಯಕ್ತ ಪಡಿಸಿದ್ದಾರೆ. ಅಲ್ಲಮ ಪ್ರಭುವು :

ತನುವ ತೋಂಟದ ಮಾಡಿ, ಮನವ ಗುದ್ದಲಿ ಮಾಡಿ
ಅಗೆದು ಕಳೆದೆನಯ್ಯಾ ಭ್ರಾಂತಿಯ ಬೇರ
ಸಂಸಾರದ ಹೇಂಟೆಯ ಬಗಿದು
ಬಿತ್ತಿದೆನಯ್ಯಾ ಬ್ರಹ್ಮ ಬೀಜವ;
ಅಖಂಡ ಮಂಡಲವೆಂಬ ಭಾವಿ
ಪವನವೇ ರಾಟಾಳ ! ಸುಷುಮ್ನ ನಾಳದಿಂದ ಉದಕವತ್ತಿದ್ದ
ಬಸವಗಳೈವರು ಹಸಗೆಡಿಸಿಯಾರೆಂದು
ಸಮತೆ ಸೈರಣೆ ಎಂಬ ಬೇಲಿಯನಿಕ್ಕಿ
ಆವಾಗಲೂ ಅ ತೋಂಟದೊಳಗೆ ಜಾಗರದಿ
ಈ ಸಸಿಯ ಸಲಹಿದೆ ಕಾಣ ಹೊಹೇಶ್ವರಾ

ಎಂದು ಹೇಳಿದ್ದಾರೆ. ವಯ್ರಆಗ್ಯನಿಧಿಯಾದ ಅಲ್ಲಮ ಪ್ರಬುವೇ ಹೀಗೆ

ಹೇಳಿರುವಾಗ ಸಾಮಾನ್ಯರ ಪಾಡೇನು ! ಆದುದರಿಂದ ನಾವೆಕಲ್ಲಾ ಪ್ರತಿಕ್ಷಣವೂ ಜಾಗರೂಕರಾಗಿದ್ದು ಕಾಮ, ಕ್ರೋಧಾದಿ ಶತ್ರುಗಳ ಹಿಡಿತಕ್ಕೆ ಸಿಕ್ಕಿ ಅವಿವೇಕಿಗಳಾಗದೆ, ವಿವೇದದಿಂದ ಬಾಳಲು ಪ್ರಯತ್ನಿಸಬೇಕು.

**ಕಾಯದ ಕತ್ತಲೆಯ ಕುಳಿಯಯ್ಯಾ**

ಶರಣ ಸಾಹಿತ್ಯ, ಸಾಹಿತ್ಯ ಕ್ಷೇತ್ರಕ್ಕೆ ಬಹು ಅಮೂಲ್ಯ ಕೊಡುಗೆ ಯಾಗಿರುವಂತೆ ಆಧ್ಯಾತ್ಮಿಕ ಕ್ಷೇತ್ರಕ್ಕೂ ಬಹುದೊಡ್ಡ ಕೊಡುಗೆ. ಶರಣರ ವಚನಗಳ ಮೂಲಕ ಅವರ ವಿಚಾರ, ಆಚಾರ, ಮೌಲ್ಯ, ಬದುಕು ಮುಂತಾದವುಗಳ ಬಗೆಗೆ ಸ್ಪಷ್ಟವಾದ ಅಭಿಪರಯವನ್ನು ಪಡೆಯಬಹುದಾಗಿ, ಸವಾದಿ ಸರಣರು ಸಮಾಜದಲ್ಲಿ ಲೋಪದೋಷಗಲನ್ನು ತೊಡೆದುಹಾಕುವ ಪ್ರಯತ್ನ ಮಾಡಿರುವುದಲ್ಲದೆ, ಮಾನವ ದಾನವನಾಗದೆ ಮಹಾದೇವನಾಗಬಲ್ಲಮಾರ್ಗವನ್ನು ಜಗತ್ತಿಗೆ ಬೋಧಿಸಿದ್ದಾರೆ. ಅವರು ಈ ಲೌಕಿಕ ಜೀವನವನ್ನು ಕಡೆಗಣಿಸಬೇಕೆಂದು ಹೇಳಿಲ್ಲ, ಬದುಕುವಿಕೆಯನ್ನು ತಿರಸ್ಕರಿಸಿಲ್ಲ. ಮಾನವ ತನ್ನ ಉನ್ನತಿಯನ್ನು ಸಾಧಿಸಲು ಕಠಣತರ ಮಾರ್ಗಗಳನ್ನು ಅನುಸರಿಸಬೇಕೆಂದು ತಿಳಿಸಿ, ಸಂಸಾರದೊಳಗಿದ್ದೂ ಸದ್ಗತಿ ಪಡೆಯಲು ಸಾಧ್ಯವಾದ ಮಾರ್ಗವನ್ನು ತೋರಿಸಿದ್ದಾರೆ.

ಶರಣರು, ದೇವರ ದೃಷ್ಟಿಯಲ್ಲಿ ಸರ್ವರೂ ಸಮಾನರೆಂಬ ಮತನ್ನು ನಾನಾ ರೀತಿಯಲ್ಲಿ ಬೋಧಿಸಿ, ಸಾಧಿಸಿ ತೋರಿಸಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯೂ ಪುರುಷನಾಗಿರಲಿ–ಸ್ತ್ರೀಯಾಗಿರಲಿ. ಬಸವನಾಗಿರಲಿ–ಬಲ್ಲಿದನಾಗಿರಲಿ, ಆಳಾಗಿರಲಿ–ಅರಸನಾಗಿರಲಿ, ಜಾತಿಯಲ್ಲಿ ಮೇಲಾಗಿರಲಿ–ಕೀಳಾಗಿರಲಿ, ತನ್ನ ಉತ್ತಮ ಬದುಕಿನಿಂದ ತನ್ನನ್ನು ಉದಾತ್ತೀಕರಿಸಿಕೊಂಡು, ಭಗವಂತನಲ್ಲಿ ಒಂದಾಗಬಹುದಲ್ಲದೇ ಭಗವಂತನೇ ತಾನಾಗಬಹುದೆಂದು ತಿಳಿಯ ಹೇಳಿದ್ದಾರೆ. ದೇವರ ದೃಷ್ಟಿಯಲ್ಲಿ ತಾರತಮ್ಯಗಳಿಲ್ಲ. ದೇವರಿಗೆ ಸಕಲರೂ ಸಮಾನರು. ದೇವರು ಸರ್ವರಿಗೂ ಲೇಸನೇ ಬಯಸುತ್ತಾನೆ. ಅಂತಹ ದೇವರ ಒಲುಮೆ ದೊರೆಯುವಂತೆ ಮಾನವ ಬದುಕಬೇಕು ಎನ್ನುವುದು ಶರಣರ ಸಂದೇಶ. ಹಾಗೆ ಬದುಕಲು ಸಾಧ್ಯವಾಗುವ ಮಾರ್ಗವನ್ನು ಅವರು ಬದುಕಿ ತೋರಿಸಿಕೊಟ್ಟಿದ್ದಾರೆ.

ಪ್ರತಿಯೊಬ್ಬ ಶರಣನ ವಿಚಾರಧಾರೆಯೂ ವಿವರಣೆಯಲ್ಲಿ ಬೇರೆ ಬೇರೆಯಾಗಿದ್ದರೂ, ಮೂಲದಲ್ಲಿ ಮತ್ತು ಗುರಿಯಲ್ಲಿ ಒಂದೇ ತೆನಾಗಿದೆ. ಭಗವಂತನ ಒಲುಮೆಗೆ ದೇಹದಂಡನೆ ಬೇಕಿಲ್ಲ; ಲೌಕಿಕ ಜೀವನದಿಂದ ದೂರ ಹೋಗಬೇಕಿಲ್ಲ; ವ್ರತ–ಉಪವಾಸ ಮುಂತಾದ ಕಠಿಣ ಮಾರ್ಗಗಳನ್ನು ಕ್ರಮಿಸಬೇಕಿಲ್ಲ. ಕೇವಲ ಸಾಮಾನ್ಯ ಜೀವನವನ್ನು ಬದುಕುತ್ತಾ, ಮನಸ್ಸನ್ನು ಭಗವಂತನ ಕಡೆಗೆ

ತಿರುಗಿಸಿಕೊಂಡು, ಸತ್ಯ-ಶುದ್ಧ ಕಾಯಕದಲ್ಲಿ ನಿರತರಾಗಿ ಜೀವನದ ನಶ್ವರತೆಯನ್ನು ಅತ್ ಮಾಡಿಕೊಂಡು, ಈ ಜಗತ್ತಿನ ಮಾಯೆಯಿಂದ ಹಂತ-ಹಂತವಾಗಿ ಬಿಡುಗಡೆ ಪಡೆಯಬೇಕು;ಶರಣನಾಗಬೇಕು, ಐಕ್ಯ ಸ್ಥಿತಿಯನ್ನು ಮುಟ್ಟಿ ಬಯಲಲ್ಲಿ ಬಯಲಾಗಬೇಕು. ಎಂದರೆ ಶನ್ಯ ಸಂಪಾದನೆಯ ಗುರಿಯನ್ನಿಟ್ಟುಕೊಂಡು ಬದುಕಿ ಶೂನ್ಯದಲ್ಲಿ ಶೂನ್ಯವಾಗಬೇಕು ಎಂಬುದು ಶರಣರ ಬೋಧನೆಯ ಸಾರಸರ್ವಸ್ವ

ಇಂತಹ ಒಂದು ಘಟ್ಟವನ್ನು ಮುಟ್ಟುವುದು ಮಾತಿನ ವಿವರಣೆಯಲ್ಲಿ ಸುಲಭ ಸಾಧ್ಯವೆಂದು ಕಂಡರೂ, ಸಾಧನೆಯ ಹಾದಿಯಲ್ಲಿ ಹೋದಾಗ ಸಾಮಾನ್ಯ ಮನುಷ್ಯರಿಗೆ ಇದು ದುಃಸಾಧ್ಯವೆಂದು ಅನಿಸದಿರದು. ಏಕೆಂದರೆ ಈ ಕಾಯದ ಗುಣ ಮನುಷ್ಯನನ್ನು ಕತ್ತಲೆಯ ಕಡೆಗೆ ಪ್ರತಿಕ್ಷಣವೂ ಎಳೆಯುತ್ತಿರುತ್ತದೆ. ಜ್ಞಾನಿಯಾದ ಮಾನವ ಈ ಕತ್ತಲೆಯ ಕಡೆಗೆ ಗಮನಕೊಡದೆ ಮಾಯದ ಆಕರ್ಷಣೆಗೆ ಮನಸೋಲದೆ, ಬೆಳಕಿನಡೆಗೆ ಮುಖಮಾಡಿ, ಮುಂದುವರಿಯಭೆಕು. ಆದರೆ ದೇಹದೊಂದಿಗೆ ಹುಟ್ಟಿದ ಸಹಜಪ್ರವೃತ್ತಿಗಳು ಅಷ್ಟು ಸುಲಭವಾಗಿ, ಮನುಷ್ಯನನ್ನು ಬಿಟ್ಟುಹೋಗುವುದಿಲ್ಲ. ಅದಕ್ಕಾಗಿ ಕಾಯಕ ಕತ್ತಲೆಯನ್ನು ಕಳೆಯಬೇಕೆಂದು ಶರಣರು ಭಗವಂತನನ್ನು ನಾನಾ ವಿಧವಾಗಿ ಪ್ರಾರ್ಥಿಸಿದ್ದಾರೆ. ಅಕ್ಕಮಹಾದೇವಿಯು,

ಎನ್ನ ಮಾಯದ ಮದವ ಮುರಿಯಯ್ಯ
ಎನ್ನ ಕಾಯದ ಕತ್ತಲೆಯ ಕಳೆಯಯ್ಯ
ಎನ್ನ ಜೀವದ ಜಂಜಡವ ಮಾಣಿಸಯ್ಯ
ಎನ್ನ ದೇವ ಚನ್ನ ಮಲ್ಲಿಕಾರ್ಜುನಯ್ಯಾ

ಎಂದು ಪರಿಪರಿಯಾಗಿ ಬೇಡಿದ್ದಾಳೆ. ಹೀಗೆ ಶರಣರು ಕಾಯದ ಕತ್ತಲೆಗೆ ಕಾರಣವಾದ ಲೋಭ, ಮದ, ಮಾತ್ಸರ್ಯ, ಆಸೆ-ಆಮಿಷಗಳಿಂದ ತಮ್ಮನ್ನು ಮುಕ್ತರನ್ನಾಗಿ ಮಾಡಿ, ತಮ್ಮ ಮನಸ್ಸನ್ನು ವಿಕಾರಗಳನ್ನು ಮುಸುಕಿದ ಮಾಯಾಜಾಲವನ್ನು ಹೋಗಲಾಡಿಸಲು ಮನಸ್ಸನ್ನು,

ಗಾಳಿಬೀಸದ ಜಲದಂತೆ
ಮೋಡವಿಲ್ಲದ ಸೂರ್ಯನಂತೆ
ಬೆಳಗಿನ ದರ್ಪಣದಂತೆ

ಸ್ಥಿರವಾಗಿ, ಪ್ರಕಾಶಮಾನವಾಗಿ, ಒಳಹೊರಗೆ ಒಂದಾಗಿ ಇರುವಂತೆ ಮಾಡಲು ಕೇಳಿಕೊಂಡಿದ್ದಾರೆ. ಜೀವವು ಅಂಗಗುಣಗಳನ್ನು ಕಳೆದುಕೊಂಡು, ಲಿಂಗಗುಣಗಳನ್ನು ಪಡೆದುಕೊಂಡು, ಆಸೆ-ರೋಷದ ಪಾಶಹರಿದು ಬಿಡುಗಡೆ ಪಡೆಯಬೇಕೆಂದು ಹಾತೊರೆದಿದ್ದಾರೆ. ತಮ್ಮ ದೇಹ ಆತ್ಮಗಳು ಲಿಂಗದೊಳಗೆ ಒಂದಾಗಿ ಬೆರೆತು

ಮನಸ್ಸಿಗೆ ಹಿಡಿದಿರುವ ಕತ್ತಲೆ ಹರಿದು ಲಿಂಗವ್ಯಸನಿಯಾಗಲಿ, ಆಗ ಮಹಾಮಂಗಳದ ಬೆಳಗು ಕಾಣಿಸುವುದು ಎಮದು ದೇವರ ದರ್ಶನದ ಮಾರ್ಗದ ಬಗ್ಗೆ ವಿವರಿಸಿದ್ದಾರೆ.

ಹೀಗೆ ಶರಣರು ದೇಹಕ್ಕೆ ಮುಸುಕಿದ ಕತ್ತಲೆಯನ್ನು ಕಳೆದುಕೊಂಡು ಬೆಳಕಿನತ್ತ ಮುಖಮಾಡಿ, ಜೀವನದ ಸಾರ್ಥಕತೆಯನ್ನು ಭಗವಂತನಲ್ಲಿ ಐಕ್ಯವಾಗುವ ಮೂಲಕ ಪಡೆಯಬೇಕೆಂದು ಪ್ರಯತ್ನಿಸಿ ಬದುಕಿದ್ದಾರೆ. ಅಲ್ಲದೆ ಮಾನವ ಜನಾಂಗದ ಉದ್ಧಾರಕ್ಕಾಗಿ ಮಾರ್ಗದರ್ಶನ ಮಾಡಿದ್ದಾರೆ.

ಕ್ಷಮೆ

ಸಮಾಜದಲ್ಲಿ ಯೋಗ್ಯವ್ಯಕ್ತಿ ಎನಿಸಿಕೊಂಡು ಬಾಳಬೇಕಾದರೆ ಮನುಷ್ಯನಲ್ಲಿ ಅನೇಕ ಉತ್ತಮ ಗುಣಗಳು ಬರಬೇಕಾಗುತ್ತವೆ. ಅದರಲ್ಲೊಂದು ಕ್ಷಮಾಗುಣ. ಈ ಕ್ಷಮಾಗುಣದಿಂದ ದಾನವನ್ನು ಮಾನವನನ್ನಾಗಿ ಪರಿವರ್ತಿಸಬಹುದು. ಈ ಕ್ಷಮಾಗುಣವಿಲ್ಲದಲ್ಲಿ ಅದು ಅನೇಕ ದುರಂತಗಳಿಗೆ ಎಡೆಮಾಡಬಹುದು. ಮೇಲು ನೋಟಕ್ಕೆ ಕ್ಷಮೆ ಅಷ್ಟೊಂದು ಮಹತ್ವದ್ದಾಗಿ ಕಾಣದಿದ್ದರೂ ಕೆಲವೊಂದು ಸಂದರ್ಭಗಳಲ್ಲಿ ಅದು ಮಹತ್ತರವಾದ ಪಾತ್ರ ವಹಿಸಬಲ್ಲದು. ಹಾಗೆಂದು ಅದನ್ನು ಹೇಗೆಂದರೆ ಹಾಗೆ ಉಪಯೋಗಿಸಲೂ ಬಾರದು ಯುಕ್ತಾಯುಕ್ತ ವಿವೇಚನೆ ಮಾಡಿ ಸಂದರ್ಭೋಚಿತವಾಗಿ ಬಳಸಬೇಕಾಗುತ್ತದೆ. ಕ್ಷಮೆ ತೋರಿಸಲು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಉನ್ನತ ವ್ಯಕ್ತಿತ್ವವುಳ್ಳ ಕೆಲವರು ಮಾತ್ರ ಇದರ ಸದ್ಬಳಕೆ ಮಾಡಬಲ್ಲರು. ಪ್ರತಿಯೊಬ್ಬರು ಈ ಗುಣವನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸುವುದು ಅಪೇಕ್ಷಣೀಯ.

ಕ್ಷಮೆಯ ಮಹತ್ವವನ್ನು ಬಿತ್ತರಿಸುವ ಅನೇಕ ಘಟನೆಗಳಿವೆ. ಉದಾಹರಣೆಗಾಗಿ ಈ ಒಂದು ಘಟನೆ ನೋಡಬಹುದು. ಮಕ್ಕಳಿಲ್ಲದ ಒಬ್ಬ ತಾಯಿ ಬಂಧುಗಳ ಒಮದು ಮಗುವನ್ನು ಚಿಕ್ಕ ವಯಸ್ಸಿನಲ್ಲೇ ತಂದು ಬೆಳೆಸಿದಳು. ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ಕಾಪಾಡಿದಳು. ಹುಡುಗ ದೊಡ್ಡವನಾದ. ಒಂದು ರಾತ್ರಿ ಆ ಮಗ ಸಾಕಿದ ತಾಯಿಯಲ್ಲಿ ಹೆಣ್ಣನ್ನು ಕಂಡ. ನಿದ್ದೆಯಲ್ಲಿದ್ದ ತಾಯಿ ಕಣ್ಣು ತೆರೆದಾಗ ಕಣ್ಮುಂದೆ ತಾನು ಇಪ್ಪತ್ತು ವರ್ಷದಿಂದ ಸಾಕಿದ ಸಲುಹಿದ ಮಗ ! ತಾಯಿಗೆ ದಿಗ್ಭ್ರಮೆಯಾಯಿತು. ಬಾಯಿಂದ ಮಾತೇ ಹೊರಡದಾದುವು. ಅಲ್ಲಿಂದ ಎದ್ದು ಬೇರೆ ಕೋಣೆಗೆ ಹೋಗಿಬಿಟ್ಟಳು. ಮಗ ಈ ಮಟ್ಟಕ್ಕೆ ಇಳಿದನಲ್ಲಾ ಎಂದು ಅಳು ಬಂದಿತು. ತಕ್ಷಣವೇ ನಾನು ಮಗನಿಗೆ ಏನೆಲ್ಲಾ ಕೊಟ್ಟೆ ಆದರೆ ಉತ್ತಮ ಸಂಸ್ಕಾರವನ್ನೇ ಕೊಡಲಿಲ್ಲವಲ್ಲ ಎಂದು ತನ್ನನ್ನೇ ಹಳಿದುಕೊಂಡಳು. ಹುಟ್ಟಿದ ಮಗುವಿಗೆ ಶೌಚಗೃಹ ಯಾವುದು, ದೇವರ ಮನೆ ಯಾವುದು ಎಂಬುದನ್ನು ಸರಿಯಾಗಿ ತಿಳಿಸಿಕೊಡುವ

ಮೊದಲು ದೇವರ ಮನೆ, ಅಡಿಗೆ ಮನೆ ಎಂಬ ಭೇದ ಭಾವವಿಲ್ಲದೆ ತನ್ನ ಶೌಚಕಾರ್ಯವನ್ನು ಎಲ್ಲೆಂದರೆ ಅಲ್ಲಿ ಮಾಡಿಮುಗಿಸುತ್ತದೆ. ಆದರೆ ಹಿರಿಯರು ಸರಿಯಾದ ತಿಳುವಳಿಕೆ ಕೊಟ್ಟು ಉತ್ತಮ ರೂಢಿ ಬೆಳಸಿದರೆ ಮುಂದೆ ಮಗು ಹಾಗೆ ಸರಿಯಾದ ತಿಳುವಳಿಕೆಯನ್ನೂ, ಯೋಗ್ಯ ನಡವಳಿಕೆಯನ್ನೂ ಉಂಟು ಮಾಡುವುದು ಹಿರಿಯರ ಕರ್ತವ್ಯ. ಆ ಕರ್ತವ್ಯವನ್ನು ತಾನು ಸರಿಯಾಗಿ ಮಾಡಲಿಲ್ಲ ಎಂದುಕೊಂಡಳು. ಆದ್ದರಿಂದ ಈ ಸಂದರ್ಭದಲ್ಲಿ ಅವನು ತಿಳುವಳಿಕೆ ಇಲ್ಲದೆ ಮಾಡಿದ ತಪ್ಪನ್ನು ತಳನು ಕ್ಷಮಿಸದೆ ಸಿಟ್ಟಿಗೆದ್ದರೆ ಅಪಮಾನಗೊಳಿಸಿದರೆ ಅವನು ನೊಂದುಕೊಳ್ಳಬಹುದು, ಅವಮಾನತನಾಗಿ ತಲೆ ಮರೆಸಿಕೊಂಡು ಹೋಗಬಹುದು, ಆತ್ಮಹತ್ಯೆ ಮಾಡಿಕೊಳ್ಳಲೂ ಬಹುದು ಎಂದು ದಿಗಿಲಾಯ್ತು. ಆಗ ತಾನು ಇಷ್ಟು ವರ್ಷ ಹೊಟ್ಟೆಯ ಮಗನಂತೆ ಸಾಕಿದುದೆಲ್ಲಾ ವ್ಯರ್ಥವಾಗುವುದು. ತಾನು ಕ್ಷಮಿಸಿದೆನೆಂದರೆ ಎಲ್ಲವೂ ಆನಂದಮಯವಾಗುವುದೆಂದು ತನ್ನ ಮನಸ್ಸಿನ ದುಃಖವನ್ನು, ಸಿಟ್ಟನ್ನು ಸಹನಮಾಡಿಕೊಂಡಲೂ. ಮರುದಿನ ಎದ್ದಾಗ ಆಕೆ ಎಂದಿನಂತೆ ಹುಡುಗನನ್ನು ಪ್ರೀತಿಯಿಂದ ಮಾತನಾಡಿಸಿದಳು. ಆಗ ಅವನಿಗೆ ತಬ್ಬಿಬ್ಬು, ತನ್ನ ಕಿವಿಯನ್ನು ತಾನೇ ನಂಬದಾದ. ಶಿಕ್ಷೆಯನ್ನು ಕಠಿಣ ಮಾತುಗಳನ್ನು ನಿರೀಕ್ಷಿಸಿದ್ದ ಅವನಿಗೆ ಈ ಪ್ರತಿಕ್ರಿಯೆ ನುಂಗಲಾರದ ತುತ್ತಾಯಿತು. ತನ್ನನ್ನು ತಾನೇ ಶಪಿಸಿಕೊಂಡು, ತನ್ನ ಕೃತ್ಯಕ್ಕಾಗಿ ಪಶ್ಚಾತ್ತಾಪ ಪಟ್ಟ. ಅಂದಿನಿಂದ ಸಾಕು ತಾಯಿಯಲ್ಲಿ ಹೆಣ್ಣು ಕಂಡ ಕಹುಡುಗ ಪ್ರತಿ ಹೆಣ್ಣಿನಲ್ಲೂ ತಾಯ್ತನವನ್ನು ಕಾಣತೊಡಗಿದ, ಮಹಿಳೆ ಮಾತೆ ಎಂದು ಮನಗೊಂಡ.

ಮತ್ತೊಂದು ಘಟನೆ. ಒಬ್ಬ ಅನಾಥ ಮಗುವನ್ನು ಒಬ್ಬ ಶ್ರೀಮಂತರು ತಂದು ಶಾಕಿದರು. ಅವನು ಮನೆಗೆಲಸ ಮಾಡುತ್ತಿದ್ದ. ಕೆಲಸ ಮಾಡುವ ಹುಡುಗನಾದರೂ ಮನೆಯವರಲ್ಲಿ ಒಬ್ಬನಾಗಿ ಬೆಳೆದ. ಮನೆಯ ಒಳಹೊರಗಿನ ವಿಚಾರವೆಲ್ಲ ಅವನಿಗೂ ಗೊತ್ತಿತ್ತು. ಮನೆಯವರಂತೆಯೇ ಇದ್ದ. ದೊಡ್ಡವನಾದ. ಒಂದು ಸಣ್ಣ ನೌಕರಿ ಕೊಡಿಸಿದರು. ಮನೆಲ್ಲಿದ್ದುಕೊಂಡೇ ಕೆಲಸಕ್ಕೂ ಹೋಗುತ್ತಿದ್ದ.

ಜೂಜು ಮುಂತಾದ ದುಶ್ಚಟಕ್ಕೆ ಬಲಿಯಾದ. ಹಣ ಕಳೆಕೊಂಡಂತೆ ಮತ್ತೆ ಪಡೆದುಬೇಕೆಂಬ ಹಂಬಲದಲ್ಲಿ ಇನ್ನಷ್ಟು ಕಳೆದುಕೊಂಡ. ಹಣ ಸಾಲದಾಯಿತು. ಮನೆಯ ವ್ಯವಸ್ಥೇ ಎಲ್ಲಾ ಗೊತ್ತಿದ್ದುದರಿಂದ ಮನೆಯಲ್ಲಿ ಕಳ್ಳತನ ಮಾಡತೊಡಗಿದ. ಎಲ್ಲರ ವಿಶ್ವಾಸಕ್ಕೆ ಪಾತ್ರನಾಗಿದ್ದ ಇವನ ಮೇಲೆ ಯಾಗಿಗೂ ಸಂಶಯ ಬರಲಿಲ್ಲ. ಆದರೆ ಒಮ್ಮೆ ಬಹಳಷ್ಟು ಹಣ ಹೋದಾಗ ಗುಟ್ಟು ರಟ್ಟಾಯಿತು. ಮನೆಮದಿಯೆಲ್ಲಾ ಹುಡುಗನ ಮೇಲೆ ಕಿಡಿ ಕಿಡಿಯಾದರು. ಎಲ್ಲರೂ ಹೊಡೆದರು, ಬೈದರು ಹುಡುಗನಿಗೆ ತನ್ನ ಅಪರಾಧದ ಅರಿವಿತ್ತು. ಒಂದಲ್ಲ ಒಂದು ದಿನ ಜೂಜಿನಲ್ಲಿ ಹಣ ಗೆಲ್ಲುತ್ತೇನೆ.

ಆಗ ಹಣವನ್ನು ಇಟ್ಟಂತೆಯೇಇಡಬೇಕೆಂದು ತಾನು ಕದ್ದಿದ್ದ ಹಣದ ಲೆಕ್ಕವನ್ನೆಲ್ಲ ಇಟ್ಟಿದ್ದ. ಆ ಬಗ್ಗೆ ಎಲ್ಲರಿಗೂ ವಿವರಿಸಿ ಎಲ್ಲವನ್ನೂ ತೋರಿಸಿ ಮಾಡಿದ ತಪ್ಪನ್ನು ಒಪ್ಪಿಕೊಂಡು ಕ್ಷಮಿಸಿಬೇಕೆಂದು ಯಜಮಾನನ ಕಾಲು ಹಿಡಿದು ಬೇಡಿಕೊಂಡ. ಹೊಟ್ಟೆ ಹಿಟ್ಟಿಗೂ ಗತಿಯಿಲ್ಲದವನನ್ನು ಮನೆಗೆ ತಂದು ಸಾಕಿ, ಸಲಹಿ ಸಮಾನತೆಯಿಂದ ಕಂಡವರಿಗೆ ಮೋಸ ಮಾಡಿದ ಕೃತಘ್ನನ ಒದ್ದು ಹೊರಹಾಕಿದ ಪೋಲೀಸರಿಗೆ ದೂರು ಕೊಟ್ಟ, ಹುಡುಗನಿಗೆ ಕಾರಾಗೃಹ ಶಿಕ್ಷೆಯಾಯಿತು. ಶಿಕ್ಷೆ ಮುಗಿಸಿ ಹೊರೆ ಬಂದಾಗ ನೌಕರಿ ಹೋಗಿತ್ತು. ಸಮಾಜದಲ್ಲಿ ಸ್ಥಾನ ಸಿಗಲಿಲ್ಲ. ಅವನೇನೇ ಹೇಳಿದರೂ ಜನರಿಎಗ ಅವನಲ್ಲಿ ನಂಬಿಕೆ ಮೂಡಲಿಲ್ಲ. ಯಾರೂ ಹತ್ತಿರ ಸೇರಿಸದೆ ಇರಲು ಅವನು ಪುನಃ ಕಳ್ಳತನ ಮಾಡಿಯೇಬದುಕಬೇಕಾಯಿತು. ಹೀಗಲ್ಲದೆ ಅವನ್ನು ಕ್ಷಮಿಸಿದ್ದರೆ ಅವನು ಉದ್ಧಾರವಾಗುವ ಸನ್ಮಾರ್ಗಕ್ಕೆ ಹತ್ತುವ ಸಾಧ್ಯತೆ ಇತ್ತು.

ಕಥೆಗಳೂ ಸಹ ಮಕ್ಕಳಲ್ಲಿ ಉತ್ತಮ ಮೌಲ್ಯ ರೂಪಿಸಲು ಬಹು ಸಮರ್ಥವಾಗಿ ಕೆಲಸ ಮಾಡಬಲ್ಲವು. ಕ್ಷಮಾಗುಣವನ್ನು ಆಧರಿಸಿ ತಮ್ಮಲ್ಲಿ ಅಳವಡಿಸಿಕೊಳ್ಳುವ, ಸಹಾಯಕವಾಗುವುದು ಕಥೆಗಳು ಇವೆ. ಉದಾಹರಣೆಗಾಗಿ ಹೇಳುವುದಾದರೆ ಒಬ್ಬ ಶ್ರೀಮಂತನಿದ್ದನಂತೆ. ಒಂದು ಅಮೂಲ್ಯವಾದ ವಜ್ರದ ಉಂಗುರವನ್ನು ಅವನು ಹಾಕಿಕೊಂಡಿದ್ದ. ಬೇರಾರಿಗೂ ಅದನ್ನು ಹಾಕಿಕೊಳ್ಳಲು ಎಂದಿಗೂ ಕೊಡುತ್ತಿರಲಿಲ್ಲ. ಆದರೆ ಅವನಿಗೆ ವಯಸ್ಸಾದಂತೆ ತನ್ನ ಕಾಲಾನಂತರ ಯಾರಿಗೆ ಈ ಉಂಗುರ ಕೊಡಬೇಕು ಎಂದು ಯೋಚಿಸುತ್ತಿದ್ದ. ಈ ಮಹತ್ವದ ಉಂಗುರವನ್ನು ಅತ್ಯಂತ ಶ್ರೇಷ್ಠನಾದವನಿಗೇ ಕೊಡಬೇಕೆಂದು ತಂದೆಯ ಆಸೆ. ಅವನಿಗೆ ಮೂರುಜನ ಮಕ್ಕಳಿದ್ದರು. ತಂದೆಯ ಕಾಲಾನಂತರ ತಾನೇ ಆ ಉಂಗುರವನ್ನು ಪಡೆಯಬೇಕೆಂದು ಮೂವರೂ ತಮ್ಮ ತಮ್ಮಲ್ಲಿಯೇ ಹಂಚಿಕೆ ಹಾಕಿಕೊಂಡಇದ್ರು.ಒಮದು ದಿನ ತಂದೆಗೆ ತಾನು ಇನ್ನು ಬಹಳ ವರ್ಷ ಬದುಕುವುದಿಲ್ಲ ಎನ್ನಿಸಿದಾಗ ಯೋಗ್ಯನನ್ನು ಗುರ್ತಿಸಿ ಅವನಿಗೆ ಆ ಉಂಗುರ ಕೊಡಬೇಕೆಂದು ಮೂವರನ್ನು ಕರೆದು, "ನೋಡಿ ಈ ಉಂಗುರವನ್ನು, ನಿಮ್ಮಲ್ಲಿ ಯಾರು ಅತ್ಯಂತ ಶ್ರೇಷ್ಠ ವ್ಯಕ್ತಿತ್ವನ್ನು ತೋರಿಸುತ್ತೀರೋ ಅವರಿಗೆ ಇದನ್ನು ಕೊಡುತ್ತೇನೆ. ನೀವು ಮೂವರೂ ಒಂದು ವರ್ಷ ಎಲ್ಲಿಯಾದರೂ ಹೋಗಿ ನಂತರ ಬನ್ನಿ. ಆ ಅವಧಿಯಲ್ಲಿ ನಿಮ್ಮಲಿ ಯಾರು ಅತ್ಯಂತ ಶ್ರೇಷ್ಠ ಕೆಲಸ ಮಾಡಿದ್ದೀರೋ ಅವರಿಗೆ ಬಹುಮಾನವಾಗಿ ಈ ಉಂಗುರವನನು ಕೊಡುತ್ತೇನೆ. ಈ ಉಂಗುರವನ್ನು ಪಡೆಯುವಂತಹ ಶ್ರೇಷ್ಠ ಕೆಲಸವನ್ನು ಮಾಡಿ ತೋರಿಸಬೇಕು" ಎಂದು ಹೇಳಿಕಳಿಸಿದ.

ಮೂವರೂ ಆ ಉಂಗುರವನ್ನು ಪಡೆಯುವ ಆಸೆಯಲ್ಲಿ ಹೊರಟರು. ಒಂದು ವರ್ಷದ ನಂತರ ಮನೆಗೆ ಹಿಂದಿರುಗಿದರು. ಆಗ ತಂದೆ ಮೊದಲನೆಯವನನ್ನು

ಕರೆದು ಅವನು ಮಾಡಿದ ಮಹತ್ಕಾರ್ಯದ ಬಗ್ಗೆ ವಿಚಾರಿಸಿದ. ಆಗ ಅವನು, "ಒಂದು ದಿನ ಒಬ್ಬ ಅಪರಿಚಿತನಾದ ಮನುಷ್ಯ ಬಂದು ತನಗೆ ಏನೋ ಮಹತ್ವವಾದ ಕೆಲಸಕ್ಕೆ ಹೋಗಬೇಕಾಗಿಯೂ ಅದನ್ನು ಮುಗಿಸಿ ಹಿಂದಿರುಗಿ ಬರುವತನಕ ಹಣದ ಗಂಟನ್ನು ಇಟ್ಟುಕೊಂಡಿರಬೇಕಾಗಿ ಹೇಳಿ ಹೇರಳವಾದ ಹಣದ ಗಂಟನ್ನ ಕೊಟ್ಟು ಹೋದ. ಕೆಲವು ತಿಂಗಳಾದ ಮೇಲೆಅವನು ಹಿಂದಿರುಗಿ ಬಂದಾಗ ನಾನು ಸ್ವಲ್ಪವೂ ವಂಚಿಸದೆ ಹಣದ ಹಿಂತಿರುಗಿಸಿದೆ. ಮನಸ್ಸು ಮಾಡಿದ್ದರೆ ಹಣದಕ್ಕಿಸಿಕೊಳ್ಳಬಹುದಿತ್ತು. ನನಗೆ ಹಣ ಕೊಟ್ಟಿದುದಕ್ಕೆ ಸಾಕ್ಷಿಯಾಗಲೀ, ಆಧಾರವಾಗಲೀ ಏನೂ ಇರಲಿಲ್ಲ. ಸುಲಭವಾಗಿ ಹಣ ಎತ್ತಿ ಹಾಕಬಹುದಿತ್ತು. ಆದರೆ ನಾನು ಹಾಗೆ ಮಾಡದೆ ಪ್ರಮಾಣಿಕತೆಯಿಂದ ಹಿಂತಿರುಗಿಸಿದೆ" ಎಂದನು ಉಂಗುರವನ್ನು ತಾನೇ ಪಡೆಯುವ ಆಸೆಯಿಂದ. ಆದರೆ ತಂದೆ, "ಇದರಲ್ಲಿ ಯಾವ ದೊಡ್ಡ ಗುಣವೂ ಇಲ್ಲ. ಹೊಸಬನಾದ ಆತನು ಅಪರಿಚಿತನಾದ ನಿನ್ನನ್ನು ನಂಬಿ ಹಣ ಕೊಟ್ಟಿರುವಾಗ ನೀನು ತೋರಿಸಿರುವ ಪ್ರಾಮಾಣೀಕತೆಯನ್ನು ಅಯ್ಯೋಗ್ಯನಲ್ಲದ ಯಾವ ಸಾಮಾನ್ಯ ಮನುಷ್ಯನೂ ತೋರಿಸುತ್ತಿದ್ದ. ಇದು ಅತಿಶಯವಾದುದೇನೂ ಅಲ್ಲ" ಎಂದು ಹೇಳಿ ಎರಡನೇ ಮಗನನ್ನು ಕರೆದು ವಿಚಾರಿಸಿದ. ಅವನು, "ನಾನು ಒಂದು ಊರಿಗೆ ಹೋಗಿದ್ದೆ–ಅಲ್ಲಿಂದ ವಾಪ್ಸು ಹೋಗಬೇಕೆಂದು ಸ್ಟೇಷನ್ ಕಡೆ ಹೊರಟಿದ್ದೆ – ಆಗಲೇ ತಡವಾಗಿತ್ತು. ಗಡಿಬಿಡಿಯಿಂದ ಓಡುತ್ತಿದ್ದೆ– ಅಂತಹ ಸಮಯದಲ್ಲಿ ಒಬ್ಬ ಕುರುಡ ಒಂದು ದೊಡ್ಡ ಕೊರಕಲಿನ ಅಂಚಿನಲ್ಲಿ ನಿಂತಿದ್ದ. ಅಲ್ಲಿ ಬೇರಾರೂ ಇರಲಿಲ್ಲ. ಇನ್ನು ಒಂದು ಹೆಜ್ಜೆ ಮುಂದಿಟ್ಟಿದ್ದರೆ ಅವನು ಕೊರಕಲಿಗೆ ಬಿದ್ದು ಸಾಯುತ್ತಿದ್ದ – ಆಗ ನಾನು ನ್ನದೆಲ್ಲವನ್ನು ಮರೆತು ಓಡಿ ಹೋಗಿ ಅವನನ್ನು ರಕ್ಷಿಸಿದೆ" ಎದ. ಆಗ ತಂದೆಯು, "ಇಂತಹ ಅಸಹಾಯಕ ಸ್ಥಿತಿಯಲ್ಲಿರುವವನಿಗೆ ಯಾವ ಮನುಷ್ಯನಾದರೂ ಸಹಾಯ ಮಾಡಲೇಬೇಕು– ಅದು ಮಾನವೀಯ ಗುಣ. ಇದಿಲ್ಲದಿದ್ದರೆ ಅವನು ಮನುಷ್ಯನೇ ಎನಿಸಿಕೊಳ್ಳಲಾರ. ನೀನು ಮಾಡಿದ ಈ ಕೆಲಸದಲ್ಲಿ ಯಾವ ಮಹತ್ತಾದ ಅಂಶವೂ ಇಲ್ಲ" ಎಂದು ಬಿಟ್ಟ.

ನಂತರ ತನ್ನ ಮೂರನೇ ಮಗನನ್ನು ಕರೆದು ಕೇಳಿದ, "ಒಮ್ಮೆ ನಾನು ಒಂದು ಬೆಟ್ಟದ ಮೇಲೆ ಹೋಗುತ್ತಿದ್ದೆ. ಆ ಬೆಟ್ಟದ ತುದಿಯಲ್ಲಿ ಒಬ್ಬ ಮನುಷ್ಯ ಮಲಗಿ ನಿದ್ದೆ ಮಾಡುತ್ತಿದ್ದ. ಸಮೀಪದ ಪೊದರಿನಲ್ಲಿ ಒಂದು ಹುಲಿ ಅವನ ಮೇಲೆ ಹಾರಿಬಿಡಲು ಹೊಂಚುಹಾಕುತ್ತಿತ್ತ. ಆ ಮನುಷ್ಯನನ್ನು ಗಮನಿಸಿ ನೋಡಿದೆ. ಅವನು ಬೇರಾರೂ ಆಗಿರದೆ ನಾನು ಪ್ರತೀಕಾರಕ್ಕಾಗಿ ಹುಡುಕುತ್ತಿದ್ದ ನನ್ನ ವೈರಿಯಾಗಿದ್ದ. ನಾನು ಪ್ರೀತಿಸಿದ ಹುಡುಗಿಯನ್ನು ನನಗೆ ವಂಚಿಸಿ ಮದುವೆಯಾದವನು. ಅವನು – ನನ್ನನ್ನು ನಿರಾಸೆಯ, ದುಃಖದ ಮಡುವಿನಲ್ಲಿ

ಮುಳುಗಿಸಿದ್ದ ದ್ರೋಹಿ ಅವನಾಗಿದ್ದ. ಸಂದರ್ಭ ಸಿಕ್ಕಾಗ ಅವನ ಮೋಸಕ್ಕೆ ತಕ್ಕ ಪ್ರತೀಕಾರ ಮಾಡಬೇಕೆಂದು ಕಾಯುತ್ತಿದ್ದೆ. ಅಂತಹ ಅವನು ಈ ಅಪಾಯದಲ್ಲಿಯುವುದನ್ನು ನೋಡಿಮೊದಲೊಂದು ಕ್ಷಣ ಸಂತೋಷಪಟ್ಟೆ, ದೇವರೇ ತಕ್ಕ ಶಿಕ್ಷೆ ವಿಧಿಸುತ್ತಿದ್ದಾನೆ ಎಂದುಕೊಂಡೆ. ಆದರೆ ಮರುಕ್ಷಣವೇ ಅವನು ಸತ್ತೇಹೋಗುತ್ತಾನೆ ಂದು ತಿಳಿದಾಗ ಮನಸ್ಸು ತಡೆಯಲಿಲ್ಲ. ಕೂಡಲೇ ಕೈಯಲ್ಲಿದ್ದ ಬಂದೂಕಿನಿಂದ ಗುಂಡು ಹರಿಸಿ ಹುಲಿಯನ್ನು ಕೊಂದು ಅವನನ್ನು ಉಳಿಸಿದೆ" ಎಂದ. ಇದನ್ನು ಕೇಳಿದ ತಂದೆಗೆ ಅತೀವ ಆನಂದವಾಯಿತು. "ಅನ್ಯಾಯ ಮಾಡಿದವರಿಗೆ ಪ್ರತೀಕಾರ ಮಾಡುವುದು ಮಾನವ ಸಹಜ ಗುಣ. ಆದರೆ ಅನ್ಯಾಯ ಮಾಡಿದವನ ಕಷ್ಟದಲ್ಲಿ ಅವನ ದ್ರೋಹವನ್ನು ಕ್ಷಮಿಸಿ ಸಹಾಯ ಮಾಡುವುದು ದೈವೀಗುಣ. ಇದು ಎಲ್ಲರಲ್ಲೂ ಇರುವುದಿಲ್ಲ. ಅಂತಹ ಅಮೂಲ್ಯ, ಅಪರೂಪದ ಗುಣವನ್ನು ಪಡೆದ ನಿನಗೇ ಈ ಅಮೂಲ್ಯ ಉಂಗುರ ಸಿಕ್ಕಬೇಕು" ಎಂದು ಮೂರನೆ ಮಗನ ಬೆರಳಿಗೆ ಉಂಗುರವಿಟ್ಟ. ಈ ಕಥೆಯನ್ನು ಕೇಳೀದ ಮಕ್ಕಳಲ್ಲಿ ಕ್ಷಮಾಗುಣವನ್ನು ಪೋಷಿಸಿಕೊಳ್ಳಬೇಕೆಂಬ ಭಾವನೆ ಉಂಟಾದರೆ ಆಶ್ಚರ್ಯವಿಲ್ಲ.

ಕ್ಷಮೆಯ ಮಹತ್ತನ್ನು ತಿಳಿಸುವ ಅನೇಕ ಕಥೆಗಳು, ಘಟನೆಗಳು, ಕವನಗಳೂ ಇವೆ ಇವುಗಳನ್ನು ಓದಿದಾಗ ಕ್ಷಮೆ ಜೀವನದಲ್ಲಿ ಎಷ್ಟು ಅವಶ್ಯಕ ಎಂದು ಅರ್ಥವಾಗುತ್ತದೆ. ಕ್ಷಮಿಸುವ ಗುಣವಿರುವ ಮನಸ್ಸಿನಲ್ಲಿ ದ್ವೇಷದ ಭಾವನೆಯಾಗಲಿ, ಸೇಡು ತೀರಿಸಿಕೊಳ್ಳುವ ಮನೋಭಾವವಾಗಲಿ ಇರುವುದಿಲ್ಲ. ದ್ವೇಶ, ಸೇಡು, ಪ್ರತೀಕಾರ ಮುಂತಾದ ದುಷ್ಟ ಗುಣಗಳೆಲ್ಲ ಕ್ಷಮೆಯ ಅಭಾವದಿಂದ ಹುಟ್ಟಿದವುಗಳಾಗಿವೆ. ಕ್ಷಮಾಗುಣವನ್ನು ಬೆಳೆಸಿಕೊಳ್ಳಬೇಕಾದರೆ ಅಂತಹ ಗುಣಕ್ಕೆ ಮನ್ನಣೆ ಸಿಗುವ ಸನ್ನಿವೇಸಗಳು ಇರಬೇಕಾಗುತ್ತದೆ. ಅದರ ಮಹತ್ವವನ್ನು ತಿಳಿಸುವ ಕಥೆಗಳೂ, ಘಟನೆಗಳೂ, ಮಕ್ಕಳ ಕಿವಿಯಮೇಲೆ ಬೀಳುತ್ತಿದ್ದರೆ ಅವರು ಆ ದೆಶೆಯಲ್ಲಿಯೇ ವಿಚಾರ ಮಾಡತೊಡಗುತ್ತಾರೆ.

## ದ್ರೌಪದಿ

ಅಹಲ್ಯೆ, ದ್ರೌಪದಿ, ಸೀತೆ, ತಾರಾ, ಮಂಡೋದರಿಯರನ್ನು ಭಾರತೀಯರು ಪೂಜನೀಯರಾದ ಪಂಚಮಹಾಪತಿವ್ರತೆಯರೆಂದು ಗಣಿಸುತ್ತಾರೆ. ಈ ಪೂಜ್ಯನೀಯ ವ್ಯಕ್ತಿಗಳಲ್ಲಿ ಒಬ್ಬಳಾದ ದ್ರೌಪದಿ ಮಹಾಭಾರತದ ಮೂಲ ಕೀಲೆಂದು ಪರಿಗಣಿಸಿಬಹುದು. ಈಕೆಯದು ಬಹುಮುಖ ವ್ಯಕ್ತಿತ್ವ, ಸೀತೆ ಅತ್ಯಂತ ಮೃದು, ಕೋಮಲೆ, ಸೌಮ್ಯವತಿಯಾದರೆ ಈಕೆ ಸ್ವಾಭಿಮಾನಿ, ಛಲಗಾತಿಮ ಪೌರುಷದ ನಡೆ ಹಾಗೂ ಸೇಡಿನ ಮನೋಭಾವದವಳು. ಅನ್ಯಾಯವನ್ನು ಅಸಹಾಯಕತೆಯಿಂದ ಸಹಿಸದೆ ಸಿಡಿದೆದ್ದು ಕೆಂಡಕಾರುವ ಈಕೆಯ ಪ್ರಚೋದನೆ ಇಲ್ಲದಿದ್ದಲ್ಲ, ಬಡಿದಾಡುವ

ಪ್ರವೃತ್ತಿ ಇಲ್ಲದ ಧರ್ಮರಾಯ, ಸಹನ ಹಾಗೂ ನ್ಯಾಯವೆಂಬ ಮೌಲ್ಯಗಳ ಹೆಸರಿನಲ್ಲಿ ಕೌರವರಿಂದಾದ ಎಲ್ಲಾ ಅನ್ಯಾಯವನ್ನೂ ಸಹಿಸಿಕೊಂಡು, ರಾಜ್ಯವನ್ನೆಲ್ಲಾ ಕಳೆದುಕೊಂಡು ಬರಿಗೈಯಿಂದ ಬಂದು ಬಿಡುತ್ತಿದ್ದನೋ ಏನೊ. ತುಂಬಿದ ಸಭೇಯಲ್ಲಿ ಹೆಂಡತಿಗಾದ ಅವಮಾನವನ್ನು ತಾಳ್ಮೆಯ ಹೆಸರಿನಲ್ಲಿ ನುಮಗಿಕೊಮಡು, ದುಷ್ಟರಿಗೆ ಬುದ್ಧಿ ಕಲಿಸುವ ಗೊಡವೆಗೇ ಹೋಗುತ್ತಿರಲಿಲ್ಲವೇನೊ, ಮಹಾಭಾರತದ ಕಥೆಯನ್ನೋದಿದರೆ, ಕೃಷ್ಣನು ಸೂತ್ರಧಾರನಾದರೆ ದ್ರೌಪದಿ ಗಾಡಿಯನ್ನು ಮುಂದಕ್ಕೆಳೆದುಕೊಂಡು ಹೋಗುವ ಯಂತ್ರದಂತಿದ್ದಾಳೆ. ಈಕೆ ಸ್ವಾಭಿಮಾನಿಯಾದಂತೆ, ಕಾರ್ಯದಕ್ಷಳೂ, ಕಷ್ಟಸಹಿಷ್ಣವು ಅಹುದು.

ದ್ರೌಪದಿಉ ಪಾಂಡವರೈವರ ಪತ್ನಿಯಾಗಿ, ಎಲ್ಲರ ಪ್ರೀತಿ ಪಾತ್ರಳಾಗಿ ಪತಿಗಳ ಕಷ್ಟಸುಖಗಳಲ್ಲಿ ಕಕ್ಕುಲತೆಯಿಂದ ಪಾಲ್ಗೊಳ್ಳುವ ಶಕ್ತಿ ಅಪೂರ್ವವಾದುದು. ಈಕೆಯ ಸೌಂದರ್ಯ ಲೋಕೋತ್ತರವಾದುದೆಂದು ಕವಿಗಳು ಬಣ್ಣಿಸಿದ್ದಾರೆ. ವಿರಾಟನ ಅರಮನೆಗೆ ಹೋದಾಗ ಅಲ್ಲಿಯ ಸ್ತ್ರೀಯರು "ವನಿತೆ ಮಾನಿಸೆಯಲ್ಲ, ಮನುಜರಿಗಿನಿತು ರೂಪವೆಲ್ಲಿಯದು ವಿಸ್ಮಯ" ಎಂದು ಬೆರಗಾದರೆಂದು ವರ್ಣಿತವಾಗಿರುವುದನ್ನು ಓದಿದರೆ ಈಕೆ ಅಪೂರ್ವ ಸುದರಿಯಾಗಿದ್ದಳೆಂದು ತಿಳಿಯುತ್ತದೆ.

ಅಂತಃಪುರದ ಲಜ್ಜಾವತಿ, ರೂಪವತಿ ಆಗಿದ್ದಂತೆ ಅಧರ್ಮದ ಅಗಡುತನವನ್ನು ವಿರೋಧಿಸುವ ಗಡುಸುತನವನ್ನು ಈಕೆಯಲ್ಲಿ ಕಾಣಬಹುದು. ದುಶ್ಯಾಸನನು ತುಂಬಿದ ಸಭೆಯಲ್ಲಿ ಇವಳ ಸೀರೆಯನ್ನು ಸೆಳೆಯುವಾಗ ಭೀಷ್ಮ, ದ್ರೋಣ, ಕೃಪಾಶ್ವತ್ಥಾಮರು ಮೊದಲ್ಗೊಂಡು ರಾಜನೂ ಹಿರಿಯ ಮಾವನೂ ಆದ ಧೃತರಾಷ್ಟ್ರನೂ ಸಹ ಚಕಾರವೆತ್ತದೆ ಈ ಅಸಹ್ಯವಾದ ಕೃತಿಯನ್ನು ರಕ್ಷಿಸಲು ಕೇಳಿಕೊಳ್ಳುತ್ತಾಳೆ. ಆದರೆ ಯಾರೂ ಸಹಾಯಕ್ಕೆ ಬರದಾಗ ತನ್ನ ಗಂಡಂದಿರನ್ನು ಝುಂಕಿಸುತ್ತಾಳೆ. ಹಿರಿಯರನ್ನು ಕುರಿತು,

ಹಿರಿಯರಿಲ್ಲದ ಸಭೆ ಮನುಷ್ಯರ<br>ನೆರವಿಯಿದು ಸಭೆಯಲ್ಲ ಮೂರ್ಖರು<br>ಹಿರಿಯರಲ್ಲ ಯಥಾರ್ಥ ಭಾಷಣ ಭೀತ ಚೇತನರು.

ಎಂದು ಕುಲಗುರುಗಳನ್ನು, ವಂಶದ ಹಿರಿಯರೂ, ಪೂಜ್ಯರೂ ಆದ ಭೀಷ್ಮ ರನ್ನೂ ಲೆಕ್ಕಿಸದೆ ಕೋಪದಿಂದಾಡುವ ಮಾತು ಕೇಳುವವರಿಗೆ ಸದಾಚಾರಾದ ಎಲ್ಲೆಯನ್ನೇ ಮೀರಿದಂತೆ ಕಾಣುವುದು. ಕೃಷ್ಣನ ಸಹಾಯದಿಂದ ಈ ಅವಮಾನದ ಪ್ರಸಂಗದಿಂದ ಪಾರಾದ ನಂತರ ಧೃತ್ರರಾಷ್ಟ್ರನು ಈಕೆಯನ್ನು ಆದರಿಸಿ ಮಾತನಾಡಲು ಪ್ರಯತ್ನಿಸುತ್ತಾನೆ. ಆಗ, ರೋಷದಿಂದ ಅವನು ಹಿರಿಯತನವನ್ನು ಪರಿಗಣಿಸದೆ

ಹೀಯಾಳಿಸುವಿಕೆ ಆಕೆಯ ರಾಜಸಗುಣವನ್ನು ತೋರಿಸುವುದು. ಆದರ ಕುಲವಧುವಿಗೆ ಆಗುತ್ತಿದ್ದಂತಹ ಅಪಮಾನವನ್ನು ಹಿರಿಯರೆಲ್ಲರೂ ಅಸಹಾಯಕರಂತೆ ನೋಡುತ್ತಿದ್ರೆ ಆಕೆಯ ಕೋಪ ನೆತ್ತಿಗೇರುವುದು ಅಸಹಜವೇನಲ್ಲ. ಹಿರಿಯತನದ ಜವಾಬ್ದಾರಿಯನ್ನು ತೋರಿಸಲಾರದ ಅವರುಗಳ ಬಗೆಗೆ ಆಕೆಗೆ ಅಗೌರವವುಂಟಾದರೂ ಸಿಟ್ಟುಬಂದರೂ ಆಶ್ಚರ್ಯವೇನಲ್ಲ. ಸೀತೆಯೂ ದುಃಖಕ್ಕೆ ಗುರಿಯಾಗಿದ್ದಳು. ಆದರೆ ಆಕೆ ಇಂತಹ ಅಪಮಾನಕ್ಕೆ ಎಂದು ಒಳಗಾಗಿರಲಿಲ್ಲ. ರಾವಣನ ರಾಜ್ಯದಲ್ಲಿ ಬಂಧಿಯಾಗಿದ್ದರೂ ಅವಳ ಗೌರವಕ್ಕೆ ಕುಂದುಂಟಾಗುವ ಘಟನೆ ನಡೆಯಲಿಲ್ಲ. ಅನ್ಯಾಯವನ್ನು ಅಸಹಾಯಕತೆಯಿಂದ ಸಹಿಸಬೇಕಾದ ಪ್ರಸಂಗ ಬಂದಾಗ, ಅದರಲ್ಲೂ ಮರ್ಯಾದೆಯ ವಿಷಯದಲ್ಲಿ, ಗೌರವಾನ್ವಿತ ಮಹಿಳೆ ಸಿಡಿದೇಳುವುದು ಆಕೆಯ ಸ್ವಾಭಿಮಾನದ ಹೆಗ್ಗುರುತು. ಇದನ್ನು ನಾವು ದುರ್ಗುಣವೆಂದು ಹೇಳಲು ಬರುವುದಿಲ್ಲ.

ದುಶ್ಶಾಸನನು ಅವಳ ಮುಡಿಯನ್ನು ಹಿಡಿದು ಎಳೆದುಕೊಂಡು ಸಭೆಗೆ ಬಂದಾಗ ದುರ್ಯೋಧನನು ತೊಡೆಯನ್ನು ಬಡಿದುಕೊಂಡು ಒಬ್ಬ ವೇಶ್ಯೆಯನ್ನು ಆಹ್ವಾನಿಸುವಂತೆ ಆಹ್ವಾನಿಸುತ್ತಾನೆ. ಆಗ ದುಃಖ, ಸಿಟ್ಟು, ಅಸಹಾಯಕತೆಯಿಂದ ತುಂಬಿದ ದ್ರೌಪದಿ, ಆ ತೊಡೆಯನ್ನು ಸೀಳಿ, ಆ ರಕ್ತದಲ್ಲಿ ದುಶ್ಶಾಸನನ ಕರುಳನ್ನು ಎದ್ದಿ, ತನ್ನ ಮುಡಿಯನ್ನು ಬಾಚುವವತೆಗೆ ಅದನ್ನು ಕಟ್ಟುವುದಿಲ್ಲವೆಂದು ಶಪಥ ಮಾಡುತ್ತಾಳೆ. ಇದನ್ನು ಕೇಳಿದವರಿಗೆ ಆಕೆ ಬಹುಸೇಡಿನ ಕ್ರೂರ ಸ್ವಭಾವದವಳು ಎನ್ನಿಸಬಹುದು. ಆದರೆ ಅಂತಹ ರೋಷ ಬರಬೇಕದರೆ ಆಕೆಯ ಮನಸ್ಸಿನ ನೋವೆಷ್ಟು ಎಂಬುದನ್ನು ಅರ್ಥಮಾಡಿಕೊಂಡಾಗ ದ್ರೌಪದಿಯ ಬಗ್ಗೆ ಅನುಕಂಪ ಉಂಟಾಗುತ್ತದೆ.

ಸೇಡೊಂದೇ ದ್ರೌಪದಿಯ ಗುಣವಲ್ಲ. ಆಕೆ ಕೃತಜ್ಞತಾಭಾವನೆ ಉಳ್ಳವಳು ಕೂಡ ಭಕ್ತಿಪರಾಯಿಣೆ ದ್ರೌಪದಿ ವಸ್ತ್ರಾಪಹರಣ ಸಂದರ್ಭದಲ್ಲಿ ಅಲ್ಲಿದ್ದ ಯಾರೂ ಸಹಾಯ ಮಾಡದಿದ್ದಾಗ ಕೃಷ್ಣನ ಮೊರೆ ಹೋಗುತ್ತಾಳೆ. ಆಕೆಯ ಉತ್ಕಟವಾದ ಭಕ್ತಿಯ ಭಾವ ದೂರದಲ್ಲಿದ್ದ ಕೃಷ್ಣನ ಗಮನವನ್ನು ಸೆಳೆದು ಸಹಾಯಕ್ಕೆ ಬರುವಂತೆ ಮಾಡುತ್ತದೆ. ಅವನ ಸಹಾಯವನ್ನು ಅತ್ಯಮತ ಕೃತಜ್ಞತೆಯಿಂದ ನೆನೆಯುವ ಆಕೆ, ಅರಣ್ಯದಲ್ಲಿ ತಮ್ಮ ಕುಟೀರಕ್ಕೆ ಕೃಷ್ಣ ಬಂದಾಗ ಹಿಂದನ ಘಟನೆ ನೆನೆದು, ದುಃಖ ಒತ್ತರಿಸಿಬಂದು ಅವನ ಪಾದದ ಮೇಲೆ ಬಿದ್ದು ಹೊರಳಾಡುತ್ತಾಳೆ. ಒಮ್ಮೆ ಕೃಷ್ಣನ ಕೈಗೆ ಗಾಯವಾಗುತ್ತದೆ. ಆಗ ಈಕೆ ತನ್ನ ಪಟ್ಟೆಯ ಸೀತೆಯನ್ನೇ ಹರಿದು ಕಟ್ಟುವಲ್ಲಿ ತನ್ನ ಕರುಣಾಮಯ ಸ್ವಭಾವವನ್ನು ವ್ಯಕ್ತಪಡಿಸಿದ್ದಾಳೆ.

ಈಕೆ ಆದರ್ಶ ಗೃಹಿಣಿಯೂ ಆಗಿದ್ದಳು. 'ಯಾವ ವ್ರತ ಮಂತ್ರಾಷಧಿಗಳನ್ನು ಉಪಯೋಗಿಸಿದೆ' ಎಂದು ಸತ್ಯಭಾಮೆ ಆಶ್ಚರ್ಯದಮದ ಪ್ರಶ್ನಿಸುವಷ್ಟರಮಟ್ಟಿಗೆ

ಆಕೆ ಐದು ಜನ ಪತಿಗಳನ್ನು ಸಮಾಧಾನದಲ್ಲಿಟ್ಟುಕೊಂಡಿದ್ದಳು. ಅತ್ತೆಯಾದ ಕುಂತಿಯನ್ನು ಗೌರವದಿಂದ ಸೇವಿಸುತ್ತಿದ್ದಳೂ. ಅತಿಥಿಗಳನ್ನು ಬ್ರಾಹ್ಮಣರನ್ನು ಆದರದಿಂದ ಸತ್ಕರಿಸುತ್ತಿದ್ದಳು. ಸೇವಕರನ್ನು ಕರುಣೆಯಿಂದ ಕಾಣುತ್ತಿದ್ದಳು. ಸೊಸೆಯನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು.

ಈಕೆ ಧರ್ಮಜ್ಞಾನ ಉಳ್ಳವಳೂ ಚತುರೆಯೂ ಹಾಸ್ಯಪ್ರಿಯಳೂ ಪೌರುಷವನ್ನು ಮೆಚ್ಚುವ ಗುಣವುಲ್ಲವಳೂ ಆಗಿದ್ದಾಳೆಂದು ಅನೇಕ ಸಂದರ್ಭಗಳಲ್ಲಿ ಕಾಣಿಸುತ್ತಿದೆ. ಒಟ್ಟಿನಲ್ಲಿ ಬಹುಮುಖ ಪ್ರತಿಭೆಯ ದ್ರೌಪದಿ, ಸ್ತ್ರೀಕುಲದಲ್ಲಿ ಉನ್ನತ ಸ್ಥಾನವನ್ನು ಗಳಿಸಿರುವ ಉತ್ತುಂಗ ಸ್ತ್ರೀಯಾಗಿ ಪ್ರಕಾಶಿಸಿದ್ದಾಳೆ.

**ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ?**

ದೇವರು ಇದ್ದಾನೆಯೋ ಇಲ್ಲವೋ ಎಂಬ ಜಿಜ್ಞಾಸೆ ಇಂದು ನೆನ್ನೆಯದಲ್ಲ. ಶತ-ಶತಮಾನಗಳಿಂದ ಈ ಬಗೆಗೆ ಪರ-ವಿರೋಧಾಭಿಪ್ರಾಯಗಳು ಜನ ಜನಿತವಾಗಿವೆ. ವೈಜ್ಞಾನಿಕ ಯುಗವಾದ ಇಂದಿನ ದಿನಗಳಲ್ಲಂತೂ ವಿದ್ಯಾವಂತ ಜನ ಪ್ರತಿಯೊಂದಕ್ಕೂ ಕಾರ್ಯ-ಕಾರಣ ಸಂಬಂಧ ಅನ್ವಯಿಸಿ, ದೇವರಿದ್ದಾನೆ ಎಂಬುದಕ್ಕೆ ಸರಿಯಾದ ಆಧಾರಗಳಿಲ್ಲವೆಂದು ವಾದಿಸುತ್ತಾರೆ. ಅವರು ಕಣ್ಣಿಗೆ ಕಾಣದುದನ್ನು ನಂಬಲು ಸಿದ್ಧರಿಲ್ಲ. ನೀರಿನಲ್ಲಿ ವಿದ್ಯುಚ್ಛಕ್ತಿ ಇದೆ ಎಂಬುದನ್ನು ವೈಜ್ಞಾನಿಕವಾಗಿ ಸಾಧಿಸಿ ಸ್ಪಷ್ಟಪಡಿಸಲುಹೇಗೆ ಸಾಧ್ಯವೋ ಹಾಗೆ ದೇವರ ಇರುವಿಕೆಯನ್ನು ಸಾಧಿಸಿ ತೋರಿಸಿದರೆ ಮಾತ್ರ ನಂಬುತ್ತೇವೆ ಎನ್ನುತ್ತಾರೆ. ಕೆಲವು ಆಧುನಿಕ ಸಮಾಜ ಶಾಸ್ತ್ರಜ್ಞರು 'ದೇವರು' ಎನ್ನುವುದೊಂದು ಕಾಲ್ಪನಿಕ ಶಬ್ದ. ಸಮಾಜದಲ್ಲಿ ಜನ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಲು, ಶಿಸ್ತನ್ನು ಉಂಟುಮಾಡಲು, ವ್ಯಕ್ತಿಯಲ್ಲಿ ಮೌಲ್ಯಗಳನ್ನು ಮೊಳೆಯಿಸಲು ಮಾನವ ಸೃಷ್ಟಿಸಿದ ಅಥವಾ ಸಂಶೋಧಿಸಿದ ಒಂದು ಪ್ರಮೇಯ ಎನ್ನುವವರೆಗೂ ಹೋಗಿದ್ದಾರೆ. ಆದರೆ ದೇವರಲ್ಲಿ ನಂಬಿಕೆ ಇಟ್ಟಿರುವ ಜನ, "ದೇವರು ಎಂದರೆ ಅಷ್ಟು ಸುಲಭವಾಗಿ ಪರಿಗಣಿಸಬಾರದು. ವೈಜ್ಞಾನಿಕ ವಿಷಯಗಳನ್ನು ಸಾರ್ವತ್ರಿಕವಾಗಿ ಸಾಧಿಸಿ ತೋರಿಸುವಂತೆ, ತೋರಿಸುವ ಅಥವಾ ಹೇಳುವ ವಿಷಯವಿದಲ್ಲ". ಇದು ವೈಯಕ್ತಿಕ ಸಾಧನೆ, ಅನುಭವಗಳಿಗೆ ಮಾತ್ರ ವೇಯವಾಗುವಂತಹದು. ಪ್ರಯೋಗಗಳಿಂದ ಸಿದ್ಧಮಾಡಿ ಒಬ್ಬರು ಇನ್ನೊಬ್ಬರಿಗೆ ತೋರಿಸಲು ಬರುವಂತಹುದಲ್ಲ. ಈ ಬಗೆಗೆ ಸತ್ಯಾಂಶ ಕಂಡುಹಿಡಿಯಬೇಕೆಂದು ಬಯಸಿ ವ್ಯಕ್ತಿ ವಿಜ್ಞಾನಿಯಂತೆ ಪರಿಶ್ರಮ ಪಡಬೇಕು. ತದೇಕ ಚಿತ್ತನಾಗಿ, ತಪಸ್ಸಿನಂತೆ ಆ ವಿಷಯವಾಗಿ ಶ್ರದ್ಧೆಯಿಂದ ಸತ್ಯವನ್ನರಸುವ ಸಾಧನೆಯಲ್ಲಿ ತೊಡಗಬೇಕು. ಒಂದು ಹೊಸ ಸಂಶೋಧನೆ ಮಾಡಬೇಕದ ವಿಜ್ಞಾನಿ ವರ್ಷಗಟ್ಟಲೆ ತನ್ನ ತನು, ಮನ, ಧನಗಳಿಂದ ತದೇಕ ಚಿತ್ರನಾಗಿ ಹೇಗೆ ದುಡಿಯುತ್ತಾನೋ ಹಾಗೆ, ದೈವ

ಸಂಶೋಧಕನೂ ಸಾಧನೆಯನ್ನು ಕೈಗೊಳ್ಳಬೇಕು. ವಿಜ್ಞಾನದ ಬಗ್ಗೆ ಅಷ್ಟು ದಲುಡಿದು, ಸತ್ಯನ್ನು ಸಂಶೋಧಿಸುವ ಆಧುನಿಕ ಮಾನವ, ದೇವರ ಸಾಕ್ಷಾತ್ಕಾರದಿಂದ, ಜಾಣತನದ ಬಲದಿಂದ ದೇವರುಇಲ್ಲವೇನೋ ಎಂಬ ಭ್ರಮೆಯಲ್ಲಿ ಇತರಿಗೂ ಹುಟ್ಟುವಂತೆ ಮಾಡುತ್ತಾನೆ. ಆದೆರ ಆ ದಿಶೆಯುಲ್ಲಿ ಸಾಧನೆಯನ್ನು ಮಾಡದೆ, ಚರ್ಚೆಯಿಂದ ಬಂದ ನಿರ್ಣಯವನ್ನು ಖಚಿತವೆಂದು ಹೇಳಲು ಬಾರದು. ಆ ಬಗ್ಗೆ ಸತ್ಯವನ್ನು ಅರಿಯುವ ಮನಸ್ಸಿದ್ದ ವ್ಯಕ್ತಿ. ಆ ಕ್ಷೇತ್ರದಲ್ಲಿ ಸಾಧನೆ ಮಾಡಿದ ಸತ್ಪುರುಷರಿಂದ ಸಾಧನೆಯ ಮಾರ್ಗವನ್ನು ಅರಿತುಕೊಂಡು ಮುಂದುವರಿಯಬೇಕು. ನಿಜವಾದ ಸಾಧನೆಯ ನಂತರ ಆದ ಅನುಭವದಿಂದ ಯೋಗ್ಯ ನಿರ್ಣಯಕ್ಕೆ ಬರುವುದು ಸರಿ.

ಅನೇಕ ಸಾಧು-ಸತ್ಪುರುಷರು, ಸಂತರು, ದಾಸರು, ಶರಣರು ದೇವರ ಇರುವಿಕೆಯ ಬಗೆಗೆ ಖಚಿತವಾದ ಮಾತುಗಳನ್ನು ಹೇಳಿದ್ದಾರೆ. ದಾಸರು, ಶರಣರು ತಮ್ಮ ಅನಿಸಿಕೆಗಳನ್ನು ಕೀರ್ತನೆ ಹಾಗೂ ವಚನಗಳ ರೂಪದಲ್ಲಿ ಮಾನವರಿಗೆ ಮಾರ್ಗದರ್ಶನವಾಗಲಿ, ದಾರಿದೀಪವಾಗಲೀ ಎಂಬ ಉದ್ದೇಶದಿಂದ ಉಳಿಸಿಟ್ಟು ಹೋಗಿದ್ದರೆ. ಅವರುಗಳು, ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಮಾರ್ಗವನ್ನು ತಮ್ಮದೇ ಅದ ರೀತಿಯಲ್ಲಿ, ಒಬ್ಬೊಬ್ಬರು ಒಂದೊಂದು ವಿಧವಾಗಿ ವರ್ಣಿಸಿದ್ದಾರೆ. ಅವರುಗಳ ತತ್ವದಸಾರದ ತಿರುಗಳೆಲ್ಲವೂ ಮೂಲತಃ ಒಂದೇ ಎಂಬುದನ್ನು ನಾವು ಅವರ ಸಾಹಿತ್ಯವನ್ನು ಆಳವಾಗಿ ಅಬ್ಯಾಸ ಮಾಡಿದರೆ ಅರ್ಥವಾಗುತ್ತದೆ. ದೇವರ ಸಾಕ್ಷಾತ್ಕಾರ ಮಾರ್ಗಗಳಾದ ಭಕ್ತಿ, ಜ್ಞಾನ, ವೈರಾಗ್ಯ ವಿಧಾನಗಳನ್ನು ತಮ್ಮ ಸ್ವಾನುಭವದಿಂದ ರೂಪಿಸಿದ್ದಾರೆ.

ಶರಣರು, ದೇವರನ್ನು ಒಲಿಸಬೇಕಾದರೆ ಮೊದಲು ನಮ್ಮಲ್ಲಿರುವ ಕಾಮ, ಕ್ರೋಧಾದಿ ಅರಿಷಡ್ವರ್ಗಗಳನ್ನು ಬೇರು ಸಹಿತ ಮನಸ್ಸಿನಿಂದ ನಮ್ಮ ನಿಶ್ಚಲ ಮನಸ್ಸಿನಿಂದ ಧ್ಯಾನಿಸಿದರೆ, ದೇವರ ಸಾಕ್ಷಾತ್ಕಾರ ಸುಲಭ ಸಾಧ್ಯ ಎಂಬ ಮಾತನ್ನು ಜೀವನದಲ್ಲಿ ಸಹಜವಾದ ಉದಾಹರಣೆ-ಉಪಮೆಗಳ ಮೂಲಕ ತುಂಬಾ ಸರಳವಾಗಿ ವಿವರಿಸಿದ್ದಾರೆ. ಹೃದಯದಲ್ಲಿ ವಿಷಸರ್ಪದಂತಿರುವ ಕಾಮ, ಕ್ರೋಧ, ದ್ವೇಷ-ದ್ವೋಷಗಳನ್ನು ತುಂಬಿಕೊಂಡು ಬಾಹ್ಯದಲ್ಲಿ ವ್ರತ, ಪೂಜೆ, ಉಪವಾಸ, ತಪಸ್ಸು ಮುಂತಾದ ಮಾರ್ಗಗಳಿಂದ ದೇವರನ್ನು ಒಲಿಸಲು ಪ್ರಯತ್ನಿಸಿದರೆ, ದೇಹ ದಂಡನೆಯಾಗುವುದೇ ಏನಃ ದೇವರ ಒಲುಮೆ ಸಾಧ್ಯವಿಲ್ಲ. ಹುತ್ತದೊಳಗೆ ಸೇರಿಕೊಂಡ ಹಾವನ್ನು ಒಡೆದು ಪುಡಿ ಮಾಡಿದರೂ, ಹುತ್ತದ ತಳದಲ್ಲಿ ಕಾಳಸರ್ಪ ಕ್ಷೇಮವಾಗಿದ್ದುಕೊಂಡು, ತನ್ನ ವಿಷದಿಂದ ಕೇಡು ಮಾಡಲು ಸಾಧ್ಯ. ಹಾಗೆಯೇ ಅರಿಷಡ್ವರ್ಗಗಳನ್ನು ತನ್ನ ಮನಸ್ಸಿನಿಂದ ಹೊರಚಲ್ಲದೆ, ನಾಶಗೊಳಿಸದೆ ದೇಹವನ್ನು

ಪೂಜೆಯ ಹೆಸರಿನಲ್ಲಿ ಎಷ್ಟು ದಂಡಿಸಿದರೂ ದೇವರ ಅರಿವು–ಇರವು ಅನುಭವಕ್ಕೆ ಬರಲು ಸಾಧ್ಯವಿಲ್ಲ. ದೇವರು ಆತ್ಮಶುದ್ಧಿ ಹಾಗೂ ಅಂತರಂಗ ಶುದ್ಧಿ ಇಲ್ಲದವರನ್ನು ಎಂದೂ ನಂಬುವುದಿಲ್ಲವಾಗಿ ದೇವರ ಸಾಕ್ಷಾತ್ಕಾರ ಮಾಡುವುದಿಲ್ಲ ಎಂಬ ಮಾತನ್ನು ಬಸವಣ್ಣನವರು ಬಹಳ ಸುಂದರವಾಗಿ ಮನಂಬುಗುವಂತೆ,

ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ಅಯ್ಯಾ
ಅಘೋರ ತಪವ ಮಾಡಿದೊಡೇನು ?
ಅಂತರಂಗ ಆತ್ಮಶುದ್ಧಿ ಇಲ್ಲದವರನೆಂತು ನಂಬುವನಯ್ಯಾ
ಕೂಡಲಸಂಗಮದೇವಾ

ಎಂದಿದ್ದಾರೆ. ಆದುದರಿಂದ ದೇವರ ಸಾಕ್ಷಾತ್ಕಾರದ ಮೊದಲ ಹೆಜ್ಜೆ ನಮ್ಮ ಅಂತರಂಗ ಶುದ್ಧಿಯಲ್ಲದೆ ಬಾಹ್ಯಾಡಂಬರದ ಪೂಜೆ, ವ್ರತ, ಉಪವಾಸಗಳಲ್ಲ ಎಂಬುದನ್ನು ನಾವು ನೆನಪಿನಲ್ಲಿಡಬೇಕು.

## ಆಟದ ಬಯಲು ಅನಾಚ್ಛಾದಿತ ಶಾಲೆ

ಎಲ್ಲರ ಜೀವನ ಬರೀ ಸುಖದ ಸುಪ್ಪತ್ತಿಗೆಯಲ್ಲ. ಅದು ಮುಳ್ಳಿನ ಹಾಸಿಗೆಯೂ ಹೌದು. ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಅವನನ್ನು ಪರೀಕ್ಷಿಸಬಹುದಾದಂತಹ ದುರ್ಧರ ಪ್ರಸಂಗದಲ್ಲಿ ಗುರುತಿಸಬಹುದು. ಬಾಳಿನ ಕಠಿಣತರ ಪ್ರಸಂಗಗಳಲ್ಲಿ ಧೈರ್ಯಗುಂದದೆ, ಹೌಹಾರದೆ ಕಷ್ಟವನ್ನು ಎದುರಿಸಿ ಕಹಿಯನ್ನು, ವಿಚಲಿತನಾಗದೆ ಸ್ವೀಕರಿಸುವ ಮನುಷ್ಯನೇ ಶ್ರೇಷ್ಠ ವ್ಯಕ್ತಿತ್ವ ಪಡೆದವನು ಎನ್ನಿಸಿಕೊಳ್ಳುತ್ತಾನೆ. ಜೀವನದ ಅಸಾಮಾನ್ಯ ಪ್ರಸಂಗದಲ್ಲೂ ವಿವೇಕದಿಂದ, ಸಮತೂಕ ಕಳೆದುಕೊಳ್ಳದೆ ಘನವಂತಿಕೆಯಿಂದ ನಡೆದುಕೊಂಡು ವ್ಯಕ್ತಿ ಉತ್ತಮ ವ್ಯಕ್ತಿತ್ವ ಪಡೆದವನು ಎನ್ನಿಸಿಕೊಳ್ಳುತ್ತಾನೆ.ಇಂತಹ ಉತ್ತಮ ವ್ಯಕ್ತಿತ್ವವನ್ನು, ದೃಢಕಾಯಕವಾದ ದೇಹದಾರ್ಢ್ಯತೆಯನ್ನು, ರಾಷ್ಟ್ರಪ್ರೇಮ, ಧೈರ್ಯ, ಸ್ಥೈರ್ಯ, ಆತ್ಮವಿಶ್ವಾಸ, ಕರ್ತವ್ಯ ನಿಷ್ಠೆ ಮುಂತಾದ ಮಹೋನ್ನತ ಗುಣಗಳನ್ನು ಮಕ್ಕಳು ಆಟದ ಬಯಲಿನಲ್ಲಿ ಕಲಿಯಲು ಸಾಧ್ಯವಿದೆ. ಆದುದರಿಂದಲೇ ಆಟದ ಬಯಲನ್ನು 'ಅನಾಚ್ಛಾದಿತ ಶಾಲೆ' ಎಂದು ಕರೆಯುತ್ತಾರೆ. ಏಕೆಂದರೆ ಅಲಲಿ ನಾಲ್ಕು ಗೋಡೆಗಲ ಮಧ್ಯದಲ್ಲಿ ಕಲಿಯಲಾಗದ ಅನೇಕ ಮುಖ್ಯ ವಿಚಾರಗಳನ್ನು ಕಲಿಯಲು ಸಾಧ್ಯವಿದೆ. ಬರೀ ವಿಷಯ ಸಂಗ್ರಹಣೆಯಿಂದ, ಜೀವನದ ನಾನಾ ಪರಿಸ್ಥಿತಿಗಳನ್ನು ಸಮರ್ಥವಾಗಿ ಎದುರಿಸಲು ಶಕ್ತಿಯನ್ನು ಪಡೆಯುವುದಿಲ್ಲ. ಅಂತಹ ಗುಣಗಳು ಬೆಳೆಯಲು ಸಹಾಯಕವಾದ ಅವಕಾಶಗಳು, ಪರಿಸ್ಥಿತಿಗಳು ಬಾಲ್ಯದಲ್ಲೇ ದೊರೆತು ಸರಿಯಾದ ಮಾರ್ಗದರ್ಶನ ಉಂಟಾದಾಗ ಸಮರ್ಥ ವ್ಯಕ್ತಿತ್ವ ರೂಪುಗೊಳ್ಳಲು ಅನುಕೂಲವಾಗುತ್ತದೆ.

ಚಿಕ್ಕ ವಯಸ್ಸಿನಿಂದಲೇ ಮಕ್ಕಳು ಸಣ್ಣಪುಟ್ಟದ್ದಕ್ಕೆಲ್ಲಾ ತುಂಬಾ ಚಿಂತಿಸದಂತೆ, ನಿರಾಧಾರವಾದ ಕಲ್ಪಿತ ಭಯಗಳಿಂದ ಕಂಗೆಡದಂತೆ, ಜೀವನದ ನೈಜತೆಯನ್ನು ಸಹಜವಾಗಿ ಸ್ವೀಕರಿಸುವಂತೆ ಮತ್ತು ತನ್ನ ಮಿತಿಯನ್ನು ನಿಸ್ಸಂಕೋಚವಾಗಿ, ಮುಚ್ಚು-ಮರೆಯಿಲ್ಲದೆ ಒಪ್ಪಿಕೊಳ್ಳುವಂತಹ ಮನೋಭಾವ ಬೆಳೆಸಿಕೊಳ್ಳಬೇಕು. ಅವರು ಬೇರೆಯವರನ್ನು ನೋಡಿ ಅಸಹನೆಪಡದೆ, ತಮ್ಮ ಸುತ್ತ-ಮುತ್ತಲಿನವರೊಡನೆ ಕೂಡಿ ಹೊಂದಿಕೊಂಡು ಬಾಳುವುದನ್ನು ಕಲಿಯಬೇಕು. ಅವಶ್ಯಬಿದ್ದಾಗ ಇತರರಿಗೆ ಸ್ವಪ್ರೇರಣೆಯಿಂದ ಸಹಾಯ ಮಾಡುವ ಮನೋಭಾವ ಹೊಂದಿರಬೇಕು. ಯಾವುದೇ ಕೆಲಸವನ್ನು ದಕ್ಷತೆಯಿಂದ ತನ್ನ ಶಕ್ತಿಮೀರಿ ಮಾಡುವಂತಿರಬೇಕು. ಪ್ರಸಂಗಬಿದ್ದಾಗ ತನ್ನ ಕುಟುಂಬ, ಶಾಲೆ, ಸಮಾಜ ಹಾಗೂ ತನ್ನ ದೇಶದ ಒಳಿತಿಗಾಗಿ ತನ್ನ ವೈಯಕ್ತಿಕ ಹಿತವನ್ನು ಕಡೆಗಣಿಸಲು ಸಿದ್ಧವಿರಬೇಕು. ಹಾಗೆಯೇ ಯುಕ್ತಾಯುಕ್ತ ವಿವೇಚಿಸುವ ಶಕ್ತಿಯೂ, ಅವಶ್ಯಕ ಸನ್ನಿವೇಶಗಳಲ್ಲಿ ಯೋಗ್ಯ ನಿರ್ಧಾರ ಕೈಗೊಳ್ಳುವ ಜಾಣ್ಮೆಯೂ ಇರಬೇಕಾದುದು ಅವಶ್ಯಕ. ಇಂತಹ ಗುಣಗಳನ್ನೆಲ್ಲಾ ಪ್ರತ್ಯೇಕವಾಗಿ ಬೋಧಿಸಬೇಕಾಗಿಲ್ಲ. ಆಟದ ಬಯಲಿನಲ್ಲಿ ಮಕ್ಕಳು ಆಡಾಡುತ್ತಲೆ ಕಲಿಯಬಹುದು.

ಆದುದರಿಂದ ಎಲ್ಲರ ಅಳವಿಗೂ ಸಾಧ್ಯವಾದ, ಎಲ್ಲ ಮಕ್ಕಳಿಗೂ ದೊರೆಯಬಹುದಾದ ಆಟದ ಪಯಲಿನ ಸದುಪಯೋಗವಾಗಬೇಕು. ಅಲ್ಲೇ ಅವರ ಉತ್ತಮೋತ್ತಮ ವ್ಯಕ್ತಿತವವು ರೂಪುಗೊಳ್ಳುವ ಗುಣಗಳನ್ನು ಪಡೆಯಲು ಅವಕಾಶಗಳೂ ಮಾರ್ಗದರ್ಶನವೂ ದೊರೆಯುವಂತಾಗಬೇಕು. ಆಗ 'ಆಟದ ಬಯಲು ಅನಾಚ್ಛಾದಿನ ಶಾಲೆ' ಎನ್ನುವ ಹೇಳಿಕೆಗೆ ಸಾರ್ಥಕತೆಯುಂಟಾಗುತ್ತದೆ.

### ಸಾಮಾಜಿಕ ಬದಲಾವಣೆ

ಸಮಾಜ ನಿರಂತರವಾಗಿ ಬದಲಾವಣೆಯನ್ನು ಹೊಂದುತ್ತಿರುತ್ತದೆ. ಬದಲಾವಣೆಗೊಳ್ಳುತ್ತಿರುವುದೇ ಸಮಾಜದ ಲಕ್ಷಣ ಅದು ಸ್ಥಗಿತವಾಗಿರಲು ಸಾಧ್ಯವಿಲ್ಲ. ಆದರೆ ಈ ಬದಲಾವಣೆ ಸಮಾಜವನ್ನೂ ಇನ್ನೂ ಉನ್ನತ ಸ್ಥಿತಿಗೆ ಏರಿಸುವಂತಾಗಬೇಕು. ಆಗ ಜನತು ನೆಮ್ಮದಿಯಿಂದ ಪ್ರಗತಿಸಾಧಿಸಲು ಸಾಧ್ಯ. ಇಲ್ಲದಿದ್ದಲ್ಲಿ ಘರ್ಷಣೆ, ಮೋಸ, ವಂಚನೆ, ಅವನತಿ, ಸಾವು ನೋವುಗಳು ಸಾಮಾಜಿಕ ಜೀವನಲದ್ಲಿ ಹಾಸು-ಹೊಕ್ಕಾಗಿ ಬಿಡುತ್ತವೆ. ಇದರಿಂದ ಜನಜೀವನ ಅಧೋಗತಿಗೆ ಇಳಿದು ಹೋಗುತ್ತದೆ. ಇಲ್ಲಿ ನೆಮ್ಮದಿ ಸಾಧ್ಯವಿಲ್ಲ. ಪ್ರಗತಿ ಕನ್ನಡಿಯಂತಾಗುತ್ತದೆ.

ಪ್ರಗತಿಪರ ಸಮಾಜವನ್ನು ಸಾಧಿಸಬೇಕಾದಲ್ಲಿ ಮುಖ್ಯವಾಗಿ ಒಳಿತನ್ನು ಗುರುತಿಸಿ ಅದಕ್ಕೆ ಪ್ರೋತ್ಸಾಹ ಸಿಕ್ಕುವಂತಾಗಬೇಕು. ಒಳ್ಳೆಯ ಗುಣ, ದಕ್ಷತೆ, ವಿವೇಕ, ಕಷ್ಟಪಟ್ಟು ದುಡಿಯುವಿಕೆ, ಪ್ರಾಮಾಣೀಕತೆ ಮುಂತಾದ ಆದರ್ಶಗಳನ್ನು ಜನರು

ಮೆಚ್ಚುವಂತಾಗಬೇಕು.. ಆಗ ಸಮಾಜದ ವ್ಯಕ್ತಿಗಳು ಮೌಲ್ಯಗಳಿಗೆ ಮಹತ್ವಕೊಟ್ಟು ಅವುಗಳನ್ನು ತಮ್ಮಲ್ಲಿ ಬೆಳೆಯಿಸಿಕೊಳ್ಳಲು, ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ತತ್ಫಲವಾಗಿ ಸಮಾಜಿಕವಾದ ಕೌಟುಂಬಿಕವಾದ ಘರ್ಷಣೆ, ವಂಚನೆ, ತಂತ್ರ ಕುಂತ್ರಗಳಿಗೆ, ಮೋಸಗಾರಿಕೆಗೆ, ಸೋಗಿನ ಜೀವನಕ್ಕೆ, ಸೋಮಾರಿಗತನಕ್ಕೆ ಅವಕಾಶವಿಲ್ಲವಾಗುತ್ತದೆ. ಇದರ ಫಲವಾಗಿ ಉತ್ತಮ ಸಮಾಜ ನಿರ್ಮಾಣಕ್ಕೆ ದಾರಿಯಾಗುತ್ತದೆ.

ಆದರೆ ಇಂದು ನಡೆಯುತ್ತಿರುವುದೇನು ? ಎಲ್ಲೆಲ್ಲಿಯೂ ದೌರ್ಜನ್ಯ, ಅವಿವೇಕ, ದುಷ್ಟತನಗಳೇ ತಂಬಿ ತುಳುಕುತ್ತಿವೆ. ಒಳ್ಳೆಯದಕ್ಕೆ, ಒಳ್ಳೆಯವನಿಗೆ ಸ್ಥಾನವಿಲ್ಲದಾಗಿದೆ. ಉತ್ತಮ ಗುಣಗಳನ್ನು ಹೊಂದಿದ ವ್ಯಕ್ತಿ ದುಷ್ಟತನದಲ್ಲಿ ದೌರ್ಬಲ್ಯ ಪಡೆದಿರುತ್ತಾನೆ. ಅಹಂಕಾರ, ದೌಷ್ಟ್ಯ ಕುತಂತ್ರಗಳ ಮುಂದೆ ಅವನು ನಿರುಪಯೋಗಿಯಂತೆ ಕಾಣುತ್ತಾನೆ. ಅಲ್ಲಿ ಅವನು ಅಸಹಾಯಕನಾಗಿ, ಏಕಾಂಗಿಯಾಗಿ ನಿಲ್ಲಬೇಕಾಗುತ್ತದೆ. ಹಾಗಾಗಿ ದಿಗ್ಭ್ರಮೆ ಹಿಡಿದವನಂತೆ, ದಿಕ್ಕು ಗಾಣದವನಂತೆ ತೊಳಲಾಡುತ್ತಾನೆ. ಆ ಸ್ಥಿತಿಯಲ್ಲಿರುವ ಅವನನ್ನು ನೋಡಿ ದುಷ್ಟತನ ಅಟ್ಟಹಾಸಪಡುತ್ತದೆ. ದುಷ್ಟಜನರೆಲ್ಲ ಒಟ್ಟುಗೂಡಿ ಅವನ ಬಗೆಗೆ ಗಹ-ಗಹಿಸಿ ನಗುತ್ತಾರೆ. ಅವನನ್ನು ಅಧೋಗತಿಗೆ ತಳ್ಳುವ ಸಂಧಾನ ನಿರಾತಂಕವಾಗಿ ಸಾಗುತ್ತದೆ. ಸಮಾಜದಲ್ಲಿ ಇರುವ ಕೆಲವು ಒಳ್ಳೆಯ ವ್ಯಕ್ತಿಗಳೂ ಸಹ ಒಳಿತಿಗಾಗಿ ಕೆಡುಕನ್ನು ಕೆಡುಕಿಗಾದ ವಿಜಯವನ್ನು ನೋಡಿ ಭಯದಿಂದ ವಿಹ್ವಲಗೊಳ್ಳುತ್ತಾರೆ. ಒಳಿತಿನ ಬೆಂಬಲಕ್ಕೆ ನಿಂತರೆ ತಮ್ಮ ಪರಿಸ್ಥಿತಿಯೂ ಹದಗೆಟ್ಟೀತೆಂದು ಎಲ್ಲದರಿಂದಲೂ ದೂರವಿದ್ದು ಇದ್ದೂ ಸತ್ತಂತೆ ಬದುಕುತ್ತಾರೆ. ಅಥವಾ ಕೆಡುಕಿನ ನೆರಳಲ್ಲಿ ಆಶ್ರಯಪಡೆದು ತಮ್ಮ ಬೇಳೆ ಬೇಯಿಸಿಕೊಳ್ಳುತ್ತಾರೆ. ಹೀಗಾಗಲೂ ಅವರ ಅಸಹಾಯಕತೆಯೇ ಕಾರಣ. ಅಂದರೆ ಮುಖ್ಯವಾಗಿ ಸಮಾಜದಲ್ಲಿ ಕೆಡುಕಿಗೆ ಮಹತ್ವವಿರುವುದೇ ಆಗಿದೆ. ಹೀಗಿರುವಾಗ ನಾವು ಉತ್ತಮ ಜೀವನವನ್ನು ನಡೆಸಲು ಪ್ರಗತಿ ಸಾಧಿಸಲು, ಯೋಗ್ಯರಾಗಿ ಬಾಳಲು ಹೇಗೆ ತಾನೆ ಸಾಧ್ಯ ?

ಈ ದುಷ್ಟ ಪರಿಸ್ಥಿತಿಯನ್ನು ಇಲ್ಲವಾಗಿಸಬೇಕಾದರೆ, ದೌರ್ಜನ್ಯವನ್ನು ಹಿಮೆಮಟ್ಟಿಸಬೇಕಾದರೆ, ಕ್ರೌರ್ಯ, ಮೋಸ, ವಂಚನೆಗಳನ್ನು ನಿರ್ನಾಮ ಮಾಡಬೇಕಾದರೆ, ಒಳಿತಿಗೆ ಗೌರವ ಸಿಕ್ಕುವಂತಾಗಬೇಕು. ಒಳ್ಳೆಯವರನ್ನು, ಒಳ್ಳೆಯತನವನ್ನು ಪುರಸ್ಕರಿಸುವ, ಕೆಟ್ಟದನ್ನು, ಕೆಟ್ಟತನವನ್ನು, ದುಷ್ಟವ್ಯಕ್ತಿಗಳನ್ನು ತಿರಸ್ಕರಿಸುವಂತಹ ಪ್ರವೃತ್ತಿ ಜನತೆಯಲ್ಲಿ ಮೂಡಬೇಕು. ಸಮಾಜದ ಆರೋಗ್ಯಕ್ಕೆ ಹಿತವಲ್ಲದ ನಡುವಳಿಕೆಗಳು ಯಾರಲ್ಲೇ ಕಾಣಲಿ, ಎಲ್ಲಿಯೇ ಇರಲಿ ಅವುಗಳನಹ್ನು ಸಮಾಜ ಒಕ್ಕಟ್ಟಿನಿಂದ ಹತ್ತಿಕ್ಕಬೇಕು. ಜನತೆಯ ಅಭಿವೃದ್ಧಿಗೆ, ಒಳಿತಿಗೆ ಸಹಾಯಕವಾಗಬಹುದಾದ ಶ್ರೇಷ್ಠ ಗುಣಗಳು, ಉತ್ತಮ ಕಾರ್ಯಾಗಳು ಎಲ್ಲೇ

ಇದ್ದರೂ ಅದಕ್ಕೆ ಪ್ರೋತ್ಸಾಹ ಸಿಕ್ಕುವಂತಹ ಪರಿಸ್ಥಿತಿ ಉಂಟಾಗಬೇಕು. ಇಂತಹ ಬದಲಾವಣೆಯಿಂದ ಸಮಾಜದಲ್ಲಿ ಕಲುಷಿತ ಹವೆ ಇಲ್ಲವಾಗಿ ಆರೋಗ್ಯಕರ ವಾತಾವರಣ ಉಂಟಾಗುತ್ತದೆ. ಆಗ ಜನತೆ ನೆಮ್ಮದಿಯಿಂದ ಉಸಿರಾಡಬಹುದು. ಆದುದರಿಂದ ಪ್ರತಿಯೊಬ್ಬರೂ ಈ ದಿಶೆಯಲ್ಲಿ ವಿಚಾರಮಾಡುವುದೊಳಿತು. ಇದರಿಂದ ವ್ಯಕ್ತಿಗತವಾದ ಒಳಿತು ಸಾಧಿತವಾಗುವುದಲ್ಲದೆ, ಸಾಮಾಜಿಕ ನೆಮ್ಮದಿ ಮೂಡಿ ಅಭಿವೃದ್ಧಿ ಕಾಣುವಂತಾಗುತ್ತದೆ. ಈ ದಿಶೆಯಲ್ಲಿ ಸಮಜದ ಪ್ರತಿಯೊಬ್ಬ ವ್ಯಕ್ತಿಯೂ ಕಾರ್ಯೋನ್ಮುಖನಾಗುವುದು ಅವಶ್ಯಕವಾದರೂ ಶಿಕ್ಷಕನ ಹೊಣೆ ಇಲ್ಲಿ ಎಲ್ಲರಿಗಿಂತ ಮಿಗಿಲಾದುದು.

## ದೇಶ ರಕ್ಷಣೆ ಪ್ರತಿಯೊಬ್ಬರ ಕರ್ತವ್ಯ

ದೇಶಪ್ರೇಮ ಎಲ್ಲರ ಹಕ್ಕು ಮತ್ತು ದೇಶ ರಕ್ಷಣೆ ಯಾರೊಬ್ಬರಗುತ್ತಿಗೆಯೂ ಅಲ್ಲ. ಪ್ರತಿಯೊಬ್ಬ ಪ್ರಜೆಯೂ ತನ್ನನಿತ್ಯ ಜೀವನದಲ್ಲಿಯೇ, ತನ್ನ ವ್ಯವಹಾರಿಕೆ, ಬಾಳುವೆಯಲ್ಲಿಯೇ ತಾನು ಕೈಕೊಂಡಿರತಕ್ಕ ಉದ್ಯೋಗದಲ್ಲಿಯೇ ದೇಶ ರಕ್ಷಣೆ ಮಾಡಬಹುದಾಗಿದೆ. ಒಟ್ಟಿನಲ್ಲಿ ಅವನು ದೇಶಕ್ಕೆ ನಿಷ್ಠನಾಗಿರಬೇಕು; ಯಾವುದೇ ಕಾರಣದಿಂದ ದೇಶದ್ರೋಹಿಯಾಗಲಾರೆನೆಂಬ ಆತ್ಮ ಪ್ರೇರಣೆ ಅವನ ಹೃದಯದಲ್ಲಿ ಅಡಗಿರಬೇಕು.

ವಿಜ್ಞಾನಿ ದೇಶದ ರಕ್ಷಣೆಗೆ ಬೇಕಾದ ಸಂಶೋಧನೆಗಲನ್ನು ಮಾಡಿ, ತನ್ನ ಜೀವನವನ್ನು ಸಾಗಿಸುತ್ತಲೇ ತನ್ನ ಕೆಲಸಕ್ಕೆ ತಕ್ಕ ಪ್ರತಿಫಲ ಹಾಗೂ ಕೀರ್ತಿ ಪಡೆಯುತ್ತಲೇ ದೇಸ ರಕ್ಷಿಸುವ ಕಾರ್ಯದಲ್ಲಿ ನೆರವಾಗಬಹುದು. ಶಿಕ್ಷಕನಂತೂ ವಿಧ-ವಿಧದ ಕ್ಷೇತ್ರಗಳಿಗೆ ದಕ್ಷರೂ, ಪ್ರಾಮಾಣಿಕರೂ, ದೇಶಪ್ರೇಮಿಗಳೂ ಆದಂತಹ ವ್ಯಕ್ತಿಗಳನ್ನು ರೂಪಿಸಿ ತಮ್ಮ ಸೇವೆ ಸಲ್ಲಿಸಬಹುದು. ಹಾಗಲ್ಲದೆ ಮಕ್ಕಳು ಸ್ವಾರ್ಥಪರರೂ, ಯೋಗ್ಯತೆಯಿಲ್ಲದವರೂ, ಅಪ್ರಾಮಾಣಿಕರೂ, ಅದಕ್ಷರೂ ಆಗುವಂತಹ ವಾತಾವರಣ ಕಲ್ಪಿಸಿ, ಪೀಳಿಗೆಯೇ ಅಧೋಗತಿಗಿಳಿಯಲು ಶಿಕಷಕ ಕಾರಣನಾದರೆ ಅವನಂತಹ ದೇಶದ್ರೋಃಈ ಮತ್ತೊಬ್ಬ ನಿಲ್ಲ.

ಜನರು ತಮ್ಮ ಹೊಣೆಯರಿತು ನಡೆಯದಿರುವುದೇ ಎಲ್ಲಾ ಕಷ್ಟ-ಕೋಟಲೆಗಳ್ಗೆ ಕಾರಣ. ಬಹುಶಃ ದೇಶಾಭಿಮಾನವಿಲ್ಲದ ಪ್ರಜೆಗಳು ಯಾರೂ ಇರಲಾರರು. ಎಲ್ಲರೂ ತಾಯ್ನಾಡಿಗೆ ಋಣಿಗಳು. ಹೀಗಿರುವಾಗ ದೇಶದ್ರೋಹಿಗಳು ಎನ್ನಿಸಿಕೊಂಡವರೂ ಸಹ ದೇಶಕ್ಕೆ ವಿರೋದಿ ಚಟುವಟಿಕೆಗಲನ್ನು ದೇಶಕ್ಕೆ ದ್ರೋಹ ಮಾಡಬೇಕೆಂಬ ಉದ್ದೇಶದಿಂದ ಮಾಡಿರಲಾರರು. ಅವರ ಅಧಿಕವಾದ ಸ್ವಾರ್ಥ, ತಾವು ಮಾಡುವ ಕೆಲಸದ ಪರಿಣಾಮದ ಬಗ್ಗೆ ವಿವೇಚಿಸದಷ್ಟು ಮೂರ್ಖರನ್ನಾಗಿ

ಮಾಡುತ್ತದೆ. ಅದಕ್ಕಾಗಿ ಯಾರೇ ಆಗಲೀ, ಯಾವ ಉದ್ಯೋಗವನ್ನೇ ಮಾಡುತ್ತಿರಲಿ ತಮ್ಮ ಸ್ವಾರ್ಥ ಎಷ್ಟರ ಮಟ್ಟಿನ ಕೆಡುಕನ್ನು ಮಾಡಬಲ್ಲದು ಎಂಬ ಬಗ್ಗೆ ವಿಚಾರಮಾಡಬೇಕು. ಈ ವಿಷಯದಲ್ಲಿ ಶಿಕ್ಷಕರ ಕರ್ತವ್ಯ ಮಹತ್ತರವಾಗಿದೆ. ರಾಷ್ಟ್ರ ಕಟ್ಟಬಲ್ಲ ಶಕ್ತಿ ಶಿಕ್ಷಕರಲ್ಲಿದೆ ಎಂದು ಹೇಳಿದರೆ ತಪ್ಪಾಗಲಾರದು. ಅಂತಹ ಜವಾಬ್ದಾರಿಯನ್ನು ಶಿಕ್ಷಕರು ಬಹು ಎಚ್ಚರಿಕೆಯಿಂದ ನಿರ್ವಹಿಸಬೇಕು. ಅವರು ವಿಷಯ ಸಂಗ್ರಹಣೆ ಮಾಡುವುದನ್ನು ಮಾತ್ರ ಕಲಿಸದೆ, ಹೊಣೆಗಾರರಾದ, ಕರ್ತವ್ಯ ನಿಷ್ಠೆಯುಳ್ಳ, ಪ್ರಾಮಾಣಿಕ ಪ್ರಜೆಗಳನ್ನು ರೂಪಿಸಬೇಕು. ಆಗ ಅವರು ತಮ್ಮ ಕರ್ತವ್ಯವನ್ನು ಸರಿಯಾಗಿ ಮಾಡಿದಂತಾಗುತ್ತದೆ.

**ಸಹಕಾರ**

ಸಹಕಾರ ಜೀವನದ ಮೂಲ ಮಂತ್ರ. ಇದು ಪ್ರತಿಯೊಬ್ಬರಿಗೂ ಬಾಳಿನುದ್ದಕ್ಕು ಬೇಕು. ಸಹಕಾರವಿಲ್ಲದ ಜೀವನ ಬರಡು, ಸಮಸ್ಯಾಮಯ, ಜಟಿಲ. ಸಹಕಾರವನ್ನು ಎಲ್ಲರೂ ಬಯಸುತ್ತಾರೆ. ಇದರ ಮಹತ್ತು ಎಲ್ಲರಿಗೂ ಗೊತ್ತು. ಹಾಗಾಗಿ ಬೇಕಾದಷ್ಟು ಸಹಕಾರ ಸಂಘಗಳು ತಲೆ ಎತ್ತಿವೆ. ಆದರೆ ಇಂದಿನ ಸಮಾಜದಲ್ಲಿ ಸಹಾಕಾರ ಮಾತ್ರ ಸೊನ್ನೆ.

ಈ ಸಹಕಾರದ ತರಬೇತಿ ನಮ್ಮ ಜನಕ್ಕಿಲ್ಲವಾಗಿ ಸಹಕಾರದ ಪ್ರಶ್ನೆ ಬಂದಾಗ ಅಸಹಕಾರವನ್ನೇ ತೋರಿಸುತ್ತಾರೆ. ಪಾಪ ! ಅವರೇನು ಮಾಡಿ ಯಾರು. " ನಾವೇನು ಹೆಚ್ಚು ತಪ್ಪು ಮಾಡುತ್ತಲ್ಲ. ಸಹಕಾರಕ್ಕೆ 'ಅ' ಒಂದನ್ನು ಹೆಚ್ಚಾಗಿ ಸೇರಿಸಿದ್ದೇವಷ್ಟೆ" ಎಂದುಕೊಂಡಿರಬೇಕು. ಹಾಗಾಗಿ ಎಲ್ಲೆಲ್ಲಿ ಸಹಕಾರಬೇಕೊ ಅಲ್ಲೆಲ್ಲಾ ಅಸಹಕಾರವನ್ನೇ ಕಾಣುತ್ತಿದ್ದೇವೆ.

ಈ ಅಸಹಕಾಋ ತೋರಿಸುವ ಜನರ ಹಿನ್ನೆಲೆಯಲ್ಲಿ ಮನಶ್ಶಾಸ್ತ್ರದ ಒಂದು ಅಂಶ ಅಡಗಿದೆ. ಅಂತಹವರ ಬಾಲ್ಯಜೀವನದಲಿ ಸಹಕರಿಸಿ ನಡೆಯಬೇಕಾದಂತಹ ಅವಕಾಶಗಲು ದೊರೆತಿರಲಿಕ್ಕಿಲ್ಲ. ಹಾಗಾಗಿ, ಸಹಕಾರಕೊಡುಬೇಕಾದ ಸಂದರ್ಭದಲ್ಲಿ ಹೇಗೆ ಸಹಕರಿಸಿ ನಡೆಯಬೇಕೊ ಎಂಬುದೇ ಅವರಿಗೆ ಗೊತ್ತಿರುವುದಿಲ್ಲ. ಎರಡನೆಯದಾಗಿ ಬಾಲ್ಯದಲ್ಲಿ ಇದ್ದ ಅವರ ನಿಕಟವರ್ತಿಗಳು ಅಸಹಕಾರದ ಸ್ವಭಾವದವರಿರಬೇಕು. ಅದನ್ನು ಮೇಲಿಂದಮೇಲೆ ನೋಡಿ ಅವರಿಗರಿವಿಲ್ಲದಂತೆ ಈ ಗುಣ ಅವರಲ್ಲಿ ಮೈಗೂಡಿರಲೂಬಹುದು. ಅಲ್ಲದೆ ಹೆರವರ ಸಹಕಾರ ಅವರಿಗೆ ಬೇಕೆನ್ನಿಸಿದಾಗ ಅದು ದೊರೆತಿರಲಿಕ್ಕಿಲ್ಲ. ಅವರ ಸುತ್ತ-ಮುತ್ತ ಇದ್ದ ಜನ ಬೇರೆಯವರ ಅಗತ್ಯದ ಸಮಯದಲ್ಲಿ ಅಸಹಕಾರ ತೋರಿಸಿ ಆನಂದಪಡುವಂತಹವರು ಇದ್ದಿರಬೆಕು. ಹಾಗಾಗಿ ಅವರಿಗೆ ಅಂತಹ ಸಮಯದಲ್ಲಿ ಹೀಗತೆ ನಡೆದರೇ ತಮ್ಮ ಸ್ಥಾನ ಹೆಚ್ಚುತ್ತದೆ ಎನ್ನಿಸಿ, ಅಂತಹ ಸಂದರ್ಭ ಬಂದಾಗ ತಾವು ಅದೇ ರೀತಿ

ನಡೆಯುವುದನ್ನು ಕಲಿತಿರಬೇಕು, ಅಲ್ಲದೆ ತಮಗೆ ಸಹಕರ ಸಿಕ್ಕಲಿಲ್ಲವಾಗಿ ಅಸಹಾಯಕತೆಯಿಂದ ದ್ವೇಷ ಭಾವನೆ ಅವರ ಮನಸ್ಸಿನಲ್ಲಿ ಮೂಡಿರುತ್ತದೆ. ಸಿಟಟು ಬಂದಿರುತ್ತದೆ. ಅದನ್ನು ಮಾಡುವುದಕ್ಕೆ ಆಸ್ಪದವಿರುವುದಿಲ್ಲ. ಆಗ ಆ ಭಾವನೆಯನ್ನು ಮನದಲ್ಲೇ ಹತ್ತಿಕ್ಕಿಕೊಂಡಿರುತ್ತಾರೆ. ದೊಡ್ಡವರಾದಮೇಲೆ ತಮ್ಮ ಸಹಕರವನ್ನು ಬೇರೆಯವರು ನಿರೀಕ್ಷಿಸಿದಾಗ ಹಿಂದಿನ ಅಸಮಾಧಾನವನ್ನು ಈಗ ಅಸಹಕಾರ ತೋರಿಸುವುದರ ಮೂಲಕ ತೀರಿಸಿಕೊಳ್ಳುತ್ತಾರೆ; ಈ ಸೇಡನ್ನು ತೀರಿಸಿಕೊಳ್ಳಲು ತಮಗೆ ಅಸಹಕಾರ ತೋರಿದ ಮನುಷ್ಯನೇ ಆಗಬೇಕೆಂದಿಲ್ಲ. ಏಕೆಂದರೆ ಅವರ ಸೇಡು ಅಂತಹ ಜನರನ್ನು ಒಳಗೊಂಡ ಸಮಾಜದ ಮೇಲಿರುತ್ತದೆ. ಹಾಗಾಗಿ ಅವರು ಸಾಮಾಜಿಕ ಕೆಲಸಗಳಿಗೆ ಅಡ್ಡಗಾಲು ಹಾಕಿ ತಮ್ಮ ಆತ್ಮ ತೃಪ್ತಿ ಪಡೆದುಕೊಳ್ಳುತ್ತಾರೆ. ಕುಟುಂಬಗಳಲ್ಲಿಯೂ ಸಹ ಇಂತಹ ವಿಘ್ನಸಂತೋಷಿಗಳನ್ನು ಕಾಣಬಹುದು.

ಇಂತಹ ಅತೃಪ್ತ ಜನರೇ ಇಂದಿನ ಸಮಾಜದಲ್ಲಿ ಹೆಚ್ಚು, ಹಾಗಾಗಿ ಕುಟುಂಬಗಳಲ್ಲಿ ಅಸಹಕಾರ ಕಾಣುತ್ತೇವೆ. ಸಾಮಾಜಿಕ ಜೀವನದಲ್ಲೂ ಯಾವ ಕೆಲಸವೂ ಸುಸೂತ್ರವಾಗಿ ಆಗುತ್ತಿಲ್ಲ. ಅನೇಕ ಸಂಘ, ಸಂಸ್ಥೆಗಳು ಒಳ್ಳೆಯ ಗುರಿಗಳನ್ನಿಟ್ಟುಕೊಂಡು ಪ್ರಾರಂಭವಾಗುತ್ತವೆ; ಕೆಲಸ ಪ್ರಾರಂಭಿಸುತ್ತವೆಲ ಸಾರ್ವಜನಿಕ ಸಂಘ, ಸಂಸ್ಥೆಗಳೆಂದ ಮೇಲೆ ಅನೇಕ ಜನರು ಅದರಲ್ಲಿ ಸವಿರಿಕೊಳ್ಳುತ್ತಾರೆ. ಇವರಲ್ಲಿ ಯಾರು ಸಹಕರಿಸುವ ಸ್ವಭಾವದವರು, ಯಾರು ಅಸಹಕಾರವನ್ನೇ ಜೀವನದುದ್ದಕ್ಕೂ ತೋರಿಸುತ್ತ ಬಂದವರು ಎಂದು ಕಂಡು ಕೊಳ್ಳುವುದು ಕಷ್ಟ. ತಿಳಿದುಕೊಂಡರೂ ಇದು ಸಾರ್ವಜನಿಕ ಸಂಸ್ಥೆಯಾದ ಕಾರಣ ಅದರ ಚಟುವಟಿಕೆಗಳ ಭಾಗವಹಿಸಲು ಸಂಬಂಧಪಟ್ಟ ಎಲ್ಲರಿಗೂ ಮುಕ್ತದ್ವಾರವಿರುತ್ತದೆ. ಆದ್ದರಿಂದ ಬೇಕಾದವರೆಲ್ಲಾ ಅದರಲ್ಲಿ ಪಾಲ್ಗೊಳ್ಳುತ್ತಾರೆ. ಆದರೆ ಸಮಸ್ಯೆ ಪ್ರಾರಂಭವಾಗುವುದು ಕೆಲಸ ಪ್ರಾರಂಭಿಸಬೇಕೆಂದು ತೊಡಗಿದ ಮೇಲೆ. ಏನು ಕೆಲಸ ಮಾಡಬೇಕು, ಹೇಗೆ ಮಾಡಬೇಕು ಎಂದು ಚರ್ಚೆಗೆ ಪ್ರಾರಂಭಿಸಿದಾಗಲೇ 'ಅಸಹಕಾರ ಮಂದಿಯ' ಅಪಸ್ವರ ಶುರುವಾಗುತ್ತದೆ. ಚರ್ಚೆ ಜಗಳಕ್ಕೆ ತಿರುಗುತ್ತದೆ. ಜಗಳ ವಿರಸಕ್ಕೆ ಕಾರಣವಾಗುತ್ತದೆ. ವಿರಸ ದ್ವೇಷಕ್ಕೆ ಎಡೆಗೊಡುತ್ತದೆ. ಹೀಗಾದ ಸನ್ನಿವೇಶದಲ್ಲಿಯೇ ಯೋಚಿಸಿದ ಕೆಲಸ ಕಾರ್ಯಗಳು ಮುಂದುವರಿಯಲು ಅಸ್ಪದವಿರುವುದಿಲ್ಲ. ಈ ಅಸಹಕಾಋದ ಮಂದಿಗೆ ಕೆಲಸ ಕೆಡಿಸಿದಾಗಲೇ, ಕೆಲಸ ಮುಂದುವರಿಯದಂತೆ ಮಾಡಿದಾಗಲೇ ನೆಮ್ಮದಿ. ಮೇಲಾಗಿ ಅವರಿಗೆ ಸಾರ್ವಜನಿಕ ಹಿತಕ್ಕಾಗಿ ತಮ್ಮ ಸಮಯವನ್ನು, ಸ್ವಂತ ಹಿತವನ್ನು ಕಡೆಗಣಿಸಲು ಇಷ್ಟವಿರುವುದಿಲ್ಲ. ಆದುದರಿಂದ ಅಂತಹವರು ದುರ ಉಳಿದರೆ ಒಳ್ಳೆಯದು. ಆದರೆ ಅವರು ದೂರವೂ ಉಳಿಯುವುದಿಲ್ಲ. ಏಕೆಂದರೆ ತಾವು ಅಸಹಕಾಋ ಉಂಟುಮಾಡಿ ತಡೆ ಹಾಕದಿದ್ದರೆ

ಉಳಿದ ಜನ ಏನಾದರೂ ಒಳ್ಳೆಯ ಕೆಲಸ ಸಾಧಿಸುತ್ತಾರೆ. ಆಗ ಎಲ್ಲರಿಗೂ ಪ್ರಯೋಜನವಾಗುತ್ತದೆ. ಸಮಾಜದಲ್ಲಿ ಅವರ ಗೌರವ ಹೆಚ್ಚುತ್ತದೆ. ಹೀಗಾಗದಂತೆ ಮಾಡಬೇಕಾದರೆ ಅವರಿಗೆ ಕಾಣುವ ಸುಲಭ ಮಾರ್ಗ ಅಸಹಕಾರ. ಇಂತಹ ಜನ ಈಗ ಹೆಚ್ಚಾಗಿ ಸಾರ್ವಜನಿಕ ಜೀವನದಲ್ಲಿ ನೆಮ್ಮದಿ ಇಲ್ಲವಾಗಿದೆ. ಏಕೆಂದರೆ ಮಾನವ ಸಂಘ ಜೀವಿ. ಅವನಿಗೆ ಎಲ್ಲರೊಡನೆ ಬೆರೆತು ಸಂತೋಷದಿಂದ ಜೀವನ ಕಳೆದಾಗಲೇ ತೃಪ್ತಿ ದಓರೆಯುತ್ತದೆ. ಅಂತಹ ತೃಪ್ತಿ ಪಡೆಯುವಂತಹ ವಾತಾವರಣ ಸಮಾಜದಲ್ಲಿ, ಕುಟುಂಬಗಳಲ್ಲಿ ಇಲ್ಲದಿರುವುದು ಒಂದು ದುರಾದೃಷ್ಟವೆಂದೇ ಹೇಳಬೇಕು.

ಇಂತಹ ದುರದೃಷ್ಟಕರ ಸನ್ನಿವೇಶ ಮುಂದಾದರೂ ಇರಬಾರದೆಂದು ಬಯಸುವುದಾದರೆ ವಯಸ್ಕರರು ಇಂದಿನ ಪೀಳಿಗೆಗೆ ಅವರಿಗೆ ಅವಶ್ಯಕವಾದ ಎಲ್ಲ ರೀತಿಯ ಸಹಕರ ನೀಡಬೇಕು. ಸಹಕಾರ ಸಿಕ್ಕದೆ ಚಿಕ್ಕವರು ತಳಮಳಿಸದಂತೆ, ಸಮಸ್ಯೆಗೆ ಒಳಗಾಗದಂತೆ, ಅಸಮಾಧಾನ ಪಟ್ಟುಕೊಳ್ಳದಂತೆ ನೋಡಿಕೊಳ್ಳಬೇಕು. ಅಂದಾಗ ಮುಂದಿನ ಜನಾಂಗದ ಕಾಲದಲ್ಲಿಯಾದರೂ ಜನತೆ ಸಹಕಾರದ ಸೌಲಭ್ಯವನ್ನು ಪಡೆದು ನೆಮ್ಮದಿಯ ಜೀವನ ನಡೆಸಲು ಸಾಧ್ಯವಾದೀತು.

### ನೆರೆ–ಹೊರೆ

ಮನುಷ್ಯ–ಮನುಷ್ಯನನ್ನು ಅವಲಂಬಿಸಲೇಬೇಕು. ಯಾರೂ ಬೇರೆಯವರ ಅವಲಂಬನವಿಲ್ಲದೇ ಬದುಕಲು ಸಾಧ್ಯವಿಲ್ಲ. ಜಗತ್ತನ್ನು ಆಳುವ ಅರಸನಿಂದ ಹಿಡಿದು, ಭಿಕ್ಷೆ ಬೇಡುವ ಭಿಕ್ಷುಕನವರೆಗೆ ಎಲ್ಲರಿಗೂ ಒಂದಲ್ಲ ಒಂದು ರೀತಿಯಿಂದ, ಒಬ್ಬರಲ್ಲಿ ಒಬ್ಬರಿಂದ ನೆರವು ಬೇಕೇಬೇಕು.

ಅದರಲ್ಲೂ ನೆರೆಯವರ ನೆರವು ಬೇಡ ಎನ್ನುವವರು ಜಗತ್ತಿನಲ್ಲಿ ಯಾರೂ ಇರಲಾರರು. ಇದ್ದರೆ ಮಾತ್ರ ಅವರು ಮೂರ್ಖರೇ ಸರಿ. ಏಕೆಂದರೆ ಹತ್ತಾರು ಜನರಿದ್ದ ಮನೆಯಲ್ಲೂ ಒಮ್ಮೆಯಲ್ಲ ಒಮ್ಮೆ ಯಾರೂ ಇಲ್ಲದ ಒಬ್ಬರೆ ಇರಬಹುದಾದ ಪ್ರಸಂಗ ಬರಬಹುದು. ಆಗ ಏನೋ ಅಪಾಯ, ಏನೋ ಕಷ್ಟ, ಯಾವುದೋ ಅಗತ್ಯ ಬರಬಹುದು. ಅಂತಹ ಸಂದರ್ಭದಲ್ಲಿ ದೂರದವರು ಯಾರು ಬರುತ್ತಾರೆ? ತಂದೆಯೇ, ತಾಯಿಯೇ, ಅಣ್ಣ, ತಮ್ಮ, ಅಕ್ಕ, ತಂಗಿ, ಆಳು, ಕಾಳು ಯಾಗೂ ಸಮಯಕ್ಕೆ ಸಿಕ್ಕುವುದಿಲ್ಲ. ಗಟ್ಟಿಯಾಗಿ ಕೂಗಿದರೆ ಓ ಎನ್ನಬಲ್ಲ ನೆರೆಯವರೇ ಆಗ ದೇವರು. ಆದ್ದರಿಂದ ಕಷ್ಟಕ್ಕಾಗಲೀ, ಸುಖಕ್ಕಾಗಲೀ ನೆರೆಯವರು ನೆರವನ್ನು ನೀಡುವಂತಹವರಿರಬೇಕು. ಅದಕ್ಕೇ ಹೇಳುತ್ತಾರೆ, "ನೆರೆ ಚೆನ್ನಾಗಿದ್ದಡೆ ಮಗಳಿಗೆ ಬೇಗ ಮದುವೆಯಾಗುತ್ತದೆ"ಯೆಂದು, ನೆರೆಯವರ ನೆರವು ಎಲ್ಲಕ್ಕೂ ಒಳ್ಳೆಯದು.

ಆದರೆ ಇಂತಹ ವಿಶಾಲ ಭಾವನೆಯಿಲ್ಲದ, ಜೀವನವನ್ನು ಸರಿಯಾಗಿ

ಅರ್ಥಮಾಡಿಕೊಳ್ಳದ, ಸಂಕುಚಿತ ಸ್ವಭಾವದ ಜನರು ಜಗತ್ತಿನಲ್ಲಿ ಇರುತ್ತಾರೆ. ಅಂತಹವರು ತಮ್ಮಿಂದಲೇ ಜಗತ್ತು ತಿರುಗುತ್ತದೆ ಎನ್ನುವಂತೆ ನಡೆದುಕೊಳ್ಳುವುದರಿಂದ, ಉಳಿದವರ ನೆರವಿನ ಪ್ರಶ್ನೆಯೇ ಬರುವುದಿಲ್ಲ. ಎಲ್ಲವೂ ತಮ್ಮಿಂದ, ತಮಗಾಗಿ ಎಂಬುದು ಅವರ ಭಾವನೆ. ಹಾಗಾಗಿ ಉಳಿದವರಿಂದ ನೆರವು ಪಡೆಯುವುದು ತಮ್ಮ ಘನತೆಗೆ ಕುಂದು ಎಂಬಂತೆ ವರ್ತಿಸುತ್ತಾರೆ. ಬೇರೆಯವರಿಗೆ ನೆರವು ಕೊಡುವ ಸಂದರ್ಭ ಬಂದಾಗಲೂ ದೂರ ಸರಿದು ಬಿಡುತ್ತಾರೆ. ಆಗ ಅಂತಹವರು ನೆರೆಯಾಗದೆ ಹೊರೆಯಾಗುತ್ತಾರೆ. ಅದಕ್ಕೇ ಅನುಭವಸ್ಥರು, ಅಕ್ಕ-ಪಕ್ಕದವರನ್ನು ಬರೀ ನೆಲೆಯಲ್ಲಿ ಎನ್ನುವುದಿಲ್ಲ. ನೆರೆ-ಹೊರೆಯವರು ಎನ್ನುತ್ತಾರೆ. (ಅದಕ್ಕೆ ನೆರೆಯುವರಿಂದ ಹೊಟ್ಟೆಹೊರೆಯುವವರು ಅಥವಾ ನೆರೆಯುವರಿಗೆ ಹೊರೆಯಾಗಿರವವರು ಎಂದಾದರೂ ಅರ್ಥಮಾಡಿಕೊಳ್ಳಬಹುದು) ಆದ್ದರಿಂದ ನಾವು 'ನೆರೆ'ಯವರಾಗುವುದಾಗಲೀ ಅಥವಾ 'ಹೊರೆ'ಯಾಗಿರುವುದಾಗಲೀ ನಮ್ಮ ನಮ್ಮ ಸಂಸ್ಕಾರವನ್ನು ಅವಲಂಬಿಸಿರುತ್ತದೆ ಎಂದು ಹೇಳಬಹುದ. ಮನುಷ್ಯ ಬೇರೆಯುವರಿಗೆ ಹೊರೆಯಾಗದೆ ನೆರೆಯಾಗಬಲ್ಲವನಾದರೆ, ಅವನ್ನು ಸುಸಂಸ್ಕೃತನೆಂದು ಹೇಳಬಹುದು. ಇಲ್ಲದೆ 'ಹೊರೆ' ಯಾದರೆ ಅಸಂಸ್ಕೃತನೆನ್ನಿಸಿಕೊಳ್ಳುತ್ತಾನೆ.

### ಮೇಲು - ಕೀಳು ಭಾವಬೆ ಅಳಿಸಬೇಕು

ದೇವರ ದೃಷ್ಟಿಯಲ್ಲಿ ಮಾನವರೆಲ್ಲರೂ ಸಮಾನರು. ಮಳೆ, ಬಿಸಿಲು, ಭೂಮಿ ಮೊದಲಾದವುಗಳೆಲ್ಲವನ್ನೂ ಅವನು ಜೀವಿಗಳೆಲ್ಲರಿಗೂ ಒಂದೇ ಸಮನಾಗಿ ದೊರೆಯುವ ವ್ಯವಸ್ಥೆ ಮಾಡಿದ್ದಾನೆ. ಇದನ್ನು ಗಮನಿಸಿಯಾದರೂ ಮಾನವನು ತಮ್ಮ ತಮ್ಮಲ್ಲಿ ಭೇದವನ್ನು ಮರೆತು ಸಮಾನತೆಯಿಂದ ಬದುಕಬೇಕು.

ಜಗತ್ತಿನ ದೊಡ್ಡ ವ್ಯಕ್ತಿಗಳೆಲ್ಲ ದೇವರ ಈ ಸಮಾನತಾ ಭಾವನೆಯನ್ನು ಗುರುತಿಸಿ ಮಾನವ ಮಾನವನಲ್ಲಿ ಅಂತರವಿಲ್ಲದಂತೆ ಮಾಡಲು, ಸಮ/ಅನತೆಯನ್ನು ತರಲು ಸಾಕಷ್ಟು ಶ್ರಮಿಸಿದ್ದಾರೆ. ತಮ್ಮ ಜೀವಿತವನ್ನೆಲ್ಲಾ ಮಾನವನಿಗೆ ನೆಮ್ಮದಿಯನ್ನುಂಟುಮಾಡಲು, ಅವರಯ ಸುಖದಿಂದ ಬದುಕುವಂತೆ ಮಾಡಲು ಮುಡುಪಾಗಿರಿಸಿದ್ದಾರೆ. ಆದರೂ ಮನುಷ್ಯನಲ್ಲಿ ಮೇಲು-ಕೀಳು ಭಾವನೆ ಹೋಗುತ್ತಿಲ್ಲ. ಈ ಅಂತರದ ಭಾವನೆಯಿಂದ ಜಗತ್ತಿನ ಶಾಂತಿಯೇ ಕಲಕಿಹೋಗಿ, ಮನುಷ್ಯನ ಸುಖ ಕನ್ನಡಿಯ ಗಂಟಾಗಿದೆ. ಇದರಿಂದಾಗುವ ಅನರ್ಥ ಬಣ್ಣಿಸಲು ಅಸದಳ. ಮಾನ ಪ್ರಾಣ ಹಾನಿಗಳೆಷ್ಟೋ, ದುಃಖ ದುಮ್ಮಾನಗಳೆಷ್ಟೋ.

ಮನುಷ್ಯರಿಗೆ ದೇವರಲ್ಲಿ ವಿಶ್ವಾಸವಿಲ್ಲ. ರಾಷ್ಟ್ರದ ಮೇಲೆ ಪ್ರೇಮವಿಲ್ಲ. ಹೃದಯದಲ್ಲಿ ಕರುಣೆ ಇಲ್ಲ ಎಂದರ್ಥವಲ್ಲ. ಅವರ ಬಹುಮುಖ ಜೀವನದಲ್ಲಿ

ಇದೆಲ್ಲಾ ಇರುವುದು ವ್ಯಕ್ತವಾಗುತ್ತದೆ. ದೇವರ ಹೆಸರಿನಲ್ಲಿ ಪೂಜೆ ಪುನಸ್ಕಾರಗಳು, ವ್ರತ-ಉಪವಾಸಗಲೂ, ದಾನ-ತ್ಯಾಗಗಳೂ ಬೇಕಾದಷ್ಟು ನಡೆಯುತ್ತಿವೆ. ಆದರೆ ಆ ದೇವರ ಹೆಸರಿನಲ್ಲಿಯೇ, ಧರ್ಮದ ಹೆಸರಿನಲ್ಲಯೇ, ರಾಷ್ಟ್ರದ ಹೆಸರಿನಲ್ಲಿಯೇ ಕಿತ್ತಾಟ-ಕಚ್ಚಾಟಗಳೂ, ಹೊಡೆದಾಟ ಬಡಿದಾಟಗಳು, ಜಗಳ-ದೊಂಬಿಗಳು ನಡೆದು ರಕ್ತಪಾತವಾಗಿ ಕೋಟ್ಯಾಂತರ ನಿರಪರಾಧಿಗಳು ದುಖಕ್ಕೀಡಾಗುತ್ತಿದ್ದಾರೆ ಎಂಬುದೇ ಅತ್ಯಂತ ಕೌತುಕದ ಸಂಗತಿ.

ಜಾತಿ-ಜಾತಿಯಲ್ಲಿ ದ್ವೇಷ, ಜಾತಿ ಜಾತಿಯ ಒಳಗೇ ತಿಕ್ಕಾಟ ಎಂದರೆ ಜಾತಿಯ ಬಗ್ಗೆ, ಧರ್ಮದ ಬಗ್ಗೆ ಜನರಿಗೆ ಬಹಳ ಶ್ರದ್ಧೆ ಎಂದು ಹೇಳುವುದಕ್ಕೂ ಆಗುವುದಿಲ್ಲ. ಏಕೆಂದರೆ ಜನರ ಜೀವನ ನೋಡಿದರೆ ಅವರು ತಮ್ಮ-ತಮ್ಮ ಜಾಥಿಯ, ಧರ್ಮದ, ನೀತಿಯ ಕಟ್ಟು ಪಾಡಿನಂತೆ, ತತ್ವದಂತೆ ನಡೆದುಕೊಳ್ಳುತ್ತಿಲ್ಲ. ಹುಟ್ಟಿನಿಂದಷ್ಟೇ ಅವರು ಆ ಧರ್ಮಕ್ಕೆ ಅಥವಾ ಜಾತಿಗೆ ಸೇರಿದವರು. ಆದರ ನಡೆಯಿಂದನೋಡಿದರೆ ಬಹುಪಾಲು ಜನ ಅತ್ಯಂತ ಕೀಳುಮಟ್ಟದಲ್ಲಿದ್ದಾರೆ ಎನ್ನಬಹುದು. ಆಚರಣೆಯಲ್ಲಿ ಜಾತಿಯ ತತ್ವಗಳಂತೆ ನಡೆಯದಿದ್ದರೂ ಜಾತಿಯ ಜೀವಿಗಳಲ್ಲಿಯೇ ಅತ್ಯಂತ ಶ್ರೇಷ್ಠನಾಗಿರುವ ಮನುಷ್ಯ ಸರಿಯಾಗಿ ವಿಚಾರ ಮಾಡಬೇಕು. ತಮ್ಮ ತಮ್ಮಲ್ಲಿ ಬೆಳೆಸಿಕೊಂಡಿರುವ ಮೇಲು-ಕೀಳು ಭಾವನೆಗಲನ್ನು ಹೋಗಲಾಡಿಸಿಕೊಳ್ಳಬೇಕು. ಮಾನವರೆಲ್ಲಾ ಸಮಾನರು ಎಂಬಂಶವನ್ನು ಮನಗಂಡು ಎಲ್ಲರ ಒಳಿತಿಗಾಗಿ ದುಡಿಯಬೇಕು. ಹೀಗೆ ಸಂಕುಚಿತ ಭಾವನೆಗಳನ್ನು ಹೋಗಲಾಡಿಸಿಕೊಂಡ ವಿಶಾಲ ಭಾವನೆಗಳ ಮೇಲೆ ಬದುಕುವುದರಲ್ಲಿ ಎಲ್ಲರ ಕಲ್ಯಾಣವೂ ಅಡಗಿದೆ. ತಾನು ಮಾತ್ರ ಹೆಚ್ಚು, ತಾನು ಮಾತ್ರ ಸುಖವಾಗಿರಬೇಕು ಎಂಬ ಅಹಂಕಾರದಿಂದ, ಸ್ವಾರ್ಥದಿಂದ ಎಲ್ಲರಿಗೂ ಕೇಡಾಗುತ್ತದೆ. ಅದುದರಿಂದ ಮನುಷ್ಯ ಆದಷ್ಟು ಎಲ್ಲರೂ ನೆಮ್ಮದಿಯಿಂದ ಬದುಕುವ ಮಾರ್ಗದತ್ತ ವಿಚಾರ ಮಾಡುವುದೊಳಿತು.

## ಹೊಟ್ಟೆಯ ಕಿಚ್ಚು

ಮನಷ್ಯನಲ್ಲಿ ಇರಬಾರದಂತಹ ಗುಣಗಳಲ್ಲಿ ಹೊಟ್ಟೆಯ ಕಿಚ್ಚು ಒಂದು. ಈ ಹೊಟ್ಟೆಯ ಕಿಚ್ಚಿನಿಂದ ಆಗುವ ಅನಾಹುತ ಬಹಳ. ಶಬ್ದವೇ ಹೇಳುವಂತೆ ಅದು ಮನುಷ್ಯನ ಹೊಟ್ಟೆಯಲ್ಲಿ ಇತರರ ಒಳಿತನ್ನು ಕಂಡು ಸಹಿಸಲಾಗದುದಕ್ಕಾಗಿ ಉಂಟಾದ ಒಂದು ಕಿಚ್ಚು. ಕಿಚ್ಚು ಯಾವಾಗಲೂ ಸುಡುವ ಗುಣವನ್ನು ಹೊಂದಿರುತ್ತದೆ. ಆ ವ್ಯಕ್ತಿಗೆ ಚೆನ್ನಾಗಿರುವ ಮನುಷ್ಯನನ್ನು ನೋಡಿ ಸಂತೋಷಪಡಲು ಆಗುವುದಿಲ್ಲವಾಗಿ ಈ ಕಿಚ್ಚು ಅವನನ್ನೆ ಸುಟ್ಟು ಹಾಕುತ್ತದೆ. ಮತ್ತೆ ಕೆಲವು ಸಾರಿ ಅವನಿಗೆ ಯಾರ ಮೇಲೆ ಅಸಹನೆ ಇದೆಯೋ ಅವನನ್ನು ತನ್ನ ಕಿಚ್ಚಿನಿಂದ ಸುಡಲು ಪ್ರಯತ್ನಿಸುತ್ತಾನೆ.

ಈ ಹೊಟ್ಟೆಯ ಕಿಚ್ಚು ಉಳಿದವರ ಏಳ್ಗೆಯನ್ನು ಸಹಿಸುವುದಿಲ್ಲ. ಈ ಸಣ್ಣತನದಿಂದ ಅಣ್ಣ-ತಮ್ಮಂದಿರು, ಒಬ್ಬರಿಗೊಬ್ಬರು ಮೋಸಮಾಡಿದ ಉದಾಹರಣೆಗಳಂತೂ ಲೆಕ್ಕವಿಲ್ಲದಷ್ಟು, ಕೌರವ-ಪಾಂಡವರ ಯುದ್ಧಕ್ಕೆ ದಾಯಾದಿಗಳ ಹೊಟ್ಟೆಯ ಕಿಚ್ಚೇ ಕಾರಣ. ರಾಜ-ರಾಣಿಯರಾಗಿ ಬಾಳಬೇಕಾಗಿದ್ದ ಸೀತ-ರಾಮರು ಕಾಡಿನಲ್ಲಿ ಗೆಡ್ಡೆ-ಗೆಣಸುಗಳನ್ನು ತಿಂದುಕೊಂಡು ರಾಕ್ಷಸರ ತೊಂದರೆಗೆ ಗುರಿಯಾದುದು. ಮಲತಾಯಿಯಾದ ಕೈಕೇಯಿಯ ಹೊಟ್ಟೆಯ ಕಿಚ್ಚಿನಿಂದಲೇ. ಇಷ್ಟೇ ಅಲ್ಲ. ಒಬ್ಬ ಸುಖ್ಯಾತ ಶಿಲ್ಪಿ ತನ್ನ ಮಗ ಬಾಲ್ಯದಲ್ಲಿಯೇ ಶಿಲ್ಪಕಲೆಯಲ್ಲಿ ತೋರಿಸುತ್ತಿದ್ದ ಆಸಕ್ತಿಯನ್ನು, ಪ್ರಾವೀಣ್ಯತೆಯನ್ನು ಗಮನಿಸಿ, ಅವನಿಗೆ ಶಿಲ್ಪಕತೆಯ ಕೆಲಸಕ್ಕೇ ಆಸ್ಪದ ಕೊಡಲಿಲ್ಲ. ಆದರೆ ಶಿಲ್ಪದಲ್ಲಿ ಆಸಕ್ತಿ ಇದ್ದ ಆ ಹುಡುಗ ತಂದೆಗೆ ಗೊತ್ತಿಲ್ಲದಂತೆ ಶಿಲ್ಪ ಕಡೆಯುತ್ತಿದ್. ತಂದೆಯ ಗಮನಕ್ಕೆ ಈ ಅಂಶ ಬಂದ ತಕ್ಷಣವೇ ಶಿಲ್ಪವನ್ನು ಕೆತ್ತುತ್ತಿದ್ದ ಉಳಿ-ಸುತ್ತಿಗೆಯನ್ನೇ ಮಗನ ತಲೆಯೊಡೆಯಲು ಉಪಯೋಗಿಸಿದ ಇವೆಲ್ಲಾ ಗತಕಲದ ಅಂಶಗಳಾದೆ, ಇಂದಿನ ಸಮಾಜದಲ್ಲಿ ಈ ಹೊಟ್ಟೆ ಕಿಚ್ಚಿನಿಂದ ಎಲ್ಲೆಡೆ ಅಸಮಾಧಾನ ತುಂಬಿ ತುಳುಕುತ್ತಿದೆ. ಕುಟುಂಬಗಳಲಿಯ ಹೊಟ್ಟೆಯ ಕಿಚ್ಚಿನ ಕಾರಣ ಒಬ್ಬರಿಗೊಬ್ಬರು ಮೋಸ ಮಾಡುತ್ತಾರೆ. ಕುತಂತ್ರ ಮಾಡುತ್ತಾರೆ. ಈಗಿನ ಸಮಾಜದಲ್ಲಿ ಬೇರೆಯವರು ಬುದ್ಧಿವಂತರಿದ್ದಾರೆ ಎಂದರೆ ಹೊಟ್ಟೆಕಿಚ್ಚುಪಟ್ಟು ಅವರಿಗೆ ಅಡ್ಡಿ ಆತಂಕಗಳನ್ನೊಡ್ಡುತ್ತಾರೆ. ಸುಖವಾಗಿರುವುದನ್ನು ಕಂಡರೆ ಹೊಟ್ಟೆಯುರಿಸಿಕೊಂಡು ನೆಮ್ಮದಿ ಕೆಡುವಂತಹ ಪರಿಸ್ಥಿತಿನಿ ನಿರ್ಮಿಸುತ್ತಾರೆ. ಉನ್ನತ ಸ್ಥಾನಕ್ಕೆ ಹೋಗುವರೆಂದು ಕಂಡರೆ, ಅದಕ್ಕೆ ಕಲ್ಲು ಹಾಕುವ ಪ್ರಯತ್ನ ಯೋಜಿಸುತ್ತಾರೆ. ಹೀಗೆ ಹೊಟ್ಟೆಯ ಕಿಚ್ಚಿನ ಜನ ತಾವಿರುವಲ್ಲೆಲ್ಲಾ ಬೆಂಕಿ ಹಚ್ಚುವ ಪ್ರಯತ್ನ ನಡೆಸುತ್ತಲೇ ಇರುತ್ತಾರೆ. ಹಾಗಾಗಿ ಆ ಪರಿಸರವೆಲ್ಲಾ ತ್ವೇಷಮಯ, ದ್ವೇಷಮಯ, ಇಂತಹ ಕಿಚ್ಚಿನಿಂದ ಅನೇಕ ಸಜ್ಜನರೂ ಸಮಾಜಕ್ಕೆ ನಾಡಿಗೆ ಉಪಯೋಗವಾಗುವವರೂ ಬೆಂದುಹೋಗಬಹುದು. ಆದುದರಿಂದ ಸಮಾಜಕ್ಕೆ, ಒಳಿತನ್ನು ಬಯಸುವವರು ಒಂದುಗೂಡಿ ಈ ಕಿಚ್ಚು ಪ್ರಾರಂಭದಲ್ಲೇ ಆರಿಹೋಗುವಂತೆ ಮಾಡಬೇಕು. ಕಾಳ್ಗಿಚ್ಚಾಗಲು ಬಿಡಬಾರದು.

## ಅಧಿಕಾರ

ಅಧಿಕಾರ ಅವಿವೇಕಿಯ ಕೈಗೆ ಸಿಕ್ಕಬಾರದು. ಅದಕ್ಷನಿಗೆ ದೊರೆಯಬಾರದು. ಅಯೋಗ್ಯನಿಗೆ ಎಂದೂ ಕೊಡಬಾರದು. ಅಂತಹವನ ಕೈಯಲ್ಲಿ ಅಧಿಕಾರ ದೊರೆತರೆ ಅನ್ಯಾಯಕ್ಕೆ ಎಡೆಯಾಗುತ್ತದೆ. ತನಗೆ ಸಿಕ್ಕ ಅಧಿಕರವನ್ನು ಸದುಪಯೋಗ ಮಾಡಿ, ಒಳಿತನ್ನು ಸಾಧಿಸುವ ಬದಲು, ಅವನು ದುರುಪಯೋಗ ಮಾಡಿ ಅನ್ಯಾಯಕ್ಕೆ ಅವಕಾಶಮಾಡುವನು. ಅವನು ಸ್ವಾರ್ಥಿಯಾಗಿದ್ದರೆ ಅಧಿಕಾರ ಬಲದಿಂದ ತನ್ನ

ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾನೆ. ದುಷ್ಟನಾಗಿದ್ದರೆ ಹೆರವರಿಗೆ ಕೇಡುಂಟು ಮಾಡಲು ಬಳಸಿಕೊಳ್ಳುತ್ತಾನೆ. ಕೆಲಸಕ್ಕೆ ಬೇಕಾದ ದೂರದೃಷ್ಟಿಯನ್ನು ವಿಚಾರವಂತನು ಅಲ್ಲದಿದ್ದರೆ, ತಾನಿದ್ದ ಸಂಸ್ಥೆಯ ಅವನತಿಗೆ ಕಾರಣನಾಗುತ್ತಾನೆ. ಅಹಂಕಾರಿಯಾಗಿದ್ದರೆ ತನ್ನ ಡೋಲು ಬಾರಿಸಿಕೊಳ್ಳಲು ಅಧಿಕಾರವನ್ನು ಉಪಯೋಗಿಸಿಕೊಂಡು ದರ್ಪದಿಂದ ಮೆರೆಯುತ್ತಾನೆ. ದರ್ಪದ ಮದದಿಂದ ಸೊಕ್ಕಿ, ಅವನಿಗೆ ಒಳಿತ್ಯಾವುದು, ಕೆಡುಕ್ಯಾವುದು ಎಂಬುದರ ವಿವೇಚನೆಯೇ ಇಲ್ಲವಾಗುತ್ತದೆ. ಹಾಗಾಗಿ ಅನೇಕ ಅನ್ಯಾಯ, ಅನಾಹುತಗಳಿಗೆ ಕಾರಣನಾಗಬಹುದು. ಯಾರ ಹಿತವಚನವೂ ಅವನಿಗೆ ಹಿಡಿಸುವುದಿಲ್ಲ. ಹೀಗಾಗಿ ದರ್ಪದಿಂದ ಮೈಮರೆತ ಅವನು ಅನೇಕ ದುರಾಚಾರಗಳಲ್ಲಿ ತೊಡಗಬಹುದು. ದುಷ್ಟ ಹವ್ಯಾಸಗಳಿಗೆ ಬಲಿಯಾಗಬಹುದು. ಇಂತಹ ದುರ್ವ್ಯಸನೀಯ ಕೈಯಲ್ಲಿ ಒಂದು ಸಂಘವಾಗಲಿ, ಸಂಸ್ಥೆಯಾಗಲಿ ಇದ್ದಲ್ಲಿ ಅವನ ನಿಯಂತ್ರಣದಲ್ಲಿ ಕೆಲಸ ಮಾಡುವ ಜನರ ಸ್ಥಿತಿ ಬಹಳ ದಾರುಣವಾಗಬಹುದು.

ಅವನು ಯಾವಾಗಲೂ ತನ್ನ ಕುತಂತ್ರಗಳಿಗೆ ಸಲಹೆ ನೀಡಬಲ್ಲ, ದುಷ್ಟಕೃತ್ಯಗಳಿಗೆ ಬೆಂಬಲವೀಯಬಲ್ಲ, ತನ್ನ ವಿಲಾಸಿ ಹವ್ಯಾಸಗಳನ್ನು ಪೋಸಿಸಬಲ್ಲ ಜನರನ್ನು ಮಾತ್ರ ಸಮೀಪಕ್ಕೆ ತೆಗೆದುಕೊಳ್ಳುತ್ತಾನೆ. ಅಂತರಂಗದ ಆತ್ಮೀಯರನ್ನಾಗಿ ಮಾಡಿಕೊಳ್ಳುತ್ತಾನೆ. ಅವರ ಈ ಸಹಕಾರಕ್ಕಾಗಿ, ಸಹಾಯಕ್ಕಾಗಿ ಬೇರಾವ ರೀತಿಯಿಂದಲೋ ಅವರಿಗೆ ಲಾಭವನ್ನುಂಟು ಮಾಡಬೇಕಾಗುತ್ತದೆ. ಅದಕ್ಕಾಗಿ ತನ್ನ ಸ್ಥಾನ–ಮಾನಗಳನ್ನು, ಅಧಿಕಾರವನ್ನು ಉಪಯೋಗಿಸಿಕೊಳ್ಳುತ್ತಾನೆ. ಆಗ ಅವರಿಗೆ ಹೆಚ್ಚು ಲಾಭವನ್ನು ಮಾಡುವ ಸಲುವಾಗಿ ತನ್ನ ನಿಯಂತ್ರಣಕ್ಕೆ ಒಳಪಟ್ಟ ಉಳಿದವರಿಗೆ ಅನ್ಯಾಯ ಮಾಡಬೇಕಾಗುತ್ತದೆ. ಅಂತಹ ಸಂದರ್ಭ ಬಂದಾಗ ಈ ಅಯೋಗ್ಯ ಅಧಿಕಾರಿ ತನ್ನ ಬೆಂಬಲಿಗರನ್ನು ಸಂತೋಷಗೊಳಿಸಲು ಯಾವ ಮಟ್ಟಕ್ಕೆ ಹೋಗಲೂ ಹಿಂಜರಿಯುವುದಿಲ್ಲ. ಮೊದಲೇ ಧೂರ್ತನಾದ ಇವನು ಈ ಸಂದರ್ಭವನ್ನು ತನ್ನನ್ನು ತೃಪ್ತಿಪಡಿಸಲು ಮುಂದೆಬಾರದ ಉಳಿದ ಜನರ ಜೀವ ಹಿಂಡಲು ಉಪಯೋಗಿಸಿಕೊಳ್ಳುತ್ತಾನೆ. ಅವನಲ್ಲಿ ಮಾನವೀಯತೆಯೇ ಉಳಿದಿರುವುದಿಲ್ಲ. ಆ ಜನರಿಗೆ ಸಲ್ಲದ ಕಿರುಕುಳ ಕೊಡುತ್ತಾ, ಅವರಿಗೆ ಸರಿಯಾದ ಬುದ್ಧಿ ಕಲಿಸುತ್ತಿರುವೆನೆಂದು ತಿಳಿದು, ರಾಕ್ಷಸೀ ಆನಂದವನ್ನು ಅನುಭವಿಸುತ್ತಾನೆ. ಆಗ ಕುತಂತ್ರದ ನೆರಳನ್ನು ಕಾಣದ, ದುಷ್ಟತನದ ಮಾರ್ಗವೇ ಗೊತ್ತಿಲ್ಲದ ಜನರು ಅಸಹಾಯಕತೆಯಿಂದ ತೊಳಲಬೇಕಾಗುತ್ತದೆ. ಕಷ್ಟ ಅಸಹನೀಯವಾದಾಗ ಸಹ ಅವರಿಗೆ ಅಯೋಗ್ಯ ಅಧಿಕಾರಿಯನ್ನು ತೃಪ್ತಿಪಡಿಸುವ ಮಾರ್ಗ ತಿಳಿಯುವುದಿಲ್ಲ. ಕೆಲವರಿಗೆ ತಿಳಿದರೂ ಆ ಮಾರ್ಗ ತುಳಿಯಲು ಮನಸ್ಸು ಒಡಂಬಡುವುದಿಲ್ಲ. ಅವರಿಗೆ ಪ್ರತಿಭಟನೆಯೊಂದೇ ಪರಿಹಾರವಾಗಿ ಕಾಣುತ್ತದೆ. ಆದರೆ ಕೆಲವು ಕುಟಿಲ ಜನರ ಕಾರಸ್ಥಾನದಿಂದಾಗಿ ಪ್ರತಿಭಟನೆ ಪರಿಣಾಮಕಾರಿಯಾಗುವುದು

ಅಸಾಧ್ಯವಾಗಬಹುದು. ಕುತಂತ್ರಗಳಲ್ಲಿಯೇ ಪಳಗಿದ ಅಧಿಕಾರಿ, ತನ್ನ ದುಷ್ಟಕೂಟದ ಬೆಂಬಲದ ಸಹಾಯದಿಂದ, ತನ್ನ ಅಧಿಕಾರದ ನಿಯಮ, ನಿಯಂತ್ರಣಗಳನ್ನು ಉಪಯೋಗಿಸಿಕೊಂಡು ಸಭ್ಯ ಜನರನ್ನು ಸಹಾಯಕಗೊಳಿಸುತ್ತಾನೆ. ಹೀಗೆ ದುಷ್ಟನಾದವನಿಗೆ ಅಧಿಕಾರ ದೊರೆತರೆ ತನ್ನ ಕರ್ತವ್ಯ ಮರೆತು ಸ್ವಾರ್ಥಕ್ಕಾಗಿ ಅದನ್ನು ಬಳಸಿಕೊಳ್ಳುತ್ತಾನೆ. ಇದರಿಂದ ಸಂಸ್ಥೆ ಕಾಲಾನುಕ್ರಮದಲ್ಲಿ ಹಾಳಾಗುತ್ತದೆ. ಅಲ್ಲಿ ಕೆಲಸ ಮಾಡುವವರ ಕಾರ್ಯದಕ್ಷತೆ ಕುಂದುವುದಲ್ಲದೆ ಅವರ ಮಾನಸಿಕ ನೆಮ್ಮದಿಗೆ ಧಕ್ಕೆಯುಂಟಾಗುತ್ತದೆ. ಇದರ ಫಲವಾಗಿ ದೈಹಿಕ ಆರೋಗ್ಯವೂ ಕುಂದಬಹುದು. ಆದರಿಂದ ಆ ವ್ಯಕ್ತಿಗಳ, ಕುಟುಂಬಗಳ ಮೇಲೆ ದುಷ್ಪರಿಣಾಮವಾದರೂ ಅಸಹಜವೇನಲ್ಲ. ಹೀಗೆ ಸ್ಥಾನ–ಮಾನಗಳು, ಜವಾಬ್ದಾರಿಗಳ ಅಯೋಗ್ಯನಾದ ಒಬ್ಬನ ಕೈಸೇರುವುದರಿಂದ ಅನೇಕ ವ್ಯಕ್ತಿಗಳ, ಕುಟುಂಬಗಳ, ಸಂಘ–ಸಂಸ್ಥೆಗಳ ವಿನಾಶಕ್ಕೆ ಕಾರಣವಾಗಬಹುದು.

ಆದುದರಿಂದ ಯಾವುದೇ ಮುಖ್ಯಸ್ಥಾನಕ್ಕೆ ವ್ಯಕ್ತಿಗಳನ್ನು ನಿಯಮಿಸುವಾಗ ಎಚ್ಚರಿಕೆ ಅವಶ್ಯಕ. ಯಾವುದೋ ಒಂದು ಪ್ರಮುಖ ಅಂಶವನ್ನು ಲೆಕ್ಕಕ್ಕೆ ತೆಗೆದುಕೊಂಡು ನಿಯಮಿವುದಕ್ಕಿಂತ ವ್ಯಕ್ತಿಯ ಹಿನ್ನೆಲೆ, ಮನೋಭಾವ, ದಕ್ಷತೆ, ವ್ಯಕ್ತಿತ್ವಗಳನ್ನು ತೆಗೆದುಕೊಂಡು ಮಾಡಿದ ನೇಮಕ ಉತ್ತಮ ಫಲಗಳನ್ನು ಕೊಡಬಲ್ಲದು. ಯಾವ ಕೆಲಸಕ್ಕಾಗಿ ಅವನನ್ನು ನೇಮಿಸಿದ್ದಾರೆಯೋ ಆ ಕೆಲಸದ ಸಫಲತೆಯೂ ಆಗಬಲ್ಲುದು.

**ಶಿಸ್ತು**

ಜೀವನದಲ್ಲಿ ಶಿಸ್ತು ಎಲ್ಲರಿಗೂ ಬೇಕು. ಶಿಸ್ತಿಲ್ಲದೆ ಏನ್ನನೂ ಸಾಧಿಸಲಾಗುವುದಿಲ್ಲ. ಯಾವುದೇ ಕ್ಷೇತ್ರದ, ಯಾವುದೇ ಗುರಿಯನ್ನು ಸಾಧಿಸಲು ಶಿಸ್ತುಬೇಕು. ಶಿಸ್ತಿಲ್ಲದೆ ವ್ಯಕ್ತಿ ಏನನ್ನೂ ಮಾಡಲಾರ. ಅವನ ಜೀವನ, ಗುರಿ ಇಲ್ಲದೆ ಸಾಗರದಲ್ಲಿ ಸುತ್ತಾಡುವ ನಾವೆಯಂತಾಗುತ್ತದೆ. ಆದ್ದರಿಂದ ಏನನ್ನಾದರೂ ಸಾಧಿಸಬೇಕೆಂಬ ಆಸೆ ಇದ್ದಲ್ಲಿ ಮೊದಲು ಶಿಸ್ತಿನಿಂದ ವರ್ತಿಸುವುದನ್ನು ಕಲಿಯಬೇಕು.

ಶಿಸ್ತು ಎಂದರೆ ವಿಧೇಯತೆ ಎಂದು ಕೆಲವರು ಹೇಳುತ್ತಾರೆ. ಅದು ಸಂಪೂರ್ಣ ಸರಿಯಲ್ಲ. ಶಿಸ್ತಿನಲ್ಲಿ ವಿಧೇಯತೆ ಅಡಕವಾಗಿದೆ ನಿಜ. ಆದರೆ ಆ ವಿಧೇಯತೆ ಅಸಹಾಯಕತೆಯಿಂದ ಉಂಟಾದುದಾಗಿರಬಾರದು. ಆ ವಿಧೇಯತೆ ದುಷ್ಟಸ್ವಾರ್ಥಿಗೆ ದುಷ್ಟಕೆಲಸದಲ್ಲಿ ಸಹಕಾರವೀಯುವ ಭ್ರಷ್ಟವಿಧೇಯತೆಯಾಗಿರಬಾರದು. ಅದು ಆತ್ಮಾಭಿಮಾನಕ್ಕೆ ಕೊಡಲಿ ಪೆಟ್ಟುಕೊಡಬಾರದು. ವ್ಯಕ್ತಿಯ ಗೌರವಕ್ಕೆ ಧಕ್ಕೆ ತರುವಂತಹ, ಸ್ವಾತಂತ್ರ್ಯ ಹರಣಕ್ಕೆ ಎಡೆಗೊಡುವಂತಹುದಾಗಿರಬಾರದು. 'ವ್ಯವಸ್ಥೆ'ಯನ್ನು ಕೆಲವರು ಶಿಸ್ತೆಂದು ಭಾವಿಸುತ್ತಾರೆ. ಶಿಸ್ತಿನಲ್ಲಿ ವ್ಯವಸ್ಥೆ ಇರುತ್ತದೆ, ನಿಜ. ಆದರೆ ಆ ವ್ಯವಸ್ಥೆ ಹೊರಗಿನ ಒತ್ತಡದಿಂದಾಗಲೀ, ಶಿಕ್ಷೆಯ ಭಯದಿಂದಾಗಲೀ, ಯಾವುದೋ

ಸ್ವಾರ್ಥಸಾಧನೆಯ ಉದ್ದೇಶದಿಂದ ಉಂಟಾದುದಲ್ಲ. ವ್ಯಕ್ತಿ ವ್ಯವಸ್ಥಿತವಾಗಿ ನಡೆದುಕೊಳ್ಳುತ್ತಿದ್ದರೆ, ಆ ನಡೆ ಅವನು ಸ್ವತಃ ತಿಳುವಳಿಕೆಯಿಂದ, ಪ್ರೇಮಪೂರಿತವಾದ ವಾತಾವರಣದಲ್ಲಿ ಸ್ವಪ್ರೇರಣೆಯಿಂದ ಉಂಟಾಗಿರಬೇಕು. ಹಾಗೆ ನಡೆಯುವುದರಿಂದ ಆಗುವ ಒಳಿತನ್ನೂ, ನಡೆಯದಿದ್ದರೆ ಆಗುವ ಕೆಡುಕನ್ನೂ ಅರಿತು ಅಂತಹ ಒಂದು ಪ್ರವೃತ್ತಿಯನ್ನು ಬೆಳೆಸಿಕೊಂಡಾಗ ಮಾತ್ರ ಅದು ಶಿಸ್ತಿನ ನಡವಳಿಕೆಯೆಂದು ಹೇಳಲು ಬರುತ್ತದೆ. ಬಾಲ್ಯದಲ್ಲಿ ಈ ರೀತಿ ಬೆಳೆದ ವ್ಯಕ್ತಿ ಮುಂದೆ ಅವನು ವಯಸ್ಕ ಸಮಾಜದಲ್ಲಿ ಕೆಲಸ ಮಾಡಬೇಕಾದಾಗ ತಾನಿರುವ ಪರಿಸರದಲ್ಲಿ ನಿಜವಾದ ಶಿಸ್ತಿನ ವಾತಾವರಣವನ್ನು ಉಂಟುಮಾಡಬಲ್ಲವನಾಗುತ್ತಾನೆ. ತಾನೂ ಶಿಸ್ತಿನಿಂದ ನಡೆದು ಇತರರೂ ಶಿಸ್ತಿನಿಂದ ಸ್ವಯಂ ಪ್ರೇರಿತರಾಗಿ ನಡೆಯುವಂತೆ ಮಾಡುತ್ತಾನೆ. ಅಂತಹ ವಾತಾವರಣದಲ್ಲಿ ಅಶಾಂತಿ ಇರುವುದಿಲ್ಲ; ಅಸಮಾಧಾನವಿರುವುದಿಲ್ಲ. ಅವ್ಯವಸ್ಥೆ ಇರುವುದಿಲ್ಲ. ಆದರೆ ಶಿಸ್ತಿನ ಅರ್ಥವನ್ನು ಸರಿಯಾಗಿ ತಿಳಿಯದೇ, ಸರಿಯಾದ ರೀತಿಯಲ್ಲಿ ಶಿಸಿನ ತರಬೇತಿ ಪಡೆಯದೆ ಕೆಲಸದ ನಿರ್ವಹಣೆ ಹೊತ್ತು ಮನುಷ್ಯ ಅವ್ಯವಸ್ಥೆ ಉಂಟುಮಾಡುತ್ತಾನೆ. ಅಂತಹ ಪರಿಸರದಲ್ಲಿ ಅಶಾಂತಿ, ಅಸಮಾಧಾನಗಳಿರುತ್ತವೆ. ಮೇಲ್ನೋಟಕ್ಕೆ ಎಲ್ಲವೂ ಚನ್ನಾಗಿ ಕಾಣಬಹುದು. ಹೊರಗಿನವರಿಗೆ ಎಲ್ಲವೂ ವ್ಯವಸ್ಥಿತವಾಗಿದೆಯೆನ್ನಿಸಬಹುದು. ಆದರೆ ಬಾಹ್ಯ ಒತ್ತಡದಿಂದ, ಒತ್ತಾಯದಿಂದ, ಭಯದಿಂದ ನಿರ್ಮಿಸಿದ ಶಿಸ್ತಿನ ವಾತಾವರಣದಲ್ಲಿ ಉಂಟಾದ ವ್ಯವಸ್ಥೆ ನಿಜವಾದ ಅರ್ಥದಲ್ಲಿ ವ್ಯವಸ್ಥೆಯೇ ಅಲ್ಲ. ಅದರಿಂದ ಕೆಡುಕುಂಟಾಗಬಹುದೇ ಹೊರತು ಒಳಿತಾಗಲು ಸಾಧ್ಯವೇ ಇಲ್ಲ.

■

# ರಚನಾತ್ಮಕ ಚಿಂತನೆಗಳು

## (ಪ್ರಸ್ತುತ ಬದುಕಿನ ಸಮಸ್ಯೆಗಳಿಗೆ ಸ್ಪಂದನ)

ಲೇಖಕರು

**ಪ್ರೊ. ಲಲಿತಾಂಬಾ ವೃಷಭೇಂದ್ರ ಸ್ವಾಮಿ**

ಪ್ರಕಾಶಕರು

ಪ್ರಸಾದ ಪ್ರಕಾಶನ

'ಶಿವಪ್ರಸಾದ' ೮ನೇ ಕ್ರಾಸ್, ಕಲ್ಯಾಣನಗರ,

ಧಾರವಾಡ - ೫೮೦ ೦೦೭

ದೂರವಾಣಿ : ೪೪೮೫೭೦

## ಪ್ರಸ್ತಾವನೆ

ಪ್ರಬಂಧಗಳು ಎಂದರೆ ಅದು ವೈಚಾರಿಕ ನೆಲೆಯಲ್ಲಿ ವ್ಯಕ್ತಿಯ ಒಳತೋಟಿಯಲ್ಲಿ ಮಥನಗೊಂಡು ನಂತರ ಹರಿದು ಬರುವ ಅಭೇದ್ಯ ಚಿಂತನೆಗಳು. ನಿಂತನಿಲುವಿನಲ್ಲಿ ನಮ್ಮ ಬುದ್ಧಿಗೆ ನಮ್ಮ ಬುದ್ದಿಗೆ ನಮ್ಮ ಮನಸ್ಸಿಗೆ ನಮ್ಮ ವಿಚಾರಕ್ಕೆ ನಿಲುಕುವ ವಿಷಯಗಳು ನೂರಾರು, ಸಹಸ್ರಾರು. ಆದರೆ ಎಲ್ಲವೂ ಪರಿಪಾಕಗೊಂಡು ಹೊರಬರುವುದಿಲ್ಲ. ವಿಷಯ ವಸ್ತುಗಳನ್ನು ಆಯ್ಕೆ ಮಾಡುವುದರಲ್ಲೂ ವಿಶೇಷತೆ ಇರಬೇಕಾಗುತ್ತದೆ. ಪ್ರಬಂಧದಲ್ಲಿ ಭಾವದ ಒತ್ತಡವಾಗಲಿ, ಅತಿರೇಕದ ಘಟನೆಗಳಾಗಲಿ ಇರುವುದಿಲ್ಲ. ಪ್ರಸ್ತುತ ಪಡಿಸುವ ವಿಷಯ ನೇರವಾಗಿದ್ದು, ಓದುಗನನ್ನು ತಲುಪಬೇಕಾಗುತ್ತದೆ. ಅದು ಚಿಂತನೆಗೆ ಗ್ರಾಸವಾಗುವಂತಿರಬೇಕು. ಈ ಕೆಲಸವನ್ನು ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿದ್ದಾರೆ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ ಅವರು. ಇವರದು ಶಿಕ್ಷಣಕ್ಷೇತ್ರವಾದ್ದರಿಂದ ವಿಷಯ ಆಯ್ಕೆಯಲ್ಲಿ ಜಾಣ್ಮೆಯನ್ನು ತೋರಿದ್ದಾರೆ.

ಇವರ 'ರಚನಾತ್ಮಕ ಚಿಂತನೆಗಳು' ಸಂಕಲನದಲ್ಲಿ ಮೂವತ್ತು ಲೇಖನಗಳಿವೆ. ಇದರ ಮೊದಲ ಲೇಖನ 'ರಾಷ್ಟ್ರೀಯ ಭಾವೈಕ್ಯತೆ'. ಒಂದು ದೇಶದ ಒಂದು ರಾಷ್ಟ್ರದ ಏಕತೆಯನ್ನು ಕಾಪಾಡಲು ಮತ್ತು ದೇಶವನ್ನು ಬಲಿಷ್ಠ ರಾಷ್ಟ್ರವನ್ನಾಗಿ ರೂಪಿಸಲು ಅಗತ್ಯವಾಗಿ ಬೇಕಾದದ್ದು 'ಭಾವೈಕ್ಯತೆ' ಎನ್ನುವುದನ್ನು ಖಚಿತಪಡಿಸುತ್ತಾ ಶ್ರೀಮತಿಯವರು ಇಂದು ಕುಸಿಯುತ್ತಿರುವ ನೈತಿಕ ಹೊಣೆಯಿಂದಾಗಿ ರಾಷ್ಟ್ರ ಹೇಗೆ ಅಧೋಗತಿಗಿಳಿಯುತ್ತಿದೆ ಎಂಬುದನ್ನು ಬಹಳ ವಿಷಾದದಿಂದ ನಿರೂಪಿಸುತ್ತಾರೆ.

ಸಾಹಿತ್ಯದ ಗುರಿ ಏನು? ಶಿಕ್ಷಕನಿಗೂ ಸಾಹಿತಿಗೂ ಇರುವ ಸಂಬಂಧ ಮತ್ತು ಜವಾಬ್ದಾರಿ ಮತ್ತು ಈ ಇಬ್ಬರೂ ದೇಶದ ಏಳಿಗೆಗೆ ಹೇಗೆ ಕಾರಣವಾಗುತ್ತಾರೆ ಎನ್ನುವುದನ್ನು ವಿಷದಪಡಿಸುತ್ತಾ, ಸ್ವಾತಂತ್ರ್ಯ ಹೋರಾಟಕಾಲದಲ್ಲಿ ದೇಶದ ಹಿತಚಿಂತನೆ ಹೊತ್ತ ಸಾಹಿತಿಗಳು ಎಂಥ ಪ್ರಭಾವಿ ಕೆಲಸ ಮಾಡಿದ್ದಾರೆ ಎನ್ನುವುದನ್ನು ಉದಾಹರಿಸುತ್ತಾ, ಯುವ ಜನತೆಯಲ್ಲಿ ದೇಶಭಕ್ತಿಯನ್ನು ರಾಷ್ಟ್ರಪ್ರೇಮವನ್ನು ಹುಟ್ಟುಹಾಕುವಲ್ಲಿ ಸಾಹಿತಿಗಳ ಪಾತ್ರ ಮಹತ್ವವಾದುದೆಂದು 'ಸಾಹಿತ್ಯದ ಗುರಿ' ಎಂಬ ಲೇಖನದಲ್ಲಿ ನಿರೂಪಿಸುತ್ತಾರೆ. 'ಸತ್ಯಶೋಧನೆ' ಪ್ರಬಂಧದಲ್ಲಿ ದೇವರ ಬಗ್ಗೆ ಜಿಜ್ಞಾಸೆ ಇದ್ದು, ದೇವರಿದ್ದಾನೋ ಇಲ್ಲವೋ, ಅದು ಮುಖ್ಯವಲ್ಲ 'ಸತ್ಯಶೋಧನೆಯೇ ದೇವರು' ಎಂಬುದನ್ನು ಸಾಬೀತು ಪಡಿಸುತ್ತಾರೆ, ಸತ್ಯ ಬಹಳ

ಬೇಗ ಕೈಗೆಟುಕುವಂತಹದ್ದಲ್ಲ ಅದಕ್ಕೆ ಬಹಳ ಸಾಧನೆ ಬೇಕು, ನಿರ್ಲಿಪ್ತ ಮನಸ್ಸು, ಸ್ಥಿತಪ್ರಜ್ಞತೆ ಇದ್ದಾಗ ಸತ್ಯದರ್ಶನವಾಗುತ್ತದೆ. ಸತ್ಯ ನಂಬಿಕೆಯ ತಳಹದಿಯಲ್ಲಿ ನಿಂತಿದೆ. ಈ ಶೋಧನೆಯಲ್ಲಿ ಅನೇಕ ದ್ವಂದ್ವಗಳು ಎದುರಾಗಬಹುದು. ಅವೆಲ್ಲವನ್ನು ಮೀರಿ ಬೆಳೆದಾಗ ಸತ್ಯದ ಅಂತಃದರ್ಶನ ಎನ್ನುವುದನ್ನು ಬಹಳ ಸಮರ್ಪಕ ರೀತಿಯಲ್ಲಿ ಓದುಗರ ಮುಂದಿಡುತ್ತಾರೆ. 'ಛಲ' ಎಂಬ ಲೇಖನದಲ್ಲಿ ಛಲಬೇಕು ಸಾಧನೆಯಲ್ಲಿ, ಗುರಿ ಮುಟ್ಟುವಲ್ಲಿ, ಒಳ್ಳೆಯದನ್ನು ಮಾಡುವುದಕ್ಕಾಗಿ ಒಳ್ಳೆಯದರ ಗಳಿಕೆಗಾಗಿ ಉತ್ತಮ ಸಾಧನೆಗಾಗಿ ಛಲಬೇಕು. ಕೆಟ್ಟ ವಿಷಯಾಸಕ್ತಿಗಳಿಗೆ ಛಲ ತೊಟ್ಟರೆ ದುರ್ಯೋಧನನಂತೆ ಹಾನಿಗೆ ಒಳಪಡಬೇಕಾಗುತ್ತದೆ. ಉತ್ತಮ ಛಲದಿಂದ ಒಳಿತನ್ನು ಕೆಟ್ಟ ಛಲದಿಂದ ಸರ್ವನಾಶದ ಪಥವನ್ನು ತುಳಿಯಬೇಕಾಗುತ್ತದೆ. ಎನ್ನುವುದನ್ನು ದ್ರೌಪದಿ, ದುರ್ಯೋಧನಾದಿಗಳ ಛಲವನ್ನು ವಿವರಿಸುವುದರ ಮೂಲಕ ಛಲದ ಹಂತವನ್ನು ನಮ್ಮ ಮುಂದೆ ತೆರೆದಿಡುತ್ತಾರೆ.

ನಮ್ಮ ಸಂಸ್ಕೃತಿ ಹೇಗಿತ್ತು? ಹೇಗಿರಬೇಕು ಇದೀಗ ಎತ್ತಸಾಗಿದೆ ಮುಂದೇನು? ಎಂದು ಪ್ರಶ್ನಿಸುವುದರ ಮೂಲಕ 'ಭಾರತೀಯ ಸಂಸ್ಕೃತಿ'ಯ ಪರಂಪರಾಗತ ಮೌಲ್ಯ ಕುಸಿಯುತ್ತಿರುವುದನ್ನು ತಿಳಿಸುತ್ತಾರೆ. ಸಂಸ್ಕೃತಿಯ ಪುನಶ್ಚೇತನವನ್ನು ಕುರಿತು ಪ್ರತಿಯೊಬ್ಬ ಪ್ರಜೆಯೂ ಆಲೋಚಿಸಬೇಕು ಎನ್ನುವುದನ್ನು ಸ್ಪಷ್ಟಪಡಿಸುತ್ತಾರೆ.

'ದುಡ್ಡುಳ್ಳವರಿಗೆ ದೊಡ್ಡಸ್ತನ ಆಗಬೇಕೆಂದು ಧನದ ಕಿವಿ ಮಾತು. ಸಾವಿರ ಮಂದಿಯಂದದ್ದೇ ಸತ್ಯವೆಂದು ಜನದ ಕಿವಿಮಾತು ಈ ಎರಡೂ ಮಾತಿಗೆ ಕಿವಿಗೊಟ್ಟು ಕಿವಿಗೊಡದೆ ಪೂತ ಮನಸ್ಸಿಗೆ ಯೋಗ್ಯವೆನಿಸುವುದನ್ನೇ ನಯಶಾಸ್ತ್ರವು ನಡೆಸಬೇಕು' ಎಂದಿದ್ದಾರೆ, ವಿಚಾರ ಮಂಜರಿಯಲ್ಲಿ ವರ ಕವಿ ದ.ರಾ.ಬೇಂದ್ರೆಯವರು ಇದನ್ನು ಅರಿತು ನಡೆದಾಗ ಜೀವನ ಸುಂದರ, ಸರಕುಗಳ ಮಾಲೆಯಾಗಲು ಸಾಧ್ಯವಿಲ್ಲ ಎನ್ನುವುದನ್ನೇ ಶ್ರೀಮತಿಯವರು 'ಜೀವನದ ಗುಟ್ಟು ಎಂಬ ಲೇಖನದಲ್ಲಿ ಪ್ರಸ್ತುತಪಡಿಸುತ್ತಾರೆ. ಹೀಗೆ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ ಅವರು ವಿವಿಧ ವಿಷಯಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಗುಣಗ್ರಾಹಿಗಳ ಮನತಣಿಸುವ ಬರಹಗಳಿವೆ, ಚಿಂತಕರ ಗಮನ ಸೆಳೆವ ನುಡಿಮುತ್ತುಗಳಿವೆ. ಬಲ್ಲವರ ಮನ ಸೂರೆಗೊಳುವ ವಿಷಯ ವೈವಿಧ್ಯತೆಗಳಿವೆ. 'ಹತ್ತು ಕಟ್ಟುವಲ್ಲಿ ಒಂದು ಮುತ್ತು ಕಟ್ಟು' ಎನ್ನುವುದು ಬಲ್ಲವರ ಮಾತು. ಬರಹಗಳು ಸದೃಢವಾಗಿದ್ದು ಭಾಷೆಯ ಲಾಲಿತ್ಯದೊಂದಿಗೆ ಮಿರಿಮಿರಿ ಮಿಂಚುತ್ತವೆ. ಯುವಕರು ಎಚ್ಚೆತ್ತುಕೊಳ್ಳುವ ವಿದ್ಯಾರ್ಥಿಗಳು ಅರಿತುಕೊಳ್ಳಬೇಕಾದ ಎಲ್ಲಾ ವಿಷಯಗಳು ಈ ಚಿಂತನೆಗಳ ಅಡಕವಾಗಿದೆ. ಈ 'ರಚನಾತ್ಮಕ ಚಿಂತನೆಗಳು' ಕೃತಿಯನ್ನು ಆದರದಿಂದ ಬರಮಾಡಿಕೊಳ್ಳುತ್ತಾರೆಂಬ ಭರವಸೆ ನನಗಿದೆ.

೨೨.೯.೨೦೦೦

– ಪ್ರೇಮಾಭಟ್
ಬೆಂಗಳೂರು.

# ನಮನಗಳು

'ರಚನಾತ್ಮಕ ಚಿಂತನೆಗಳು' ಎಂಬ ವೈಚಾರಿಕ ಲೇಖನಗಳ ಸಂಗ್ರಹವನ್ನು ಓದುಗರ ಮುಂದಿಡುತ್ತಿದ್ದೇನೆ. ಇದು ನನ್ನ ವೈಚಾರಿಕ ಲೇಖನಗಳ ಎರಡನೆಯ ಸಂಕಲನ. ೧೯೯೪ರಲ್ಲಿ 'ಮನದ ಮಲ್ಲಿಗೆ' ಎಂಬ ನನ್ನ ಮೊದಲ ಸಂಕಲನ ಪ್ರಕಟವಾಗಿತ್ತು. ಸಹೃದಯ ಓದುಗರ ಮೆಚ್ಚುಗೆಗೆ ಪಾತ್ರವಾದ 'ಮನದ ಮಲ್ಲಿಗೆ'ಯ ಪ್ರತಿಗಳು ಒಂದೆರಡು ವರ್ಷಗಳಲ್ಲಿಯೇ ಮುಗಿದವು.

ಈಗಿನ ಎರಡನೆಯ ಸಂಗ್ರಹ, ಪ್ರಸ್ತುತ ಬದುಕಿನಲ್ಲಿ, ಹಾಸುಹೊಕ್ಕಾಗಿ ಬರುವ ವಿಚಾರಗಳ ಬಗ್ಗೆ 'ರಚನಾತ್ಮಕ ಚಿಂತನೆ'ಗಳನ್ನು ಒಳಗೊಂಡಿದೆ. ವಿಷಯ, ಭಾಷೆ, ಉಪಯುಕ್ತತೆಗಳನ್ನು ಗಮನದಲ್ಲಿಟ್ಟುಕೊಂಡು ಲೇಖನಗಳನ್ನು ಸಂಕಲಿಸಿದ್ದೇನೆ. ಲೇಖನಗಳು ಉಪಯುಕ್ತವಾಗುವುದಲ್ಲದೆ, ಜೀವನಕ್ಕೆ ನೇರ ಸಂಬಂಧವುಳ್ಳ ವಿಷಯಗಳಾದುದರಿಂದ ಓದುಗರಲ್ಲಿಯೂ ಚಿಂತನ ಮೂಡಿಸುತ್ತವೆ ಎಂಬುದು ನನ್ನ ಅನಿಸಿಕೆ. ಮೊದಲಿನಂತೆ ಈ ಪುಸ್ತಕವನ್ನೂ ಸಹೃದಯಿಗಳು ಸ್ವಾಗತಿಸುವರೆಂದು ಆಶಿಸುತ್ತೇನೆ.

ಈ ಸಂಕಲನದಲ್ಲಿ ಆಕಾಶವಾಣಿಗಾಗಿ ಬರೆದ ಚಿಂತನೆಗಳನ್ನೂ, ಪತ್ರಿಕೆಗಳಿಗಾಗಿ ಬರೆದ ಲೇಖನಗಳನ್ನೂ, ವಾಸ್ತವ ಬದುಕಿನಲ್ಲಿ ಎದುರು ಬಂದ ವಿಷಯಗಳ ಬಗ್ಗೆ, ನಾನೇ ದೀರ್ಘವಾಗಿ ಆಲೋಚಿಸಿದ ವಿಷಯಗಳನ್ನು ಒಳಗೊಂಡಿದೆ. ಆಕಾಶವಾಣಿಯವರಿಗೂ, ಪತ್ರಿಕೆಗಳಿಗೂ ಲೇಖನಗಳನ್ನು ಬೆಳಕಿಗೆ ತಂದುದಕ್ಕಾಗಿ ನಮನಗಳು.

ಈ ಪುಸ್ತಕವು ಹೊರಬರಲು ನೆರವಾದ ಶ್ರೀ ಪ್ರೇಮಸಾಯಿ

ಪ್ರಕಾಶನದ ಶ್ರೀ ಎ.ಎಸ್.ಭಟ್ ಅವರಿಗೂ, ಮುನ್ನುಡಿಯನ್ನು ಬರೆದ ಸೋದರಿ ಲೇಖಕಿ ಪ್ರೇಮಾಭಟ್ ಅವರಿಗೂ, ಹಿನ್ನುಡಿಯನ್ನು ಬರೆದು ಗೌರವಿಸಿದ ಡಾ. ಶಿವಮೂರ್ತಿಯವರಿಗೂ, ಆಗಾಗ್ಗೆ ಸಲಹೆ ಸೂಚನೆಗಳನ್ನಿತ್ತು ಸಹಕರಿಸಿದ ಪತಿ

ಡಾ. ವೃಷಭೇಂದ್ರಸ್ವಾಮಿಯವರಿಗೂ, ಅಕ್ಷರ ಜೋಡಣೆ ಮಾಡಿದ ಮನ್ಆನಂದ್ ಪ್ರಿಂಟರ್ಸ್‌ರವರಿಗೂ, ಮುದ್ರಿಸಿದ ಲಕ್ಷ್ಮಿ ಆರ್ಟ್ಸ್ ಪ್ರಿಂಟರ್ಸ್ ಮತ್ತು ಪ್ರಕಾಶಿಸಿದ ಪ್ರಸಾದ ಪ್ರಕಾಶನದವರಿಗೂ, ನನ್ನ ನಮನಗಳು.

೧೮ ಸೆಪ್ಟೆಂಬರ್ ೨೦೦೦ — ಲಲಿತಾಂಬ

ವೃಷಭೇಂದ್ರಸ್ವಾಮಿ

ಧಾರವಾಡ- ೫೮೦ ೦೦೭

■

## ಪರಿವಿಡಿ

೧. ರಾಷ್ಟ್ರೀಯ ಭಾವೈಕ್ಯತೆ
೨. ಸಾಹಿತ್ಯದ ಗುರಿ
೩. ಸತ್ಯಶೋಧನೆ
೪. ಛಲ
೫. ಭಾರತೀಯ ಸಂಸ್ಕೃತಿ
೬. ಮಹೋನ್ನತ ಗುರಿ
೭. ಮಕ್ಕಳಲ್ಲಿ ಪ್ರೀತಿ–ಜಗತ್ತಿನಲ್ಲಿ ಶಾಂತಿ
೮. ಅಗ್ನಿಪರೀಕ್ಷೆ
೯. ಗೃಹಿಣೀ ಗೃಹಮುಚ್ಯತೆ
೧೦. ರಾಷ್ಟ್ರಪ್ರೇಮ
೧೧. ಜೀವನದ ಗುಟ್ಟು
೧೨. ಪ್ರಜಾಪ್ರಭುತ್ವದ ಪ್ರಜೆಗಳೂ
೧೩. ರಚನಾತ್ಮಕ ಧರ್ಮ
೧೪. ಮನೆಗೆದ್ದು ಮಾರುಗೆಲ್ಲು
೧೫. ವಿಶ್ವಸಮುದಾಯ ದೃಷ್ಟಿ
೧೬. ಸಹಕಾರ
೧೭. ಕೆರೆಯ ನೀರನು ಕೆರೆಗೆ ಚೆಲ್ಲಿ
೧೮. ಅದೃಷ್ಟವಂತರು
೧೯. ದೇಶದ ಅಭಿವೃದ್ಧಿ

## ೧. ರಾಷ್ಟ್ರೀಯ ಭಾವೈಕ್ಯತೆ

ನಮ್ಮ ದೇಶ ಒಂದು ವಿಶಾಲವಾದ ರಾಷ್ಟ್ರ. ಅದಕ್ಕಾಗಿ ಇದನ್ನು ಒಂದು ಉಪಖಂಡವೆಂದೇ ಕರೆಯುತ್ತಾರೆ. ಇಲ್ಲಿರುವ ಭೌಗೋಳಿಕ ವೈವಿಧ್ಯತೆ ಒಂದು ಉಪಖಂಡಕ್ಕೆ ಸಮನಾಗಿದೆ. ದೇಶದ ಒಂದು ಭಾಗದಲ್ಲಿ ಮಳೆಯೇ ಇಲ್ಲದ ಮರಳು ಕಾಡಾದರೆ, ಮತ್ತೊಂದು ಭಾಗದಲ್ಲಿ ವಿಪರೀತ ಮಳೆಯಿಂದಾಗಿ ಸದಾ ಹಸುರಿನಿಂದ ತುಂಬಿದ ದಟ್ಟಡವಿ. ಉತ್ತರಭಾರತದಲ್ಲಿ ಅಂದರೆ ಹಿಮಾಲಯ ಪರ್ವತಗಳ ದಕ್ಷಿಣದಲ್ಲಿ, ಆ ಉತ್ತುಂಗ ಪರ್ವತಗಳೂ ಗೋಚರಿಸದಷ್ಟು ವಿಶಾಲವಾಗಿ ಹರಡಿರುವ, ಗಂಗಾ-ಯಮುನಾ ನದಿಗಳ ಬಯಲು ಪ್ರದೇಶ. ದಕ್ಷಿಣ ಭಾರತದಲ್ಲಿ ಬೆಟ್ಟ-ಗುಡ್ಡ, ಜಲಪಾತಗಳಿಂದ ಕೂಡಿದ ಪೀಠಭೂಮಿ. ದಕ್ಷಿಣದಲ್ಲಿ ಉಷ್ಣ ಹವಾಮಾನವಾದರೆ, ಉತ್ತರದ ತುದಿಗೆ ತಂಪು ಪ್ರದೇಶ. ಮಧ್ಯಭಾರತದಲ್ಲಿ ಛಳಿಗಾಲದಲ್ಲಿ ಅತೀ ಛಳಿ, ಬೇಸಿಗೆ ಕಾಲದಲ್ಲಿ ಅತೀ ಬಿಸಿಲು. ಬೆಳೆಗಳಂತೂ ವೈವಿಧ್ಯಮಯ. ತೆಂಗು, ಅಡಿಕೆ, ಸಾಂಬಾರದ ಸಾಮಾನುಗಳ, ಕಾಫಿ, ಚಹ, ಹತ್ತಿ, ಗೋಧಿ, ಕಬ್ಬು, ಭತ್ತದಿಂದ ಹಿಡಿದು ರಾಗಿಯವರೆಗೆ ಎಲ್ಲಾ ಬೆಳೆಗಳನ್ನೂ ಬೆಳೆಯಬಹುದು. ಹೀಗೆ ಭೌಗೋಳಿಕವಾಗಿ ವೈವಿಧ್ಯಮಯಾಗಿರುವ ಈ ನಮ್ಮ ದೇಶದಲ್ಲಿ ಭಾಷೆ, ಧರ್ಮ, ಜಾತಿಯ ವಿಷಯದಲ್ಲೂ ವೈವಿಧ್ಯತೆ ಕಂಡುಬರುತ್ತದೆ. ಇಲ್ಲಿ ವಿವಿಧ ಧರ್ಮಗಳ ಜನರಿದ್ದಾರೆ. ಜಾತಿ-ಉಪಜಾತಿಗಳಿಗೆ, ಭಾಷೆ-ಉಪಭಾಷೆಗಳಿಗೆ ಲೆಕ್ಕವಿಲ್ಲ. ಮಿತಿ ಇಲ್ಲದಷ್ಟು ಭಾಷೆ-ಉಪಭಾಷೆಗಳನ್ನಾಡುವ ಜನರನ್ನು ಕಾಣಬಹುದು. ಪಂಜಾಬಿಗಳ ಪಂಜಾಬಿ ಭಾಷೆ, ತಮಿಳರ ತಮಿಳು, ಕನ್ನಡಿಗರ ಕನ್ನಡ ಒಂದಕ್ಕೊಂದು ಬಹು ಭಿನ್ನ. ಹೀಗೆ ಅನೇಕ ದೃಷ್ಟಿಯಿಂದ ನಮ್ಮ ದೇಶದಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಇಷ್ಟೆಲ್ಲಾ ಭಿನ್ನತೆ ಇದ್ದರೂ, ಏಕತೆ ನೋಡುವವರ ಕಣ್ಣಿಗೆ ತಾನೇ ತಾನಾಗಿ ಎದ್ದು ಕಾಣಿಸುತ್ತದೆ.

ಜನರು ವಿವಿಧ ಧರ್ಮಗಳನ್ನು ಅನುಸರಿಸಿದರೂ, ಅವರ ಧಾರ್ಮಿಕಾಚರಣೆಗಳಲ್ಲಿ ಅನೇಕ ಹೋಲಿಕೆಗಳನ್ನು ಕಾಣಬಹುದಾಗಿದೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪಯಣಿಸಿದರೆ, ನಮ್ಮ ಸಂಸ್ಕೃತಿ, ಸಂಪ್ರದಾಯ, ನಂಬಿಕೆ, ಪೂಜಾವಿಧಾನ, ವ್ಯವಸಾಯದ ರೀತಿ, ರೈತರ ಹಾಗೂ ಸಾಮಾನ್ಯ ಜನರ ಜೀವನದ ಸ್ಥಿತಿಗತಿ ಮುಂತಾದ ಅನೇಕ ವಿಷಯಗಳು ಒಂದೇ

ತೆರನಾಗಿರುವುದನ್ನು ನಾವು ಗಮನಿಸಬಹುದು. ಭಾರತೀಯರು ಹಲವು ಭಾಷೆಗಳನ್ನಾಡಿದರೂ ಅಖಿಲ ಭಾರತ ಮಟ್ಟದ ಸಮಾವೇಶಗಳು, ಚರ್ಚೆಗಳು, ವಿಚಾರಸಂಕಿರಣಗಳು, ಶೀಲ–ಸಂಹಿತೆಗಳು ಇಂಗ್ಲೀಷ್ ಅಥವಾ ಹಿಂದಿಯ ಮೂಲಕ ಒಂದಾಗಿ ನಡೆಯುವುದನ್ನು ಕಾಣಬಹುದಾಗಿದೆ. ನಮ್ಮ ಆಹಾರ ಪದ್ಧತಿಯಲ್ಲಿ ಸ್ವಲ್ಪ ಭಿನ್ನತೆ ಇದ್ದರೂ, ದಕ್ಷಿಣ ಭಾರತದವರು ಪಂಜಾಬಿ ಡಾಬಾಗಳ ಊಟವನ್ನು ಮೆಚ್ಚಿ, ಉಂಡು ಸಂತಸಪಡುತ್ತಾರೆ. ಉತ್ತರ ಭಾರತೀಯರು ದಕ್ಷಿಣದವರ ಇಡ್ಲಿ-ದೋಸೆಗಳನ್ನು ಹಿಗ್ಗಿನಿಂದ ಸವಿಯುತ್ತಾರೆ. ಹೀಗೆ ನಮ್ಮ ದೇಶದ ವಿವಿಧತೆಯಲ್ಲೂ ಏಕತೆ ಎದ್ದು ಕಾಣುತ್ತದೆ.

ಈ ಏಕತೆಯ ರಾಷ್ಟ್ರವನ್ನು ಒಂದಾಗಿ ಕೂಡಿಸಿ ನಿಲ್ಲಿಸುವ ಶಕ್ತಿಯನ್ನು ಪಡೆದಿದೆ. ಆದುದರಿಂದಲೇ ಗಾಂಧೀಜಿಯವರ ರಾಷ್ಟ್ರೀಯ ಆಂದೋಲನದಲ್ಲಿ ಭಾರತೀಯರೆಲ್ಲ ಒಗ್ಗಟ್ಟಿನಿಂದ ಹೋರಾಡಿ ಗುರಿ ಸಾಧಿಸಲು ಸಾಧ್ಯವಾಯಿತು. ನಾವು ಯಾವುದೇ ಭಾಷೆ ಮಾತನಾಡಿದರೂ, ಯಾವುದೇ ಜಾತಿಗೆ ಸೇರಿದ್ದರೂ, ಭಾರತದ ಯಾವುದೇ ಮೂಲೆಯಲ್ಲಿ ವಾಸಿಸುತ್ತಿದ್ದರೂ ನಾವೆಲ್ಲಾ ಭಾರತೀಯರು ಎಂಬ ಭಾವನೆ ನಮ್ಮನ್ನು ಒಂದಾಗಿ ಬೆಸೆಯುತ್ತದೆ. ಆದುದರಿಂದ ನಮ್ಮ ಭಾವನೆಗಳಲ್ಲಿ ನಡೆ–ನುಡಿಗಳಲ್ಲಿ, ರಾಷ್ಟ್ರವನ್ನು ಕುರಿತಾದ ವಿಷಯದಲ್ಲಿ ಭಿನ್ನತೆ ಇರಬಾರದು; ಏಕತೆ ಇರಬೇಕು. ಭಾವೈಕ್ಯತೆ ಇದ್ದಾಗ ಮಾತ್ರ ಭಾರತೀಯರು ನೆಮ್ಮದಿಯಿದ ಬದುಕಲು ಸಾಧ್ಯ. ನಾವೆಲ್ಲಾ ಒಂದೇ ರಾಷ್ಟ್ರದ ಪ್ರಜೆಗಳು ಎಂಬ ಭಾವನೆ ಪ್ರತಿಯೊಬ್ಬರ ಹೃದಯದಲ್ಲೂ ಗಟ್ಟಿಗೊಳ್ಳಬೇಕು. ರಾಷ್ಟ್ರೀಯ ಭಾವೈಕ್ಯತೆಯೇ ನಮ್ಮ ದೇಶದ ಬಲಿಷ್ಠತೆಯ ಬುನಾದಿ. ಈ ಐಕ್ಯಭಾವದ ಬಲವೇ ಪರಕೀಯರ ಬಂಧನಕ್ಕೆ ಒಳಗಾಗಿದ್ದ ಭಾರತವನ್ನು ಗಾಂಧೀಜಿ ಯುದ್ಧವಿಲ್ಲದೆ ಸ್ವತಂತ್ರಗೊಳಿಸಲು ಸಾಧ್ಯವಾಯಿತು. ಆಗ ಭಾರತಯರು, ಭಿನ್ನತೆಯನ್ನು ಬದಿಗೊತ್ತಿ, ಐಕ್ಯತಾಭಾವದಿಂದ, ಭಾರತ ಒಂದು ಎಂಬ ಒಗ್ಗಟ್ಟಿನ ಭಾವನೆಯಿಂದ ಬಲಿಷ್ಠರಾಗಿ ನಿಂತುದರಿಂದ ಸೈನಿಕ ಬಲ, ಮದ್ದು–ಗುಂಡುಗಳ ಬಲ ಹೊಂದಿದ್ದ ಬ್ರಿಟಿಷರ ಎದೆ ನಡುಗಿಸಲು ಸಾಧ್ಯವಾಯ್ತು. ಇಂದು, ನಾವು ಸ್ವತಂತ್ರ ಭಾರತದ ಪ್ರಜೆಗಳಾಗಿ, ಜಗತ್ತಿನಲ್ಲಿ ಗೌರವದಿಂದ ತಲೆ ಎತ್ತಿ ನಿಲ್ಲಲು ಸಾಧ್ಯವಾಗಿದೆ.

ಇಂದು ಭಾರತ ದೇಶ ಒಂದಾಗಿದ್ದರೂ ದುರಾದೃಷ್ಟವಶಾತ್ ಈಗೀಗ ಭಿನ್ನತೆ ಬಲವಾಗಿ 'ನಾವೆಲ್ಲಾ ಒಂದು ಎಂಬ ಭಾವನೆ ನಶಿಸುತ್ತಿದೆ. ಕ್ಷುಲ್ಲಕ ಕಾರಣಗಳಿಗಾಗಿ ಒಂದು ಧರ್ಮದವರು ಇನ್ನೊಂದು ಧರ್ಮದವರನ್ನು ದ್ವೇಷಿಸುತ್ತಿದ್ದಾರೆ. ಮತೀಯ ಕಾರಣಗಳಿಗಾಗಿ ಹೊಡೆದಾಟ–ಬಡಿದಾಟಗಳು ದೇಶದ ತುಂಬೆಲ್ಲಾ ಕಾಣಸಿಗುತ್ತವೆ. ಭಾಷೆಗಾಗಿಯೂ ದ್ವೇಷದ ದಳ್ಳುರಿ ಹಬ್ಬಿರುವುದು ದುರದೃಷ್ಟಕರ. ನಮ್ಮ ಅಭಿಪ್ರಾಯದ

ವಿನಿಮಯಕ್ಕಾಗಿ ಉಪಯೋಗಿಸುವ ಭಾಷೆಯನ್ನು ಭಿನ್ನಾಭಿಪ್ರಾಯದ ಒಂದು ಸಾಧನವಾಗಿ ಮಾಡಿಕೊಂಡಿರುವುದು ನಿಜವಾಗಿಯೂ ಒಳ್ಳೆಯದಲ್ಲ. ಒಂದು ರಾಜ್ಯದ ಗಡಿಯ ಗೆರೆಯು ಇಲ್ಲಿರಬೇಕು – ಅಲ್ಲಿರಬೇಕು ಎಂದು ದಿನಬೆಳಗಾದರೆ ದ್ವೇಷಪೂರಿತ ಚರ್ಚೆಗಳು ನಡೆಯುವುದನ್ನು ನೋಡಿದರೆ, ನೀರಿನ ಹಂಚಿಕೆಗಾಗಿ ಮಾಡುವ ಹೋರಾಟಗಳನ್ನು ನೋಡಿದರೆ, ನಮ್ಮ ದೇಶದಲ್ಲಿ ರಾಷ್ಟ್ರೀಯ ಭಾವನೆ ಮೂಡೀತೇ ಎಂದು ಸಂಶಯಪಡುವಂತಾಗಿದೆ. ನಾವೆಲ್ಲಾ ಭಾರತೀಯರು, ಭಾರತ ನಮ್ಮೆಲ್ಲರದು ಎಂಬ ವಿಶಾಲಭಾವನೆ ಪ್ರತಿ ಭಾರತೀಯನಲ್ಲಿ ಉದಯವಾದರೆ, ಈ ವಿರಸ, ದ್ವೇಷ, ಹೊಡೆದಾಟ – ಬಡಿದಾಟಗಳು ಇಲ್ಲವಾಗಿ ಜನರು ಸುಖ – ಶಾಂತಿಗಳಿಂದ, ಪ್ರೀತಿ ವಿಶ್ವಾಸದಿಂದ ಬದುಕಲು ಸಾಧ್ಯವಾಗುತ್ತದೆ.

ರಾಷ್ಟ್ರೀಯ ಭಾವೈಕ್ಯತೆಯ ಕೊರತೆಯಿಂದಾಗಿ ಈಗ ಒಗ್ಗಟ್ಟಿಲ್ಲವಾಗಿದೆ. ಜನರ ವಿರಸ–ದ್ವೇಷಗಳಿಂದ ಆಗುವ ಅನಾಹುತಗಳಿಗೆ ಕೊನೆ ಇಲ್ಲವಾಗಿದೆ. ದೇಶದ ಆಸ್ತಿಯು ತಮಗೆ ಸೇರಿದ್ದಲ್ಲವೆಂಬಂತೆ ಜನರು, ಸಂಪಿನ ಕಾಲದಲ್ಲಿ ರಾಷ್ಟ್ರದ ಆಸ್ತಿಯನ್ನು ನಾಶಗೊಳಿಸಿ ನಷ್ಟ ಉಂಟುಮಾಡುತ್ತಾರೆ. ಸ್ವಾರ್ಥಕ್ಕಾಗಿ ದೇಶದ ಅಭಿವೃದ್ಧಿಯನ್ನೇ ಕುಂಠಿತಗೊಳಿಸುವ ಸಂಪುಗಳಲ್ಲಿ ಅನಿವಾರ್ಯ ಸೇವೆಯಲ್ಲಿ (Essential Services) ಇರುವವರೂ ನಿರತರಾಗಿರುವುದು ದೇಶಕ್ಕೇ ಅಪಾಯ ಉಂಟು ಮಾಡುವುದರಲ್ಲಿ ಸಂಶಯವಿಲ್ಲ. ರಾಷ್ಟ್ರೀಯ ಭಾವೈಕ್ಯತೆಗೆ ಏಕದೇವೋಪಾಸನೆಯಲ್ಲಿ ನಂಬಿಕೆ ಮತ್ತು ದೇಶಕ್ಕೆಲ್ಲಾ ಒಂದು ರಾಷ್ಟ್ರಭಾಷೆ ಅಗತ್ಯ. ಈ ಅಗತ್ಯದ ಬೆಲೆಯನ್ನು ಭಾರತೀಯರು ಎಷ್ಟು ಬೇಗ ಅರ್ಥಮಾಡಿಕೊಂಡರೆ ಅಷ್ಟು ಒಳ್ಳೆಯದು. ಇದರ ಅರಿವಿನ ಮೇಲೆಯೇ ರಾಷ್ಟ್ರದ ಅಳಿವು–ಉಳಿವು ನಿಂತಿದೆ ಎಂದರೆ ತಪ್ಪಾಗುವುದಿಲ್ಲ.

■

## ೨. ಸಾಹಿತ್ಯದ ಗುರಿ

ಸಾಹಿತ್ಯದ ಪ್ರಕಾರಗಳು ನಾನಾ ವಿಧ. ಸೃಜನಶೀಲ ಸಾಹಿತ್ಯ, ದಲಿತ ಸಾಹಿತ್ಯ, ಜನಪದ ಸಾಹಿತ್ಯ, ಪತ್ರಿಕಾ ಸಾಹಿತ್ಯ, ಶಿಕ್ಷಣ ಸಾಹಿತ್ಯ, ಟಿ.ವಿ. ಸಾಹಿತ್ಯ ವೈದ್ಯಕೀಯ ಸಾಹಿತ್ಯ ಇತ್ಯಾದಿ ಪ್ರಕಾರಗಳು ರಚಿಸಲ್ಪಡುತ್ತಿವೆ. ಈ ವೈವಿಧ್ಯಮಯ ಸಾಹಿತ್ಯದ ಗುರಿಗಳಲ್ಲೂ ವೈವಿಧ್ಯತೆಯನ್ನು ಕಾಣಬಹುದು. ಇವುಗಳ ವಿಷಯಗಳೂ ನಾನಾ ವಿಧ. ಈಗಿನ ಕಾಲದಲ್ಲಿ ಎಲ್ಲವೂ ವಿಪುಲವಾಗಿ ಬೆಳೆಯುತ್ತಿವೆ. ಹಾಗಾಗಿ ಎಲ್ಲವೂ ಗೊಂದಲಮಯ. ಅದರಂತೆ ಸಾಹಿತ್ಯವೂ ಇದಕ್ಕೆ ಹೊರತಾಗಿಲ್ಲ. ಏಕೆಂದರೆ ಈಗಿನ ಸಾಹಿತ್ಯ ನಿರ್ದಿಷ್ಟ ಗುರಿಯನ್ನು ಹೊಂದಿಲ್ಲ. ಹಿಂದಿನಂತೆ ಸಾಮಾಜಿಕ ಅಭಿವೃದ್ಧಿ, ಮಾನವತೆಯ ಹಿತ ಸಾಹಿತ್ಯದ ಗುರಿಯಾಗಿ ಉಳಿದಿಲ್ಲ.

ಆಳವಾಗಿ ಯೋಚಿಸಿದರೆ, ಗುರಿಯಲ್ಲಿ ಶಿಕ್ಷಕನಿಗೂ, ಸಾಹಿತಿಗೂ ವ್ಯತ್ಯಾಸವಿರಬಾರದು. ಶಿಕ್ಷಕನ ಬೋಧನೆಯ ಗುರಿ, ಮಕ್ಕಳ ಸಹಜ ಸ್ವಭಾವದ ಉದಾತ್ತೀಕರಣದಿಂದ ಹಿಡಿದು ರಾಷ್ಟ್ರದ ಅಭಿವೃದ್ಧಿ-ಮಾನವೀಯತೆಯ ಉದ್ಧಾರದವರೆಗೆ ಹೋಗುತ್ತದೆ. ಹಾಗೆಯೇ ಸಾಹಿತಿಯ ಬರಹದ ಗುರಿ ಸಮಾಜದ ಹೊಲಸನ್ನು ಹೋಗಲಾಡಿಸಿ ಸಾಮರಸ್ಯದಿಂದ ಕೂಡಿದ ಸುಖೀ ಸಮಾಜದ ಉದಯ ಹಾಗೂ ಮಾನವೀಯ ಗುಣಗಳುಳ್ಳ ಮಾನವರನ್ನು ರೂಪಿಸಲು ಸಹಾಯಕವಾಗಿರಬೇಕು.

ಆದರೆ ಈಗ ಆಗುತ್ತಿರುವುದೇನು? ಸಾಹಿತಿ ಸಮಾಜದ ಉದ್ಧಾರಕ್ಕಿಂತ ತನ್ನ ಉದ್ಧಾರಕ್ಕೆ, ತನ್ನ ಸ್ವಾರ್ಥಸಾಧನೆಗೆ ಬರಹವನ್ನು ಬಳಸುತ್ತಿರುವುದನ್ನು ನಾವೀಗ ಗಮನಿಸಬಹುದಾಗಿದೆ. ಹೆರವರ ಮೇಲೆ ಹೊಲಸು ಚೆಲ್ಲಲು, ತನ್ನ ಡಂಗೂರ ಬಾರಿಸಿಕೊಳ್ಳಲು ಕೆಲವರು ಸಾಹಿತ್ಯ ಬಳಕೆಯನ್ನು ಮಾಡುತ್ತಿದ್ದಾರೆ. ಇದು ಇಲ್ಲ ಸಲ್ಲದ ಊಹಾಪೋಹಗಳಿಂದ, ಸಲ್ಲದ ಕಲ್ಪನೆಗೆ ದಾರಿ ಮಾಡುತ್ತಿದೆ. ಕೆಲವು ಪ್ರಕಾರದ ಸಾಹಿತ್ಯ, ವಾಸ್ತವಾಂಶಗಳನ್ನು ಸಾಹಿತ್ಯೀಕರಿಸುವ ಪ್ರಯತ್ನದಲ್ಲಿ ಅನೇಕ ದುಷ್ಕೃತ್ಯದ ಮಾದರಿಗಳು ಅವಿವೇಕಿಗಳಿಗೆ ಎಟುಕುವಂತೆ ಮಾಡಿ, ಅದರ ದುರುಪಯೋಗಕ್ಕೆ ಅವಕಾಶವಾಗಿ, ಸಮಾಜದ ಅಶಾಂತಿಗೆ ಕಾರಣವಾಗಿದೆ. ಹೀಗಾಗಿ ದುಷ್ಟ ಪ್ರವೃತ್ತಿ ವಿಸ್ತರಿಸಲು ಸಾಹಿತ್ಯವೂ ತನ್ನ ಕೊಡುಗೆ ನೀಡುತ್ತಿದೆ ಎಂದರೆ ತಪ್ಪಾಗಲಾರದು.

ಸಾಹಿತ್ಯ ಬಹು ಬಲಶಾಲಿಯಾದ ಅಸ್ತ್ರ. ಲೇಖನಿಯು ಖಡ್ಗಕ್ಕಿಂತ ಹರಿತವಾದುದು, ಖಡ್ಗ ಮಾಡಲಾರದುದನ್ನು ಲೇಖನಿ ಮಾಡಬಲ್ಲದು ಎನ್ನುತ್ತಾರೆ. ಸಾಹಿತ್ಯವು ಅಪರಾಧಿಯನ್ನು ಎಚ್ಚರಿಸಿ ಯೋಗ್ಯ ವ್ಯಕ್ತಿಯನ್ನಾಗಿ ಪರಿವರ್ತಿಸಬಲ್ಲದು. ಬೇಜವಾಬ್ದಾರಿ ವ್ಯಕ್ತಿ ಅಥವಾ ವ್ಯವಸ್ಥೆಯನ್ನು ಜವಾಬ್ದಾರಿಯುತವನ್ನಾಗಿ ಪರಿವರ್ತಿಸಬಲ್ಲದು. ಅಂತಹ ಶಕ್ತಿಯುಳ್ಳ ಸಾಹಿತ್ಯ ಇಂದು, ಸಂಪೂರ್ಣವಾಗಿಯಲ್ಲದಿದ್ದರೂ, ಬಹುಮಟ್ಟಿಗೆ ಸಮಾಜಕ್ಕೆ ನಿರುಪಯೋಗಿಯಾಗಿಯೂ ಅಥವಾ ಹಾನಿಯುಂಟುಮಾಡುವುದಾಗಿಯೂ ಆಗುತ್ತಿದೆ ಎಂದು ಹೇಳಲು ಹಿಂಜರಿಯಬೇಕಾಗಿಲ್ಲ.

ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಈಗಿನಂತೆ ಸಾರಿಗೆ ವ್ಯವಸ್ಥೆ, ಅನುಕೂಲಕರವಾಗಿ ಇರಲಿಲ್ಲ. ಈಗಿನಷ್ಟು ಪತ್ರಿಕೆಗಳಿರಲಿಲ್ಲ. ಟಿ.ವಿ.ಗಳಿರಲಿಲ್ಲ. ಆದರೆ ರಾಷ್ಟ್ರವನ್ನು ಒಂದಾಗಿಸುವಲ್ಲಿ, ಜನರಲ್ಲಿ ರಾಷ್ಟ್ರಪ್ರೇಮ ಮೂಡಿಸುವಲ್ಲಿ, ಸಹಕಾರದಿಂದ ನಡೆದುಕೊಳ್ಳುವಲ್ಲಿ ಸಾಹಿತ್ಯ ಬಹಳ ಪ್ರಭಾವಿ ಕೆಲಸವನ್ನೆಸಗಿತು.

ಉದಾ :

ಕಸ್ತೂರಿಬಾಯಿಯವರೂ, ಕಮಲಾದೇವಿಯವರೂ
ಸರೋಜಿಯನಾಯ್ಡು ಇವರ್ಯಾರೇ । ನಾವು ಚಳವಳಿ ಮಾಡುವವರೂ ।

ಚಳವಳಿ ಮಾಡುವವರೂ । ತಿಳಿಯನು ಹೇಳುವವರೂ
ತಿಳಿಸಿ ಸ್ವರಾಜ್ಯವ ತರುವವರೂ ನಾವು ಚಳವಳಿ ಮಾಡುವವರೂ ॥

ಉಪ್ಪನು ಮಾಡುವವರೂ, ಕಪ್ಪವ ಕೊಡದವರೂ
ತಪ್ಪಾದೆ ಸ್ವರಾಜ್ಯವ ತರುವವರೂ ನಾವು ಚಳವಳಿ ಮಾಡುವವರು ॥

ಹಗಲ್ಚಿಕ್ಕಿ ಮುಗಿಲ್ಬಣ್ಣ ಜಗ–ಜಗ ಹೊಳೆಯುವ
ಪರದೇಶಿ ಬಳೆಗಳ ಇಡದವರೂ ನಾವು ಚಳವಳಿ ಮಾಡುವವರು ॥

ಖಾದಿಯ ಉಡುವವರೂ, ಪರದೇಶಿಯ ತೊಡದವರೂ
ಪರತಂತ್ರದಲಿ ನಾವು ಇರದವರೂ ನಾವು ಚಳವಳಿ ಮಾಡುವವರು ॥

ಎಂಬ ಸಾಹಿತ್ಯವನ್ನು ಸ್ವಾತಂತ್ರ್ಯ ಹೋರಾಟಗಾರರು ರಚಿಸಿ, ಬೆಳಗಾಗೆದ್ದು ಬೀದಿಯಲ್ಲಿ ಹಾಡಿಕೊಂಡು ಹೋಗುತ್ತಿದ್ದಾಗ, ಮನೆಯ ಒಳಗಿದ್ದ ಜನರು ಇದರಿಂದ ಪ್ರಭಾವಿತರಾಗಿ ಚಳವಳಿಯಲ್ಲಿ ಪಾಲ್ಗೊಳ್ಳಲು ಸೇರಿಕೊಳ್ಳುತ್ತಿದ್ದರು. ಈ ಸಾಹಿತ್ಯ ಜನರಲ್ಲಿ ದೇಶಪ್ರೇಮ ಜಾಗೃತಗೊಳಿಸುತ್ತಿತ್ತು. ಚಳವಳಿಯಲ್ಲಿ ಭಾಗವಹಿಸಿ ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವಂತೆ ಮಾಡುತ್ತಿತ್ತು. ಪರದೇಶಿ ವಸ್ತುಗಳ ವ್ಯಾಮೋಹವನ್ನು ಬಿಡಿಸಿ, ದೇಶೀಯ ವಸ್ತುಗಳ ಬಗ್ಗೆ ಆಸಕ್ತಿ, ಅಭಿಮಾನ ಹುಟ್ಟುವಂತೆ

ಮಾಡುತ್ತಿತ್ತು. ಇಂತಹ ಗೀತೆಗಳನ್ನು ರಚಿಸಿ ಬೀದಿಯಲ್ಲಿ ಹಾಡುತ್ತಾ ಹೋಗುತ್ತಿದ್ದರೆ, ಇದರ ಪ್ರಭಾವದಿಂದ ಪ್ರತಿ ಮನೆಯಿಂದಲೂ ಜನರು, ತಮ್ಮ ಮನೆಯ ಕೆಲಸಗಳನ್ನು ತೊರೆದು ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಮುಂದಾಗುತ್ತಿದ್ದ ದೃಶ್ಯವನ್ನು ಅಂದು ಬದುಕಿ ಇಂದು ಉಳಿದಿರುವ ವೃದ್ಧರನ್ನು ಕೇಳಿದರೆ ತಿಳಿಯುತ್ತದೆ. ಅಷ್ಟು ಸತ್ವಯುತವಾದ ಸಾಹಿತ್ಯವನ್ನು ಇಂದು ಸರಿಯಾದ ರೀತಿಯಲ್ಲಿ ರಚಿಸದಿರುವುದು – ಬಳಸದಿರುವುದು ತುಂಬಾ ಶೋಚನೀಯ.

ಪರಿಸರ ಮಾಲಿನ್ಯ, ಮೌಲ್ಯಗಳ ಅಧಃಪತನ, ಬೇಜವಾಬ್ದಾರಿಯುತ ನಡವಳಿಕೆ ಮುಂತಾದ ಸಾಮಾಜಿಕ ಅಗತ್ಯ ವಿಷಯಗಳನ್ನು ಸರಿಪಡಿಸಲೋಸುಗ ಸಮಾಜ – ಸರ್ಕಾರ ಮಾಡುತ್ತಿರುವ ಖರ್ಚಿಗೆ ಬದಲು ಪತ್ರಿಕಾ ಸಾಹಿತ್ಯದ ಮೂಲಕ ಜನ ಜಾಗೃತಿಯುಂಟು ಮಾಡಿದರೆ, ಸಾಕಷ್ಟು ಸುಧಾರಣೆಯಾಗಿ ಹಣದ ಅಪವ್ಯಯ ಕಡಿಮೆಯಾಗುತ್ತದೆ.

ಸಾಹಿತ್ಯವನ್ನು, ಸದುಪಯೋಗ ಮಾಡಿಕೊಳ್ಳಲು ಉಪಯೋಗಿಸಿಕೊಳ್ಳಬೇಕು. ಅದಕ್ಕಾಗಿ ಇದ್ದುದನ್ನು ಇದ್ದಂತೆ ಸಾಹಿತ್ಯದಲ್ಲಿ ಚಿತ್ರಿಸಬೇಕು. ಆದರೆ ಇದ್ದುದನ್ನು ಇದ್ದಂತೆ ವರ್ಣಿಸುತ್ತೇವೆಂದು ಮುಚ್ಚಿಡಬೇಕಾದುದನ್ನು ಬಿಚ್ಚಿಟ್ಟರೆ ಅಶ್ಲೀಲವೆನ್ನಿಸುತ್ತದೆ. ಮನಸ್ಸನ್ನು ವಿಕೃತಗೊಳಿಸುವ ಅಶ್ಲೀಲ ಸಾಹಿತ್ಯ ಸಮಾಜದ ಅಧಃಪತನಕ್ಕೆ ಕಾರಣವಾಗುತ್ತದೆ. ಅಂತಹ ಸಾಹಿತ್ಯ ಒಳಿತಿಗಿಂತ ಕೆಡುಕನ್ನೇ ಮಾಡುತ್ತದೆ. ಆದುದರಿಂದ, ಸಮಾಜದ ದೋಷಗಳನ್ನು ಸಾಹಿತ್ಯದ ಮೂಲಕ ಎತ್ತಿ ತೋರಿಸಿ ಅವುಗಳನ್ನು ತಿದ್ದಿಕೊಳ್ಳಬೇಕು ಎಂಬ ಭಾವನೆ ಉಂಟಾಗುವ ರೀತಿಯ ಸಾಹಿತ್ಯದ ಅಗತ್ಯವಿದೆ. ಮೌಲ್ಯಗಳು ಜೀವನಕ್ಕೆ ಅತ್ಯಗತ್ಯ. ಆದರೆ ಇಂದು, ಸಮಾಜ ಮೌಲ್ಯಗಳನ್ನು ಕಳೆದುಕೊಂಡು ಮೋಸ, ದ್ವೇಷ, ಹಿಂಸೆಗಳಿಗೆ ಒಳಗಾಗಿ ತೊಳಲಾಡುತ್ತಿದೆ. ಈಗಾಗುತ್ತಿರುವ ವೈಜ್ಞಾನಿಕ ಬೆಳವಣಿಗೆ, ಔದ್ಯೋಗಿಕ ಅಭಿವೃದ್ಧಿ, ಜ್ಞಾನದ ವಿಸ್ತಾರ, ಅಭಿವೃದ್ಧಿಯ ಪೈಪೋಟಿ ಎಲ್ಲವೂ ಸದ್ವಿನಿಯೋಗವಾಗುವ ರೀತಿಯಲ್ಲಿ ಬಳಸದಿದ್ದರೆ, ಮಾನವತೆಗೆ ಮಾರಕವಾದ ಪರಿಸ್ಥಿತಿಯನ್ನು ಕಾಲಾನುಕ್ರಮದಲ್ಲಿ ಉಂಟುಮಾಡುವಲ್ಲಿ ಸಂಶಯವಿಲ್ಲ. ಈ ಎಲ್ಲ ಅಭಿವೃದ್ಧಿಯ ಸದುಪಯೋಗವಾಗಬೇಕಾದರೆ, ಮೌಲ್ಯಾಧಾರಿತ ಸಮಾಜದ ಉದಯವಾಗಬೇಕು. ಅಂತಹ ಸಮಾಜದ ಉದಯಕ್ಕೆ ಉತ್ತಮ ಗುರಿಯುಳ್ಳ ಸಾಹಿತಿ, ಬಹಳಷ್ಟು ಸಹಾಯಕನಾಗಬಲ್ಲ. ಈ ವೈವಿಧ್ಯಮಯ ಸಾಹಿತ್ಯದ ಪ್ರಕಾರಗಳೆಲ್ಲಾ ಉತ್ತಮ ಪೀಳಿಗೆಯ, ಶ್ರೇಷ್ಠಮಟ್ಟದ ಸಮಾಜದ ರಚನೆಯ ಗುರಿ ಹೊಂದಿದರೆ ಮಾನವ ಜೀವನ ಆನಂದಮಯವಾಗುತ್ತದೆ.

■

## ೩. ಸತ್ಯಶೋಧನೆ

ದೇವರು ಇದ್ದಾನೆಯ ಎಲ್ಲವೆ ಎಂಬ ಜಿಜ್ಞಾಸೆ ಅನಾದಿಕಾಲದಿಂದಲೂ ನಡೆದುಬಂದಿದೆ. ರಾಮಕೃಷ್ಣ ಪರಮಹಂಸರಂತಹ ಕೆಲವೇ ಕೆಲವರು 'ದೇವರು ಇದ್ದಾನೆ' ಎಂದು ಖಚಿತವಾಗಿ ಹೇಳಿದ್ದಾರೆ; ನೋಡಿದ್ದೇನೆ ಎಂದೂ ಅಂದಿದ್ದಾರೆ. ಆದರೆ ದೇವರಿದ್ದಾನೆ ಎಂಬ ಮಾತನ್ನು ಬಹಳ ಜನ ನಂಬುವುದೇ ಇಲ್ಲ. ಏಕೆಂದರೆ ಅವರು ಕಾಣಿಸುವುದಿಲ್ಲ. ಇಂದಿನ ವೈಜ್ಞಾನಿಕ ಯುಗದಲ್ಲಿ ಕಾಣದುದನ್ನು, ಸಾಬೀತುಗೊಳಿಸಲಾರದುದನ್ನು ಯಾರೂ ಒಪ್ಪುವುದಿಲ್ಲ. ಹಾಗಾಗಿ ಈ ಪ್ರಶ್ನೆ ಸದಾ ಪ್ರಶ್ನೆಯಾಗಿಯೇ ಉಳಿದಿದೆ. ಕೆಲವರು 'ಒಳ್ಳೆಯ ಬದುಕೇ ದೇವರೆನ್ನುತ್ತಾರೆ. ಗಾಂಧೀಜಿ, ಡಾ ॥ ರಾಧಾಕೃಷ್ಣನ್ ರವರಂತಹ ತತ್ವಜ್ಞಾನಿಗಳು 'ಸತ್ಯವೇ ದೇವರು' ಎಂದರು. ಸತ್ಯದ ಅರಿವು ಪ್ರೇಮದಿಂದ ಎಂದರೆ ಅಹಿಂಸೆಯಿಂದ ಉಂಟಾಗುವುದು ಎಂಬುದು ಅವರ ಅಭಿಪ್ರಾಯ. ಸರ್ವಜ್ಞನೂ, ಸರ್ವಾಂತರ್ಯಾಮಿಯೂ, ಸರ್ವಶಕ್ತನೂ ಆದ ಭಗವಂತ ಕಾಣಿಸಿಕೊಳ್ಳುವುದ ಕೈ, ಕಾಲು, ಕಣ್ಣು, ಮೂಗು, ತಲೆ ಇರುವ ದೇಹದ ಮುಖಾಂತರವಲ್ಲ. ಸತ್ಯದ ಮೂಲಕ. ಸತ್ಯವಾದುದು ಮಂಗಳಕರವಾಗಿರುತ್ತದೆ, ಮಂಗಳಕರವಾದುದು ಸುಂದರವಾಗಿರುತ್ತದೆ. ಅದಕ್ಕಾಗಿಯೇ ಸತ್ಯ, ಶಿವಂ, ಸುಂದರಂ ಎಂದು ಹೇಳುವರು. ಸತ್ಯಕ್ಕೆ ಮಿಗಿಲಾದ ದೇವರಿಲ್ಲ. ಸತ್ಯದ ಅರಿವು ಅಗತ್ಯ. ಸತ್ಯ ಅರಿತರೆ ಸಾಲದು. ಅದನ್ನು ಅಳವಡಿಸಿಕೊಳ್ಳಬೇಕು. ಸತ್ಯವಾದ ಬದುಕು ಬಾಳಬೇಕು. ಆಗ ಸತ್ಯದ ಎಂದರೆ ದೇವರ ಸಾಕ್ಷಾತ್ಕಾರವಾಗಲು ಸಾಧ್ಯ. ಸತ್ಯಜೀವನ ಬದುಕಲು ದೇಹ, ಮನಸ್ಸು, ಮಾತುಗಳು ಪರಿಶುದ್ಧವಾಗಿರಬೇಕು. ಮನುಷ್ಯ ಪರಿಶುದ್ಧನಾಗಲು, ಪವಿತ್ರಾತ್ಮನೆನ್ನಿಸಿಕೊಳ್ಳಲು ಬಹಳ ಸಾಧನೆ ಮಾಡಬೇಕಾಗುತ್ತದೆ. ಸ್ವಾಭಾವಿಕನಾಗಿ ಮನುಷ್ಯನಲ್ಲಿರುವ ಸಹಜ ಸ್ವಭಾವಗಳನ್ನು ಉದಾತ್ತೀಕರಿಸಿಕೊಂಡು, ತನ್ನ ಮನಸ್ಸನ್ನು, ವಿಚಾರಗಳನ್ನು ಎತ್ತರಿಸಿಕೊಂಡಾಗ, ದೇವರನ್ನು ಕಾಣುವ ಹಾದಿಯಲ್ಲಿ ಹೋಗಲು ಸಾಧ್ಯ. ಪ್ರೇಮಿಸುವುದು ಮಾನವನ ಸಹಜ ಸ್ವಭಾವ. ಆದರೆ ಆ ಸ್ವಭಾವವನ್ನು ಕಾಮ, ಮೋಹ, ವ್ಯಾಮೋಹಗಳಿಂದ ಬೇರ್ಪಡಿಸಿ, ಪರಿಶುದ್ಧ ಪ್ರೇಮ ಮಾಡಿಕೊಳ್ಳಬೇಕು. ಆಗ ಅವನು ಎಲ್ಲವನ್ನೂ ಸಮಾನವಾಗಿ ಪ್ರೀತಿಸುತ್ತಾನೆ. ಈ ಪ್ರೀತಿಯಿಂದ ಕೆಲವು ಸಾರಿ ಅವನು ವೇದನೆಗಳಿಗೆ ಗುರಿಯಾಗಬೇಕಾಗುತ್ತದೆ.

ಏಕೆಂದರೆ ಪ್ರೀತಿಯಿಂದ ಒಂದು ರೀತಿಯ attachment ಉಂಟಾಗುತ್ತದೆ. ನಾವು ಪ್ರೀತಿಸಿದುದನ್ನೆಲ್ಲಾ, ಅಪೇಕ್ಷಪಟ್ಟುದ್ದನ್ನೆಲ್ಲಾ ನಾವು ನಿರೀಕ್ಷಿಸಿದಂತೆ ಪಡೆಯಲಾರೆವು. ಆಗ ದುಃಖವಾಗುವುದು ಸಹಜ. ಹೀಗಾಗಿ ನಾವು ಎಷ್ಟೆಷ್ಟು ಹೆಚ್ಚು ಪ್ರೇಮಿಸುತ್ತೇವೆಯೋ ಅಷ್ಟಷ್ಟು ದುಃಖ ಅನುಭವಿಸಬೇಕಾಗುತ್ತದೆ. ಈ ಲೌಕಿಕ ಜೀವನದ ಉದಾಹರಣೆಯನ್ನು ತೆಗೆದುಕೊಂಡರೆ ಗಂಡ-ಹೆಂಡಿರಲ್ಲಿ ಪ್ರೇಮ, ತಾಯಿ-ಮಕ್ಕಳಲ್ಲಿ ಪ್ರೇಮ, ಒಡಹುಟ್ಟಿದವರಲ್ಲಿ ಪ್ರೇಮ, ಸ್ನೇಹಿತರಲ್ಲಿ ಪ್ರೇಮ ಬೆಳೆಯುತ್ತದೆ. ಕೆಲವರು ಇದನ್ನು ಬಹಳ ಹಚ್ಚಿಕೊಳ್ಳುವುದಿಲ್ಲ. ಮತ್ತೆ ಕೆಲವರು ತುಂಬ ಆಳವಾದ ಮಮತೆ ಬೆಳೆಸಿಕೊಳ್ಳುತ್ತಾರೆ. ಆ ಮಮತೆ ಅನೇಕ ತ್ಯಾಗಗಳನ್ನು ಮಾಡುವಂತೆ ಮಾಡುತ್ತದೆ. ಆದರೆ ಯಾರಿಗಾಗಿ ಆ ಜೀವ ಅಷ್ಟೊಂದು ಕಷ್ಟಪಟ್ಟಿರುತ್ತದೋ ಅವರು ಇವರ ಬಗ್ಗೆ ಅಸಡ್ಡೆ ತಾಳಿದಾಗ, ಕೃತಘ್ನರಾಗಿ ನಡೆದುಕೊಂಡಾಗ, ಆಗುವ ನೋವು ಅಷ್ಟಿಷ್ಟಲ್ಲ. ಅಂತಹ ಸಂದರ್ಭದಲ್ಲಿ ಪ್ರೀತಿಸಿದ ವ್ಯಕ್ತಿ ನಿರಾಸೆಯಿಂದ, ನಿರುತ್ಸಾಹದಿಂದ ನೋವಿನಿಂದ ಬಹಳ ದುಃಖಪೀಡಿತನಾಗುತ್ತಾನೆ. ಕೋಪ-ತಾಪಗಳಿಗೆ, ದುಃಖ-ದುಮ್ಮಾನಗಳಿಗೆ ಒಳಗಾಗುತ್ತಾನೆ. ಸಾಮಾನ್ಯ ಮನುಷ್ಯನಾದರೆ, ದ್ವೇಷ-ಸೇಡು, ಅಸೂಯೆ ಮುಂತಾದ ವಿಧ್ವಂಸಕ ಭಾವನೆಗಳಿಗೆ ಒಳಗಾಗುತ್ತಾನೆ. ಆದರೆ ಭಗವಂತನ ಬಗೆಗೆ ಚಿಂತಿತನಾಗಿರುವ ಮನುಷ್ಯ 'ಭಗವಂತನಿಗೆ ನನ್ನ ಮೇಲೆ ತುಂಬಾ ಪ್ರೀತಿ ಇದೆ, ನನ್ನ ಅಪರಿಪಕ್ವಮನ ಈ ಲೋಕದ ಆಸೆ-ಆಮಿಷಗಳಿಗೆ ಒಳಗಾಗಿ ಇಲ್ಲಿಗೇ ಅಂಟಿಕೊಂಡಿರುವುದನ್ನು ನೋಡಿ, ದೇವರಿಗೆ ನನ್ನ ಮೇಲೆ ಕರುಣೆ ಉಕ್ಕಿದೆ, ಇವನಿಗೆ ಬಯಸಿದುದೆಲ್ಲಾ ಸಿಕ್ಕರೆ ಅವನು ಅಧೋಮುಖನಾಗುತ್ತಾನೆಯೇ ಹೊರತು ಮೇಲ್ಮುಖನಾಗುವುದಿಲ್ಲ. ಆದುದರಿಂದ ಅವನ ವ್ಯಾಮೋಹ ಇಳಿಸಲು ಅವನು ಪ್ರೀತಿಯಿಂದ ಕಂಡವರೇ ಅವನನ್ನು ದ್ವೇಷಿಸುವಂತೆ ಮಾಡಿದರೆ ತನ್ನ ಕಡೆ ತಿರುಗುತ್ತಾನೆಂದು ಹೀಗೆ ಮಾಡಿದ್ದಾನೆ' ಎಂದುಕೊಂಡು ಸಮಾಧಾನ ತಂದುಕೊಳ್ಳುತ್ತಾನೆ. ಆಗ ಈ ಅಶಾಶ್ವತ, ಅಸತ್ಯವಾದುವುಗಳ ಬಗೆಗಿನ ಪ್ರೇಮ ಶಾಶ್ವತವಾದ, ಸತ್ಯವಾದ ಭಗವಂತನೆಡೆಗೆ ತಿರುಗಲು ಸಾಧ್ಯವಾಗುತ್ತದೆ. ಈ ಭವಕ್ಕೆ ಅಂಟಿಕೊಂಡು ಅದನ್ನು ಪ್ರೀತಿಸುತ್ತಾ ಇದ್ದು ಇನ್ನಷ್ಟು, ಮತ್ತಷ್ಟು ದುಃಖಕ್ಕೆ ಗುರಿಯಾಗುವುದಕ್ಕಿಂತ ಕೈ ಹಿಡಿದು ಮೇಲೆತ್ತಿಕೊಳ್ಳುವ ಭಗವಂತನನ್ನು ಪ್ರೀತಿಸಿದರೆ, ನಿರಾಸೆಯ ಬದಲು ಶಾಂತಿ, ಸುಖ, ಸಮಾಧಾನಗಳನ್ನು ಪಡೆಯಬಹುದು. ದೇವರ ಅನುಗ್ರಹಕ್ಕೆ ಪಾತ್ರನಾಗಬಹುದೆಂಬ ಭಾವನೆ ಮೂಡುತ್ತದೆ. ಆಗ ಭಗವಂತನ ಅನ್ವೇಷಣೆಗೆ, ಅವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಪ್ರಯತ್ನದಲ್ಲಿ ನಿರತನಾಗುತ್ತಾನೆ. ಇಂತಹ ವ್ಯಕ್ತಿ, ಸತ್ಯವಾಗಿ ಶುದ್ಧನಾಗಿ ಬದುಕುವುದರಿಂದ, ಅವನಿಂದ ಸಮಾಜಕ್ಕೆ ಮಾನವತೆಗೆ, ಒಳಿತೇ ಹೊರತು ಕೆಡುಕಾಗುವುದಿಲ್ಲ. ಅವನೂ ಸಹ ಶಾಂತಿ, ಸಮಾಧಾನಗಳಿಂದ ತನ್ನ ಕಾರ್ಯದಲ್ಲಿ ನಿರತನಾಗುತ್ತಾನೆ.

ಗಾಂಧೀಜಿ 'ಸತ್ಯವೇ ದೇವರು' ಎಂದರು. ದೇವರಾದ ಆ ಸತ್ಯ ಯಾವುದು? ಗಾಂಧೀಜಿ ತಮ್ಮ ಜೀವನವನ್ನೇ ಪ್ರಯೋಗಾಲಯವನ್ನಾಗಿ ಮಾಡಿಕೊಂಡು, ಜೀವನುದ್ದಕ್ಕೂ ಸತ್ಯಶೋಧನೆ ಮಾಡಿದರು. ಧೈರ್ಯ, ನಿಷ್ಠೆ, ಪ್ರಾಮಾಣಿಕತೆ, ಅಹಿಂಸೆ, ರಾಷ್ಟ್ರಪ್ರೇಮ, ಮಾನವೀಯತೆ ಮುಂತಾದ ತಮ್ಮವೇ ಆದಂತಹ ಸತ್ಯಗಳನ್ನು ಕಂಡುಕೊಂಡರು. ಈ ಸತ್ಯದ ಹಾದಿಯಲ್ಲಿ ಹೋಗುವಾಗ ನಮಗೆ ಎದುರಾಗುವ ಸಮಸ್ಯೆಗಳು, ಜಿಜ್ಞಾಸೆಗಳು, ಅನುಮಾನಗಳು ಅನೇಕ. ಅವುಗಳನ್ನು ಪರೀಕ್ಷಿಸಿ, ಶೋಧಿಸಿ, ಪರಿಹಾರಗಳನ್ನು, ಸತ್ಯಾಂಶಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಮೊದಲನೆಯದಾಗಿ, 'ದೇವರು' ಸತ್ಯವೋ, ಮಿಥ್ಯವೋ ಎಂಬ ಅನ್ವೇಷಣೆ. ಅನೇಕರು ಶತ–ಶತಮಾನಗಳಿಂದ ಈ ಬಗ್ಗೆ ಶೋಧನೆ ನಡೆಸಿದ್ದಾರೆ. ತಮ್ಮದೇ ಆದಂತಹ ಸತ್ಯ ಕಂಡುಕೊಂಡು ಅವುಗಳನ್ನು ಮಾನವತೆಗೆ ತಿಳಿಸಿದ್ದಾರೆ. ಭಗವಾನ್ ಬುದ್ಧ, 'ಆಸೆಯೇ ದುಃಖಕ್ಕೆ ಮೂಲ' ಎಂಬ ಸತ್ಯವನ್ನು ಕಂಡುಹಿಡಿದ. ಶರಣರು, 'ಅರಿವೇ ಗುರು' ಎಂಬ ಸತ್ಯ ಶೋಧನೆ ಮಾಡಿದರು. ಪುರಂದರದಾಸರು, 'ಧರ್ಮವೇ ಜಯವೆಂಬ ಮೂಲಮಂತ್ರ' ಎಂದು ಹಾಡಿದರು. ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯ ಸತ್ಯ ಕಂಡುಕೊಂಡರು. ಇವರೆಲ್ಲಾ ಕಂಡುಕೊಂಡ ಸತ್ಯಗಳೆಲ್ಲವೂ ಸತ್ಯವೇ; ಯಾವುವೂ ಮಿಥ್ಯವಲ್ಲ.

ನಮ್ಮ ಜೀವನದಲ್ಲೂ ಇಂತಹ ಅನೇಕ ಜಿಜ್ಞಾಸೆಗಳು ಬರುವುವು. ಒಳ್ಳೆಯ ಬದುಕನ್ನು ಬದುಕು. ದೇವರು ಒಳ್ಳೆಯವರಿಗೆ ಒಳ್ಳೆಯದನ್ನು ಮಾಡುತ್ತಾನೆ; ಕೆಟ್ಟವರಿಗೆ ಕೆಟ್ಟದನ್ನು ಮಾಡುತ್ತಾನೆ. ಬಿತ್ತಿದಂತಹ ಬೆಳೆ ದೊರೆಯುತ್ತದೆ ಎಂಬುದು ಸಾಮಾಜಿಕ ನಂಬಿಕೆ. ಈ ನಂಬಿಕೆ ಸತ್ಯವೋ ಸುಳ್ಳೊ ಎಂದು ಶೋಧ ಮಾಡಲು ಹೋದರೆ, ಸಮಾಜದಲ್ಲಿ ಒಳ್ಳೆಯದನ್ನು ಮಾಡಿದವರು ಒಳ್ಳೆಯದಾಗಿ ಬದುಕುವುದನ್ನು, ಕೆಟ್ಟದನ್ನು ಮಾಡಿದವರು ಕೆಟ್ಟದನ್ನೇ ಅನುಭವಿಸುವುದನ್ನು ಕಂಡಂತೆ, ಒಳ್ಳೆಯದನ್ನು ಮಾಡಿದವರು ಕಷ್ಟಕ್ಕೆ ಗುರಿಯಾಗಿರುವುದನ್ನೂ, ಕೆಟ್ಟದನ್ನು ಮಾಡಿದವರು ಸುಖವಾಗಿರುವುದನ್ನೂ ಕಾಣುತ್ತೇವೆ! ಆಗ ಮೇಲಿನ ನಂಬುಗೆಗೆ ಏನರ್ಥ ಎಂದಾಗ ಮತ್ತೆ ಮನಸ್ಸು ಆ ನಂಬುಗೆಯ ಸತ್ಯದ ಶೋಧನೆಗೆ ಇನ್ನೂ ಆಳವಾಗಿ ಹೋಗಿ, ಈಗ ಮಾಡಿದ ಫಲ ಮುಂದೆ ಕಟ್ಟಿಟ್ಟದ್ದು. ಹಿಂದೆ ಮಾಡಿದ ಪಾಪದ ಫಲ ಈಗ ಅನುಭವಿಸಬೇಕಾಗಿದೆ. ಹಾಗಾಗಿ, ಒಳ್ಳೆಯವನು ಕಷ್ಟಪಡಬೇಕಾಗುತ್ತದೆ ಎಂಬ ಸತ್ಯ ಶೋಧನೆಯನ್ನು ಕೆಲವರು ಮಾಡಿದ್ದಾರೆ. ಆದರೆ ಪುನರ್ಜನ್ಮವನ್ನಾಗಲೀ, ಕರ್ಮಫಲವನ್ನಾಗಲೀ ನಂಬಿದವರು ಇದೆಲ್ಲಾ ಉಪಾಯವೇದಾಂತವೆಂದು ಆ ನಂಬುಗೆಯನ್ನು ಲೇವಡಿ ಎಬ್ಬಿಸುತ್ತಾರೆ. ಹಾಗೆಯೇ ಶರಣರು, 'ಶೂನ್ಯ ಸಂಪಾದನೆ' ಮಾನವನ ಗುರಿಯಾಗಬೇಕೆಂದುದನ್ನು ಕೆಲವರು 'ಶೂನ್ಯ' ಎಂದರೆ 'ಬರಿದು' ಏನೂ ಇಲ್ಲದುದು ಎಂದರ್ಥ. ಏನೂ ಇಲ್ಲದೆ ಇರುವಾಗ ಸಂಪಾದಿಸುವುದೇನನ್ನು?

ಎಂದು ಹಾಸ್ಯ ಮಾಡುವವರರೂ ಇದ್ದಾರೆ. ಆದರೆ ಇದರ ನಿಜವಾದ ಅರ್ಥದ ಶೋಧನೆಯಲ್ಲಿ ತೊಡಗಿರುವವರು, ಈ ಭವದ ಜೀವನ ಬರೀ ಜಂಝಾಟ, ಜಗತ್ತೆಲ್ಲಾ ಮಿಥ್ಯ, ಜೀವನ ನಶ್ವರ; ಈ ಬದುಕಿನಲ್ಲಿ ಏನೂ ಅರ್ಥವಿಲ್ಲ' ಎಂಬ ಅಂಶವನ್ನು ಅರಿತುಕೊಳ್ಳುವುದೇ ಶೂನ್ಯ ಸಂಪಾದನೆಯ ಅರ್ಥ ಎನ್ನುತ್ತಾರೆ. ಆಗ ಇಂತಹ ಆಧ್ಯಾತ್ಮ ಸತ್ಯದ ಚಿಂತನವಿಲ್ಲದ ಜನ 'ಇದು ನಿರಾಶಾವಾದ. ಜೀವನ ನಶ್ವರ, ಬದುಕು ಅಶಾಶ್ವತ' ಎಂಬ ನಂಬಿಕೆಯಿಂದ ಹೊರಡುವುದು ನಿರಾಶಾವಾದಿಗಳ ಮಾರ್ಗ. ಜೀವನಕ್ಕೇ ಅರ್ಥವೇ ಇಲ್ಲ ಎಂದರೆ ಇನ್ನು ಮಾಡುವುದೇನನ್ನು? ಈ ಮಾತು ಉತ್ಸಾಹಿಗಳನ್ನು ನಿರುತ್ಸಾಹಗೊಳಿಸುತ್ತದೆ ಎಂದು ಟೀಕಿಸುತ್ತಾರೆ. ಆಗ ಸಂಯಮಿಗಳಾದ ಆತ್ಮಜ್ಞಾನಿಗಳು, 'ಜಗತ್ತಿನ ವ್ಯಾಮೋಹ ಮನಸ್ಸಿಗೆ, ದೇಹಕ್ಕೆ ನೋವನ್ನೇ ಕೊಡುತ್ತದೆ. ಭವದ ಬವಣೆಗಳು ಬಹಳ. ಇವುಗಳಿಂದ ಪಾರಾಗಬೇಕಾದರೆ, ಇವುಗಳು ದೂರ ಹೋಗಬೇಕು. ಆದರೆ ಸರಿಯಾದ ಅರಿವು ಬರದೆ ದೂರ ಹೋದರೆ, ಭವದ ಆಸೆಗಳು ಮತ್ತಷ್ಟು ತೀವ್ರವಾಗಿ ಕಾಡಿಸುತ್ತವೆ. ಆದುದರಿಂದ ಜೀವನವನ್ನು ಅನುಭವಿಸಬೇಕು. ಲೌಕಿಕ ಜೀವನವನ್ನು ನಡೆಸುತ್ತಾ ಇದರಲ್ಲಿ ಸತ್ಯವಾವುದು – ಮಿಥ್ಯಯಾವುದು, ಯಾವುದು ಯೋಗ್ಯ – ಯಾವುದು ಅಯೋಗ್ಯ, ಯಾವುದು ಸರಿ – ಯಾವುದು ಅಲ್ಲ ಎಂಬ ಅನುಭವ ಸಿದ್ಧಾಂತವನ್ನು ಕಂಡುಕೊಳ್ಳುತ್ತಾ ಈ ಭವದ ಬಂಧನಗಳಿಂದ ಹಂತ ಹಂತವಾಗಿ ಬಿಡುಗಡೆ ಹೊಂದಬೇಕು. ಅದಕ್ಕೆ ಅಂಟಿಕೊಂಡು ಮತ್ತಷ್ಟು ಜಂಝಾಟಕ್ಕೆ ಒಳಗಾಗದೆ, ಸಂಸಾರ ಹೇಯಸ್ಥಲ ಎಂಬ ನಿಲುವನ್ನು ಮುಟ್ಟಿ ವಿರಾಗಿಯಾಗಬೇಕು. ವೈರಾಗ್ಯ ಉಂಟಾದ ವ್ಯಕ್ತಿ ಯಾವುದನ್ನೂ ಆಶಿಸುವುದಿಲ್ಲ. ಅವನು 'ಅಹಂ ಬ್ರಹ್ಮಾಸ್ಮಿ' ಎಂಬ ಅದ್ವೈತ ಸಿದ್ಧಾಂತಕ್ಕೆ ಬರುತ್ತಾನೆ. ಆಗ ಅವನಿಗೆ ಏನೂ ಬೇಕೆನ್ನಿಸುವುದಿಲ್ಲ. ಮೋಕ್ಷ ಬೇಕೆಂಬ ಸ್ಥಿತಿಯನ್ನೂ ದಾಟಿ, ತಾನು ಬೇರೆ ದೇವರು ಬೇರೆ, ತಾನು ಬೇಡುವವನು – ದೇವರು ಕೊಡುವವನು ಎಂಬ ತಿಳಿವಳಿಕೆಯನ್ನೂ ಮೀರಿದ ಒಂದು ಸ್ಥಿತಿ ಮುಟ್ಟುತ್ತಾನೆ. ಅಂತಹ ಅರಿವನ್ನು ಸಂಪಾದನೆ ಮಾಡಿದುದನ್ನೇ ಶರಣರು, 'ಶೂನ್ಯ ಸಂಪಾದನೆ' ಎನ್ನುತ್ತಾರೆ. ಇದು ಶರಣರ ಸತ್ಯಶೋಧನೆ. ಹೀಗೆ ಅನೇಕರು ಅನೇಕ ರೀತಿಯ ಶೋಧಗಳನ್ನು ಜೀವನದಲ್ಲಿ ಮಾಡುತ್ತಾ ಬಂದಿದ್ದಾರೆ. ಶರಣರು ತಾವು ಕಂಡುಂಡ ಆಧ್ಯಾತ್ಮ ಸತ್ಯವನ್ನು ವಚನರೂಪದಲ್ಲಿ ಬರೆದಿಟ್ಟಿದ್ದಾರೆ.

ಕೆಲವರು ಅನೇಕರಿಗೆ ಒಳ್ಳೆಯದನ್ನು ಮಾಡಿರುತ್ತಾರೆ. ಆದರೆ ಉಪಕಾರ ಪಡೆದವರು ಕೃತಜ್ಞತೆಯಿಂದ ನಡೆದುಕೊಳ್ಳುವುದಿರಲಿ ಕೃತಘ್ನರಾಗಿ ವರ್ತಿಸುತ್ತಾರೆ. ಅಷ್ಟೂ ಸಾಲದೆ, ತಮಗೆ ಉಪಕಾರ ಮಾಡಿದವರನ್ನೇ ದ್ವೇಷಿಸಿ ಕೆಡುಕು ಮಾಡತೊಡಗುತ್ತಾರೆ. ಆಗ ಆ ವ್ಯಕ್ತಿ ಒಂದು ಜಿಜ್ಞಾಸೆಗೆ ಒಳಗಾಗಿ ತನಗೆ ಕೇಡು

ಬಗೆಯುವ ವ್ಯಕ್ತಿಗೆ ಕೇಡು ಮಾಡುವುದು ಒಳ್ಳೆಯದೇ ಅಥವಾ ಕೆಟ್ಟದೇ? ಒಂದು ಅನಿಸಿಕೆಯ ಪ್ರಕಾರ, ದುಷ್ಟನಾದ ವ್ಯಕ್ತಿ ದುಷ್ಟತನ ತೋರಿಸುತ್ತಾನೆ. ಆದರೆ ನಾವೇಕೆ ನಮ್ಮ ಒಳ್ಳೆಯತನ ಕಳೆದುಕೊಳ್ಳಬೇಕು? ಜೀವನದ ಅನುಭವವೇ ಅವನಿಗೆ ಪಾಠ ಕಲಿಸುತ್ತದೆ ಎಂಬ ಸಿದ್ಧಾಂತ. ಮತ್ತೊಂದು ವಾದವೆಂದರೆ, 'ಇದು ಹೇಡಿಗಳ ವಿಚಾರ. ದುಷ್ಟನಾದವನಿಗೆ ತಕ್ಕ ಶಿಕ್ಷೆ ಮಾಡಿ, ಬುದ್ಧಿ ಕಲಿಸಬೇಕು. ಇಲ್ಲದಿದ್ದಲ್ಲಿ ಕೆಟ್ಟವನಾಗಿಯೂ ಅವನು ಸೊಕ್ಕಿನಿಂದ ಮೆರೆಯಲು ಆಸ್ಪದವಿದ್ದರೆ, ಬೆಳೆಯುವ ಪೀಳಿಗೆಗೆ ಅವನೊಂದು ಕೆಟ್ಟ ಉದಾಹರಣೆಯಾಗಿ ಕೆಟ್ಟದು, ಕೆಟ್ಟತನ ಬೆಳೆಯಲು ಪೋಷಕವಾಗಬಹುದು. ಅಂತಹುದೇ ಹೆಚ್ಚಾದಾಗ, ಕುಟುಂಬದಲ್ಲಿ, ಸಮಾಜದಲ್ಲಿ ಶಾಂತಿ ಎಲ್ಲಿ? ಸಮಾಜದ ಒಳಿತಿಗಾಗಿ ಕೆಟ್ಟದನ್ನು ಖಂಡಿಸಬೇಕು. ಒಳ್ಳೆಯದನ್ನು ಎತ್ತಿ ಹಿಡಿಯಬೇಕು ಎಂಬುದೂ ಕೂಡ ಸರಿ ಎನ್ನಿಸುತ್ತದೆ. ಇದರಲ್ಲಿ ಯಾವುದನ್ನು ಒಪ್ಪಬೇಕು, ಯಾವುದನ್ನು ಬಿಡಬೇಕು ಎಂಬುದು ಆಯಾ ವ್ಯಕ್ತಿಯ ಸಂಸ್ಕಾರ, ವಿಚಾರ, ಅನುಭವಗಳನ್ನು ಅವಲಂಬಿಸಿರುತ್ತದೆ. ಇಂತಹ ಸತ್ಯ ಶೋಧನೆಗಳು ಹಲವು. ಹಲವಾರು ಜನರು ಹಲವಾರು ಸತ್ಯಗಳನ್ನು ತಮ್ಮ ತಮ್ಮ ಬುದ್ಧಿ, ವಿಚಾರ, ಅನುಭವ, ಶಿಕ್ಷಣ ಸಂಸ್ಕಾರಕ್ಕೆ ಅನುಗುಣವಾಗಿ ಕಂಡುಕೊಳ್ಳುತ್ತಾ ಬಂದಿದ್ದಾರೆ. ಇವೆಲ್ಲವನ್ನು ಮೀರಿದ ಸತ್ಯ ಒಂದಿರಬಹುದು. ಅದನ್ನು ಇನ್ನೂ ಶೋಧ ಮಾಡಬೇಕಾಗಿದೆ.

■

## ೪. ಛಲ

> ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
> ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ

ಮುಂತಾಗಿ ಶರಣ ಶ್ರೇಷ್ಠರಾದ ಬಸವಣ್ಣನವರು ಶರಣನಾದವನಿಗೆ ಇರಬೇಕಾದ 'ಛಲ'ಗಳ ಬಗ್ಗೆ ಹೇಳುತ್ತಾ ಕೊನೆಯಲ್ಲಿ 'ಛಲ'ವಿಲ್ಲದವರು ಮೆಚ್ಚ ಕೂಡಲಸಂಗಮದೇವಾ' ಎಂದು ಹೇಳಿ ಮನುಷ್ಯನಾದವನಿಗೆ 'ಛಲ' ಇರಬೇಕು ಎಂಬ ಅಂಶವನ್ನು ಎತ್ತಿ ತೋರಿಸಿದ್ದಾರೆ.

ಎಲ್ಲರಲ್ಲೂ 'ಛಲ'ದ ಗುಣವಿರಬೇಕು ಎಂಬುದೇನೋ ನಿಜ. ಆದರೆ ಎಂತಹ 'ಛಲವಿರಬೇಕು? ಏತಕ್ಕಾಗಿ ಇರಬೇಕು ಎಂಬ ಬಗ್ಗೆ ನಮಗೆ ಸರಿಯಾದ ಕಲ್ಪನೆ ಇರುವುದು ಅವಶ್ಯಕ. ಏಕೆಂದರೆ 'ಛಲ'ವನ್ನು ಒಳ್ಳೆಯದಕ್ಕೂ ಮಾಡಬಹುದು; ಕೆಟ್ಟದಕ್ಕೂ ಮಾಡಬಹುದು. ಕೆಟ್ಟದನ್ನು ಸಾಧಿಸಲು ಛಲತೊಟ್ಟರೆ ಆಗಬಾರದುದು ಆಗಿ ಹೋಗುತ್ತದೆ. ಆದರಿಂದ ಉಂಟಾಗುವ ಕೆಡುಕು ಹೀನವಾದುದು. ಅದು ಬೇರೆಯವರಿಗೆ ಕೆಡುಕನ್ನುಂಟುಮಾಡುತ್ತದೆ. ಅನ್ಯಾಯದ ಕಹಳೆಯನ್ನೇ ಊದುತ್ತದೆ. ಛಲದಂಕಮಲ್ಲನೆನ್ನಿಸಿದ ದುರ್ಯೋಧನ ಅಂತಹ ಛಲ ತೊಟ್ಟು ಬಹಳ ಹಾನಿಗೆ ಕಾರಣನಾದ. ಅನ್ಯಾಯವಾಗಿ, ಸಜ್ಜನರಾದ ಪಾಂಡವರು ಪಡಬಾರದ ಪಾಡುಪಟ್ಟರು. ಅವನು ಹಿಡಿದ ಛಲ ಯಾರೂ ಮೆಚ್ಚುವಂತಹುದಲ್ಲ. ಅವನ ಧೈರ್ಯ, ಶೌರ್ಯಗಳನ್ನು ಪಾಂಡವರನ್ನೂ ನಾಶಮಾಡುವ ಛಲಕ್ಕಾಗಿ ಉಪಯೋಗಿಸಿ ಕುರುಕ್ಷೇತ್ರಕ್ಕೆ ಕಾರಣನಾದ, ನ್ಯಾಯಕ್ಕಾಗಿ ಛಲ ತೊಟ್ಟಿದ್ದರೆ ಅವನ ಛಲವನ್ನು ಮೆಚ್ಚಬಹುದಿತ್ತು. ಆದರೆ ರಾಜ್ಯಕ್ಕೆ ಸಮವಾದ ಹಕ್ಕುದಾರರಾದ ದಾಯಾದಿಗಳಾದ ಪಾಂಡವರಿಗೆ ಏನನ್ನೂ ಕೊಡದೆ, ಹೊರ ಅಟ್ಟಬೇಕೆಂಬುದು ಅವನ ಛಲ. ಆ ದುರುದ್ದೇಶದ 'ಛಲ'ವನ್ನು ಈಡೇರಿಸಿಕೊಳ್ಳಲು, ಪಾಂಡವರನ್ನು ಮೋಸದಿಂದ ನಾಶಪಡಿಸಲು ಅವರಿದ್ದ ಅರಗಿನ ಮನೆಗೆ ಬೆಂಕಿ ಹತ್ತಿಸಿದ. ಮೋಸದ ಪಗಡೆಯಾಟದಲ್ಲಿ ಧರ್ಮರಾಯನನ್ನು ಸೋಲಿಸಿ ಪಾಂಡವರನ್ನು ವನವಾಸಕ್ಕೆ ಗುರಿಯಾಗಿಸಿದ. ಪಾಂಡವರ ಪತ್ನಿಯಾದ ದ್ರೌಪದಿಯ ವಸ್ತ್ರಾಪಹರಣವನ್ನು ಈ ತುಂಬಿದ ರಾಜಸಭೆಯಲ್ಲಿ ಮಾಡುವಂತಹ ಹೀನಕೃತ್ಯಕ್ಕೂ ಹೇಸಲಿಲ್ಲ. ಇಂತಹ ರೀತಿಯಾಗಿ ಕೆಟ್ಟದನ್ನು ಸಾಧಿಸಲು ತೊಡುವ ಛಲ ಕೀಳುಮಟ್ಟದ್ದು.

ಕೀಳುಮಟ್ಟದ ಛಲವನ್ನು ಕೀಳು ಸಂಸ್ಕಾರದ ಜನರು ಮಾತ್ರ ಮಾಡಲು ಸಾಧ್ಯ. ಇಂತಹ ಜನ ಎಲ್ಲ ವರ್ಗಗಳಲ್ಲೂ ಇದ್ದಾರೆ.

ಬಾಲ್ಯದಿಂದಲೇ ಮಕ್ಕಳಿಗೆ ಇದರ ಬಗ್ಗೆ ಸರಿಯಾದ ತಿಳಿವಳಿಕೆಯನ್ನು ಶಾಲೆಯಲ್ಲಿ ಶಿಕ್ಷಕರು, ಮನೆಯಲ್ಲಿ ತಂದೆ ತಾಯ್ಗಳು ಹೇಳಿ ಕೊಡಬೇಕು. ಅವರಿಗೆ, ತಾವು ಹಿಡಿದ ಕೆಲಸವನ್ನು ಸಾಧಿಸಿಯೇ ತೀರುತ್ತೇವೆ ಎಂಬ ಛಲ. ಜೀವನದಲ್ಲಿ ಯಾವುದೇ ಕೆಲಸವನ್ನು ಶ್ರದ್ಧೆಯಿಂದ, ನಿಷ್ಠೆಯಿಂದ, ಜಾಗರೂಕತೆಯಿಂದ, ನ್ಯಾಯಮಾರ್ಗದಲ್ಲಿ ಪೂರ್ಣಗೊಳಿಸುತ್ತೇವೆಂಬ ಛಲ, ಗುರು-ಹಿರಿಯರಲ್ಲಿ ಗೌರವ ರೀತಿಯಿಂದ ನಡೆದುಕೊಳ್ಳುತ್ತೇವೆಂಬ ಛಲ. ಮುಂತಾದ ಉತ್ತಮ ರೀತಿಯ ಛಲವನ್ನು ಹೊಂದುವಂತಹ ಮನೋಭವವನ್ನು ಅವರಲ್ಲಿ ಬೆಳಸಬೇಕು. ಯಾವುದೇ ರೀತಿಯ ಕೆಟ್ಟ ಕೆಲಸವನ್ನು ಮಾಡುವುದಿಲ್ಲವೆಂಬ ಛಲವನ್ನು ಅವರಲ್ಲಿ ಮೂಡಿಸುವುದು ಅಗತ್ಯ.

ಆದರೆ ಶಾಲೆಗಳಲ್ಲಿ ಪರೀಕ್ಷೆ ಪಾಸು ಮಾಡುವ ವಿಷಯಕ್ಕೆ ಮಾತ್ರ ಗಮನಕೊಟ್ಟು, ಒಳಿತು-ಕೆಡುಕುಗಳ ಬಗೆಗೆ ಅವರ ಲಕ್ಷ್ಯ ಸೆಳೆಯುತ್ತಿಲ್ಲವಾಗಿ ಅನೇಕ ಕಾಲೇಜು ಹುಡುಗರು, ಸಲ್ಲದ ರೀತಿಯಲ್ಲಿ ವರ್ತಿಸುವುದನ್ನು ನಾವು ಕಾಣುತ್ತೇವೆ. ಅವರು ಅವಿವೇಕದಿಂದ ವರ್ತಿಸಿದಾಗ, ಯಾರಾದರೂ ಅವರಿಗೆ ಬೈದರೆ ತಮಗೆ ಅವಮಾನವಾಯಿತೆಂದು ತಿಳಿದು, ಅಂತಹವರ ಮೇಲೆ ಸೇಡು ತೀರಿಸಿಕೊಳ್ಳುವ 'ಛಲ' ತೊಡುತ್ತಾರೆ. ಇಂತಹ ಛಲಗಳಿಂದ ತುಂಬಾ ಅನಾಹುತಗಳುಂಟಾಗಿವೆ. ಇದಲ್ಲದೆ, ಆಸ್ತಿ ಮುಂತಾದ ಕಾರಣಗಳಿಗಾಗಿಯೂ ದಾಯಾದಿಗಳು, ನೆರೆಹೊರೆಯವರು ಮುಂತಾದವರ ಬಗೆಗೆ ಛಲತೊಟ್ಟು ವ್ಯಕ್ತಿಗಳ, ಸಮಾಜದ ನೆಮ್ಮದಿಗೆ ಭಂಗ ತರುವುದರ ಜೊತೆಗೆ ಪ್ರಾಣಾಪಾಯ ಮಾಡಿರುವ ಲೆಕ್ಕಗಳಿಗೂ ಕೊರತೆ ಇಲ್ಲ. ಆದುದರಿಂದ 'ಛಲ' ಮನುಷ್ಯನಿಗೆ ಅಗತ್ಯವಾದ ಒಂದು ಗುಣವಾದರೂ, ಪರರಿಗೆ ಅನ್ಯಾಯದಿಂದ ಕೇಡುಂಟು ಮಾಡುವ ಛಲ ಸಲ್ಲದು.

ಛಲದಿಂದ ಒಳ್ಳೆಯ ಕೆಲಸಗಳೂ ಆಗುತ್ತವೆ. ಚಾಣಕ್ಯನು ಮದಾಂಧರಾಗಿದ್ದ ನಂದನರನ್ನು ನಿರ್ಮೂಲನ ಮಾಡುವ ಛಲ ತೊಟ್ಟುದರಿಂದ, ದುರಾಡಳಿತಗಾರರೂ, ಅವಿವೇಕಿಗಳೂ, ಸುಖಾಪೇಕ್ಷಿಗಳೂ ಆಗಿದ್ದ ನಂದನರ ನಿರ್ಮೂಲವಾಯ್ತು. ವಿವೇಕಿಯೂ, ದಕ್ಷನೂ, ಪ್ರಜಾಹಿತ ಸಂರಕ್ಷನೂ ಆದ ಚಂದ್ರಗುಪ್ತನ ಆಡಳಿತಕ್ಕೆ ಅವಕಾಶವಾಯ್ತು.

ಉತ್ತಮ 'ಛಲ'ಕ್ಕೆ ಉದಾಹರಣೆಗಾಗಿ ಗಾಂಧೀಜಿಯವರನ್ನು ತೆಗೆದುಕೊಳ್ಳಬಹುದು. ಆಫ್ರಿಕಾದಲ್ಲಿ ಅವರು ಬಿಳಿಯರಿಂದ ಅವಮಾನಿತರಾದರು. ಪರಕೀಯರ ಆಳ್ವಿಕೆಗೆ ಒಳಪಟ್ಟು ಅವರು ಸ್ವತಂತ್ರವಿಲ್ಲದೆ ಬದುಕುವ ಅವಮಾನದಿಂದ

ಪಾರಾಗಬೇಕೆಂದು ಭಾರತದಿಂದ ಬ್ರಿಟಿಷರನ್ನು ಓಡಿಸುವ ಛಲ ತೊಟ್ಟರು. ಸ್ವಾತಂತ್ರ ಪಡೆಯಲು ಹೋರಾಟಕ್ಕೆ ಇಳಿದರು. ಸ್ವತಂತ್ರ್ಯ ಭಾರತವನ್ನು ಅಸ್ತಿತ್ವಕ್ಕೆ ತರಬೇಕೆಂಬ ಅವರ ದೃಢನಿರ್ಧಾರ ಅವರನ್ನು ಸ್ವಾತಂತ್ರ ಚಳುವಳಿಗೆ ಧುಮುಕುವಂತೆ ಮಾಡಿತು. ಅಹೋರಾತ್ರಿ ತಮ್ಮ ಗುರಿ ಸಾಧನೆಗಾಗಿ ಹೋರಾಡಿದರು. ತಮ್ಮ ಭಾಷಣಗಳಿಂದ, ಬರಹಗಳಿಂದ ಜನಜಾಗೃತಿ ಉಂಟು ಮಾಡಿ, ಇಡೀ ಭಾರತ ಒಂದಾಗಿ ಒಗ್ಗಟ್ಟಿನಿಂದ ಹೋರಾಡುವಂತೆ ಮಾಡಿದರು. ಅವರ ಸತತ ಪ್ರಯತ್ನ, ಸ್ವಾತಂತ್ರ್ಯ ಪಡೆಯುವವರೆಗೂ ನಿಲಿಲ್ಲ. ಈ ಆಂದೋಲನದಲ್ಲಿ ಗಾಂಧೀಜಿಯವರ ಮತ್ತೊಂದು ಬಗೆಯ ಛಲವಿತ್ತು. ಆಳುವ ಬ್ರಿಟಿಷರಿಗೆ ಸೈನಿಕ ಬಲವಿತ್ತು. ಮದ್ದು-ಗುಂಡುಗಳಿದ್ದವು. ಆದರೆ ಗಾಂಧೀಜಿಯವರದ್ದು ಇದರ ವಿರುದ್ಧ ಅಹಿಂಸಾತ್ಮಕ ಹೋರಟದ ಛಲ. ಈ ಛಲದ ಕಾರಣವಾಗಿ ಮದ್ದು-ಗುಂಡುಗಳಿಗೆ ಉತ್ತರವನ್ನು ಶಾಂತಿ, ಸಮಾಧಾನದ ಅಹಿಂಸಾತ್ಮಕ ಸತ್ಯಾಗ್ರಹದ ಮೂಲಕ ಕೊಟ್ಟರೇ ಹೊರತು, ಹಿಂಸೆಗೆ ಇಳಿಯಲಿಲ್ಲ. ಆದರೆ ಸಿಟ್ಟಿಗೆದ್ದ ಜನ, ಹಿಂಸಾತ್ಮಕ ಚಳವಳಿಯನ್ನು ಪ್ರಾರಂಭಿಸಿದಾಗ, ಗಾಂಧೀಜಿ ಅನ್ನ ಸತ್ಯಾಗ್ರಹ ಮೂಲಕ ನಿಯಂತ್ರಿಸಿದರು. ತಮ್ಮ ಅಹಿಂಸಾತ್ಮಕ ಚಳವಳಿಯ ಛಲವನ್ನು ಎಂತಹ ಪ್ರಸಂಗದಲ್ಲಿಯೂ ಅವರು ಬಿಟ್ಟು ಕೊಡಲಿಲ್ಲವಾಗಿ ಆಗಬಹುದಾಗಿದ್ದ ಅನೇಕ ಅನಾಹುತಗಳು ತಪ್ಪಿದವು.

ದ್ರೌಪದಿಯನ್ನು ದುಶ್ಯಾಸನನು ಮುಡಿ ಹಿಡಿದುಕೊಂಡು ರಾಜಸಭೆಗೆ ಎಳೆದು ತಂದನು. ಭೀಷ್ಮ – ದ್ರೋಣಾದಿಗಳು, ಧೃತರಾಷ್ಟ್ರ, ಪಾಂಡವರು ಎಲ್ಲರ ಎದುರಿಗೇ ಅವಮಾನಿತಳಾದ ಆಕೆ ದುಃಖ–ಅವಮಾನಗಳಿಂದ ಕೋಪಾವಿಷ್ಟಳಾಗಿ ಈ ಬಿಚ್ಚಿದ ಮುಡಿಯನ್ನು ದುಶ್ಯಾಸನನ ಸಾವು ಸಂಭವಿಸುವವರೆಗೂ ಕಟ್ಟುವುದಿಲ್ಲವೆಂಬ ಛಲ ತೊಟ್ಟಳು. ಅಲ್ಲಿಯೇ ಕುಳಿತು, ಈ ದೃಶ್ಯವನ್ನು ನೋಡುತ್ತಿದ್ದ ಭೀಮನಿಗೆ ಸಿಟ್ಟಿನಿಂದ ರಕ್ತ ಕುದಿಯುತ್ತಿತ್ತು. ಅವನೂ ಸಹ ಅವೇಶಭರಿತನಾಗಿ 'ದುಶ್ಯಾಸನನ್ನು ಕೊಂದು ಮುಡಿ ಹಿಡಿದ ಕೈಯ್ಯನ್ನು ಕತ್ತರಿಸಿ, ಅವನ ರಕ್ತದಿಂದ ಮುಡಿಯನ್ನು ತೋಯಿಸುವೆನು. ಅವನ ಕರುಳನ್ನು ದ್ರೌಪದಿಗೆ ಮಾಲೆ ಮಾಡಿ ಹಾಕುವೆನೆಂದು ಛಲದಿಂದ ನುಡಿದನು. ಅದರಂತೆ ಮಾಡಿದ ಮೇಲೆಯೇ ಅವನಿಗೆ ಸಮಾಧಾನವಾದದ್ದು! ಹೀಗೆ ವೀರರೂ ಶೂರರೂ ಆದವರು ಛಲತೊಡುವುದು ವಾಡಿಕೆ. ಅಂತಹವರು ಪ್ರಾಣವನ್ನಾದರೂ ಬಿಟ್ಟಾರು, ಛಲತೀರಿಸದೆ ಬಿಡುವುದಿಲ್ಲ.

ಅನಾಗರಿಕ ಸಮಾಜದಲ್ಲಿ ಗುಂಪುಗಾರಿಕೆ ಉಂಟಾಗುತ್ತದೆ. ಅಲ್ಲಿ ನ್ಯಾಯಾನ್ಯಾಯದ ಪ್ರಶ್ನೆ ಬರುವುದಿಲ್ಲ. ಎದುರು ಪಂಗಡದವರು ನಾಶವಾಗಬೇಕು; ತಮ್ಮ ಗುಂಪಿಗೆ ಒಳಿತಾಗಬೇಕು. ಅದಕ್ಕಾಗಿ ಛಲ ಸಾಧಿಸುತ್ತಾರೆ. ಅಂತಹ ಉದಾಹರಣೆಗಳು ಈಗಿನ ಸಮಾಜದಲ್ಲಿ ವಿಪರೀತ. ಹಾಗಾಗಿ ವ್ಯಕ್ತಿಗಳು

ನಾಶವಾಗುವುದಿರಲಿ. ಮನೆತನಗಳೇ ನಿರ್ನಾಮವಾಗಿರುವ ಉದಾಹರಣೆಗಳಿಗೂ ಕೊರತೆ ಇಲ್ಲ. ಆದರೆ ಇಂತಹ ಛಲಗಳು ವಿನಾಶಕಾರಕ. ಒಂದು ಮೌಲ್ಯಕ್ಕಾಗಿ ಅಥವಾ ಸಮಾಜದ ಒಳಿತಿಗಾಗಿ, ಒಟ್ಟಿನಲ್ಲಿ ಉದ್ಧಾರ ಕಾರ್ಯಗಳಿಗಾಗಿ ಛಲ ತೊಡುವುದು ಒಳಿತು.

ಛಲಬೇಕು. ಛಲವಿಲ್ಲದ ಮನುಷ್ಯ ಸತ್ವಹೀನವೆನ್ನಿಸಿಕೊಳ್ಳುತ್ತಾನೆ. ವಿನಾಕಾರಣ ತನಗೆ ಅವಮಾನವಾದಾಗಲೂ ಶಾಂತಿ ಸಮಾಧಾನದಿಂದಿರುವುದು ಹೇಡಿಯ ಲಕ್ಷಣ. ಧೀರನಾದವನು, ಆತ್ಮಾಭಿಮಾನಿಯಾದವನು ಅನ್ಯಾಯವಾದಾಗ, ಅದಕ್ಕೆ ತಕ್ಕ ರೀತಿಯ ಛಲ ತೊಟ್ಟು ತನ್ನ ಗೌರವ ಉಳಿಸಿಕೊಳ್ಳುತ್ತಾನೆ. ಮಕ್ಕಳಲ್ಲಿ ಛಲದ ಗುಣ ಪೋಷಿಸಿ ಬೆಳೆಸಬೇಕು. ಆದರೆ ಆ ಛಲ ಒಳಿತಿಗಾಗಿರಬೇಕು. ತನ್ನ ಕರ್ತವ್ಯಗಳನ್ನು ಶ್ರದ್ಧೆಯಿಂದ ಪೂರೈಸುವ ಛಲ; ದುಷ್ಟನಾಗದಿರುವ ಛಲ; ದುರ್ವ್ಯಸನಗಳಿಗೆ ಬಲಿಯಾಗದ ಛಲ; ಭ್ರಷ್ಟಾಚಾರದಿಂದ ದೂರವಿರುವ ಛಲ; ದುಡಿದುಣ್ಣುವ ಛಲ ಮುಂತಾದುವುಗಳನ್ನು ಅವರಲ್ಲಿ ಬೆಳೆಸಬೇಕು. ಇದರಿಂದ ಅವರಿಗೂ ಗೌರವ, ದೇಶಕ್ಕೂ ಒಳಿತು.

■

## ೫. ಭಾರತೀಯ ಸಂಸ್ಕೃತಿ

ನಮ್ಮ ಭಾರತದ ಸಂಸ್ಕೃತಿ, ಪರಂಪರೆ, ಮೌಲ್ಯಗಳು ತುಂಬಾ ಉತ್ಕೃಷ್ಟವಾದವುಗಳು. ಪಾಶ್ಚಾತ್ಯರು ಸಹ ಇವುಗಳಿಂದ ಆಕರ್ಷಿತರಾಗಿ ಭಾರತಕ್ಕೆ ಬಂದರು. ಆದರೆ ಭಾರತೀಯರಿಗೆ ತಮ್ಮ ಸಂಸ್ಕೃತಿ, ಇತಿಹಾಸದ, ಪರಂಪರೆಯ ಮೌಲ್ಯಗಳ ಬೆಲೆ ತಿಳಿದಿಲ್ಲ. ತಮ್ಮದನ್ನು ಕಡೆಗಣಿಸಿ, ಪಾಶ್ಚಾತ್ಯರನ್ನು ಅನುಕರಣೆ ಮಾಡಲು ಭಾರತೀಯರು ಹೊರಟಿರುವರು. ಇದಕ್ಕೆಲ್ಲಾ ಮುಖ್ಯ ಕಾರಣ ಟಿ.ವಿ. ಸಿನಿಮಾ ಮುಂತಾದವುಗಳಲ್ಲಿ ಪಾಶ್ಚಾತ್ಯ ಸಂಸ್ಕೃತಿಯನ್ನು ಪ್ರಸಾರ ಮಾಡುವುದು ಬೇಜವಾಬ್ದಾರಿತನವೆಂದರೆ ತಪ್ಪೇನಿಲ್ಲ. ಅಪರಿಪಕ್ವ ಮನಸ್ಸಿನ ಮಕ್ಕಳಿಗೆ ಆಕರ್ಷಕವಾಗಿ ಬಿಂಬಿಸಲು ಅವಕಾಶವಿತ್ತಿರುವುದಾಗಿದೆ.

ಟಿ.ವಿ. ಮತ್ತು ಸಿನಿಮಾಗಳನ್ನು ವೀಕ್ಷಿಸುತ್ತಿದ್ದರೆ, ಇಂತಹ ಮಾದರಿಗಳನ್ನು ನಮ್ಮ ಬೆಳೆಯುತ್ತಿರುವ ಪೀಳಿಗೆಗೆ ಕೊಡುತ್ತಿದ್ದೇವೆಲ್ಲಾ ಎಂದು ವಿಷಾದಪಟ್ಟುಕೊಳ್ಳುವಂತಾಗುತ್ತದೆ. ಕೆಲವು ಸನ್ನಿವೇಶಗಳು ಮಕ್ಕಳೊಡನೆ ಕುಳಿತು ನೋಡಲು ನಾಚಿಕೆಯಾಗುವಂತಿರುತ್ತವೆ. ಎಲ್ಲವೂ ಹಾಗಿರುತ್ತವೆಂದೇನಲ್ಲ. ಕೆಲವು ಪೀಳಿಗೆಗೆ ಉತ್ತಮ ಮಾರ್ಗದರ್ಶನ ನೀಡಬಲ್ಲ ಕಾರ್ಯಕ್ರಮಗಳೂ ಇರುತ್ತವೆ. ಆದರೆ ಬಹಳಷ್ಟು ಚಾನೆಲ್‌ಗಳಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳು, ಅಪರಿಪಕ್ವ ಮನಸ್ಸಿನ ಪೀಳಿಗೆಯನ್ನು ಅಡ್ಡದಾರಿಗೆ ಎಳೆಯುವಂತಿವೆ. ಅವರ ಮನಸ್ಸಿನಲ್ಲಿ ಗೊಂದಲಗಳನ್ನು ಉಂಟುಮಾಡುವಂತಿವೆ. ಸಿನಿಮಾಗಳಲ್ಲಿಯಂತೂ ಬರೀ ಹೊಡೆದಾಟ–ಬಡಿದಾಟ, ಮೋಸ–ದ್ವೇಷ, ಪ್ರತೀಕಾರಗಳೇ ತುಂಬಿರುತ್ತವೆ. ಸತತವಾಗಿ ಇಂತಹವುಗಳನ್ನು ನೋಡುವ ಮಕ್ಕಳಿಗೆ ಜೀವನವೇ ಹೀಗೆ, ಇಂತಹ ಜೀವನವನ್ನು ಸಮರ್ಥವಾಗಿ ಎದುರಿಸಬೇಕಾದರೆ, ನಾವೂ ಸಹ ಹೀಗೆಯೇ ಆಗಬೇಕು ಎಂಬ ಅನಿಸಿಕೆ ಉಂಟಾದರೆ ಆಶ್ಚರ್ಯವಿಲ್ಲ. ತಮ್ಮ ಮಕ್ಕಳನ್ನು ಸಭ್ಯರನ್ನಾಗಿ, ಮೃದು ಮನಸ್ಸಿನವರನ್ನಾಗಿ ಬೆಳೆಸಿದರೆ, ಮುಂದೆ ದುಷ್ಟರು ಅವರನ್ನು ತುಳಿದು ಹಾಕುತ್ತಾರೆ. ಆದುದರಿಂದ ಇವರೂ ಸಹ ದುಷ್ಟರನ್ನು ಮಟ್ಟಹಾಕುವಷ್ಟು ಶಕ್ತರಾಗಿ ಬೆಳೆಯಬೇಕು ಎಂದು ಅನೇಕ ತಾಯಿ–ತಂದೆಗಳು, ದುಷ್ಟತನವನ್ನು ತಮ್ಮಲ್ಲಿ ರೂಢಿಸಿಕೊಳ್ಳಲು ಮಕ್ಕಳಿಗೆ ಹೇಳಿ ಕೊಡುವುದನ್ನು ನಾವಿಂದು ಸಮಾಜದಲ್ಲಿ ಕಾಣಬಹುದಾಗಿದೆ. ಇಂದು ತಮ್ಮ ರಕ್ಷಣೆಗಾಗಿ ದುಷ್ಟತನ ಬೆಳೆಸಿಕೊಳ್ಳುವರಾದರೂ ಮುಂದೇ ಅವರೇ

ಸಮಾಜ ಕಂಟಕರಾಗಿ ಕಾಡುತ್ತಾರೆ. ಸಿನಿಮಾದಲ್ಲಿ ತೋರಿಸುವ ಇನ್ನೊಂದು ಸಂಸ್ಕೃತಿ ಎಂದರೆ ಪ್ರಿಯಕರ ಪ್ರೇಯಸಿಗಾಗಿ ಅಥವಾ ಪ್ರೇಯಸಿ ಪ್ರಿಯಕರನಿಗಾಗಿ, ಏನೆಲ್ಲಾ ಮಾಡಲೂ ಸಿದ್ಧರಿರುವ ಯುವಕ-ಯುವತಿಯರು, ಇಂತಹ ಸಿನಿಮಾಗಳಿಂದ ಯುವ ಪೀಳಿಗೆಗೆ, ಇದೇ ಮಹೋನ್ನತ ಆದರ್ಶ, ಇದಕ್ಕಿಂತ ಹೆಚ್ಚಿನ ಆದರ್ಶ ಬೇರಿಲ್ಲ ಎಂದು ತಿಳಿಯಲು ಸಾಕಷ್ಟು ಆಸ್ಪದವಾಗುತ್ತದೆ. ಮತ್ತೆ ಕೆಲವು ಪ್ರಣಯ ಸನ್ನಿವೇಶಗಳಲ್ಲಿ ಯುವಕ-ಯುವತಿಯರು ಹಾಡು ಹೇಳಿಕೊಂಡು ಕುಣಿಯುವ ದೃಶ್ಯ ಅತ್ಯಂತ ಅಸಹಜ. ಅಲ್ಲದೆ ಅವರು ದೇಹದ ವಿವಿಧಾಂಗಗಳನ್ನು ಅತ್ಯಂತ ವಿಕೃತ ರೀತಿಯಲ್ಲಿ ಪ್ರದರ್ಶಿಸುತ್ತಾ ಕುಣಿಯುತ್ತಿರುತ್ತಾರೆ. ಜೊತೆಯಲ್ಲಿ ಇನ್ನೂ ಅನೇಕ ಯುವಕ ಯುವತಿಯರು ಅವರ ಸುತ್ತಾ ಕುಣಿಯುತ್ತಿರುತ್ತಾರೆ. ಇದನ್ನು ನೋಡಿದಾಗ ನಮ್ಮ ಯುವ ಪೀಳಿಗೆಯ ಶಕ್ತಿ - ಸಾಮರ್ಥ್ಯಗಳು ಹೇಗೆ ಅಪವ್ಯಯವಾಗುತ್ತಿದೆಯಲ್ಲಾ ಎಂದು ದುಃಖವಾಗುತ್ತದೆ. ಈ ಅಪವ್ಯಯ ಇಷ್ಟಕ್ಕೇ ಸೀಮಿತವಾಗುವುದಿಲ್ಲ. ಇದನ್ನು ವೀಕ್ಷಿಸುವ ಲೆಕ್ಕವಿಲ್ಲದಷ್ಟು ಮಕ್ಕಳು ಅವರನ್ನು ಅನುಕರಿಸುತ್ತಿರುವುದು ನಮ್ಮ ದೇಶದ ದುರದೃಷ್ಟವೆಂದೇ ಹೇಳಬೇಕು. ಮಕ್ಕಳ ಬಹಳಷ್ಟು ಶಕ್ತಿ ಹಾಗೂ ವೇಳೆ ಇಂತಹ ದುಷ್ಪರಿಣಾಮ ಬೀರುವ ಟಿ.ವಿ. ಮತ್ತು ಸಿನಿಮಾಗಳನ್ನು ನೋಡುವುದರಲ್ಲಿ, ಅವರಂತೆ ಕುಣಿಯುವದರಲ್ಲಿ ವ್ಯರ್ಥವಾಗಿ, ಅವರ ಅಭ್ಯಾಸ, ಕೆಲಸ ಕಾರ್ಯಗಳು ಕುಂಠಿತವಾಗುವುದರಲ್ಲಿ ಅನುಮಾನವಿಲ್ಲ. ಕೆಲವರು ತಂದೆ ತಾಯ್ಗಳೂ ಸಹ ತಮ್ಮ ಮಕ್ಕಳ ಹಾಗೆ ಕುಣಿಯುವುದನ್ನು ನೋಡಿ ಆನಂದಿಸುತ್ತಾ ಪ್ರೋತ್ಸಾಹಿಸುವದನ್ನು ನೋಡಿದಾಗ, ನಮ್ಮ ದೇಶದ ಭವಿಷ್ಯದ ಗತಿ ಏನಪ್ಪಾ ಎಂದು ಚಿಂತೆಯಾಗುತ್ತದೆ. ನಮ್ಮ ಸಂಸ್ಕೃತಿ, ಮೌಲ್ಯಗಳ ಗತಿ ಏನು ಎಂದು ತಳಮಳಿಸಿದಂತಾಗುತ್ತದೆ. ಒಂದು ಊರಿನ, ಒಂದು ಧಾರ್ಮಿಕ ಸಂಸ್ಥೆಯ ಕಾರ್ಯಕ್ರಮದಲ್ಲಿ 'ಛೋಲೀಕೆ ಪೀಛೆ' ಎಂಬ ರೆಕಾರ್ಡ್ ಹಾಕಿಕೊಂಡು, ಆ ಹಾಡಿಗೆ ತಕ್ಕಂತೆ ಒಬ್ಬ ಹುಡುಗಿ ಕುಣಿಯುತ್ತಿದ್ದಳು, ಈ ಮಟ್ಟಕ್ಕೆ ನಮ್ಮ ಮೌಲ್ಯಗಳು ಕುಸಿಯುವಂತೆ ಈ ಪ್ರಸಾರ ಮಾಧ್ಯಮಗಳು ಕಾರ್ಯಕ್ರಮಗಳನ್ನು ರೂಪಿಸುವುದನ್ನು ತಡೆಗಟ್ಟಲು ಸಾಧ್ಯವೇ? ಮನಸ್ಸನ್ನು ಒಡೆಯುವ ಕೆಲಸಕ್ಕಿಂತ ಮನಸ್ಸನ್ನು ಕಟ್ಟುವ, ದ್ವೇಷ ತಾಳುವುದಕ್ಕಿಂತ, ಕರುಣೆಯಿಂದ ನೋಡುವ ಕಾರ್ಯಕ್ರಮಗಳನ್ನು ರೂಪಿಸಲು ಬಾರದೇ? ಈ ಪರಿಸ್ಥಿತಿಗೆ ಪರಿಹಾರವನ್ನು ಯಾರು ಕಂಡುಹಿಡಿಯಬೇಕು, ಹೇಗೆ ಮಾಡಿದರೆ ಈ ಅವ್ಯವಸ್ಥೆಗಳನ್ನು ಸರಿಪಡಿಸಲು ಸಾಧ್ಯ ಎಂಬುದು ಎಲ್ಲರ ಮುಂದಿರುವ ಪ್ರಶ್ನೆ. ಇದಕ್ಕೆ ಪ್ರತಿಯೊಬ್ಬ ಪ್ರಜ್ಞಾವಂತ ಪ್ರಜೆಯೂ ಸ್ಪಂದಿಸುವುದು ಅವಶ್ಯಕವಿದೆ.

■

## ೬. ಮಹೋನ್ನತ ಗುರಿ

ಪ್ರತಿಯೊಬ್ಬ ಮನುಷ್ಯನೂ ಮಹೋನ್ನತವಾದ ಗುರಿಯನ್ನು ತನ್ನ ಜೀವನದಲ್ಲಿ ಇಟ್ಟುಕೊಳ್ಳುವುದು ಅವಶ್ಯಕ. ಉನ್ನತ ಗುರಿ ಇಟ್ಟುಕೊಂಡು ಕೆಲಸದಲ್ಲಿ ಮುಂದುವರಿಯುವವನು ಮಹೋನ್ನತವಾದುದನ್ನೇ ಸಾಧಿಸುತ್ತಾನೆ. ದೃಢ ಗುರಿ ಇದ್ದಲ್ಲಿ ಅವನ ಸಾಧನೆಗೆ ಯಾವ ಕಷ್ಟಗಳೂ, ಕುಂದುಕೊರತೆಗಳೂ ಅಡ್ಡಿಯಾಗುವುದಿಲ್ಲ. ಅಂತಹ ವ್ಯಕ್ತಿ ತನ್ನ ಸಾಧನೆಯ ದಾರಿಯಲ್ಲಿ ಬಂದ ಎಡರು-ತೊಡರುಗಳನ್ನು ಪರಿಹರಿಸಿಕೊಂಡು ಮುನ್ನುಗ್ಗುತ್ತಾನೆಯೇ ಹೊರತು ನಿರಾಶನಾಗಿ, ಹತಾಶನಾಗಿ ಕೈಕಟ್ಟಿಕೊಂಡು ಕುಳಿತುಕೊಳ್ಳುವುದಿಲ್ಲ.

ಮಹಾನ್ ವ್ಯಕ್ತಿಗಳ ಜೀವನವನ್ನು ಅವಲೋಕಿಸಿದರೆ ಈ ಅಂಶ ನಮಗೆ ಸ್ಪಷ್ಟವಾಗಿ ಗೋಚರಿಸುತ್ತವೆ. ಜಗತ್ತಿನಲ್ಲೇ ಪ್ರಖ್ಯಾತ ತಂತ್ರಜ್ಞರಾದ ಸರ್ ಎಂ. ವಿಶ್ವೇಶ್ವರಯ್ಯನವರು ಬಡ ಕುಟುಂಬದವರಲ್ಲಿ ಜನಿಸಿದವರು. ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡು, ತಮ್ಮ ಭವಿಷ್ಯದ ಬಗ್ಗೆ ಮಾರ್ಗದರ್ಶನವಿಲ್ಲದಂತಾಯಿತು. ಪರರ ಮನೆಯಲ್ಲಿ ಕೆಲಸ ಮಾಡಿ ಜೀವನ ಹೊರೆಯಬೇಕಾಯ್ತು. ಹಾಗಾಗಿ ಇವರು ಬಾಲ್ಯದಲ್ಲಿ ಹೊಟ್ಟೆ-ಬಟ್ಟೆಗೂ ಬವಣೆಪಡಬೇಕಾದ ಸ್ಥಿತಿಯಿತ್ತು. ಇನ್ನ್ಯಾರಾದರೂ ಇವರ ಸ್ಥಿತಿಯಲ್ಲಿದ್ದಿದ್ದರೆ, ಹೆಚ್ಚಿನ ಓದನ್ನು ಓದಬೇಕೆಂಬ ಆಸೆ ಸಹ ಇಟ್ಟುಕೊಳ್ಳದೆ, ಇದ್ದ ಹಳ್ಳಿಯಲ್ಲಿಯೇ ಕೂಲಿ-ನಾಲಿ ಮಾಡಿಕೊಂಡು ಬದುಕುತ್ತಿದ್ದರು. ಆದರೆ ಉನ್ನತ ಗುರಿಯನ್ನು ಹೊಂದಿದ್ದ ವಿಶ್ವೇಶ್ವರಯ್ಯನವರಿಗೆ ತಮ್ಮ ವಿದ್ಯಾಭ್ಯಾಸ ಮುಂದುವರಿಸುವಾಗ ಒದಗಿದ ಅಸಹಾಯಕ ಸ್ಥಿತಿಗಳಿಗೆ ಅಧೀರರಾಗಲಿಲ್ಲ. ಹೈಸ್ಕೂಲ್ ವಿದ್ಯಾಭ್ಯಾಸಕ್ಕೆ ತಮ್ಮ ಹಳ್ಳಿಯಿಂದ ಹದಿನೆಂಟು ಮೈಲು ದೂರವಿದ್ದ ಬೆಂಗಳೂರಿಗೆ ಬಂದರು, ಬೆಂಗಳೂರಲ್ಲಿ ವಾರಾನ್ನ ಮಾಡಿಕೊಂಡು ಓದುತ್ತಿದ್ದರು. ಯಾವುದೋ ಒಂದು ಮುರುಕು ಕೊಠಡಿಯಲ್ಲಿದ್ದುಕೊಂಡು ಬೀದಿ ದೀಪದ ಬೆಳಕಿನಲ್ಲಿ ಓದುತ್ತಿದ್ದರು. ಮೇಲಿನ ಖರ್ಚಿಗಾಗಿ ಚಿಕ್ಕ ಹುಡುಗರಿಗೆ ಮನೆಪಾಠ ಹೇಳಿಕೊಟ್ಟು ಹಣ ಗಳಿಸಿಕೊಳ್ಳುತ್ತಿದ್ದರು. ಇಷ್ಟು ಕಷ್ಟಗಳಿದ್ದರೂ ಓದಿನಲ್ಲಿ ಅವರು ತರಗತಿಯಲ್ಲಿ ಮೊದಲಿಗರಾಗಿದ್ದರು.

ಶ್ರೀ ವಿಶ್ವೇಶ್ವರಯ್ಯನವರು ಓದುವಾಗ ಒಬ್ಬ ಪ್ರತಿಭಾವಂತ ವಿದ್ಯಾರ್ಥಿ

ಎನ್ನಿಸಿಕೊಂಡು ಶಿಕ್ಷಕರೆಲ್ಲರಿಗೆ ಅಚ್ಚುಮೆಚ್ಚಿನವರಾಗಿದ್ದರು. ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷೆಗೆ ಹಣ ತುಂಬಬೇಕಾಯ್ತು. ಅಷ್ಟೊಂದು ಹಣ ಒಮ್ಮೆಗೇ ಅವರಿಗೆ ಸಿಕ್ಕಲು ಕಷ್ಟವಾಯ್ತು. ಹಣ ಕೂಡಿಸಲು ಕೊನೆಯ ತನಕ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ತಾಯಿಗೆ ಹೊರೆಯಾಗಲು ಇಷ್ಟವಿಲ್ಲದಿದ್ದರೂ, ನಿರ್ವಾಹವಿಲ್ಲದೆ ಹಿಂದಿನ ದಿನ ಶಾಲೆ ಮುಗಿಸಿಕೊಂಡು ತಮ್ಮ ಹಳ್ಳಿಗೆ ಕಾಲ್ನಡಿಗೆಯಲ್ಲೇ ಹೊರಟರು. ಅವರು ತಮ್ಮ ಮನೆ ಸೇರಿದಾಗ ರಾತ್ರಿ ಎರಡು ಗಂಟೆಯಾಗಿತ್ತು. ತಾಯಿಯ ಬಳಿಯಾದರೂ ಅಷ್ಟೊಂದು ಹಣ ಎಲ್ಲಿಂದ ಬರಬೇಕು. ಆ ಅಪರಾತ್ರಿಯಲ್ಲಿಯೇ ತಾವು ಕೆಲಸ ಮಾಡುತ್ತಿದ್ದವರ ಮನೆಗೆ ಹೋಗಿ, ಹಣ ಸಾಲ ಪಡೆದು ಮಗನಿಗೆ ತಂದುಕೊಟ್ಟರು. ಕೂಡಲೇ ವಿಶ್ವೇಶ್ವರಯ್ಯನವರು ಬೆಂಗಳೂರಿನ ದಾರಿ ಹಿಡಿದರು. ಅವರು ಆಫೀಸು ಮುಟ್ಟುವುದರಲ್ಲಿ ಹಣ ತುಂಬುವ ಟೈಂ ಮೀರಿತ್ತು. ಆದರೆ ಪ್ರಿನ್ಸಿಪಾಲರ ಮಧ್ಯಪ್ರವೇಶದಿಂದ ಹಣ ತುಂಬಲು ಸಾಧ್ಯವಾಯಿತು. ಆ ವರ್ಷದ ಫಲಿತಾಂಶ ಪ್ರಕಟವಾದಾಗ ವಿಶ್ವೇಶ್ವರಯ್ಯನವರು ರಾಜ್ಯಕ್ಕೇ ಮೊದಲಿಗರಾಗಿ ಪಾಸಾಗಿದ್ದರು. ಹೀಗೆ ಯಾವ ಕಷ್ಟಗಳೂ ಅವರು ಗುರಿ ತಲುಪಲು ಅಡ್ಡಿಯಾಗಲಿಲ್ಲ. ಅಂತಹ ದೃಢ ನಿರ್ಧಾರ, ಸೋಲಿಲ್ಲದ ಸಾಧನೆ ಅವರದಾಗಿತ್ತು.

ಇಂದಿನ ವಿದ್ಯಾರ್ಥಿಗಳಿಗೆ ವಿಶ್ವೇಶ್ವರಯ್ಯನವರ ಜೀವನ ಒಂದು ದೊಡ್ಡ ಉದಾಹರಣೆಯಾಗಿದೆ. ಈಗಂತೂ ಬಹುಪಾಲು ತಂದೆ-ತಾಯಿಗಳು ತಮ್ಮ ಮಕ್ಕಳು ಏನು ಮಾಡುವುದೂ ಬೇಡ, ಅವರು ಚೆನ್ನಾಗಿ ಓದಿ ಮುಂದೆ ಬಂದರೆ ಸಾಕೆಂದು, ಅವರಿಗೆ ಬೇಕಾದ ಎಲ್ಲ ಸೌಲಭ್ಯಗಳನ್ನು ಮಾಡಿಕೊಡುತ್ತಾರೆ, ಟ್ಯೂಶನ್ ಹೇಳಿಸುತ್ತಾರೆ. ಆದರೂ ಅವರ ಸಾಧನೆ ಅಷ್ಟಕಷ್ಟೆ. ಎಲ್ಲೋ ಕೆಲವರು ಮಾತ್ರ ಸೌಲಭ್ಯಗಳನ್ನು ಸದುಪಯೋಗ ಮಾಡಿಕೊಂಡು ಮುಂದೆ ಬರುತ್ತಾರೆ. ಉಳಿದವರೆಲ್ಲರ ಸಾಧನೆ ಸೊನ್ನೆ! ಹೀಗಾಗುವುದಕ್ಕೆ ಆ ಮಕ್ಕಳಲ್ಲಿ ಉನ್ನತ ಧ್ಯೇಯವಿಲ್ಲದಿರುವುದೇ ಮುಖ್ಯ ಕಾರಣ. ಅವರು ತಮ್ಮ ಗುರಿ-ಗಮ್ಯಗಳನ್ನು ರೂಪಿಸಿಕೊಂಡು, ಸತತ ಪ್ರಯತ್ನ ಮಾಡಿದರೆ, ಏನನ್ನಾದರೂ ಸಾಧಿಸಲು ಸಾಧ್ಯ. ಎಲ್ಲರೂ ವಿಶ್ವೇಶ್ವರಯ್ಯನವರಾಗಲೂ ಸಾಧ್ಯವಿಲ್ಲ. ಆದರೆ ಪ್ರತಿಯೊಬ್ಬರೂ ತಮ್ಮದೇ ಆದ ರೀತಿಯಲ್ಲಿ, ತಮ್ಮ ತಮ್ಮ ಶಕ್ತಿಗನುಗುಣವಾಗಿ ಉನ್ನತ ಮಟ್ಟಕ್ಕೇರಲು ಸಾಧ್ಯವಿದೆ. ಅದಕ್ಕೆ ದೃಢ ಮನಸ್ಸು, ಸತತ ಸಾಧನೆ, ನಿಶ್ಚಿತ ಗುರಿ ಅವಶ್ಯಕ. ಹಾಗಾದಾಗ ಅವರು ದೇಶಕ್ಕೆ ಹೊರೆಯಾಗದೆ, ಸಮಾಜಕ್ಕೆ ಸಮಸ್ಯೆಯಾಗದೆ, ಕುಟುಂಬಕ್ಕೆ ಸಹಾಯಕರಾಗಿ, ತಮ್ಮ ಕಾಲಮೇಲೆ ನಿಂತುಕೊಳ್ಳಲು ಸಾಧ್ಯವಾಗುವುದರಲ್ಲಿ ಸಂಶಯವಿಲ್ಲ.

■

## ೭. ಮಕ್ಕಳಲ್ಲಿ ಪ್ರೀತಿ – ಜಗತ್ತಿನಲ್ಲಿ ಶಾಂತಿ

ಜನರ ಸ್ವಭಾವ ನಡೆ-ನುಡಿಗಳನ್ನು ಅವಲೋಕಿಸಿದರೆ ಒಬ್ಬೊಬ್ಬರದು ಒಂದೊಂದು ರೀತಿ. ಕೆಲವರು ಒಳ್ಳೆಯವರು; ಮತ್ತೆ ಕೆಲವರು ಕೆಟ್ಟವರು. ಕೆಟ್ಟತನದಲ್ಲೂ ವೈವಿಧ್ಯತೆ, ಒಳ್ಳೆತನದಲ್ಲಿಯೂ ವಿವಿಧತೆಯನ್ನು ಕಾಣುತ್ತೇವೆ. ಒಂದೇ ರೀತಿಯ ಪ್ರಸಂಗಕ್ಕೆ ವಿಧವಿಧವಾದ ಪ್ರತಿಕ್ರಿಯೆಗಳು. ಆ ಪ್ರತಿಕ್ರಿಯೆಗಳು ಅವರವರ ಸಂಸ್ಕಾರ ಹಾಗೂ ಬೆಳವಣಿಗೆಯ ವಯಸ್ಸಿನಲ್ಲಿಯ ಅನುಭವವನ್ನು ಆಧರಿಸಿರುತ್ತವೆ.

ವ್ಯಕ್ತಿ, ಹುಟ್ಟಿನಿಂದಲೇ ಕೆಲವೊಂದು ಸುಪ್ತಶಕ್ತಿಗಳನ್ನು ಪಡೆದುಕೊಂಡು ಬಂದಿರುತ್ತಾನೆ. ಅವುಗಳ ಏಕತನದ ರೀತಿ, ಮಟ್ಟ ಇವುಗಳು ಅವನಿಗೆ ಸಿಗುವ ಶಿಕ್ಷಣ, ಅವಕಾಶ, ಸಹವಾಸ, ಮನೆಯ ವಾತಾವರಣ, ಶಾಲೆಯ ಹಾಗೂ ಸಮಾಜದ ಪರಿಸರಕ್ಕೆ ತಕ್ಕುದಾಗಿರುತ್ತದೆ. ಅವನ ನಡವಳಿಕೆ ಹಾಗೂ ನಂಬಿಕೆಗಳ ಮೇಲೆ ಅತ್ಯಂತ ಪ್ರಭಾವ ಬೀರುವ ವ್ಯಕ್ತಿಗಳು – ಮೊದಲು ತಾಯಿ, ನಂತರ ಶಿಕ್ಷಕರು ಹಾಗೂ ಸ್ನೇಹಿತರು. ಎರಡನೆಯ ಪ್ರಭಾವ ಬೀರುವ ಅಂಶ ವಾತಾವರಣ. ಮೊದಲನೆಯದು ಮನೆ, ಎರಡನೆಯದು ಶಾಲೆ, ನಂತರ ಆ ಮಗುವಿನ ಒಡನಾಟವಿರುವ ಸಂಘ-ಸಂಸ್ಥೆಗಳು, ನೆರೆ-ಹೊರೆಯ ಪರಿಸರ, ಬಂಧು-ಬಳಗದ ಪ್ರಭಾವ, ಅವನ ಆರ್ಥಿಕ ಪರಿಸ್ಥಿತಿ, ದೈಹಿಕ ಆರೋಗ್ಯ ಮುಂತಾದವುಗಳೂ ತಮ್ಮದೇ ಆದ ಪರಿಣಾಮವನ್ನು ಉಂಟುಮಾಡುತ್ತವೆ. ಈ ರೀತಿಗಳಲ್ಲಿ ವ್ಯಕ್ತಿ ರೂಪಿತವಾಗುತ್ತಾನೆ.

ಒಬ್ಬ ಅಧಿಕಾರಿ ದುರಂಹಂಕಾರಿ, ಸೇಡಿನ ಮನೋಭಾವ ಉಳ್ಳವನೂ ಬೇರೆಯವರ ಬಗ್ಗೆ ಹೊಟ್ಟೆ ಕಿಚ್ಚಿನವನೂ, ಕೆಡುಕು ಮಾಡುವವನೂ ಇರಬಹುದು. ಆಗ ಅಲ್ಲಿ ಅವನೊಂದಿಗೆ ಕೆಲಸ ಮಾಡುವವರ ಸ್ಥಿತಿ ಕರುಣಾಜನಕ. ಅಲ್ಲಿಯ ವಾತಾವರಣ ಅಸಹನೀಯ. ಯಾವಾಗಲೂ ಘರ್ಷಣೆ, ಅತೃಪ್ತಿ ಅಸಮಾಧಾನ. ಅಲ್ಲಿ ಕೆಲಸ ಮಾಡುವವರಲ್ಲೂ ಅಂತಹವರಿದ್ದರೆ, ನೋಡುವವರಿಗೆ ಅಸಹ್ಯವಾಗುವಂತಹ ಮಟ್ಟದಲ್ಲಿ ಘರ್ಷಣೆಗಳ ಅಭಿವ್ಯಕ್ತಿ. ಸಹಿಸಿಕೊಂಡು ಹೋಗುವವರಿದ್ದರೆ ಅಥವಾ ಸರಿಯಾಗಿ ಬಡಿದಾಡಲು ಬರದಿದ್ದರೆ, ಎಲ್ಲ ಒಳಗೊಳಗೇ ಕುದಿ. ನೋಡಲಿಕ್ಕೆ ಹೊರಗೆಲ್ಲ ಚೆನ್ನ, ಒಳಗೆಲ್ಲ ಬಿರುಕು. ಇಂತಹ

ವಾತಾವರಣದಲ್ಲಿ ಪ್ರಗತಿ ಸಾಧ್ಯವೇ ಇಲ್ಲ. ಹೊರಗಿನವರಿಗೆ ಒಳಗಿನ ಹುಳುಕು ಕಾಣದಂತೆ ಜಾಣತನ ವಹಿಸುವಂತಹ ಕಲೆಯೂ ಗೊತ್ತಿದ್ದರಂತೂ ಒಳಗಿನ ಕೆಡುಕು ಹುತ್ತವಾಗಿ ಬೆಳೆದರೂ ಯಾರಿಗೂ ಗೊತ್ತಾಗದು. ಆದರೆ ಕಾಲಕ್ರಮೇಣ, ಒಂದಲ್ಲ ಒಂದು ದಿನ ಸರ್ವ ನಾಶವೇ ಹೊರತು, ಅಭಿವೃದ್ಧಿ ಬರೀ ಕನಸು.

ಮತ್ತೊಬ್ಬ ಬಹಳ ಕರುಣಿ, ಎಲ್ಲರಿಗೂ ಸಹಕಾರ, ಸಹಾಯ ತೋರುವ ಮನೋಭಾವ. ಬೇರೆಯವರ ಹಿತಕ್ಕಾಗಿ ತನ್ನದನ್ನೂ ಅಲಕ್ಷಿಸುವ ಮನೋಭಾವ. ಇದಕ್ಕೆ ಆ ವ್ಯಕ್ತಿ ಬೆಳೆಯುವ ಪರಿಸರದಲ್ಲಿ ಅವನು ಎಲ್ಲರ ಪ್ರೀತಿಗೆ ಪಾತ್ರವಾಗಿ ಎಲ್ಲರ ಸಹಕಾರ ಪಡೆದು ಬೆಳೆದ ಅನುಭವ ತರಬೇತಿ. ತಾನು ಬಾಲ್ಯದಲ್ಲಿ ಸಮಾಜದಿಂದ ಪಡೆದುದನ್ನು ದೊಡ್ಡವನಾಗಿ ಸಮಾಜಕ್ಕೆ ಕೊಡುತ್ತಾನೆ.

ಕೆಲವು ವ್ಯಕ್ತಿಗಳು ದುಶ್ಶೀಲರೂ, ಅಸಹನೆಯುಳ್ಳವರೂ, ತನ್ನದಲ್ಲದುದನ್ನು ಅನ್ಯಾಯವಾಗಿ ತನ್ನದನ್ನಾಗಿ ಮಾಡಿಕೊಳ್ಳುವ ಭ್ರಷ್ಟಾಚಾರಿಗಳೂ ಆಗಿರುತ್ತಾರೆ. ಸಮಾಜದ ಆಸ್ತಿಯನ್ನು, ಸಂಪತ್ತನ್ನು ಮೋಸದಿಂದ ಲಪಟಾಯಿಸುತ್ತಾರೆ. ಬೇರೆಯವರಿಗೆ ಸಿಗಬೇಕಾದ ಸ್ಥಾನವನ್ನು ಕುತಂತ್ರದಿಂದ, ಮೋಸದಿಂದ, ವಂಚನೆಯಿಂದ, ದುಷ್ಟಮಾರ್ಗಗಳಿಂದ ತಮ್ಮದನ್ನಾಗಿಸಿಕೊಳ್ಳುತ್ತಾರೆ. ಹೀಗೆ ಮಾಡುವುದರಿಂದಲೂ ಸಮಾಜಕ್ಕೆ ವ್ಯಕ್ತಿಗಳಿಗೆ ರಾಷ್ಟ್ರಕ್ಕೆ ಧಕ್ಕೆ ತಗುಲುತ್ತದೆ. ಪ್ರಗತಿ ಕುಂಠಿತವಾಗುತ್ತದೆ. ದ್ವೇಷಮಯವಾತಾವರಣ, ಅತೃಪ್ತಿ, ಅಸಮಾಧಾನಗಳ ಪರಿಸರ ಉಂಟಾಗುತ್ತದೆ. ಇದಕ್ಕೆ ಕಾರಣ ಮಾನವನ ಸಹಜ ಪ್ರವೃತ್ತಿಗಳಾದ ಲೈಂಗಿಕ ಪ್ರವೃತ್ತಿ, ಆಕ್ರಮಣಕಾರಿ ಹಾಗೂ ಸಂಗ್ರಹ ಮನೋಭಾವ ಸಾಂಘಿಕ ಮನೋಭಾವ ಮುಂತಾದ ಸಹಜ ಪ್ರವೃತ್ತಿಗಳ ಉದಾತ್ತೀಕರಣ ಬೆಳೆಯುವ ವಯಸ್ಸಿನಲ್ಲಿ ಆಗಿಲ್ಲದಿರುವುದು, ಬೆಳೆಯುವ ವಯಸ್ಸಿನಲ್ಲಿ ಆ ಪ್ರವೃತ್ತಿಗಳು ಸಾಮಾಜಿಕವಾಗಿ ಅಪೇಕ್ಷಣೀಯವಾದ ರೀತಿಯಲ್ಲಿ, ಮನಸ್ಸು ಅಸ್ತವ್ಯಸ್ತವಾಗದಂತೆ, ಉನ್ನತ ಧ್ಯೇಯ ಸಾಧನೆಗಳ ಗುರಿಸಾಧನೆಗಾಗಿ ಬುದ್ಧಿ ಮನಸ್ಸು ಹಾಗೂ ದೇಹವನ್ನು ತೊಡಗಿಸುವಂತಹ ಅವಕಾಶಗಳನ್ನು ಕಲ್ಪಿಸಿಕೊಟ್ಟರೆ, ಸಹಜ ಸ್ವಭಾವಗಳು ಸಂಸ್ಕಾರ ಹೊಂದಿ ಉನ್ನತ ಮಟ್ಟದಲ್ಲಿ ಅಭಿವೃದ್ಧಿಗೊಳ್ಳುತ್ತವೆ. ಉತ್ತಮ ರೀತಿಯಲ್ಲಿ ಅಭಿವ್ಯಕ್ತಿಯಾಗುತ್ತವೆ. ಇಲ್ಲದಿದ್ದಲ್ಲಿ ಅವು ಬಹು ಅನಾಗರಿಕ ರೀತಿಯಲ್ಲಿ, ಪ್ರಾಣಿಮಟ್ಟದಲ್ಲಿ, ಅಪಕ್ವರೀತಿಯಲ್ಲಿ ವ್ಯಕ್ತವಾಗುತ್ತವೆ. ಅಂತಹ ಮನುಷ್ಯ ತಾನೂ ದುಷ್ಟನಾಗಿ ಬೆಳೆಯುವುದಲ್ಲದೆ ಇತರರಿಗೂ ಹಾನಿ ಉಂಟುಮಾಡಿ ಸಂತೋಷ ಹೊಂದುವಂತಹ ವ್ಯಕ್ತಿತ್ವ ಪಡೆಯುತ್ತಾನೆ.

ಪ್ರಾಮಾಣಿಕರೂ, ಪ್ರತಿಭಾವಂತರೂ, ಧೈರ್ಯವಂತರೂ, ವಿವೇಕಿಗಳು, ತಮ್ಮ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಇರಬೇಕಾದ ಸಂಪೂರ್ಣ ಜ್ಞಾನವನ್ನು ಪಡೆದವರೂ

ಇರುತ್ತಾರೆ. ಅವರಿಗೆ ಯುಕ್ತಾ-ಯುಕ್ತ ವಿವೇಚನೆ ಇರುತ್ತದೆ. ಒಳಿತು - ಕೆಡಕುಗಳ ಬಗ್ಗೆ ಸರಿಯಾಗಿ ಅರ್ಥಮಾಡಿಕೊಳ್ಳಬಲ್ಲರು. ಯಾವುದನ್ನೂ ಆಳವಾಗಿ ವಿಚಾರಿಸಿ ನಿರ್ಣಯ ಕೈಗೊಳ್ಳುವರು. ದುಡುಕಾಗಲೀ, ದುಷ್ಟತನವಾಗಲೀ, ಅವರ ಬಳಿ ಸುಳಿಯುವುದಿಲ್ಲ. ತಮ್ಮ ಜೀವನವನ್ನು ವ್ಯವಸ್ಥಿತವನ್ನಾಗಿಯೂ, ನೆಮ್ಮದಿಯುತವನ್ನಾಗಿಯೂ ಮಾಡಿಕೊಳ್ಳಬಲ್ಲರು. ಅಷ್ಟೇ ಅಲ್ಲ, ತಾವಿರುವ ವಾತಾವರಣದಲ್ಲೂ ನೆಮ್ಮದಿ ತರಬಲ್ಲರು. ಉತ್ತಮ ಪರಿಸರ ನಿರ್ಮಿಸಬಲ್ಲರು. ದುಷ್ಟತನಕ್ಕೆ ಎಡೆಯಿಲ್ಲದಂತೆ ಮಾಡುವವರು. ಅಂತಹವರಿಂದ ಉಳಿದವರೂ ನೆಮ್ಮದಿ ಸಂತೋಷದಿಂದ ಬದುಕಲು ಸಾಧ್ಯ. ಅವರು ಎಲ್ಲರ ಸಹಕಾರವನ್ನು ಸುಲಭವಾಗಿ ಪಡೆಯಬಲ್ಲರು. ಉಳಿದವರೂ ಸ್ವಂತ ಇಚ್ಛೆಯಿಂದ, ಸ್ವಸಂತೋಷದಿಂದ ಅವರೊಡನೆ ಕೆಲಸ ಮಾಡಲು ಮುಂದೆ ಬರುವರು. ಎಲ್ಲರ ಒಳಿತನ್ನೂ ಅಪೇಕ್ಷಿಸುವ ಅವರಿಗೆ ಎಲ್ಲರ ಸಹಕಾರವೂ ಗೌರವವೂ ತಾನೇ ತಾನಾಗಿ ದೊರೆಯುವುದು. ಆದರೆ ಇಂತಹ ವ್ಯಕ್ತಿಗಳು ಅಪರೂಪ. ಅಲ್ಲೊಬ್ಬರು, ಇಲ್ಲೊಬ್ಬರು; ಕೇವಲ ಬೆರಳೆಣಿಸುವಷ್ಟು ಮಂದಿ. ಏಕೆಂದರೆ ಬಾಲ್ಯದಲ್ಲಿ ಎಲ್ಲೆಡೆಯೂ ಉತ್ತಮ ಪರಿಸರ, ಶ್ರೇಷ್ಠ ಮಾರ್ಗದರ್ಶನ, ಯೋಗ್ಯ ಶಿಕ್ಷಣ, ಯೋಗ್ಯ ತರಬೇತಿ ದೊರಕಿರಬೇಕಾಗುತ್ತದೆ. ಸಂಸ್ಕಾರವೂ ಉನ್ನತಮಟ್ಟದ್ದಿರಬೇಕು. ಶಿಕ್ಷಕರೂ, ಆದರ್ಶವಾದಿಗಳೂ, ವಿದ್ವಾಂಸರೂ ಆಗಿದ್ದಿರಬೇಕು. ಹೀಗೆ ಎಲ್ಲ ರೀತಿಯಿಂದ ಶ್ರೇಷ್ಠತೆಯನ್ನೇ ಪಡೆದು ಅವರು ಶ್ರೇಷ್ಠರಾಗಿ ಬೆಳೆದು ಜನರ ನೆಮ್ಮದಿಗೆ ಕಾರಣರಾಗುವರು.

ಈ ಅಂಶಗಳನ್ನೆಲ್ಲಾ ಗಣನೆಗೆ ತೆಗೆದುಕೊಂಡರೆ ಬಾಲ್ಯದ ಅನುಭವ, ಪರಿಸರ, ಶಿಕ್ಷಣ ವ್ಯಕ್ತಿಯ ಜೀವನದಲ್ಲಿ ಮಹತ್ವಪೂರ್ಣ ಪಾತ್ರವನ್ನು ವಹಿಸುತ್ತದೆ ಎಂಬ ಅಂಶ ಸುಸ್ಪಷ್ಟವಾಗುತ್ತದೆ. ಅದಕ್ಕಾಗಿ ನಾವು ಉತ್ತಮ ರಾಷ್ಟ್ರವನ್ನು ಕಟ್ಟಬೇಕಾದರೆ ಈ ಅಂಶಗಳಿಗೆ ಮಹತ್ವ ಕೊಡಬೇಕು. ಇದೇ ಅಂಶಗಳನ್ನು ಅಮೆರಿಕೆಯ ಶಿಕ್ಷಣ ತಜ್ಞ ಡಾ॥ ಹೆಲೆನ್ ಬಿಲಿಂಗ್ ಸಹ ಹೇಳಿದ್ದಾರೆ. ಅವರಿಗೆ ಪೂರ್ಣ ಪ್ರಾಥಮಿಕ, ಹಾಗೂ ಪ್ರಾಥಮಿಕ ಕ್ಷೇತ್ರಗಳಲ್ಲಿ ವಿವಿಧ ರೀತಿಯಲ್ಲಿ, ಅನೇಕ ಮಟ್ಟದಲ್ಲಿ ಕೆಲಸ ಮಾಡಿ ಅಪಾರವಾದ ಹಾಗೂ ಆಳವಾದ ಅನುಭವವಿದೆ. ಮಕ್ಕಳ ಬಗೆಗೆ, ಅವರ ಉತ್ತಮ ಬೆಳವಣಿಗೆಯ ಬಗೆಗೆ ಕಳಕಳಿ ಇರುವ ಈ ತಾಯಿ, 'ಯಾವ ಮಗುವೂ ದ್ವೇಷವನ್ನು ಕಟ್ಟಿಕೊಂಡು ಹುಟ್ಟಿರುವುದಿಲ್ಲ. ಪ್ರಾರಂಭದಿಂದಲೇ ಮಗುವಿಗೆ ಪ್ರೀತಿಯಿಂದ ನಡೆಯುವುದನ್ನು ಕಲಿಸಿದರೆ ಎಂದೂ ಆಕ್ರಮಣಕಾರಿಯಾಗಿ ರೂಪುಗೊಳ್ಳುವುದಿಲ್ಲ. ಎಲ್ಲ ಮಕ್ಕಳೂ ಹೀಗೆ ಬೆಳೆದಾಗ ಈ ಜಗತ್ತಿನ ತುಂಬಾ ಪ್ರೀತಿಯೇ ತುಂಬಿ, ಯುದ್ಧಗಳು ತನ್ನಿಷ್ಟಕ್ಕೆ ತಾನೇ ನಶಿಸಿಹೋಗುತ್ತವೆ' ಎಂದು ಹೇಳಿದ್ದಾರೆ. ಈ ಅನಿಸಿಕೆ ಜಗತ್ತಿನ ಶಾಂತಿಯುತ ಜೀವನಕ್ಕೆ ಬಾಲ್ಯಾವಸ್ಥೆ ಎಷ್ಟು ಮಹತ್ವದ್ದು ಎಂದು ತಿಳಿಸಿಕೊಡುತ್ತದೆ.

ಆದುದರಿಂದ ಬೆಳೆಯುವ ವಯಸ್ಸಿನಲ್ಲಿ ಮಕ್ಕಳಿಗೆ, ಮನೆಯಲ್ಲಿ, ಶಾಲೆಯಲ್ಲಿ ಸಮಾಜದಲ್ಲಿ, ರಾಷ್ಟ್ರದಲ್ಲಿ ಪ್ರೋತ್ಸಾಹಕರವಾದ, ಸ್ನೇಹಮಯವಾದ ಉತ್ಸಾಹ ಮೂಡಿಸುವ ಸನ್ನಿವೇಶ ದೊರೆಯುವುದು ಅವಶ್ಯ. ಒಳ್ಳೆಯ ಗುಣಗಳನ್ನು ದಕ್ಷತೆಯನ್ನೂ, ಪಾಂಡಿತ್ಯವನ್ನು ಮಕ್ಕಳಲ್ಲಿ ಉಂಟು ಮಾಡತಕ್ಕಂತಹ, ಬೋಧನೆ, ವಿಷಯ ಜ್ಞಾನ, ತರಬೇತಿ, ಮಾರ್ಗದರ್ಶನ ಹಂತಹಂತದಲ್ಲೂ ಅವಶ್ಯಕತೆಗನುಗುಣವಾಗಿ ದೊರೆಯುವಂತೆ ಮಾಡುವುದು ಎಲ್ಲರ ಹೊಣೆಗಾರಿಕೆ. ಅದರಲ್ಲಿ ಉತ್ತಮ ಗುಣಗಳು ಮೂಡುವಂತಹ ಪರಿಸರ ಒದಗಿಸಬೇಕು. ಯಾವುದೇ ರೀತಿಯ ಸರ್ಕಾರವಿರಲಿ ಅದು ಯಶಸ್ವಿಯಾಗಬೇಕಾದರೆ ಅದರಲ್ಲಿ ಕೆಲಸ ಮಾಡುವ ಜನರ ಮನೋಭಾವ, ಅವರ ದಕ್ಷತೆ, ತಿಳಿವಳಿಕೆ, ಶ್ರದ್ಧೆ, ಪ್ರಾಮಾಣಿಕತೆ, ಕರ್ತೃತ್ವಶಕ್ತಿ, ರಾಷ್ಟ್ರ ಪ್ರೇಮ, ಹೊಣೆಗಾರಿಕೆಯನ್ನು ನಿರ್ವಹಿಸುವ ರೀತಿ ಮುಂತಾದವುಗಳನ್ನು ಅವಲಂಬಿಸಿರುತ್ತದೆ. ಅಶಿಸ್ತಿನಿಂದ ಕೂಡಿದ, ಬೇಜವಾಬ್ದಾರಿತನದ, ಅದಕ್ಷರೂ, ಸ್ವಾರ್ಥಿಗಳು, ಅವಿವೇಕಿಗಳು ಆದಂತಹ ಜನರಿಂದ ಅವನತಿ ಆಗಬಹುದೇ ವಿನಃ ಅಭಿವೃದ್ಧಿ ಸಾಧ್ಯವಿಲ್ಲ.

ವಯಸ್ಕ ಸಮಾಜದಲ್ಲೂ ಅಪೇಕ್ಷಣೀಯ ವ್ಯಕ್ತಿತ್ವವನ್ನು ರೂಪಿಸುವ ಪರಿಸರ ನಿರ್ಮಿಸುವುದಗತ್ಯ. ಈಗ ಸುಧಾರಿತ ಸಮಾಜದಲ್ಲಿ ಸುಧಾರಣಾ ಸಮಿತಿ, ಯುವಕ ಸಂಘ, ಮಹಿಳಾ ಸಂಘಗಳು ತಲೆ ಎತ್ತಿವೆ. ಕೆಲವು ಸಂಘಗಳು ಚೆನ್ನಾಗಿ ಕೆಲಸ ಮಾಡುತ್ತಿವೆ. ಮತ್ತೆ ಕೆಲವು ಇಲ್ಲ. ಕೆಲವು ಕಡೆ ಸಂಘಗಳಿವೆ. ಕೆಲವು ಕಡೆ ಇಲ್ಲ. ಹಲವು ಸಂಘಗಳಲ್ಲಿ ಕೆಲಸಕ್ಕಿಂತ ಕಚ್ಚಾಟವೇ ಹೆಚ್ಚಾದರೆ, ಇನ್ನು ಹಲವೆಡೆ ಸ್ವಾರ್ಥಕ್ಕೂ ಅವಕಾಶವಾಗಿರಬಹುದು. ಹಾಗಾಗಿ ಅವು ಮಾಡಬಹುದಾದ ಸಾಧನೆಗಳು ಸರಿಯಾಗಿ ಆಗುತ್ತಿಲ್ಲ. ಉತ್ತಮವಾಗಿ ಕೆಲಸ ನಿರ್ವಹಿಸಬಲ್ಲ ಸಂಘಗಳು ಒಂದಾಗಬೇಕು. ಅವು ಸಹಕಾರ ಮನೋಭಾವದಿಂದ, ತಮ್ಮ ಮಕ್ಕಳ ಎಂದರೆ ಮುಂದಿನ ಪೀಳಿಗೆಯನ್ನಷ್ಟೆ ಉತ್ತಮವಾಗಿ ಬೆಳೆಸುವ ದೃಷ್ಟಿಕೋನ ಪಡೆದಿದ್ದರೆ, ಘರ್ಷಣೆ ಇಲ್ಲದೆ ಕೆಲಸ ಸಾಧಿಸುತ್ತಾ ಹೋಗಬಹುದು. ಇಲ್ಲಿ ಸೇವೆ ಹಾಗೂ ಸಹಕಾರ ಮನೋಭಾವವೇ ಮುಖ್ಯವಾಗಬೇಕು. ದೋಷಗಳು, ನ್ಯೂನತೆಗಳು, ಒಡಕುಗಳು ಬರದಂತೆ ಕೆಲಸ ಮಾಡುವುದಲ್ಲದೆ, ಬಂದಾಗ ವಿರಸಕ್ಕೆ, ಘರ್ಷಣೆಗೆ ಅವಕಾಶವಿಲ್ಲದಂತೆ ಪರಿಹರಿಸಬೇಕು. ಈ ಒಂದು ಸನ್ನಿವೇಶವೇ ಬೆಳೆಯುವ ಮಕ್ಕಳಲ್ಲಿ ಸಾಕಷ್ಟು ಉತ್ತಮ ಪ್ರಭಾವ ಬೀರಲು ಸಹಾಯಕವಾಗುತ್ತದೆ. ಈ ಸಂಘಗಳು ಒಳ್ಳೆಯ ಪ್ರಗತಿಪರ ಯೋಜನೆ ಹಾಕಿಕೊಂಡು ತಮ್ಮ ಕ್ಷೇತ್ರದಲ್ಲಿ ಬರತಕ್ಕಂತಹ ಎಲ್ಲಾ ಕುಟುಂಬಗಳ ಒಳಿತಿಗಾಗಿ, ಶ್ರೇಯಸ್ಸಿಗಾಗಿ, ಅವರ ನೆಮ್ಮದಿಯುತ ಜೀವನಕ್ಕಾಗಿ ಸಹಕಾರ ಹಸ್ತ ನೀಡಬಹುದು. ಕೌಟುಂಬಿಕ, ಶೈಕ್ಷಣಿಕ, ಆರ್ಥಿಕ, ವೈವಾಹಿಕ ವಿಷಯಗಳಲ್ಲಿ ಸಂಘಗಳು ತಮ್ಮದೇ ಆದ ಯೋಜನೆಯನ್ನು ರೂಪಿಸಿಕೊಂಡ

ಕುಟುಂಬಗಳಿಗೆ ಸಹಾಯ, ಸಲಹೆ, ಸಹಕಾರ ಯಾವುದು ಬೇಕೋ ಅದನ್ನು ಕೊಟ್ಟು ಸಹಕರಿಸಬಹುದು. ಆ ಕಕ್ಷೆಯಲ್ಲಿ ಬರತಕ್ಕ ವಿದ್ಯಾ ಸಂಸ್ಥೆಗಳು ಚೆನ್ನಾಗಿ ಕೆಲಸ ಮಾಡುವಂತೆ ತನ್ನದೇ ಆದ ರೀತಿಯಲ್ಲಿ ನೋಡಿಕೊಳ್ಳುವುದೂ ಇದರ ಕರ್ತವ್ಯವಾಗಬೇಕು. ಆ ಕ್ಷೇತ್ರದ ಯಾವುದೇ ಒಂದು ಮಗು ಏನೇ ಕಾರಣದಿಂದ ನೇರಮಾರ್ಗದಿಂದ ತಪ್ಪಿಸಿಕೊಂಡಿದ್ದರೆ, ಉಳಿದ ಜನರು ಟೀಕೆ ಮಾಡುತ್ತಾ ಆ ಮಗು ಅದೇ ದಾರಿಯಲ್ಲಿ ಹೋಗಲು ಆಸ್ಪದ ಕೊಡುವ ಬದಲು, ಸೂಕ್ತದಾರಿಗೆ ಹಚ್ಚುವಂತಹ ಮಾರ್ಗ ಅನುಸರಿಸುಬೇಕು. ಆ ವಾತಾವರಣದಲ್ಲಿ ಒಳಿತಿಗೆ ಪ್ರೋತ್ಸಾಹವೂ, ಅಡ್ಡಹಾದಿಗೆ ಅಲಕ್ಷ್ಯ ತೋರಿ ತಪ್ಪಿತಸ್ಥರಿಗೆ ಅವಮಾನವಾಗುವಂತಹ ಒಂದು ಹವಾಮಾನ ಉಂಟುಮಾಡಿದರೆ ಸಾಕು. ಎಲ್ಲರೂ ಮಾರ್ಗ ಹಿಡಿದು ನಡೆಯುವುದನ್ನು ಕಲಿಯುತ್ತಾರೆ. ಹೀಗೆ ದೇಶದ ಪ್ರತಿ ಹಳ್ಳಿಯಲ್ಲಿ, ಪ್ರತಿ ಊರಿನಲ್ಲಿ ಪ್ರತಿ ನಗರದಲ್ಲಿ ವ್ಯವಸ್ಥೆಯಾದರೆ ಪರಿಸ್ಥಿತಿಯನ್ನು ಒಂದು ತಹಬಂದಿಗೆ ತಂದು ಶ್ರೇಷ್ಠ ಪೀಳಿಗೆಯನ್ನು ನಿರ್ಮಿಸುವುದರ ಮೂಲಕ ಅಣುಬಾಂಬಿನ ರಾಷ್ಟ್ರಗಳೂ ದಾಕ್ಷಿಣ್ಯದಿಂದ ಗೌರವದಿಂದ ನಡೆದುಕೊಳ್ಳಬೇಕಾಗುವಂತಹ ನೈತಿಕ ಮೌಲ್ಯಗಳುಳ್ಳ ಗೌರವಾಸ್ಪದ ರಾಷ್ಟ್ರ ಕಟ್ಟಬಹುದು.

■

## ೮. ಅಗ್ನಿಪರೀಕ್ಷೆ

ಮನುಷ್ಯನ ಸ್ವಭಾವ ಅವನು ಪಡೆದ ಸಂಸ್ಕಾರಕ್ಕೆ ಅನುಗುಣವಾಗಿ ಇರುತ್ತದೆ. ನಮ್ಮ ಸುತ್ತ ಮುತ್ತ ಒಳ್ಳೆಯವರೂ ಇದ್ದಾರೆ, ಕೆಟ್ಟವರು ಇದ್ದಾರೆ. ಒಳ್ಳೆಯರಾದವರು ಬೇರೆಯವರಿಗೆ ಯಾವುದಾದರೂ ರೀತಿಯಿಂದ ಒಳಿತನ್ನು ಮಾಡುತ್ತಾರೆ. ಅವರ ನಡವಳಿಕೆಯಿಂದ ಇತರರಿಗೆ ಹಿತವಾಗುತ್ತದೆ. ಆದರೆ ಕೆಟ್ಟವರ ನಡತೆ ಪ್ರಿಯವಾಗಿರುವುದಿಲ್ಲ. ಇತರರನ್ನು ಕಷ್ಟ–ನಷ್ಟಗಳಿಗೆ ಗುರಿಪಡಿಸುತ್ತಾರೆ. ದ್ವೇಷ, ಮೋಸ, ವಂಚನೆ, ಕೊಲೆ, ಸುಲಿಗೆ, ವ್ಯಭಿಚಾರ ಮುಂತಾದ ದುರ್ನಡತೆಗಳಿಂದ ಇತರರನ್ನು ಕಷ್ಟ–ನಷ್ಟಗಳಿಗೆ ಒಳಗಾಗಿಸುತ್ತಾರೆ. ಹೀಗೆ ತಮ್ಮ ದುಷ್ಟ ಕೃತ್ಯಗಳಿಂದ ಬೇರೆಯವರನ್ನು ಹಿಂಸಿಸುವವರಿಗೆ ಶಿಕ್ಷೆ ವಿಧಿಸಲ್ಪಡುತ್ತದೆ. ಈಗಿನ ಕಾಲದಲ್ಲಿ ಯಾರಾದರೂ ತಪ್ಪು ಮಾಡಿದರೆ, ನ್ಯಾಯಾಲಯದಲ್ಲಿ ಅವರು ತಪ್ಪಿತಸ್ಥರೆಂದು ತೀರ್ಮಾನಿಸಿದಾಗ ಮಾತ್ರ ಅವರಿಗೆ ಶಿಕ್ಷೆ ವಿಧಿಸಲ್ಪಡುತ್ತದೆ. ಆದರೆ ಹಿಂದಿನ ಕಾಲದಲ್ಲಿ ಅಪರಾಧಿಗಳಿಗೆ ಕೌಟುಂಬಿಕವಾಗಿ, ಧಾರ್ಮಿಕ ವ್ಯಕ್ತಿಗಳೆದುರು ಅಥವಾ ಸಾಮಾಜಿಕ ವ್ಯವಸ್ಥೆಯ ಮೂಲಕ ಶಿಕ್ಷೆ ವಿಧಿಸಲ್ಪಡುತ್ತಿತ್ತು, ಏನಾದರೂ ಅಪರಾಧಗಳು ನಡೆದಾಗ, ಅದನ್ನು ಯಾರು ಮಾಡಿದರೆಂದು ತೀರ್ಮಾನ ಮಾಡುವಾಗ ಕೆಲವು ಸಾರಿ ನಿರಪರಾಧಿಗಳ ಮೇಲೂ ಅಪವಾದ ಹೊರಿಸಲ್ಪಟ್ಟಿರುವುದುಂಟು. ಅಂತಹ ಸಂದರ್ಭಗಳಲ್ಲಿ ನಿರಪರಾಧಿಗಳು ನಾನಾ ವಿಧಗಳಿಂದ ತಾವು ಅಪರಾಧಿಗಳಲ್ಲವೆಂದು ಸಾಬೀತುಪಡಿಸಲು ಪ್ರಯತ್ನಿಸುತ್ತಾರೆ. ಕೆಲವು ಬಾರಿ ಅಪರಾಧಿಗಳಾದವರೂ, ತಾವು ನಿರಪರಾಧಿಗಳೆಂದು ಸಾಬೀತುಪಡಿಸಿ ಶಿಕ್ಷೆಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದುಂಟು. ನಿಜವಾದ ಅಪರಾಧಿಗಳನ್ನು ಕಂಡು ಹಿಡಿಯಲು ಈಗಿನ ಕಾಲದಲ್ಲಿ ಅನೇಕ ಮಾರ್ಗಗಳನ್ನು ಉಪಯೋಗಿಸುತ್ತಾರೆ. ಯಂತ್ರಗಳ ಮೂಲಕ, ನಾಯಿಯ ನೆರವಿನಿಂದ, ತಂತ್ರಜ್ಞಾನದ ಮೂಲಕ, ವಿಚಾರಣೆಯ ಮೂಲಕ ಕಂಡುಹಿಡಿಯಲು ಪ್ರಯತ್ನಿಸುತ್ತಾರೆ. ಆದರೆ ಹಿಂದಿನ ಕಾಲದಲ್ಲಿ ಅಪವಾದ ಹೊರಿಸಲ್ಪಟ್ಟ ವ್ಯಕ್ತಿ ತಾನು ಅಪರಾಧಿಯಲ್ಲವೆಂದು ಸಿದ್ಧಪಡಿಸಲು ಅನೇಕ ಕಠಿಣ ಮಾರ್ಗಗಳನ್ನು ಅನುಸರಿಸಬೇಕಾಗುತ್ತಿತ್ತು. ಪಂಚಾಯತಿದಾರರ ಮುಂದೆ ನಿಂತು ದೇವರ ಹೆಸರಿನಲ್ಲಿ ಪ್ರಮಾಣ ಮಾಡುತ್ತಿದ್ದರು, ಗುರು–ಹಿರಿಯರ ಪಾದಮುಟ್ಟಿ ತಪ್ಪು ಮಾಡಿಲ್ಲವೆಂದು ಎಲ್ಲರ ಮುಂದೆ ಹೇಳಬೇಕಾಗುತ್ತಿತ್ತು. ಕಾದ ಎಣ್ಣೆಯಲ್ಲಿ

ಕೈ ಇಡುತ್ತಿದ್ದರು. ಆಗ ಅವರ ಕೈ ಸುಡದಿದ್ದರೆ ಅವರು ನಿರಪರಾಧಿಗಳು, ಕೈ ಸುಟ್ಟರೆ ಅಪರಾಧಿಗಳು ಎಂದು ನಿರ್ಣಯಿಸುತ್ತಿದ್ದರು. ಇನ್ನೂ ಉಗ್ರ ರೀತಿಯ ಪರೀಕ್ಷೆ ಎಂದರೆ, ಅಗ್ನಿಪರೀಕ್ಷೆ ಮಾಡುವುದು. ನಿರಪರಾಧಿ ಎಂದು ಸಾಬೀತುಪಡಿಸಲು ಉರಿವ ಅಗ್ನಿಯಲ್ಲಿ ನಡೆದು ಬರಬೇಕಿತ್ತು. ಆಗ ಸುಡದೆ ಹೊರಗೆ ಬಂದರೆ ನಿರಪರಾಧಿ ಎಂಬ ಮನ್ನಣೆ ದೊರೆಯುತ್ತಿತ್ತು, ಇಲ್ಲದೆ ಅಪರಾಧಿ ಅಗ್ನಿಗೆ ಆಹುತಿಯಾದರೆ ಸರಿಯಾದ ಶಿಕ್ಷೆ ದೊರೆಯಿತು ಎಂದುಕೊಳ್ಳುತ್ತಿದ್ದರು. ಇಂತಹ ಅಗ್ನಿ ಪರೀಕ್ಷೆಗೆ ಸೀತೆ ಗುರಿಯಾಗಿದ್ದಳೆಂಬುದು ಸರ್ವವಿದಿತ. ರಾವಣ ಸೀತೆಯನ್ನು ಅಪಹರಿಸಿಕೊಂಡು ಹೋಗಿ ಲಂಕೆಯಲ್ಲಿ ಇಟ್ಟುಕೊಂಡಿದ್ದ. ಈ ವಿಷಯ ತಿಳಿದ ರಾಮ ರಾವಣನೊಡನೆ ಯುದ್ಧಮಾಡಿ, ಅವನನ್ನು ಕೊಂದು ಸೀತೆಯನ್ನು ಕರೆದುಕೊಂಡು ಬಂದ. ಆಗ ರಾಮ ಜನಾಪವಾದಕ್ಕೆ ಹೆದರಿ ಸೀತೆ ಸಾರ್ವಜನಿಕವಾಗಿ ಅಗ್ನಿಪರೀಕ್ಷೆ ಮಾಡಿ ತನ್ನ ಪಾವಿತ್ರ್ಯವನ್ನು ರುಜುವಾತು ಮಾಡಬೇಕೆಂದು ತಿಳಿಸಿದ. ಅದು ಅಂದಿನ ಪದ್ಧತಿ, ಹಗಲಿರುಳೂ ರಾಮಧ್ಯಾನ ಮಾಡಿಕೊಂಡೇ ಕಾಲಕಳೆದ ಸೀತೆಗೆ ಎಷ್ಟು ಅವಮಾನವಾಗಿರಬೇಕು. ಆದರೆ ವಿಧಿ ಇರಲಿಲ್ಲ. ರಾಜಾಜ್ಞೆ ಮತ್ತು ಪತಿಯಾಜ್ಞೆ, ಅದರಂತೆ ಚಿತೆ ಏರ್ಪಾಟಾಯಿತು. ಪವಿತ್ರಳಾದ ಸೀತೆ ಅಗ್ನಿಯನ್ನು ಹೊಕ್ಕು ಏನೂ ಅಪಾಯವಿಲ್ಲದೆ ಅಗ್ನಿಪರೀಕ್ಷೆಯಲ್ಲಿ ಗೆದ್ದುಬಂದಳು.

ಕುವೆಂಪುರವರ ರಾಮಾಯಣ ದರ್ಶನದಲ್ಲಿ ರಾಮ ತಾನೂ ಅಗ್ನಿಯ ಒಳಗೆ ಹೋಗಿ, ಸೀತೆಯ ಕೈ ಹಿಡಿದುಕೊಂಡು ಕರೆದುಕೊಂಡು ಬಂದನೆಂದೂ ಆ ಮೂಲಕ ಅವನೂ ಪವಿತ್ರನಾಗಿ ಬದುಕಿದ್ದನೆಂದು ತೋರಿಸಿಕೊಂಡನೆಂದು ವರ್ಣಿಸಲಾಗಿದೆ. ಅಂತೂ ಅಗ್ನಿಪರೀಕ್ಷೆ ಎಂದ ತಕ್ಷಣ, ಸೀತೆಯ ಅಗ್ನಿ ಪರೀಕ್ಷೆ ಎಲ್ಲರ ಮನಸ್ಸಿಗೆ ಬರುವ ಮೊದಲ ಚಿತ್ರ. ಆ ಪರೀಕ್ಷೆಯಲ್ಲಿ ಗೆದ್ದು ಬರುವುದು ಹುಡುಗಾಟದ ಮಾತಲ್ಲ.

ಆಧುನಿಕ ಕಾಲದಲ್ಲಿ ಯಾರಾದರೂ ಅತೀವ ಕಷ್ಟವನ್ನು ಸಹಿಸಿ ಪಾರಾಗಿ ಬಂದಾಗ, ಅಗ್ನಿಪರೀಕ್ಷೆಯಲ್ಲಿ ಪಾರಾಗಿ ಬಂದರು ಎಂದು ಹೇಳುವುದು ವಾಡಿಕೆಯಾಗಿದೆ. ಜನರ ಜೀವನದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಅತೀವ ಕಷ್ಟಗಳು ಬರಬಹುದು. ಅವುಗಳನ್ನು ದಾಟಿ ಬಂದಾಗ ಅಂತಹವರು, ಬೇರೆಯವರು ಒಡ್ಡಿದ ಕಷ್ಟಗಳಿಂದ ಪಾರಾಗಿ ಬಂದೆ, ಎನ್ನುವ ಮಾತನ್ನು 'ಅಗ್ನಿಪರೀಕ್ಷೆಯಲ್ಲಿ ಗೆದ್ದೆ' ಎಂದು ಹೇಳುವುದುಂಟು. ಈಗಿನ ಕಾಲದಲ್ಲಿ ಮಹಿಳೆ ನೌಕರಿಯ ಸಲುವಾಗಿ ಕಾಣದ ಊರಿಗೆ ಹೋಗಬೇಕಾಗಬಹುದು. ಅಲ್ಲಿ ಯಾರೇ ದುಷ್ಟರ ಕೈಗೆ ಸಿಕ್ಕಿ ಕಷ್ಟಕ್ಕೆ ಒಳಗಾಗುವ ಸನ್ನಿವೇಶ ಬರಬಹುದು. ಆ ಸನ್ನಿವೇಶದಿಂದ ಯಾವ

ಕೆಡಕೂ ಇಲ್ಲದೆ ಪಾರಾಗಿ ಬಂದಾಗ, "ಅಗ್ನಿಪರೀಕ್ಷೆಯಲ್ಲಿ ದೇವರು ಪಾರುಮಾಡಿದ" ಎಂದು ಹೇಳುವುದನ್ನು ಕೇಳಿದ್ದೇವೆ.

ನಿತ್ಯಜೀವನದಲ್ಲಿ ಜನಸಾಮಾನ್ಯರು ಅನೇಕ ರೀತಿಯ ಅಗ್ನಿಪರೀಕ್ಷೆಗೆ ಒಳಗಾಗಬೇಕಾಗುತ್ತದೆ. ಅದರಲ್ಲೂ ಸಜ್ಜನರಿಗೆ ದುರ್ಜನರು ಅನೇಕ ರೀತಿಯ ಕಷ್ಟಗಳನ್ನು ಒಡ್ಡುತ್ತಾರೆ. ಅವುಗಳಿಂದ ಪಾರಾಗಿ ಬರುವುದೆಂದರೆ ಅಗ್ನಿಪರೀಕ್ಷೆಯನ್ನು ಗೆದ್ದು ಬಂದಂತೆಯೇ ಸರಿ. ಅಂತಹ ಸಂದರ್ಭಗಳಿಗೆ "ಅಗ್ನಿಪರೀಕ್ಷೆ" ಎನ್ನುವದು ವಾಡಿಕೆ. ನಿಜವಾಗಿ ಅಗ್ನಿ ಉರಿಸಿ, ಅದರಲ್ಲಿ ಅಗ್ನಿಪ್ರವೇಶ ಮಾಡಿಸುವಂತಹ ಪದ್ಧತಿಗಳು, ನಿಯಮಗಳು, ಈಗಿಲ್ಲ. ಆದರೆ ಅಷ್ಟೇ ಕಷ್ಟಕರವಾದ ದುರ್ಭರ ಜೀವನ ಇಂದಿನ ಸಮಾಜದಲ್ಲಿ ಸಾಮಾನ್ಯವಾಗಿ ಬಿಟ್ಟಿದೆ. ಜನರು ಜೀವನದುದ್ದಕ್ಕೂ ಅಗ್ನಿಪರೀಕ್ಷೆಗಳನ್ನು ಗೆಲ್ಲುತ್ತಲೇ ಬದುಕಬೇಕು ಅಥವಾ ಆ ಪರೀಕ್ಷೆಗಳಲ್ಲಿ ಸೋತರೆ ಸುಟ್ಟ ಕರುಕಾಗಬೇಕು. ಕಾಲಕ್ಕೆ ತಕ್ಕಂತೆ ಬದುಕದೆ ವಿಧಿಯಿಲ್ಲವಾಗಿದೆ.

■

## ೯. ಗೃಹಿಣೀ ಗೃಹಮುಚ್ಯತೇ

ಕುಟುಂಬ ಜೀವನದಲ್ಲಿ ಗೃಹಿಣಿಗೆ ಮಹತ್ವದ ಸ್ಥಾನವಿದೆ. ಆಕೆ ಕುಟುಂಬದ ಕೇಂದ್ರಬಿಂದು. ಮನೆಯ ಪ್ರತಿಯೊಂದು ಕಾರ್ಯವೂ, ಆಚಾರ-ವಿಚಾರಗಳೂ ಆಕೆಯನ್ನೇ ಅವಲಂಬಿಸಿರುತ್ತವೆ. ಆದ್ದರಿಂದಲೇ ರಾಷ್ಟ್ರಕವಿ ಕುವೆಂಪು ಅವರು ಆಕೆಯನ್ನು ಮನೆ-ಮನೆಯ ತಪಸ್ವಿನಿ ಎಂದು ಕರೆದಿದ್ದಾರೆ. ಅಷ್ಟೇ ಅಲ್ಲ, 'ಹೊಸಲಾಚೆಗೆ ನೀ ಹೋದರೆ ಹೊಸಲೀಚೆಗೆ ಬೆಳಕಿಲ್ಲ' ಎಂದಿದ್ದಾರೆ. ಅಂದರೆ ಆಕೆ ಗೃಹಿಣಿತ್ವದ ಒಂದು ಮರ್ಯಾದಾ ಗೆರೆಯನ್ನು ದಾಟಿ ಹೊರಗೆ ಹೋದಳೆಂದರೆ, ಮನೆತನದ ಗೌರವ, ಪ್ರಗತಿ, ಮರ್ಯಾದೆ ಎಲ್ಲವೂ ಗಾಳಿ ಪಾಲಾಗಿ ಕುಟುಂಬದಲ್ಲಿ ಅವಮಾನವೆಂಬ ಕತ್ತಲು ಕವಿದು ಬೆಳಕಿಲ್ಲವಾಗುತ್ತದೆ ಎಂದು ಅರ್ಥೈಸಬಹುದು.

ಗೃಹಿಣಿಯದು ಕುಟುಂಬದಲ್ಲಿ ಬಹುಮುಖದ ಪಾತ್ರ. ಮನೆಯ ಪ್ರತಿಯೊಬ್ಬರ ಊಟ, ಉಡುಗೆ, ಆರೋಗ್ಯ, ನಡತೆ ಅವಳ ಮನೋಭಾವದಂತೆಯೆ ರೂಪಿತವಾಗುತ್ತದೆ ಎಂದರೆ ಅತಿಶಯೋಕ್ತಿಯಾಗುವುದಿಲ್ಲ. ಮಕ್ಕಳ ಓದು-ಬರಹ, ನಡೆ-ನುಡಿಯೂ ಸಹ ಅವಳ ವ್ಯಕ್ತಿತ್ವವನ್ನು, ತಿಳಿವಳಿಕೆಯನ್ನು ಅವಲಂಬಿಸಿರುತ್ತದೆ. ಕಾಲಕ್ಕೆ ಸರಿಯಾಗಿ, ಎಲ್ಲರಿಗೂ ಅನುಕೂಲವಾಗುವ ರೀತಿಯಲ್ಲಿ ವ್ಯವಸ್ಥೆ ಮಾಡುವುದು ಅವಳ ಜವಾಬ್ದಾರಿಯೆ, ಬಂಧು-ಬಳಗದವರೊಡನೆಯ ಸ್ನೇಹ ಸಂಬಂಧ ಅವಳ ಸಹಕಾರದ, ಸ್ನೇಹದ ಸ್ವಭಾವವನ್ನು ಅವಲಂಬಿಸಿರುತ್ತದೆ. ಅತಿಥಿ ಅಭ್ಯಾಗತರ ನಿರ್ವಹಣೆಯೂ ಅವಳಿಗೆ ಸೇರಿದುದೆ. ಮನೆಯ ಯಜಮಾನನು ದುಡಿದು ತಂದುದನ್ನು ಒಪ್ಪ ಓರಣವಾಗಿ, ದುಂದುಗಾರಿಕೆಗೆ, ವ್ಯರ್ಥವಾಗುವುದಕ್ಕೆ ಅವಕಾಶವಿಲ್ಲದಂತೆ ನಿರ್ವಹಿಸಿಕೊಂಡು ಹೋಗುವ ಜಾಣತನವೂ ಅವಳ ಜಾಣತನವನ್ನು ಅವಲಂಬಿಸಿದೆ. ಮನೆಯಲ್ಲಿ ಆಳುಕಾಳುಗಳಿದ್ದರೆ, ಅವರಿಂದ ಕೆಲಸ ತೆಗೆದುಕೊಳ್ಳುವಲ್ಲಿಯೂ ಅವಳ ಜಾಣ್ಮೆ, ತಾಳ್ಮೆ ಅವಶ್ಯಕ. ದುಡಿದುಕೊಂಡು ಬಂದ ಯಜಮಾನನಿಗೆ, ಅಭ್ಯಾಸ ಮುಗಿಸಿ ಬಂದ ಮಕ್ಕಳಿಗೆ ಮನೆ ನೆಮ್ಮದಿಯ ತಾಣವಾಗಿರಬೇಕು. ಪುರುಷನು ಬೇಕಾದಷ್ಟು ದುಡಿದು ತಂದು ಹಾಕಬಹುದು. ಮನೆ-ಮಠ-ಐಶ್ವರ್ಯ ಎಲ್ಲ ಇರಬಹುದು. ಆದರೆ ಮನೆಗೆ ಬಂದಾಗ ನೆಮ್ಮದಿಯನ್ನು ನೀಡುವ, ಸಂತೋಷವನ್ನುಂಟು ಮಾಡುವ, ತೃಪ್ತಿಯನ್ನು ಕೊಡುವ

ವಾತಾವರಣವಿಲ್ಲದಿದ್ದರೆ, ಸ್ನೇಹದ - ಪ್ರೀತಿಯ ನುಡಿಗಳಿಂದ ಮನಸ್ಸಿಗೆ ಹಿತವಾಗುವಂತೆ ವರ್ತಿಸದಿದ್ದರೆ, ಅಂತಹ ಮನೆಯು ನರಕ ಸದೃಶವಾಗುವುದು. ಯಜಮಾನನ ದಣಿವು, ದುಡಿಮೆಗಳನ್ನು ಗಮನಿಸಿ, ತಕ್ಕ ರೀತಿಯಲ್ಲಿ ವರ್ತಿಸುವ ಗೃಹಿಣಿ ಇದ್ದರೆ, ಅವನ ಆಯಾಸ, ಬೇಸರಗಳೆಲ್ಲಾ ಮಾಯವಾಗಿ, ಮನಸ್ಸಿಗೆ ಹಿತವೆನ್ನಿಸಿ, ಮರುದಿನ ಮತ್ತಷ್ಟು ದುಡಿಯಲು ಉತ್ಸಾಹಿತನಾಗುತ್ತಾನೆ. ಅದಕ್ಕೇ ಇರಬೇಕು

ವೆಚ್ಚಕ್ಕೆ ಹೊನ್ನಾಗೆ, ಬೆಚ್ಚನ್ನ ಮನೆಯಾಗೆ
ಇಚ್ಛೆಯನರಿವ ಸತಿಯಾಗೆ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ

ಎಂದು ಸರ್ವಜ್ಞ ಹೇಳಿದ್ದಾನೆ. ಹಾಗೆ ಇಚ್ಛೆಯನ್ನರಿತು, ಪರಿಸ್ಥಿತಿಯನ್ನು ಗಮನಿಸಿ ಸ್ಪಂದಿಸುವ ಸ್ವಭಾವವಿಲ್ಲದೆ, ಮನಬಂದಂತೆ ವರ್ತಿಸುವ ಗೃಹಿಣಿ, ಮನೆಯ ನೆಮ್ಮದಿಯನ್ನೇ ಕದಡಬಲ್ಲಳು. ಸ್ನೇಹಪರಳಲ್ಲದ ಅವಳು ಸದಾ ಒಂದಿಲ್ಲೊಂದು ಕಾರಣವನ್ನು ಹುಡುಕಿ, ಕಾಲ್ಕೆರೆದು ಜಗಳವಾಡುವ ಸ್ವಭಾವದವಳಾಗಿದ್ದರಂತೂ, ಆ ಮನೆಯು ಅಶಾಂತಿಯ ಆಗರವಾಗುತ್ತದೆ. ಅಂತಹ ಗೃಹಿಣಿಯರನ್ನು ಗಮನಿಸಿಯೋ ಏನೋ ಸರ್ವಜ್ಞರು.

ಸೋರುವಾ ಮನೆಗಿಂತ, ದಾರಿಯಾ ಮರಲೇಸು
ಹೋರುವಾ ಸತಿಗಿಂತ ಹೊಡೆದೊಯ್ವ ಮಾರಿಯೇ ಲೇಸು

ಎಂದು ಸರ್ವಜ್ಞ ಹೇಳಿದ್ದಾನೆ. ಗೃಹಿಣಿಯು ಅವಿವೇಕಿಯೂ, ಮೂರ್ಖಳೂ ಹೊಟ್ಟೆಕಿಚ್ಚಿನ ಬುದ್ಧಿಯವಳೂ, ಕುಟಿಲಳೂ, ಸುಳ್ಳುಗಾತಿಯೂ ಆಗಿದ್ದಲ್ಲಿ, ಆ ಕುಟುಂಬದ ಜನಕ್ಕೆ ನೆಮ್ಮದಿಯಾಗಲೀ, ಆ ಮನೆಯ ಅಭಿವೃದ್ಧಿಯಾಗಲೀ ಸಾಧ್ಯವಿಲ್ಲ. ಮನೆಯ ಸಂಪತ್ತು, ದುಡಿಮೆ ಎಷ್ಟಿದ್ದರೂ ಕಾಲಾನುಕ್ರಮದಲ್ಲಿ ಅದು ನಶಿಸುತ್ತಾ ಹೋಗುತ್ತದೆ. ಮನೆಯ ಒಳಗಿನ ಪರಿಸ್ಥಿತಿಗಳು ಹೊರಗಿನವರಿಗೆ ಕಾಣದಿದ್ದರೂ ಹೊರಗೆ ಚೆನ್ನಾಗಿ ಕಂಡರೂ, ಗೆದ್ದಲು ಹಿಡಿದ ವಟವೃಕ್ಷದಂತೆ, ಒಳಗೆ ಗೊಗ್ಗರು ಬಿದ್ದು ಕಡೆಗೆ ನಾಶವಾಗಿ ಹೋಗುತ್ತದೆ. ಗೃಹಿಣಿಯು ಸದ್ಗುಣಿಯಾಗದಿದ್ದಲ್ಲಿ ಎಂತಹ ದುಷ್ಪರಿಣಾಮವಾಗಬಹುದೆಂಬುದನ್ನು ಮಿರ್ಜಿ ಅಣ್ಣಾರಾಯರ 'ನಿಸರ್ಗ' ಕಾದಂಬರಿಯಲ್ಲಿ ಚಿತ್ರಿಸಿರುವ ಹಳ್ಳಿಯ ಕುಟುಂಬ ಜೀವನವನ್ನೋದಿ ಅರ್ಥಮಾಡಿಕೊಳ್ಳಬಹುದು. ಒಬ್ಬ ಹೆಣ್ಣಿನ ಕುಟಿಲ ನೀತಿಯಿಂದ, ಐದಾರು ಸಂಸಾರಗಳು ಸಮಸ್ಯೆಯ ಸುಳಿಯಲ್ಲಿ, ದುಃಖದ ಮಡುವಿನಲ್ಲಿ ಮುಳುಗಿ ಹೋಗುತ್ತವೆ. ಇದು ಕೇವಲ ಕಾದಂಬರಿಯಲ್ಲಲ್ಲ. ನಿಜ ಜೀವನದಲ್ಲೂ ಅಂತಹ ದುಷ್ಟ ಸ್ವಭಾವದ ಗೃಹಿಣಿಯರಿಂದ ಎಷ್ಟೋ ಮನೆಗಳು, ಮನಗಳು

ನಾಶವಾಗಿರುವುದುಂಟು. ಅದಕ್ಕಾಗಿಯೇ 'ಹೆಣ್ಣಿನ ಕಾಲ್ಗುಣ ಹೇಗಿದೆ?' ಎಂಬ ಮಾತು ರೂಢಿಯಲ್ಲಿರುವುದು. ಆಕೆಯ ಕಾಲ್ಗುಣದಿಂದಲೇ ಮನೆತನದ ಸಿರಿ-ಸಂಪತ್ತು, ವಿದ್ಯೆಯ ಅಭಿವೃದ್ಧಿ, ಎಲ್ಲರ ಸಂತೋಷಗಳು 'ಅವಳ ಕಾಲ್ಗುಣ'ವು ಅವಳ ವಿಶಾಲ ಮನೋಭಾವನೆ, ಸಹಕಾರ ಮನೋಭಾವ, ಜ್ಞಾನ ಮತ್ತು ದಕ್ಷತೆಯನ್ನು ಅವಲಂಬಿಸಿರುತ್ತದೆ. 'ಸಂತುಷ್ಟ ಸದ್ಗೃಹಿಣಿಯೇ ಮನೆಯ ಮಹಾಲಕ್ಷ್ಮಿ' ಎನ್ನುವುದು ಸುಳ್ಳಲ್ಲ.

ಮಹಿಳೆಯನ್ನು ಮನೆಯ ಜವಾಬ್ದಾರಿಗೆ ಸೀಮಿತಗೊಳಿಸಿ, 'ಹೊಸಲಾಚೆಗೆ ನೀ ಹೋದರೆ ಹೊಸಲೀಚೆಗೆ ಬೆಳಕಿಲ್ಲ' ಎಂದು ದೊಡ್ಡ ದೊಡ್ಡ ಮಾತನಾಡಿ ಅವಳನ್ನು ಬಂದಿಯಂತೆ ನಾಲ್ಕು ಗೋಡೆಗಳ ಒಳಗೆ ಬಂಧಿಸಿಟ್ಟು, ತಪಸ್ವಿನಿ, ತಾಳ್ಮೆಯಲ್ಲಿ ಭೂತಾಯಿ ಎಂದು ಹೊಗಳುತ್ತಾ, ಮನೆಯವರೆಲ್ಲರ ಸುಖಕ್ಕಾಗಿ ಅವಳನ್ನು ಶೋಷಿಸುತ್ತಾ ಬಂದಿರುವ ಪುರುಷ ಸಮಾಜವನ್ನು ಇಂದು ಟೀಕಿಸುತ್ತಿರುವುದು ಸಹಜವಾಗಿದೆ. ಏಕೆಂದರೆ, ಈ ಮಾತು ಬಹಳ ಸಾರಿ ನಿಜವಾಗಿದೆ. ಅವಳ ಭಾವನೆಗಳನ್ನು, ಆಸೆ-ಆಕಾಂಕ್ಷೆಗಳನ್ನು ಹತ್ತಿಕ್ಕಿ, ಅವಳ ಶ್ರಮಕ್ಕೆ, ಪ್ರೀತಿ-ವಿಶ್ವಾಸಗಳಿಗೆ ಯಾವ ಮನ್ನಣೆಯನ್ನು, ಮೆಚ್ಚುಗೆಯನ್ನೂ ತೋರದೆ, 'ಹಾಗಿರಬೇಕಾದುದೇ ಅವಳ ಧರ್ಮ' ಎಂಬಂತೆ ಜಬರ್‌ದಸ್ತಿನಿಂದ ಆಕೆಯನ್ನು ದುಡಿಸಿಕೊಳ್ಳುವುದು ನಿಜವಾಗಿಯೂ ಶೋಷಣೆಯೆ. ಆದರೆ ಸಂಸಾರವೆಂಬ ರಥದ ಎರಡು ಗಾಲಿಗಳಲ್ಲಿ ಒಂದಾಗಿ ರಥ ಉರುಳಲು ತನ್ನ ಕರ್ತವ್ಯಗಳನ್ನು ಜವಾಬ್ದಾರಿಯಿಂದ ನಿರ್ವಹಿಸುವ ಅವಳನ್ನು ಕುಟುಂಬದ ಇತರರೂ ಪ್ರೀತಿ-ವಿಶ್ವಾಸಗಳಿಂದ ಕಾಣುತ್ತಾ, ಅವಳ ಕಾರ್ಯ ನಿರ್ವಹಣೆಯಲ್ಲಿ ಸ್ನೇಹ ಹಸ್ತವಿತ್ತು ನಡೆದಲ್ಲಿ ಎಷ್ಟು ಜವಾಬ್ದಾರಿಯೂ ಹೊರೆಯಾಗಿ ಕಾಣುವುದಿಲ್ಲ. ಗೃಹಿಣಿಯೂ ಸಂಸಾರವೆಂಬ ರಥದ ಸಾರಥ್ಯವನ್ನು ವಹಿಸುತ್ತಾಳೆ. ಆಕೆ ರಥವನ್ನು ಗುಂಡಿಯಲ್ಲಿ ಬೀಳಿಸಿ, ಮುರಿಯುವಂತೆ ಮಾಡಬಹುದು ಅಥವಾ ದಕ್ಷತೆಯಿಂದ ನಡೆಸಿ ಗುರಿಮುಟ್ಟಿಸಬಹುದು. ಅವಳಿಗೆ ಕುಟುಂಬದಲ್ಲಿ ಮಹತ್ವದ ಸ್ಥಾನವಿದೆ. ಅವಳೂ ಪ್ರಾಜ್ಞೆಯಾಗಿ ಜವಾಬ್ದಾರಿಯಿಂದ ಬದುಕಬೇಕು. ಇತರರೂ ತಮ್ಮ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸಿಕೊಂಡು ಅವಳಿಗೆ ಸಹಕಾರವಿತ್ತರೆ, ಅದು ಶೋಷಣೆಯಾಗುವುದಿಲ್ಲ. ಆಕೆಗೆ ಸಲ್ಲಬೇಕಾದ ಗೌರವವು ಸಲ್ಲಬೇಕೆಂಬ ಮಾತನ್ನು ಮನು ಮಹರ್ಷಿಯೂ 'ಯತ್ರ ನಾರ್ಯಸ್ತು ಪೂಜ್ಯಂತೆ ತತ್ರ ರಮಂತೆ ದೇವಾಃ' ಎಂಬ ಮಾತಿನಿಂದ ಹೇಳಿದ್ದಾನೆ.

ಗೃಹಿಣಿಯು ಕುಟುಂಬದ ಆಗು-ಹೋಗುಗಳಿಗೆ, ಒಳಿತು-ಕೆಡುಕುಗಳಿಗೆ,

ಕಷ್ಟ-ನಷ್ಟಗಳಿಗೆ, ಶಾಂತಿ-ಅಶಾಂತಿಗಳಿಗೆ ಕಾರಣಳಾದುದರಿಂದಲೇ 'ಗೃಹಿಣೀ ಗೃಹಮುಚ್ಯತೆ' ಎಂಬ ಮಾತು ಜನಜನಿತವಾಗಿದೆ.

ಕುಟುಂಬದ ಆಧಾರಸ್ಥಂಭವಾಗಿರುವ ಗೃಹಿಣಿಯು ಸದ್ಗೃಹಿಣಿಯಾಗಿ ಬದುಕುವುದು ಎಷ್ಟು ಅವಶ್ಯಕವೋ, ಕುಟುಂಬದ ಇತರರೂ ಅವಳಿಗೆ ತಕ್ಕ ಗೌರವಕೊಟ್ಟು ಸಹಕಾರದಿಂದ ನಡೆಯುವುದು ಅಷ್ಟೇ ಅವಶ್ಯಕ.

■

## ೧೦. ರಾಷ್ಟ್ರಪ್ರೇಮ

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಎಂಬ ಹೇಳಿಕೆ ಜನನಿತವಾಗಿದೆ. ಒಂಬತ್ತು ತಿಂಗಳು ಹೊತ್ತು, ಹೆತ್ತು, ಕಾಲಕಾಲಕ್ಕೆ ಆಹಾರವನ್ನಿತ್ತು ಆರೋಗ್ಯವನ್ನು ರಕ್ಷಿಸುವುದಲ್ಲದೆ, ನಡೆ-ನುಡಿಗಳನ್ನು ಕಲಿಸುವ, ತನ್ನ ಪ್ರೀತಿಯನ್ನೇ ಧಾರೆ ಎರೆಯುವ ತಾಯಿ ಸ್ವರ್ಗಕ್ಕಿಂತ ಮಿಗಿಲಲ್ಲದೆ ಮತ್ತೇನು? ತಾಯಿಯಿಂದ ರೂಪಿತವಾದ ವ್ಯಕ್ತಿಗೆ ನೀರು, ಬೆಳಕು, ಊಟ, ಗಾಳಿ, ವಸತಿಗಳನ್ನು, ವಿದ್ಯೆ-ಬುದ್ಧಿಗಳನ್ನು ಪಡೆಯಲು ವ್ಯವಸ್ಥೆ ಮಾಡಿಕೊಡುವ, ರಕ್ಷಣೆ, ಉದ್ಯೋಗ ಮುಂತಾದ ಬದುಕಲುಬೇಕಾದ, ಕೌಟುಂಬಿಕ ಜೀವನಕ್ಕೆ, ರಾಷ್ಟ್ರೀಯ ಬದುಕಿಗೆ ಅಗತ್ಯವಾದ, ಒಟ್ಟಿನಲ್ಲಿ ವ್ಯಕ್ತಿಯು ಆರಿಸಿಕೊಂಡ ಜೀವನ ರೀತಿಗೆ, ಎಲ್ಲ ರೀತಿಯ ಸೌಕರ್ಯಗಳನ್ನು ಒದಗಿಸಿಕೊಡುವ ರಾಷ್ಟ್ರವೂ ತಾಯಿಯಂತೆಯೇ ಗೌರವಾದರಗಳಿಗೆ ಪಾತ್ರವಾಗಿದೆ ಹಾಗೂ ಸ್ವರ್ಗಕ್ಕಿಂತ ಹೆಚ್ಚಿನದೂ ಕೂಡ. ನಮ್ಮ ಬದುಕಿಗೆ ಊರುಗೋಲಾಗಿರುವ ರಾಷ್ಟ್ರವು ಹೆತ್ತ ತಾಯಿಗೆ ಸಮಾನ. ತಾಯಿ ಹಾಗೂ ರಾಷ್ಟ್ರದ ಗೌರವ ರಕ್ಷಣೆಗಾಗಿ ಮಕ್ಕಳು ಹಾಗೂ ಪ್ರಜೆಗಳು ಯಾವ ತ್ಯಾಗಕ್ಕಾದರೂ ಸಿದ್ಧರಿರಬೇಕು ಎಂಬುದರಲ್ಲಿ ಎರಡು ಮಾತಿಲ್ಲ. ಹಾಗಿಲ್ಲದವರು ನಿಜವಾದ ಅರ್ಥದಲ್ಲಿ ದ್ರೋಹಿಗಳು ಎನ್ನಿಸಿಕೊಳ್ಳುತ್ತಾರೆ. ತಾಯಿಗೆ ಕೃತಘ್ನರಾಗಿ ನಡೆದುಕೊಂಡರೆ ಮಾತೃ ದ್ರೋಹಿಗಳೂ, ದೇಶಕ್ಕೆ ದ್ರೋಹ ಬಗೆದರೆ ರಾಷ್ಟ್ರದ್ರೋಹಿಗಳು ಎನ್ನಿಸಿಕೊಳ್ಳುತ್ತಾರೆ.

ಮನುಷ್ಯರಲ್ಲಿ ಎಲ್ಲ ಬಗೆಯ ಜನರೂ ಇದ್ದಾರೆ, ಅವರ ಸ್ವಭಾವ ಬೆಳೆಯುವ ವಯಸ್ಸಿನಲ್ಲಿ ಅವರು ಪಡೆದ ಸಂಸ್ಕಾರಕ್ಕೆ ಅನುಗುಣವಾಗಿ ಇರುತ್ತದೆ. ಉತ್ತಮ ಸಂಸ್ಕಾರ ಉಳ್ಳವರು, ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ, ತಮ್ಮ ಜವಾಬ್ದಾರಿಗಳಲ್ಲಿ, ಬದುಕಬೇಕಾದ ಮೌಲ್ಯಗಳಲ್ಲಿ ಎಂದೂ ತಪ್ಪುವುದಿಲ್ಲ. ಆದರೆ ಒಳ್ಳೆಯ ಸಂಸ್ಕಾರವಿಲ್ಲದವರು, ಕುಸಂಸ್ಕಾರದ ವಾತಾವರಣದಲ್ಲಿ ರೂಪುಗೊಂಡವರು ಹಾದಿ ತಪ್ಪಿ ಬದುಕುತ್ತಾರೆ. ಅಂತಹವರಿಗೆ ಗುರು-ಹಿರಿಯರ ಬಗ್ಗೆಯಾಗಲೀ, ತಾಯಿ-ತಂದೆಗಳ ವಿಷಯದಲ್ಲಾಗಲೀ ಗೌರವಾದರಗಳಿರುವುದಿಲ್ಲ. ರಾಷ್ಟ್ರದ ಬಗ್ಗೆಯಂತೂ ಅವರು ಎಳ್ಳಷ್ಟೂ ಬೆಲೆ ಕೊಡುವುದಿಲ್ಲ. ಅಂಥವರು ಸ್ವಾರ್ಥಕ್ಕಾಗಿ ಯಾವ ಮಟ್ಟಕ್ಕೆ ಬೇಕಾದರೂ ಇಳಿಯಬಲ್ಲರು. ಈಗ, ನಾವು ಸಾಮಾಜಿಕ ಜೀವನವನ್ನು ಗಮನಿಸಿದರೆ ಅನೇಕ ಕುಟುಂಬಗಳಲ್ಲಿ ತಾಯಿಯ ಸ್ಥಿತಿ ದಯನೀಯವಾಗಿ ಇದೆ. ದೊಡ್ಡ,

ದೊಡ್ಡ ಸ್ಥಾನದಲ್ಲಿ ಇರತಕ್ಕ ಮಕ್ಕಳು ತಾಯಂದಿರು ಕೂಲಿಮಾಡಿಕೊಂಡು ಬದುಕುತ್ತಾ, ಹೊಟ್ಟೆ ತುಂಬಾ ಅನ್ನವಿಲ್ಲದೆ, ಮೈ ತುಂಬಾ ಬಟ್ಟೆ ಇಲ್ಲದೆ ತುಂಬಾ ಅಸಹಾಯಕರಾಗಿ ತೊಳಲಾಡುತ್ತಿರುವುದನ್ನು ಕಾಣಬಹುದಾಗಿದೆ. ಕೆಲವು ಕುಟುಂಬಗಳಲ್ಲಿ ತಾಯಿಯನ್ನು ಬೀದಿಯ ಪಾಲಾಗಿಸದಿರಬಹುದು. ಆದರೆ ಮನಶ್ಶಾಂತಿಯಾಗಲೀ, ನೆಮ್ಮದಿಯಾಗಲೀ ಇಲ್ಲದೆ ಸಂಕಟಗೊಳ್ಳುವಂತೆ ಮಾಡಿರುವುದನ್ನು ಗಮನಿಸಬಹುದು. ತಾಯಿಯನ್ನು ಅಲಕ್ಷಿಸುವ ಮಕ್ಕಳಿರುವಂತೆ, ದೇಶಕ್ಕೆ ದ್ರೋಹ ಬಗೆಯುವ ಪ್ರಜೆಗಳೂ ಇದ್ದಾರೆ. ಅನೇಕರು, ದೇಶದ ಅಭಿವೃದ್ಧಿಗಾಗಿ ವಿನಿಯೋಗಿಸಬೇಕಾದ ಹಣವನ್ನು ಭ್ರಷ್ಟಾಚಾರದ ಮೂಲಕ ತಾವೇ ಕಬಳಿಸುತ್ತಾರೆ. ಸ್ವಂತ ಪ್ರತಿಷ್ಠೆಗಾಗಿ, ಲಾಭಕ್ಕಾಗಿ, ದ್ವೇಷದಿಂದಾಗಿ ರಾಷ್ಟ್ರೀಯ ಶಾಂತಿಯನ್ನು ಹಾಳುಗೆಡುಹುವಂತಹ ಕೊಲೆ, ಸುಲಿಗೆ, ದರೋಡೆ ದೊಂಬಿ ಮುಂತಾದುವುಗಳಲ್ಲಿ ತೊಡಗುತ್ತಾರೆ, ತೊಡಗುವಂತೆ ಮಾಡುತ್ತಾರೆ. ದೇಶದ ಪ್ರಾಣಿ ಸಂಪತ್ತನ್ನು, ವನ್ಯ ಸಂಪತ್ತನ್ನು ಲೂಟಿಮಾಡಿ ಪರಿಸರ ಸಮತೋಲನಕ್ಕೆ ಧಕ್ಕೆಯುಂಟುಮಾಡುತ್ತಾರೆ. ಇಷ್ಟೇ ಏಕೆ? ರಾಷ್ಟ್ರದ ಸಂಸ್ಕೃತಿಯ, ಪರಂಪರೆಯ ಪ್ರತೀಕಗಳಾದ ಪ್ರಾಚ್ಯವಸ್ತುಗಳನ್ನು ಕಳವು ಮಾಡಿ ಮಾರಿ, ಸ್ವಂತ ಲಾಭ ಮಾಡಿಕೊಳ್ಳುತ್ತಾರೆ. ಇಷ್ಟೂ ಸಾಲದೆಂಬಂತೆ ದೇಶದ ರಕ್ಷಣೆಗಾಗಿ, ರಾಷ್ಟ್ರದ ಸಂಪದಭಿವೃದ್ಧಿಗಾಗಿ ಮಾಡಿದ ಸಂಶೋಧನಾ ಫಲಿತಾಂಶಗಳನ್ನೂ, ಯೋಜನೆಗಳನ್ನೂ ಕದ್ದು, ಪರದೇಶದವರಿಗೆ ಮಾರಿ, ದೇಶವನ್ನು ಆಪತ್ತಿಗೆ ಗುರಿಮಾಡುವ ರಾಷ್ಟ್ರದ್ರೋಹಿಗಳೂ, ಸ್ವಾರ್ಥ ಸಾಧಕರೂ ಇದ್ದಾರೆ. ಇವರು ದೇಶಕ್ಕೆ ಬಹು ಅಪಾಯಕಾರಿಗಳು. ಇತಿಹಾಸದಲ್ಲಿ ಕಾಣಸಿಗುವ ಮೀರ್ ಸಾದಕ್, ಮಲ್ಲಪ್ಪಶೆಟ್ಟಿಗಳಂತಹ ದೇಶದ್ರೋಹಿಗಳು ಇಂದೂ ದೇಶದ ಅನ್ನ ತಿನ್ನುತ್ತಲೇ ಮೋಸಮಾಡುತ್ತಾ ಬದುಕುತ್ತಿದ್ದಾರೆ. ಅವರಿಗೆ, ದೇಶ ಉಳಿದರೆ ನಾವೂ ಉಳಿಯುತ್ತೇವೆ. ಅಳಿದರೆ ನಾವೂ ನಾಶವಾಗುತ್ತೇವೆ ಎಂಬ ಅರಿವಾಗಲೀ, ದೂರದೃಷ್ಟಿಯಾಗಲೀ ಇಲ್ಲ.

ದೇಶದ್ರೋಹಿಗಳಿದ್ದಂತೆ ರಾಷ್ಟ್ರಪ್ರೇಮಿಗಳಾದ ಪ್ರಜೆಗಳು, ಆಡಳಿತಗಾರರು, ಅಧಿಕಾರಿಗಳೂ ಎಲ್ಲೆಡೆಯೂ ಇದ್ದಾರೆ. ಅಂತಹವರಿಂದಲೇ ರಾಷ್ಟ್ರದ ಉಳಿವು ಏಳ್ಗೆ, ಕ್ಷೇಮ. ನಾವು ಪರಕೀಯರ ದಾಸ್ಯಕ್ಕೆ ಒಳಗಾಗಿದ್ದಾಗ ಗೋಪಾಲ ಕೃಷ್ಣ ಗೋಖಲೆ, ಮಹಾತ್ಮ ಗಾಂಧೀಜಿ, ಸುಭಾಷ್‌ಚಂದ್ರಬೋಸ್, ಬಾಲಗಂಗಾಧರ ತಿಲಕ್, ಕಾರ್ನಾಡ ಸದಾಶಿವರಾಯರು, ಭಗತ್‌ಸಿಂಗ್ ಮುಂತಾದ ಅನೇಕ ರಾಷ್ಟ್ರಪ್ರೇಮಿಗಳು ರಾಷ್ಟ್ರಕ್ಕಾಗಿ ತಮ್ಮ ಸರ್ವಸ್ವವನ್ನು ಅರ್ಪಿಸಿದ್ದಾರೆ. ಇಂತಹ ಇನ್ನೂ ಅನೇಕ ಸತ್ಪುರುಷರು ರಾಷ್ಟ್ರಕ್ಕಾಗಿ ಮಾಡಿದ ತ್ಯಾಗದಿಂದ ನಮ್ಮ ದೇಶವಿಂದು ಸ್ವತಂತ್ರ ದೇಶವಾಗಿ ಜಗತ್ತಿನಲ್ಲಿ ತಲೆ ಎತ್ತಿ ನಿಂತಿದೆ. ಇದೇ ರೀತಿ ಪ್ರತೀ ರಾಷ್ಟ್ರದಲ್ಲೂ ದೇಶದ ಒಳಿತಿಗಾಗಿ, ಉಳಿವಿಗಾಗಿ ನಾನಾ ರೀತಿಯ ತ್ಯಾಗ ಮಾಡಿರುವ ರಾಷ್ಟ್ರ ಪ್ರೇಮಿಗಳು ಇತಿಹಾಸದ ಪುಟಗಳಲ್ಲಿ ಇಂದಿಗೂ ಕಂಗೊಳಿಸುತ್ತಾರೆ.. ಅವರ

ಹೆಸರು ಮುಂದಿನ ಪೀಳಿಗೆಗೆ ಸದಾಕಾಲವೂ ಮಾರ್ಗದರ್ಶನ ನೀಡುತ್ತದೆ. ಅಂತಹವರು ಜಗನ್ಮಾನ್ಯರು. ಎಲ್ಲರಿಗೆ ಮಾರ್ಗದರ್ಶಿಗಳು ದೇಶಕಾಲವನ್ನು ಮೀರಿ ಎಲ್ಲರ ಗೌರವಾದರಗಳಿಗೆ ಪಾತ್ರರು. ಇಂತಹ ವ್ಯಕ್ತಿಗಳು ಎಲ್ಲೆಡೆ ಹೆಚ್ಚಬೇಕು. ಆಗ ಜಗತ್ತಿನಲ್ಲಿ ವಿರಸ-ದ್ವೇಷಗಳು ಇಲ್ಲವಾಗಿ ಯುದ್ಧ ಭಯ ಮಾಯವಾಗಿ ಸುಖ-ಶಾಂತಿ-ಸೌಹಾರ್ದತೆಗಳು ಹೆಚ್ಚುತ್ತವೆ. ಪರಸ್ಪರರಲ್ಲಿ ಪ್ರೀತಿ-ವಿಶ್ವಾಸಗಳು ಮೊಳೆಯುತ್ತವೆ. ಜಗತ್ತೆಲ್ಲಾ ಒಂದು, ಮಾನವರೆಲ್ಲಾ ಅಣ್ಣ-ತಮ್ಮಂದಿರೆಂಬ ವಿಶಾಲಭಾವನೆ ಉದಿಸಲು ಸಹಾಯಕವಾಗುತ್ತದೆ.

ಮಾನವರೆಲ್ಲಾ ಒಂದು ಎಂಬ ಭ್ರಾತೃತ್ವ ಭಾವನೆ, ಜನರಲ್ಲಿ ಬೆಳೆಯಲು ಎಲ್ಲಿ ಸಾಧ್ಯ ಎನ್ನಿಸಬಹುದು. ಆದರೆ, ಆ ದಿಶೆಯಲ್ಲಿ ಪ್ರಯತ್ನಪಟ್ಟರೆ, ಸಂಪೂರ್ಣ ಸಾಧ್ಯವಲ್ಲದಿದ್ದರೂ, ದ್ವೇಷವನ್ನೂ, ಯುದ್ಧಗಳನ್ನೂ ತಡೆಗಟ್ಟುವಲ್ಲಿ ಬಹಳಷ್ಟು ಸಹಾಯಕವಾಗುವುದರಲ್ಲಿ ಸಂಶಯವಿಲ್ಲ. ಇಂತಹ ಭಾವನೆ ಬೆಳೆಯಲು ಮಕ್ಕಳಿಗೆ ಬಾಲ್ಯದಿಂದಲೇ ಅಂತಹ ಬೆಳವಣಿಗೆಗೆ ಸಹಾಯಕವಾಗುವ ಶಿಕ್ಷಣ, ಮನೆಯಲ್ಲಿ, ಶಾಲೆಯಲ್ಲಿ, ಸಮಾಜದಲ್ಲಿ, ಎಲ್ಲೆಡೆ ದೊರೆಯುವಂತಾಗಬೇಕು. ಉತ್ತಮ ರಾಷ್ಟ್ರಪ್ರೇಮಿಗಳ ಉದಾಹರಣೆಗಳು ಆಯಾ ಮಟ್ಟದಲ್ಲಿ ಮಕ್ಕಳಿಗೆ ಅರ್ಥವಾಗುವಂತೆ, ಪ್ರಭಾವ ಬೀರುವ ರೀತಿಯಲ್ಲಿ ಬಿಂಬಿಸಲ್ಪಡಬೇಕು; ಓದಲು ಅವಕಾಶ ಮಾಡಿಕೊಡಬೇಕು. ಶಿಕ್ಷಕರು ಮನದಟ್ಟಾಗುವಂತೆ ಬೋಧಿಸಬೇಕು. ಚಿಕ್ಕ ಮಕ್ಕಳಿಗೆ ಕಥೆ ಎಂದರೆ ಬಹಳ ಪ್ರೀತಿ. ಆ ಒಂದು ಸ್ವಭಾವವನ್ನು ಉಪಯೋಗಿಸಿಕೊಂಡು ಧೀರರ, ಶೂರರ, ರಾಷ್ಟ್ರ ಪ್ರೇಮಿಗಳ ಕಥೆಗಳನ್ನು ಮನಂಬುಗುವಂತೆ ಪಾಲಕರು ಮನೆಯಲ್ಲಿ ಹೇಳಬೇಕು. ದ್ವೇಷದಿಂದ, ಮೋಸದಿಂದ, ಕ್ರೌರ್ಯದಿಂದ, ಹಿಂಸೆಯಿಂದ ಎಂತೆಂತಹ ಅನರ್ಥಗಳಾಗುತ್ತವೆ ಎಂಬುದನ್ನು ತಿಳಿಸಿ, ಅಂತಹುಗಳು ನಮ್ಮ ದೇಶದಲ್ಲಿಯೇ ಇರಬಾರದು - ಬರಬಾರದು ಎಂಬ ಪ್ರೇರಣೆಯಾಗುವಂತಹ ಘಟನೆಗಳನ್ನು ನಾಟಕಗಳ ಮೂಲಕ, ಟಿ.ವಿ.ಯ ಮೂಲಕ, ಸಿನಿಮಾ ಹಾಗೂ ರೇಡಿಯೋ ಮೂಲಕ, ಕಥೆಗಳ ಮೂಲಕ ಪ್ರತಿ ಮಗುವಿಗೂ ಮುಟ್ಟುವಂತೆ ಪ್ರಾರಂಭದಿಂದಲೇ ಆಗಬೇಕು. ಇಂದಿನ ಮಕ್ಕಳು ನಾಳಿನ ಪ್ರಜೆಗಳು. ಪ್ರಜಾ ಸರ್ಕಾರದಲ್ಲಿ ಯಾರು, ಯಾವ ಮಹತ್ವದ ಹುದ್ದೆಯನ್ನು ಯಾವಾಗ ಪಡೆಯುತ್ತಾರೋ ಹೇಳಲು ಬರುವುದಿಲ್ಲ. ಅಂತಹ ಸ್ಥಾನಗಳಿಗೆ ಹೋದವರು ದಕ್ಷರೂ, ಪ್ರಾಮಾಣಿಕರೂ, ರಾಷ್ಟ್ರ ಪ್ರೇಮಿಗಳೂ, ಆಗಿದ್ದಲ್ಲಿ, ಖಂಡಿತವಾಗಿಯೂ ರಾಷ್ಟ್ರಕ್ಕೆ ಒಳಿತಾಗುತ್ತದೆ. ರಾಷ್ಟ್ರಕ್ಕೆ ಒಳಿತಾದರೆ ಪ್ರಜೆಗಳೆಲ್ಲರೂ ಸುಖದಿಂದ ಬಾಳಲು ಸಾಧ್ಯವಾಗುತ್ತದೆ. ರಾಷ್ಟ್ರಪ್ರೇಮ ಪ್ರತಿಯೊಬ್ಬರಲ್ಲೂ ಇರಲೇಬೇಕಾದ ಒಂದು ಶ್ರೇಷ್ಠ ಗುಣ.

■

# ೧೧. ಜೀವನದ ಗುಟ್ಟು

ಜೀವನ ಎಷ್ಟು ವಿಚಿತ್ರ! ಇಲ್ಲಿ ಸಾವು-ನೋವು, ನರಳಿಕೆ, ಪ್ರೀತಿ, ವಿಶ್ವಾಸ, ದ್ವೇಷ-ಮೋಸ, ಅಸಹನೆ, ವಿರಸ, ಯೌವ್ವನ-ಮುಪ್ಪು ಇನ್ನೂ ಏನೋನೋ! ಎಲ್ಲಾ ಹಾಸುಹೊಕ್ಕು. ಬದುಕನ್ನೆಲ್ಲಾ ತಿರುವಿ ನೋಡಿದರೆ ಎಂತಹ ಅದ್ಭುತ! ಎಷ್ಟೆಲ್ಲ ನಿರಾಸೆ! ಜೀವನದಲ್ಲಿ ಸುಖ-ದುಃಖಗಳು ಹಗಲು-ರಾತ್ರಿಗಳಂತೆ ಮನುಷ್ಯನ ಸುತ್ತ ಹೆಣೆದುಕೊಂಡಿರುತ್ತವೆ. ಆದರೆ ಹಗಲು-ರಾತ್ರಿಗಳಂತೆ ವ್ಯವಸ್ಥಿತವಾಗಿ ಸುಖ-ದುಃಖಗಳು ಬರುವುದಿಲ್ಲ. ಕೆಲವು ಬಾರಿ, ಬರೀ ಸಂತೋಷದ ಸಂಗತಿಗಳೇ ಮುತ್ತಿರುತ್ತವೆ. ಮತ್ತೆ ಕೆಲವು ಸಲ ಬರೀ ದುಃಖ ದುಮ್ಮಾನಗಳೇ ಬೆನ್ನು ಹತ್ತಿರುತ್ತವೆ. ಮಗುದೊಮ್ಮೆ ಜೀವನ, ಸುಖ-ದುಃಖಗಳ ಸಮ್ಮಿಳನವಾಗಿರುತ್ತದೆ. ಆದರೆ ಕೆಲವರ ಜೀವನದಲ್ಲಿ ಬಾಳಿನುದ್ದಕ್ಕೂ ನೋವೇ. ಕಷ್ಟದ ಸರಪಳಿ ಸುತ್ತಿಬಿಟ್ಟಿರುತ್ತದೆ. ಬಿಡುಗಡೆಯೇ ಇಲ್ಲ. ಅದರಲ್ಲೇ ಹುಟ್ಟಿ, ಅದರಲ್ಲೇ ಬೆಳೆದು, ಅದನ್ನೇ ಉಂಡು, ಅದರಲ್ಲೇ ಕೊನೆಗೊಂಡವರೆಷ್ಟೋ ಮಂದಿ ಮತ್ತೆ ಕೆಲವರ ಜೀವನ ಸುಖದ ಸುಪ್ಪತ್ತಿಗೆ ಕಷ್ಟದ ನೆರಳೂ ಅವರ ಮೇಲೆ ಬೀಳುವುದಿಲ್ಲವೆಂದಲ್ಲ. ಅವರು ಅನುಭವಿಸುವ ಸುಖದಲ್ಲಿ, ಅನಿವಾರ್ಯವಾದ ಸಣ್ಣ-ಪುಟ್ಟ ತೊಂದರೆಗಳು ಅಲಕ್ಷಿಸುವ ಮಟ್ಟದಲ್ಲಿ ಇರುತ್ತವೆ ಅಷ್ಟೆ. ಅವರನ್ನೇ ಪಡೆದು ಬಂದವರು ಎನ್ನುತ್ತಾರೆ. ಜನ.

ಜನ ಅನ್ನುವುದುಂಟು ಒಳ್ಳೆಯವರಾಗಿ ಬದುಕಿದರೆ ಕೊನೆಗಾದರೂ ಸುಖ ಸಿಕ್ಕೇ ಸಿಕ್ಕುತ್ತದೆ. ಕೆಟ್ಟ ಜನರಿಗೆ ಕಷ್ಟ ಕಟ್ಟಿಟ್ಟ ಬುತ್ತಿ ಎಂದು. ಆದರೆ ಅನೇಕ ಜನರ ಜೀವನವನ್ನು ನೋಡಿದಾಗ ಈ ನಂಬಿಕೆ ಸುಳ್ಳೇನೋ ಎನ್ನಿಸುತ್ತದೆ. ಒಳ್ಳೆಯವರಾಗಿ ಬದುಕಿ, ಕಷ್ಟದಲ್ಲೇ ತೊಳಲುವ ಜನ ನಿರಾಶರಾಗಬಾರದೆಂದು, ನಿರಾಶರಾಗಿ ಒಳ್ಳೆಯತನ ಬಿಡಬಾರದೆಂದು, ಮೇಲಿನ ನಂಬಿಕೆಯನ್ನು, ಹಿಂದಿನ ಸಮಾಜದ ಹಿತೈಷಿಗಳು ಹಿಂದಿನ ಕಾಲದಲ್ಲಿ ಬಿತ್ತಿರಬಹುದೇ ಎನ್ನಿಸುತ್ತದೆ. ನಳ, ಧರ್ಮರಾಯ, ಸಾವಿತ್ರಿ, ಹರಿಶ್ಚಂದ್ರ ಮುಂತಾದವರ ಕಥೆಗಳನ್ನು ಸಮಾಜದಲ್ಲಿ ಆದರ್ಶಗಳು ನೆಲಸಲಿ ಎಂಬ ದೃಷ್ಟಿಯಿಂದ ಸೃಷ್ಟಿಸಿರಬಹುದೆ ಎಂಬ ಸಂದೇಹ ಬಂದರೂ ಅಸಹಜವೇನಲ್ಲ. ಆದರೆ ಒಮ್ಮೊಮ್ಮೆ, ಹಿಂದಿನಿಂದ ಬಂದ ನಂಬಿಕೆಯಲ್ಲೂ

ಸತ್ಯಾಂಶವಿದೆ ಎನ್ನಿಸುತ್ತಿದೆ. ಅನೇಕರು ಸೊಕ್ಕಿ, ಅಹಂಕಾರಿಗಳಾಗಿ ದುಷ್ಟರಾಗಿ ಮೆರೆದವರು, ಬಾಳಸಂಜೆಯಲ್ಲಿ ಮಣ್ಣು ಮುಕ್ಕಿ ಹೋಗಿದ್ದಾರೆ. ಆಗ, ಮೇಲೆ ಹೇಳಿದ ನಂಬಿಕೆ ನಿಜ ಎನ್ನಿಸುತ್ತದೆ. ಒಮ್ಮೊಮ್ಮೆ ಕೆಲವು ಘಟನೆಗಳನ್ನು ಅವಲೋಕಿಸಿದರೆ, 'ಇದು ಸುಳ್ಳು' ಎನ್ನಿಸುತ್ತದೆ. ಉದಾ: ಒಬ್ಬ ದೊಡ್ಡ ಮನೆತನದ ಹೆಣ್ಣು ಮಗಳೊಬ್ಬಳಿದ್ದಳಂತೆ. ಆಕೆಯ ಯಜಮಾನರಿಗೆ ದೊಡ್ಡ ಕಷ್ಟ ಬಂದು, ತುರ್ತಾಗಿ ಒಂದು ಒಂದ್ಯೆನೂರು ರೂ ಬೇಕಾಯಿತಂತೆ (ಅಂದರೆ ಈಗ ಅರವತ್ತು ಎಪ್ಪತ್ತು ವರ್ಷಗಳ ಹಿಂದೆ ಐದುನೂರು ರೂ ಎಂದರೆ, ಈಗಿನ ಒಂದು ಲಕ್ಷ ರೂ.ಗಳಿಗಿಂತ ಹೆಚ್ಚು). ದೊಡ್ಡ ಕುಳ, ಸಾಲ ಕೇಳಲು ಸಮಾಜದಲ್ಲಿ ಅಗೌರವ, ಅದಕ್ಕಾಗಿ ಆ ಹೆಣ್ಣು ಮಗಳ ತನ್ನ ಆತ್ಮೀಯಳೆನ್ನಿಸಿದ ಇನ್ನೊಬ್ಬ ಮಹಿಳೆಗೆ, ತನಗೆ ಹಣಬೇಕಾಗಿದೆ. ಅದಕ್ಕಾಗಿ ತನ್ನ ವಜ್ರದ ಓಲೆಗಳನ್ನು ಇಟ್ಟುಕೊಂಡು, ಐದುನೂರು ರೂ ಯಾರಲ್ಲಿಯಾದರೂ ತಂದುಕೊಡು ಇನ್ನು ಮೂರು ತಿಂಗಳಲ್ಲಿ ಹಿಂತಿರುಗಿಸುತ್ತೇನೆ ಎಂದು ಕೇಳಿದಾಗ, ಕಮಲದ ಹೂವಿನಂತಿದ್ದ ಆ ವಜ್ರದ ಓಲೆಗೆ ಮಾರು ಹೋದ ಆಕೆ, ಬೇರೆ ಯಾರಲ್ಲಿಯೋ ಕೇಳಿ ತಂದಿದ್ದೇನೆಂದು ಹೇಳಿ ತಾನೇ ಐದು ನೂರು ರೂ. ಕೊಟ್ಟು ವಜ್ರದೋಲೆ ಪಡೆದಳು. ಈ ಕಡೆ ಸಾಹುಕಾರನ ಪತ್ನಿಗೆ ಮೂರು ತಿಂಗಳಲ್ಲಿ ಐದುನೂರು ರೂ ಒದಗಿಸಲು ಆಗದೆ ನಾಲ್ಕು ತಿಂಗಳ ನಂತರ ಹಣಕೊಟ್ಟು ಓಲೆ ತಂದುಕೊಡಲು ಕೇಳಿದಳು. ಬಹು ಬೆಲೆ ಬಾಳುವ ವಜ್ರದ ಓಲೆಯನ್ನು ಲಪಟಾಯಿಸಬೇಕೆಂದು ಆ ಗೆಳತಿ ವಜ್ರದ ಓಲೆ, ತನ್ನಲ್ಲೇ ಇದ್ದರೂ ಬೇರೆ ಯಾರಿಂದಲೋ ತಂದಿದ್ದು, ಹಣವನ್ನು ಕೊಡಲು ಹೋದರೆ, 'ವಾಯಿದೆ ಮೀರಿದೆ ಕೊಡುವುದಿಲ್ಲ' ಎಂದಳು ಎಂದು ಹೇಳಿ ಸಾಹುಕಾರನ ಹೆಂಡತಿಗೆ ನಾಮ ತಿದ್ದಿದಳು. ನಂತರ ಅವರಿಬ್ಬರಲ್ಲೂ ವಿರಸ ಬಂದು, ಸ್ನೇಹ ಹೋಗಿ ದೂರದೂರಾದರು. ನಂತರ ಈ ಮಹಿಳೆ ಬಹಳ ವರ್ಷ ಆ ಓಲೆಗಳನ್ನು ಹಾಕಿಕೊಂಡು ಮೆರೆದಳು. ಸಾಹುಕಾರನ ಹೆಂಡತಿ ಅಸಹಾಯಕಳಾಗಿ ನೋವಿನಿಂದ ಪರಿತಪಿಸಿದಳು. ಈ ಸುದ್ದಿ ನೆರೆ-ಹೊರೆಯವರಿಗೆಲ್ಲಾ ಗೊತ್ತಿತ್ತು. ಆಗ ನೋಡಿದವರು, 'ನ್ಯಾಯಕ್ಕೆ ಕಾಲ ಎಲ್ಲಿದೆ, ಅನ್ಯಾಯ ಮಾಡಿದರೂ ಈಕೆ ಎಷ್ಟು ಮಜವಾಗಿದ್ದಾಳೆ' ಎಂದು ಆಡಿಕೊಳ್ಳುತ್ತಿದ್ದರು. ಎಷ್ಟೋ ವರ್ಷಗಳು ಉರುಳಿದವು. ಈ ಮೋಸಗಾತಿಯ ಗಂಡ ಸತ್ತ. ಮೂರು ಜನ ಗಂಡುಮಕ್ಕಳಿದ್ದರು. ಅನುಕೂಲವಾಗಿಯೂ ಇದ್ದರು. ಆದರೆ ವೃದ್ಧ ತಾಯಿಯ ಬಗ್ಗೆ ಯಾರೂ ಲಕ್ಷ್ಯ ಕೊಡಲಿಲ್ಲ. ಅಸಹಾಯಕಳಾಗಿ, ಒಬ್ಬಂಟಿಯಾಗಿ ಬದುಕುತ್ತಿದ್ದಳು. ವಜ್ರದ ಓಲೆಗಳನ್ನು ಮಾತ್ರ ಕಿವಿಯಿಂದ ತೆಗೆದಿರಲಿಲ್ಲ. ಒಂದು ರಾತ್ರಿ ಕಳ್ಳರು ಅವಳ ರೂಮಿಗೆ ನುಗ್ಗಿದರು. ಸಹಾಯಕ್ಕೆ ಅಕ್ಕ-ಪಕ್ಕದಲ್ಲಿ ಯಾರೂ ಇರಲಿಲ್ಲ. ಬಂದ ಕಳ್ಳರು ಯಾರಾದರೂ ಬಂದಾರೆಂಬ ಭಯದಿಂದ ಓಲೆಯನ್ನು

ಕಿವಿಯಿಂದ ಬಿಚ್ಚಿಕೊಳ್ಳುವಷ್ಟು ತಾಳ್ಮೆ ಇಲ್ಲದೆ, ಕಿವಿಯನ್ನೇ ಹರಿದು ಓಲೆಯನ್ನು ಕಿತ್ತುಕೊಂಡು ಹೋದರು. ಈ ಘಟನೆ ಕೇಳಿದಾಗ, ಅನ್ಯಾಯಕ್ಕೆ ಒಂದಲ್ಲ ಒಂದು ದಿನ ಶಿಕ್ಷೆಯಾಗಿಯೇ ತೀರುತ್ತದೆ ಎಂದು ನ್ಯಾಯದಿಂದ ಬದುಕಿದ ಮನುಷ್ಯ, ಸಮಾಧಾನದ ಉಸಿರು ಬಿಡುತ್ತಾನೆ. ಅನ್ಯಾಯದಿಂದ ಬದುಕುವವನು, ಅನ್ಯಾಯ ಮಾಡಲು ಸ್ವಲ್ಪ ಹಿಂಜರಿಯಬಹುದು.

ಮತ್ತೊಂದು ಉದಾಹರಣೆ ನೋಡೋಣ. ಒಬ್ಬ ಶ್ರೀಮಂತ ಮಹಿಳೆ. ಆಕೆಗೆ ತನ್ನ ಸುಖ–ಸಂತೋಷ ವೈಭವಗಳಲ್ಲಿ ನೆಲವೇ ಕಾಣದು. ಬಡವರಂತೂ ಆಕೆಯ ಕಣ್ಣಿಗೆ ಕಸ. ಆದರೆ ಅನೇಕ ಬಡವರಿಗೆ ಇಂತಹವರ ಸ್ನೇಹ ಮಾಡಿಕೊಳ್ಳಬೇಕು ಅವರನ್ನು ತೃಪ್ತಿಪಡಿಸಬೇಕು ಎಂಬ ಆಸೆ. ಅದೇ ರೀತಿ, ಒಬ್ಬ ಬಡ ಮುತ್ತೈದೆ, ಈ ಶ್ರೀಮಂತ ಮಹಿಳೆಯನ್ನು ಗೌರೀ ಪೂಜೆಗೆಂದು ಅರಿಶಿನ–ಕುಂಕುಮಕ್ಕೆ ಕರೆದಳು. ಆದರೆ ಈಕೆಗೆ ಆ ಬಡ ಮಹಿಳೆಯೊಡನೆ ಮಾತಾಡಲು, ಅವರ ಮನೆಗೆ ಹೋಗಲು ಅನಾದರ. ಕುಂಕುಮ ಅಲ್ಲೇ ಮಣೆಯ ಮೇಲಿಟ್ಟು ಹೋಗಿ, ನಾನು ಮಡಿಯಲ್ಲಿದ್ದೇನೆ ಎಂದಳು ಶ್ರೀಮಂತ ಗೃಹಿಣಿ. ಕರೆಯಲು ಬಂದ ಬಡಮಹಿಳೆಗೆ ಅವಮಾನವಾದಂತಾಯಿತು. ನೋವಾಯ್ತು. ಅಪಮಾನದಿಂದ ದುಃಖ ಹತ್ತಿಕ್ಕಿಕೊಂಡು ವಾಪ್ಸು ಹೋದಳು. ಈ ಅವಮಾನ ಆಕೆಯ ಮನಸ್ಸಿಗೆ ತುಂಬಾ ನೋವುಂಟು ಮಾಡಿತು. ಅದನ್ನು ಮರೆಯಸಾಧ್ಯವಾಯ್ತು. ವರ್ಷಗಳುರುಳಿದವು. ಕಾಲಗರ್ಭದಲ್ಲಿ ಇವರೆಲ್ಲೋ, ಅವರೆಲ್ಲೋ. ಆದರೆ ವಿಧಿ ವಿಲಾಸ! ಸುಮಾರು ಇಪ್ಪತ್ತು–ಇಪ್ಪತ್ತೈದು ವರ್ಷಗಳ ನಂತರ, ಈ ಶ್ರೀಮಂತ ಗೃಹಿಣಿಯ ಸಂಪತ್ತು ಕರಗುತ್ತಾ ಬಂತು. ಈಕೆಯ ಮಗ ಆ ಬಡ ಮುತ್ತೈದೆಯ ಮಗಳನ್ನು ಮದುವೆಯಾದ. ಸೊಸೆ ಬಂದ ಮೇಲೆ ಅತ್ತೆ ಎಲ್ಲದಕ್ಕೂ ಸೊಸೆಯನ್ನೇ ಕೇಳಿಕೊಂಡಿರಬೇಕಾಯ್ತು. ಅವಳ ಮರ್ಜಿಯಲ್ಲಿ ಬದುಕಬೇಕಾಯ್ತು ಯಾರೂ ದಿಕ್ಕಿಲ್ಲವಾಗಿದ್ದ ಸೊಸೆಯ ತಾಯಿ ಮಗಳ ಮನೆಗೇ ಬಂದು ಉಳಿದಳು. ಸೊಸೆಯ ಪ್ರಭಾವವಿದ್ದ ಆ ಮನೆಯಲ್ಲಿ ಆಕೆಯ ತಾಯಿಗೂ ಮಹತ್ವದ ಸ್ಥಾನ ಆಗ ಈ ಮಹಿಳೆ ಸೊಸೆ ಹಾಗೂ ಅವಳ ತಾಯಿಯ ಕೃಪಾಶಯದಲ್ಲಿ ಬದುಕುವಂತಾಯ್ತು. ಈ ಘಟನೆ ಕೇಳಿದಾಗ, ವಿಧಿ ಹೇಗೆ ಸೇಡು ತೀರಿಸಿತು ಎನ್ನಿಸುತ್ತದೆ. ಆದುದರಿಂದ ಮನುಷ್ಯ, ಚೆನ್ನಾಗಿ ಇದ್ದಾಗ ವಿವೇಕದಿಂದ ಬಾಳಬೇಕು; ಸೊಕ್ಕಿ ಮೆರೆಯಬಾರದು, ಕಣ್ಣು ಮುಚ್ಚು ನಡೆಯಬಾರದು ಎಂಬ ಎಚ್ಚರ ಇರಬೇಕು ಎಂದುಕೊಳ್ಳಬೇಕು ಹಾಗೆ ನಡೆದವನೇ ವಿವೇಕಿ ಎನ್ನುತ್ತಾನೆ.

ಆದರೇನು? ಜಗತ್ತು ಹೀಗೆ ಬದುಕುತ್ತಿದೆಯೆ? ಎಂದರೆ ಇಲ್ಲ ಎಂದು ಹೇಳಬಹುದು. ಇಲ್ಲಿ ಪ್ರೀತಿ ತೋರಿಸಿದವರನ್ನು ದ್ವೇಷಿಸುವವರಿದ್ದಾರೆ. ಸಹಾಯ

ಮಾಡಿದವರಿಗೆ ಮೋಸಗೊಳಿಸುವವರಿದ್ದಾರೆ. ದ್ವೇಷ ಮಾಡಿದವರನ್ನು ಪ್ರೀತಿಸುವವರು, ಮೋಸ ಮಾಡಿದವರಿಗೆ ಸಹಾಯ ಮಾಡುವವರು ಇದ್ದಾರೆ ಇಲ್ಲಿ ಸಹಾಯ ಮಾಡಿದವರಿಗೆ, ತಮ್ಮ ಕೆಲಸ ಮಾಡಿಸಿಕೊಂಡಾದ ಮೇಲೆ ಕೃತಘ್ನರಾಗಿ ಕೈಕೊಟ್ಟು ಹೋಗುವವರೂ ಇದ್ದಾರೆ. ಆದರೆ ಈ ಒಳ್ಳೆಯ ಮನುಷ್ಯನ ಕಷ್ಟಕಾಲದಲ್ಲಿ ಯಾರೋ ಸಂಬಂಧವಿಲ್ಲದ ಅಪರಿಚಿತರೊಬ್ಬರು ಬಂದು ಸಹಾಯಕರಾಗುತ್ತಾರೆ. ಇದನ್ನು 'ಅಕಸ್ಮಾತ್' ಎಂದುಕೊಳ್ಳಬೇಕೆ ಅಥವಾ ಒಳ್ಳೆಯ ಕೆಲಸ ಮಾಡುತ್ತಿದ್ದರೆ, ಉಪಕಾರ ಹೊಂದಿದವರು ಕೃತಘ್ನರಾದರೂ ದೇವರು ಮತ್ತೊಬ್ಬ ಯಾರನ್ನೋ ಕಳಿಸಿ ಸಕಾಲದಲ್ಲಿ ಸಹಾಯ ಮಾಡುತ್ತಾನೆ ಎಂದು ನಂಬಬೇಕೆ?

ಜಗತ್ತಿನಲ್ಲಿ ಹುಟ್ಟು-ಸಾವು ದಿನ ನಿತ್ಯದ ಘಟನೆ. ಹುಟ್ಟಿದವನಿಗೆ ಸಾವು ನಿಶ್ಚಿತ. ಸಾವು ಹುಟ್ಟಿದಂದೇ ಬರಬಹುದು ಅಥವಾ ತಡವಾಗಿ ಬರಬಹುದು ; ಎಲ್ಲಿಯಾದರೂ ಬರಬಹುದು ; ಯಾವಾಗಲಾದರೂ ಬರಬಹುದು ; ಯಾವ ರೀತಿಯಲ್ಲಾದರೂ ಬರಬಹುದು. ಆದರೂ ಮನುಷ್ಯ ತನಗಿರುವುದೆಲ್ಲಾ 'ಸ್ಥಿರ' ಎಂದೇ ಬದುಕುತ್ತಾನೆ. ಸಾಯುವತನಕ ತಾನು ಸಾಯುವುದೇ ಇಲ್ಲ ಎಂಬಂತೆ ಬದುಕುತ್ತಾನೆ. ತನ್ನ ಬದುಕಿಗಾಗಿ, ಸುಖಕ್ಕಾಗಿ, ಅಂತಸ್ತಿಗಾಗಿ, ಜಂಭಕ್ಕಾಗಿ, ದೊಡ್ಡಸ್ತಿಕೆಗಾಗಿ, ಸ್ವಾರ್ಥಕ್ಕಾಗಿ ಏನು ಬೇಕಾದರೂ ಮಾಡುತ್ತಾನೆ. ಜೀವನ 'ಶಾಶ್ವತ' ಎಂಬಂತೆ ಮೆರೆಯುತ್ತಾನೆ. ಈ ಮೆರೆದಾಟದಲ್ಲಿ ವಿವೇಕವನ್ನು ಕಳೆದುಕೊಳ್ಳುತ್ತಾನೆ. ಮೋಸ, ವಂಚನೆ, ದ್ರೋಹ, ದ್ವೇಷ, ಕೊಲೆ, ಸುಲಿಗೆ, ಕೃತಘ್ನತೆ ಇವೆಲ್ಲವೂ ಅವನಿಗೆ ಆಪ್ಯಾಯಮಾನ. ಮಾಡಿದ ದುಷ್ಟತನದಿಂದ ಲಾಭ ದೊರಕಿದರೆ, ಮತ್ತಷ್ಟು ಉದ್ಧಟತನ. ಮತ್ತೊಷ್ಟು ಕ್ರೌರ್ಯ, ಹಿಂಸೆ, ದುರಾಸೆ, ಅನಾಚಾರ, ಅತ್ಯಾಚಾರ ಈ ಗುಣಗಳಿಂದಲೇ ಜಗತ್ತಿನಲ್ಲಿ ಅಶಾಂತಿ, ಅತೃಪ್ತಿ, ದುಃಖ, ನೋವು, ಅನ್ಯಾಯಗಳು. ಈ ದುರ್ಗುಣಗಳ ದೊಂಬರಾಟದಲ್ಲಿ ಒಳ್ಳೆಯವರೂ – ಕೆಟ್ಟವರೂ, ದೊಡ್ಡವರೂ, ಚಿಕ್ಕವರೂ, ವಿದ್ಯಾವಂತರೂ, ನಿರಕ್ಷರ ಕುಕ್ಷಿಗಳೂ. ಬಡವರು-ಶ್ರೀಮಂತರು, ಹಳ್ಳಿಗರು-ಪಟ್ಟಣಿಗರು, ಸ್ತ್ರೀಯರು-ಪುರುಷರು, ಎಲ್ಲರೂ ಈ ದಳ್ಳುರಿಯಲ್ಲಿ ಬೆಂದು, ನೆಮ್ಮದಿ ಇಲ್ಲದೆ, ಒದ್ದಾಡಿ – ಗುದ್ದಾಡಿ ಸೊರಗಿ ಕೊರಗಿ ಸಾಯುವವರೆ.

ಒಂದು ವೇಳೆ ಮನುಷ್ಯ ವಿವೇಕಿಯಾಗಿ ನಡೆಯುವಂತಿದ್ದರೆ? ಪ್ರೀತಿ, ಮಮತೆ, ಸಹಾಯ ಸಹಕಾರಗಳನ್ನು ಪರಸ್ಪರ ಹಂಚಿಕೊಳ್ಳುತ್ತಾ, ಒಬ್ಬರ ಸುಖವನ್ನು ಮತ್ತೊಬ್ಬರು ನೋಡಿದಾಗ, ಕರುಬದೆ ಸಂತೋಷಪಡುವ ದೈವೀ ಗುಣ ಪ್ರತಿಯೊಬ್ಬ ಮನುಷ್ಯನಲ್ಲೂ ಇರುವುದಾಗಿದ್ದರೆ, ಜಗತ್ತು ಹೇಗಿರಬಹುದಿತ್ತು? ಆಗ ಕೋರ್ಟು, ಕಛೇರಿಗಳು ಬೇಕಿರುತ್ತಿರಲಿಲ್ಲ. ಯುದ್ಧದ ಸಲುವಾಗಿ ರಾಷ್ಟ್ರದ ಆದಾಯದ

ಬೃಹತ್ ಭಾಗವನ್ನು ತೆಗೆದಿಡಬೇಕಾಗುತ್ತಿರಲಿಲ್ಲ. ಯುದ್ಧವಿರಲಿ ಇಲ್ಲದಿರಲಿ ಮಿಲಿಟರಿಯು ಸಿದ್ಧತೆ ಮಾಡಿಕೊಂಡು ನಿಲ್ಲಬೇಕಿರಲಿಲ್ಲ. ಕೊಲೆ-ಸುಲಿಗೆಗಳಿರುತ್ತಿರಲಿಲ್ಲ. ಎಲ್ಲೆಡೆ ಸಂತಸ; ಎಲ್ಲೆಡೆ ಪ್ರಗತಿ. ನಿಂತಲ್ಲಿ ಕೂತಲ್ಲಿ ನಗು-ಆನಂದ ಯಾರಿಂದ ಯಾರಿಗೂ ಭಯವಿಲ್ಲ – ನೋವಿಲ್ಲ.

ದುಷ್ಟ ಸ್ವಭಾವಗಳನ್ನು ಬಿಟ್ಟರೆ, ಮಾನವ ನೆಮ್ಮದಿಯಿಂದಿರಬಹುದು. ಆದರೂ ಅವನು ಹಾಗೇಕಿಲ್ಲ? ಈಚೆಗಂತೂ ಪ್ರಗತಿಯ ಹೆಸರಿನಲ್ಲಿ, ನಾಗರೀಕತೆಯ ನೆರಳಿನಲ್ಲಿ ಆಗಬಾರದುದೆಲ್ಲವೂ ಆಗುತ್ತಿದೆ, ನಡೆಯಬಾರದುದೆಲ್ಲವೂ ನಡೆಯುತ್ತಿದೆ. ಕಾಣಬಾರದುದೆಲ್ಲವೂ ಕಾಣುತ್ತಿದೆ. ಈ ಸ್ಥಿತಿಯಿಂದ ಜಗತ್ತಿನಲ್ಲೆಲ್ಲಾ ತಲ್ಲಣ – ತುಮುಲ 'ಭವಿಷ್ಯ ಕರಾಳ' ಎನ್ನುವ ಆತಂಕ. ಎಲ್ಲಿ ಯಾವಾಗ ಯುದ್ಧದ ಕಿಡಿ ಹಾರುತ್ತದೆಯೋ ಎನ್ನುವ ಭೀತಿ, ಯುದ್ಧ ಪ್ರಾರಂಭವಾಗಿ ಯಾವ ಕ್ಷಣದಲ್ಲಿ ಜಗತ್ತೇ ಸುಟ್ಟು ಭಸ್ಮವಾದೀತೋ ಎನ್ನುವ ಭಯ. ಯಾರು, ಯಾವಾಗ, ಎಲ್ಲಿ ಜಗತ್ತನ್ನು ವಿನಾಶಕ್ಕೆ ಗುರಿ ಮಾಡುತ್ತಾರೋ ಎಂಬ ತಳಮಳ. ಮಾನವನ ಅಂತರಂಗದಲ್ಲಿರುವ ಕ್ರೌರ್ಯ ಜಗತ್ತನ್ನು ನಾನಾ ರೀತಿಯಿಂದ ಕಸಿವಿಸಿಗೊಳ್ಳುವಂತೆ ಮಾಡುತ್ತಿದೆ. ಯುದ್ಧವಿಲ್ಲದಾಗಲೂ ಎಲ್ಲಿ ದರೋಡೆಯಾಗುವುದೋ, ಕೊಲೆಯಾಗುವುದೋ, ಸುಲಿಗೆಯಾಗುವುದೋ ಎಂಬ ಭಯ ಯಾರಿಗೂ ತಪ್ಪಿದ್ದಲ್ಲ. ಆದರೂ ಮನುಷ್ಯ ದುಷ್ಟತನವನ್ನು ಬಿಡಲಾರನೇಕೆ ಎನ್ನುವುದೊಂದು ಯಕ್ಷಪ್ರಶ್ನೆ. ಅವನ ದುಷ್ಟತನ ಬೇರೆಯವರನ್ನಷ್ಟೇ ನಾಶಗೊಳಿಸುವುದಿಲ್ಲ, ತನ್ನನ್ನೂ ನುಂಗಿ ನೀರು ಕುಡಿಯುತ್ತದೆ ಎಂದು ಗೊತ್ತಿದ್ದರೂ ಮಾನವ ತನ್ನ ದುಷ್ಟಗುಣಗಳನ್ನು ಬಿಡಲಾರ. ಇದೇ ಜೀವನದ ಗುಟ್ಟು.

■

# ೧೨. ಪ್ರಜಾಪ್ರಭುತ್ವದ ಪ್ರಜೆಗಳು

ನಮ್ಮ ದೇಶದಲ್ಲಿರುವುದು ಪ್ರಜಾಪ್ರಭುತ್ವ. ಇಲ್ಲಿ ಪ್ರಜೆಗಳೇ ಪ್ರಭುಗಳು. ಇದು ಒಪ್ಪತಕ್ಕದ್ದೆ. ಏಕೆಂದರೆ ಇಲ್ಲಿ ನಮ್ಮನ್ನು ಆಳುವವರು ಪ್ರಜೆಗಳಿಂದ ಚುನಾಯಿಸಿ ಕಳಿಸಲ್ಪಟ್ಟವರು. ಆದುದರಿಂದ ಪರೋಕ್ಷವಾಗಿ ಪ್ರಜೆಗಳೇ ಆಡಳಿತ ನಡೆಸುತ್ತಾರೆಂದು ನಿರ್ವಿವಾದವಾಗಿ ಹೇಳಬಹುದು.

ಪ್ರಜಾಪ್ರಭುತ್ವವಿರುವ ರಾಷ್ಟ್ರದ ಪ್ರಜೆಗಳು ಅತ್ಯಂತ ಜವಾಬ್ದಾರಿಯಿಂದ ಬದುಕಬೇಕಾಗುತ್ತದೆ. ರಾಷ್ಟ್ರದ ನಿಯಮಗಳನ್ನು ಅನುಸರಿಸಿ ಕೆಲಸ ಮಾಡಬೇಕಾಗುತ್ತದೆ. ಕಾಯಿದೆಗಳನ್ನು ರಚಿಸುವವರು ಜಾರಿಗೊಳಿಸುವವರು, ಪ್ರಜೆಗಳ ಪ್ರತಿನಿಧಿಗಳೇ. ಆದ್ದರಿಂದ ಅಪ್ರತ್ಯಕ್ಷವಾಗಿ ತಾನೇ ರಚಿಸಿದ ಕಾಯಿದೆಗಳನ್ನು ಮುರಿಯುವುದರಲ್ಲಿ ಜನರು ಒಬ್ಬರಿಗಿಂತ ಒಬ್ಬರು ಮೀರಿಸುತ್ತಾರೆ. ನಿಜವಾಗಿ ಹೇಳುವುದಾದರೆ, ಪ್ರತಿಯೊಬ್ಬ ಪ್ರಜೆಯೂ ತನ್ನ ಕರ್ತವ್ಯಗಳನ್ನು ಜವಾಬ್ದಾರಿಯಿಂದಲೂ, ರಾಷ್ಟ್ರಭಿಮಾನದಿಂದಲೂ ನಿರ್ವಹಿಸಬೇಕಾಗುತ್ತದೆ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಬಹುಜನರು ಬೇಜವಾಬ್ದಾರಿಯುತ ನಡವಳಿಕೆಗಳನ್ನು ತೋರಿಸುತ್ತಿದ್ದಾರೆ. ರಾಷ್ಟ್ರಭಿಮಾನದ ಮಾತಂತೂ ಪುಸ್ತಕದ, ವೇದಿಕೆಯ ಮೇಲಿನ ಶಬ್ದವಾಗಿ ಉಳಿದಿದೆ. ರಾಷ್ಟ್ರಕ್ಕಾಗಿ ರಾಷ್ಟ್ರದ ಹಿತಕ್ಕಾಗಿ, ಗೌರವಕ್ಕಾಗಿ, ಏಳ್ಗೆಗಾಗಿ ಚಿಂತಿಸುವವರ ಸಂಖ್ಯೆ ದಿನದಿನಕ್ಕೆ ಇಳಿಮುಖವಾಗುತ್ತದೆ. ಸ್ವಾರ್ಥಮೂಲವಾದ ಬಾಳು ಬದುಕುವುದೇ ಇಂದಿನ ಜನರ ತತ್ವವಾಗಿದೆ. ಹಾಗಿದ್ದರೆ ಮಾತ್ರ ಈಗಿನ ಕಾಲದಲ್ಲಿ ಬದುಕುಳಿಯಲು ಸಾಧ್ಯ ಎಂಬ ನಂಬುಗೆ ಜನಜನಿತವಾಗಿದೆ. ಹಿಂದಿನ ಕಾಲದಲ್ಲಿಯಂತೆ, ರಾಷ್ಟ್ರಭಿಮಾನದಿಂದ ದೇಶಕ್ಕಾಗಿ ಏನು ತ್ಯಾಗ ಬೇಕಾದರೂ ಮಾಡಲು ಸಿದ್ಧವಾಗಿರುವ ಜನರು ಸಾಕಷ್ಟು ಸಂಖ್ಯೆಯಲ್ಲಿಲ್ಲವಾದರೂ ಅಲ್ಲಲ್ಲಿ ಕೆಲವರಾದರೂ ಇದ್ದೇ ಇದ್ದಾರೆ. ಅಂತಹವರನ್ನು ಆದರ್ಶವಾಗಿಟ್ಟುಕೊಂಡು ಜೀವನ ರೂಪಿಸಿಕೊಂಡರೆ, ದೇಶದ ಸ್ಥಿತಿ ಉತ್ತಮಗೊಂಡೀತು, ಆದರೆ, ಆಧುನಿಕರು ಅವರನ್ನು ಆದರ್ಶವಾಗಿಟ್ಟುಕೊಳ್ಳುವುದಿರಲಿ, ಅಂಥವರನ್ನು ಹೀನಾಯವಾಗಿ ನೋಡದಿದ್ದರೆ ಸಾಕಾಗಿದೆ. ಆದರ್ಶವಾದಿಗಳನ್ನು ಇಂದಿನ ಜನರು ಕೆಲಸಕ್ಕೆ ಬಾರದವರೆಂದು ಅಪಹಾಸ್ಯ ಕೂಡ ಮಾಡುತ್ತಾರೆ. ಅವರು ಮೂರ್ಖರೆಂಬಂತಹ

ರೀತಿಯಲ್ಲಿ ಕಾಣುತ್ತಾರೆ. ವ್ಯವಹಾರ ಜ್ಞಾನವಿಲ್ಲದ ಅವ್ಯವಹಾರಿಗಳೆಂದು ಅವರನ್ನು ಕಡೆಗಣಿಸುತ್ತಾರೆ. ಈ ಹಿನ್ನೆಲೆಯ ಅಭಿಪ್ರಾಯದ ಜನರೇ ಹೆಚ್ಚಾಗಿರುವುದರಿಂದ ರಾಷ್ಟ್ರಕ್ಕೆ ಕೇಡು ಮಾಡುವವರ ಸಂಖ್ಯೆ ಅಧಿಕವಾಗುತ್ತಿದೆ. ಜನರು, ತಾವು ಮಾಡುವ ಕೆಲಸಗಳು, ಕೈಗೊಳ್ಳುವ ನಿರ್ಣಯಗಳು, ದೇಶದ ಹಿತದೃಷ್ಟಿಯಿಂದ ಎಷ್ಟು ಮಾರಕವೆಂದು ಯೋಚಿಸದೆ, ವೈಯಕ್ತಿಕ ಲಾಭ, ಸ್ವಹಿತಗಳನ್ನೇ ಮಹತ್ತಾಗಿ ಭಾವಿಸಿರುವುದೇ ಇಂದು ರಾಷ್ಟ್ರದಲ್ಲಿ ಅಶಾಂತಿಯ, ಅಭದ್ರತೆಯ, ಭಯೋತ್ಪಾದಕವಾದ ಸ್ಥಿತಿಗೆ ಅವಕಾಶಮಾಡಿದೆ.

ಇಂದಿನ ಈ ಪರಿಸ್ಥಿತಿಯಲ್ಲಿ, ಸತ್ಪ್ರಜೆಗಳಾದವರು ದೇಶದ ಉದ್ಧಾರಕ್ಕಾಗಿ ಕಾರ್ಯತತ್ಪರರಾಗುವುದು ಅವಶ್ಯಕವಾಗಿದೆ. ಬ್ರಿಟಿಷರ ಕಾಲದಲ್ಲಿ ಲೆಕ್ಕವಿಲ್ಲದಷ್ಟು ಭಾರತೀಯರು ತಮ್ಮ ಜೀವವನ್ನೇ ಪಣವಾಗಿಟ್ಟು ಭಾರತದಲ್ಲಿ ಬ್ರಿಟಿಷರ ಆಳ್ವಿಕೆ ಕೊನೆಗೊಳ್ಳುವಂತೆ ಮಾಡಿದರು. ಬ್ರಿಟಿಷರು ಜಗತ್ತಿನ ರಾಷ್ಟ್ರಗಳನ್ನು ಸ್ವಾಧೀನಪಡಿಸಿಕೊಂಡು ನಿರಂಕುಶ ಪ್ರಭುಗಳಾಗಲು ಹೊರಟಿದ್ದರು. ಹಾಗಾಗಿ ಇಂದು ಎಲ್ಲೆಡೆಯಲ್ಲಿ ಬಡತನ, ಅಜ್ಞಾನ, ಭ್ರಷ್ಟಾಚಾರ, ಶೋಷಣೆ ಜೀವನದಲ್ಲಿ ಹಾಸುಹೊಕ್ಕಾಗಿದೆ.

ಸಾಮಾಜಿಕ ಹಾಗೂ ವೈಯಕ್ತಿಕ ಜೀವನದಲ್ಲಿ ವರದಕ್ಷಿಣೆಯ ಪಿಡುಗು ಒಂದು ದೊಡ್ಡ ಸಮಸ್ಯೆಯಾಗಿದೆ. ಅಸಂಸ್ಕೃತ ಜನರು ಸುಶಿಕ್ಷಿತರ ಸೋಗು ಹಾಕುತ್ತಾ ಸಮಾಜದಲ್ಲಿ ಉತ್ತಮರಂತೆ ಕಾಣಿಸಿಕೊಳ್ಳುತ್ತಾ, ವರದಕ್ಷಿಣೆಯ ಆಸೆಗಾಗಿ ಹೇಯ ಕೃತ್ಯದಲ್ಲಿ ತೊಡಗಿದ್ದಾರೆ. ವರದಕ್ಷಿಣೆ ಪಿಡುಗನ್ನು ಹೋಗಲಾಡಿಸಲು ಬೇಕಾದಷ್ಟು ಕಾನೂನುಗಳನ್ನು ರಚಿಸಿದ್ದರೂ, ಹಣದಾಹಿಗಳಾದ ಜನರ ಕಾರಣವಾಗಿ, ಪ್ರಯೋಜನವಾಗಿಲ್ಲ. ವರದಕ್ಷಿಣೆಯ ಸಲುವಾಗಿ ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯಗಳು, ಪ್ರಾಣಹಾನಿಗಳು, ಕಾಯಿದೆಗಳಿಗೆ ಸವಾಲಾಗಿ ನಿಂತಿವೆ. ಸತ್ಪ್ರಜೆಗಳು, ಸರ್ಕಾರ, ಸಮಾಜ ಈ ಸವಾಲುಗಳನ್ನು ಎದುರಿಸಿ, ಜನರಿಗೆ ನ್ಯಾಯ ಒದಗಿಸಬೇಕು. ಮಟ್ಟ ಹಾಕಬೇಕು, ವರದಕ್ಷಿಣೆಯೆಂಬ ಪಿಡುಗನ್ನು ನಿರ್ಮೂಲಮಾಡಬೇಕು. ಜೀವನದಲ್ಲಿ ಹಾಸು–ಹೊಕ್ಕಾಗಿರುವ ಸ್ವಾರ್ಥಪರತೆಯನ್ನು ನಿವಾರಿಸುವಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡರೆ, ಸವಾಲುಗಳನ್ನೆದುರಿಸುವ ಕೆಲಸ ಸುಲಭವಾಗುತ್ತದೆ.

ಈಗ ದುಷ್ಟ ಸಮಸ್ಯೆಗಳನ್ನು ಸಮರ್ಥವಾಗಿ ನಿವಾರಿಸಿದರೆ ಭಾರತದ ಭವಿಷ್ಯ ಉಜ್ವಲವಾದೀತು. ದುಷ್ಟ ಸವಾಲುಗಳನ್ನೆಸೆಯುತ್ತಿರುವವರನ್ನು ಮಟ್ಟ ಹಾಕುತ್ತೇವೆಂಬ, ಭ್ರಷ್ಟಾಚಾರವನ್ನು ನಿರ್ಮೂಲ ಮಾಡಿಯೇ ತೀರುತ್ತೇವೆ ಎಂಬ, ವರದಕ್ಷಿಣೆ ಪಿಡುಗನ್ನು ದೇಶದಲ್ಲಿ ಪ್ಲೇಗನ್ನು ನಿರ್ನಾಮ ಮಾಡಿದಂತೆ ಮಾಡುತ್ತೇವೆ ಎಂಬ, ದೇಶದ

ಜನರು ರಾಷ್ಟ್ರ ಪ್ರೇಮಿಗಳಾಗುವಂತಹ ಶಿಕ್ಷಣ ಕೊಡುತ್ತೇವೆಯೆಂಬ, ಜಾತೀಯತೆಯನ್ನು ಹೊಡೆದೋಡಿಸುತ್ತೇವೆ ಎಂಬ, ಗಾಂಧೀಜಿಯವರು ಆಶಿಸಿದಂತಹ ರಾಮರಾಜ್ಯವನ್ನು ತರುತ್ತೇವೆ ಎಂಬ ಪ್ರತಿ ಸವಾಲನ್ನು ಹಾಕುವ ಜನರು ಮುಂದೆ ಬರಬೇಕಾಗಿದೆ. ಇಂತಹ ಅವಶ್ಯಕತೆ ಈಗ ಬಹಳವಾಗಿದೆ.

ದೇಶಕ್ಕೆ ಸಮಾಜಕ್ಕೆ, ಜನರಿಗೆ ಸಮಸ್ಯೆಗಳುಂಟಾಗುವಂತಹ ಸವಾಲನ್ನು ಹಾಕುವವರಿಗೆ ಈಗ ಕೊರತೆ ಇಲ್ಲ. ಆದರೆ ಭಾರತ ಜಗತ್ತಿನಲ್ಲಿ ಗೌರವದಿಂದ ತಲೆ ಎತ್ತಿ ನಿಲ್ಲುವಂತೆ ಮಾಡಬಲ್ಲ, ರಾಷ್ಟ್ರವನ್ನು ಸಾಲದ ಹೊರೆಯಿಂದ ಪಾರಾಗಿಸಬಲ್ಲ, ದೇಶದ ಸಮಸ್ಯೆಗಳನ್ನು ನಿರ್ಮೂಲ ಮಾಡಬಲ್ಲ ರಾಷ್ಟ್ರಪ್ರೇಮಿಗಳಾದ ಮುತ್ಸದ್ದಿಗಳ ಅವಶ್ಯಕತೆ ಇಂದು ನಮ್ಮ ಮುಂದೆ ಇದೆ. ಅದು ಕೈಗೂಡಿದಾಗ ಮಾತ್ರ ಈಗಿರುವ ಅನಿಷ್ಟ ಸವಾಲುಗಳಿಗೆ ಪ್ರತಿಯಾಗಿ ಸಮರ್ಥ ಉತ್ತರ ದೊರಕಿ, ದೇಶದ ಉದ್ಧಾರವಾಗಲು ಸಾಧ್ಯ. ■

## ೧೩. ರಚನಾತ್ಮಕ ಧರ್ಮ

ಪ್ರತಿಯೊಬ್ಬ ವ್ಯಕ್ತಿಯ ಜೀವನವೂ ಧರ್ಮಸಹಿತವಾಗಿರಬೇಕು; ಧರ್ಮರಹಿತವಾಗಿರಬಾರದು. ಸಾಮಾನ್ಯವಾಗಿ 'ಧರ್ಮ' ಎಂದ ತಕ್ಷಣ, ಜನರು 'ಜಾತಿ' ಎಂದು ಅರ್ಥೈಸಿಬಿಡುತ್ತಾರೆ. ಆದರೆ ನಿಜವಾದ ಅರ್ಥದಲ್ಲಿ 'ಧರ್ಮ' ಎಂದರೆ ನೀತಿ. ನೀತಿ, ಯಾರಿಗೆ ಬೇಡ! ಎಲ್ಲರಿಗೂ ಅವಶ್ಯಕ. ನೀತಿಯ ನೆಲಗಟ್ಟಿನ ಮೇಲೆ ನಿಂತುದೆಲ್ಲವೂ ಶಾಶ್ವತ, ಸುಂದರ, ಧರ್ಮ, ಮಾನವಜೀವನದಲ್ಲಿ ಹಾಸುಹೊಕ್ಕಾಗಿರಬೇಕು. ಮಾನವ ಬದುಕುವ ಎಲ್ಲಾ ಕ್ಷೇತ್ರಗಳಲ್ಲಿ ಧರ್ಮ ಒಂದಲ್ಲ ಒಂದು ರೀತಿಯಿಂದ ಮಹತ್ತರ ಪಾತ್ರ ವಹಿಸುವಂತಿರಬೇಕು. ಪ್ರತಿಯೊಬ್ಬರೂ ಆಯಾ ಸಂದರ್ಭಕ್ಕನುಗುಣವಾಗಿ ನಡೆಯಲು, ವ್ಯಕ್ತಿಧರ್ಮ, ಕುಟುಂಬಧರ್ಮ, ವೃತ್ತಿಧರ್ಮ, ಸಮಾಜಧರ್ಮ, ರಾಷ್ಟ್ರಧರ್ಮಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳಬೇಕು. ಇವೆಲ್ಲವುಗಳ ಮೊತ್ತವು, ವ್ಯಕ್ತಿಯನ್ನು ಮಾನವಧರ್ಮದ ನಿಯಮಗಳನ್ನು ಪಾಲಿಸುವಂತೆ ಮಾಡುತ್ತದೆ ಅಂದರೆ, ಪ್ರತಿಯೊಂದು ಕ್ಷೇತ್ರದಲ್ಲಿಯೂ ಮಾನವರು, ನೀತಿ–ನಿಯಮಗಳಿಗನುಸಾರವಾಗಿ ಬದುಕುವಂತೆ ಮಾಡುತ್ತದೆ. ಆ ನೀತಿ ನಿಯಮಗಳನ್ನು ವಿಶಾಲಾರ್ಥದಲ್ಲಿ 'ಧರ್ಮ' ಎಂದು ಕರೆಯುತ್ತೇವೆ. ಈ ಶಬ್ದವನ್ನು ವೀರಶೈವ ಧರ್ಮ, ಬ್ರಾಹ್ಮಣಧರ್ಮ, ಕ್ರೈಸ್ತಧರ್ಮ, ಬೌದ್ಧಧರ್ಮ, ಮುಸ್ಲಿಂ ಧರ್ಮ ಎನ್ನುವಾಗ ಬಳಸುವುದರಿಂದ, ಜನರು ಈ ಶಬ್ದಕ್ಕೆ 'ಜಾತಿ' ಎಂದು ಅಪಾರ್ಥ ಮಾಡಿಕೊಳ್ಳುತ್ತಾರೆ. ಇಲ್ಲಿ ಆ ಶಬ್ದವನ್ನು ಬಳಸಲು ಕಾರಣ, ಕ್ರೈಸ್ತಧರ್ಮ ಎಂದರೆ, ಕ್ರೈಸ್ತನು ಬೋಧಿಸಿದ ನೀತಿ ನಿಯಮಗಳು ಎಂದರ್ಥ. ಬೌದ್ಧ ಧರ್ಮ ಎಂದರೆ, ಬುದ್ಧನು ಪ್ರಸಿದ್ಧ ಪಡಿಸಿದ ನೀತಿ–ನಿಯಮಗಳು ಎಂದರ್ಥ. ಹಾಗೆಯೇ ಮುಸ್ಲಿಂ ಧರ್ಮ, ಬ್ರಾಹ್ಮಣ ಧರ್ಮ, ವೀರಶೈವ ಧರ್ಮಗಳು ಅರ್ಥವೂ ಇದೆ. ಎಲ್ಲ ಧರ್ಮಗಳ ಮಾರ್ಗಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿದ್ದರೂ ಮೂಲತತ್ವಗಳಲ್ಲಿ, ಗುರಿಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ವೀರಶೈವ ಮತ ಬೋಧಕರಾದ ಬಸವಣ್ಣನವರು,

ಕಳಬೇಡ, ಕೊಲಬೇಡ, ಹುಸಿಯನುಡಿಯಲು ಬೇಡ. . . . .

. . . . . . ಇದೇ ಕೂಡಲ ಸಂಗಮನ ಒಲಿಸುವ ಪರಿ ಎಂಬ ವಚನದ

ಮೂಲಕ, ಕಳ್ಳತನ ಮಾಡಬೇಡ, ಕೊಲೆ ಮುಂತಾದ ಹಿಂಸೆಮಾಡಬೇಡ, ಸುಳ್ಳು ಹೇಳಬೇಡ, ಬೇರೆಯವರನ್ನು ನಿಂದಿಸಿ ಅವಮಾನಿಸಿಬೇಡ, ನಿನ್ನನ್ನು ನೀನೇ ಪ್ರಶಂಸಿಸಿಕೊಳ್ಳಬೇಡ. ಅಂತರಂಗ-ಬಹಿರಂಗವಾಗಿ ಶುದ್ಧವಾಗಿರು, ಒಳ-ಹೊರಗೆ ಒಂದೇ ಆಗಿರು, ಆಗ ದೇವರು ಒಲಿಯುತ್ತಾನೆ ಎಂದು, ದೇವರನ್ನು ಒಲಿಸುವ ಮಾರ್ಗ ತಿಳಿಸಿದ್ದಾರೆ. ಈ ಧಾರ್ಮಿಕ ನೀತಿಗಳು ಯಾವ ಧರ್ಮದಲ್ಲಿಲ್ಲ! ದೇವರನ್ನು ಒಲಿಸುವುದು ಅಥವಾ ದೇವರ ಕೃಪೆಗೆ ಪಾತ್ರರಾಗುವುದು ಗುರಿಯಾದರೆ, ಮೇಲಿನ ತತ್ವಗಳಂತೆ ಬದುಕಬೇಕು. ಬೇರೆ, ಬೇರೆ ಧರ್ಮಗಳು ಬೇರೆ ಬೇರೆ ತತ್ವಗಳನ್ನು ಬೋಧಿಸಿದರೂ, ಮೇಲಿನ ಸಪ್ತಸೂತ್ರಗಳಿಲ್ಲದ ಯಾವ ಧರ್ಮವೂ ಇಲ್ಲ. ಇವು ಮಾನವ ಧರ್ಮದ ಬುನಾದಿಗಳು. ಇವುಗಳನ್ನು ಅಳವಡಿಸಿಕೊಂಡವನೇ ನಿಜವಾದ ಧಾರ್ಮಿಕ ವ್ಯಕ್ತಿ. ಅಂತಹ ಧಾರ್ಮಿಕ ವ್ಯಕ್ತಿಯು ತಾನೂ ಸುಖವಾಗಿ ಬಾಳುತ್ತಾ, ಇತರರೂ ಸುಖದಿಂದಿರುವಂತಹ ಕಾರ್ಯಗಳನ್ನು ಮಾಡುತ್ತಾನೆ. ಅಂತಹವನ ಜೀವನವು ಶಾಂತಿ, ಶಿಸ್ತು, ಸಂಯಮ, ಸಹಕಾರ, ಪರೋಪಕಾರ, ದಯೆ, ಪ್ರೀತಿ-ವಿಶ್ವಾಸಗಳಿಂದ ತುಂಬಿರುತ್ತದೆ. ಆ ವ್ಯಕ್ತಿಯು ಮಾಡುವ ಯಾವುದೇ ಕೆಲಸವು, ಕಟ್ಟುವಂತಾಗಿರುತ್ತದೆಯೇ ಹೊರತು ಕೆಡಹುವಂತಹದಾಗಿರುವುದಿಲ್ಲ. ಯಾವುದೇ ಕೆಡುಕಿಗೂ ಅಲ್ಲಿ ಆಸ್ಪದವಿರುವುದಿಲ್ಲ.

ಕೆಲ ಜನರು, ಧಾರ್ಮಿಕ ಲಾಂಛನ ಹಾಕಿಕೊಂಡು, ಗಂಟೆಗಟ್ಟಲೆ ಪೂಜೆ, ವ್ರತ, ಅಭಿಷೇಕ ಮಾಡುತ್ತಿದ್ದರೂ, ದೇವರ ಕಾರ್ಯಗಳಿಗೆ ದಾನ ಮಾಡಿದರೂ, ಅವರ ನಿಜ ಜೀವನದಲ್ಲಿ ದುರಾಚಾರಗಳನ್ನು ಮಾಡುತ್ತಿರುತ್ತಾರೆ. ಅಂತಹವರನ್ನು ಧಾರ್ಮಿಕ ವ್ಯಕ್ತಿಗಳೆಂದು ಹೇಳಲಾಗದು. ಮನುಷ್ಯ ಧಾರ್ಮಿಕ ವ್ಯಕ್ತಿಯಂತೆ, ಸಜ್ಜನನಂತೆ ಕಾಣಿಸಿಕೊಳ್ಳುತ್ತಾ ಮೋಸದಿಂದ ಮಾಡಿದ, ದೌರ್ಜನ್ಯಯುತವಾದ, ಅನೀತಿಯ, ಪರರನ್ನು ಹಿಂಸಿಸುವ ದುಷ್ಟಜೀವನ ನಡೆಸುತ್ತಿದ್ದರೆ, ಅವನು ಧಾರ್ಮಿಕ ವ್ಯಕ್ತಿಯಾಗಲಾರ. ಒಳ್ಳೆಯತನವಿದ್ದು, ಸತ್ಕಾರ್ಯಮಾಡುತ್ತಾ ನೀತಿವಂತನಾಗಿ ಬದುಕಿದರೆ, ಅವನು ವ್ರತೋಪವಾಸಮಾಡದಿದ್ದರೂ, ಪೂಜೆ-ವ್ರತ ಮಾಡದಿದ್ದರೂ ಧಾರ್ಮಿಕ ವ್ಯಕ್ತಿಯೆ. ಸತ್ಯ-ಶುದ್ಧಮಾರ್ಗದಿಂದ ಕಾರ್ಯಮಾಡುವುದೇ ದೇವರ ಸೇವೆ. ಅದಿಲ್ಲದೆ ಮಾಡುವ ಧಾರ್ಮಿಕ ಆಚರಣೆಗಳು ವ್ಯರ್ಥ ಎಂಬುದನ್ನು ಒಪ್ಪ ಶರಣರು.

ಮೊಟ್ಟೆ, ಮೊಟ್ಟೆ ಪುಷ್ಪವ ತಂದು,
ಒಟ್ಟಿ, ಒಟ್ಟಿ ಲಿಂಗವ ಪೂಜಿಸಿದೊಡೇನು?
ತನು, ಮನ, ಧನವ ಕೊಟ್ಟು ಸ್ವಾರ್ಥ ಹಿಂಗದನ್ನಕ್ಕರ?
ಹುಸಿ, ಕಳವು, ಪರದಾರ ವ್ಯಾಪಾರದಲ್ಲಿ ಹರಿದಾಡುವ

ಮರುಳ ಬುದ್ಧಿಯ ದುರಾಚಾರಿಗಳಿಗೆ ದೂರಾಗಿಪ್ಪನು
ನೋಡಾ ನಮ್ಮ ಅಖಂಡೇಶ್ವರಾ ಎಂದು ಹೇಳಿದ್ದಾರೆ.

ಆದರೆ, ಈಗಿನ ಸಮಾಜದಲ್ಲಿ, ಧರ್ಮವನ್ನು ಜಾತಿ ಎಂದು ಅರ್ಥೈಸಿ ಅದರ ನೀತಿ-ನಿಯಮಗಳನ್ನು ಗಾಳಿಗೆ ತೂರಿ, ಘಾತುಕತನದಿಂದ ಬಹಳಷ್ಟು ಜನ ಧಾರ್ಮಿಕವಾದ ನೀತಿಗಳನ್ನು ಬದುಕುತ್ತಿಲ್ಲ. ಆದರೆ ಧರ್ಮದ ಹೆಸರಿನಲ್ಲಿ ಬಡಿದಾಡುತ್ತಿದ್ದಾರೆ. ಕೊಲೆ - ಸುಲಿಗೆ ಮಾಡುತ್ತಿದ್ದಾರೆ. ಸಮಾಜದ ಸುಖ-ಶಾಂತಿ ನೆಮ್ಮದಿಗಳ ನಾಶಮಾಡುತ್ತಿದ್ದಾರೆ. ತಮ್ಮ ಸ್ವಾರ್ಥ ಸಾಧನೆಗೆ ಜಾತಿ ಎಂಬ ಗುರಾಣಿ ಹಿಡಿದು, ಕೆಲವು ಅಮಾಯಕ ಜನರಲ್ಲಿ ಸಲ್ಲದ ವಿಚಾರಗಳನ್ನು ತುಂಬಿ ವಿನಾಶಕಾರಕ ಚಟುವಟಿಕೆಗಳಿಂದ ಸಾಮಾನ್ಯರು, ಕಷ್ಟ-ನಷ್ಟಗಳಿಗೆ ಗುರಿಯಾಗುವಂತೆ ಮಾಡುತ್ತಿದ್ದಾರೆ. ದೇಶವನ್ನು ಗೊಂದಲಕ್ಕೆ ಈಡುಮಾಡಿ ಸಮಸ್ಯೆಯ ಆಗರ ಮಾಡಿದ್ದಾರೆ. ಇಂತಹ ಕಾರ್ಯಗಳಿಂದ ದೇಶದ ಅಭಿವೃದ್ಧಿ, ನೆಮ್ಮದಿ ಕನ್ನಡಿಯ ಗಂಟಾಗುತ್ತದೆ. ಆದರೆ ಯಾವ ಧರ್ಮದ ತತ್ವವೂ ಮತ್ತೊಂದು ಧರ್ಮವನ್ನಾಗಲೀ, ಬೇರೆ ಧರ್ಮದ ಅನುಯಾಯಿಗಳನ್ನಾಗಲೀ, ದ್ವೇಷಿಸುವುದಿಲ್ಲ. ಹಿಂಸೆಯನ್ನಂತೂ ಬೋಧಿಸುವುದೇ ಇಲ್ಲ. ಎಲ್ಲ ಧರ್ಮಗಳೂ ಹಿಂಸೆಯನ್ನು ಖಂಡಿಸುತ್ತವೆ. ಧರ್ಮದ ನಂಬಿಕೆಗಳಿಗೆ ಅಪಚಾರವಾದರೆ ಧಾರ್ಮಿಕ ವ್ಯಕ್ತಿ ಸಹಿಸುವುದಿಲ್ಲವಾದರೂ, ಅವನ ಮಾರ್ಗ ಸಂಯಮದಿಂದ ಕೂಡಿರುತ್ತದೆ, ರಚನಾತ್ಮಕವಾಗಿರುತ್ತದೆ, ವಿನಾಶಕಾರಿಯಾಗಿರುವುದಿಲ್ಲ.

ಒಟ್ಟಿನಲ್ಲಿ, ಇಂದಿನ ಪರಿಸ್ಥಿತಿಗೆ ಜನರಲ್ಲಿ ಸರಿಯಾದ ಧಾರ್ಮಿಕ ಭಾವನೆಯ ಅಭಾವವೇ ಕಾರಣವೆಂದು ಹೇಳಬಹುದು.

■

## ೧೪. ಮನೆಗೆದ್ದು ಮಾರು ಗೆಲ್ಲು

ಮನುಷ್ಯರಲ್ಲಿ ನಾನಾವಿಧವಾದ ಸ್ವಭಾವದವರಿರುತ್ತಾರೆ. ಕೆಲವರು ಉದಾರಿಗಳಾದರೆ, ಮತ್ತೆ ಕೆಲವರು ಜುಗ್ಗರು. ಕೆಲವರು ಸ್ವಾರ್ಥಿಗಳಿದ್ದರೆ ಹಲವರು ಪರೋಪಕಾರಿಗಳಾಗಿರುತ್ತಾರೆ. ಮತ್ತೆ ಕೆಲವರು ರಿಪ್‌ವ್ಯಾನ್ ವಿಂಕಲ್‌ನಂತೆ, ಮನೆಯನ್ನು ಅಲಕ್ಷಿಸಿ ಬೇರೆಯವರಿಗೆ ಸಹಾಯ ಮಾಡುವುದೆಂದರೆ ಅವರಿಗೆ ಎಲ್ಲಿಲ್ಲದ ಖುಷಿ. ಮನೆಯಲ್ಲಿ ಒಂದು ಸಣ್ಣ ಕೆಲಸ ಹೇಳಿದರೂ ಅವರಿಗೆ ದೊಡ್ಡ ತಲೆನೋವು. ಆದರೆ ಬೇರೆಯವರೇನಾದರೂ ಮಾಡೆಂದರೆ, ಸಂತೋಷದಿಂದ ಶಿರಸಾವಹಿಸಿ ಮಾಡುತ್ತಾರೆ. ಬೇರೆಯವರಿಂದ ಷಹಬಾಸ್‌ಗಿರಿ ಪಡೆಯಲು ತುದಿಗಾಲಲ್ಲಿರುತ್ತಾರೆ. ಎಷ್ಟು ಕಷ್ಟವಾದರೂ ಸರಿ, ಉತ್ಸಾಹದಿಂದ ಮಾಡುತ್ತಾರೆ. ಈ ರೀತಿಯ ಸ್ವಭಾವದವರು ಮನೆಯವರಿಂದ ತುಂಬಾ ಬೈಯ್ಯಿಸಿಕೊಳ್ಳುತ್ತಾರೆ. 'ಮನೆಗೆ ಮಾರಿ ಪರರಿಗೆ ಉಪಕಾರಿ' ಎಂದು ಮನೆಯವರು ಹೀಯಾಳಿಸಿದಾಗಲೂ ಅವರಿಗೆ ಚಿಂತೆಯಿಲ್ಲ. ತಮ್ಮ ಹಾಗೂ ತಮ್ಮ ಮನೆಯ ಕೆಲಸ ಕಡೆಗಣಿಸಿ, ತಮ್ಮ ಮನೆಯಯವರಿಂದ ತೆಗಳಿಸಿಕೊಂಡು, ತಮ್ಮ ಕೆಲಸ ಅಲಕ್ಷ್ಯ ಮಾಡಿದುದರಿಂದ ಅನೇಕ ಕಷ್ಟ–ನಷ್ಟಗಳಿಗೆ ಒಳಗಾದರೂ, ಹೆರವರ ಕೆಲಸವನ್ನು ಅತ್ಯಂತ ಆಸಕ್ತಿಯಿಂದ ಮಾಡುತ್ತಾರೆ. ಈ ರೀತಿಯ ಸ್ವಭಾವದವರು ಸಿಕ್ಕರೆ ಸಾಕು. ಅನೇಕರು ಇವರನ್ನು ದುರುಪಯೋಗಪಡಿಸಿಕೊಳ್ಳುತ್ತಾರೆ. 'ಹೊಗಳಿದರೆ ಸಾಕು; ಉಬ್ಬಿಹೋಗಿ ಎಂತಹ ಕಷ್ಟಕೆಲಸವಾದರೂ ಮಾಡುತ್ತಾನೆ ಎಂದು ಜಾಣರಾದವರು, ಅಂತಹವನನ್ನು ಹಿಂದೆ ಟೀಕೆ ಮಾಡುತ್ತಾರೆ; ಅಪಹಾಸ್ಯ ಮಾಡುತ್ತಾರೆ. ಆದರೆ ಮುಂದೆ ಉಬ್ಬಿಸಿ ಅಟ್ಟಕ್ಕೇರಿಸಿ ತಮಗೆ ಬೇಕಾದ ಹಾಗೆ ಅವರನ್ನು ಉಪಯೋಗಿಸಿಕೊಂಡು, ಲಾಭ ಮಾಡಿಕೊಳ್ಳುತ್ತಾರೆ; ಚೆನ್ನಾಗಿ ದುಡಿಸಿಕೊಳ್ಳುತ್ತಾರೆ. ಅಂತಹವರ ಬಗ್ಗೆ ಈ ಜನರಿಗೆ ಆದರವಿರುವುದಿಲ್ಲ. ಆಕಸ್ಮಾತ್ ಆ ವ್ಯಕ್ತಿಗೆ, ಇವರ ಉಪಕಾರ ಬೇಕಾದರೆ, ನಿರ್ದಾಕ್ಷಿಣ್ಯವಾಗಿ ನಿರಾಕರಿಸುತ್ತಾರೆ. ಮಾಡಿದರೂ ಅವನಿಗಾಗಿ ಬಹಳ ಉಪಕಾರ ಮಾಡುತ್ತಿದ್ದಾರೆ ಎನ್ನುವಂತೆ ಅವನನ್ನು ದಾಕ್ಷಿಣ್ಯದಲ್ಲಿ ಬೀಳಿಸಿಕೊಂಡು ಸಹಾಯ ಮಾಡುತ್ತಾರೆ. ಹೀಗೆ ಬೇರೆಯವರ ಕೆಲಸ ಮಾಡುತ್ತಾ, ತಮ್ಮ ಮನೆಯನ್ನು, ತಮ್ಮ ಪ್ರಗತಿಯನ್ನು ಕಡೆಗಣಿಸಿಕೊಂಡು ಕಾಲಹಾಕುವ ಜನರು, ಅನೇಕ ಸಮಸ್ಯೆಗಳಿಗೆ ಒಳಗಾಗುವುದಲ್ಲದೆ, ಅಂತಹವರ ಮನೆಯವರೂ ಕಷ್ಟಕ್ಕೆ ಗುರಿಯಾಗುತ್ತಾರೆ.

ಅವರಿಗೂ ಬೆಲೆ ಇರುವುದಿಲ್ಲ. ಅವರ ಸಹಾಯಕ್ಕೆ ಯಾರೂ ಇರುವುದಿಲ್ಲ. ಆದುದರಿಂದ ಎಲ್ಲರೂ ಮೊದಲು ತಮ್ಮ ಬುಡ ಭದ್ರಮಾಡಿಕೊಂಡು ಬೇರೆಯವರ ನೆರವಿಗೆ ಹೋಗಬೇಕು. ಇತರರಿಗೆ ಸಹಾಯಮಾಡುವುದೇನೂ ಕೆಟ್ಟದಲ್ಲ. ಆದರೆ, ತಮ್ಮದನ್ನು ಕೆಡಿಸಿಕೊಂಡು, ಇತರರು ತಮ್ಮನ್ನು ದುರುಪಯೋಗಪಡಿಸಿಕೊಳ್ಳುವಷ್ಟು ಮಟ್ಟಕ್ಕೆ ಹೋಗಬಾರದು.

ಈ ರೀತಿಯ ಜನರನ್ನು ನೋಡಿಯೇ ನಮ್ಮ ಹಿರಿಯರು ತಮ್ಮ ಅನುಭವದಿಂದ, 'ಮನೆಗೆದ್ದು ಮಾರುಗೆಲ್ಲು' ಎಂಬ ಗಾದೆ ಕಟ್ಟಿರಬೇಕು. ಗಾದೆಗಳು, ಜನಸಾಮಾನ್ಯರ ಅನುಭವದ ಮೂಸೆಯಲ್ಲಿ ಕರಗಿಸಿ ಮಾಡಿದಂತಹ, ಅನುಭವ ಸಿದ್ಧಾಂತಗಳು. ಆದುದರಿಂದ ಅವು ಎಂದಿಗೂ ಸುಳ್ಳಾಗುವುದಿಲ್ಲ. ಆದ್ದರಿಂದಲೇ 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಗಾದೆಯ ಮಾತು ಹುಟ್ಟಿಕೊಂಡಿದೆ. ಗಾದೆಯ ಮಾತುಗಳನ್ನು ಒರೆಗೆ ಹಚ್ಚಿ ನೋಡಿದರೆ, ಅವು ನೂರಕ್ಕೆ ನೂರು ಸತ್ಯದಿಂದ ಕೂಡಿರುತ್ತವೆ. 'ತಾಯಿಯಂತೆ ಮಕ್ಕಳು ; ನೂಲಿನಂತೆ ಸೀರೆ' ಎಂಬ ಗಾದೆ ಇದೆ. ತಾಯಿಯ ಸ್ವಭಾವ ನೋಡಿದರೆ ಮಕ್ಕಳ ಸ್ವಭಾವ ಎಂತಹುದು ಎಂಬುದನ್ನು ಹೇಳಬಹುದು, ನೂಲು ಅಷ್ಟೆ. ಅದು ಅರವತ್ತು ಕೌಂಟಿನದಾದರೆ ಸೀರೆ ಒರಟಾಗಿರುತ್ತದೆ. ನೂರು ಕೌಂಟ್ಸ್‌ನ ನೂಲಿನಿಂದ ನೇಯ್ದ ಸೀರೆ ನಾಜೂಕಾಗಿರುತ್ತದೆ. ಗಾದೆಯ ಮಾತು ಎಂದಿಗೂ ಸುಳ್ಳಾಗುವುದಿಲ್ಲ ಎಂಬುದನ್ನು ಸಾಬೀತುಪಡಿಸಲು ಮೇಲಿನದೊಂದು ಉದಾಹರಣೆ ಅಷ್ಟೆ.

'ವೇದ ಸುಳ್ಳಾದರೂ ಗಾದೆ ಸುಳ್ಳಲ್ಲ' ಎಂಬ ಗಾದೆ ಕೇಳಿದವರು ಹಾಗಾದರೆ ವೇದ ಸುಳ್ಳಾಗಬಲ್ಲುದೆ? ಎಂದು ಪ್ರಶ್ನಿಸಬಹುದು. ವೇದ ಕೆಲವು ಬಾರಿ ಸುಳ್ಳಾಗುತ್ತದೆ ಎಂದು ಹೇಳಲು ಈ ಗಾದೆ ಮಾಡಿಲ್ಲ. ವೇದ ಸುಳ್ಳಾಗಲು ಸಾಧ್ಯವೇ ಇಲ್ಲ ಎಂಬುದು ಎಲ್ಲರ ನಂಬುಗೆ. ಹಿಂದಿನ ಕಾಲದಲ್ಲಿ ಭಾರತೀಯರು, ಕೌಟುಂಬಿಕ, ಸಾಮಾಜಿಕ, ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದ ಯಾವುದೇ ಸಮಸ್ಯೆ ಬಂಧರೂ, ವೇದದ ಆಧಾರದಿಂದ ಅವುಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಅವರ ಜೀವನದ ಯಾವುದೇ ವಿಚಾರಕ್ಕೂ ವೇದದಲ್ಲಿ ಅವರಿಗೆ ಪರಿಹಾರ ದೊರೆಯುತ್ತಿತ್ತು. ವೇದವು, ತಪಸ್ವಿಗಳೂ, ದಾರ್ಶನಿಕರೂ, ಪಂಡಿತರೂ, ತಜ್ಞರೂ ಆದಂತಹ ಋಷಿ ಶ್ರೇಷ್ಠರಿಂದ ಶಾಸ್ತ್ರೀಯವಾಗಿ ರಚಿಸಲ್ಪಟ್ಟಿದೆ. ಆದ್ದರಿಂದ ಅಲ್ಲಿಯ ವಿಷಯಗಳಿಗೆ ದೋಷಗಳಿರುವುದಿಲ್ಲವಷ್ಟೇ ಅಲ್ಲ, ಶಾಸ್ತ್ರೀಯವಾಗಿಯೂ ಇರುವುದರಿಂದ, ಸುಳ್ಳಾಗಿರುವುದಿಲ್ಲ. ವೇದವು ಸತ್ಯವೂ, ಖಚಿತವೂ ಆದುದೆಂದು ಭಾರತೀಯರ ನಂಬಿಕೆ. ಆ ಹಿನ್ನೆಲೆಯಲ್ಲಿ ಗಾದೆಯನ್ನು ರಚಿಸಿದ ಹಿರಿಯರು, ಗಾದೆಗಳು ಸುಳ್ಳಾಗುವುದೇ ಇಲ್ಲ. ಅವು ಸತ್ಯಪೂರ್ಣ ಹಾಗೂ ಸತ್ವಭರಿತ ಎಂದು ನಿರ್ದಿಷ್ಟವಾಗಿ

ಹೇಳಲೋಸುಗ ಹಾಗೆ ಹೇಳಿದ್ದಾರೆ ಅಷ್ಟೆ. 'ವೇದ ಸುಳ್ಳಾಗಬಹುದು' ಎಂದು ಹೇಳುವುದು ಅವರ ಉದ್ದೇಶವಲ್ಲ.

'ಮನೆಗೆದ್ದು ಮಾರುಗೆಲ್ಲು' ಎಂಬ ಗಾದೆಯು ಮನೆಗೆಲಸಗಳನ್ನು ಕಡೆಗಣಿಸಿ, ಹೆರವರ ಕೆಲಸಗಳಲ್ಲೇ ತಮ್ಮ ಜೀವನ ಸವೆಸುತ್ತಾ ತಮ್ಮ ಮನೆಯನ್ನು ಸಮಸ್ಯೆಯಲ್ಲಿ ಮುಳುಗಿಸುವ ಹೊಣೆಗೇಡಿ ಜನರಿಗೆ ಒಳ್ಳೆಯ ಮಾರ್ಗದರ್ಶನ ನೀಡುತ್ತದೆ. ಈ ಎರಡೇ ಪದಗಳಲ್ಲಿ ಬೇಜವಾಬ್ದಾರಿ ಸ್ವಭಾವದ ಜನರನ್ನು ಟೀಕಿಸುವುದಲ್ಲದೆ, ಉತ್ತಮ ಮಾರ್ಗದರ್ಶನ ಇದೆ. ಮನುಷ್ಯನು ಮನೆಯ ತನ್ನ ಜವಾಬ್ದಾರಿಗಳನ್ನು ಸಮರ್ಪಕವಾಗಿ ನಿರ್ವಹಿಸಿ, ನಂತರ ಬೇರೆಯವರ ಅಥವಾ ಸಮಾಜದ ಕೆಲಸ ಮಾಡುವುದು ಯೋಗ್ಯ. ಯಾವ ವ್ಯಕ್ತಿ ತನ್ನ ಮನೆಯ ಸ್ಥಿತಿ-ಗತಿಗಳನ್ನು ಉತ್ತಮವಾಗಿ ಮಾಡಿಕೊಂಡಿರುತ್ತಾನೋ ಅಂತಹವನು ಹೊರಗೂ, ಕೆಲಸಗಳನ್ನು ಜವಾಬ್ದಾರಿಯಿಂದ ದಕ್ಷತೆಯಿಂದ ನಿರ್ವಹಿಸಬಲ್ಲವನಾಗುತ್ತಾನೆ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುತ್ತಾರೆ ಎಂದು ಹೇಳಬಹುದು. ಇಲ್ಲಿ ಸಲ್ಲದಿದ್ದರೆ ಅಲ್ಲಿ ಸಲ್ಲುವುದೂ ಸಂಶಯವೆ.

■

## ೧೫. ವಿಶ್ವಸಮುದಾಯ ದೃಷ್ಟಿ

ಈಗಿನ ದಿನಮಾನಗಳಲ್ಲಿ ಎಲ್ಲಿ ನೋಡಿದರೂ ಶಾಂತಿ ಇಲ್ಲ, ನೆಮ್ಮದಿ ಇಲ್ಲ ಎಂದು ಹೇಳುವವರೇ ಸಿಗುತ್ತಾರೆ. ಜನರು ಅತೃಪ್ತಿಯಿಂದ, ಅಸಮಾಧಾನದಿಂದ, ಅಸಹಾಯಕತೆಯಿಂದ ಬದುಕುತ್ತಿದ್ದಾರೆಂದು, ಜನಜೀವನವನ್ನು ನೋಡಿದರೆ ಅನ್ನಿಸುತ್ತದೆ. ಈ ಸ್ಥಿತಿ ಭಾರತದಲ್ಲಿ ಅಷ್ಟೇ ಅಲ್ಲ ಇಡೀ ವಿಶ್ವದಲ್ಲಿರುವುದನ್ನು ಟಿ.ವಿ.ಯಲ್ಲಿ ಜಗತ್ತಿನಲ್ಲಿ ನಡೆಯುತ್ತಿರುವ ಆಗು-ಹೋಗುಗಳನ್ನು ಗಮನಿಸಿದ ಎಲ್ಲರಿಗೂ ಅರಿವಾಗುತ್ತದೆ. ಹಣವಿದ್ದವರು – ಇಲ್ಲದವರು, ವಿದ್ಯಾವಂತರು – ಅವಿದ್ಯಾವಂತರೂ, ನೌಕರಿ ಮಾಡುತ್ತಿರುವವರು – ಇಲ್ಲದವರು, ಹಳ್ಳಿಗರು – ಪಟ್ಟಣಿಗರು ಎಲ್ಲರೂ ಇದೇ ಹಾಡನ್ನೇ ಹಾಡುತ್ತಾರೆ. ದಿನ ಬೆಳಗಾದರೆ ರೇಡಿಯೋದಲ್ಲಿ ಟಿ.ವಿ.ಯಲ್ಲಿ, ಪತ್ರಿಕೆಗಳಲ್ಲಿ ವಿಧ್ವಂಸಕ ಕಾರ್ಯಗಳ ಸುದ್ದಿಗಳೇ ಸುದ್ದಿಗಳು. ಒಂದು ಜಾತಿಯವರು ಮತ್ತೊಂದು ಜಾತಿಯವರನ್ನು, ಒಂದು ಸಂಘದವರು ಮತ್ತೊಂದು ಸಂಘದವರನ್ನು, ಒಂದು ಕುಟುಂಬದವರು ಮತ್ತೊಂದು ಕುಟುಂಬದವರನ್ನು ಒಂದು ದೇಶದವರು ಮತ್ತೊಂದು ದೇಶದವರನ್ನು ದ್ವೇಷಿಸುವ, ಹಿಂಸಿಸುವ, ಕೊಲೆಮಾಡುವ ಸುದ್ದಿಗಳು ಸರ್ವೇ ಸಾಮಾನ್ಯವಾಗಿಬಿಟ್ಟಿವೆ. ಅಂತಹ ಸುದ್ದಿಗಳಿಲ್ಲದ ದಿನವೇ ಇಲ್ಲವೆನ್ನಬಹುದು. ಕುಟುಂಬಗಳಲ್ಲಿ ಒಗ್ಗಟ್ಟಿನ ಲಕ್ಷಣಗಳಿಲ್ಲ ; ಅಣ್ಣತಮ್ಮಂದಿರಲ್ಲಿ ಪ್ರೀತಿ ಇಲ್ಲ ; ಅಕ್ಕ-ತಂಗಿಯರಲ್ಲಿ ಸಹಕಾರವಿಲ್ಲ. ಅಷ್ಟೇ ಏಕೆ? ತಂದೆ ಮಕ್ಕಳಲ್ಲಿ ಗಂಡ-ಹೆಂಡಿರಲ್ಲಿ ಸಹ ಪ್ರೀತಿಯ ಬೆಸುಗೆ ಇಲ್ಲದ ಉದಾಹರಣೆಗಳು ಲೆಕ್ಕವಿಲ್ಲದಷ್ಟು, ಸ್ವಾರ್ಥ, ದ್ವೇಷ ಹೊಟ್ಟೆಕಿಚ್ಚಿನಿಂದ ತುಂಬಿದ ಮಾನವ ಮಾಡುವ ಕೃತ್ಯಗಳು ಕ್ರೂರ; ನಡೆಯುವ ರೀತಿಗಳು ಭೀಕರ; ನುಡಿಯುವ ಮಾತುಗಳು ಹಿಂಸಾತ್ಮಕ. ಆದುದರಿಂದಲೇ ಇಂದು ಸಮುದಾಯದಲ್ಲಿ ಯಾರಿಗೂ ಹಿತವಿಲ್ಲ, ನೆಮ್ಮದಿ ಇಲ್ಲ, ತೃಪ್ತಿ ಇಲ್ಲ, ಸಂತೋಷವಿಲ್ಲ.

ಮಾನವ ಹೀಗೇಕಾದ? ಪ್ರಾಣಿಗಳಿಗಿಂತ ಕೀಳಾಗಿ ವರ್ತಿಸುವ ಅವನ ನಡೆಗೆ-ನುಡಿಗೆ ಏನು ಕಾರಣ ಎಂದು ವಿಚಾರ ಮಾಡಿದರೆ, ಅವನಲ್ಲಿ ವಿಶ್ವಸಮುದಾಯ ದೃಷ್ಟಿಯ, ಮಾನವ ಭ್ರಾತೃತ್ವ ಭಾವನೆಯ ಕೊರತೆಯೇ ಮೂಲಕಾರಣವೆಂದು ಹೇಳಬಹುದು. ಕಾಗೆ ಸಹ, ಒಂದಗುಳು ಸಿಕ್ಕರೆ, ತನ್ನ

ಬಳಗವನ್ನೇ ಕೂಗಿ ಕರೆಯುತ್ತದೆ. ಆದರೆ ಮಾನವನ ನಡೆ ಕಾಗೆಗಿಂತಲೂ ಕಡೆ. ತನಗೇ ಎಲ್ಲ ಬೇಕು. ಬೇರೆಯವರಿಗೆ ಅದು ಇರಬಾರದು, ಎನ್ನುವ ಸ್ವಾರ್ಥಮೂಲವಾದ ಅವನ ಮನೋಭಾವ ಎಲ್ಲರನ್ನೂ ದ್ವೇಷಿಸುವಂತೆ ಮಾಡುತ್ತದೆ. ತನ್ನ ಸ್ವಾರ್ಥ ಸಾಧಿಸಿಕೊಳ್ಳಲು 'ತನ್ನ ದೇಶ' ಎನ್ನುತ್ತಾನೆ. ನಂತರ 'ತನ್ನರಾಜ್ಯ' ಎನ್ನುತ್ತಾನೆ. ಅದರ ಮೇಲೆ ತನ್ನ ಜಿಲ್ಲೆ ಎಂದವನು, ತನ್ನೂರು ಎಂಬ ಸಣ್ಣ ಸಮುದಾಯಕ್ಕೆ ಬರುತ್ತಾನೆ. ಅಲ್ಲಿಂದ ತನ್ನ ಸ್ವಾರ್ಥಸಾಧನೆಗೆ ತನ್ನ ಜಾತಿ ಎಂಬ ಇನ್ನೂ ಸಣ್ಣ ವರ್ತುಲ ನಿರ್ಮಿಸಿಕೊಳ್ಳುತ್ತಾನೆ. ಅದಾದ ನಂತರ ಅವನ ದೃಷ್ಟಿಕೋನ, ಅವನ ಕುಟುಂಬಕ್ಕೆ ಸೀಮಿತವಾಗಿ, ಅಲ್ಲಿಂದ ತನ್ನದೇ ಆದ ಸಂಸಾರಕ್ಕೆ ಸಂಕುಚಿತಗೊಳ್ಳುತ್ತದೆ. ಅಲ್ಲಿಗೂ ನಿಲ್ಲದೆ 'ತಾನು' ಎಂಬ ಕೀಳು ಮಟ್ಟಕ್ಕೆ ಹೋಗಿ ನಿಲ್ಲುತ್ತದೆ. ಈ ಸಂಕುಚಿತ ಸ್ವಾರ್ಥಮೂಲದೃಷ್ಟಿ, ಜಗತ್ತಿನಲ್ಲಿ ಇಂದು ನಾವು ಕಾಣುತ್ತಿರುವ, ಅನುಭವಿಸುತ್ತಿರುವ ಅಶಾಂತಿಗೆ ಮೂಲಕಾರಣವಾಗಿದೆ.

ಜಗತ್ತಿನ ಶಾಂತಿಯನ್ನೇ ಅಲ್ಲೋಲ ಕಲ್ಲೋಲ ಮಾಡುತ್ತಿರುವ ಈ ಮಾನವ ಯಾರು? ಎಲ್ಲಿಂದ ಬಂದ? ಹೇಗೆ ಬಂದ? ಎಂಬ ಪ್ರಶ್ನೆಗಳಿಗೆ ಖಚಿತವಾದ ಕರಾರುವಕ್ಕಾದ ಉತ್ತರವನ್ನು ಇಂದಿಗೂ, ಯಾರೂ ಕೊಡಲಸಾಧ್ಯವಾದರೂ, ಮಾನವ ಸೃಷ್ಟಿಯ ಪ್ರಾರಂಭದಲ್ಲಿ ಈಗಿರುವ ಕೋಟ್ಯಂತರ ಜನರೆಲ್ಲರೂ ಒಮ್ಮೆಗೇ ಸೃಷ್ಟಿಯಾಗಿಲ್ಲ. ಪ್ರಕೃತಿಯಲ್ಲಿ ಯಾವುದೇ ಕಾರಣದಿಂದ ಸ್ತ್ರೀಯಲ್ಲಿ ಸ್ತ್ರೀ ಅಂಡಾಣು, ಪುರುಷನಲ್ಲಿ ಪುರುಷ ಅಂಡಾಣುಗಳು ಪ್ರಾದುರ್ಭವಿಸಿ, ಅವುಗಳ ಮಿಲನದಿಂದಾಗಿ, ಪುರುಷ ಹಾಗೂ ಸ್ತ್ರೀಯ ಸೃಷ್ಟಿಯಾಗಿ, ಅವರಿಬ್ಬರ ಮಿಲನ ಅನೇಕ ಮಕ್ಕಳಿಗೆ ಜನ್ಮ ಕೊಟ್ಟಿರಬೇಕು. ನಂತರ ಮಾನವ ಪೀಳಿಗೆ ಬೆಳೆ–ಬೆಳೆದು ಬೃಹದಾಕಾರವಾಗಿ, ಮಾನವನಿಗೇ ಸಮಸ್ಯೆಯಾಗುವಂತಹ ಸಂಖ್ಯೆಯಲ್ಲಿ ಬೆಳೆದಿದೆ ಎನ್ನಬಹುದು. ಅಂದರೆ, ಮೂಲಕ್ಕೆ ಹೋದರೆ, ಮಾನವರೆಲ್ಲಾ ಒಂದೇ ದಂಪತಿಯ ಮಕ್ಕಳು. ಸಂಖ್ಯೆ ವೃದ್ಧಿಯಾದಂತೆ, ಒಂದೇ ದಂಪತಿಯ ಮಕ್ಕಳ ಸಂಖ್ಯೆ ಹೆಚ್ಚಿದಂತೆ, ಬದುಕುವ ಸಲುವಾಗಿ ಮಾನವ ಪೀಳಿಗೆ ವಿಶ್ವವನ್ನೇ ವ್ಯಾಪಿಸಿಕೊಂಡಿದೆ. ತಾನಿರುವ ಪರಿಸರಕ್ಕೆ ಅನುಗುಣವಾಗಿ ಮಾನವನ ಬಣ್ಣದಲ್ಲಿ, ಆಕೃತಿಯಲ್ಲಿ, ನಡೆ–ನುಡಿಯಲ್ಲಿ ಸಂಸ್ಕೃತಿಯಲ್ಲಿ ಬದಲಾವಣೆಗಳಾಗಿರಬಹುದಾದರೂ, ಮಾನವರೆಲ್ಲಾ ಒಂದೇ ಕುಟುಂಬಕ್ಕೆ ಸೇರಿದವರೆಂಬುದನ್ನು ಮರೆಯಲಾಗದು. ಆದರೆ ಅವನ ಪೈಶಾಚಿಕ ಗುಣ ಈಗ ಎದ್ದು ನಿಂತುಬಿಟ್ಟಿದೆ. ಹಾಗಾಗಿ ಅಶಾಂತಿ, ದುಃಖ, ದ್ವೇಷಗಳು ಮಿತಿ ಮೀರಿವೆ. ಈಗ ಅವನಲ್ಲಿರುವ ಪೈಶಾಚಿಕ ಸ್ವಭಾವವನ್ನು ನಿರ್ಮೂಲಮಾಡಿ, ಅವನಲ್ಲಿ ಪ್ರೀತಿ, ಸ್ನೇಹ, ಸಹಕಾರ, ಒಗ್ಗಟ್ಟು ಮುಂತಾದ ಸುಖೀ ಸಮುದಾಯ ಜೀವನಕ್ಕೆ ಬೇಕಾದ ಮೌಲ್ಯಗಳನ್ನು ಬೆಳೆಸಿ, ಮನುಷ್ಯನ ಜೀವನ ನೆಮ್ಮದಿಯುತವಾಗಿರುವಂತೆ ಮಾಡಬೇಕಾಗಿದೆ.

ಮಾನವ – ಮಾನವನಲ್ಲಿರುವ ಈಗಿರುವ ಅಂತರಗಳು, ಕಾಲಾನುಕ್ರಮದಲ್ಲಿ ರೂಪುಗೊಂಡಿವೆ. ಜನಸಂಖ್ಯೆ ಹೆಚ್ಚಾಗಿ, ಜೀವನ ಪರಿಸ್ಥಿತಿಗಳು ಸಂಕೀರ್ಣವಾಗಿ, ಅವಶ್ಯಕತೆಗಳು ಹೆಚ್ಚಾಗಿ, ಸೌಲಭ್ಯಗಳು ಕಡಿಮೆಯಾಗಿ ಸಮಸ್ಯೆಗಳು ಹೆಚ್ಚಾಗಲು ಕಾರಣಗಳಾಗಿವೆ. ಅವುಗಳ ಪರಿಹಾರಕ್ಕಾಗಿ ಸಂಘ–ಸಂಸ್ಥೆಗಳು, ಜಾತಿ–ಪಂಥಗಳು, ಶಾಲಾ–ಕಾಲೇಜುಗಳು ಆಡಳಿತ ವ್ಯವಸ್ಥೆಗಳ ಉದಯಕ್ಕೆ ಕಾರಣ ಎಂದರೆ ತಪ್ಪಾಗುವುದಿಲ್ಲ. ಅಂದರೆ, ಈ ವ್ಯವಸ್ಥೆಗೆಲ್ಲಾ ಮಾನವನ ನೆಮ್ಮದಿಯ ಜೀವನಕ್ಕೆ ಪೂರಕವಾಗಿ ಹುಟ್ಟಿಕೊಂಡಿವೆ. ಆದರೆ ಬರು–ಬರುತ್ತಾ ಈ ವ್ಯವಸ್ಥೆಗಳೇ ಮಾನವ ಬರುಬರುತ್ತಾ ಒಬ್ಬರು ಇನ್ನೊಬ್ಬರನ್ನು ದ್ವೇಷಿಸುವ ಕಾರಣಗಳಾಗಿ ಬದಲಾವಣೆ ಹೊಂದಿರುವುದು ದುರದೃಷ್ಟ ಸಂಗತಿಯೇ ಸರಿ. ವ್ಯವಸ್ಥೆಯ ದುರುಪಯೋಗ ಈ ಕಷ್ಟ–ಕಾರ್ಪಣ್ಯಗಳಿಗೆ ಕಾರಣವಾಗಿದೆ. ಆದುದರಿಂದ ಮಾನವ ಜೀವನದ ಬಗ್ಗೆ, ವ್ಯವಸ್ಥೆಗಳ ಬಗ್ಗೆ, ಅವುಗಳ ದುರುಪಯೋಗ – ಸದುಪಯೋಗಗಳ ಬಗೆಗೆ, ಸರಿಯಾದ ತಿಳಿವಳಿಕೆ ಸಮುದಾಯದಲ್ಲಿ ಉಂಟಾಗುವಂತೆ ಮಾಡಬೇಕು. ವಿಶ್ವಸಮುದಾಯ ಭಾವನೆ ಜನರಲ್ಲಿ ಜಾಗೃತವಾದರೆ, ವಿಶ್ವ ಭ್ರಾತೃತ್ವ ಭಾವನೆಯುಂಟಾಗುತ್ತದೆ. ದ್ವೇಷ ಭಾವನೆ ಹೋಗಿ, ಅನ್ಯೋನ್ಯತೆ ಬೆಳೆಯಲು ಸಾಧ್ಯವಾಗುತ್ತದೆ. ಮನೆ, ಶಾಲೆ ಮತ್ತು ಸಮಾಜ ಈ ದಿಶೆಯಲ್ಲಿ ಕಾರ್ಯ ಪ್ರವೃತ್ತವಾಗಬೇಕು. ಆಗ ಭೂಮಿ ಸ್ವರ್ಗವಾದೀತು! ಮಾನವ ಜೀವನ ಸಾರ್ಥಕವಾದೀತು!

■

## ೧೬. ಸಹಕಾರ

ಜೀವನ ಎಲ್ಲ ಕ್ಷೇತ್ರಗಳಲ್ಲಿ, ಎಲ್ಲ ಹಂತಗಳಲ್ಲಿ ಎಲ್ಲರಿಗೂ ಸಹಕಾರ ಬೇಕು. ಮನುಷ್ಯ ಒಬ್ಬಂಟಿಗನಾಗಿ ತನ್ನಷ್ಟಕ್ಕೇ ಬದುಕಲಾರ. ಒಂಟಿಯಾಗಿ ಬದುಕುವುದು ಅವನ ಮನೋಭಾವಕ್ಕೆ ಒಗ್ಗುವುದಿಲ್ಲ. ಅವನ ಜೀವನ ಕ್ರಮಕ್ಕೂ ಬೇರೆಯವರ ಸಹಕಾರಬೇಕು. ಎಲ್ಲ ರೀತಿಯಲ್ಲೂ., ಎಲ್ಲಾ ಕಾರಣಕ್ಕೂ ಅವನು ಸಂಘಜೀವಿ.

ಪ್ರಾಣಿಯಂತೆ ಬದುಕುತ್ತಿದ್ದ ಮಾನವ, ಕುಟುಂಬ ಜೀವನ ಪ್ರಾರಂಭ ಮಾಡಿಕೊಳ್ಳಲು ಅವನಿಗೆ ಅವಶ್ಯಕವಾದ ಬೇರೆಯವರ ಸಹಕಾರದ ಅಗತ್ಯವೇ ಕಾರಣ. ಸಂಘಜೀವನ ಪ್ರಾರಂಭವಾಗುವ ಮೊದಲು, ಜೀವನ ನಿರ್ವಹಣೆಗಾಗಿ ಹೊರಗೆ ಹೋಗಿ ದಣಿದು ಬಂದಾಗ, ಅವನಿಗೆ ತನ್ನ ಯೋಗಕ್ಷೇಮ ನೋಡಿಕೊಳ್ಳುವವರು, ತನ್ನ ಊಟ-ಉಪಚಾರದ ವ್ಯವಸ್ಥೆ ಮಾಡುವವರು, ತನ್ನ ಸುಖ-ದುಃಖ ಹಂಚಿಕೊಳ್ಳುವವರು ಅಗತ್ಯವೆನ್ನಿಸಿರಬೇಕು. ಕಾಡಿನಲ್ಲಿ ಜೀವಿಸುವಾಗ ಕ್ರೂರಮೃಗಗಳಿಂದ ರಕ್ಷಿಸಿಕೊಳ್ಳಲು ಇತರರ ಸಹಾಯ ಬೇಕೆನ್ನಿಸಿರಬಹುದು. ಮಹಿಳೆಗೂ ಅಷ್ಟೆ. ಕಾಡಿನಲ್ಲಿ ಏಕಾಂಗಿಯಾಗಿ ಬದುಕುವುದು, ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವುದು, ತನ್ನ ಸಂತತಿಯ ರಕ್ಷಣೆ ಮಾಡುವುದು, ಅಸಹಾಯಕ ಪರಿಸ್ಥಿತಿಯಲ್ಲಿ ಎಂದರೆ, ಬೇರೆಯವರ ನೆರವು ಅವಶ್ಯಕವಾದ ಸನ್ನಿವೇಶಗಳಲ್ಲಿ, ಇತರರ ಸಹಾಯವಿಲ್ಲದೆ ಜೀವನ ನಿರ್ವಹಣೆ ದುಸ್ಸಾಧ್ಯವೆನ್ನಿಸಿರಲು ಸಾಕು. ಹಾಗಾಗಿ ಪುರುಷನಿಗೆ ಸ್ತ್ರೀಯ ಸಹಕಾರ, ಸ್ತ್ರೀಗೆ ಪುರುಷನ ಸಹಾಯ ಅವಶ್ಯಕವಾಗಿ ಕುಟುಂಬ ಜೀವನ ಉದಯವಾಗಿರುವುದರಲ್ಲಿ ಸಂಶಯವಿಲ್ಲ. ಪ್ರಾಣಿಗಳ ಜೀವನಕ್ಕೆ ಭಿನ್ನವಾದ ಕುಟುಂಬ ಜೀವನವನ್ನು ಮಾನವ ಪ್ರಾರಂಭಿಸಲು 'ಸಹಕಾರ'ದ ಅಗತ್ಯವೇ ಮೂಲಕಾರಣವೆನ್ನಬಹುದು.

ಸಹಕಾರ ಯಾರಿಗೆ ಬೇಡ? ಎಲ್ಲರಿಗೂ ಬೇಕು. ಸಹಕಾರವಿಲ್ಲದ ಜೀವನ ದುರ್ಭರ, ಅಸಹನೀಯ. ಒಂದು ಕುಟುಂಬದಲ್ಲಿಯ ಸದಸ್ಯರು ಒಬ್ಬರಿಗೊಬ್ಬರು ಸಹಕರಿಸಿಕೊಂಡು ಬಾಳದಿದ್ದರೆ, ಅಂತಹ ಕುಟುಂಬ ಬಹುಬೇಗ ಛಿದ್ರ - ಛಿದ್ರವಾಗುವುದರಲ್ಲಿ, ದುಸ್ಥಿತಿಗೆ ಗುರಿಯಾಗುವುದರಲ್ಲಿ ಸಂಶಯವಿಲ್ಲ. ಪರಸ್ಪರ ಸಹಕಾರವಿರುವ ಕುಟುಂಬ ನೆಮ್ಮದಿಯ ಆಗರವಾಗುತ್ತದೆ. ಎಲ್ಲರ ಏಳ್ಗೆ

ಸಾಧಿಸುವುದು ಸಾಧ್ಯವಾಗುತ್ತದೆ, ಸುಲಭವಾಗುತ್ತದೆ, ಅದೇ ರೀತಿ ಆಫೀಸುಗಳಲ್ಲಿ ಸಂಘ–ಸಂಸ್ಥೆಗಳಲ್ಲಿ ಒಬ್ಬರಿಗೊಬ್ಬರಿಗೆ ಸಹಕಾರವಿದ್ದರೆ, ಅವರು ಮಾಡಬೇಕಾದ ಕೆಲಸಗಳನ್ನು ನಿಶ್ಚಿತ ಅವಧಿಯಲ್ಲಿ, ನಿರಾಯಾಸವಾಗಿ ಪರಿಣಾಮಕಾರಿಯಾಗಿ ಮಾಡಿ ಮುಗಿಸಬಹುದು.

ಒಂದು ಶಾಲೆ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸಬೇಕಾದರೆ ಅಲ್ಲಿಯ ಮುಖ್ಯಸ್ಥನಿಗೆ, ಕೆಲಸಗಾರರು, ಸಹಶಿಕ್ಷಕರು, ಆಡಳಿತ ವರ್ಗದವರೆಲ್ಲರ ಸಹಕಾರ ಅಗತ್ಯ. ಕೆಲಸಗಾರರು ಸಮಯಕ್ಕೆ ಸರಿಯಾಗಿ ಬಂದು, ಅಗತ್ಯಕ್ಕನುಸರಿಸಿ ಸಹಕರಿಸಿಕೊಂಡು ಕೆಲಸಮಾಡದೆ, ಯಾವಾಗಲೂ ಅಸಹಕಾರ ತೋರಿಸುತ್ತಿದ್ದರೆ, ಮುಖ್ಯೋಪಾಧ್ಯಾಯನು ಎಷ್ಟೇ ದಕ್ಷನಿದ್ದರೂ, ನಿಷ್ಠಾವಂತನಿದ್ದರೂ ಸುಗಮವಾಗಿ ಕೆಲಸ ನಿರ್ವಹಿಸುವುದು ಕಷ್ಟ. ಅದೇ ರೀತಿ, ಸಹ ಶಿಕ್ಷಕರು ಮುಖ್ಯೋಪಾಧ್ಯಾಯನ ಪ್ರಗತಿಪರ ಯೋಜನೆಗಳಿಗೆ ಸಂಪೂರ್ಣ ಸಹಕಾರ ನೀಡಿದರೆ ಉತ್ತಮ ಫಲಿತಾಂಶ ಪಡೆಯಬಹುದು. ಇಲ್ಲದಿದ್ದಲ್ಲಿ ಎಲ್ಲ ಯೋಜನೆಗಳೂ ತಲೆಕೆಳಗಾಗುತ್ತವೆ. ಅಲ್ಲದೆ ಶಿಕ್ಷಕರು ಪ್ರಾಮಾಣಿಕತೆಯಿಂದ ದುಡಿದರೂ, ಮುಖ್ಯಸ್ಥನ ಸಹಕಾರವಿಲ್ಲದಿದ್ದರೆ, ಅವರ ಜಾಣ್ಮೆ, ದುಡಿಯುವ ಮನೋಭಾವ, ಪ್ರಾಮಾಣಿಕತೆ, ನಿಷ್ಠೆ ಯಾವುದಕ್ಕೂ ಬೆಲೆ ಇಲ್ಲವಾಗುವುದು. ಪರಸ್ಪರ ಸಹಕಾರವಿಲ್ಲದ ಶಾಲೆಯ ಏಳ್ಗೆ ಕನಸಿನ ಮಾತೇ ಸರಿ.

ಕುಟುಂಬದಲ್ಲೂ ಅಷ್ಟೇ. ಗಂಡ–ಹೆಂಡತಿ ಒಬ್ಬರಿಗೊಬ್ಬರು ಸಹಕರಿಸಿಕೊಂಡು ಬಾಳುತ್ತಿದ್ದರೆ, ಅದು ಮಕ್ಕಳಿಗೆ ಒಂದು ಉತ್ತಮ ಉದಾಹರಣೆಯಾಗಬಲ್ಲದು. ಮುಂದಿನ ಅವರ ಸಹಕಾರದ ಬಾಳ್ವೆಗೆ ಬುನಾದಿ ಹಾಕಬಲ್ಲದು. ಸಹಕಾರದಿಂದ ಕೂಡಿದ ಕುಟುಂಬದ ಮಕ್ಕಳು ಉತ್ತಮ ರೀತಿಯ ನಡೆ–ನುಡಿಗಳನ್ನು ಪಡೆದು ರೂಪುಗೊಳ್ಳುತ್ತಾರೆ. ಅವರಲ್ಲಿ ಸಮಾಧಾನ ಪ್ರವೃತ್ತಿ ಕಂಡುಬರುತ್ತದೆ. ಮುಂಗೋಪವಾಗಲಿ, ಸಣ್ಣ ಸಣ್ಣ ಕಾರಣಗಳಿಗೆಲ್ಲಾ ಬೇಜಾರು ಮಾಡಿಕೊಳ್ಳುವ ಸ್ವಭಾವವಾಗಲೀ ಇರುವುದಿಲ್ಲ. ಅಲ್ಲದೆ ಪರಸ್ಪರ ಸಹಕಾರ ಮನೋಭಾವ ಬೆಳೆದು, ಮನೆಯ ಕೆಲಸದಲ್ಲಿ, ಓದಿನಲ್ಲಿ ಪರಸ್ಪರ ಸಹಾಯಮಾಡಿಕೊಂಡು ಎಲ್ಲರೂ ನೆಮ್ಮದಿಯಿಂದ ಇರುತ್ತಾರೆ. ಆಗ ಇಡೀ ಕುಟುಂಬದ ಪ್ರಗತಿ ಅನಾಯಾಸವಾಗಿ ಸಾಧಿತವಾಗುತ್ತದೆ. ಕುಟುಂಬದ ಗೃಹಿಣಿ ಉದ್ಯೋಗಸ್ಥೆಯಾಗಿದ್ದರೆ, ಸಹಕಾರದ ಅವಶ್ಯಕತೆ ಇನ್ನೂ ಹೆಚ್ಚುತ್ತದೆ. ಅತ್ತೆ, ಅತ್ತಿಗೆ, ನಾದಿನಿ ಮುಂತಾದವರೂ ಒಟ್ಟಾಗಿ ಇದ್ದರೆ, ಅವರು ಸಹಕರಿಸಿ ನಡೆಯದಿದ್ದರೆ, ಆಕೆಗೆ ಉದ್ಯೋಗ ಮಾಡುವುದು ತುಂಬಾ ಹೊರೆಯಾಗುತ್ತದೆ. ಆಗ ಮನೆ ಹಾಗೂ ಆಫೀಸಿನ ಎರಡೂ ಕೆಲಸಗಳನ್ನು ನಿರ್ವಹಿಸಬೇಕಾದ ಆಕೆಗೆ ತುಂಬಾ ಸಮಸ್ಯೆಯುಂಟಾಗಿ ವ್ಯವಸ್ಥಿತ ನಿರ್ವಹಣೆ

ಸಾಧ್ಯವಾಗುವುದಿಲ್ಲ. ಹಾಗಿಲ್ಲದೆ ಎಲ್ಲರ ಸಹಕಾರ ಆಕೆಗೆ ದೊರೆತರೆ ಆಕೆಗೆ ಕೆಲಸ ಹೆಚ್ಚಾದರೂ ದಕ್ಷತೆಯಿಂದ ನಿರ್ವಹಿಸಲು ಸಾಧ್ಯವಾಗುತ್ತದೆ.

ಸರ್ಕಾರದಲ್ಲಿಯೂ ಅಷ್ಟೆ. ಮುಖ್ಯಮಂತ್ರಿ ಮತ್ತು ಮಂತ್ರಿಗಳಲ್ಲಿ, ಅಧಿಕಾರಿಗಳಲ್ಲಿ ಯೋಗ್ಯ ಸಹಕಾರ ರಾಜ್ಯದ ಪ್ರಗತಿಗೆ ಅವಶ್ಯಕ. ಮುಖ್ಯಮಂತ್ರಿಯ ಜನಹಿತ ಕಾರ್ಯ ಯೋಜನೆಗೆ ಇತರೆ ಎಲ್ಲಾ ಮಂತ್ರಿಗಳ ಒಪ್ಪಿಗೆ, ಸಹಕಾರ ಒಳ್ಳೆಯ ಫಲಿತಾಂಶ ನೀಡಬಲ್ಲದು. ಇಲ್ಲದಿದ್ದರೆ 'ಎತ್ತು ಏರಿಗೆಳೆಯಿತ – ಕೋಣ ನೀರಿಗೆಳೆಯಿತು' ಎನ್ನುವಂತೆ ಪ್ರಯೋಜನವಾಗುವುದಿಲ್ಲ. ಒಳ್ಳೆಯ ಯೋಜನೆಗಳನ್ನು ಕಾರ್ಯಗತ ಮಾಡಬೇಕಾದರೆ, ಒಬ್ಬರಿಗೊಬ್ಬರು ಸಹಕಾರದಿಂದ, ನಿಷ್ಠೆಯಿಂದ ಪ್ರಾಮಾಣಿಕವಾಗಿ ಕೆಲಸ ಮಾಡಿದಾಗ ಉತ್ತಮ ಫಲಿತಾಂಶ ಪಡೆಯಬಹುದು. 'ಯೋಗ್ಯ ಸರ್ಕಾರ' ಎನ್ನುವ ಪ್ರಶಂಸೆಗೆ ಪಾತ್ರವಾಗಬಹುದು.

ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಸಹಕಾರ ಅಗತ್ಯ. ಸಹಕಾರವಿಲ್ಲದಿದ್ದರೆ ಏನನ್ನೂ ಸಾಧಿಸಲಾಗುವುದಿಲ್ಲ. ಸಾಧಿಸಬೇಕಾದುದೆಲ್ಲಾ ತಲೆಕೆಳಗಾಗುತ್ತದೆ. ಸಹಕಾರವಿಲ್ಲದೆ ಎಷ್ಟೋ ಮನೆತನಗಳು ನಾಶವಾಗಿವೆ. ಸಂಸ್ಥೆಗಳು ಹೇಳ ಹೆಸರಿಲ್ಲದಂತಾಗಿವೆ. ಸರ್ಕಾರಗಳೂ ಉರುಳಿ ಹೋಗಿವೆ. ಬ್ರಿಟಿಷ್ ಸರ್ಕಾರ ಭಾರತದಲ್ಲಿ ಆಳುತ್ತಿದ್ದಾಗ, ಅವರನ್ನು ಈ ದೇಶದಿಂದ ಹೊಡೆದೋಡಿಸಲು ಅಸಹಕಾರ ಚಳವಳಿ ಬಹಳ ಸಹಕಾರಿಯಾಯಿತು. ಅಂತಹ ಆಳರಸರೂ ಸಹ ದೇಶದಲ್ಲಿ ಅಸಹಕಾರ ಚಳವಳಿ ಪ್ರಬಲವಾಗಿ, ಅಧಿಕಾರಿಗಳು ಕೆಲಸಮಾಡಲು ಸಹಕರಿಸಲಿಲ್ಲದಾಗ, ವಿದ್ಯಾರ್ಥಿಗಳು ಶಾಲಾ–ಕಾಲೇಜುಗಳಿಗೆ ಹೋಗಲು ನಿರಾಕರಿಸಿ ಅಸಹಕರಿಸಿದಾಗ, ಮದ್ದು, ಗುಂಡು, ಸೈನ್ಯ ಎಲ್ಲವನ್ನೂ ಹೊಂದಿದ ಬ್ರಿಟಿಷ್ ಸರ್ಕಾರ ಅಸಹಕಾರ ಚಳವಳಿಯ ಮುಂದೆ ಅಸಹಾಯಕವಾಯಿತು. ಸರ್ಕಾರದ ಬೆನ್ನೇ ಬಾಗಿತು. ಭಾರತೀಯರು ಬ್ರಿಟಿಷರ ಆಳ್ವಿಕೆಗೆ ಅಸಹಕಾರ ತೋರಿಸದಿದ್ದರೆ, ದೇಶಕ್ಕೆ ಸ್ವಾತಂತ್ರ ಬರಲು ಕಷ್ಟವಾಗುತ್ತಿತ್ತು. ಸಹಕಾರವಿಲ್ಲದಿದ್ದರೆ, ಸರ್ಕಾರವೂ ಉರುಳಿ ಬೀಳುತ್ತದೆ ಎಂಬುದಕ್ಕೆ ಇದೊಂದು ಉತ್ತಮ ನಿದರ್ಶನ.

ಸಹಕಾರ ಎಲ್ಲಿ ಅಗತ್ಯವೋ ಅಲ್ಲಿ ಕೊಡಬೇಕು. ಬ್ರಿಟಿಷರ ಆಡಳಿತದ ಸಂದರ್ಭದಲ್ಲಿ ಅಸಹಕಾರ ಅಗತ್ಯವಿತ್ತು ನಿಜ. ಆದರೆ ಆ ಅಸಹಕಾರವನ್ನು ಸ್ವಾರ್ಥ ಸಾಧನೆಗೆ ಬಳಸಿಕೊಂಡರೆ ತಪ್ಪಾದೀತು! ನಮ್ಮ ರಾಷ್ಟ್ರದ ಪ್ರಗತಿಗೆ ಸಹಾಯಕವಾದ ಎಲ್ಲಾ ಕಾರ್ಯಗಳಿಗೆ, ಪ್ರತಿಯೊಬ್ಬ ಪ್ರಜೆಯೂ ಸಹಕರಿಸಬೇಕು. ಸಾರ್ವಜನಿಕವಾಗಿ ಕೆಡಕಾಗುವ ಸಂದರ್ಭಗಳಲ್ಲಿ ಮಾತ್ರ ಅಸಹಕಾರ ಪ್ರಯೋಗಿಸಬೇಕೇ ವಿನಃ ಬೇಕಾ ಬಿಟ್ಟಿಯಾಗಿ ಬಳಸಬಾರದು; ಸ್ವಾರ್ಥಸಾಧನೆಗೆ ಉಪಯೋಗಿಸಿಕೊಳ್ಳಬಾರದು. ಎಲ್ಲ ಒಳ್ಳೇ ಕೆಲಸಗಳಲ್ಲಿ ಸಹಕರಿಸುವ ಮನೋಭಾವವನ್ನು ಪ್ರತಿಯೊಬ್ಬರೂ

ಮೈಗೂಡಿಸಿಕೊಳ್ಳಬೇಕು. ಆಗ ಸಮಸ್ಯೆಗಳಾಗಲೀ, ವ್ಯರ್ಥ ವೆಚ್ಚಗಳಾಗಲೀ, ಕೆಡುಕಾಗಲೀ ಆಗಲು ಅವಕಾಶವಿರುವುದಿಲ್ಲ. ಸಹಕಾರ ಎಲ್ಲರಲ್ಲೂ ಇದ್ದರೆ ಎಲ್ಲರೂ ಎಲ್ಲೆಡೆಯೂ ನೆಮ್ಮದಿಯಿಂದ ಸಂತೋಷದಿಂದ ಇರುತ್ತಾ ಅಭಿವೃದ್ಧಿ ಹೊಂದಿ ಬಾಳಬಹುದು.

■

## ೧೭. ಕೆರೆಯ ನೀರನ್ನೂ ಕೆರೆಗೆ ಚಲ್ಲಿ. . . .

ಸೃಷ್ಟಿಯಲ್ಲಿ ಹುಟ್ಟಿ ಬಂದಿರುವ ಕೋಟ್ಯಾನುಕೋಟಿ ಜೀವಿಗಳಲ್ಲಿ ಮನುಷ್ಯ ಜನ್ಮವೇ ಶ್ರೇಷ್ಠವಾದುದೆಂದು ಎಲ್ಲರಿಗೂ ತಿಳಿದ ವಿಷಯ. ಈ ಅಮೂಲ್ಯವಾದ ಮನುಷ್ಯ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲೂಬಹುದು; ವ್ಯರ್ಥಮಾಡಿಕೊಳ್ಳಲೂಬಹುದು. ಮಾನವ, ತನ್ನ ಕ್ರಿಯೆಗಳಿಂದ, ಬದುಕಿನಿಂದ ದೈವತ್ವಕ್ಕೂ ಏರಬಲ್ಲ; ದಾನವನೂ ಆಗಬಲ್ಲ. ಸತ್ಕಾರ್ಯಗಳಿಂದ ಸಜ್ಜನಿಕೆಯಿಂದ ಇರುತ್ತಾ, ಲೋಕಕಲ್ಯಾಣಕ್ಕಾಗಿಯೇ ಬದುಕಿ ದೇವನಾಗಬಲ್ಲ. ಹಾಗಾಗಿರುವ ಉದಾಹರಣೆಗಳು ಅನೇಕ. ರಾಮಕೃಷ್ಣ, ಬುದ್ಧ, ಬಸವ, ವಿವೇಕಾನಂದ ಮುಂತಾದವರು ಈ ಸಾಲಿನಲ್ಲಿ ನಿಲ್ಲುತ್ತಾರೆ. ಅಂತಹವರ ಮಟ್ಟಕ್ಕೆ ಏರದಿದ್ದರೂ, ತಮ್ಮ ಉದಾತ್ತವಾದ ಕಾರ್ಯಗಳಿಂದ, ಸಮಾಜದ, ಮಾನವತೆಯ ಒಳಿತಿಗಾಗಿ ತನು–ಮನ–ಧನಗಳಿಂದ ದುಡಿಯುವ ಮೂಲಕ ಶ್ರೇಷ್ಠ ಮಾನವರೆನ್ನಿಸಿಕೊಂಡು, ಮಾನವಕೋಟಿಯ ಗೌರವಾದರಕ್ಕೆ ಪಾತ್ರರಾಗುವವರು ಎರಡನೆಯ ಸಾಲಿನಲ್ಲಿ ನಿಲ್ಲುತ್ತಾರೆ. ಅಂತಹವರಲ್ಲಿ ಮಹಾತ್ಮಗಾಂಧಿ, ಸಾಮ್ರಾಟ್ ಅಶೋಕ, ರಾಜಾರಾಮಮೋಹನ್‌ರಾಯ್, ನೆಲ್ಸನ್ ಮಂಡೇಲಾ ಮುಂತಾದವರನ್ನು ಹೆಸರಿಸಬಹುದು. ಮಾನವರಾಗಿ ಹುಟ್ಟಿಯೂ ದಾನವರಾಗಿ ಬದುಕಿರುವ ಇನ್ನೊಂದು ಗುಂಪು ಇದೆ. ಕೊಲೆಗಡುಕರು, ದರೋಡೆಕೋರರು, ಭಯೋತ್ಪಾದಕರು, ಹಸುಗೂಸುಗಳು ಮತ್ತು ಅಸಹಾಯಕರ ಮೇಲೆ ಅತ್ಯಾಚಾರ ಮಾಡುವ ಅನೀತಿವಂತರು, ಮೋಸಗಾರರೂ, ವಂಚಕರು, ಕ್ರೂರಿಗಳೂ, ಸಜ್ಜನರನ್ನು ವೃಥಾಪವಾದಕ್ಕೆ ಗುರಿಮಾಡುವವರು ಆದಂತಹವರನ್ನು ದಾನವರು ಅಥವಾ ಮಾನವ ಸ್ವರೂಪದ ರಾಕ್ಷಸರು ಎನ್ನಬಹುದು.

ಒಟ್ಟಿನಲ್ಲಿ ಮಾನವನಾಗಿ ಹುಟ್ಟಿದರೂ, ಅವನು ತನ್ನ ಕೃತ್ಯಗಳಿಂದ, ಬದುಕಿನ ರೀತಿಗಳಿಂದ ಶ್ರೇಷ್ಠಮಾನವನಾಗಬಲ್ಲ ಅಥವಾ ದೈವತ್ವಕ್ಕೆ ಏರಬಲ್ಲ. ಇಲ್ಲವೇ ದಾನವನಾಗಬಲ್ಲ. ನಾವು ದುರ್ಲಭವಾದ ಈ ಮಾನವಜನ್ಮವನ್ನು ಪಡೆದಿರುವಾಗ ಎಲ್ಲರೂ ದೈವತ್ವಕ್ಕೇರುವುದು ಸಾಧ್ಯವಿಲ್ಲವಾದರೂ, ಕಡೆಯ ಪಕ್ಷ ಯೋಗ್ಯ ಮಾನವರಾಗಿ ಬದುಕಲು ಎಲ್ಲರಿಗೂ ಸಾಧ್ಯ. ಮನುಷ್ಯ ಸಮಾಜಕ್ಕೆ, ರಾಷ್ಟ್ರಕ್ಕೆ

ಮಾನವತೆಗೆ ಒಳಿತಾದುದನ್ನು ಮಾಡಲಾಗದಿದ್ದರೂ, ಕೆಡುಕು ಮಾಡದಂತಿದ್ದರೆ ಅದೇ ದೊಡ್ಡ ಉಪಕಾರವಾಗುವುದು ನಿಜ. ಆದರೂ ಸಮಾಜದಲ್ಲಿ ಬದುಕಿದ ಮೇಲೆ ತನ್ನ ಕೈಲಾದಷ್ಟನ್ನಾದರೂ, ಕಿಂಚಿತ್ತಾದರೂ ಕಷ್ಟದಲ್ಲಿರುವವರಿಗೆ, ಸಮಾಜದ ಒಳಿತಿಗೆ, ಧರ್ಮರಕ್ಷಣೆಗೆ, ಸಂಸ್ಕೃತಿ ಪಾಲನೆಗೆ ಸೇವೆ ಸಲ್ಲಿಸಿದರೆ, ಯಾವುದೇ ರೀತಿಯಲ್ಲಿ ನೆರವಾದರೂ ಬದಕು ಸಾರ್ಥಕವಾದೀತು. ನಮ್ಮ ಕರ್ತವ್ಯವನ್ನು ಸ್ವಲ್ಪಮಟ್ಟಿಗಾದರೂ ಮಾಡಿದ್ದೇವೆಂಬ ತೃಪ್ತಿಪಡೆಯಲು ಸಾಧ್ಯವಾಗುತ್ತದೆ.

ಸಾಮಾನ್ಯವಾಗಿ ಮನುಷ್ಯ ಸ್ವಾರ್ಥಿ. ಎಷ್ಟಿದ್ದರೂ ತನಗೆ ಬೇಕು. ತನ್ನವರಿಗೆ ಬೇಕು ಇನ್ನಷ್ಟು ಬೇಕು – ಬೇಕು, ಬೇಕು ಎನ್ನುವುದು ಅವನ ಸಾಮಾನ್ಯ ಗುಣ. ಆದರೆ, 'ಈ ಬೇಕು' ಎಲ್ಲರಲ್ಲಿಯೂ ಮಿತಿ ಮೀರಿದರೆ, ಸಮಾಜ ಉಳಿಯುವುದೆಂತು? ಅದಕ್ಕಾಗಿಯೇ ಜ್ಞಾನಿಗಳು, ಯೋಗಿಗಳು, ಧಾರ್ಮಿಕ ವ್ಯಕ್ತಿಗಳು, ಮಾನವತೆಯ ಹಿತಚಿಂತಕರು ಎಲ್ಲಾ ರೀತಿಯ ಜನರಿಗೂ ಬೋಧನೆ ಮಾಡಿದ್ದಾರೆ; ಮಾರ್ಗದರ್ಶನ ಮಾಡಿದ್ದಾರೆ. ಅವರ ಹಿತವಚನಗಳು, ಬೋಧನೆಯ ನೀತಿಗಳು ವಚನರೂಪದಲ್ಲಿ, ಹಾಡಿನ ರೀತಿಯಲ್ಲಿ, ನೀತಿಯ ಮಾತುಗಳಲ್ಲಿ ಇಂದಿಗೂ ನಮಗೆ ದೊರೆಯುತ್ತವೆ. ಮನುಷ್ಯ ಭಗವಂತನ ಕೃಪೆಯಿಂದ ಸಂಪತ್ತು ಪಡೆಯಬಹುದು. ಜ್ಞಾನ ಸಂಪಾದಿಸಬಹುದು; ಶಕ್ತಿವಂತನಾಗಿ, ಆರೋಗ್ಯವಂತನಾಗಿ, ಬುದ್ಧಿವಂತನಾಗಿ ಇರಬಹುದು. ಹೀಗೆ ಏನನ್ನೇ ಪಡೆದರೂ ಅದು ಭಗವಂತನ ಕೃಪೆಯಿಂದಲೇ, ಅವನ ಕೃಪೆ ಇದ್ದರೆ ಇಲ್ಲದವರು ಇದ್ದವರಾಗಬಹುದು. ನಮ್ಮ ದುಷ್ಟ ನಡತೆಗಳಿಂದ ಅವನು ಮುನಿದರೆ ಇದ್ದವರು ಇಲ್ಲದವರಾಗಬಹುದು:

ವಚನ

ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬರ್ಕು,
ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯಾ
ನೆರೆಯದ ವಸ್ತು ನೆರೆವುದು ನೋಡಯ್ಯಾ
ಅರಸು ಪರಿವಾರ ಕೈವಾರ ನೋಡಯ್ಯಾ!
ಪರಮ ನಿರಂಜನ ಮರೆವ ಕಾಲಕ್ಕೆ
ತುಂಬಿದ ಹರವಿಯ ಕಲ್ಲು ಕೊಂಡಂತಯ್ಯ ಕೂಡಲಸಂಗಮದೇವ

ಆದುದರಿಂದ ಭಗವಂತ ಕೃಪೆಮಾಡಿ ನಮಗೆ ಕೊಟ್ಟಿದ್ದರಲ್ಲಿ, ಸ್ವಲ್ಪ ಭಾಗವನ್ನಾದರೂ ಜನಸೇವೆಗೆ ಕೊಟ್ಟು (ಜನಸೇವೆಯೇ ಜನಾರ್ಧನ ಸೇವೆ) ಆ ದೇವರ ಕೃಪೆಗೆ ಪಾತ್ರರಾಗಬೇಕು. ಈ ಮಾತುಗಳನ್ನು ಪುರಂದರ ದಾಸರು, 'ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಬದುಕಿರೋ; ಹರಿಯ ಕರುಣದೊಳಾದಭಾಗ್ಯವ ಹರಿಸಮಾರ್ಪಣೆ ಮಾಡಿರೊ' ಎಂದು ಕರೆ ಇತ್ತಿದ್ದಾರೆ.

ಈ ನುಡಿಗಳನ್ನು ನಾವು ಕೇವಲ ಹಾಡಿ, ಕೇಳಿ ಸಂತೋಷಪಡಲಿಕ್ಕೆ ಉಪಯೋಗಿಸದೆ, ಕಾರ್ಯರೂಪದಲ್ಲಿ ತರಲು ಪ್ರಯತ್ನಿಸಬೇಕು. ಹಾಗೆಯೇ, ಶರಣ ಸರ್ವಜ್ಞನೂ 'ಕೊಟ್ಟದ್ದು ತನಗೆ ಬೈಚಿಟ್ಟದ್ದು ಪರರಿಗೆ, ಕೊಟ್ಟಿದ್ದು ಕೆಟ್ಟಿತೆನಬೇಡ, ಮುಂದೆ ಕಟ್ಟಿಹುದು ಬುತ್ತಿ ಸರ್ವಜ್ಞ' ಎಂದು ನಾವು ಇತರರಿಗೆ ದಾನ-ಧರ್ಮ, ಸಹಾಯ ಮಾಡಿದರೆ ಅದು ನಿಷ್ಫಲವಾಯ್ತೆಂದು ತಿಳಿಯಬೇಡಿ ಮುಂದೆ ಅದರ ಫಲ ದೊರೆತೇ ದೊರೆಯುತ್ತದೆ. ಇದು ಪ್ರಕೃತಿ ನಿಯಮ ಎಂಬುದನ್ನು ವಚನದ ಮೂಲಕ ತಿಳಿಸಿದ್ದಾನೆ. ಎಂದರೆ, ನಮಗೆ ಲಾಭ ಸಿಗಲೆಂಬ ಉದ್ದೇಶದಿಂದ ದಾನ-ಧರ್ಮ ಅಥವಾ ಪರೋಪಕಾರ ಮಾಡಬೇಕೆಂದು ಅರ್ಥವಲ್ಲ. ಪರೋಪಕಾರ ಬುದ್ಧಿಯನ್ನು ಬೆಳೆಸಿಕೊಂಡರೆ ತಮಗೂ ಒಳಿತು; ಇತರರಿಗೂ ಒಳಿತು ಉಂಟಾಗಿ ಇಡೀ ಸಮಾಜವೇ ಒಳಿತಿನಿಂದ ಬಾಳಲು ಸಾಧ್ಯವಾಗುತ್ತದೆ ಎಂಬುದು ಇದರ ಮೂಲ ಉದ್ದೇಶ. ಸದುದ್ದೇಶದಿಂದ ಉಪಕಾರ ಮಾಡಿದವರಿಗೆ ದೈವೀ ಶಕ್ತಿಯು, ಯಾವುದೋ ರೂಪದಲ್ಲಿ, ಯಾರ ಮುಖಾಂತರವೋ ಒಂದಲ್ಲ ಒಂದು ರೂಪದಲ್ಲಿ ನೆರವು ನೀಡುವುದು ಸತ್ಯ. ಇದನ್ನು ಯಾರು ಬೇಕಾದರೂ ತಮ್ಮ ಜೀವನದ ಅವಧಿಯಲ್ಲಿ ಅನುಭವಿಸಿ ಅರ್ಥಮಾಡಿಕೊಳ್ಳಬಹುದಾಗಿದೆ. ಪಂಚತಂತ್ರದ ಕಥೆಯೊಂದು ಈ ಅಂಶವನ್ನು ಪುಷ್ಟೀಕರಿಸುತ್ತದೆ :

ಒಂದು ಸರೋವರದ ದಡದಲ್ಲಿ ಒಂದು ಮರವಿತ್ತು. ಆ ಮರದ ಮೇಲೆ ಒಂದು ಪಾರಿವಾಳ ಕೂತಿತ್ತು. ಅದೇ ಸಮಯದಲ್ಲಿ ಒಂದು ದೊಡ್ಡ ಇರುವೆ (ಗೊದ್ದ) ನೀರಿನೊಳಕ್ಕೆ ಜಾರಿ ಬಿದ್ದುಬಿಟ್ಟಿತು. ಆಗ ಅದು ಪಾರಾಗಿ ದಡ ಮುಟ್ಟಬೇಕೆಂದು ಶತಾಯ-ಗತಾಯ ಪ್ರಯತ್ನಿಸಿತು, ಸಾಧ್ಯವಾಗಲಿಲ್ಲ. ಮುಳುಗಿ ಸಾಯಬೇಕಾದ ಪರಿಸ್ಥಿತಿಯಲ್ಲಿ ಆ ಗೊದ್ದ, ಬದುಕು-ಸಾವಿನ ಮಧ್ಯೆ ತೊಳಲಾಡುತ್ತಿತ್ತು. ಆಗ ಮರದ ಮೇಲೆ ಕುಳಿತಿದ್ದ ಪಾರಿವಾಳ ಇದನ್ನೆಲ್ಲಾ ನೋಡುತ್ತಿತ್ತು. ಅದಕ್ಕೆ ಗೊದ್ದದ ಬಗೆಗೆ ಕನಿಕರವೆನಿಸಿತು. ಮರದ ಟೊಂಗೆಯಲ್ಲಿದ್ದ ಎಲೆಯೊಂದನ್ನು ಕೊಕ್ಕಿನಿಂದ ಮುರಿದು, ಗೊದ್ದದ ಸಮೀಪ ಬೀಳಿಸಿತು. ಆ ಎಲೆಯ ಮೇಲೆ ಕುಳಿತು ಗೊದ್ದ ತೇಲುತ್ತಾ ದಡ ಸೇರಿತು. ತನ್ನ ಪ್ರಾಣ ಉಳಿಸಿದ ಪಾರಿವಾಳಕ್ಕೆ ಕೃತಜ್ಞತೆ ಹೇಳಿ ಹೊರಟುಹೋಯಿತು. ಇದಾದ ಎಷ್ಟೋ ಕಾಲದ ನಂತರ, ಆ ಪಾರಿವಾಳ ಕಾಡಿನಲ್ಲಿ ಒಂದು ಮರದ ಮೇಲೆ ಕುಳಿತಿತ್ತು. ಬೇಡನೊಬ್ಬ ಪಕ್ಷಿಗಳ ಬೇಟೆಯಾಡಲು ಕಾಡಿಗೆ ಬಂದಿದ್ದ. ಈ ಪಾರಿವಾಳಕ್ಕೆ ಗುರಿ ಇಟ್ಟು ಇನ್ನೇನು ಬಾಣಬಿಡಬೇಕು ಎಂದು ಗುರಿ ಇಟ್ಟಿದ್ದ. ಪಾರಿವಾಳದ ಗಮನ ಈ ಕಡೆ ಇರಲಿಲ್ಲ. ಆದರೆ ಅಲ್ಲಿಯೇ ಇದ್ದ ಗೊದ್ದ ಇದನ್ನು ಗಮನಿಸಿತು. ತನಗೆ ಉಪಕಾರ ಮಾಡಿದ ಪಾರಿವಾಳವನ್ನು ಕೊಂದೇ ಬಿಡುತ್ತಾನೆಂದು ತಿಳಿದ ಗೊದ್ದ, ಕೂಡಲೇ ಬೇಟೆಗಾರನ ಕಾಲನ್ನು ಕಚ್ಚಿತು. ಗುರಿ ಇಟ್ಟಿದ್ದ ಅವನ ದೃಷ್ಟಿ ಕೆಳಗೆ ಕಾಲಿನ ಕಡೆ

ಹರಿಯಿತು. ಗುರಿ ತಪ್ಪಿತು. ಪಾರಿವಾಳ ಬದುಕಿತು. ಈ ಕಥೆ ಸರ್ವಜ್ಞನ ವಚನಕ್ಕೆ ಒಂದು ಉತ್ತಮ ನಿದರ್ಶನ. ನಮಗೆ ಒಂದಲ್ಲ ಒಂದು ದಿನ ಒಳಿತಾಗುತ್ತದೆ ಎಂಬ ಕಾರಣಕ್ಕಾದರೂ ಬೇರೆಯವರಿಗೆ ನೆರವು ನೀಡಿ ಎಂಬುದು ಆ ಶರಣನ ತತ್ವ

ಒಳಿತಾಗಿ ಬದುಕುವುದು ಒಳ್ಳೆಯದೆಂದೋ, ಒಳ್ಳೆಯದು ಮಾಡಿದರೆ ತಮಗೂ ಒಳಿತಾಗುವುದೆಂದೋ, ದೇವರ ಕೃಪೆಯಿಂದ ನಮಗಿಷ್ಟೆಲ್ಲಾ ಇದೆ. ಇದರಲ್ಲಿ ಕಿಂಚಿತ್ತಾದರೂ ಇತರರಿಗೆ ಸಹಾಯಮಾಡಿ ದೇವರ ಕೃಪೆಗೆ ಪಾತ್ರರಾಗೋಣ ಎಂದೋ ಅಂತೂ ಯಾವುದೇ ಕಾರಣಕ್ಕಾಗಿಯಾದರೂ ಮನುಷ್ಯ ದೇವರ ಕೃಪೆಯಿಂದ ಪಡೆದ ಸಂಪತ್ತನ್ನು ಇತರರೊಡನೆ ಹಂಚಿಕೊಂಡು ಬದುಕುವುದು ಸಮಾಜದ ಸ್ವಾಸ್ಥ್ಯಕ್ಕೆ ಹಿತ. ತನ್ನ ಸಂಪತ್ತಿನಲ್ಲಿ ಸ್ವಲ್ಪಭಾಗವನ್ನಾದರೂ ದಾನ-ಧರ್ಮಕ್ಕೆಂದು ತೆಗೆದಿರಿಸಬೇಕು. ಕಾರ್ನಾಡು ಸದಾಶಿವರಾಯರಂತೆ, ಹೆಚ್. ಸಿದ್ಧಯ್ಯನವರಂತೆ, ಲಾಲ್‌ಬಹಾದ್ದೂರ್ ಶಾಸ್ತ್ರಿಯವರರಂತೆ ತಮಗೇ ಕೊರತೆಯಾಗುವಂತೆ ಬದುಕಬೇಕೆಂದು ಅರ್ಥವಲ್ಲ. ತಮಗೆ ದಾನಮಾಡುವ ಶಕ್ತಿಯನ್ನು ಉಳಿಸಿಕೊಂಡು ಮಾಡಿದರೂ ಸಾಕು. ತಮ್ಮ ಸಂಪತ್ತಿನಲ್ಲಿ ಸ್ವಲ್ಪ ಭಾಗವನ್ನು ದಾನಕ್ಕಾಗಿ (ಕಷ್ಟದಲ್ಲಿರುವವರ ನೆರವಿಗಾಗಿ) ಧರ್ಮಕ್ಕಾಗಿ, ಧಾರ್ಮಿಕತೆಯ ಉಳುವಿಗಾಗಿ ಎಂದರೆ ಸತ್ಕಾರ್ಯಕ್ಕಾಗಿ ತೆಗೆದಿಟ್ಟು, ಪ್ರತಿಯೊಬ್ಬರೂ ತಮ್ಮ ನಾಡಿನ, ಸಂಸ್ಕೃತಿಯ ಧರ್ಮದ ಉಳಿವಿಗೆ ಸಹಾಯಕವಾಗಬಹುದಾಗಿದೆ.

■

## ೧೮. ಅದೃಷ್ಟವಂತರು

ಮನುಷ್ಯ ಸ್ವಭಾವ ಹಲವು ರೀತಿ, ಒಬ್ಬರಿದ್ದಂತೆ ಒಬ್ಬರಿರುವುದಿಲ್ಲ. ಒಬ್ಬರದು ಚುರುಕು ಸ್ವಭಾವವಾದರೆ ಮತ್ತೊಬ್ಬರದು ಮಂದಗತಿಯದಿರಬಹುದು. ಒಬ್ಬರು ಯಾವುದೇ ಕೆಲಸಮಾಡಬೇಕಾಗಿ ಬಂದಾಗ, ಆಗಿಂದಾಗಲೇ ಮಾಡಿ ಮುಗಿಸಿಬಿಡುತ್ತಾರಾದರೆ, ಮತ್ತೊಂಬ್ಬರು, 'ಇರಲಿ ಬಿಡು, ನಾಳೆ ಮಾಡಿದರಾಯ್ತು' ಎಂದು ಮುಂದೂಡುವವರಿರುತ್ತಾರೆ. ಆದರೆ, ಯಾವ ವ್ಯಕ್ತಿ, ಮಾಡಬೇಕಾದ ಕೆಲಸವನ್ನು ನಾಳೆಗೆಂದು ಮುಂದೂಡದೆ, ಸಾಧ್ಯವಾದಷ್ಟು ಬೇಗ ಮುಗಿಸುತ್ತಾನೋ ಅವನನ್ನು ಅದೃಷ್ಟಶಾಲಿ ಎನ್ನಬಹುದು. ಏಕೆಂದರೆ ಅಂತಹವನನ್ನು ಮೆಚ್ಚುಗೆ, ಸಾಧನೆ, ಯಶಸ್ಸುಗಳು ಹಿಂಬಾಲಿಸುತ್ತವೆ.

ನಾವು ಮಾಡುವ ಕೆಲಸವನ್ನು ಮುಗಿಸದೆ, ಮುಂದೂಡುತ್ತಾ ಹೋದರೆ, ಮಾಡಿದ್ದರೆ ದೊರೆಯಬಹುದಾಗಿದ್ದ ಅನೇಕ ಅನುಕೂಲಗಳು ತಪ್ಪಬಹುದು ಅಥವಾ ಅದನ್ನು ಮಾಡಲು ಮುಂದೆ ಸಾಧ್ಯವೇ ಆಗದೆ ಹೋಗಬಹುದು. ಅಂತಹ ಒಂದು ವಿಚಾರವನ್ನು ಕೆಳಗಿನ ಸುಭಾಷಿತ ತಿಳಿಸುತ್ತದೆ.

ಶ್ವಃ ಕಾರ್ಯಮ್ ಆದ್ಯ ಕುರ್ವೀತ ಪೂರ್ವಾಹ್ಣೇಚ ಅಪರಾಹ್ನಿಕಂ ।
ನಹಿ ಪ್ರತೀಕ್ಷತೆ ಮೃತ್ಯುಃ ಕೃತಮಸ್ಯನವಾಕೃತಂ ॥

ಈ ಸುಭಾಷಿತದಲ್ಲಿ ವ್ಯಕ್ತವಾಗಿರುವ ಹಿತವಚನದಂತೆ ನಾಳಿನ ಕೆಲಸವನ್ನು ಇಂದೇ ಮಾಡಿ ಮುಗಿಸಬೇಕು. ಮಧ್ಯಾಹ್ನ ಮಾಡಬೇಕಾದ ಕೆಲಸವನ್ನು ಬೆಳಿಗ್ಗೆಯೇ ಮುಗಿಸುವುದೊಳ್ಳೆಯದು. ಏಕೆಂದರೆ ಮೃತ್ಯುವು ಯಾವಾಗ ಆಕ್ರಮಣ ಮಾಡುತ್ತದೋ ಹೇಳಲು ಬರುವುದಿಲ್ಲ. ಅದು ನಮ್ಮ ಕೆಲಸ, ಮಾಡುವತನಕ ಕಾಯುವುದಿಲ್ಲ. ನಮ್ಮ ಕೆಲಸ ಮಾಡಿ ಮುಗಿಸಿದ್ದೇವೋ ಇಲ್ಲವೋ ಎಂದು ನೋಡುವುದೂ ಇಲ್ಲ. ಕೆಲಸವನ್ನು ನಾವು ಮುಂದೂಡಬಹುದು, ಆದರೆ ಸಾವನ್ನು ಮುಂದೂಡುವ ಶಕ್ತಿ ನಮ್ಮಲ್ಲಿಲ್ಲ. ಆದುದರಿಂದ ಮಾಡಬೇಕಾದ ಕೆಲಸವನ್ನು ಆಗಿಂದಾಗಲೇ ಮಾಡಿ ಮುಗಿಸುವುದು ಮುತ್ಸದ್ದಿತನ. ಬಸವಣ್ಣನವರೂ ಸಹ ಶಿವಪೂಜೆ ಮಾಡುವ ವಿಷಯದಲ್ಲಿ ಇಂತಹುದೇ ವಿಚಾರವನ್ನು ಕೆಳಗಿನ ವಚನದಲ್ಲಿ ಹೇಳಿರುವುದನ್ನು ಕಾಣಬಹುದು.

ಹೊತ್ತಾರೆ ಎದ್ದು ಅಘ್ಘವಣಿಯ ತಂದು
ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು?
ಹೊತ್ತು ಹೋಗದ ಮುನ್ನ ಮೃತ್ಯು ಒಯ್ಯದ ಮುನ್ನ
ತೊತ್ತುಗೆಲಸವ ಮಾಡು ಕೂಡಲಸಂಗಮದೇವ

ಇಲ್ಲಿ, ಉಳಿದ ಕೆಲಸ ಮಾಡುವ ಮುನ್ನವೇ ಲಿಂಗವನ್ನು ಪೂಜಿಸಬೇಕು. ಆಮೇಲೆ ಮಾಡಿದರಾಯ್ತೆಂದು ಪೂಜೆಯನ್ನು ಮುಂದೂಡಬಾರದೆಂದು ಹೇಳಲ್ಪಟ್ಟಿದೆ. ಏಕೆಂದರೆ ಈಗ ಮುಂದೂಡಿದರೆ, ಮುಂದೆ ಮಾಡುವ ಕಾಲಕ್ಕೆ ಏನು ತೊಂದರೆ ಬರುತ್ತದೋ ಯಾರಿಗೆ ಗೊತ್ತು? ಮನುಷ್ಯನ ಕೈಲಿ ಯಾವುದೂ ಇಲ್ಲ. ಯಾವಾಗ ಬೇಕಾದರೂ ಮೃತ್ಯವು ಯಾವ ರೂಪದಲ್ಲಿ ಬೇಕಾದರೂ ಬಂದು, ಮಾನವನನ್ನು ಕೊಂಡೊಯ್ಯಬಹುದು. ಆದುದರಿಂದ ಸಾವು ಒಯ್ಯುವ ಮುನ್ನವೇ ಆದಷ್ಟು ಬೇಗ ನೀನು ಮಾಡಬೇಕಾದ ಎಲ್ಲ ಕೆಲಸಗಳನ್ನು ಮುಗಿಸು ಎಂಬುದು ಈ ವಚನದ ಮುಖ್ಯ ತಾತ್ಪರ್ಯ.

ಮಾಡಬೇಕಾದ ಕೆಲಸವನ್ನು ಆದಷ್ಟು ಬೇಗ ಮಾಡಿ ಮುಗಿಸುವ ಸ್ವಭಾವವನ್ನು ನಾವು ಬಾಲ್ಯದಿಂದಲೇ ರೂಢಿಸಿಕೊಳ್ಳಬೇಕು. ಆಲಸ್ಯಕ್ಕೆ ಅವಕಾಶಕೊಡದೆ, ವೃಥಾ ಕಾಲಯಾಪನೆ ಮಾಡದೆ, ಮಾಡಬೇಕಾದ ಕೆಲಸವನ್ನು ಆಗಿಂದಾಗಲೇ ಮಾಡಿ ಮುಗಿಸುವುದು ಮುತ್ಸದ್ದಿತನ. ಹೀಗೆ ಮಾಡುತ್ತಾ ಇದ್ದರೆ, ಆ ವ್ಯಕ್ತಿಗೆ ಅದೇ ಸ್ವಭಾವ ರೂಢಿಯಾಗಿ ಬಿಡುತ್ತದೆ. ಕೆಲಸ ಮಾಡಬೇಕಾಗಿ ಬಂದಾಗ, ಅವನಿಗೆ ಅದನ್ನು ಮಾಡಿ ಮುಗಿಸದ ಹೊರತು ಸಮಾಧಾನವಿರುವುದಿಲ್ಲ. ಮನಸ್ಸು ಚಡಪಡಿಸುತ್ತಿರುತ್ತದೆ. ಮಾಡಿ ಮುಗಿಸಿದ ಮೇಲೆ, ಒಂದು ರೀತಿಯ ತೃಪ್ತಿ ಅವನಿಗುಂಟಾಗುತ್ತದೆ. ಹಾಗೆಯೇ ಕೆಲವರು ಬಾಲ್ಯದಿಂದಲೂ ಆಲಸ್ಯ ಪ್ರವೃತ್ತಿ ಉಳ್ಳವರಾಗಿ ಒಂದು ಸಣ್ಣ ಕೆಲಸ ಮಾಡಬೇಕಾದ ಸಂದರ್ಭ ಬಂದರೂ, 'ಬೇಕಾದಷ್ಟು ಸಮಯವಿದೆಯಲ್ಲಾ; ಈಗಲೇ ಏನವಸರ; ನಾಳೆ ಮಾಡಿದರಾಯ್ತು ಎಂದು ಉದಾಸೀನ ಮಾಡುತ್ತಾರೆ. ಅಂತಹವರಿಗೆ ಆ 'ನಾಳೇ ಬರುವುದೇ ಇಲ್ಲ. ಮುಂದೂಡುತ್ತಾ ಹೋಗುವ ಪ್ರವೃತ್ತಿ ಇರುವ ಅವರಿಗೆ, ಕೆಲಸ ಮಾಡಲಾಗದಿದ್ದರೂ ಮುಜುಗರವೆನಿಸುವುದಿಲ್ಲ. ಅವರಿಗೆ ಇದೇ ರೂಢಿಯಾಗಿ ಎಂದೂ ಯಾವ ಕೆಲಸವನ್ನೂ ಸಕಾಲಕ್ಕೆ ಮಾಡದಂತಹ ಸ್ವಭಾವ ಬಂದುಬಿಡುತ್ತದೆ. ಇಂತಹ ಆಲಸ್ಯ ಪ್ರವೃತ್ತಿ ಮನುಷ್ಯನ ಮಹಾ ಶತ್ರುವೆಂದೇ ಹೇಳಬಹುದು. ಈ ಸ್ವಭಾವ ಅವನ ಪ್ರಗತಿಯನ್ನು ಕುಂಠಿತಗೊಳಿಸುತ್ತದೆ. ಕೆಲಸ ಮಾಡುವ ಸಾಮರ್ಥ್ಯವಿದ್ದರೂ ಸಕಾಲದಲ್ಲಿ ಮಾಡುವುದಿಲ್ಲವಾಗಿ ಅವನು ಅನೇಕ ಅನುಕೂಲಕರ ಅವಕಾಶಗಳನ್ನು

ತಪ್ಪಿಸಿಕೊಳ್ಳಬೇಕಾಗುತ್ತದೆ. ಇಷ್ಟೇ ಅಲ್ಲ ಕರ್ತವ್ಯ ಚ್ಯುತಿ ಉಂಟಾಗಿ ನಿಂದನೆಗೂ ಗುರಿಯಾಗಬೇಕಾಗುತ್ತದೆ.

ಮಾಡಬೇಕಾದ ಕೆಲಸವನ್ನು ತಕ್ಷಣ ಮಾಡುವ ಸ್ವಭಾವದವರು, ಕೆಲಸ ಮುಗಿಸಿ, ಮನಸ್ಸನ್ನು ಸರಳಮಾಡಿಕೊಂಡು ನಿಶ್ಚಿಂತರಾಗಿಬಿಡುತ್ತಾರೆ. ಹಾಗಿಲ್ಲದವರು ನಾಳೆ ಮಾಡಿದರಾಯ್ತೆಂದು ಮುಂದೆ ಹಾಕುತ್ತಾರೆ. ಹಾಗಿದ್ದಾಗ ಮಾಡಲೇಬೇಕಾದ ಮತ್ತೊಂದು ಕೆಲಸ ಮರು ದಿನ ಬಂದು, ಈ ಕೆಲಸವನ್ನೂ ಮುಂದೂಡುವಂತಾಗಬಹುದು. ಆಗಲೂ ಮಾಡುವುದಕ್ಕೆ ಸಾಧ್ಯವಿಲ್ಲವಾಗಿ ಸಮಸ್ಯೆ ಉದ್ಭವಿಸಬಹುದು. ಕೆಲಸದ ಹೊರೆ ಹೆಚ್ಚಾದಾಗ ಮನಸ್ಸು ಭಾರವಾಗುತ್ತದೆ. ಯಾವುದನ್ನು ಮಾಡಬೇಕು, ಯಾವುದನ್ನು ಬಿಡಬೇಕು ಎಂಬ ಗೊಂದಲಕ್ಕೆ ಒಳಗಾಗಿ ಮನಸ್ಸು ಏನನ್ನೂ ಮಾಡಲಾರದ ಅಸಹಾಯಕ ಸ್ಥಿತಿ ತಲುಪುತ್ತದೆ ಅಥವಾ ಮಾಡಿದರೂ, ತುಂಬಾ ಒತ್ತಡದಲ್ಲಿ ಮಾಡುವುದರಿಂದ ಕೆಲಸ ಅಷ್ಟು ಸಮರ್ಪಕವಾಗುವುದಿಲ್ಲ. ಕೆಲಸದ ಗುಣಮಟ್ಟ ಕಡಿಮೆಯಾಗಬಹುದು. ಇದು ಒಂದು ರೀತಿಯ ನಷ್ಟವಾದರೆ, ಕೆಲಸದ ಫಲವೇ ದೊರೆಯದಂತೆಯೂ ಆಗಿ ಮತ್ತೊಂದು ರೀತಿಯ ನಷ್ಟಕ್ಕೂ ಒಳಗಾಗಬೇಕಾಗುತ್ತದೆ. ಉದಾಹರಣೆಗೆ ಹೇಳುವುದಾದರೆ, ಒಬ್ಬ ರೈತನ ಹೊಲದ ಫಸಲು ಕೊಯ್ಲಿಗೆ ಬಂದಿರುತ್ತದೆಯೆಂದುಕೊಳ್ಳೋಣ. ಆ ರೈತ ಸ್ವಲ್ಪ ಆಲಸ್ಯ ಪ್ರವೃತ್ತಿಯವನು. ಹಾಗಾಗಿ ಈಗಲೇ ಏನವಸರ ಇನ್ನೊಂದೆರಡು ದಿನದ ನಂತರ ಕಟಾವು ಮಾಡಿದರಾಯ್ತು ಎಂದುಕೊಳ್ಳುತ್ತಾನೆ. ಆದರೆ ಮರುದಿನ ಬಿರುಗಾಳಿ ಬೀಸಿ, ಜಡಿಮಳೆ ಸುರಿದು, ಬೆಳೆಯೆಲ್ಲಾ ನೆಲಕ್ಕೆ ಬಿದ್ದು, ಫಸಲೆಲ್ಲಾ ಉದುರಿ ಭೂಮಿ ಪಾಲಾಗಿ ಹೋಗಬಹುದು. ಮಳೆ ನೀರಿನಲ್ಲಿ, ದವಸ ಕೊಚ್ಚಿಹೋಗಬಹುದು. ಇಡೀ ವರ್ಷದ ಬೆಳೆ, ರೈತನ ಆಲಸ್ಯ ಪ್ರವೃತ್ತಿಯ ಕಾರಣ 'ಕೈಗೆ ಬಂದುದು ಬಾಯಿಗೆ ಬರಲಿಲ್ಲ'ವೆಂಬಂತೆ ನಷ್ಟವಾಗಬಹುದು. ಅಲ್ಪ-ಸ್ವಲ್ಪ ಉಳಿದರೂ ಮಳೆಯ ನೀರಿನಲ್ಲಿ ನೆನೆದುದರಿಂದ ಮುಗ್ಗಿ ರೈತನ ವರ್ಷದ ಬದುಕೆಲ್ಲಾ ಕಷ್ಟಕರವಾಗಬಹುದು. ಹೀಗೆ, ಒಂದು ಕ್ಷಣದ ಆಲಸ್ಯದ ನಿರ್ಧಾರ ಇಡೀ ಕುಟುಂಬದ ಸುಖ-ಸಂತೋಷಗಳನ್ನು ನುಂಗಿ ನೀರು ಕುಡಿಯಬಹುದು.

ಈ ರೀತಿಯ ಉದಾಹರಣೆಗಳನ್ನು ಗಮನದಲ್ಲಿಟ್ಟುಕೊಂಡು ವಿದ್ಯಾರ್ಥಿಗಳು ಅಂದಂದಿನ ಪಾಠವನ್ನು ಅಂದಂದೇ ಓದಿ ಮುಗಿಸುವ ಪ್ರವೃತ್ತಿ ಬೆಳೆಸಿಕೊಳ್ಳಬೇಕು. ಹಾಗಿಲ್ಲದೆ, ಪರೀಕ್ಷೆ ಮಾರ್ಚ್‌ನಲ್ಲಿದೆಯಲ್ಲಾ, ಏಪ್ರಿಲ್‌ನಲ್ಲಿ ಇದೆಯಲ್ಲಾ ಎಂದು ಉದಾಸೀನ ಮಾಡಿ, ಓದುವುದನ್ನು ಮುಂದೆ ಹಾಕಿದರೆ, ಓದುವ ವಿಷಯಗಳು ದಿನದಿನವೂ ಕೂಡುತ್ತಾ ಹೋಗಿ, ಪರೀಕ್ಷೆಯ ಸಮಯಕ್ಕೆ, ಹೊಸದಾಗಿ ಓದಿ

ಅರಗಿಸಿಕೊಳ್ಳಬೇಕಾದ ವಿಷಯಗಳು ಹೊರೆ–ಹೊರೆಯಾಗಿ ಬಿಡುತ್ತವೆ. ಆಗ ಪರೀಕ್ಷೆಯ ಸಮಯದಲ್ಲಿ ಓದಿನ ಕಡೆ ಕಣ್ಣು ಹಾಯಿಸಿದಾಗ, ಓದಬೇಕಾದ ವಿಷಯಗಳನ್ನು ನೋಡಿ, ಎದೆ ಧಸಕ್ಕೆನ್ನುತ್ತದೆ. ಇಷ್ಟು ಕಡಿಮೆ ಸಮಯದಲ್ಲಿ ಇಷ್ಟೊಂದು ವಿಷಯಗಳನ್ನು ಓದುವುದು ಹೇಗೆ, ನೆನಪಿಟ್ಟುಕೊಳ್ಳಲು ಆಗುತ್ತದೆಯ? ಎಂಬ ಪ್ರಶ್ನೆಗಳು ಮುತ್ತಿ, ಮನಸ್ಸಿಗೆ ದಿಕ್ಕು ತೋಚದಂತಾಗುತ್ತದೆ. ಇಷ್ಟೆಲ್ಲಾ ಓದುವುದು ಹೇಗೆ ಎಂಬ ತಳಮಳದಲ್ಲಿ, ಓದಿದ್ದು ನೆನಪಿರುವುದೋ ಇಲ್ಲವೋ ಎಂಬ ಸಂಶಯವೂ ಸೇರಿ, ನೆನಪು ಬರದೆ ಫೇಲಾದರೆ ಎಂಬ ಗಾಬರಿ ಉಂಟಾಗಿ ಓದಿದ್ದು ಅರ್ಥವಾಗದೆ ಸಮಯವೆಲ್ಲಾ ವ್ಯರ್ಥವಾಗುತ್ತದೆ ನಂತರ ಪರೀಕ್ಷೆಯಲ್ಲಿ ಸರಿಯಾಗಿ ಬರೆಯಲೂ ಆಗದೆ, ಭವಿಷ್ಯ ಬರಡಾಗಿ, ನಿರಾಶೆಯ ಸುಳಿಯಲ್ಲಿ ಸಿಕ್ಕು ಒದ್ದಾಡುವಂತಾಗುವುದು. ಆದುದರಿಂದ, 'ಆಲಸ್ಯಂ ಅಮೃತಂ ವಿಷಂ' ಎಂದರಿತು, ಆಲಸ್ಯ ಪ್ರವೃತ್ತಿಗೆ ಆಸ್ಪದ ಕೊಡದೆ, ನಾಳೆ ಮಾಡಬೇಕಾದುದನ್ನು ಇಂದೆ ಮಾಡುವ ಪ್ರವೃತ್ತಿ ಉಳ್ಳವನು ಅದೃಷ್ಟಶಾಲಿ ಯಶಸ್ಸು, ನೆಮ್ಮದಿ, ಸಂಪತ್ತುಗಳ ಅಂತಹವನನ್ನು ಬೆಂಬೆತ್ತಿ ಬರುತ್ತವೆ. ಅವನಿಗಾಗಿ ಕಾದು ಕುಳಿತಿರುತ್ತವೆ.

ನಾಳೆ ಮಾಡಬೇಕಾದ ಕೆಲಸವನ್ನು ಇಂದೇ ಮಾಡಬೇಕೆಂದು ಹೇಗೋ ಮಾಡಿ ಮುಗಿಸಿದರೆ ಅದು ಕೆಲಸ ಮಾಡಿದಂತಲ್ಲ. ಮಾಡುವ ಕೆಲಸವನ್ನು ಶ್ರದ್ಧೆಯಿಂದ ಮಾಡಬೇಕು; ನಿಷ್ಠೆಯಿಂದ ಮಾಡಬೇಕು; ಅಚ್ಚುಕಟ್ಟಾಗಿ ಮಾಡಬೇಕು. ಕೆಲಸದಲ್ಲಿ ಕೊರತೆ ಇರಬಾರದು; ದೋಷವಿರಬಾರದು; ಗುಣಮಟ್ಟ ಕಡಿಮೆಯಾಗಬಾರದು. ಈ ರೀತಿ ಕೆಲಸ ಮಾಡುವ ರೂಢಿಯನ್ನು ಮೊದಲಿನಿಂದಲೂ ಸಾಧಿಸಿಕೊಳ್ಳಬೇಕು. ಅಂತಹವರು ಜೀವನದಲ್ಲಿ ಔನ್ನತ್ಯವನ್ನು ಹೊಂದುತ್ತಾರೆ; ಎಲ್ಲರ ಮೆಚ್ಚುಗೆಗೆ ಪಾತ್ರರಾಗುತ್ತಾರೆ. ಸಂತುಷ್ಟವಾಗಿ ಬದುಕುತ್ತಾರೆ. ಅವರನ್ನು ಎಲ್ಲರೂ, 'ಅದೃಷ್ಟವಂತರು' ಎಂದು ಮೆಚ್ಚುಗೆಯಿಂದ ಗುರುತಿಸುತ್ತಾರೆ.

ಎಲ್ಲರೂ ಅದೃಷ್ಟವಂತರಾದರೆ, ಅಂತಹ ಸಮಾಜವೆಷ್ಟು ಛಂದ.!

■

## ೧೯. ದೇಶದ ಅಭಿವೃದ್ಧಿ

ನಮ್ಮದು ಹೇಳಿಕೊಳ್ಳಲು ಪ್ರಜಾರಾಜ್ಯ. ಇಲ್ಲಿ ಪ್ರಜೆಗಳೇ ಪ್ರಭುಗಳು. ಇದು ಒಪ್ಪತಕ್ಕದ್ದೆ. ಏಕೆಂದರೆ ನಮ್ಮನ್ನು ಆಳುವವರು ಪ್ರಜೆಗಳಿಂದ ಆರಿಸಿ ಕಳಿಸಿದವರು. ಆದುದರಿಂದ ಅಪ್ರತ್ಯಕ್ಷವಾಗಿ ಪ್ರಜೆಗಳೇ ಆಳುವುದರಿಂದ ಪ್ರಜೆಗಳೇ ಪ್ರಭುಗಳೆಂದು ನಿರ್ವಿವಾದವಾಗಿ ಹೇಳಬಹುದು.

ಪ್ರಜಾಪ್ರಭುತ್ವ ರಾಷ್ಟ್ರದ ಪ್ರಜೆಗಳೂ ಅತ್ಯಂತ ಜವಾಬ್ದಾರಿಯುತವಾಗಿ ಬದುಕಬೇಕಾಗುತ್ತದೆ. ಕಾಯಿದೆಗಳನ್ನು ರಚಿಸುವವರು ಪ್ರಜೆಗಳ ಪ್ರತಿನಿಧಿಗಳು. ಆದ್ದರಿಂದ ಪ್ರಜೆಗಳು ಆ ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಆದರೆ ಇಂದು ಭಾರತದಲ್ಲಿ ನಡೆಯುತ್ತಿರುವುದೇನು? ಜನರು ಕಾಯಿದೆಗಳನ್ನು ಮುರಿಯುವುದರಲ್ಲಿ ಒಬ್ಬರಿಗಿಂತ ಒಬ್ಬರು ಮೇಲುಗೈ ತೋರಿಸುತ್ತಿದ್ದಾರೆ. ನಿಜವಾಗಿ ಹೇಳುವುದಾದರೆ ಪ್ರತಿಯೊಬ್ಬ ಪ್ರಜೆಯೂ ತನ್ನ ಕರ್ತವ್ಯಗಳನ್ನು ಜವಾಬ್ದಾರಿಯಿಂದ, ರಾಷ್ಟ್ರಾಭಿಮಾನದಿಂದ ನಿರ್ವಹಿಸಬೇಕಾಗುತ್ತದೆ. ಆದರೆ ಈಗಿನ ಪರಿಸ್ಥಿತಿಯಲ್ಲಿ ಬಹುಜನರು ಬೇಜವಾಬ್ದಾರಿಯುತ ನಡವಳಿಕೆ ತೋರಿಸುತ್ತಿರುವುದನ್ನು ಕಾಣುತ್ತಿದ್ದೇವೆ. ರಾಷ್ಟ್ರಾಭಿಮಾನದ ಮಾತಂತೂ ಪುಸ್ತಕದ ವೇದಿಕೆಯ ಮಾತಾಗಿ ಉಳಿದಿದೆ. ರಾಷ್ಟ್ರಕ್ಕಾಗಿ, ರಾಷ್ಟ್ರದ ಹಿತಕ್ಕಾಗಿ ಗೌರವಕ್ಕಾಗಿ, ಏಳ್ಗೆಗಾಗಿ ಚಿಂತಿಸುವವರ ಸಂಖ್ಯೆ ದಿನ ದಿನಕ್ಕೆ ಇಳಿಮುಖವಾಗುತ್ತಿದೆ. ಸ್ವಾರ್ಥ ಮೂಲವಾದ ಬಾಳು ಬದುಕುವುದೇ, ಇಂದಿನ ಜನರ ತತ್ವವಾಗಿದೆ. ಸ್ವಾರ್ಥ, ವಂಚನೆ ಜೀವನದಲ್ಲಿ ಹಾಸು ಹೊಕ್ಕಾಗಿದೆ ಹಾಗಿದ್ದರೆ ಮಾತ್ರ ಇಂದು ಬದುಕುಳಿಯಲು ಸಾಧ್ಯ ಎಂಬ ನಂಬುಗೆ ಜನಜನಿತವಾಗಿದೆ. ಹಾಗಾಗಿ, Words Contradict their heart but never thier action. ಹೀಗೆ 'ವಂಚನೆ' ಬದುಕಿನ ತತ್ವವಾಗಿದೆ. ಹಿಂದಿನಂತೆ ರಾಷ್ಟ್ರಾಭಿಮಾನದಿಂದ ದೇಶಕ್ಕಾಗಿ ಏನು ತ್ಯಾಗ ಮಾಡಬೇಕಾದರೂ ಸಿದ್ಧವಾಗಿರುವ ಜನರ ಸಂಖ್ಯೆ ಸಾಕಷ್ಟಿಲ್ಲವಾದರೂ ಕೆಲವರು ಅಲ್ಲಲ್ಲಿ ಇದ್ದೇ ಇದ್ದಾರೆ. ಅಂತಹವರನ್ನು ಆದರ್ಶವಾಗಿಟ್ಟುಕೊಂಡು ಜೀವನ ರೂಪಿಸಿಕೊಂಡರೆ, ದೇಶದ ಸ್ಥಿತಿ ಉತ್ತಮಗೊಂಡೀತು. ಆದರೆ ಆಧುನಿಕರು ಅವರನ್ನು ಆದರ್ಶವಾಗಿಟ್ಟುಕೊಂಡಿರಲಿ; ಅವರನ್ನು ಹೀನಾಯ ದೃಷ್ಟಿಯಿಂದ ನೋಡಿದಿದ್ದರೆ ಸಾಕಾಗಿದೆ. ಇಂದಿನ ಜನರು

ಆದರ್ಶವಾದಿಗಳನ್ನು ಅಪಹಾಸ್ಯ ಮಾಡುತ್ತಾರೆ. ಅವರು ಮೂರ್ಖರೆಂಬಂತಹ ರೀತಿಯಲ್ಲಿ ಕಾಣುತ್ತಾರೆ. ವ್ಯವಹಾರ ಜ್ಞಾನವಿಲ್ಲದ ಅವ್ಯವಹಾರಿಗಳೆಂದು ಕಡೆಗಣಿಸುತ್ತಾರೆ. ಈ ಹಿನ್ನೆಲೆಯ ಅಭಿಪ್ರಾಯದ ಜನರೇ ಹೆಚ್ಚಾಗಿರುವುದರಿಂದ, ರಾಷ್ಟ್ರಕ್ಕೆ ಕೆಡುಕು ಮಾಡುವವರ ಸಂಖ್ಯೆ ಅಧಿಕವಾಗುತ್ತಿದೆ. ತಾವು ಮಾಡುವ ಕೆಲಸಗಳು, ಕೈಗೊಳ್ಳುವ ನಿರ್ಣಯಗಳು, ದೇಶದ ಹಿತದೃಷ್ಟಿಯಿಂದ ಎಷ್ಟು ಮಾರಕವಾದುದೆಂದು ಯೋಚಿಸದೆ, ವೈಯಕ್ತಿಕ ಲಾಭ, ಹಿತಗಳನ್ನೇ ಮಹತ್ತಾಗಿ ಪರಿಗಣಿಸಿರುವುದೇ ಇಂದು ರಾಷ್ಟ್ರದಲ್ಲಿ ಅಶಾಂತಿಯ, ಅಭದ್ರತೆಯ, ಭಯೋತ್ಪಾದಕವಾದ ಸ್ಥಿತಿಗೆ ಅವಕಾಶವಾಗಿದೆ.

ಇಂತಹ ಪರಿಸ್ಥಿತಿಯಲ್ಲಿ ಸತ್ಪ್ರಜೆಗಳಾದವರು ದೇಶದ ಉದ್ಧಾರಕ್ಕಾಗಿ ಪಣತೊಡುವ ಅವಶ್ಯಕತೆ ಇದೆ. ಬ್ರಿಟಿಷರ ಕಾಲದಲ್ಲಿ ಲೆಕ್ಕವಿಲ್ಲದಷ್ಟು ಪ್ರಜೆಗಳು ಜೀವನವನ್ನೇ, ಜೀವವನ್ನೇ ಪಣವಾಗಿಟ್ಟು ಬ್ರಿಟಿಷರ ಆಳ್ವಿಕೆ ಕೊನೆಗೊಳ್ಳುವಂತೆ ಮಾಡಿದರು. ಬ್ರಿಟಿಷರು ಜಗತ್ತನ್ನೇ ಜಯಿಸಿ, ನಿರಂಕುಶ ಪ್ರಭುಗಳಾಗಿ ಆಳಬಹುದೆಂಬಂತೆ ಹೊರಟಿದ್ದರು. ಅವರ ಈ ಧೋರಣೆ ದೇಶಪ್ರೇಮಿಗಳಾದ ಭಾರತೀಯರಲ್ಲಿ ಪಂಥಾಹ್ವಾನದಂತೆ ಕಂಡು, ಅವರನ್ನು ದೇಶದಿಂದ ಓಡಿಸಿ, ಭಾರತವನ್ನು ಸ್ವಾತಂತ್ರಗೊಳಿಸುವ ಪ್ರತಿ ಪಂಥತೊಟ್ಟು ಶತ್ರುಗಳ ಗುಂಡಿಗೆ ಎದೆಯೊಡ್ಡಿನಿಂತರು. ಎಂತಹ ತ್ಯಾಗಕ್ಕೂ ಸಿದ್ಧರಾದರು. ಅಂತಹ ಮಹನೀಯರ ತ್ಯಾಗದಿಂದಾಗಿಯೇ ನಾವಿಂದು ಸ್ವಾತಂತ್ರ್ಯ ಪಡೆದು ಪರಾಧೀನತೆಯಿಂದ ಮುಕ್ತರಾಗಿದ್ದೇವೆ. ಅಷ್ಟು ತ್ಯಾಗದಿಂದ ಪಡೆದ ಸ್ವಾತಂತ್ರ್ಯವನ್ನು ನಾವೆಷ್ಟು ಎಚ್ಚರದಿಂದ ರಕ್ಷಿಸಿಕೊಳ್ಳಬೇಕಾಗಿತ್ತು! ಆದರೆ, ಎಲ್ಲವನ್ನೂ ಮರೆತು, ನಾವಿಂದು ವೈಯಕ್ತಿಕ ಲಾಭಕ್ಕಾಗಿ ಏನು ಬೇಕಾದರೂ ಮಾಡಲು ಸಿದ್ಧರಿದ್ದೇವೆ. ಇಂತಹ ಜನರ ಸಂಖ್ಯೆ ಹೆಚ್ಚಾದುದರಿಂದಲೇ, ದೇಶದ ಎಲ್ಲೆಡೆಯಲ್ಲಿ ಕಾಡುಗಳ್ಳ ವೀರಪ್ಪನಂತಹವನ್ನು ವಂಚಕನಾದ ಹರ್ಷದ್ ಮೆಹತಾ, ಅಂತಹವನ್ನು, ಕೊಲೆಗಡುಕರನ್ನು, ಭ್ರಷ್ಟಾಚಾರಿಗಳಾದ ರಾಜಕಾರಣಿಗಳು, ದರೋಡೆಕೋರರನ್ನು, ಸಮಾಜಘಾತುಕರನ್ನು, ಭಯೋತ್ಪಾದಕರನ್ನು ಎಲ್ಲೆಲ್ಲೂ ಕಾಣುತ್ತಿದ್ದೇವೆ. ಈ ಜನರ ಕಾರ್ಯಾಚರಣೆ ದೇಶಕ್ಕೇ ಸವಾಲಾಗಿ ನಿಂತಿದೆ. ಸರ್ಕಾರ ಹಾಗೂ ಜನತೆ ಈ ಸವಾಲುಗಳನ್ನೆದುರಿಸಿ, ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಪ್ರೋತ್ಸಾಹಿಸಿ, ದೇಶದ ಹಿತವನ್ನು ರಕ್ಷಿಸಬೇಕಾಗಿದೆ.

ಸುಶಿಕ್ಷಿತರೆಂಬ ಸೋಗು ಹಾಕಿಕೊಂಡು ಸಮಾಜದಲ್ಲಿ ದೊಡ್ಡ ಮನುಷ್ಯರಂತೆ ಬಾಳುತ್ತಿರುವ ಅನೇಕರು, ವರದಕ್ಷಿಣೆಗಾಗಿ ಅಮಾನವೀಯವಾಗಿ ವರ್ತಿಸುತ್ತಿದ್ದಾರೆ. ಸತ್ಪ್ರಜೆಗಳು, ಸರ್ಕಾರ ಇಂತಹ ಪರಿಸ್ಥಿತಿಗಳನ್ನು ಸಮರ್ಥವಾಗಿ ನಿಭಾಯಿಸಬೇಕು. ಸಮಾಜ ಘಾತುಕರನ್ನು ಮಟ್ಟಹಾಕಬೇಕು. ವರದಕ್ಷಿಣೆಯ ಪಿಡುಗನ್ನು ನಿವಾರಿಸಬೇಕು.

ಭ್ರಷ್ಟಾಚಾರ ನಿರ್ಮೂಲನೆ ಮಾಡಬೇಕು. ಸಮಾಜದಲ್ಲಿ ಹಾಸುಹೊಕ್ಕಾಗಿ ಹಬ್ಬಿರುವ ಸ್ವಾರ್ಥಪರತೆಯನ್ನು ನಿವಾರಿಸಬೇಕು. ಆಗ ಭಾರತದ ಭವಿಷ್ಯ ಉಜ್ವಲವಾಗಲು ಸಾಧ್ಯ. ಗಾಂಧೀಜಿಯವರು ಆಶಿಸಿದಂತಹ ರಾಮರಾಜ್ಯ ನಿರ್ಮಾಣಕ್ಕೆ ರಾಷ್ಟ್ರಪ್ರೇಮಿಗಳಾದ ಜನರು ಮುಂದೆ ಬರಬೇಕು.

ಭಾರತ ಜಗತ್ತಿನಲ್ಲಿ ಗೌರವದಿಂದ ತಲೆ ಎತ್ತಿ ನಿಲ್ಲಬೇಕಾದರೆ, ರಾಷ್ಟ್ರವನ್ನು ಸಾಲದ ಹೊರೆಯಿಂದ ಪಾರಾಗಿಸಬಲ್ಲ, ಸಮಸ್ಯೆಗಳನ್ನು ನೀಗಿಸಬಲ್ಲ ಮುತ್ಸದ್ದಿಗಳಾದ ರಾಷ್ಟ್ರಪ್ರೇಮಿಗಳ ಅವಶ್ಯಕತೆ ಇದೆ. ಅಂತಹ ಜನರನ್ನು ನಿರ್ಮಿಸುವ ಶಿಕ್ಷಣ ಅವಶ್ಯಕ. ಕೇವಲ ಜಾಣತನ, ದೇಶದ ಉದ್ಧಾರಮಾಡಲಾರದು. ಅದರೊಡನೆ ದೇಶಪ್ರೇಮ, ಕರ್ತವ್ಯಪ್ರಜ್ಞೆ, ದುಡಿಯುವ ಮನೋಭಾವ, ಪ್ರಾಮಾಣಿಕತೆ ಮುಂತಾದ ಮೌಲ್ಯಗಳು ಕೂಡಿದಾಗ ಮಾತ್ರ ದೇಶದ ಉದ್ಧಾರ ಸಾಧ್ಯ. ದೇಶದ ಬಗೆಗೆ ಜನರ ಮನೋಭಾವ ಮುಖ್ಯ. ಸ್ವಾರ್ಥಕ್ಕಾಗಿ ದೇಶವನ್ನು ಹಾಳುಮಾಡಲು ಸಿದ್ಧರಾಗಿರುವ ಜನ ಇಲ್ಲದಂತಾಗಿ, ದೇಶ ಅಭಿವೃದ್ಧಿಗೊಂಡರೆ ಜನರ ಅಭಿವೃದ್ಧಿ ಸಾಧ್ಯ ಎಂಬ ಅರಿವಿನಿಂದ ಬದುಕುವ ಜನ ಇಂದು ಬೇಕು! ಅದು ಉತ್ತಮ ಶಿಕ್ಷಣ – ಮಾರ್ಗದರ್ಶನ ಅದಕ್ಕಾಗಿಯೇ 'The battle of Waterloo was won on the playground of Eater' ಎಂಬ ಉಕ್ತಿ ಹುಟ್ಟಿಕೊಂಡಿದೆ.

■

## ೨೦. ಸ್ವಾತಿಮುತ್ತು

ಸಾಧು-ಸತ್ಪುರುಷರ ಜೀವನ ಪವಿತ್ರವಾದುದು; ಅಮೋಘವಾದುದು; ಅತ್ಯಂತ ಪ್ರಯೋಜನಕಾರಿಯಾದುದು; ಮನಸ್ಸಿಗೆ ನೆಮ್ಮದಿಯನ್ನು ನೀಡುವಂತಹದು. ಆ ಪವಿತ್ರ ಜೀವಿಗಳು ತಮ್ಮ ದಿವ್ಯಜೀವನವನ್ನು ಜನರ ಉದ್ಧಾರಕ್ಕಾಗಿ, ಉನ್ನತಿಗಾಗಿ, ಶ್ರೇಯಸ್ಸಿಗಾಗಿ ವಿನಿಯೋಗಿಸುವರು. ಸಾಮಾನ್ಯ ಮಾನವ ತನ್ನ ಕಲುಷಿತ ವಿಚಾರಗಳಿಂದ, ಅವಿವೇಕದ ನಡತೆಯಿಂದ ಅಧೋಗತಿಗೆ ಇಳಿಯದೆ, ದುಷ್ಟತನದಿಂದ ದಾನವನಾಗಿ ಉಳಿದ ಜನರ ಹಿಂಸೆಗೆ ಕಾರಣನಾಗದೆ, ಒಳಿತಾದ ಬದುಕು ಬದುಕಲಿ ಎಂಬ ಉದ್ದೇಶದಿಂದ, ತಮ್ಮ ಇಡೀ ಜೀವನವನ್ನು, ಜನರಿಗೆ ಸನ್ಮಾರ್ಗ ತೋರಿಸಲು, ತಮ್ಮ ಬೋಧನೆಯಿಂದ ರಾಜಮಾರ್ಗಕ್ಕೆ ಹೋಗುವಂತೆ ಮಾಡಲು, ಮುಡುಪಾಗಿಟ್ಟು ಹಗಲಿರುಳು ಶ್ರಮಿಸುತ್ತಾರೆ. ಇಂತಹ ಸಂತರು, ಗುರುಗಳು, ಸತ್ಪುರುಷರು ಕೆಲವೇ ಕೆಲವರಿರುತ್ತಾರೆ. ಎಲ್ಲರಿಗೂ ಈ ತರಹೆಯ ಅಪೂರ್ವ, ಪವಿತ್ರ, ವ್ಯಕ್ತಿತ್ವ ಇರುವುದಿಲ್ಲ. ಅವರ ಮಾರ್ಗದರ್ಶನದಂತೆ ಬದುಕಿದರೆ, ಮನುಷ್ಯ ದಾನವನಾಗದೆ, ದೈವತ್ವಕ್ಕೆ ಏರದಿದ್ದರೂ, ಕೊನೆಗೆ ಮಾನವನಾಗಿಯಾದರೂ ಉಳಿಯಬಲ್ಲ. ಇತರರಿಗೆ ಉಪಕಾರ ಮಾಡದಿದ್ದರೂ, ಅಪಕಾರ ಮಾಡದಿದ್ದರೆ, ಇತರರಿಗೆ ಕೇಡು ಬಗೆಯದಿದ್ದರೆ ಅದೇ ಸಮಾಜಕ್ಕೆ ಮಹದುಪಕಾರವಾದೀತು!

ಈ ಸಾಧು-ಸಂತರು ದೇಶಾದ್ಯಂತ ಸಂಚರಿಸಿ, ತತ್ವಬೋಧೆ ಮಾಡಿದರೂ, ತಮ್ಮ ಜೀವನವನ್ನೇ ಲೋಕೋದ್ಧಾರಕ್ಕಾಗಿ ಮುಡುಪಿಟ್ಟರೂ, ಅದರ ಉಪಯೋಗ ಪಡೆದುಕೊಳ್ಳುವವರೆಂದರೆ, ಅದನ್ನು ಶ್ರದ್ಧೆಯಿಂದ ಕೇಳುವವರು ನೂರಕ್ಕೆ ಐದು ಜನರಾದರೂ ಸಿಗುವುದು ದುರ್ಲಭ. ಹಾಗೆ ಕೇಳಿದ ಮೇಲೂ ಅದನ್ನು ಸ್ವಲ್ಪ ಮಟ್ಟಿಗಾದರೂ ಆಚರಣೆಗೆ ತರಬೇಕೆಂದು ಆಲೋಚಿಸುವವರು, ನೂರಕ್ಕೆ ಒಬ್ಬರು ದೊರೆತರೂ ಪುಣ್ಯವೆ. ಇಂತಹ ಮಹಾತ್ಮರ ಬೋಧನೆಯನ್ನು ಕೇಳುವ ಅವಕಾಶವನ್ನು ಅವರು ಮಾಡಿಕೊಟ್ಟರೂ ಜನ, ಆಸೆ, ಆಮಿಷ, ಕಾಮ, ಮದ, ಮೋಹ, ಮಾತ್ಸರ್ಯ, ಮೋಸ ದ್ವೇಷ, ಕುಟಿಲ-ಕುತಂತ್ರಗಳಿಂದ ತುಂಬಿದವರಾಗಿ ಮಾನವನ ಬದುಕು ದುರ್ಭರವಾದುದನ್ನಾಗಿ ಮಾಡುತ್ತಿದ್ದಾರೆ. ಹಾಗೊಂದು ವೇಳೆ, ಜನರ ಉನ್ನತಿಗಾಗಿ ಶ್ರಮಿಸುವ ಸಾಧು-ಸತ್ಪುರುಷರೇ ಇಲ್ಲದಿದ್ದರೆ, ಮಾನವ ಇನ್ನೆಷ್ಟು ಅಧೋಗತಿಗೆ ಇಳಿಯುತ್ತಿದ್ದನೋ ಎಂಬುದನ್ನು ಯೋಚಿಸಲೂ ಕಷ್ಟ.

ಜನರು ತಮ್ಮ ಸುಖ, ಶಾಂತಿ, ನೆಮ್ಮದಿಗಾಗಿಯಾದರೂ, ಅಂತಹ ಸತ್ಪುರುಷರ ದಿವ್ಯವಾಣಿಯನ್ನು ಕೇಳುವ ಅವಕಾಶಗಳನ್ನು ಮೇಲಿಂದ ಮೇಲೆ ಮಾಡಿಕೊಳ್ಳಬೇಕು. ಇದರಿಂದ ತನ್ನ ಹೃದಯವನ್ನು ಪವಿತ್ರವಾಗಿಸಿಕೊಂಡು ಪರಮಾತ್ಮನ ಆವಾಸಸ್ಥಾನಕ್ಕೆ ಯೋಗ್ಯವಾದುದನ್ನಾಗಿ ಮಾಡಿಕೊಳ್ಳಬಹುದು. ದೇಹವನ್ನೇ ದೇಗುಲವನ್ನಾಗಿಸಿಕೊಂಡು, ಸುಖ-ಶಾಂತಿ ಪಡೆಯಬಹುದು. ಎಷ್ಟೇ ಸಂಪತ್ತಿದ್ದರೂ, ಉನ್ನತ ಅಧಿಕಾರದಲ್ಲಿದ್ದರೂ ಶಾಂತಿ-ನೆಮ್ಮದಿ ಇಲ್ಲದಿದ್ದಲ್ಲಿ ಹಣ-ಅಧಿಕಾರ ಇದ್ದರೂ ವ್ಯರ್ಥ. ಮಾನವ ನೆಮ್ಮದಿ ಪಡೆಯಲು ಏನೇನೋ ಮಾಡುತ್ತಾನೆ. ತೀರ್ಥಯಾತ್ರೆ ಮಾಡುತ್ತಾನೆ; ಹರಕೆ-ಕಾಣಿಕೆ ಒಪ್ಪಿಸುತ್ತಾನೆ. ಆದರೆ ಹೃದಯ ಮಾತ್ರ ಕಲುಷಿತವಾಗಿರುತ್ತದೆ. ಹಾಗಾಗಿ, ದುಷ್ಟ ಕೃತ್ಯ ಎಸಗುತ್ತಾನೆ. ಅದರಿಂದ ಕಷ್ಟಗಳು ಹೆಚ್ಚುತ್ತವೆ. ಆ ಕಾರಣ, ಲೆಕ್ಕವಿಲ್ಲದಷ್ಟು ಗುಡಿ--ಗುಂಡಾರಗಳಿಗೆ ಹೋಗುತ್ತಾನೆ; ಹರಕೆ-ಕಾಣಿಕೆ ಒಪ್ಪಿಸುತ್ತಾನೆ. ಆದರೆ ಹೃದಯ ಮಾತ್ರ ಕಲುಷಿತವಾಗಿರುತ್ತದೆ. ಹಾಗಾಗಿ, ದುಷ್ಟ ಕೃತ್ಯ ಎಸಗುತ್ತಾನೆ. ಆದರಿಂದ ಕಷ್ಟಗಳು ಹೆಚ್ಚುತ್ತವೆ. ಆ ಕಾರಣ, ಲೆಕ್ಕವಿಲ್ಲದಷ್ಟು ಗುಡಿ-ಗೋಪುರಗಳು ತಲೆ ಎತ್ತುತ್ತಿವೆ. ಆದರೂ ದುಃಖ-ಕ್ಲೇಷಗಳು ಹೆಚ್ಚುತ್ತಿವೆಯೇ ಹೊರತು, ಕಡಿಮೆಯಾಗುತ್ತಿಲ್ಲ. ಮನಸ್ಸನ್ನು ಪವಿತ್ರಗೊಳಿಸಿಕೊಳ್ಳದೆ, ಪಂಚೇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಳ್ಳದೆ, ಯಾಂತ್ರಿಕವಾಗಿ ಮಾಡಿದ ಯಾವ ಪೂಜೆಯೂ ದೇವರ ಹೃದಯವನ್ನು ಮುಟ್ಟುವುದೂ ಇಲ್ಲ; ತಟ್ಟುವುದೂ ಇಲ್ಲ. ಆದುದರಿಂದ ಸತ್ಸಂಗದ ಮೂಲಕ, ಸನ್ಮಾರ್ಗ ಅರಿತು, ಪರಿಶುದ್ಧ ಜೀವನ ನಡೆಸಿದರೆ, ದೇವರು ಒಲಿಯುತ್ತಾನೆ; ನಮ್ಮ ಪೂಜೆ-ಪ್ರಾರ್ಥನೆಗಳಿಗೆ ಸ್ಪಂದಿಸುತ್ತಾನೆ ಎಂಬುದನ್ನು ಮಾನವರು ಎಷ್ಟು ಬೇಗ ಅರಿತರೆ ಅಷ್ಟು ಒಳ್ಳೆಯದು.

ಸತ್ಸಂಗವನ್ನು ನಾವು ಸತ್ಪುರುಷದಿಂದ ಪಡೆಯಬಹುದು. ಈ ಮಹಾನುಭಾವರು ಹೆಚ್ಚಿರುವುದಿಲ್ಲ. ಏಕೆಂದರೆ, ಯಾರೋ ಪುಣ್ಯಾತ್ಮರು ಜನ್ಮ-ಜನ್ಮಗಳ ಸಾರ್ಥಕ ಬದುಕಿನಿಂದ ದಿವ್ಯಜ್ಞಾನ ಪಡೆದು, ದಿವ್ಯ ಜೀವನ ಬದುಕುತ್ತಾ ಜನತೆಗೆ ದಾರಿದೀಪವಾಗುತ್ತಾರೆ. ಅವರ ದಿವ್ಯವಾಣಿ, ಪಾದಸ್ಪರ್ಶ, ಜನರ ಪಾಪವನ್ನು ತೊಳೆದು, ಪವಿತ್ರವನ್ನಾಗಿ ಮಾಡುತ್ತದೆ.

ಸ್ವಾತಿ ಮಳೆಯ ಕೆಲವು ಹನಿಗಳು ಸಮುದ್ರದಲ್ಲಿ ಆ ಮಳೆ ಬೀಳುವ ಕಾಲಕ್ಕೆ ಬಾಯ್ದೆರೆದು, ಕಾದು, ತೇಲುತ್ತಿರುವ ಕಪ್ಪೆಚಿಪ್ಪಿನೊಳಗೆ, ಯಾವುದೋ ಘಳಿಗೆಯಲ್ಲಿ ಅಕಸ್ಮಾತ್ತಾಗಿ ಬೀಳುತ್ತದೆ. ಅದಕ್ಕಾಗಿಯೇ ಕಾಯುತ್ತಿದ್ದ ಕಪ್ಪೆ ಚಿಪ್ಪು ಮುಚ್ಚಿಕೊಂಡು ಸಾಗರದ ತಳ ಸೇರುತ್ತದೆ. ಆ ಹನಿ ಚಿಪ್ಪಿನೊಳಗೆ ಬದಲಾವಣೆಗೊಳ್ಳುತ್ತಾ ಮುತ್ತಾಗಿ ಪರಿವರ್ತನೆ ಹೊಂದುತ್ತದೆ. ಹೀಗೆಂದು ಸಾಗರಕ್ಕೆ ಬಿದ್ದ ಸ್ವಾತಿ ಮಳೆಯ

ಹನಿಗಳೆಲ್ಲಾ ಮುತ್ತಾಗುವುದಿಲ್ಲ. ಹಾಗಾಗಿದ್ದರೆ ಸಾಗರಕ್ಕೆ ನೀರೆಲ್ಲಿ ದೊರೆಯುತ್ತಿತ್ತು? ಸಮುದ್ರಕ್ಕೆ ನೀರೂ ಬೇಕು; ಬಾಯ್ದೆರೆದು ಕಾಯುತ್ತಿರುವ ಕಪ್ಪೆಚಿಪ್ಪಿಗೆ ಮುತ್ತಾಗುವ ಮಳೆಯ ಹನಿಯೂ ಬೇಕು. ಹಾಗಾದಾಗ ಸಮುದ್ರವೂ ಇರುತ್ತದೆ. ಸಮುದ್ರದಾಳದಲ್ಲಿ ಮುತ್ತೂ ದೊರೆಯುತ್ತದೆ. ಇದರಂತೆ ಪ್ರಕೃತಿ ನಿಯಮದಲ್ಲಿ ಜನಭರಿತ ಬ್ರಹ್ಮಾಂಡವೂ ಇರಬೇಕು. ಅದಕ್ಕೆ ಸತ್ಸಂಗವೂ ದೊರೆಯಬೇಕು. ಆ ಸತ್ಸಂಗದಿಂದ ಸತ್ಪುರುಷರಾಗಬಯಸುವವರಿಗೆ, ಭಗವಂತನು ಸುಜ್ಞಾನವೂ ಸಿಗುವಂತೆ ಮಾಡಬೇಕು. ಹೀಗೆ ಜ್ಞಾನೋದಯ ಮಾಡಿಕೊಂಡ ಜನರು ಯಾರಿಗೂ ಕೆಡುಕು ಮಾಡದೆ, ಸಾಧ್ಯವಾದರೆ ಒಳಿತನ್ನು ಮಾಡುತ್ತಾ, ಸಾಮಾಜಿಕ ನೆಮ್ಮದಿಗೆ ಭಂಗ ಉಂಟುಮಾಡದೆ ಬದುಕುವರು. ಸಾಧು-ಸಂತರು, ತಮ್ಮದೆಂಬ ಸ್ವಾರ್ಥವಿಲ್ಲದೆ, ನಿಸ್ವಾರ್ಥಿಗಳಾಗಿ, ಜನರ ಉದ್ಧಾರಕ್ಕಾಗಿ ಹಗಲಿರುಳೂ ತತ್ವಬೋಧನೆ ಮಾಡುತ್ತಾರೆ. ಸ್ವಾತಿ ಮುತ್ತಿನಂತಹ ತತ್ವಗಳನ್ನು ಬೋಧಿಸುವಾಗ, ಅವುಗಳಿಗಾಗಿ ಕಪ್ಪೆ ಚಿಪ್ಪಿನಂತೆ ಬಾಯ್ದೆರೆದು ಕಾಯುತ್ತಿರುವ ಪುಣ್ಯಜೀವಿಗಳು ತತ್ವಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ತಮ್ಮನ್ನು ತಾವು ಉದ್ಧಾರ ಮಾಡಿಕೊಳ್ಳುವ ಮೂಲಕ ಸಮಾಜದಲ್ಲಿ ಸುಖ-ಶಾಂತಿಗಳು ನೆಲಸುವುದಕ್ಕೆ ಸಹಾಯಕರಾಗುವರು.

■

## ೨೧. ಮಹಿಳಾಪರ ಚಳವಳಿ

'ಮಹಿಳೆ ಕುಟುಂಬದ ಕಣ್ಣು' ಎನ್ನುವ ಹೇಳಿಕೆ, ಆಕೆಗೆ ಕುಟುಂಬದಲ್ಲಿ ಎಂತಹ ಮಹತ್ತರ ಸ್ಥಾನವಿದೆ, ಎಷ್ಟುಮಟ್ಟಿನ ಜವಾಬ್ದಾರಿ ಇದೆ ಎಂಬ ಅಂಶವನ್ನು ತೋರಿಸುತ್ತದೆ. ಆದರೂ ಈಕೆ ಶತ–ಶತಮಾನಗಳಿಂದಲೂ ದಮನಕ್ಕೆ ಒಳಗಾಗಿ ಅಸಹಾಯಕತೆಯಿಂದ ಬದುಕುತ್ತಿರುವುದು ಎಲ್ಲರಿಗೂ ತಿಳಿದ ಅಂಶ. ಅವಳ ಈ ಪರಿಸ್ಥಿತಿಗೆ ಅವಳ ಅಜ್ಞಾನ, ಆರ್ಥಿಕ ಅವಲಂಬನೆ, ಸಾಮಾಜಿಕ ಕಟ್ಟಳೆಗಳು, ಅವಿವೇಕದ ರೂಢಿಗಳು, ಕೌಟುಂಬಿಕ ಜವಾಬ್ದಾರಿಗಳು ಇತ್ಯಾದಿ ಕಾರಣಗಳಲ್ಲದೆ, ಇತಿಹಾಸದ ಕಾರಣಗಳೂ ಸೇರಿಕೊಂಡಿವೆ. ಈ ಎಲ್ಲಾ ಕಾರಣಗಳಿಂದ ಆಕೆ ಶೋಷಣೆಗೆ ಒಳಗಾಗಿ ನಾಲ್ಕು ಗೋಡೆಗಳೊಳಗೆ ಬಂದಿಯಾಗುವಂತೆ ಮಾಡಿದೆ. ಆಕೆಯ ಜೀವನದಲ್ಲಿ ಜ್ಞಾನದೀಪವನ್ನು ಬೆಳಗದಿರುವುದು ಸಮಾಜವನ್ನೇ ಕತ್ತಲೆಯಲ್ಲಿಟ್ಟಂತೆ ಎಂಬುದನ್ನು ಎಲ್ಲರೂ ಅರಿಯಬೇಕು. ಏಕೆಂದರೆ ಮಕ್ಕಳ ವ್ಯಕ್ತಿತ್ವ ರೂಪಿತವಾಗುವ ಬಾಲ್ಯಾವಸ್ಥೆಯಲ್ಲಿ ಮಕ್ಕಳು ತಾಯಿಗೆ ಬಹು ಸಮೀಪದಲ್ಲಿ ಇರುವುದರಿಂದ ಅವಳ ಪ್ರಭಾವ ಮಕ್ಕಳ ವ್ಯಕ್ತಿತ್ವ ರೂಪುಗೊಳ್ಳುವಲ್ಲಿ ಮಹತ್ವದ ಪರಿಣಾಮ ಉಂಟುಮಾಡಲು ಸಾಧ್ಯ. ತಾಯಿ ಅಜ್ಞಳಾಗಿರದೆ ಪ್ರಜ್ಞಾವಂತಳಾಗಿದ್ದರೆ, ಅಸಹಾಯಕಳಾಗಿರದೆ ಆತ್ಮವಿಶ್ವಾಸ ಉಳ್ಳವಳಾಗಿದ್ದರೆ, ಕುಟಿಲಳೂ ಕುತಂತ್ರಿಯೂ ಆಗದೆ ಉದಾತ್ತ ಗುಣದವಳಾಗಿದ್ದರೆ, ಸ್ವಾರ್ಥಳಾಗಿರದೆ ಉದಾರಿಯೂ, ಸಹಕಾರ ಮನೋಭಾವದವಳೂ ಆಗಿದ್ದರೆ, ಬಂದಿಯಾಗಿರದೆ, ವಿವೇಕಯುತವಾದ ಸ್ವತಂತ್ರ ವಿಚಾರದವಳಾಗಿದ್ದರೆ ಆ ಒಳ್ಳೆಯ ಗುಣಗಳ ಪ್ರಭಾವ, ತಪ್ಪದೆ ಮಕ್ಕಳ ಬೆಳವಣಿಗೆಯ ಮೇಲೆ ಮಹತ್ತರ ಪರಿಣಾಮ ಬೀರುವುದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಆದರೆ ಆಕೆ ದುರ್ಗುಣಿಯೇ ಆಗಿದ್ದಲ್ಲಿ, ಅವುಗಳ ಪ್ರಭಾವವೂ ಅಷ್ಟೇ ಮಟ್ಟದಲ್ಲಿ ಮಕ್ಕಳ ಮೇಲಾಗುವುದು.

ಈ ಸತ್ಯವನ್ನರಿತ ವಿಚಾರವಾದಿಗಳು, ಸ್ತ್ರೀ ವಿಮೋಚನೆಗಾಗಿ, ಹನ್ನೆರಡನೇ ಶತಮಾನದಿಂದಲೂ ಆಗಾಗ ಪ್ರಯತ್ನಿಸುತ್ತಿರುವುದನ್ನು ಕಾಣುತ್ತಿದ್ದೇವೆ. ಈ ಎರಡು ಮೂರು ದಶಕಗಳಲ್ಲಿಯಂತೂ ಈ ಪ್ರಯತ್ನ ತೀವ್ರ ಸ್ವರೂಪವನ್ನು ತಾಳುತ್ತಿದೆ. ಏಕೆಂದರೆ, ಹಿಂದಿನವರ ಪ್ರಯತ್ನದಿಂದಾಗಿ ಕೆಲವು ಮಹಿಳೆಯರು ವಿದ್ಯಾವಂತರಾಗಲು

ಸಾಧ್ಯವಾಗಿದೆ. ಅಂಥವರ ಆಲೋಚನೆಗಳು ಸ್ಥಿತಿಗಳು, ಪ್ರಜ್ಞಾವಂತ ಪುರುಷರ ಮೇಲೆ ಪ್ರಭಾವ ಬೀರಿವೆ. ಸ್ತ್ರೀ ವಿಮೋಚನೆಯಲ್ಲಿ ಮಾನವ ಕುಲದ ಉದ್ಧಾರ ಅಡಗಿದೆ ಎಂಬ ಸತ್ಯವನ್ನು ಜನರು ಮನಗಂಡು, ಸ್ತ್ರೀ ವಿಮೋಚನಾ ಹೋರಾಟವನ್ನು ಇತ್ತೀಚಿನ ದಿನಗಳಲ್ಲಿ ಬಹಳ ತೀವ್ರಗೊಳಿಸಿದ್ಧಾರೆ.

ಇದು ಒಳ್ಳೆಯ ಆರೋಗ್ಯಕರ ಬೆಳವಣಿಗೆ ನಿಜ. ನಮ್ಮ ಕೌಟುಂಬಿಕ ಜೀವನದಲ್ಲಿ ಹಿಂದಿನಿಂದ ಬೆಳೆದುಬಂದ ಕೆಲವು ಆಚರಣೆಗಳು, ಎಲ್ಲರ ಹಿತದೃಷ್ಟಿಯಿಂದ ಅವಶ್ಯವಾಗಿದೆ. ಹಳೆಯ ಪದ್ಧತಿಗಳು, ಆಚರಣೆಗಳು ಎಲ್ಲವೂ ಕೆಟ್ಟವಲ್ಲ. ಕೆಲವು, ಕುಟುಂಬದ ಸದಸ್ಯರ ಒಳಿತಿಗೆ, ಶಿಸ್ತಿನಿಂದ ಕೂಡಿದ, ಸಹಕಾರಭಾವದಿಂದ ತುಂಬಿದ ಜೀವನಕ್ಕೆ, ಒಗ್ಗಟ್ಟಿನ ಮಹತ್ವವನ್ನು ಅರಿಯಲಿಕ್ಕೆ ಅವಶ್ಯಕವಾಗಿದೆ. ಆದರೆ, ಪರಾವಲಂಬಿತನ, ಬೇಜವಾಬ್ದಾರಿತನ, ಅಜ್ಞಾನ ಆರ್ಥಿಕವಾಗಿ ಭದ್ರತೆಯಿಲ್ಲದ ಮಹಿಳೆಯ ಕುಟಿಲ ನಡವಳಿಕೆಗಳ ಕಾರಣ, ಪರಸ್ಪರ ದ್ವೇಷ–ವಿರಸಗಳೂ ಅಡಗಿವೆ. ಸ್ತ್ರೀ ವಿಮೋಚನೆಯ ಅತಿರೇಕದಲ್ಲಿ ಒಳ್ಳೆಯ ಅಂಶಗಳು ಇಲ್ಲದಂತಾಗಬಾರದು. ಹೊಸದಾದ ಸಮಸ್ಯೆಗಳಿಗೆ ಅವಕಾಶವಾಗಬಾರದು. ಆ ರೀತಿಯಲ್ಲಿ ಹೋರಾಟವನ್ನು ಮುನ್ನಡೆಸಬೇಕಾಗಿದೆ.

ಇಂದಿನ ಮಹಿಳೆಯ ನೆಮ್ಮದಿಯ ಜೀವನಕ್ಕೆ ಬೇಕಾದ ಅವಶ್ಯಕ ಅಂಶಗಳೇನು ಎಂಬುದನ್ನು ಹಿಂದಿನ ಜೀವನವನ್ನು ವಿಶ್ಲೇಷಿಸಿ, ಎಚ್ಚರಿಕೆಯಿಂದ ಹಿಂದಿನ ಕೆಟ್ಟ ಅಂಶಗಳನ್ನು ಬಿಟ್ಟು ಒಳ್ಳೆಯ ಅಂಶಗಳನ್ನು ಉಳಿಸಿಕೊಳ್ಳಬೇಕು. ಆದರೆ ಇಂದು, ಇದುವರೆಗೆ ಮಹಿಳೆಗಾದ ಅನ್ಯಾಯವನ್ನು ವಿವರಿಸುವ ರೀತಿಯಿಂದ, ಅನೇಕ ಮಹಿಳೆಯರು ಪುರುಷ ದ್ವೇಷ ಮನೋಭಾವವನ್ನು ಪ್ರತಿಭಟಿಸುವ ಅಭಿಪ್ರಾಯವನ್ನು, ಅಸಹಕಾರ ಪ್ರವೃತ್ತಿಯನ್ನು ಬೆಳೆಸಿಕೊಂಡಿರುವ ಅಂಶ ಬೆಳಕಿಗೆ ಬರುತ್ತಿದೆ. ಆದ್ದರಿಂದ, ಯುವತಿಯರು ದ್ವೇಷ ಪ್ರವೃತ್ತಿಯನ್ನು ಹೊಂದದೆ, ಸರಿಯಾದ ತಿಳಿವಳಿಕೆ ಪಡೆದು ತಮ್ಮ ಶೋಷಣೆಯಾಗದ ರೀತಿಯಲ್ಲಿ, ಸಹಕಾರದಿಂದ ಬದುಕುವಂತೆ ತರಬೇತಿ ಕೊಡಬೇಕು. ನಮಗೆ ಈಗ ಬೇಕಾಗಿರುವುದು. ಮಹಿಳೆಯ ಶೋಷಣೆ ಇಲ್ಲವಾಗಿ, ಅವಳ ವ್ಯಕ್ತಿತ್ವಕ್ಕೆ ಮನ್ನಣೆ ದೊರೆತು, ಕುಟುಂಬದಲ್ಲಿ ಹಾಗೂ ಸಮಾಜದಲ್ಲಿ ಅವಳಿಗೆ ಗೌರವದ ಸ್ಥಾನ ದೊರೆಯುವಂತಾಗಬೇಕು. ಸುಖೀ ಕುಟುಂಬ ಜೀವನಕ್ಕೆ ಸಹಕಾರಿಯಾಗಬೇಕು. ಇದು ಸ್ತ್ರೀ ಚಳವಳಿಯ ಮುಖ್ಯ ಗುರಿಯಾಗಬೇಕೇ ವಿನಃ, ಪ್ರತೀಕಾರ ಮನೋಭಾವಕ್ಕೆ, ದ್ವೇಷದ ಭಾವನೆಗಳಿಗೆ, ಸ್ಪರ್ಧಾತ್ಮಕ ಮನೋಭಾವಕ್ಕೆ, ಜಗಳವಾಡುತ್ತಾ ಬದುಕಬೇಕಾದ ಪರಿಸ್ಥಿತಿಗೆ ಅವಕಾಶವಾಗಬಾರದು.

ಈಗೀಗ ಸ್ತ್ರೀಯ ಶೋಷಣೆಯ ವಿಶ್ಲೇಷಣೆ ವಿಕೋಪಕ್ಕೆ ಹೋಗಿ, ಶ್ರೀರಾಮ, ಧರ್ಮರಾಯ, ಬಸವಣ್ಣ ಇವರುಗಳೂ ಮಹಿಳೆಯರನ್ನು ಶೋಷಿಸಿದ ಪುರುಷರು

ಎಂದು ಪ್ರತಿಪಾದಿಸುವವರೆಗೂ ಹೋಗಿದೆ. ಏಕದೃಷ್ಟಿಯಿಂದ, ಈ ದಿನದ ಸಾಮಾಜಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ, ವಾದಕ್ಕೆ ಸರಿಯಾಗಿ ಪುಷ್ಟಿ ದೊರೆಯುತ್ತದೆ. ಆದರೆ ಇಂತಹ ವಿಶ್ಲೇಷಣೆಗಳಿಂದ ಪರಿಹಾರ ದೊರಕುವುದಕ್ಕಿಂತ, ವಿವಾದಕ್ಕೆ ಆಸ್ಪದವಾಗುತ್ತದೆ. ನಮಗೆ ಬೇಕಾಗಿರುವುದು ಚರ್ಚೆಯಲ್ಲ. ಪರಿಸ್ಥಿತಿಯ ಸುಧಾರಣೆ ಅಷ್ಟೆ. ಹಿಂದಿನ ಘಟನೆಗಳನ್ನು ಕೆದಕಿ ನಮ್ಮ ನೇರಕ್ಕೆ ನೋಡಿದರೆ, ಎಲ್ಲವೂ ವಿಕೃತ ರೀತಿಯಲ್ಲಿ ಕಾಣಿಸುತ್ತವೆ. ಆಗಿನ ಸನ್ನಿವೇಶವೇನಿತ್ತು, ಸಾಮಾಜಿಕ ಪರಿಸ್ಥಿತಿ ಏನಿತ್ತು ಎಂಬುದನ್ನು ಸಂಪೂರ್ಣವಾಗಿ ಈಗ ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ಆದ್ದರಿಂದ ಆ ಸಮಸ್ಯೆಗಳನ್ನು ಕೆದಕಿದರೆ ಇಂದಿನ ಅಪರಿಪಕ್ವ ಮನಸ್ಸಿನ ಯುವತಿಯರ ಮನಸ್ಸಿನಲ್ಲಿ ಪುರುಷದ್ವೇಷದ ಮನೋಭಾವ ಮೂಡಿ, ಅವರು ಸಹಕಾರಯುತ, ಸ್ನೇಹಮಯ ಕೌಟುಂಬಿಕ ಜೀವನ ಮಾಡಲಾರದವರಾಗುತ್ತಾರೆ. ಸಂಸಾರದ ಎಲ್ಲಾ ಸಂದರ್ಭಗಳಲ್ಲೂ ಪುರುಷ ದ್ವೇಷಿ ಮನೋಭಾವ ತಾಳಿ, ಘರ್ಷಣೆ ಉಂಟಾಗುವ ಪರಿಸ್ಥಿತಿ ಹುಟ್ಟಿಕೊಳ್ಳಲು ದಾರಿಯಾಗಬಹುದು. ಈಗೀಗ ಕುಟುಂಬ ಜೀವನದಲ್ಲಿ ಸಹಕಾರ ಮಾಯವಾಗುತ್ತಿದೆ. ಆ ಕಾರಣದಿಂದಲೋ ಏನೋ ಕಲಿತವರ ಕುಟುಂಬದಲ್ಲಿ ಪಾಶ್ಚಾತ್ಯರಂತೆ ವಿಚ್ಛೇದನದ ಸಂಖ್ಯೆಗಳು ಹೆಚ್ಚುತ್ತಿವೆ. ಇಂತಹ ವಿಚ್ಛೇದನಗಳಿಂದ ಕುಟುಂಬದಲ್ಲಿ, ಸಮಾಜದಲ್ಲಿ ವ್ಯಕ್ತಿಗಳ ಜೀವನದಲ್ಲಿ ಅನೇಕ ಸಮಸ್ಯೆಗಳು, ಗೊಂದಲಗಳು ಉಂಟಾಗುತ್ತಿವೆ.

ಆದುದರಿಂದ ಸ್ತ್ರೀ ಪರವಾದಿಗಳು ತಮ್ಮ ಚಳವಳಿಯ ಮುಖ್ಯ ಉದ್ದೇಶಗಳನ್ನು ಆರಿಸಿ, ಅವುಗಳಿಗೆ ಪೂರಕವಾದ ಅಂಶಗಳಿಗೆ ಮಹತ್ವ ನೀಡಬೇಕು. ಹಿಂದಿನವುಗಳನ್ನು ಕೆದಕದೆ ಮುಂದೆ ಹೇಗಿರಬೇಕು ಎಂಬುದಕ್ಕೆ ಗಮನಹರಿಸಬೇಕು ಅಲ್ಲದೆ ಮಹಿಳೆಯ ಜೀವನ ಪುರುಷನೊಡನೆಯಾಗಿರುವುದರಿಂದ, ಅವಳ ಶೋಷಣೆಗೆ ಪುರುಷನೇ ಮುಖ್ಯ ಕಾರಣನಾಗಿರುವುದರಿಂದ ಅವನು ತನ್ನ ಅಭಿಪ್ರಾಯವನ್ನು ಅಪೇಕ್ಷಣೀಯ ರೀತಿಯಲ್ಲಿ ಬದಲಿಸಿಕೊಂಡು ಸ್ತ್ರೀಯೊಡನೆ ಸಹಕಾರದ, ನೆಮ್ಮದಿಯ ಜೀವನ ನಡೆಸಲು ಬೇಕಾದ ಮನೋಭಾವ ರೂಢಿಸಿಕೊಳ್ಳುವಂತೆ ಮಾಡುವ ಅಂಶಗಳನ್ನು ಚಳವಳಿಯಲ್ಲಿ ಸೇರಿಸಿಕೊಳ್ಳಬೇಕು.

ಗಂಡು ಮಕ್ಕಳಾಗಲೀ, ಹೆಣ್ಣುಮಕ್ಕಳಾಗಲೀ ತಾಯಿ ಮಡಿಲಲ್ಲೇ ಬೆಳೆಯುತ್ತವೆಯಾಗಿ, ಗಂಡುಮಕ್ಕಳು ಮಹಿಳೆಯರನ್ನು ಶೋಷಿಸದಿರುವ ಮನೋಭಾವ ರೂಪಿಸಿಕೊಳ್ಳುವಂತೆ ಅವರಲ್ಲಿ ಸಕಾರಾತ್ಮಕ ಭಾವನೆಗಳ ಬೀಜಗಳನ್ನು ಬಾಲ್ಯದಿಂದಲೇ ತಾಯಿಯಾದವಳು ಬಿತ್ತಬೇಕು. ಹೆಣ್ಣುಮಕ್ಕಳು ಅಸಹಕಾರ ಮನೋಭಾವವಿಲ್ಲದೆ, ಸ್ವೇಚ್ಛಾಚಾರಿಗಳಾಗದೆ, ಪುರುಷನನ್ನು ತನ್ನ ಅಂಕಿತದಲ್ಲಿ ಇಟ್ಟುಕೊಳ್ಳಬೇಕೆಂಬ ಪೂರ್ವಪೀಡಿತ ಮನೋಭಾವ ಬೆಳೆಸಿಕೊಳ್ಳದೆ, ಕುಟುಂಬದಲ್ಲಿ

ಸ್ನೇಹಮಯ ವಾತಾವರಣ ಉಂಟಾಗುವಂತೆ, ತನ್ನ ಶೋಷಣೆಗೆ ಅವಕಾಶವಿಲ್ಲದಂತೆ ಬದುಕಲು ಸಾಧ್ಯವಾದ ಮನೋಭಾವ ಉಂಟಾಗುವಂತಹ ಜ್ಞಾನ ನೀಡಬೇಕು.

ಯಾವುದೇ ಸಮಸ್ಯೆಯನ್ನು ಬಗೆಹರಿಸಲು ನಾನಾ ಮಾರ್ಗಗಳಿರುತ್ತವೆ. ಸ್ವಲ್ಪ ನಿಧಾನವಾದರೂ ಚಿಂತಿಲ್ಲ. ಕೆಡುಕುಂಟಾಗದೆ, ದುಷ್ಪರಿಣಾಮಕ್ಕೆ ಅವಕಾಶವಿಲ್ಲದೆ, ಶೋಷಣೆ ಇಲ್ಲದ ಸಹಕಾರ ಜೀವನಕ್ಕೆ ಸಹಕಾರಿಯಾದ ಅಂಶಗಳನ್ನು ಸಮಸ್ಯೆ ಬಗೆಹರಿಸಲು, ಹುಡುಕಿ ತೆಗೆದು ಚಳವಳಿ ಮಾಡುವುದು ಎಲ್ಲ ದೃಷ್ಟಿಯಿಂದ ಒಳಿತು. ಚಳವಳಿಯು ಹಳೆಯ ಸಮಸ್ಯೆ ಅಳಿಸಿ ಹೊಸ ಸಮಸ್ಯೆ ಹುಟ್ಟು ಹಾಕುವಂತಿರಲಾರದಂತೆ ಜಾಗ್ರತೆ ವಹಿಸುವುದು ಅವಶ್ಯ.

■

## ೨೨. ಅನುಕಂಪ

ಸಮಾಜದಲ್ಲಿ ಎಲ್ಲರಿಂದ 'ಒಳ್ಳೆಯವನು' ಎನ್ನಿಸಿಕೊಳ್ಳಬೇಕಾದರೆ ಅವನಲ್ಲಿ ಅನೇಕ ಸದ್ಗುಣಗಳಿರಬೇಕಾಗುತ್ತದೆ. ಪ್ರಾಮಾಣಿಕತೆ, ಉದಾರತೆ, ಸಹೃದಯತೆ, ಪ್ರೀತಿ, ವಿಶ್ವಾಸ, ಮಮತೆ. ಒಳ್ಳೆಯ ಕೆಲಸವನ್ನು ಸಾಧಿಸುವ ಛಲ, ಶಿಸ್ತಿನ ಜೀವನ, ಅನುಕಂಪ ಮುಂತಾದ ಶ್ರೇಷ್ಠ ಗುಣಗಳಿರುವ ವ್ಯಕ್ತಿಯನ್ನು ಜನರು ಒಳ್ಳೆಯವನೆಂದು ಗುರುತಿಸುತ್ತಾರೆ. ಏಕೆಂದರೆ ಇಂತಹ ಗುಣಗಳಿರುವ ವ್ಯಕ್ತಿಯಿಂದ ಬೇರೆಯವರಿಗೆ ಯಾವ ಕೆಡುಕೂ ಉಂಟಾಗುವುದಿಲ್ಲ. ಅಷ್ಟೇ ಅಲ್ಲ ಈ ಜನರು ಪರೋಪಕಾರಿಗಳೂ ಆಗಿರುತ್ತಾರೆ. ಇಂತಹ ಜನರು ಹೆಚ್ಚಾಗಿರುವ ಸಮಾಜವನ್ನು 'ಉತ್ತಮ ಸಮಾಜ' ಎನ್ನುತ್ತಾರೆ. ಅಂದರೆ ಅದರಲ್ಲಿರುವ ಎಲ್ಲರೂ ಸಜ್ಜನರೆಂದು ಹೇಳಲಿಕ್ಕಾಗುವುದಿಲ್ಲ. ನೂರಕ್ಕೆ ನೂರರಷ್ಟು ಒಳ್ಳೆಯವರಿರುವ ಯಾವ ಸಮಾಜವೂ ಇರುವುದಿಲ್ಲ. ಅಂತಹದು ಇರುವುದಾದರೆ ಕಲ್ಪನೆಯಲ್ಲಿ ಮಾತ್ರ. ಆದರೆ ಬಹುಜನ ಒಳ್ಳೆಯರಿದ್ದರೆ ಸರಿ. ಆದರೆ ಬಹುಜನ ಕೆಟ್ಟವರಿದ್ದರೆ, ಉಳಿದವರಿಗೆ ಉಳಿಗಾಲವಿರುವುದಿಲ್ಲ. ದುಷ್ಟರಾದವರು ಒಬ್ಬಿಬ್ಬರಿದ್ದರೂ ಸಾಕು. ಮಿಕ್ಕೆಲ್ಲರ ಜೀವನವನ್ನು ಸಮಸ್ಯಾಮಯ ಮಾಡಿಬಿಡುತ್ತಾರೆ. ಹಾಗಿರುವಾಗ ಬಹುಜನ ದುಷ್ಟರೇ ಇದ್ದರೆ ಹೇಳುವುದಿನ್ನೇನು!

ವ್ಯಕ್ತಿಯಲ್ಲಿ ಒಂದೊಂದು ಉತ್ತಮಗುಣವಿದ್ದರೂ ಅವನು ಎಷ್ಟೋ ಒಳ್ಳೆಯ ಕೆಲಸ ಮಾಡಬಲ್ಲ. ಏಕೆಂದರೆ, ಸದ್ಗುಣಗಳು ಒಂದರ ಹಿಂದೆ ಒಂದು ಇದ್ದೇ ಇರುತ್ತವೆ. ಒಂದಕ್ಕೆ ಇನ್ನೊಂದು ಪೂರಕ. ಎಲ್ಲ ಸುಗುಣಗಳು ಕೆಲಸ ಮಾಡಿದರೂ ಒಂದು ಗುಣ ಎದ್ದು ಕಾಣುತ್ತದೆ. ಉದಾ: ಮದರ್ ಥೆರೇಸಾರಲ್ಲಿ ಎದ್ದುಕಾಣುವ 'ಅನುಕಂಪ'ದ ಹಿಂದೆ ಮಾನವಪ್ರೇಮ, ದಯೆ, ಪ್ರೀತಿ ಮುಂತಾದ ಸದ್ಗುಣಗಳು ಕೆಲಸಮಾಡಿವೆ. ಈ ಗುಣಗಳನ್ನು ಹೊಂದಿರುವ ಆಕೆಗೆ, ಮಾನವರಾಗಿ ಹುಟ್ಟಿ ಎಷ್ಟೋ ಜನರು ವಿದ್ಯೆ, ಸಂಪತ್ತು, ಸೌಲಭ್ಯ, ಆರೋಗ್ಯ, ಆನಂದಗಳನ್ನು ಅನುಭವಿಸುತ್ತಿರುವಾಗ, ಬಡ ಕುಟುಂಬದಲ್ಲಿ ಹುಟ್ಟಿದ ಅನೇಕ ಮಕ್ಕಳು ಈ ಎಲ್ಲ ಅನುಕೂಲಗಳಿಂದ ವಂಚಿತರಾಗಿ, ದುಃಖದ ಕೂಪದಲ್ಲಿ ಬಿದ್ದು ನರಳುವುದನ್ನು ನೋಡಿ, ಕರುಳು ಹಿಂಡಿರಬೇಕು. ಅವರ ದುಃಖಕ್ಕೆ ಪರಿಹಾರ ನೀಡಬೇಕೆಂಬ ನಿರ್ಧಾರ ಮಾಡಿರಬೇಕು. ನಮ್ಮಂತಹವರಿಗೂ, ದಾರುಣ ಸ್ಥಿತಿಯಲ್ಲಿರುವವರನ್ನು

ನೋಡಿದಾಗ 'ಅಯ್ಯೋ' ಎನ್ನಿಸುತ್ತದೆ. ಆ ಕ್ಷಣದಲ್ಲಿ 'ಅಯ್ಯೋ' ಎಂದು ಮರುಕ್ಷಣದಲ್ಲಿ ಅದನ್ನೆಲ್ಲಾ ಮರೆತು, ನಮ್ಮ ನಮ್ಮ ಕೆಲಸಗಳಲ್ಲಿ ಮಗ್ನರಾಗಿ ಬಿಡುತ್ತೇವೆ. ಆದರೆ ಮದರ್ ಥೆರೇಸಾರವರಂತೆ ಇತರರ ನೋವಿನ ಬಗ್ಗೆ ಅನುಕಂಪವಿರುವವರು ನರಳುವವರ ಕಣ್ಣೀರು ಒರೆಸುವ ಕೆಲಸಗಳನ್ನು ಹಮ್ಮಿಕೊಳ್ಳುತ್ತಾರೆ. ಇವರುಗಳ ಅನುಕಂಪ, 'ಅಯ್ಯೋ' ಎಂಬ ಉದ್ಗಾರದಲ್ಲಿಯೇ ಮುಗಿಯುವುದಿಲ್ಲ. ತಮ್ಮ ಸಮಯ, ಶಕ್ತಿ ಸಂಪತ್ತನ್ನು ದೀನರ ದುಃಖ ನಿವಾರಿಸಲು ಉಪಯೋಗಿಸುತ್ತಾರೆ. ಅವರ ಜೀವನವನ್ನು ಸುಖಮಯವನ್ನಾಗಿಸಲು ಕಾಯಾ, ವಾಚಾ, ಮನಸಾ ಶ್ರಮಿಸುತ್ತಾರೆ.

ಆದರೆ ದುರುದೃಷ್ಟವಶಾತ್ ಈಗಿನ ಕಾಲದಲ್ಲಿ ಬೇರೆಯವರ ಒಳಿತಿಗಾಗಿ ಶ್ರಮಿಸುತ್ತಿರುವವರ ಸಂಖ್ಯೆ ಕಡಿಮೆಯಾಗುತ್ತಿದೆ. ಏಕೆಂದರೆ, ತಮ್ಮ ಸ್ಥಾನ ದುರುಪಯೋಗ ಮಾಡಿಕೊಂಡು ತಮ್ಮ ಬಾಲಬಡುಕರಿಗೆ ಸಹಾಯ ಮಾಡುತ್ತಾ, ಅವರಿಂದ ಸಹಾಯ ಪಡೆಯುತ್ತಾ ಇರುವವರು, ದುಷ್ಟತನದಿಂದ ಬೇರೆಯವರನ್ನು ಹತ್ತಿಕ್ಕಿ ಲಾಭಮಾಡಿಕೊಳ್ಳುತ್ತಿರುವವರು ಸುಖವಾಗಿ ಅಟ್ಟಹಾಸದಿಂದ ಮೆರೆಯುವುದನ್ನು, ಸಜ್ಜನರಾಗಿ ಬದುಕುತ್ತಾ ಇತರರ ಕಷ್ಟಗಳನ್ನು ಕಂಡು ಮರುಗಿ ಅನುಕಂಪ ತೋರುವವರು ಅಪಹಾಸ್ಯಕ್ಕೆ, ಕಷ್ಟಕ್ಕೆ ಈಡಾಗಿರುವುದನ್ನು, ಬೆಳೆಯುತ್ತಿರುವ ಪೀಳಿಗೆ ಗಮನಿಸುತ್ತಿರುತ್ತದೆ. ಸಜ್ಜನಿಕೆಗೆ ಬೆಲೆ ಸಮಾಜದಲ್ಲಿ ದೊರೆಯುತ್ತಿಲ್ಲ. ಸಜ್ಜನರಿಗೆ ಮಾನ್ಯತೆ ಸಿಗುತ್ತಿಲ್ಲ. ಆದರೆ ದುಷ್ಟರಿಗೆ ಎಲ್ಲರೂ ಹೆದರಿಕೊಂಡು ನಡೆಯುತ್ತಾರೆ. ಬಾಲಬಡುಕತನ ಮಾಡಿದರೆ, ಭ್ರಷ್ಟಾಚಾರಿಗಳಿಂದ ಬೇಕಾದಷ್ಟು ಲಾಭವಾಗುತ್ತದೆ. ಆದುದರಿಂದ, ಈಗ ಜನರು, ಕಷ್ಟಪಡದೆ ಸುಖಪಡುವ ಹಾದಿಗೆ ಹೋಗಹತ್ತಿದ್ದಾರೆ. ಒಳ್ಳೆಯವರಾಗಿ ತೊಂದರೆಗೆ ಒಳಗಾಗುವ ಮಾರ್ಗವನ್ನು ಯಾರು ತಾನೆ ಅನುಸರಿಸಿಯಾರು? ಹಾಗಾಗಿ ಬೇರೆಯವರಿಗಾಗಿ ತಮ್ಮ ಹಣ, ಶ್ರಮ, ಸಮಯ ವಿನಿಯೋಗ ಮಾಡುವವರಿಗಿಂತ, ಬೇರೆಯವರನ್ನು ಶೋಷಿಸಿ, ಬದುಕುವ ಜನರ ಸಂಖ್ಯೆ ಹೆಚ್ಚಾಗುತ್ತಿದೆ. ಹಾಗಾಗಿ ಸಾಮಾಜಿಕ ನೆಮ್ಮದಿ ಇಲ್ಲವಾಗುತ್ತಿದೆ. ದುಃಖಿತರ ಸಂಖ್ಯೆ ಬೆಳೆಯುತ್ತಿದೆ. ಅಂದರೆ ಬೇರೆಯವರ ದುಃಖ ನೋಡಿ ಅನುಕಂಪ ತೋರುವವರ ಸಂಖ್ಯೆ ಇಳಿಮುಖವಾಗುತ್ತಿದೆ ಎನ್ನಬಹುದು.

ನಿಜವಾಗಿ ಹೇಳುವುದಾದರೆ, ಇತರರ ನೋವನ್ನು ನೋಡಿ ಅನುಕಂಪ ಇಲ್ಲದವರನ್ನು 'ಹೃದಯಹೀನ'ರೆಂದೇ ಹೇಳಬಹುದು. ಕಂಡವರ ದುಃಖ ಕಂಡು ಮರುಗದ ಹೃದಯದಲ್ಲಿ ಮಾನವೀಯತೆ ಇರುವುದಿಲ್ಲ. ಇಷ್ಟೇ ಅಲ್ಲ ಅವರು ಅನುಕಂಪವಿರುವ ಸಜ್ಜನರಿಂದ ದುರ್ಲಾಭ ಪಡೆಯುತ್ತಾರೆ.

ಸಾಮಾನ್ಯ ಜನರಿಗೂ ಸಹ, ಇತರರು ಕಷ್ಟಪಟ್ಟಿದ್ದನ್ನು ನೋಡಿದಾಗ 'ಅಯ್ಯೋ

ಪಾಪ' ಎನ್ನಿಸುತ್ತದೆ. ಆ ಅನುಕಂಪ ತಾತ್ಕಾಲಿಕ. ಈ ಕ್ಷಣದಲ್ಲಿ ಅವರಿಗೆ ಸಣ್ಣಪುಟ್ಟ ಸಹಾಯ ಮಾಡಬಹುದು. ಈ ತರಹೆಯ ಅನುಕಂಪ ಉಳ್ಳ ಜನರೇ ಹೆಚ್ಚು. ರೈಲು ನಿಲ್ದಾಣಗಳಲ್ಲಿ, ಜಾತ್ರೆಗಳಲ್ಲಿ, ಗುಡಿಗಳ ಸಮೀಪ ಅಂಗವಿಕಲರು, ಭಿಕ್ಷುಕರು, ಜನರ ತಾತ್ಕಾಲಿಕ ಅನುಕಂಪದ ಲಾಭ ಪಡೆಯಲು ಭಿಕ್ಷೆ ಯಾಚಿಸುತ್ತಾರೆ. ಆಗ ಬಹಳಷ್ಟು ಜನರು ತಮ್ಮಲ್ಲಿರುವ ಚಿಲ್ಲರೆಹಣವನ್ನು ದಾನಮಾಡುತ್ತಾರೆ. ಅದು ದಿನದ ಕೊನೆಯಲ್ಲಿ ಕೆಲವು ರೂಪಾಯಿಗಳೇ ಆಗುತ್ತದೆ. ಆದುದರಿಂದ ಈ ರೀತಿಯ ಅನುಕಂಪದ ದುರ್ಲಾಭ ಪಡೆಯುವ ಹೃದಯಹೀನರೂ ನಮ್ಮ ಸಮಾಜದಲ್ಲಿದ್ದಾರೆ. ಅವರು ಚಿಕ್ಕಮಕ್ಕಳನ್ನು ಅಪಹರಿಸಿಕೊಂಡು ಹೋಗಿ, ಅವನನ್ನು ಕುರುಡನನ್ನೋ, ಕುಂಟನನ್ನೋ ಮಾಡಿ, ಬೀದಿ ಬೀದಿಗಳಲ್ಲಿ ಗುಡಿ ಗುಂಡಾರಗಳಲ್ಲಿ ಭಿಕ್ಷೆ ಬೇಡಲು ಹಚ್ಚುತ್ತಾರೆ. ಆ ಮಕ್ಕಳು ದಿನವಿಡೀ ಬೇಡಿ ಗಳಿಸಿದ ಹಣವನ್ನು ತಾವು ದೋಚಿಕೊಂಡು, ಆ ಮಕ್ಕಳಿಗೆ ಜೀವ ಹಿಡಿದುಕೊಳ್ಳಲು ಬೇಕಾಗುವಷ್ಟು ಎಂಥದೋ ಒಂದಿಷ್ಟು ಆಹಾರವನ್ನು, ಚಿಂದಿಬಟ್ಟೆಯನ್ನು ಕೊಡುತ್ತಾರೆ. ಇಂತಹ ಜಾಲ ಹುಟ್ಟಿಕೊಳ್ಳಲು ಜನರಲ್ಲಿರುವ ತಾತ್ಕಾಲಿಕ ಅನುಕಂಪವೇ ಕಾರಣ. ಆದ್ದರಿಂದ ಜನರು ಪುಡಿಗಾಸು ಭಿಕ್ಷೆ ನೀಡುವಂತಹ ಅನುಕಂಪಕ್ಕೆ ಮಂಗಳ ಹಾಡಿ ಮದರ್ ಥೆರೇಸಾ ಅವರಂತೆ, ಹಣ ದುರುಪಯೋಗವಾಗದೆ, ದುಃಖಿತರ ಕಷ್ಟ ನಿವಾರಣೆ ಮಾಡುವಂತಹ ಕಾರ್ಯಕ್ಕೆಗೊಳ್ಳಬೇಕು ಅಥವಾ ಅಂತಹ ಸಂಸ್ಥೆಗಳಿಗೆ ಹಣ ನೀಡಬೇಕು. ಏಕೆಂದರೆ ಮದರ್ ಥೆರೇಸಾ ಅವರಂತೆ ಎಲ್ಲರೂ ಆಗುವುದು ಸಾಧ್ಯವಿಲ್ಲ.

ಅನೇಕ ಉದಾತ್ತ ಜನರು ಈ ರೀತಿಯ ಕೆಲಸ ಮಾಡಿರುವ ಉದಾಹರಣೆಗಳು ಜಗತ್ತಿನಲ್ಲಿವೆ. ಮಾನವೀಯ ಹೃದಯದ ಜನರ ಅನುಕಂಪದ ಕಾರಣದಿಂದಲೇ ವಿಶ್ವರಾಷ್ಟ್ರ ಸಂಸ್ಥೆಯ ಉದಯವಾಗಿದೆ. ಯುದ್ಧದ ಪರಿಣಾಮಗಳು ಕರಾಳ. ಅನೇಕರ ಸಾವು–ನೋವುಗಳಿಗೆ ಒಳಗಾಗುತ್ತಾರೆ. ಬಹುಜನರು ತಮ್ಮ ಆತ್ಮೀಯ ವ್ಯಕ್ತಿಗಳನ್ನು ಕಳೆದುಕೊಂಡು ಹತಾಶರಾಗುತ್ತಾರೆ. ಬಹುತೇಕ ಕುಟುಂಬಗಳು ದಾರುಣ ಸ್ಥಿತಿಗೆ ಗುರಿಯಾಗುತ್ತವೆ. ಇದನ್ನು ಗಮನಿಸಿದ ದಯಾವಂತರು, ವಿಶ್ವಶಾಂತಿ ಸ್ಥಾಪನೆಗಾಗಿ, ಯುದ್ಧಗಳನ್ನು ತಡೆಗಟ್ಟಬೇಕೆಂಬ ಉದ್ದೇಶದಿಂದ ವಿಶ್ವಸಂಸ್ಥೆಗೆ ಜನ್ಮಕೊಟ್ಟರು. ಇದರ ಸಂಸ್ಥೆಗಳು ಬಡಜನತೆಯ ಶಿಕ್ಷಣ, ಆರೋಗ್ಯ, ಆರೋಗ್ಯಪರಿಸ್ಥಿಯ ಸುಧಾರಣೆಗಾಗಿ ಲೆಕ್ಕವಿಲ್ಲದಷ್ಟು ಕಾರ್ಯಗಳನ್ನು ಹಮ್ಮಿಕೊಂಡಿವೆ. ಇದರ ಹಿಂದೆಯೂ 'ಅನುಕಂಪ'ದ ಭಾವನೆ ಸದ್ದಿಲ್ಲದೆ ಕಾರ್ಯೋನ್ಮುಖವಾಗಿದೆ.

ಅಸಹಾಯಕ ಮಹಿಳೆಯರ ಮತ್ತು ಅನಾಥ ಮಕ್ಕಳ ಕಲ್ಯಾಣಕೇಂದ್ರಗಳು ನಾಡಿನಾದ್ಯಂತ ಉದಯವಾಗಿ ಅವರನ್ನು ಸುಧಾರಿಸಲು ಪ್ರಯತ್ನಿಸುತ್ತಿವೆ. ಇದಕ್ಕೆ

ಅವರುಗಳ ಬಗೆಗೆ ಜನರಿಗಿರುವ ಅನುಕಂಪವೇ ಕಾರಣ. ಇಂತಹ ಕಲ್ಯಾಣಕೇಂದ್ರಗಳನ್ನು ಸರ್ಕಾರ, ಸಂಘಸಂಸ್ಥೆಗಳು, ಉದಾತ್ತ ವ್ಯಕ್ತಿಗಳು ನಡೆಸುತ್ತಿದ್ದಾರೆ. ಆದರೆ ಇಷ್ಟೆಲ್ಲಾ ಮಾಡಿದರೂ ಇನ್ನೂ ಲೆಕ್ಕವಿಲ್ಲದಷ್ಟು ಅನಾಥರು ಸಹಾಯವಿಲ್ಲದೆ ಗೋಳಿಡುತ್ತಿದ್ದಾರೆ. ಆದ್ದರಿಂದ ಉತ್ತಮ ಸ್ಥಿತಿಯಲ್ಲಿರುವ ಜನರು, ದುಃಖಿತರ ಕಣ್ಣೀರನ್ನು ಒರೆಸುವ ಕೆಲಸಕ್ಕೆ ಮುಂದೆ ಬರಬೇಕು. ದುಃಖಿತರು ನೆಮ್ಮದಿಯ ಜೀವನ ವಾಹಿನಿಯಲ್ಲಿ ಸೇರುವಂತೆ ತಮ್ಮ ಕೈಲಾದ ಮಟ್ಟಿಗೆ, ಸಾಧ್ಯವಾದ ರೀತಿಯಲ್ಲಿ ಸಹಾಯಮಾಡಬೇಕು. ಆಗ ಅವರೂ ತಮ್ಮ ಕಾಲಮೇಲೆ ತಾವು ನಿಂತುಕೊಂಡಾರು. ಸಮಾಜದಲ್ಲಿರುವ ತರ-ತಮಭಾವನೆಗಳು ಕಡಿಮೆಯಾಗಿ ದ್ವೇಷಭಾವನೆ ಸ್ವಲ್ಪಮಟ್ಟಿಗಾದರೂ ಅಳಿಸೀತು. ಸುಖೀ ಸಮಾಜಕ್ಕೆ ಪ್ರತಿಯೊಬ್ಬರೂ ಕೈಗೊಟ್ಟು ಸಹಕರಿಸುವುದು ಒಳ್ಳೆಯದು.

■

## ೨೩. ಮಾನವೀಯತೆ

ಮನುಷ್ಯನಲ್ಲಿ ಮಾನವೀಯತೆ ಇರಲೇಬೇಕಾದ ಒಂದು ಗುಣ. ಅದಿಲ್ಲದಿದ್ದರೆ ಮನುಷ್ಯ ಮನುಷ್ಯನಾಗಿ ಉಳಿಯಲು ಸಾಧ್ಯವಿಲ್ಲ. ಅವನು ರಾಕ್ಷಸನಂತಾಗುತ್ತಾನೆ. ಇತರರು ಕಷ್ಟದಲ್ಲಿರುವುದನ್ನು ನೋಡಿದಾಗ ಅವನ ಕರುಳು ಕರುಗುವುದಿಲ್ಲ. ಮನ ಮಿಡಿಯುವುದಿಲ್ಲ. ಯಾರು ಇತರರು ಕಷ್ಟದಲ್ಲಿರುವವರನ್ನು ನೋಡಿ ಮರುಗುತ್ತಾರೋ, ಅವರ ಕಷ್ಟ ನಿವಾರಿಸುವಲ್ಲಿ ಸಹಾಯಕರಾಗುತ್ತಾರೋ ಅವರನ್ನು ಮಾನವೀಯ ಗುಣ ಉಳ್ಳವರೆಂದು ಗುರುತಿಸಬಹುದು.

ಅನೇಕ ಸಂಘಸಂಸ್ಥೆಗಳು, ವ್ಯಕ್ತಿಗಳು, ದುಃಖಿಗಳು, ಅಸಹಾಯಕರ, ಕಷ್ಟದಲ್ಲಿ ಇರುವವರ ಸಹಾಯಕ್ಕಾಗಿ ತಮ್ಮನ್ನು ತಾವೇ ಅರ್ಪಿಸಿ ಕೊಂಡಿರುವುದನ್ನು ಸಮಾಜದಲ್ಲಿ ನಾವು ಕಾಣುತ್ತೇವೆ. ಮಾನವೀಯತೆಯುಳ್ಳ ಹೃದಯವಂತಿಕೆಯ ಸಜ್ಜನರು, ಸಂಘ-ಸಂಸ್ಥೆಗಳನ್ನು ಸ್ಥಾಪಿಸಿ, ಕಷ್ಟದಲ್ಲಿರುವ ಇತರರ ದುಃಖ ನಿವಾರಣೆಗಾಗಿ ಹಗಲಿರುಳು ತನು-ಮನ-ಧನಗಳಿಂದ ದುಡಿಯುತ್ತಾರೆ. ಹೀಗೆ ಮಾನವೀಯ ದೃಷ್ಟಿಯಿಂದ ಇತರರ ಸೇವೆಗಾಗಿ ತಮ್ಮನ್ನು ತಾವೇ ಅರ್ಪಿಸಿಕೊಂಡ ಕೆಲವರಲ್ಲಿ ಮದರ್ ಥೆರೇಸಾ, ಡಾಕ್ಟರ್ ಸುದರ್ಶನ್ ಅಂತಹವರನ್ನು ಹೆಸರಿಸಬಹುದು. ಇಂತಹವರ ದಯಾರ್ದ್ರ ಹೃದಯ ಪರಕೀಯರ ನೋವುಗಳಿಗೆ ಮಿಡಿಯುತ್ತದೆ. ಅವರ ದುಃಖವನ್ನು ಹೋಗಲಾಡಿಸಲು ಶ್ರಮಿಸುತ್ತದೆ. ಅವರಿಗೆ ಒಳಿತು ಮಾಡುವುದರಲ್ಲೇ ಆನಂದಪಡುತ್ತದೆ. ಇಂತಹ ಗುಣವುಳ್ಳ ಸಜ್ಜನರು, ತಮ್ಮ ಸ್ವಂತ ಸುಖವನ್ನು ತೊರೆದು, ಅಗತ್ಯವಿರುವ ಕಡೆ ಹೋಗಿ, ಸೇವೆ ಮಾಡುತ್ತಾರೆ. ವಿದೇಶದ ನರ್ಸ್ ಒಬ್ಬಳು, ತನ್ನ ದೇಶದಲ್ಲಿಯ ನೌಕರಿಯನ್ನೂ ತೊರೆದು, ಹಂಗರಿಯಲ್ಲಿರುವ ಏಡ್ಸ್ ಪೀಡಿತ ಮಕ್ಕಳ ಸಂಸ್ಥೆಯೊಂದಕ್ಕೆ ಸ್ವಯಂ ಪ್ರೇರಿತಳಾಗಿ ಬಂದು ಸೇವೆ ಸಲ್ಲಿಸಿರುವ ಸಂಗತಿಯನ್ನು ಪತ್ರಿಕೆಯಲ್ಲಿ ಓದಿದ್ದೇವೆ. ಆ ಮಕ್ಕಳು ಬದುಕುವುದು ಕೆಲವು ಕಾಲ ಮಾತ್ರ. ಮೂರು ತಿಂಗಳೋ, ಆರು ತಿಂಗಳೋ, ಒಂದು ವರ್ಷವೋ ಅಷ್ಟೆ. ಆದರೆ ಆ ಭಯಂಕರ ರೋಗದಿಂದ ಪೀಡಿತರಾದ ಮಕ್ಕಳನ್ನು ಸರಿಯಾಗಿ ನೋಡುವವರಿಲ್ಲದಿದ್ದರೆ, ಆ ಮಕ್ಕಳ ಸ್ಥಿತಿ ಇನ್ನೂ ದಾರುಣವಾಗುತ್ತದೆ. ಇದನ್ನರಿತ ದಾಯಿಯ ಹೃದಯ ಕರಗಿ ಇಂಗ್ಲೆಂಡಿನಿಂದ

ಹಂಗರಿಗೆ ಓಡಿ ಬಂದಿದ್ದಾಳೆ. ಮಕ್ಕಳ ಊಟ, ಉಡುಗೆ, ನಿದ್ದೆಗೆ ವ್ಯವಸ್ಥೆ ಮಾತ್ರದಿಂದ ಆಕೆಗೆ ತೃಪ್ತಿ ಸಿಕ್ಕಿಲ್ಲ. ಆ ಮಕ್ಕಳು ಸಂತೋಷದಿಂದ ಜೀವವಿರುವವರೆಗೂ ಇರಬೇಕೆಂದು ಅವರನ್ನು ಬೀಚಿಗೆ ಕರೆದುಕೊಂಡು ಹೋಗುತ್ತಾಳೆ. ಅವರ ಹುಟ್ಟಿದ ಹಬ್ಬವನ್ನು ಅದ್ದೂರಿಯಾಗಿ ಮಾಡುತ್ತಾಳೆ; ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ತಾಯಿ ಮುದ್ದಾಡಿದಂತೆ ಮುದ್ದಾಡಿ ಅವರು ಖುಷಿಪಡುವುದನ್ನು ನೋಡಿ ಹಿಗ್ಗುತ್ತಾಳೆ. ಇಂತಹ ಮಾನವೀಯತೆ ಎಷ್ಟು ಜನಕ್ಕೆ ಇದೆ! ಈಗಿನ ಕಾಲದಲ್ಲಂತೂ ಇಂತಹ ಗುಣ ಅಪರೂಪ. ಸಮಾಜದಲ್ಲಿ ಇಂತಹ ಗುಣವುಳ್ಳವರು ಇದ್ದರೆ, ಜನರು ನೆಮ್ಮದಿಯಿಂದ ಬದುಕಬಹುದು.

ಈ ಉದಾತ್ತ ಮಾನವೀಯತೆಯನ್ನು ಮಕ್ಕಳಲ್ಲಿ ಬಾಲ್ಯದಿಂದಲೇ ಮೊಳೆಯುವಂತೆ ಮಾಡಬೇಕು. ಈ ದಿಶೆಯಲ್ಲಿ ಮನೆಯಲ್ಲಿ ಪಾಲಕರ, ಶಾಲೆಯಲ್ಲಿ ಶಿಕ್ಷಕರ ಪಾತ್ರ ಹಿರಿದು. ಆದರೆ, ಈಗಿನ ಕಾಲದಲ್ಲಿ ಪಾಲಕರು ಶಿಕ್ಷಕರಲ್ಲದೆ ಟಿ.ವಿ. ಹಾಗೂ ಸಿನಿಮಾಗಳೂ ಮಕ್ಕಳ ಸ್ವಭಾವವನ್ನು ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತಿವೆ. ಈ ಮಾಧ್ಯಮಗಳ ಉತ್ತಮ ಬಳಕೆಯಿಂದ, ಚಿಕ್ಕವಯಸ್ಸಿನಿಂದಲೇ ಮಕ್ಕಳಲ್ಲಿ ಉದಾತ್ತಗುಣಗಳನ್ನು ಹುಟ್ಟುಹಾಕಬಹುದು.

ಆದರೆ, ಇಂದಿನ ಕೆಲ ಸಿನಿಮಾಗಳನ್ನು, ಟಿ.ವಿ.ಯ ಕಾರ್ಯಕ್ರಮಗಳನ್ನು ವೀಕ್ಷಿಸಿದರೆ ಇವುಗಳ ಮೂಲಕ ಸಮಾಜವನ್ನು ಅಧೋಗತಿಗೆ ತಳ್ಳುತ್ತಿದ್ದೇವೆ; ಜನರ ಅಭಿರುಚಿಯನ್ನು ಕೀಳ್ಮಟ್ಟಕ್ಕೆ ಇಳಿಸುತ್ತಿದ್ದೇವೆ ಎನ್ನಿಸುತ್ತದೆ. ಸಿನಿಮಾಗಳ ಮೂಲಕ ಸಮಾಜದಲ್ಲಿ ಇರುವ ಅಥವಾ ಇರಬಹುದಾದ ಕ್ರೌರ್ಯ, ಹಿಂಸೆ, ಮೋಸ, ವಂಚನೆ, ಹೊಡೆದಾಟ-ಬಡಿದಾಟಗಳನ್ನು ಏನೂ ಅರಿಯದ ಮುಗ್ಧ ಮಕ್ಕಳಿಗೆ ಸುಲಭವಾಗಿ ಅನುಭವಕ್ಕೆ ದೊರೆಯುವಂತೆ ಮಾಡುತ್ತಿದ್ದೇವೆ. ಅಪಕ್ವ ಮನಸ್ಸಿನ, ಒಳ್ಳೆಯದನ್ನು ಕೆಟ್ಟುದರಿಂದ ಬೇರ್ಪಡಿಸಲು ಅಸಾಧ್ಯವಾದ ವಯಸ್ಸಿನಲ್ಲಿ, ದಿನವೂ ಇಂತಹವುಗಳನ್ನು ಪರಿಚಯಿಸಿ, ಹಿಂಸೆ, ಕ್ರೌರ್ಯ, ಹೊಡೆದಾಟ-ಬಡಿದಾಟಗಳನ್ನು ಮನರಂಜನೆಗಾಗಿ ತೋರಿಸುತ್ತಿದ್ದೇವೆ. ಹೀಗಾಗಿ ಮಕ್ಕಳಲ್ಲಿ ಅಮಾನವೀಯವಾದ ವಿಚಾರಗಳು, ನಡೆ-ನುಡಿಗಳು ಮೊಳೆತು, ಬೇರು ಬಿಡಲು ಸಹಾಯಕವಾಗಿದೆ. ಆದುದರಿಂದಲೇ, ನಾವಿಂದು, ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ಸಜ್ಜನರು, ಅಸಹಾಯಕರು, ಶೋಷಣೆಗೆ ತುತ್ತಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಬಲಿಷ್ಟನಾದವನು ಶಕ್ತಿಹೀನನನ್ನು ಶೋಷಿಸಿ ಲಾಭ ಪಡೆಯುವುದೇ ಜಾಣತನವೆನ್ನುವಂತಹ ಮನೋಭಾವ ಮೂಡುತ್ತಿದೆ. ಇದ್ದವನು, ಇಲ್ಲದವನನ್ನು ಹಿಂಸಿಸಿ, ಲಾಭ ಮಾಡಿಕೊಂಡಾಗ ಪ್ರತಿಭಟಿಸದಿರುವ ಸ್ಥಿತಿಯನ್ನು ಸಮಾಜ ಮುಟ್ಟಿದೆ. ಒಬ್ಬರು ಇನ್ನೊಬ್ಬರನ್ನು ಹಿಂಸಿಸುತ್ತಿರುವಾಗ ಮೂರನೆಯ ವ್ಯಕ್ತಿ, ಚಕಾರವೆತ್ತದೆ

ಸುಮ್ಮನಿರಬಲ್ಲ. ಅಷ್ಟರಮಟ್ಟಿಗೆ ಜನತೆಯಲ್ಲಿ ಮಾನವೀಯತೆ ಸತ್ತು ಹೋಗಿದೆ. ಇಂಥಹ ಸ್ಥಿತಿಗೆ ಇಂದಿನ ಜೀವನ ಕ್ರಮವೇ ಕಾರಣವಾಗಿದೆ. ಈ ಸ್ಥಿತಿ ಸರಿಯಲ್ಲವೆಂದು ಅನೇಕರು ಭಾವಿಸಿದರೂ, ಮಾತನಾಡಿಕೊಂಡರೂ, ಅದನ್ನು ತಡೆಗಟ್ಟುವ ದಿಶೆಯಲ್ಲಿ ಪ್ರಯತ್ನಗಳು ಸಾಕಷ್ಟಿಲ್ಲ ಅಲ್ಲೊಂದು ಇಲ್ಲೊಂದು ಪ್ರಯತ್ನ ನಡೆದರೂ ಅದಕ್ಕೆ ಬೆಂಬಲವಿಲ್ಲವಾಗಿ, ವ್ಯಾಪಕವಾದ ಪ್ರಚಾರವಿಲ್ಲ. ಆದ್ದರಿಂದ ಅಂತಹ ಪ್ರಯತ್ನಗಳು ಹುಟ್ಟುತ್ತಲೇ ಸತ್ತುಹೋಗುವಂತಾಗಿದೆ. ಮಾನವೀಯ ಗುಣಗಳನ್ನು ಪೋಷಿಸಿ ಬೆಳೆಸದಿದ್ದರೆ, ಬರುಬರುತ್ತಾ ಜನರು, ಪ್ರತಿಯೊಂದು ಸಂದರ್ಭದಲ್ಲಿಯೂ ಬಡಿದಾಡಿಕೊಂಡು ಬದುಕಬೇಕಾಗುತ್ತದೆ. ಈಗಾಗಲೇ ಅಂತಹ ಸ್ಥಿತಿ ಪ್ರಾರಂಭವಾಗಿದೆ. ಅದು ವ್ಯಾಪಕವಾಗಿ ಹರಡುವ ಸಮಯ ದೂರವಿಲ್ಲೆಂದು ಎನ್ನಿಸುತ್ತದೆ.

ಮಾನವೀಯತೆಯನ್ನು ವ್ಯಕ್ತಿಗಳಲ್ಲಿ ಬೆಳೆಯುವಂತೆ ಮಾಡುವ ಮೂಲಕ ಸಮಾಜದಲ್ಲಿ, ರಾಷ್ಟ್ರದಲ್ಲಿ ಸುಖ-ಶಾಂತಿ-ನೆಮ್ಮದಿ ನೆಲಸುವಂತೆ ಮಾಡಬಹುದು. ಹೊಡೆದಾಟ-ಬಡಿದಾಟಗಳನ್ನು, ಯುದ್ಧ-ಭಯೋತ್ಪಾದನೆಗಳನ್ನು ಇಲ್ಲವಾಗಿಸಬಹುದು. ಆದುದರಿಂದ ಈ ಕಡೆ ಲಕ್ಷ್ಯ ಹರಿಸುವುದು ಬಹಳ ಅವಶ್ಯಕವೆನ್ನಿಸಿದೆ.

ಸಮೂಹ ಮಾಧ್ಯಮಗಳಲ್ಲಿ, ಕಥೆ, ನಾಟಕ, ಭಾಷಣ, ಲೇಖನ, ಸಿನಿಮಾ ಇವುಗಳ ಮೂಲಕ ಒಳ್ಳೆಯದನ್ನೇ ತೋರಿಸಬೇಕು. ಒಳ್ಳೆಯದಾಗಿ ಬಾಳುವುದರಿಂದಾಗುವ ಒಳಿತನ್ನು ಮಾನನಾಟುವಂತೆ ತಿಳಿಸಬೇಕು. ಮಾನವೀಯ ಗುಣಗಳು ಎಲ್ಲರ ಹೃದಯದಲ್ಲಿ ಬೇರು ಬಿಡಬೇಕು. ಪಂಚತಂತ್ರದ ಎರಡು ಗಿಳಿಗಳ ಕಥೆ ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿದೆ. ಕಟುಕನ ಅಂಗಡಿಯಲ್ಲಿ ಬೆಳೆದ ಗಿಳಿ, ಕೆಟ್ಟ ಮಾತುಗಳನ್ನು ಆಡುತ್ತದೆ. ಋಷ್ಯಾಶ್ರಮದಲ್ಲಿ ಬೆಳೆದ ಗಿಳಿ ಮೃದುವಾದ, ಹಿತವಾದ ವಚನಗಳನ್ನು ನುಡಿಯುತ್ತದೆ. ಹೀಗೆಯೇ ಮಕ್ಕಳು ಎಂತಹ ವಾತಾವರಣದಲ್ಲಿ ಬೆಳೆಯುತ್ತಾರೋ ಅಂತಹದನ್ನೇ ಕಲಿಯುತ್ತಾರೆ. ಏನು ಕಲಿಸಿದರೆ ಅದನ್ನು ಕಲಿಯುತ್ತವೆ. ಆದುದರಿಂದ ಬಾಲ್ಯದಿಂದಲೇ ಮಕ್ಕಳಲ್ಲಿ ಮಾನವೀಯತೆಯನ್ನು ಬೆಳೆಯಿಸಿದರೆ, ಸಜ್ಜನರು ದುಷ್ಟರಿಂದ ದುಃಖಕ್ಕೆ ಒಳಗಾಗುವುದು ತಪ್ಪುವುದಲ್ಲದೆ, ಕಷ್ಟದಲ್ಲಿರುವವರಿಗೆ ಸಹಾಯ ಸಹಕಾರಗಳೂ ದೊರಕುತ್ತವೆ.

■

## ೨೪. ಮೋಸ

ಶರಣರು ಅನೇಕ ಉದಾತ್ತ ವಿಚಾರಗಳನ್ನು ವಚನಗಳ ರೂಪದಲ್ಲಿ ನಮಗೆ ಬಿಟ್ಟು ಹೋಗಿದ್ದಾರೆ. ಮೌಲ್ಯಾಧಾರಿತ ಜೀವನ ಹೇಗಿರಬೇಕೆಂಬುದು ವಚನಗಳನ್ನು ಓದಿದರೆ ತಿಳಿಯುತ್ತದೆ. ಮನುಷ್ಯ ಉತ್ತಮ ನಡವಳಿಕೆಯಿಂದ ಬದುಕಬೇಕೆಂದರೆ, ಪಂಚೇಂದ್ರಿಯಗಳನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳಬೇಕೆಂದು ಎಲ್ಲ ಶರಣರೂ ಬೋಧಿಸಿದ್ದಾರೆ. ವೈರಾಗ್ಯಮೂರ್ತಿ ಅಲ್ಲಮಪ್ರಭು ಸಹ, ತಾನು ಬ್ರಹ್ಮಜ್ಞಾನವನ್ನು ಪಡೆಯುವ ಸಾಧನೆ ಮಾರ್ಗದ ಬಗ್ಗೆ ಹೇಳುವಾಗ, ಮೊದಲು ಪಂಚೇಂದ್ರಿಯಗಳನ್ನು ನಿಗ್ರಹಿಸಿ, ನಂತರ ಸದಾ ಜಾಗ್ರತನಾಗಿದ್ದುಕೊಂಡು ಅವು ತನ್ನ ಸಾಧನೆಯನ್ನು ಕೆಡಿಸದಂತೆ ರಕ್ಷಿಸಿಕೊಂಡೆ ಎಂಬ ಮಾತನ್ನು 'ಬಸವಗಳೈವರು ಹಸಗೆಡಿಸಿಯಾರೆಂದು ಅವಾಗಳೂ ಜಾಗರವಿದ್ದು ಸಸಿಯ ಸಲಹಿದೆನು' ಎಂದು ಹೇಳಿದ್ದಾನೆ. ಏಕೆಂದರೆ ಸ್ವಲ್ಪ ಅಲಕ್ಷಿಸಿದರೆ, ಯಾವ ಕ್ಷಣದಲ್ಲಾದರೂ ಪಂಚೇಂದ್ರಿಯಗಳು ತಮ್ಮ ಪ್ರಭಾವ ಬೀರಿಬಿಡುತ್ತವೆ. ಆಗ ಮನುಷ್ಯ ಮದ, ಮೋಹ, ಮೋಸ, ವಂಚನೆ, ಆಸೆ-ಆಮಿಷ ಮುಂತಾದ ದುಷ್ಟ ಗುಣಗಳಿಗೆ ವಶನಾಗಿ, ತಾನೂ ಅವಿವೇಕದ ಬಾಳು ಬಾಳುತ್ತಾ ಇತರರ ನೆಮ್ಮದಿಯನ್ನು ಕದಡುತ್ತಾನೆ. ಸ್ವಾರ್ಥದಿಂದ ಉಳಿದವರನ್ನು ಕಷ್ಟ-ನಷ್ಟಗಳಿಗೆ ಒಳಗಾಗಿಸಿ ಬಿಡುತ್ತಾನೆ.

ಈಚಿಗೆ ಇಂದ್ರಿಯಗಳ ವಶರಾದ ದುಷ್ಟರ ಸಂಖ್ಯೆ ಹೆಚ್ಚಾಗಿದೆ. ಹಾಗಾಗಿ ದುಷ್ಟತನವೂ ವ್ಯಾಪಕವಾಗಿ ಹರಡಿದೆ. ಮೋಸಗಾರಿಕೆಯು ಜೀವನದಲ್ಲಿ ಹಾಸುಹೊಕ್ಕಾಗಿ ಪಸರಿಸಿದೆ. ಮೋಸ ಮಾಡುವುದೊಂದು ಕಲಿತಿರಬೇಕಾದ ಕಲೆ ಎನ್ನುವಷ್ಟರಮಟ್ಟಿಗೆ ಬಹಳಷ್ಟು ಜನರು ಅದನ್ನು ಕರಗತ ಮಾಡಿಕೊಂಡು ಬಿಟ್ಟಿದ್ದಾರೆ. ಈಗ ಎಲ್ಲೆಲ್ಲೂ ಮೋಸ ವಂಚನೆಗಳು ತಾಂಡವವಾಡುತ್ತಿವೆ. ವಿದ್ಯಾವಂತ ಮೋಸಗಾರರು, ಅವಿದ್ಯಾವಂತ ಮೋಸಗಾರರು, ಹಳ್ಳಿಯ ಮೋಸಗಾರರು, ಮೋಸಗಾರ ಅಧಿಕಾರಿಗಳು, ಮೋಸಗಾರ ರಾಜಕಾರಣಿಗಳು ಮುಂತಾಗಿ ಸಮಾಜದ ಎಲ್ಲಾ ಕ್ಷೇತ್ರಗಳಲ್ಲೂ ಮೋಸ ಮಾಡುವ ಜನರಿದ್ದಾರೆ. ಈಗ ದಿನ ಬೆಳಗಾದರೆ ಮೋಸದ, ವಂಚನೆಯ ಪ್ರಕರಣಗಳು ವೃತ್ತಪತ್ರಿಕೆಯ ತುಂಬಾ ತುಂಬಿರುತ್ತವೆ.

ಈಗಿನ ಕಾಲದಲ್ಲಿ ಮೋಸಗೊಂಡ ಅನುಭವ ಎಲ್ಲರ ಅನುಭವಕ್ಕೂ

ಬಂದಿರುತ್ತದೆ. ಬಾರದಿರುವವರು ಇಲ್ಲವೇ ಇಲ್ಲ ಎಂದು ಹೇಳಬಹುದು. ಎಲ್ಲಿ ಕೈ ಇಟ್ಟರೆ ಅಲ್ಲಿ ಮೋಸ. ವ್ಯಾಪಾರದಲ್ಲಿ ಮೋಸ; ವ್ಯವಹಾರದಲ್ಲಿ ಮೋಸ; ಬಂಧುತ್ವದಲ್ಲಿ ಮೋಸ; ಸ್ನೇಹಿತರಲ್ಲಿ ಮೋಸ. ಹೀಗೆ ಮೋಸ ಸರ್ವಾಂತರ್ಯಾಮಿಯಾಗಿ ಹಬ್ಬಿದೆ. ಹಾಗಾಗಿ ವ್ಯಾಪಾರಕ್ಕೆ ಹೋದರೆ ತೂಕದಲ್ಲಿ ಮೋಸ, ಅಳತೆಯಲ್ಲಿ ಮೋಸ, ಗುಣಮಟ್ಟದಲ್ಲಿ ಮೋಸ. ಜೀವ ಉಳಿಸೋ ಔಷಧಿಗಳಲ್ಲಿ ಕಲಬೆರಕೆ, ಅಂತಹ ಔಷಧಿಗಳಿಂದ ಇನ್ನೂ ನಾಲ್ಕು ದಿನ ಬದುಕುವವರು ಮೊದಲೇ ಕಣ್ಣುಮುಚ್ಚಿಬಿಡುತ್ತಾರೆ. ಮಕ್ಕಳಿಗೆ ಕುಡಿಸುವ ಹಾಲು, ಆಹಾರಪದಾರ್ಥ ತಯಾರಿಸುವ ಎಣ್ಣೆ, ಅರಿಸಿನಪುಡಿ, ಖಾರದಪುಡಿ ಮುಂತಾದುವುಗಳಲ್ಲೂ ಅಷ್ಟೆ. ಸಂಬಂಧಿಸಿದವರಿಗೆ ಶೇಕಡ ಎರಡು ನೂರರಷ್ಟು ಲಾಭ ಬರಬೇಕು; ಆ ಆಹಾರ ಸಾಮಗ್ರಿ ತಿಂದು ಸತ್ತರೂ ಸಾಯಲಿ ಆಸ್ಪತ್ರೆಗಾದರೂ ಹೋಗಲಿ ಚಿಂತೆಯಿಲ್ಲ, ಇವರಿಗೆ ಲಾಭವಾಗಿಬಿಟ್ಟರೆ ಸಾಕು. ಇಂತಹ ಮನೋಭಾವದಿಂದ ಮೋಸವಿಲ್ಲದ ಬದುಕೇ ಇಲ್ಲ ಎನ್ನುವಂತಾಗಿದೆ.

ಇಂತಹ ಪರಿಸ್ಥಿತಿಯಿಂದ ಜನರು, ಮೋಸಂ ಸರ್ವತ್ರ ಸಾಧನಂ ಆಗಿರುವಾಗ ನಾವ್ಮಾತ್ರಾ ಸೀದಾ-ಸಾದ ಇದ್ರೆ, ನಮ್ಮನ್ನು ಎಲ್ರೂ ಮೋಸಕ್ಕೆ ಗುರಿಮಾಡಿ, ಕಷ್ಟಗಳಿಗೆ ಸಿಕ್ಕಿಸುತ್ತಾರೆ ಎಂದು ಅನೇಕರು ಪ್ರಯತ್ನ ಪೂರ್ವಕ ಮೋಸಾಮಾಡೋದನ್ನು ಕಲ್ತಿದ್ದಾರೆ. ಅಷ್ಟೇ ಅಲ್ಲ, ಮಕ್ಕಳು ಬರೀ ಒಳ್ಳೇತನ ಕಲ್ತು ಮುಂದೆ ಅವರ ಜೀವನ ಕಷ್ಟಕ್ಕೆ ಗುರಿಯಾಗಬಾರದು ಅಂತ ಬಾಲ್ಯದಿಂದಲೂ ಮಕ್ಕಳನ್ನು ಮೋಸಗಾರಿಕೆಗೆ ಪ್ರೇರೇಪಿಸುವ ತಂದೆ-ತಾಯ್ಗಳೂ ಇದ್ದಾರೆ.

ಈ ಮೋಸಗಾರಿಕೆ ಈಚೆಗಷ್ಟೇ ಪ್ರಾರಂಭವಾಗಿದೆ ಎಂದೇನೂ ಇಲ್ಲ. ಎಲ್ಲಾ ಕಾಲದಲ್ಲೂ ಇತ್ತು. ಆದರೆ ಮೋಸಗಾರರ ಸಂಖ್ಯೆ ಈಗಿನಷ್ಟಿರಲಿಲ್ಲ ಅಷ್ಟೆ. ಹಿಂದಿನ ಇತಿಹಾಸ ತೆಗೆದುಕೊಂಡರೆ ಪುರಾಣಗಳ ಕಾಲದಲ್ಲಿ ಕೌರವರು ಪಾಂಡವರನ್ನು ಮೋಸದಿಂದಲೇ ಜೂಜಿನಲ್ಲಿ ಸೋಲಿಸಿ ವನವಾಸಕ್ಕೆ ಹೋಗುವಂತೆ ಮಾಡಿದರು. ಔರಂಗಜೇಬನು ಶಿವಾಜಿಯನ್ನು ಮೋಸದಿಂದ ಸೆರೆಹಿಡಿದನು. ವ್ಯಾಪಾರಕ್ಕೆಂದು ಬಂದ ಬ್ರಿಟಿಷರು ಮೋಸ ಮೂಲಕ ಭಾರತದ ಆಳರಸರಾದರು. ಕಿತ್ತೂರು ಚೆನ್ನಮ್ಮನಿಗೆ ಅವಳ ಆಪ್ತನಾಗಿದ್ದ ಮಲ್ಲಪ್ಪಶೆಟ್ಟಿಯ ಮೋಸಗಾರಿಕೆಯಿಂದ ಯುದ್ಧದಲ್ಲಿ ಸೋಲಾಯ್ತು.

ಹೀಗೆ ಎಲ್ಲಾ ಕಾಲದಲ್ಲಿಯೂ ಇದ್ದ ಮೋಸ, ಈಗ ಜೀವನದ ಎಲ್ಲಾ ಕ್ಷೇತ್ರದಲ್ಲೂ ಕಾಲು ಚಾಚಿದೆ. ಇದರಿಂದ ಸಮಾಜಕ್ಕೆ ಉಳಿಗಾಲವಿಲ್ಲವಾಗಿದೆ? ಬಹಳಷ್ಟು ಜನ ಮೋಸಮಾಡುವವರೇ ಆಗಿ, ಎಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಕಷ್ಟ-ನಷ್ಟಕ್ಕೆ ಒಳಗಾಗಿ ಪರಿತಪಿಸಬೇಕಾಗಿದೆ. ಮೋಸದ ಕೈ ಮೇಲಾಗಿ ಜನರಿಗೆ

ಒಂದು ತತ್ವವಾಗಲೀ, ನೀತಿಯಾಗಲೀ ಇಲ್ಲವಾಗಿದೆ. ನೀತಿಗೆಟ್ಟ ಸಮಾಜದಲ್ಲಿ ಶಾಂತಿಯಾಗಲೀ ನೆಮ್ಮದಿಯಾಗಲೀ ಇರಲು ಸಾಧ್ಯವಿಲ್ಲ. ಹಾಗಾಗಿ ಎಲ್ಲೆಡೆ ಅಶಾಂತಿ ತುಂಬಿ ತುಳುಕುತ್ತಿದೆ. ಅಶಾಂತಿಯಿಂದ ಕೂಡಿದ ಮನುಷ್ಯನಿಗೆ ಸಮಾಧಾನದಿಂದ ವಿಚಾರಮಾಡಲು ಸಾಧ್ಯವಾಗುವುದಿಲ್ಲ. ದುಡುಕಿನಲ್ಲಿ ಆಡಿದ ಮಾತುಗಳು, ಕೃತಿಗಳು ದೋಷಪೂರಿತವಾಗಿರುತ್ತವೆ. ಅದರಿಂದ ವಿರಸ, ದ್ವೇಷಗಳುಂಟಾಗಿ ಸಾಮಾಜಿಕ ನೆಮ್ಮದಿ ಇಲ್ಲವಾಗುತ್ತದೆ.

ನೆಮ್ಮದಿಗೆ ಭಂಗ ತರುವ ಈ ಮೋಸಗಾರಿಕೆ ತಂತ್ರ ಕುತಂತ್ರಗಳು ಇಲ್ಲವಾಗಬೇಕು. ಇಲ್ಲದಿದ್ದಲ್ಲಿ ಜನರ ಸ್ಥಿತಿ ಅಧೋಗತಿಯ ಕಡೆ ಸಾಗುತ್ತದೆ.

■

## ೨೫. ಅಸಹಕಾರ ಮನೋಭಾವ

ಸಮಾಜದಲ್ಲಿ ನಾನಾ ಸ್ವಭಾವದ ಜನರಿರುತ್ತಾರೆ. ಒಬ್ಬರ ಸ್ವಭಾವ ಮತ್ತೊಬ್ಬರದ್ದಿರುವಂತಿರುವುದಿಲ್ಲ. ಒಂದೇ ತಾಯಿಯ ಮಕ್ಕಳಾದರೂ ಭಿನ್ನ-ಭಿನ್ನ ಸ್ವಭಾವಿರುವುದನ್ನು ನಾವು ಕಾಣುತ್ತೇವೆ. ಇದಕ್ಕೆ ಕಾರಣಗಳು ಅನೇಕ. ಸುಪ್ರಸಿದ್ಧ ಮನಶ್ಶಾಸ್ತ್ರಜ್ಞನಾದ ಡೇಲ್ ಕಾರ್ನೇಗಿ ಒಂದು ಕಡೆ 'ನಾವು ಯಾರನ್ನೂ ಕೆಟ್ಟವರೆಂದು ದೂಷಿಸಬಾರದು. ಏಕೆಂದರೆ, ಅವರ ಆ ಸ್ವಭಾವಕ್ಕೆ ಅವರ ಪರಿಸರ, ವಂಶಾವಳಿ, ಶಿಕ್ಷಣ, ಸ್ನೇಹ, ಅನುಭವ ಮುಂತಾದವುಗಳೇ ಕಾರಣ. "If he had the same heredity, same education, same environment, same friends and experiences, we also would have been the same ಎಂದು ಹೇಳಿದ್ದಾನೆ. ಆದುದರಿಂದ ಮನುಷ್ಯನ ಒಳ್ಳೆಯ ನಡತೆಗೂ, ಕೆಟ್ಟನಡತೆಗೂ ಅವನ ಪರಿಸ್ಥಿತಿಗಳೇ ಕಾರಣ.

ಕೆಲವರು ತುಂಬಾ ಸೋಮಾರಿಗಳಿರುತ್ತಾರೆ. ಮತ್ತೆ ಕೆಲವರು ತುಂಬಾ ಚುರುಕಾಗಿರುತ್ತಾರೆ. ಕೆಲವರಲ್ಲಿ ಸಹಕಾರೀ ಮನೋಭಾವವಿದ್ದರೆ, ಇನ್ನು ಕೆಲವರಲ್ಲಿ ಅಸಹಕಾರ ಮನೋಭಾವವಿರುತ್ತದೆ. ಮತ್ತೊಬ್ಬರ ಒಳಿತನ್ನು ನೋಡಿ ಸಂತೋಷಪಡುವವರು ಕೆಲವರಾದರೆ, ಬೇರೆಯವರ ಏಳ್ಗೆ ನೋಡಿ ಹೊಟ್ಟೆಕಿಚ್ಚು ಪಡುವವರು ಹಲವರು. ಹೀಗೆ ನಾವು ಜನರ ಸ್ವಭಾವದಲ್ಲಿ ನೆಗೆಟಿವ್ ಆಸ್ಪೆಕ್ಟ್ ಮತ್ತು ಪಾಸಿಟಿವ್ ಆಸ್ಪೆಕ್ಟನ್ನು ಕಾಣಬಹುದು. ನೆಗೆಟಿವ್ ಮನೋಭಾವದ ಜನರು, ತಾವೂ ಸುಖಿಗಳಾಗಿರುವುದಿಲ್ಲ. ಇತರರೂ ಸುಖಿಗಳಾಗಿರಲು ಬಿಡುವುದಿಲ್ಲ. ಸಮಸ್ಯೆ ಇದ್ದೇ ಇರುತ್ತವೆ. ಅಂತಹ ಜನರಿರುವ ಕುಟುಂಬಗಳಲ್ಲಿ, ಆಫೀಸುಗಳಲ್ಲಿ, ಸಂಘ-ಸಂಸ್ಥೆಗಳಲ್ಲಿ, ಆಡಳಿತ ಸಂಸ್ಥೆಗಳಲ್ಲಿ ಕಚ್ಚಾಟಗಳು, ವಿರಸಗಳು ಸರ್ವೇಸಾಮಾನ್ಯ, ಕೆಲವರು ಜಗಳಗಂಟಿಗರಿರುತ್ತಾರೆ. ಅವರು ಕಾಳಗದ ಟಗರುಗಳಿದ್ದಂತೆ. ನೆಮ್ಮದಿ ಇದ್ದಲ್ಲಿ ವಿರಸ ಸನ್ನಿವೇಶ ಉಂಟುಮಾಡುವವರು ಅವರು, ಎಲ್ಲರೂ 'ಹೌದು' ಎಂದರೆ ಅವರು 'ಅಲ್ಲ' ಎನ್ನುತ್ತಾರೆ. ಉಳಿದವರು ಬೇಕೆಂದಾಗ ಅವರು ಬೇಡೆನ್ನುತ್ತಾರೆ. ಇಂತಹವರಿಗೆ 'ಏತಿ' ಎಂದರೆ 'ಪ್ರೇತಿ' ಎನ್ನುವವರು ಎಂದು ಕರೆಯುವ ವಾಡಿಕೆಯುಂಟು. ಇಂತಹ ಮಕ್ಕಳು ಒಬ್ಬಿಬ್ಬರಿದ್ದರೂ

ಸಾಕು. ಅವರು ವಾತಾವರಣವನ್ನೆಲ್ಲಾ ಕೆಡಿಸಿ ಹಾಳುಮಾಡಿ ಬಿಡುತ್ತಾರೆ. ಒಂದು ಕೊಳೆತ ಹಣ್ಣು, ಹಣ್ಣಿನ ಬುಟ್ಟಿಯಲ್ಲಿ ಇದ್ದರೆ, ಆ ಬುಟ್ಟಿಯ ಹಣ್ಣುಗಳೆಲ್ಲಾ ಕೊಳೆತು ಹಾಳಾಗುತ್ತವೆ. ಹಾಗೆ ಇಂತಹ ಅಸಹಕಾರದ ಒಬ್ಬ ವ್ಯಕ್ತಿ, ಎಲ್ಲರಲ್ಲೂ ವಿರೋಧ ಮನೋಭಾವವನ್ನು ಬಿತ್ತಿ, ಅಲ್ಲಿರುವವರೆಲ್ಲಾ ಕಚ್ಚಾಡುವಂತೆ ಮಾಡುತ್ತಾನೆ. ಅಂತಹವರು ಕುಟುಂಬದಲ್ಲಿರಲಿ, ಸಂಸ್ಥೆಯಲ್ಲಿರಲಿ, ಆಡಳಿತದಲ್ಲಿರಲಿ ಸುಧಾರಣೆಗೆ ಅವಕಾಶವಿರುವುದಿಲ್ಲ. ಅಲ್ಲಿಯ ಜನರಲ್ಲಿ ಸಮರಸವಿರುವುದಿಲ್ಲ. ಕೂಡಿ ಕೆಲಸ ಮಾಡಲಾಗುವುದಿಲ್ಲ. ಮಾಡಬೇಕಾದ ಕೆಲಸ ಅಲ್ಲೇ ಉಳಿಯುತ್ತದೆ. ಪ್ರಗತಿ ಕುಂಠಿತವಾಗಿ, ನಾಶಕ್ಕೆ ಕಾರಣವಾಗುತ್ತದೆ.

ಒಂದು ಕುಟುಂಬದಲ್ಲಿ ಯಾರಾದರೂ ಹೊಟ್ಟೆಯ ಕಿಚ್ಚಿನ ಸ್ವಭಾವದವರಿದ್ದರೆ, ಅವರು ಯಾರೇ ಯಾವ ಕೆಲಸ ಮಾಡುವಾಗಲೂ ಅಡ್ಡಗಾಲು ಹಾಕುವುದರಿಂದ ಎಲ್ಲರಿಗೂ ಕಿರಿ ಕಿರಿ ಎನ್ನಿಸುತ್ತದೆ. ಅಂತಹ ವ್ಯಕ್ತಿಗೆ ಏನಾದರೂ ಮಾಡು ಎಂದರೆ, ಅದರ ವಿರುದ್ಧವಾದುದನ್ನೇ ಮಾಡುತ್ತಾನೆ. ಇಂತಹ ಸ್ವಭಾವಕ್ಕೆ ಉದ್ದಾಲಕನ ಹೆಂಡತಿ ಚಂಡಿ ಒಂದು ಉತ್ತಮ ಉದಾಹರಣೆ. ಅವಳು, ಗಂಡ ಏನು ಹೇಳಿದರೆ ಅದಕ್ಕೆ ವಿರುದ್ಧವಾದುದನ್ನೇ ಮಾಡುತ್ತಿದ್ದಳಂತೆ. ಈ ಅವಳ ಸ್ವಭಾವವನ್ನರಿತ ಉದ್ದಾಲಕ, ತನಗೆ ಏನುಬೇಕೋ ಅದರ ವಿರುದ್ಧವಾದುದನ್ನೇ ಹೇಳುತ್ತಿದ್ದನಂತೆ. ಆಗ ಆಕೆ, ಅವನು ಹೇಳಿದುದರ ವಿರುದ್ಧ ಮಾಡುತ್ತಿದ್ದಳು. ಹಾಗಾಗಿ, ಅವಳು, ತನಗೆ ಗೊತ್ತಿಲ್ಲದೇ ಉದ್ದಾಲಕನಿಗೆ ಬೇಕಾದುದನ್ನೇ ಮಾಡುತ್ತಿದ್ದಳು. ಆದರೆ ಒಮ್ಮೆ ಅವನು ಶ್ರಾದ್ಧದ ದಿನ ಮರೆತು, ತನಗೆ ಬೇಕಾದುದನ್ನೇ ಹೇಳಿಬಿಟ್ಟನಂತೆ. ಆಕೆ ಅವನು ಹೇಳಿದುದರ ವಿರುದ್ಧ ಮಾಡಿದಾಗ, ಆ ದಿನ ಮಾಡಿದ ಕರ್ಮಗಳೆಲ್ಲಾ ವ್ಯರ್ಥವಾಗಲು ಕಾರಣವಾಯ್ತು.

ಕೆಲವು ಸಂಘ–ಸಂಸ್ಥೆಗಳಲ್ಲೂ ಅಂತಹ ಒಬ್ಬಿಬ್ಬರು ಸೇರಿಕೊಂಡು, ಎಲ್ಲರೂ ಕೂಡಿಕೊಂಡು ಮಾಡಬೇಕಾದ ಅಭಿವೃದ್ಧಿ ಕಾರ್ಯಗಳನ್ನೆಲ್ಲಾ ಬುಡಮೇಲು ಮಾಡಿಬಿಡುತ್ತಾರೆ. ಹಾಗೆ ಮಾಡಿದಾಗಲೇ ಅವರಿಗೆ ಸಂತೋಷ ಎಲ್ಲರೂ ಒಗ್ಗಟ್ಟಿನಿಂದಿದ್ದು ಕೆಲಸಮಾಡಿ, ಕೆಲಸಗಳು ಸರಾಗವಾಗಿ ನಡೆಯುತ್ತಿದ್ದರೆ, ಅವರಿಗೆ ಏನೋ ಕಸಿವಿಸಿ, ಅಸಮಾಧಾನ ಏನಾದರೂ ಕುತಂತ್ರಮಾಡಿ, ಅವರವರಲ್ಲೇ ತಿಕ್ಕಾಟ ಉಂಟಾಗುವಂತೆ, ಜಗಳಾಡುವಂತೆ ಮಾಡಿ ತಾವು ದೂರ ನಿಂತು ಮಜಾ ನೋಡುವ ಹಂಬಲ. ಮತ್ತು ತಾವು ಎಲ್ಲರ ಹಿತೈಷಿಗಳಂತೆ ಮಧ್ಯಸ್ಥಿಕೆ ಮಾಡಿ, ತಮ್ಮ ವರ್ಚಸ್ಸು ಹೆಚ್ಚಿಸಿಕೊಳ್ಳುವುದೂ ಈ ವಿಘ್ನ ಸಂತೋಷಿಗಳ ಒಂದು ತಂತ್ರ. ಅಲ್ಲಿಯ ಕಾರ್ಯಕರ್ತರು ಸಹಕರಿಸಿಕೊಂಡು ಹೋಗುವ ಮನೋಭಾವವಿದ್ದರೂ ಈ ತರಲೆ ಜನರು, ಅವರಿಗೆ ಇಲ್ಲದ್ದನ್ನು ಹಚ್ಚಿ, ಚುಚ್ಚಿ, ಮುಖ್ಯ ಕೆಲಸಗಾರನ

ವಿರುದ್ಧ ಎತ್ತಿಕಟ್ಟಿ, ಅವರುಗಳಲ್ಲೇ ವಿರಸ ಉಂಟಾಗುವಂತೆ ಮಾಡುತ್ತಾನೆ. ಆಗ ಪಾರ್ಟಿ–ಪಂಗಡಗಳು ಹುಟ್ಟಿಕೊಳ್ಳುತ್ತವೆ. ಹಾಗಾದಾಗ ಅವರ ಕಾಲು ಹಿಡಿದು ಇವರು ಜಗ್ಗುವುದು ಇವರ ಕಾಲನ್ನು ಅವರು ಎಳೆಯುವುದು ಶುರುವಾಗಿ ಕೆಲಸಗಳು ಮುಂದೆ ಹೋಗುವುದೇ ಇಲ್ಲ. ಪ್ರಗತಿ ಸಾಧಿಸಲು ಕೆಲಸಮಾಡಬೇಕೆಂಬುದು ಗೌಣವಾಗಿ ತಮ್ಮ, ತಮ್ಮ ಗುಂಪಿನವರ ಅಭಿಪ್ರಾಯಕ್ಕೇ ಗೆಲುವಾಗಬೇಕು, ಎದುರಾಳಿಗಳು ಕೆಲಸಮಾಡಿ ಒಳ್ಳೆಯ ಹೆಸರು ಗಳಿಸದಂತೆ ನೋಡಿಕೊಳ್ಳಬೇಕು ಎಂಬ ಪ್ರಯತ್ನವೇ ಮುಖ್ಯವಾಗುತ್ತದೆ. ಈ ಪೈಪೋಟಿಯಲ್ಲಿ ಮಾಡಬೇಕಾದ ಕೆಲಸ ಹಿಂದಕ್ಕುಳಿದು, ಅದಕ್ಕಾಗಿ ಪಟ್ಟ ಶ್ರಮ, ಹಣ, ಸಮಯ ಎಲ್ಲಾ ವ್ಯರ್ಥವಾಗುತ್ತದೆ. ಇದು ಈಗ ನಮ್ಮ ದೇಶದಲ್ಲಿ ಎಲ್ಲೆಡೆ ನಡೆಯುತ್ತಿರುವ ಪರಿಸ್ಥಿತಿ. ಹೀಗಾಗಿ ನಮ್ಮ ಸಹಕಾರ ಸಂಘಗಳು, ಸಾರ್ವಜನಿಕ ಸಂಸ್ಥೆಗಳು ಹಾಳಾಗಿ ಹೋಗುತ್ತಾ ನಡೆದಿವೆ.

ಜನರಲ್ಲಿ ಹಾಸುಹೊಕ್ಕಾಗಿ ಹಬ್ಬಿರುವ ಈ ಮನೋಭಾವ ಇಲ್ಲವಾಗಬೇಕು. ಹೀಗಾಗಬೇಕಾದರೆ, ಸಹಕಾರ ಮನೋಭಾವದ ಜನರೆಲ್ಲಾ ಒಂದಾಗಿ, ಜಗಳ ಹಚ್ಚಿ ತಮಾಷೆ ನೋಡುವ ಜನರನ್ನು ದೂರವಿಡಬೇಕು. ಅವರ ಆಟ ನಡೆಯದಂತೆ ಅಂತಹವನ್ನು ನಿರ್ಲಕ್ಷಿಸಬೇಕು. ಎಲ್ಲರೂ ನಿರ್ಲಕ್ಷಿಸಿದಾಗ, ಅವರಿಗೆ ನಾಚಿಕೆಯಾಗಿ ಕುತಂತ್ರದ ಆಟವನ್ನು ನಿಲ್ಲಿಸುತ್ತಾರೆ. ಆದರೆ ಇಂದು, ಸಂಘವೇನಾದರಾಗಲಿ, ಸಂಸ್ಥೆ ಏನಾದರಾಗಲಿ, ತಮಗೆ ಲಾಭವಾದರೆ, ಅನುಕೂಲವಾದರೆ ಸಾಕು ಎಂಬ ಸ್ವಾರ್ಥ ಜೀವನವನ್ನು ಅಪೇಕ್ಷಿಸುವ ಜನರೇ ಹೆಚ್ಚು. ಅಂತಹ ಜನ ಕಷ್ಟಪಟ್ಟು ದುಡಿಯುವ ಜನರನ್ನು ಬೆಂಬಲಿಸುವದಕ್ಕಿಂತ ಕಿತಾಪತಿಯ ಜನರಿಗೆ ಕುಮ್ಮಕ್ಕು ಕೊಡುವುದೇ ಹೆಚ್ಚು. ಇಂತಹ ನಡವಳಿಕೆ ಅವಿದ್ಯಾವಂತರಲ್ಲಷ್ಟೇ ಅಲ್ಲ. ವಿದ್ಯಾವಂತರಲ್ಲೂ ಸ್ವಾಭಾವಿಕವಾಗಿ ಬಿಟ್ಟಿರುವುದು ದುರ್ದೈವದ ಸಂಗತಿಯಾಗಿದೆ. ಹೀಗೆ ಪ್ರಗತಿಯೇ ಇಲ್ಲದೆ ಕಚ್ಚಾಡಿಕೊಂಡು ಎಷ್ಟು ದಿನ ತಾನೆ ಸಂಸ್ಥೆ ಉಳಿಯಲು ಸಾಧ್ಯ? ಸಂಸ್ಥೆಯೇ ಉಳಿಯದಿದ್ದರೆ, ಅದರಲ್ಲಿರುವ ಜನರು ಅಭಿವೃದ್ಧಿಗೊಳ್ಳಲು ಹೇಗೆ ಸಾಧ್ಯ? ಹಾಗಾಗಿ ಇಂತಹ ಸಂಸ್ಥೆಗಳನ್ನೊಳಗೊಂಡ ರಾಷ್ಟ್ರದ ಪ್ರಗತಿ ಕುಂಠಿತವಾದಂತೆಯೇ ಸರಿ. ಇದೊಂದು ವಿಷವರ್ತುಲವಾಗಿ, ಕಾಲಾನುಕ್ರಮದಲ್ಲಿ, ಇದು ಹಾಳಾಗುವಂತೆ ಮಾಡಿದವನು ದುಷ್ಪರಿಣಾಮ ಅನುಭವಿಸಬೇಕಾಗುತ್ತದೆ ಎಂಬ ದೂರದ ಸತ್ಯವನ್ನು ಅವರು ಯೋಚಿಸುವುದಿಲ್ಲವಾಗಿ, ಎಲ್ಲರೂ ದುಃಖಕ್ಕೆ ಗುರಿಯಾಗಬೇಕಾಗುತ್ತದೆ.

■

## ೨೬. ಭಾರತದ ಹಳೆಯ ಮೌಲ್ಯಗಳು

ಇಂದಿನ ಸಮಾಜದಲ್ಲಿ ಮೌಲ್ಯಗಳೇ ಇಲ್ಲ ಎನ್ನುವ ಮಾತು ಎಲ್ಲೆಡೆ ಕೇಳಿಬರುತ್ತಿದೆ. ಇಂದು ನಡೆಯುವ ಎಲ್ಲ ದುಷ್ಟ ಚಟುವಟಿಕೆಗಳಿಗೆ ವ್ಯಕ್ತಿಗಳಲ್ಲಿ ಮೌಲ್ಯಗಳ ಕೊರತೆಯೇ ಕಾರಣವೆಂಬುದು ಎಲ್ಲರ ಅನುಭವಕ್ಕೆ ಬಂದ ಸಂಗತಿ. ಹಿಂದಿನ ದಿನಗಳಲ್ಲಿ ಮೌಲ್ಯಗಳಿಗಾಗಿ, ಅನೇಕ ಕಷ್ಟಗಳಿಗೆ ಜನರು ಗುರಿಯಾಗುತ್ತಿದ್ದ ಘಟನೆಗಳನ್ನು ಕೇಳಿ, 'ಅದು ಮೂರ್ಖತನ' ಎಂದು ಇಂದಿನ ಪೀಳಿಗೆ, ಆದರ್ಶವನ್ನು ಟೀಕಿಸುತ್ತಿದೆ. ಮೌಲ್ಯಗಳು ಇಲ್ಲ ಎಂದು ನೊಂದು ನುಡಿಯುವವರು, ಮೌಲ್ಯಾಧಾರಿತ ಜೀವನ ನಡೆಸುವವರು ಮಾತ್ರವಲ್ಲ. ಮೌಲ್ಯಗಳಿಗೆ ಮಹತ್ವ ಕೊಡದ ಜನರೂ ಅದನ್ನೇ ಹೇಳುತ್ತಾರೆ. ಎಲ್ಲರಿಗೂ ಮೌಲ್ಯವಿಲ್ಲದ ಜನರಿಂದ ತೊಂದರೆ, ಅಶಾಂತಿ, ಅತೃಪ್ತಿ, ತೊಳಲಾಟ. ಇಂತಹ ಮಾನಸಿಕ ಹಿಂಸೆಯಿಂದ ತೊಳಲುವುದು ಯಾರಿಗೆ ಬೇಕು? ಆದರೂ ಜನ ಒಂದಲ್ಲ ಒಂದು ಕಾರಣಕ್ಕಾಗಿ ಎಂದರೆ ದುರಾಸೆಯಿಂದಲೋ, ಸ್ವಾರ್ಥದಿಂದಲೋ, ಪರಿಸ್ಥಿತಿಯ ಒತ್ತಡದಿಂದಲೋ ಮೌಲ್ಯಗಳನ್ನು ಮೂಲೆಗೊತ್ತಿ ಬದುಕಹತ್ತಿದ್ದಾರೆ. ಹೀಗಾಗಿ ಆಧುನಿಕ ಯುಗದಲ್ಲಿ, ಸಾಮಾನ್ಯವಾಗಿ ಎಲ್ಲರೂ ಒಂದಲ್ಲ ಒಂದು ರೀತಿಯಿಂದ, ಒಬ್ಬರಲ್ಲ ಒಬ್ಬರಿಂದ ನೋವಿಗೆ ಗುರಿಯಾಗಿರುವುದು ಸರ್ವೇ ಸಾಮಾನ್ಯ.

ನಮ್ಮದು ಮೌಲ್ಯಾಧಾರಿತ ಸಂಸ್ಕೃತಿ. ಭಾರತೀಯರು ಹಿಂದಿನಿಂದಲೂ ಉತ್ತಮ ಮೌಲ್ಯಗಳಿಗೆ ಮಹತ್ವಕೊಟ್ಟು, ಅವುಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡು ಬಂದಿದ್ದಾರೆ. ಕೃತಜ್ಞತೆ, ಪರೋಪಕಾರ, ಉಪಕಾರ ಸ್ಮರಣೆ, ಪ್ರಾಮಾಣಿಕತೆ, ದಯೆ, ನಿರ್ವಂಚನೆ ಮುಂತಾದ ಸದ್ಗುಣಗಳಿಗಾಗಿ ಭಾರತೀಯರು ಹೆಸರುವಾಸಿಯಾಗಿದ್ದರು. ರಾಮ, ದಶರಥ, ಹನುಮಂತ, ಧರ್ಮರಾಯ, ಭೀಷ್ಮ, ವಿದುರ, ಪುರೂರವ ಹೀಗೆ ಹೇಳುತ್ತಾ ಹೋದರೆ ಪಟ್ಟಿ ಬೆಳೆಯುತ್ತಾ ಹೋಗುವುದು. ಇತ್ತೀಚಿನ ದಿನಗಳಲ್ಲಿ ಗಾಂಧೀಜಿ, ಸುಭಾಷ್ ಚಂದ್ರಬೋಸ್, ಲಾಲ್ ಬಹಾದ್ದೂರ್ ಶಾಸ್ತ್ರಿ, ವಿಶ್ವೇಶ್ವರಯ್ಯ ಮುಂತಾದ ವ್ಯಕ್ತಿಗಳು ಇತಿಹಾಸದ ಪುಟದುದ್ದಕ್ಕೂ ಸಾಕಷ್ಟು ಜನ ದೊರೆಯುತ್ತಾರೆ. ಇವರ ಬದುಕು ಇಂದಿಗೂ ಜಗತ್ತಿನಲ್ಲಿ ಉನ್ನತ ಸ್ಥಾನ ಪಡೆದಿರುವುದಕ್ಕೆ ಅವರ ಶ್ರೇಷ್ಠ ಆದರ್ಶಗಳೇ ಕಾರಣ.

ಭಾರತೀಯರು ಕೃತಜ್ಞತಾ ಭಾವನೆಯನ್ನು ಹಿಂದಿನಿಂದಲೂ ಅಳವಡಿಸಿಕೊಂಡು ಬಂದಿದ್ದಾರೆ. ಮಾಡಿದ ಉಪಕಾರವನ್ನು ಮರೆತು ಮೆರೆವ ಕೃತಘ್ನರು ಅಪಾಯಕಾರಿಗಳು. ತಮ್ಮ ಕಷ್ಟದಲ್ಲಿ ನೆರವಾದವರನ್ನು ಜೀವನದುದ್ದಕ್ಕೂ ನೆನೆಯಬೇಕು. ಹೀಗೆ ವ್ಯಕ್ತಿ ಉಪಕಾರ ಸ್ಮರಣೆಯ ಗುಣವನ್ನು ಮಕ್ಕಳು ಅಳವಡಿಸಿಕೊಳ್ಳಲು ಸಹಾಯಕವಾಗುವಂತೆ, ನಮ್ಮ ಹಿರಿಯರು ಕೆಲವೊಂದು ಹಬ್ಬಗಳನ್ನು ಆಚರಿಸುತ್ತಿದ್ದರು. ಧಾರ್ಮಿಕಾಚರಣೆಗಳನ್ನು ಆಚರಿಸುವ ಮೂಲಕ ಸದ್ಗುಣಗಳನ್ನು ಮಕ್ಕಳಲ್ಲಿ ಮೊಳೆಯುವಂತೆ ಮಾಡುತ್ತಿದ್ದರು. ಉದಾ: ಅನೇಕ ಹಬ್ಬಗಳಲ್ಲಿ ಕಲ್ಲು, ಭೂಮಿ, ಬೆಳೆ, ಮರ, ಬೆಂಕಿ, ನೀರು, ಗಾಳಿ ಮುಂತಾದವುಗಳನ್ನು ಪೂಜಿಸುವ ಸಂಪ್ರದಾಯಗಳು ಅಡಕವಾಗಿವೆ. ಈಗಲೂ ಅನೇಕರು ಆ ಹಬ್ಬಗಳನ್ನು ಆಚರಿಸುತ್ತಿದ್ದೇವೆ. ಇದನ್ನು ನೋಡಿ ಆಧುನಿಕ ಸುಧಾರಿತ ನಾಗರಿಕರಾದ ಕೆಲವರು ಟೀಕೆ ಮಾಡುತ್ತಾರೆ. ಅರ್ಥವಿಲ್ಲದ ರೂಢಿಗಳೆಂದು ಅಪಹಾಸ್ಯಮಾಡುತ್ತಾರೆ. ಆದರೆ ಈ ಸಂಪ್ರದಾಯಗಳ ಬಗೆಗೆ, ಆಳವಾಗಿ ವಿಚಾರಮಾಡಿದರೆ, ಈ ಧಾರ್ಮಿಕ ಆಚರಣೆಗಳ ಹಿಂದೆ, ರೂಢಿಗಳಲ್ಲಿ, ಉತ್ತಮ ಮೌಲ್ಯಗಳು, ಸದುದ್ದೇಶಗಳು, ಆರೋಗ್ಯಕರ ಅಭ್ಯಾಸಗಳು ಅಡಗಿರುವುದನ್ನು ಕಾಣಬಹುದಾಗಿದೆ.

ನೀರು, ಬೆಂಕಿ, ಗಾಳಿ, ಗಿಡ, ಮರ, ಧಾನ್ಯ, ಗಾಳಿ ಮುಂತಾದವುಗಳು ಮಾನವನಿಗೆ ಪ್ರಕೃತಿದತ್ತವಾದ ಜೀವನಾಧಾರ ಕೊಡುಗೆಗಳು. ಮನುಷ್ಯನ ಬದುಕಿಗೆ ಇವೆಲ್ಲ ಅತ್ಯಗತ್ಯ. ಭೂಮಿ ಇಲ್ಲದಿದ್ದರೆ ವಾಸವೆಲ್ಲಿ? ಬೆಳೆ, ಬೆಳೆಯುವುದೆಲ್ಲಿ? ಗಾಳಿ ಇಲ್ಲದಿದ್ದರೆ ಗತಿ ಏನು? ನೀರಿಲ್ಲದೆ ಬದುಕುವುದುಂಟೆ? ಬೆಂಕಿ, ಎಷ್ಟೊಂದು ಅವಶ್ಯಕ. ಬೆಳೆ ಇಲ್ಲದೆ ಬಾಳುವೆ ನಡೆದೀತೆ? ಇವುಗಳೆಲ್ಲಾ ನಮ್ಮ ಬದುಕಿಗೆ ಪ್ರಕೃತಿ ಕೊಟ್ಟ ದೇಣಿಗೆ. ಅಂತಹ ಪ್ರಕೃತಿಗೆ ಕೃತಜ್ಞತೆ ಸಲ್ಲಿಸಬೇಕಾದುದು, ಪೂಜ್ಯತೆಯಿಂದ ಗೌರವ–ಭಕ್ತಿ ತೋರಿಸುವುದು, ಅದನ್ನನುಭವಿಸಿದವರ ಕರ್ತವ್ಯ ಇದನ್ನರಿತ ನಮ್ಮ ಹಿರಿಯರು, ಹಬ್ಬಗಳನ್ನು ಆಚರಿಸಿ, ಪ್ರಕೃತಿ ದೇವತೆಯನ್ನು ಪೂಜಿಸಿದರು. ಭಕ್ತಿಯಿಂದ ಕಂಡರು, ಹೀಗೆ ಉಪಕಾರ ಮಾಡಿದವರನ್ನು ನೆನೆಯುವ, ಗೌರವಿಸುವ ಕೃತಜ್ಞತೆ ಸಲ್ಲಿಸುವ ಪರಿಪಾಠ ಮೂಢನಂಬಿಕೆಯೂ ಅಲ್ಲ; ಅಂಧ–ಶ್ರದ್ಧೆಯೂ ಅಲ್ಲ. ಕೃತಜ್ಞತೆ ಸಲ್ಲಿಸುವ ಸತ್ಸಂಪ್ರದಾಯ ಅಷ್ಟೆ. ಹೀಗೆ ಮಾಡುವುದರಿಂದ ಕೃತಜ್ಞತೆಯ, ಉಪಕಾರ ಮಾಡಿದವರನ್ನು ನೆನೆಯುವ ಸದ್ಗುಣವನ್ನು ಪೀಳಿಗೆಯು ಅಳವಡಿಸಿಕೊಳ್ಳುವಂತೆ ಆಗಲೂ ಸಹಾಯವಾಗುತ್ತದೆ. ಒಳ್ಳೆಯ ನಡತೆಯನ್ನು ಬೆಳೆಸಬೇಕಾದರೆ, ಬಾಲ್ಯದಿಂದಲೂ ಪ್ರಯತ್ನಿಸಬೇಕು. ಆ ದಿಶೆಯಲ್ಲಿ ಈ ತರಹ ಆಚರಣೆ ಒಂದು ಉತ್ತಮ ಹೆಜ್ಜೆ. ಆಚರಿಸುವಾಗ, ಉದ್ದೇಶವನ್ನು ಮಕ್ಕಳಿಗೆ ತಿಳಿಸುವುದು ಸೂಕ್ತ. ಹೀಗೆ ಬಾಲ್ಯದಲ್ಲಿ ಉಪಕಾರ ಸ್ಮರಣೆಯ ಗುಣವನ್ನು

ಬೆಳೆಸಿಕೊಂಡರೆ, ಅವರು ಮುಂದೆ ತಂದೆ-ತಾಯ್ಗಳಿಗೆ, ಗುರುಹಿರಿಯರಿಗೆ ಪೂಜ್ಯತೆಯಿಂದ ಗೌರವದಿಂದ ನಡೆದುಕೊಳ್ಳುವುದನ್ನು ತಾನೇ ತಾನಾಗಿ ಕಲಿಯುತ್ತಾರೆ.

ಈಗಿನ ಕಾಲದ ಬಹಳಷ್ಟು ಜನ ಹಿಂದಿನ ಆಚರಣೆಗಳೆಲ್ಲವನ್ನು ಟೀಕಿಸುವ, ಅವುಗಳಲ್ಲಿ ದೋಷವನ್ನು ಕಾಣುವ ಪ್ರವೃತ್ತಿಯನ್ನು ಬೆಳೆಸಿಕೊಂಡು ಬಿಟ್ಟಿದ್ದಾರೆ. ಯಾವ ವಿಷಯವನ್ನೂ ಆಳವಾಗಿ ಯೋಚಿಸದೆ, ಪರೀಕ್ಷಿಸದೆ ಕಡೆಗಣಿಸುವುದು ಸರಿಯಲ್ಲ. ಎಷ್ಟೇ ಉತ್ತಮ ಅಂಶಗಳಿದ್ದರೂ, ಆ ಆಚರಣೆಗಳು ಹಿಂದಿನವು ಎಂಬ ಕಾರಣಕ್ಕಾಗಿ, ಅವನ್ನು ಕಡೆಗಣಿಸುವ ಮನೋಭಾವ ಅನೇಕರಲ್ಲಿದೆ. ಇಂದಿನ ಅನೇಕ ವಿಷಯಗಳು, ರೀತಿಗಳು, ವಸ್ತುಗಳು, ಆಚರಣೆಗಳು ದೋಷಪೂರಿತವಾಗಿದ್ದರೂ ಆಧುನಿಕತೆಯ ಹೆಸರಿನಲ್ಲಿ ಅವುಗಳನ್ನೆಲ್ಲಾ ಒಪ್ಪಿಕೊಳ್ಳುತ್ತಿದ್ದೇವೆ. ಉಪಯೋಗ ಮಾಡುತ್ತಿದ್ದೇವೆ, ಅನುಕರಿಸುತ್ತಿದ್ದೇವೆ. ಆ ಕಾರಣದಿಂದ ಅನೇಕ ತೊಂದರೆಗಳಿಗೆ ಒಳಗಾದರೂ ಅವುಗಳ ಬಳಕೆಯ ಬಗ್ಗೆ ಒಂದು ರೀತಿಯ ಹೆಗ್ಗಳಿಕೆ ನಮಗೆ. ಆಧುನಿಕತೆಗೆ ಮಾರು ಹೋಗಿ ಹೈಹೀಲ್ಡ್ ಷೂ ಹಾಕಿಕೊಂಡು ಕಾಲು ಉಳುಕಿಸಿಕೊಂಡರೂ, ಸೊಂಟ ನೋವು, ಮೀನುಖಂಡದ ನೋವು ಪೀಡಿಸಿದರೂ ಅದನ್ನು ಬಿಡುವಂತಿಲ್ಲ. ಕುಡಿತದಿಂದಾಗಿ ಮನೆ-ಮಠಗಳು ಹಾಳಾದರೂ ಸಾಮಾಜಿಕ ಹೆಗ್ಗಳಿಕೆಗಾಗಿ ಕೆಲವರು ಕುಡಿತದ ಚಟಕ್ಕೆ ಬಲಿಯಾಗುತ್ತಾರೆ. ಹೋಟೆಲ್‌ಗೆ ಹೋಗಿ ಊಟ ಮಾಡುವುದು, ಕುಡಿಯುವುದು ಇಂದು ಆಧುನಿಕ ಫ್ಯಾಷನ್ ಆಗಿಬಿಟ್ಟಿದೆ; ನಾಗರಿಕತೆಯ ಲಕ್ಷಣವೆಂದು ತಿಳಿದುಬಿಟ್ಟಿದ್ದಾರೆ. ಕಾಸ್ಮೆಟಿಕ್ಸ್‌ನ ಮೋಹಕ್ಕೆ ಒಳಗಾಗಿ, ಉತ್ತಮ ಮಟ್ಟದ ವಸ್ತುಗಳನ್ನು ಕೊಳ್ಳಲಾರದವರು ಕಳಪೆ ದರ್ಜೆಯ ವಸ್ತುಗಳನ್ನು ಉಪಯೋಗಿಸಿ, ಅನೇಕ ಸಮಸ್ಯೆಗಳಿಗೆ ಒಳಗಾಗುತ್ತಾರೆ. ಈ ದುಂದುಗಾರಿಕೆಯನ್ನು ನಿವಾರಿಸಲು, ಆಧುನಿಕ ಖರ್ಚುಗಳನ್ನು ನಿಭಾಯಿಸಲು ಲಂಚಕೋರತನಕ್ಕೆ ನಿಲ್ಲುವರು. ಹೆಚ್ಚಿನ ಆದಾಯ ಪಡೆಯಲು ಸಮಾಜದ ಅನಾರೋಗ್ಯಕ್ಕೆ, ಪ್ರಾಣಾಪಾಯಕ್ಕೆ ಕಾರಣವಾಗುವ ಲಕಬೆರಕೆಯನ್ನು ಪ್ರಾರಂಭಿಸುತ್ತಾರೆ. ಈ ಕಲಬೆರಕೆ ಪ್ರಾಣ ಉಳಿಸಲು, ಆರೋಗ್ಯ ಪಡೆಯಲು ಉಪಯೋಗಿಸುವ ಔಷಧಿಗಳಲ್ಲೂ ಉಂಟಾಗಿದೆ. ಹೀಗೆ ಮನುಷ್ಯ ಮಾನವೀಯತೆ ಕಳೆದುಕೊಂಡು ಅಮಾನವೀಯವಾಗಿ ಎಂದರೆ ರಾಕ್ಷಸೀಗುಣಗಳೊಂದಿಗೆ ಬದುಕುತ್ತಿದ್ದಾನೆ. ಅನಾರೋಗ್ಯಕರ ವಸ್ತುಗಳ ಬಳಕೆಯಿಂದ ಪ್ಲಾಸ್ಟಿಕ್ ಅಲರ್ಜಿ, ಸಿಂಥೆಟಿಕ್ ಅಲರ್ಜಿ, ಆ ಅಲರ್ಜಿ, ಈ ಅಲರ್ಜಿ ಎಂದು ಪ್ರತಿಯೊಬ್ಬರೂ ಒಂದಲ್ಲ ಒಂದು ರೀತಿಯ ಅಲರ್ಜಿಗೆ ಒಳಗಾಗುತ್ತಿದ್ದಾರೆ. ಇಂದಿನ ಅನೇಕ ಆಧುನಿಕ ಸೌಂದರ್ಯಸಾಧನಗಳು ಚಾಕೋಲೇಟ್‌ಗಳು, ಪೇಯಗಳು, ಬಟ್ಟೆಗಳು ಕಾಲಾನುಕ್ರಮದಲ್ಲಿ ಮನುಷ್ಯನ ಆರೋಗ್ಯಕ್ಕೆ ಹಾನಿ ಉಂಟು

ಮಾಡುವಂತಹವುಗಳಾಗಿವೆ. ಹೀಗಿದ್ದರೂ ಜನರು ಆ ವಸ್ತುಗಳು ಜೀವನದ ಅವಿಭಾಜ್ಯ ವಸ್ತುಗಳೆಂಬಂತೆ. ಅವುಗಳಿಲ್ಲದೆ ನಡೆಯಲು ಸಾಧ್ಯವಿಲ್ಲವೆಂಬಂತೆ ಬದುಕುವ ರೀತಿ ಸೋಜಿಗವನ್ನುಂಟುಮಾಡುತ್ತದೆ.

ನಮ್ಮ ಹಿರಿಯರು ದಡ್ಡರೇನಲ್ಲ. ಶತಮಾನಗಳ ಹಿಂದೆ ಅನೇಕ ರೂಢಿಗಳನ್ನು, ಹಬ್ಬಗಳನ್ನು ಜನರ ಹಿತಕ್ಕಾಗಿಯೇ, ಅನುಕೂಲಕ್ಕಾಗಿಯೇ ಸಂಪ್ರದಾಯ, ರೂಢಿ, ಹಬ್ಬ, ಧಾರ್ಮಿಕ ಕಾರ್ಯಗಳು ಎಂಬ ಹೆಸರಲ್ಲಿ ರೂಢಿಸಿ, ಪೋಷಿಸಿ ಬೆಳೆಸಿಕೊಂಡು ಬಂದಿದ್ದಾರೆ. ಇಂದಿನಂತೆ ಆಗಿನ ಕಾಲದ ಜನಸಾಮಾನ್ಯರು ವಿದ್ಯಾವಂತರಾರಲಿಲ್ಲ. ಆರೋಗ್ಯದ ಅಂಶಗಳು, ಬದುಕಲು ಬೇಕಾದ ಉತ್ತಮ ರೀತಿ–ನೀತಿಗಳು, ಸಹಕಾರದ ಬಾಳ್ವೆಗೆ ಅವಶ್ಯಕವಾದ ಮೌಲ್ಯಗಳು, ಅವರಿಗೆ ತಿಳಿದಿರುತ್ತಿರಲಿಲ್ಲ. ಅವರಿಗೆ ತಿಳಿಯುವಂತೆ ಹೇಳುವುದು ಕಷ್ಟಕರವಾಗಿತ್ತು. ಇವುಗಳ ಬಗ್ಗೆ ಎಲ್ಲರಿಗೂ ಅರಿವಾಗುವಂತೆ ಹೇಳುವಂತಹ, ಸಾಮಾಜಿಕ ಕಳಕಳಿಯುಳ್ಳ ವಿದ್ಯಾವಂತರೂ ಸಾಕಷ್ಟು ಸಂಖ್ಯೆಯಲ್ಲಿರಲಿಲ್ಲ. ವಿದ್ಯಾವಂತ ಮಹಿಳೆಯರಂತೂ ಬಹಳ ಕಡಿಮೆ. ಜನರಲ್ಲಿ ಧಾರ್ಮಿಕ ವಿಚಾರಗಳಲ್ಲಿ ಬಹಳ ನಂಬಿಕೆ ಇತ್ತು. ಸಂಪ್ರದಾಯಗಳನ್ನು ಚಾಚೂ ತಪ್ಪದಂತೆ ನಡೆಸುವ ಮನೋಭಾವವಿತ್ತು. ಇದರ ಉಪಯೋಗವನ್ನು ಪಡೆದುಕೊಂಡು ಸಮಾಜದ ಹಿರಿಯರು, ಹಿತೈಷಿಗಳು, ಆರೋಗ್ಯ ಜೀವನಕ್ಕೆ, ಕೌಟುಂಬಿಕ ನೆಮ್ಮದಿಗೆ ಅಗತ್ಯವಾದ ಕೆಲವು ನಿಯಮಗಳನ್ನು ರೂಢಿಯನ್ನಾಗಿಯೋ ಸಂಪ್ರದಾಯವನ್ನಾಗಿಯೋ, ಧರ್ಮಾಚರಣೆಯನ್ನಾಗಿಯೋ ಮಾಡುವಂತೆ ವ್ಯವಸ್ಥೆಗೊಳಿಸುತ್ತಿದ್ದರು. ಜನರುಗಳು ತಮ್ಮ ಆಚರಣೆಗಳ ನೇರ ಲಾಭದ ಅರಿವಿಲ್ಲದೇ ಅವುಗಳನ್ನು ಆಚರಿಸುತ್ತಿದ್ದರು. ಯಾರಾದರೂ 'ಏಕೆ ಇದನ್ನು ಆಚರಿಸುತ್ತಿದ್ದೀರಿ' ಎಂದರೆ, 'ನಮಗೇನೂ ಗೊತ್ತಿಲ್ಲ. ನಮ್ಮ ಹಿರಿಯರು ಮಾಡುತ್ತಿದ್ದರು; ನಾವೂ ಮಾಡುತ್ತಿದ್ದೇವೆ' ಎನ್ನುತ್ತಿದ್ದರು. ಹಾಗಾಗಿ ನಮಗೆ ಅವು 'ಮೂಢನಂಬಿಕೆ' ಗಳೆಂಬ ಭಾವನೆ ಬಂದಿದೆ.

ಹಿಂದಿನವರ ಕೆಲವೊಂದು ರೂಢಿಗಳನ್ನು, ಸಂಪ್ರದಾಯಗಳನ್ನು ವಿಶ್ಲೇಷಿಸಿದರೆ, ಅವುಗಳ ಹಿಂದೆ ಅಡಗಿರುವ ಸದುದ್ದೇಶಗಳು ಬೆಳಕಿಗೆ ಬರುತ್ತವೆ. ಉದಾಹರಣೆಗೆ ಹೇಳಬೇಕೆಂದರೆ, ಹಿಂದಿನ ಕಾಲದ ಗ್ರಾಮೀಣ ಜೀವನದಲ್ಲಿ ಯಾರ ಮನೆಯಲ್ಲಾದರೂ ಹೆರಿಗೆಯಾದರೆ, ಆ ಮನೆಯ ಮುಂಬಾಗಿಲಿನ ಬಳಿ ಸಗಣಿಯ ಕಟ್ಟೆ ಕಟ್ಟಿ, ಅದರಲ್ಲಿ ನೀರು ಹಾಕುತ್ತಿದ್ದರು. ಹೊರಗಿನಿಂದ ಯಾರಾದರೂ ಅವರ ಮನೆಗೆ ಬಂದರೆ, ಸಗಣಿ ಕಟ್ಟೆ ನೋಡಿ ಈ ಮನೆಯಲ್ಲಿ ಬಾಣಂತಿ ಇದ್ದಾಳೆ ಎಂದು ಅರ್ಥ ಮಾಡಿಕೊಳ್ಳುತ್ತಿದ್ದರು. ಆಗ ಅವರು ತಮ್ಮ ಕಾಲುಗಳನ್ನು ಕಟ್ಟೆಯಲ್ಲಿನ ನೀರಿನಲ್ಲಿ ಅದ್ದಿ ಒಳಗೆ ಹೋಗುತ್ತಿದ್ದರು. ಇಂತಹ ಪದ್ಧತಿ ಆಗ ಬೆಳೆದುಬರಲು ಕಾರಣವೆಂದರೆ,

ಆಗಿನ ಕಾಲದಲ್ಲಿ ಮಹಿಳೆಯರು ಚಪ್ಪಲಿ ಹಾಕುತ್ತಿರಲಿಲ್ಲ. ಹಾಕಿದರೆ ಶೋಕಿ ಮಾಡುತ್ತಾಳೆಂದು ಟೀಕಿಸುತ್ತಿದ್ದರು. ಚಪ್ಪಲಿಯನ್ನು ಮಹಿಳೆಯರು ಹಾಕದಿರಲು ಜನಸಾಮಾನ್ಯರ ಆರ್ಥಿಕ ಸ್ಥಿತಿಯೂ ಕಾರಣವಿರಬಹುದು. ಯಾವುದೇ ಕಾರಣವಿರಲಿ, ಅವರು ಚಪ್ಪಲಿ ಇಲ್ಲದೇ ಓಡಾಡುತ್ತಿದ್ದುದರಿಂದ, ರಸ್ತೆಯಲ್ಲಿಯ ಹೊಲಸು, ಧೂಳು ಅವರ ಕಾಲಿಗೆ ಮೆತ್ತಿಕೊಳ್ಳಲು ಸಾಧ್ಯವಾಗುತ್ತಿತ್ತು. ಅಂತಹವರು ಕಾಲು ತೊಳೆಯದೆ, ಮನೆಯೊಳಗೆ ಹೋಗಿ ಹಿಂಭಾಗದಲ್ಲಿದ್ದ ಬಚ್ಚಲಿನಲ್ಲಿ ಕಾಲು ತೊಳೆದುಕೊಳ್ಳುವಷ್ಟರಲ್ಲಿ, ಅವನ ಕಾಲಿನ ಹೊಲಸಿನಲ್ಲಿದ್ದ ರೋಗಾಣುಗಳು ಮನೆಯಲ್ಲಿಯ ಧೂಳಿನೊಡನೆ ಸೇರಿಕೊಳ್ಳಬಹುದಿತ್ತು. ಆಗ ನಮ್ಮಲ್ಲಿಯ ಹೆಚ್ಚು ಜನರು ಕೇವಲ ಒಕ್ಕಲುತನ ಮಾಡಿಕೊಂಡಿರುತ್ತಿದ್ದರು. ಆಗ, ಈಗಿನಂತೆ ಸಿಮೆಂಟಿನ, ಟೈಲ್ಸ್ ನೆಲವಿರುತ್ತಿರಲಿಲ್ಲ. ಬಹಳವಾಗಿ ಸಗಣಿಯಿಂದ ಸಾರಿಸಿದ ಮಣ್ಣಿನ ನೆಲವಾಗಿರುತ್ತಿತ್ತು. ಅಲ್ಲದೆ ಮನೆ ತುಂಬಾ ಕಾಳು–ಕಡ್ಡಿಗಳ ಚೀಲ ತುಂಬಿರುತ್ತಿದ್ದವು. ಹಾಗಾಗಿ ಮನೆ ಸ್ವಚ್ಛವಿಡಲು ಕಷ್ಟವಾಗಿ ಧೂಳು ಮನೆ ತುಂಬಾ ಇರುತ್ತಿತ್ತು. ಆ ಧೂಳಿನೊಂದಿಗೆ ಹೊರಗಿನಿಂದ ಬಂದವರ ಕಾಲಿನ ಧೂಳು ಸೇರಬಹುದಿತ್ತು. ಹೆರಿಗೆಯ ನಂತರ ಮಹಿಳೆ ನಿಶ್ಯಕ್ತಳಾಗಿರುತ್ತಾಳೆ. ದುರ್ಬಲತೆಯ ಕಾರಣ, ರೋಗನಿರೋಧಕ ಶಕ್ತಿ ಅವಳಲ್ಲಿ ಕಡಿಮೆ ಇರುತ್ತದೆ. ಮಗುವೂ ಸಹ ಅತಿ ಚಿಕ್ಕದ್ದು. ಅದಕ್ಕೂ ರೋಗ ನಿರೋಧಕ ಶಕ್ತಿ ಅಗತ್ಯವಾದಷ್ಟು ಇರುವುದಿಲ್ಲ. ಆದುದರಿಂದ ಯಾವುದೇ ರೋಗಾಣು ಬಾಣಂತಿಯ ಮನೆಯ ಒಳ ಸೇರಿದರೆ, ಹವೆಯೊಡನೆ ಬೆರೆತು, ಸುಲಭವಾಗಿ ಬಾಣಂತಿ ಹಾಗೂ ಮಗು ರೋಗಕ್ಕೆ ಗುರಿಯಾಗಬಹುದಿತ್ತು. ಸಗಣಿ ಆ್ಯಂಟಿಸೆಪ್ಟಿಕ್ ಗುಣ ಉಳ್ಳದ್ದಲ್ಲದೆ ನೀರಲ್ಲಿ ಪಾದಗಳನ್ನು ಅದ್ದಿದಾಗ, ಕಾಲಲ್ಲಿದ್ದ ಧೂಳು ಹಾಗು ಹೊಲಸು, ಕಾಲಿಗೆ ಮೆತ್ತಿಕೊಂಡು ಬಿಡುತ್ತದೆ. ಅಥವಾ ಸಗಣಿಯ ನೀರಲ್ಲಾದರೂ ಬೆರೆತುಕೊಳ್ಳುತ್ತದೆ. ಆದುದರಿಂದ ಒದ್ದೆ ಕಾಲಲ್ಲಿ ಒಳಗೆ ಹೋದಾಗ ರೋಗಾಣುಗಳು ಹರಡುವ ಸಾಧ್ಯತೆ ಕಡಿಮೆ. ಅಲ್ಲಿಂದ ನೇರವಾಗಿ ಬಚ್ಚಲು ಮನೆಗೆ ಹೋಗಿ ಕಾಲು ತೊಳೆದುಕೊಂಡು ಬಂದಾಗ, ರೋಗಾಣುಗಳು ತೊಳೆದುಹೋಗಿ ಕಾಲು ಸ್ವಚ್ಛವಾಗಿರುತ್ತದೆ. ಈ ಕಾರಣಗಳಿಂದ ಅಂತಹ ರೂಢಿಗಳನ್ನು ಬಳಕೆಗೆ ತಂದಿದ್ದರು. ಈಗಿನ ಪರಿಸ್ಥಿತಿಯಲ್ಲಿ ಅಂತಹ ರೂಢಿಗಳ ಅವಶ್ಯಕವಿಲ್ಲದಿರುವುದರಿಂದ, ಆ ರೂಢಿಗಳನ್ನು ಸುಲಭವಾಗಿ ಬಿಟ್ಟುಬಿಟ್ಟರೆ ತಪ್ಪೇನಲ್ಲ.

ಸಂಪ್ರದಾಯಸ್ತರಾದ ಮನೆತನಗಳಲ್ಲಿ ಊಟಕ್ಕೆ ಮೊದಲು, ಕೈಗೆ ನೀರು ಹಾಕಿಕೊಂಡು ಊಟದ ಎಲೆಯ ಸುತ್ತ ನೀರು ಹಾಕಿಕೊಂಡು ಊಟ ಪ್ರಾರಂಭಿಸುತ್ತಾರೆ. (ಮೊದಲಿನಿಂದಲೂ ನಡೆದು ಬಂದ ಪದ್ಧತಿ). ದೊಡ್ಡವರು ಮಾಡಿದಂತೆ ಚಿಕ್ಕವರೂ ಅನುಸರಿಸುತ್ತಿದ್ದರು. ಇಂತಹ ಸಣ್ಣ ರೂಢಿಯ ಹಿಂದೆಯೂ

ಒಂದು ಆರೋಗ್ಯಕರ ಉದ್ದೇಶವಿದೆ. ಹಿಂದಿನ ಕಾಲದಲ್ಲಿ ಹೆಚ್ಚಾಗಿ ಸಗಣಿಯಿಂದ ಸಾರಿಸಿದ ಮಣ್ಣಿನ ನೆಲವಿರುತ್ತಿತ್ತು. ಅಲ್ಲದೆ ಈಗಿನಂತೆ ವಿದ್ಯುದ್ದೀಪಗಳಿರಲಿಲ್ಲ. ಮೇಜಿನ ಮೇಲೆ ಊಟ ಮಾಡುವ ಪದ್ಧತಿ ಶ್ರೀಮಂತರ ಮನೆಗಳಲ್ಲಿ ಸಹ ಇರುತ್ತಿರಲಿಲ್ಲ. ಊಟಕ್ಕೆ ನೆಲದ ಮೇಲೆ ಬಾಳೆ ಎಲೆ ಅಥವಾ ಮುತ್ತುಗದ ಎಲೆಗಳನ್ನು ಉಪಯೋಗಿಸುತ್ತಿದ್ದರು. ಹಾಗಾಗಿ ರಾತ್ರಿ ಹೊತ್ತು ಇರುವೆ ಮುಂತಾದ ಕ್ರಿಮಿ ಕೀಟಗಳು, ಎಲೆಯೊಳಕ್ಕೆ ಹರಿದು ಬರುವ ಸಾಧ್ಯತೆ ಇತ್ತು. ಆಗ ಎಲೆ ಹಾಕುತ್ತಾ ನೀರು ಹಾಕಿ ಹಸಿ ಮಾಡಿದರೆ ಕ್ರಿಮಿಕೀಟಗಳು ತಂಪಿನ ಅನುಭವದಿಂದ ಹಿಂದೆ ಸರಿಯಬಹುದಾಗಿತ್ತು. ಆ ಕಾರಣಕ್ಕಾಗಿ ಬಹುಶಃ ಹಿಂದಿನವರು ಊಟಕ್ಕೆ ಕುಳಿತುಕೊಳ್ಳುತ್ತಿದ್ದಂತೆಯೇ ಎಲೆಯ ಸುತ್ತ ನೀರು ಹಾಕುವ ಪರಿಪಾಠವಿತ್ತು. ಆ ರೂಢಿಯನ್ನು ಮಕ್ಕಳು ಕಾರಣ ವಿಚಾರಮಾಡದೆ, ಊಟಕ್ಕೆ ಕುಳಿತುಕೊಳ್ಳುತ್ತಿದಂತೆಯೇ ಎಲೆ ಸುತ್ತ ನೀರನ್ನು ಯಾಂತ್ರಿಕವಾಗಿ ಹಾಕಿಬಿಡುತ್ತಿದ್ದರು. ಇಂದು ಅಂತಹ ಪದ್ಧತಿಯ ಅವಶ್ಯಕತೆ ಇಲ್ಲ. ಈಗಲೂ ಹಾಗೆ ಮಾಡಿದರೆ ಅಂಧಾನುಕರುಣೆಯಾಗುವುದರಲ್ಲಿ ಸಂದೇಹವಿಲ್ಲ. ಮೊದಲಿನಿಂದಲೂ ಮೈ, ಕೈಗೆ ಹಾಗೂ ತಲೆಗೆ ಚೆನ್ನಾಗಿ ಎಣ್ಣೆ ಮಸಾಜ್ ಮಾಡಿಕೊಂಡು ವಾರಕ್ಕೆ ಒಂದಾವರ್ತಿಯಾದರೂ ಅಭ್ಯಂಜನ ಸ್ನಾನ ಮಾಡುವ ರೂಢಿ ಇತ್ತು. ಯಂತ್ರಕ್ಕೆ ಆಗ್ಗಾಗ್ಗೆ ಎಣ್ಣೆ ಹಾಕುವುದು ಅವಶ್ಯಕ. ಇಲ್ಲದಿದ್ದಲ್ಲಿ ಯಂತ್ರ ಬೇಗ ಕೆಟ್ಟುಹೋಗುತ್ತದೆ. ಹಾಗೆಯೇ ದೇಹಕ್ಕೂ ವಾರಕ್ಕೊಮ್ಮೆಯಾದರೂ ಎಣ್ಣೆಯನ್ನು ಚೆನ್ನಾಗಿ ತಿಕ್ಕಿ ಸ್ವಲ್ಪ ಸಮಯಬಿಟ್ಟು ಸ್ನಾನ ಮಾಡಿದರೆ, ನೆತ್ತಿ ತಂಪಾಗಿರುತ್ತದೆ. ಕಣ್ಣು ಉರಿ ಬರುವುದಿಲ್ಲ, ಚರ್ಮರೋಗಗಳು ಹಿಮ್ಮೆಟ್ಟುತ್ತವೆ. ತಲೆಯಲ್ಲಿ ಹೊಟ್ಟಾಗುವುದಿಲ್ಲ, ಕೂದಲುದುರುವುದಿಲ್ಲ. ಕೀಲುನೋವು ಬರುವುದಿಲ್ಲ. ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡುವುದು ಹಳೆಯ ರೂಢಿಯಾದರೂ ಇಂದಿಗೂ ಅದು ಅವಶ್ಯ. ಆದರೆ ಈಗಿನ ದಿನಗಳಲ್ಲಿ ಅದಕ್ಕೆ ಮಹತ್ವವಿಲ್ಲ. ಅದಕ್ಕಾಗಿಯೇ ತಲೆಯಲ್ಲಿಯ ಹೊಟ್ಟಿಗಾಗಿ, ತಲೆ ನೋವಿಗಾಗಿ, ಕೂದಲು ಉದುರುವುದನ್ನು ತಡೆಗಟ್ಟಲು, ಕೀಲು ನೋವಿಗಾಗಿ, ಕಣ್ಣಿನ ತೊಂದರೆಗಳಿಗಾಗಿ, ಚರ್ಮರೋಗಗಳಿಗಾಗಿ ಹಣವನ್ನು ನೀರಿನಂತೆ ಖರ್ಚು ಮಾಡಬೇಕಾಗಿದೆ. ಹೀಗೆ ಕೆಲವು ರೂಢಿಗಳು ಇಂದಿಗೂ ಅಪೇಕ್ಷಣೀಯ. ಅವು ಹಳೆಯ ರೂಢಿಗಳಾದ ಕಾರಣ ಕಡೆಗಣಿಸಿದರೆ ನಾವು ಬಹಳ ದಂಡ ತೆರಬೇಕಾಗುತ್ತದೆ.

ಸಂಕ್ರಾಂತಿಯಲ್ಲಿ ಎಳ್ಳು ಕೊಡುವುದು, ವಿಜಯದಶಮಿಯಂದು ಬನ್ನಿ ಕೊಡುವುದು ಯುಗಾದಿಯಂದು ಹಿರಿಯರಿಗೆ ನಮಸ್ಕಾರ ಮಾಡುವುದು ಮುಂತಾದ ಪದ್ಧತಿಗಳ ಹಿಂದೆ ಸಾಮಾಜಿಕವಾದ, ಕೌಟುಂಬಿಕವಾದ ಮೌಲ್ಯಗಳು ಅಡಗಿದೆ.

ಈಗ ಅವುಗಳ ಮಹತ್ವ ಕಡಿಮೆಯಾಗಿದೆ. ಅದರ ಜೊತೆಗೆ ಅವುಗಳ ಹಿಂದಿರುವ ಮೌಲ್ಯಗಳೂ ಸಮಾಜದಲ್ಲಿ ಇಲ್ಲವಾಗಿ, ಅನೇಕ ಸಮಸ್ಯೆಗಳಿಗೆ ಇಂಬುಗೊಟ್ಟಂತಾಗಿದೆ.

ಭಾರತೀಯ ಸಂಪ್ರದಾಯ ಮತ್ತು ಆಚರಣೆಗಳಲ್ಲಿ ಉತ್ತಮ ಸಂಸ್ಕೃತಿ ಅಡಕವಾಗಿದೆ. ಆದುದರಿಂದ ಅವುಗಳನ್ನು ತ್ಯಜಿಸುವಾಗ ವಿಚಾರಮಾಡಿ ತ್ಯಜಿಸಬೇಕು. ಯೋಗ್ಯವಾದುವುಗಳನ್ನು ಉಳಿಸಿಕೊಂಡು, ಅವುಗಳಿಂದ ದೊರೆಯುವ ಪ್ರಯೋಜನಗಳನ್ನು ಅನುಭವಿಸಬೇಕು. ನಮ್ಮ ಹಿರಿಯರು ಈಗಿನವರು ತಿಳಿದಂತೆ ಮೂರ್ಖರಲ್ಲ. ಆ ಆಚರಣೆಗಳ ಹಿಂದಿರುವ ಉದ್ದೇಶಗಳು ಈಗಿನ ಸಮಾಜಕ್ಕೆ ಗೊತ್ತಿಲ್ಲವಾಗಿ ಹಾಗೆ ಟೀಕಿಸಲು ಅವಕಾಶವಾಗಿದೆ. ಕೆಲವು ಆಚರಣೆಗಳು ಅಂದು ಅವಶ್ಯಕವಿದ್ದು ಇಂದಿಗೆ ಉಪಯೋಗವಿಲ್ಲದಿರಬಹುದು ಅಂತಹುಗಳನ್ನು ಬಿಟ್ಟರೆ ತಪ್ಪಿಲ್ಲ. ಆದರೆ, ಒಳ್ಳೆಯ ರೂಢಿಗಳನ್ನು ಬಿಡುವುದರಿಂದ ನಮಗೇ ನಷ್ಟವಾಗುವುದರಿಂದ ಯೋಚಿಸಿ ನಿರ್ಧರಿಸುವುದೊಳ್ಳೆಯದು.

■

## ೨೭. ಪತಿತ ಪಾವನೆಯರು

ಪ್ರತಿಯೊಬ್ಬರಿಗೂ ಮರ್ಯಾದೆಯೇ ಭೂಷಣ. ಅದರಲ್ಲಿಯೂ ಮಾನಿನಿಗೆ ಸದ್ಗುಣಗಳೇ ಆಭರಣವೆಂದು ಸಮಾಜದಲ್ಲಿ ಬೆಳೆದುಬಂದಿರುವ ಅಭಿಪ್ರಾಯ. ಆಕೆಯ ವ್ಯಕ್ತಿತ್ವಕ್ಕೆ ಒಡವೆ ವಸ್ತುಗಳಿಗಿಂತ ಹೆಚ್ಚಾಗಿ, ಸದ್ಗುಣ, ಮಾನ, ಮರ್ಯಾದೆಗಳೆಂಬ ಒಡವೆಗಳು, ಶೋಭೆಯನ್ನು ತರುತ್ತವೆ. ಪ್ರತೀ ಮಹಿಳೆಗೂ ಗೌರವಾನ್ವಿತವಾಗಿ ಬದುಕುವ ಆಸೆ ಇರುವುದು ಸ್ವಾಭಾವಿಕ. ಆದರೂ ಅನೇಕ ಮಹಿಳೆಯರು ಪತಿತರಾಗಿ, ಅಗೌರವ ರೀತಿಯಲ್ಲಿ ಬದುಕುತ್ತಿರುವುದೂ ಸುಳ್ಳಲ್ಲ.

ಮಹಿಳೆಯರು ಪತಿತರಾಗುವುದಕ್ಕೆ ಕಾರಣಗಳು ಅನೇಕ. ಸರಿಯಾದ ಮಾರ್ಗದರ್ಶನವಿಲ್ಲದ, ಆರ್ಥಿಕ ಪರಿಸ್ಥಿತಿ ಚೆನ್ನಾಗಿರದ ಮನೆತನದಿಂದ ಬಂದ ಹುಡುಗಿಯರು ಮುಂದಿನ ಆಗು ಹೋಗುಗಳ ಬಗೆಗೆ ದೂರಾಲೋಚನೆ ಇಲ್ಲದೆ, ಜಾರಿರಬಹುದು. ಅದಕ್ಕಿಂತ ಹೆಚ್ಚಾಗಿ, ನಮ್ಮ ಕೆಲವು ಸಂಪ್ರದಾಯಗಳು, ಅರ್ಥವಿಲ್ಲದ ಪರಂಪರೆಗಳೂ ಮುಗ್ಧ ಮಹಿಳೆಯನ್ನು ಸಾಕಷ್ಟು ರೀತಿಯಲ್ಲಿ ಶೋಷಣೆಗೆ ಗುರಿಪಡಿಸಿವೆ. ಅಂದರೆ ನಮ್ಮ ಸಂಪ್ರದಾಯಗಳು, ಪರಂಪರಾನುಗತವಾಗಿ ಬಂದ ಆಚರಣೆಗಳೆಲ್ಲ ಅರ್ಥವಿಹೀನ ಎಂದು ಅರ್ಥವಲ್ಲ. ಕೆಲವೊಂದು ರೂಢಿಗಳು ನಿಜವಾಗಿಯೂ ಸ್ವಾರ್ಥಮೂಲವಾದವುಗಳಾಗಿವೆ. ಸಮಾಜದ ಮೇಲ್ವರ್ಗದ ಅಥವಾ ಆರ್ಥಿಕವಾಗಿ ಉನ್ನತ ಸ್ಥಾನದಲ್ಲಿದ್ದ ಲಾಲಸೀ ಪುರುಷರಿಂದ ಪ್ರಾರಂಭವಾದ ಆಚರಣೆಗಳು ಮಹಿಳೆಯರ ಮರ್ಯಾದಾಹರಣಕ್ಕೆ ದೊಡ್ಡ ಕಾರಣವೆಂದೇ ಹೇಳಬಹುದು.

ವೇಶ್ಯಾವಾಟಿಕೆಗಳಲ್ಲಿರುವ ಬಹಳಷ್ಟು ಮಹಿಳೆಯರು ದೇವರ ಹೆಸರಿನಲ್ಲಿ 'ಬಸವಿ' ಬಿಟ್ಟವರಾಗಿರುತ್ತಾರೆ. ಇವರೆಲ್ಲಾ ಕೆಳವರ್ಗದ ಜನರು. ಏಕೆಂದರೆ ಅವರಿಗೆ ಸರಿಯಾದ ಶಿಕ್ಷಣ ದೊರಕಿರುವುದಿಲ್ಲ. ಜೀವನ ನಿರ್ವಹಣೆಗೆ ಕಷ್ಟವಾಗುವಷ್ಟರ ಮಟ್ಟಿಗೆ, ಆರ್ಥಿಕ ಸ್ಥಿತಿ ಕೆಳಮಟ್ಟದ್ದಾಗಿರುತ್ತೆ. ದೇವರ ಹೆಸರಿನಲ್ಲಿ ಸ್ವಲ್ಪ ಹೆದರಿಸಿದರೆ ಸಾಕು. ಸುಲಭವಾಗಿ ಬಲೆಗೆ ಬಿದ್ದುಬಿಡುತ್ತಾರೆ. ಸಂಪ್ರದಾಯದ ಲೇಪನ ಮಾಡಿದರಂತೂ ಕೆಲಸ ಮತ್ತೂ ಸುಲಭ. ಆಗ ಹುಡುಗಿಯ ಮನೆಯವರೇ ಬಡತನದ ಕಾರಣ, ಹಣದ ಆಸೆಗಾಗಿ, ಚಿಕ್ಕವಯಸ್ಸಿನ ಹುಡುಗಿಯನ್ನು,

ಬಲವಂತದಿಂದಲೋ ಪ್ರೀತಿಯ ಮಾತುಗಳಿಂದಲೋ ಒಪ್ಪಿಸಿ, 'ಬಸವಿ'ಯಾಗಲು ಕಳಿಸುವುದುಂಟು. ಧರ್ಮದ ಹೆಸರಿನಲ್ಲಿ ಪ್ರಾರಂಭವಾದ ಈ ನಡವಳಿಕೆ, ಪೂಜಾರಿಗಳ ಮಧ್ಯಸ್ಥಿಕೆಯ ಮೂಲಕ ಈ ಹುಡುಗಿಯರು, ನಗರಗಳ ವೇಶ್ಯಾವಾಟಿಕೆಯನ್ನು ಸೇರಿ, ವ್ಯೈವಾರಿಕೊಳ್ಳುವುದನ್ನೇ ಒಂದು ದುಡಿಮೆಯ ಮಾರ್ಗ ಮಾಡಿಕೊಂಡಿರುವುದು, ಕೇವಲ ಮಹಿಳೆಯರೇ ಅಲ್ಲ, ಮಾನವ ಸಮಾಜವೇ ತಲೆತಗ್ಗಿಸುವಂತೆ ಆಗಿದೆ. ಏಕೆಂದರೆ 'ಬಸವಿ' ಕಾರ್ಯಕ್ರಮ ಮಾಡುವ ದಿನ, ಒಬ್ಬ ಶ್ರೀಮಂತನ ಹೆಸರಿನಲ್ಲಿ ಆ ಕಾರ್ಯ ನಡೆಯುತ್ತದೆ. ಆಗ ಹಣದ ವ್ಯವಹಾರ, ಹೆಣ್ಣಿನ ತಂದೆ-ತಾಯ್ಗಳ, ಪೂಜಾರಿಯ ಹಾಗೂ ಶ್ರೀಮಂತನ ನಡುವೆ ನಡೆಯುತ್ತದೆ. 'ಬಸವಿ' ಬಿಡಲು ಕೆಳವರ್ಗದ ಕುಟುಂಬದ ಸುಂದರ ಹುಡುಗಿಯನ್ನೇ ಸಾಮಾನ್ಯವಾಗಿ ಆರಿಸುತ್ತಾರೆ. ಈ ಶ್ರೀಮಂತ ತನಗೆ ಬೇಕಾದಷ್ಟು ದಿನ ಇವಳೊಡನಿದ್ದು, ತನ್ನ ಕಾಮಾಸಕ್ತಿ ತಣಿದ ಮೇಲೆ, ಅಥವಾ ಇವಳ ಯೌವ್ವನ ಸರಿದ ಮೇಲೆ, ಅಥವಾ ಮತ್ತಾವುದೋ ಕಾರಣಕ್ಕಾಗಿ ಹಿಂದೆ ಸರಿಯುತ್ತಾನೆ. ಆಗ ಈಕೆ ತನ್ನ ಜೀವನೋಪಾಯಕ್ಕಾಗಿ ಯಾರೆಂದರೆ ಅವರೊಡನೆ ಸಂಬಂಧ ಬೆಳೆಸಿಕೊಂಡು ಬದುಕುವ ಉದಾಹರಣೆಗಳು ಲೆಕ್ಕವಿಲ್ಲದಷ್ಟು. ಇಂತಹ ಬಹಳಷ್ಟು ಮಹಿಳೆಯರಿಗೆ, ತಾವು ಬದುಕುತ್ತಿರುವ ರೀತಿ ಹೇಯವೆಂದು ಅನ್ನಿಸುವುದಿಲ್ಲ. ತಾವಿರಬೇಕಾದುದೇ ಹೀಗೆ ಎಂದು ತಿಳಿದುಕೊಂಡವರೇ ಹೆಚ್ಚು. ಹೀಗೆ 'ಬಸವಿ' ಬಿಟ್ಟವರು ಪತಿತೆಯರು ಎಂದೇನೂ ಹೇಳಲು ಬರುವುದಿಲ್ಲ. ಅಸಹಾಯಕರಾದ ಹೆಣ್ಣುಮಕ್ಕಳು, ದುಷ್ಟರ ಕೈಗೆ ಸಿಕ್ಕವರು, ಸೇಡಿಗೆ ಬಲಿಯಾದವರು, ಆಕಸ್ಮತ್ತಾದ ಸಂದರ್ಭಗಳಲ್ಲಿ ಪತಿತರಾದವರು, ಸ್ವಾರ್ಥಿಗಳ ದುರ್ಬೋಧನೆಗೆ ಒಳಗಾದವರೂ ಸಹ ಪತಿತರಾದ ಉದಾಹರಣೆಗಳಿಗೆ ಲೆಕ್ಕವಿಲ್ಲ.

ಕಾರಣ ಯಾವುದೇ ಇರಲಿ, ಇದು ಕಲಂಕ ಪೂರಿತ ಮಾರ್ಗವೆಂದು ಹೆಣ್ಣಿನ ಶೋಷಣೆಯೆಂದು, ಅನೇಕ ಸಮಾಜಸೇವಕರು, ಸಂಘ-ಸಂಸ್ಥೆಗಳು, ಸರ್ಕಾರ, ಮಹಿಳೆಯರ ಈ ಒಂದು ವ್ಯವಸ್ಥೆಗೆ ತೆರೆಯನ್ನೆಳೆಯಬೇಕೆಂದು ಪ್ರಯತ್ನಿಸಿದರೂ, ಪಟ್ಟಬದ್ಧ ಹಿತಾಸಕ್ತಿಗಳ ಕಾರಣ, ಅದನ್ನು ಸಂಪೂರ್ಣ ನಿರ್ಮೂಲ ಮಾಡುವುದು ಅಸಾಧ್ಯವಾಗಿದೆ. ಆದರೂ ಸಾಕಷ್ಟು ಪ್ರಯತ್ನಗಳು ನಡೆದಿವೆ, ನಡೆಯುತ್ತಿದೆ. ಈ ಪತಿತ ಮಹಿಳೆಯರು, ಮಿಕ್ಕ ಗೌರವಸ್ಥ ಮಹಿಳೆಯರ ಹಾಗೆ ಬದುಕುವಂತೆ ಮಾಡಲು ಅನೇಕ ಮಹಿಳಾ ಸದನಗಳು, ರಕ್ಷಣಾ ಗೃಹಗಳು, ರೆಸ್ಕ್ಯೂ ಹೋಮ್‌ಗಳು ಸ್ಟೇಟ್ ಹೋಮ್ ಫಾರ್ ಉಮೆನ್‌ಗಳೂ ಕಾರ್ಯೋನ್ಮುಖವಾಗಿವೆ. ಇವುಗಳ ಮೂಲಕ ಪತಿತ ಹೆಣ್ಣುಗಳಿಗೆ ರಕ್ಷಣೆ ಕೊಡುವುದಲ್ಲದೆ, ಅವರು ತಮ್ಮ ಕಾಲಮೇಲೆ ತಾವು ನಿಂತುಕೊಳ್ಳುವಂತೆ, ಪರಾಧೀನತೆಯಿಂದ ಹೊರಬರಲು ಅನೇಕ ಪ್ರಯತ್ನಗಳು ನಡೆದಿವೆ. ಆರ್ಥಿಕವಾಗಿ ಪರಾಧೀನರಾಗದಂತಿರಲು ಅಂಗನವಾಡಿಯ

ಬಾಲವಾಡಿಯ ಶಿಕ್ಷಕಿಯರಾಗಲು ಬೇಕಾದ ತರಬೇತಿ, ಆಯಿಗಳು – ದಾಯಿಗಳಾಗುವುದಕ್ಕೆ ತರಬೇತಿ, ಕೈಗೆಲಸದಿಂದ ಬುಟ್ಟಿ, ಕುರ್ಚಿ, ಬ್ಯಾಗು, ಸ್ವೆಟರ್ ಮುಂತಾದವುಗಳನ್ನು ತಯಾರಿಸಲು ಬೇಕಾದ ತರಬೇತಿ ಕೊಟ್ಟು ಜೀವನೋಪಾಯದ ದಾರಿ ತೋರಿಸುತ್ತಿದ್ದಾರೆ. ಯಾರಾದರೂ ಸಜ್ಜನರಾದವರು ಮುಂದೆ ಬಂದರೆ, ಅವರಿಗೆ ಈ ಮಹಿಳೆಯರನ್ನು ವಿವಾಹ ಮಾಡಿಕೊಟ್ಟು, ಸ್ವಲ್ಪ ಆರ್ಥಿಕ ಸಹಾಯ ಮಾಡುವ ವ್ಯವಸ್ಥೆಯೂ ಇದೆ. ಮದುವೆ ಮಾಡಿಕೊಡುವ ಮೊದಲು, ಆ ಮನುಷ್ಯ ಈಕೆಯನ್ನು ಶೋಷಣೆ ಮಾಡುವುದಿಲ್ಲ, ಚೆನ್ನಾಗಿ ಬಾಳುವೆಯನ್ನು ಆಕೆಯೊಡನೆ ಮಾಡುತ್ತಾನೆ ಎನ್ನುವುದನ್ನು ಖಾತ್ರಿಮಾಡಿಕೊಂಡೇ ಮದುವೆಮಾಡಿ ಪತಿತರಾದವರನ್ನು ಪಾವನ ಜೀವನ ನಡೆಸಲು ದಾರಿ ಮಾಡಿಕೊಡುತ್ತಾರೆ.

ಇಷ್ಟೆಲ್ಲಾ ವ್ಯವಸ್ಥೆ ಇದ್ದರೂ, ದಿನದಿನಕ್ಕೂ ಪತಿತೆಯರ ಸಂಖ್ಯೆ ಬೆಳೆಯುತ್ತಿದೆ. ಪುರುಷನು, ಮಹಿಳೆಯನ್ನು ಮಹಾದೇವಿ ಎಂಬ ದೃಷ್ಟಿಯಿಂದ ನೋಡುವವರೆಗೂ, ತನ್ನ ಕಾಮುಕ ಸ್ವಭಾವವನ್ನು ಅಂಕಿತದಲ್ಲಿಟ್ಟುಕೊಳ್ಳುವವರೆಗೂ ಪತಿತೆಯರ ಸಂಖ್ಯೆ ಕಡಿಮೆಯಾಗುವುದು ಕಷ್ಟ. ಸುಧಾರಿತ ಸಮಾಜಕ್ಕೆ ಸವಾಲಾಗಿರುವ, ಮಹಿಳೆಯರ ಗೌರವಕ್ಕೆ ಕಂದು ತರುವ ಈ ಸ್ಥಿತಿ ಆದಷ್ಟು ಬೇಗ ಹಿಡಿತಕ್ಕೆ ಬರಬೇಕು ಮತ್ತು ಮಹಿಳೆಯರಿಗೆ ಅಸಹಾಯಕ ಪರಿಸ್ಥಿತಿ ಇಲ್ಲವಾಗಬೇಕು. ಆಗಮಾತ್ರ ಪುರುಷರಿಗೂ ಗೌರವ, ಮಹಿಳೆಯರಿಗೂ ನೆಮ್ಮದಿ.

■

## ೨೮. ಪರಿಸರ ಮಾಲಿನ್ಯ ತಡಗಟ್ಟುವುದೆಂತು?

ನಾಗರಿಕತೆ ಬೆಳೆದಂತೆ, ಜನಸಂಖ್ಯೆ ಹೆಚ್ಚಿದಂತೆ ಪರಿಸರ ಮಾಲಿನ್ಯವೂ ಹೆಚ್ಚುತ್ತಿದೆ. ನಮ್ಮ ನಗರಗಳನ್ನು, ಅಲ್ಲಿಯ ಹೊಲಸನ್ನೂ ನೋಡಿದರೆ, ಇಷ್ಟು ಹೊಲಸಿನ ಮಧ್ಯೆ ನಾವು ಬದುಕುಳಿದಿರುವುದಕ್ಕೆ ಅಚ್ಚರಿ ಪಡುವಂತಾಗುತ್ತದೆ. ಅಹಮದಾಬಾದ್, ಮದ್ರಾಸ್, ಮುಂಬಯಿ, ಕಲ್ಕತ್ತಾ ಮುಂತಾದ ನಗರಗಳ ಗಟಾರಗಳನ್ನೂ ಬೀದಿಯಲ್ಲಿ ರಾಶಿ ರಾಶಿಯಾಗಿ ಕೊಳೆತು ನಾರುವ ವಸ್ತುಗಳನ್ನೂ ಗಮನಿಸಿದರೆ, ಅಹಮದಾಬಾದಿನಲ್ಲಿ ಭಾರತವನ್ನು ಗಾಬರಿಗೆ ದೂಡಿದ ಪ್ಲೇಗ್ ಹರಡಿದುದು ಆಶ್ಚರ್ಯವೆನಿಸುವುದಿಲ್ಲ. ದೆಹಲಿಯಲ್ಲಿ ಡೆಂಗ್ಯೂ ಜ್ವರ ಕಾಣಿಸಿಕೊಂಡುದು ಸಹಜವೆನ್ನಿಸುತ್ತದೆ. ಈಚೆಗೆ ಮಹಾರಾಷ್ಟ್ರದಲ್ಲಿ ಎಲ್ಲರನ್ನೂ ಚಿಂತೆಗೊಳಪಡಿಸಿರುವ ಸುದ್ದಿ ಎಂದರೆ, ಬಫೆಲೋ ಪಾಕ್ಸ್ ವೈರಸ್ ಮನುಷ್ಯರಿಂದ ಮನುಷ್ಯರಿಗೆ ಹರಡುತ್ತಿರುವುದು. ಪ್ಲೈಲಿಬೇನೆ ಮಾರು ವೇಷದಲ್ಲಿ ಮರುಕಳಿಸುತ್ತಿದೆಯೆಂಬ ಭಯ ಎಲ್ಲರನ್ನೂ ಆವರಿಸಿದೆ. ಕೊಳಚೆ ಮಡುಗಟ್ಟಿ ವರ್ಷಾನುಗಟ್ಟಲೆ ಕೊಳೆತು ಗಬ್ಬುನಾತವನ್ನು ಎಲ್ಲೆಡೆ ಹಬ್ಬಿಸುತ್ತಿದೆ. ಆ ಗಟಾರಗಳ ಸಮೀಪ ಹೋದರೂ, ದಾಟಿದರೂ ಎಂತಹ ರೋಗವಾದರೂ ತಗುಲಿಕೊಳ್ಳಬಹುದೆನಿಸುತ್ತದೆ. ಆ ಕೊಚ್ಚೆಯಲ್ಲಿ ಹೊಸ, ಹೊಸ ರೋಗಗಳಿಗೆ ಜನ್ಮ ಕೊಡುವ ಹೊಸ ರೀತಿಯ ಕ್ರಿಮಿ, ಕೀಟಗಳು ಉತ್ಪನ್ನವಾಗುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲವೆನಿಸುತ್ತದೆ. ಇದರೊಂದಿಗೇ ಮಾನವ, ಸಹ ಜೀವನ ಬಾಳುತ್ತಾ, ಅದರಿಂದಾಗುವ ಉಪಟಳಗಳಿಗೆ ಗುರಿಯಾಗುತ್ತ ಜೀವನವೆಂದರೆ ಇರುವುದೇ ಹೀಗೆ ಎಂಬಂತೆ ಬದುಕತೊಡಗಿದ್ದಾನೆ.

ಆದರೆ ವೈದ್ಯ ವಿಜ್ಞಾನಿಗಳು, ಸಾಮಾಜಿಕ ಪ್ರಜ್ಞಾವಂತರು, ಪರಿಸರವಾದಿಗಳು ಈ ಪರಿಸ್ಥಿತಿಯನ್ನು ತಡೆಗಟ್ಟಲು ಅನೇಕ ಮಾರ್ಗಗಳನ್ನು ಕಂಡುಹಿಡಿಯುತ್ತಿದ್ದಾರೆ. ಜನರಿಗೆ 'ಪರಿಸರ ಪ್ರಜ್ಞೆ' ಮೂಡಿಸುವ ಪ್ರಯತ್ನ ನಡೆಯುತ್ತಿದೆ. ದಿನನಿತ್ಯ ಈ ಬಗೆಗೆ ಒಂದಲ್ಲ ಒಂದು ಚಟುವಟಿಕೆ ನಡೆಯುತ್ತಿರುವ ಬಗ್ಗೆ ಪತ್ರಿಕೆಗಳಲ್ಲಿ, ರೇಡಿಯೋದಲ್ಲಿ, ಟಿ.ವಿ.ಗಳಲ್ಲಿ ಮಾಹಿತಿ ಇದ್ದೇ ಇರುತ್ತದೆ. ಏಕೆಂದರೆ ದಿನದಿನಕ್ಕೂ ದೊಡ್ಡ ಸಮಸ್ಯೆಯನ್ನು ಒಡ್ಡುತ್ತಿರುವ ಪರಿಸರಮಾಲಿನ್ಯವನ್ನು ತಡೆಗಟ್ಟುವುದು ಇಂದಿನ ಮಹತ್ತರ ಅವಶ್ಯಕತೆಯಾಗಿದೆ.

ಪರಿಸರ ಮಾಲಿನ್ಯದಲ್ಲಿ ಜಲಮಾಲಿನ್ಯ, ವಾಯುಮಾಲಿನ್ಯ, ಶಬ್ದಮಾಲಿನ್ಯ ಮತ್ತು ಪರಿಸರ ಮಾಲಿನ್ಯಗಳು ಅಡಕವಾಗಿವೆ. ಈ ಮಾಲಿನ್ಯಗಳ ಮಧ್ಯೆ ಮಾನವ ಸಿಕ್ಕು ಮಲಿನಗೊಂಡಿದ್ದಾನೆ. ಕುಡಿಯುವ ನೀರು, ಸೇವಿಸುವ ಗಾಳಿ, ಸೇವಿಸುವ ಆಹಾರ, ವಾಸಿಸುವ ಪರಿಸರವೆಲ್ಲಾ ಮಲಿನವಾಗಿದ್ದರೆ, ಮನುಷ್ಯ ಹೇಗೆ ಬದುಕಬೇಕು? ಇದರ ಜೊತೆಗೆ ಶಬ್ದ ಮಾಲಿನ್ಯವೂ ಜೊತೆಗೂಡಿದೆ. ಈ ನಾಗರೀಕ ಬದುಕಿನಲ್ಲಿ ಶಬ್ದ ಮಾಡದ ವಸ್ತುವಿಲ್ಲ. ಗೃಹಿಣಿಗೆ ಸಹಾಯಕವಾತರುವ ಮಿಡ್ಸಿ ತಲೆಚಿಟ್ಟು ಹಿಡಿಸುತ್ತದೆ. ಸೆಖೆಯಾಗುತ್ತದೆ ಎಂದು ಫ್ಯಾನನ್ನಾಗಲೀ, ಕೂಲರನ್ನಾಗಲೀ 'ಆನ್ ಮಾಡಿದರೆ ಅವುಗಳದ್ದೂ ಗದ್ದಲವೇ? ಬಿದಿಗಳಲ್ಲಂತೂ ಕೇಳುವುದೇ ಬೇಡ. ವಾಹನಗಳು ಸಂಚರಿಸುವ ಶಬ್ದ. ಅವುಗಳ ಹಾರನ್‌ಗಳ ಶಬ್ದ. ಎಲ್ಲಕ್ಕಿಂತ ಹೆಚ್ಚಾಗಿ ಬೀದಿ-ಬೀದಿಗಳಲ್ಲಿ ಮೈಕಾಸುರನ ಹಾವಳಿ, ಸಣ್ಣ ಹಬ್ಬಗಳು ಬಂದರೂ ಸಾಕು. ಕಿವಿಗಡಚಿಕ್ಕುವಂತೆ ಪಟಾಕಿಗಳನ್ನೂ, ಢಮಾಕಿಗಳನ್ನೂ ಹಾರಿಸುವ ಶಬ್ದ. ಜೊತೆಗೆ ವಾಯುಮಾಲಿನ್ಯವಂತೂ ನಾನಾ ವಿಧ. ಫ್ಯಾಕ್ಟರಿಗಳು ಉಗುಳುವ ಹೊಲಸು ಹೊಗೆ, ವಾಹನಗಳು ಹೊರದಬ್ಬುವ ಕಾರ್ಬನ್ ಡಯಾಕ್ಸೈಡ್ ವಾಯುಮಾಲಿನ್ಯಕ್ಕೆ ಕಾರಣವಾಗಿವೆ. ಹಬ್ಬಗಳಲ್ಲಿ ಹಾಗೂ ಎಲೆಕ್ಷನ್‌ಗಳಲ್ಲಿ ಜಯಗಳಿಸಿದಾಗ, ಭಾರತ ಕ್ರಿಕೆಟಿನಲ್ಲಿ ಗೆದ್ದರೂ ಪಟಾಕಿಯ ಮಾಲೆ-ಮಾಲೆಗಳನ್ನು ಗಂಟೆಗಟ್ಟಲೆ ಸುಡುತ್ತಾರೆ. ನಾನಾತರದ ಮತಾಪು, ಹೂವಿನ ಕುಂಡ ಮುಂತಾದ ಬಗೆ ಬಗೆಯ ಮತಾಪುಗಳನ್ನು ಹಚ್ಚಿ ಆನಂದಿಸುತ್ತಾರೆ. ಇವುಗಳ ಹೊಗೆಯಿಂದ ಪರಿಸರವೆಲ್ಲಾ ಕಲುಷಿತಗೊಳ್ಳುತ್ತದೆ. ಇದನ್ನೆಲ್ಲಾ ಕಣ್ಣಾರೆ ಕಂಡರೂ, ಅವುಗಳ ಪರಿಣಾಮವನ್ನು ಸ್ವತಃ ಅನುಭವಿಸಿದರೂ ಜನರು ಕಣ್ತೆರೆಯುವಂತಿಲ್ಲ. ಪರಿಸರ ಮಾಲಿನ್ಯದ ಬಗೆಗೆ ಕೇಳುವಂತೆಯೇ ಇಲ್ಲ. ಮನೆಯ ಕಸ ಚೆಲ್ಲಲು ವ್ಯವಸ್ಥೆ ಇಲ್ಲದೆ ಪ್ರತಿ ಮನೆಯ ಕಸ, ಕೊಳೆತ ಕಾಯಿಪಲ್ಯೆ, ಹಳಸಿದ ಆಹಾರ ಮುಂತಾದ ಬೇಡವಾದ ಎಲ್ಲ ವಸ್ತುಗಳೂ ಬೀದಿಯಲ್ಲಿ, ಬಡಜನರ ಮಕ್ಕಳು ಬೀದಿಯಲ್ಲೇ ಜಲ-ಮಲಕ್ಕೆ ಕೂಡುತ್ತಾರೆ. ಬಚ್ಚಲ ನೀರು ಸರಿಯಾದ ಗಟಾರಿನ ವ್ಯವಸ್ಥೆ ಇಲ್ಲದೆ ಬೀದಿಯಲ್ಲೇ ಹರಿದು ಬೀದಿಗಳಲ್ಲಿ, ಗಟಾರಗಳಲ್ಲಿ, ಮನೆಗಳ ಕಾಂಪೌಂಡಿನಲ್ಲಿ ಮಡುಗಟ್ಟಿ ನಿಂತು, ದುರ್ವಾಸನೆ ಬೀರುತ್ತದೆ. ಬೀದಿಯ ಇತರ ಕೊಳಕಿನ ಜೊತೆ ದನದ ಸಗಣಿ, ಕುದುರೆ-ಕತ್ತೆಗಳ ಲದ್ದಿ ಎಲ್ಲಾ ಬೀದಿಯಲ್ಲೆ. ಈಚೆಗಂತೂ ಬೀದಿಗಳನ್ನು ಗುಡಿಸಿ ಸ್ವಚ್ಛಗೊಳಿಸುವ ಪರಿಪಾಠವೂ ಬಹಳಷ್ಟು ಕಡೆಗಳಲ್ಲಿ ಇಲ್ಲವಾಗಿವೆ. ಹಾಗಾಗಿ ವಸ್ತುಗಳು ಕೊಳೆತು ನಾರುತ್ತವೆ. ಅವುಗಳಲ್ಲಿ ಭಯಂಕರ ರೋಗಗಳನ್ನು ಹರಡುವ ಕ್ರಿಮಿಕೀಟಗಳು ಹುಟ್ಟಿ, ಊರನ್ನು ಹೊಲಸಿನ ಕೊಂಪೆಯ ಜೊತೆಗೆ, ರೋಗ-ರುಜಿನಗಳ ಗೂಡನ್ನಾಗಿ ಮಾಡುತ್ತವೆ. ಇಂತಹ ರಾಶಿ-ರಾಶಿ ಕೊಳಕನ್ನು ಎಲ್ಲಾ ಊರುಗಳ ರಸ್ತೆಗಳಲ್ಲಿ, ಗಟಾರಗಳಲ್ಲಿ, ರಸ್ತೆಗಳ ಬದಿಯಲ್ಲಿ

ಅಷ್ಟೇ ಏಕೆ ಆಸ್ಪತ್ರೆಗಳ ಮುಂದೆಯೂ ಕಾಣಬಹುದು. ಮಳೆಬಂದಾಗಲಂತೂ ರಸ್ತೆಯಲ್ಲಿ ಓಡಾಡುವುದೊಂದು ನರಕಯಾತನೆ. ಗಟಾರುಗಳಲ್ಲಿಯ ಕೊಳಕಿನಲ್ಲಿ ನೀರು ಸೇರಿ ಕೊಳೆತು, ಗಟ್ಟಿ ಕೆಸರಿನಂತಾಗಿ, ಅದು ಮಡುಗಟ್ಟಿ ನಿಂತು, ಅಲ್ಲಿಯೇ ಜನ್ಮ ತಾಳಿದ ಕ್ರಿಮಿ ಕೀಟಗಳು ವಿಲಿಗುಡುತ್ತಿದ್ದರೂ, ಅವುಗಳನ್ನು ಸ್ವಚ್ಛಗೊಳಿಸಬೇಕೆಂದು ಇಚ್ಛೆ ಯಾವ ಇಲಾಖೆಯವರಿಗೂ ಬರುವುದಿಲ್ಲ. ಜನರೂ ಆ ಬಗ್ಗೆ ಯೋಚಿಸುವುದಿಲ್ಲವೇನೋ ಎನ್ನಿಸುತ್ತದೆ. ಕೆಲವು ಊರುಗಳಲ್ಲಿಯಂತೂ ಹೊಲಸು ಗಟಾರುಗಳ ಪಕ್ಕದಲ್ಲೇ ಕಾಯಿ-ಪಲ್ಯೆ, ಹಣ್ಣು-ಹಂಪಲುಗಳನ್ನಿಟ್ಟುಕೊಂಡು ಮಾರುತ್ತಿರುತ್ತಾರೆ. ತಿಂಡಿ-ತಿನಿಸುಗಳನ್ನೂ ಅಲ್ಲೇ ತಯಾರಿಸಿ, ಓಪನ್ ಆಗಿ ಇರಿಸಿ ಮಾರುತ್ತಾರೆ. ಅದನ್ನು ಜನರು ಕೊಂಡು, ತಿಂದೂ ತಿನ್ನುತ್ತಾರೆ. ಇದನ್ನೆಲ್ಲಾ ನೋಡಿದರೆ ನಮ್ಮ ದೇಶದಲ್ಲಿ ಪ್ಲೇಗು, ಕಾಲರಾ, ಡೆಂಗ್ಯೂಜ್ವರ, ವೈರಲ್ ಫೀವರ್ ಮುಂತಾದ ರೋಗಗಳು ಏಕೆ ಹಬ್ಬುತ್ತವೆ? ಎನ್ನಿಸುವುದಕ್ಕಿಂತ ಇಷ್ಟೆಲ್ಲಾ ಹೊಲಸಿನಲ್ಲೂ ನಾವಿಷ್ಟು ಆರೋಗ್ಯವಾಗಿ ಹೇಗಿದ್ದೇವೆ? ಎಂದು ಆಶ್ಚರ್ಯಪಡುವಂತಾಗುತ್ತದೆ. ಈ ಹೊಲಸಿನ ಕಾರಣ ಇನ್ನೂ ಎಂತೆಂತಹ ಕಾಯಿಲೆಗಳು ಹುಟ್ಟುತ್ತವೆಯೋ? ಎಂದು ಭಯಪಡುವಂತಾಗಿದೆ.

ಜಲಮಾಲಿನ್ಯ, ವಾಯುಮಾಲಿನ್ಯ ತಡೆಗಟ್ಟಲು ಕೆಲವು ನಿಯಮಗಳನ್ನು ಫ್ಯಾಕ್ಟರಿಗಳವರಿಗೆ ಜಾರಿಗೆ ತಂದಿದ್ದಾರೆ. ವಾಹನಗಳು ಹೆಚ್ಚು ಹೊಗೆ ಉಗುಳದಂತೆ ಎಚ್ಚರಿಕೆ ವಹಿಸಲು, ವಾಹನಗಳನ್ನು ಚೆಕ್ ಮಾಡಿಕೊಂಡ ರಸೀದಿಗಳನ್ನು ಕೇಳಿದಾಗ ತೋರಿಸಬೇಕೆಂಬ ಕಾಯಿದೆ ಮಾಡಿದ್ದಾರೆ. ನಿಯಮಗಳನ್ನು ಪಾಲಿಸದಿದ್ದವರಿಗೆ ದಂಡ ವಿಧಿಸುತ್ತಾರೆ. ಇದು ಸರ್ಕಾರ ಜನರಿಗೆ ಮಾಡಿರುವ ಅವಶ್ಯಕ ನಿಯಮಗಳು. ಆದರೆ ಬೀದಿಯನ್ನು ಸ್ವಚ್ಛವಾಗಿ ಇಡಲೇಬೇಕೆಂಬ, ಸರಾಗವಾಗಿ ನೀರು ಹರಿದುಹೋಗುವಂತಹ ಗಟಾರಗಳನ್ನೇ ಮಾಡಬೇಕೆಂಬ, ಊರಿನಲ್ಲೆಲ್ಲೂ ನೀರು ಮಡುಗಟ್ಟಿ ನಿಲ್ಲಬಾರದೆಂಬ, ಸಾರ್ವಜನಿಕ ಸ್ಥಳಗಳಲ್ಲಿ ರಾಶಿ ರಾಶಿ ಕೊಳಕು ಇರದಂತೆ ನೋಡಿಕೊಳ್ಳಬೇಕೆಂಬ, ಕೊಳಚೆಯ ತಿಪ್ಪೆಗಳು ವಾಸಸ್ಥಾನಗಳ ಸಮೀಪದಲ್ಲೆಲೂ ಇರಬಾರದೆಂಬ ಕಾಯಿದೆಯನ್ನು ಸಂಬಂಧಿಸಿದ ಇಲಾಖೆಗಳಿಗೆ ಸರ್ಕಾರವೇಕೆ ಕಡ್ಡಾಯಗೊಳಿಸಿಲ್ಲ? ಎಂಬುದು ಮುಖ್ಯಪ್ರಶ್ನೆ. ಯಾವುದೇ ಪ್ರಗತಿಪರ ಕೆಲಸಗಳಿಗಿಂತ ಊರಿನ ಸ್ವಚ್ಛತೆಯನ್ನು ಕಾಪಾಡುವುದು, ಕುಡಿಯಲು ಶುದ್ಧ ನೀರನ್ನು ಒದಗಿಸುವುದು ಕಾರ್ಪೋರೇಶನ್, ಮುನಿಸಿಪಾಲಿಟಿಗಳ ಹಾಗೂ ಪಂಚಾಯತಿಗಳ ಕೆಲಸವಾಗಿರುವಾಗ, ಅವು ಮಾಡದಿದ್ದ ಸಂದರ್ಭದಲ್ಲಿ, ಮಾಡಿಯೇ ತೀರಬೇಕೆಂಬ ಒತ್ತಡ ತರುವುದು ಅತ್ಯಗತ್ಯ. ಮೂಲಭೂತವಾದ ಈ ಸಮಸ್ಯೆ ಪರಿಹರಿಸುವುದು ಅದಕ್ಕೆ ಸಂಬಂಧಿಸಿದವರ ಆದ್ಯ ಕರ್ತವ್ಯ. ಇಲ್ಲದಿದ್ದಲ್ಲಿ

ಸಂಬಂಧಿಸಿದ ಅಧಿಕಾರಿಗಳಿಗೆ ಅಥವಾ ಸಂಸ್ಥೆಗೆ ಹಾಗೆ ಮಾಡದಿರುವಂತಹ ಕಾಯಿದೆ ರಚನೆಯಾಗಬೇಕು. ಈ ಬಗ್ಗೆ ಯಾವುದೇ ರೀತಿಯ ಸಬೂಬುಗಳಿಗೆ ಅವಕಾಶವಿರಬಾರದು. ಹಣ ತುಂಬುವುದು ಸ್ವಲ್ಪ ತಡವಾದರೂ ದಂಡ ಹಾಕುತ್ತಾರೆ. ಮನೆ ಕಂದಾಯ ಕಟ್ಟುವುದು ತಡವಾದರೆ ಬಡ್ಡಿ ಹಾಕಿ ವಸೂಲ್ಮಾಡುತ್ತಾರೆ. ಹೀಗೆ ಸಾರ್ವಜನಿಕರು ಸ್ವಲ್ಪ ಹೆಚ್ಚು ಕಡಿಮೆಯಾದರೂ ಶಿಕ್ಷೆಯನ್ನು ಅನುಭವಿಸಬೇಕು. ಆಗಿಂದಾಗಲೇ ಸರಿಪಡಿಸಲೂಬೇಕು. ಹಾಗಿರುವಾಗ ಸಾರ್ವಜನಿಕರ ಆರೋಗ್ಯಕ್ಕೇ ಸವಾಲಾಗಿರುವ ಪರಿಸರಮಾಲಿನ್ಯವನ್ನು ತಡೆಗಟ್ಟದವರ ಬಗೆಗೆ, ಸಾರ್ವಜನಿಕರು ಯಾವ ರೀತಿ ದಂಡ ಹಾಕಿ ಶಿಕ್ಷಿಸಬೇಕು? ಎಂಬುದನ್ನು ಕಾನೂನು ರಚನಕಾರರು ಯೋಚಿಸಬೇಕು. ಪರಿಸರ ಮಾಲಿನ್ಯದ ರಕ್ಷಣೆಗೆ ಸಂಬಂಧಿಸಿದವರು ಯಾರೇ ಇದ್ದರೂ, ಅವರು ತಮ್ಮ ಕರ್ತವ್ಯ ಪಾಲನೆ ಮಾಡಿಯೇ ತೀರಬೇಕಾಗುವಂತಹ ಕಾಯಿದೆ ಜಾರಿಗೆ ತರುವುದು ಅಗತ್ಯ. ಇಲ್ಲದಿದ್ದಲ್ಲಿ ಜನರೇ ಎಚ್ಚೆತ್ತುಕೊಂಡು ಸಂಬಂಧಿಸಿದವರು ಕಾರ್ಯ ನಿರ್ವಹಿಸಿಯೇ ತೀರುವಂತೆ ಮಾಡಬೇಕು.

ಜನರು ವೆಲ್‌ಫೇರ್ ಅಸೋಸಿಯೇಶನ್, ಯುವಕ ಸಂಘ, ಜಾಗ್ರತ ಸಮಿತಿ ಮುಂತಾದ ಸಾರ್ವಜನಿಕ ಸಂಘ–ಸಂಸ್ಥೆಗಳ ಮೂಲಕ ಸಂಬಂಧಿಸಿದವರು ಎಚ್ಚರಗೊಳ್ಳುವಂತೆ ಮಾಡಬೇಕು. ಸ್ವಚ್ಛತಾ ಕೆಲಸವನ್ನೂ ಮಾಡಿಯೇ ತೀರುವಂತಹ ಒತ್ತಡ ತರಬೇಕು. ಊರಿನವರೆಲ್ಲಾ ಒಂದಾಗಿ, ತಮ್ಮ ತಮ್ಮ ಬಡಾವಣೆಗಳ ಪ್ರತಿನಿಧಿಗಳೆಲ್ಲಾ ಒಂದೆಡೆ ಸೇರಿ, ಚರ್ಚಿಸಿ, ಸಂಬಂಧಿಸಿದ ಆಫೀಸರರ ಮುಂದೆ ಪಿಕೆಟಿಂಗ್ ನಡೆಸಬೇಕು. ಪರಿಸ್ಥಿತಿಯನ್ನು ಪತ್ರಿಕೆಗಳಲ್ಲಿ ಸಾದ್ಯಂತ ವಿವರಿಸಿ, ಅದಕ್ಕೆ ಕಾರಣರಾದವರನ್ನು ತರಾಟೆಗೆ ತೆಗೆದುಕೊಳ್ಳಬೇಕು. ಕೆಲಸ ಮಾಡದಿರುವುದಕ್ಕೆ ಕಾರಣಗಳನ್ನು ಮುಂದೊಡ್ಡಿದರೆ ತಿರಸ್ಕರಿಸಬೇಕು. ಅವುಗಳನ್ನು ನಿವಾರಣೆ ಮಾಡಿಕೊಂಡು ಕೆಲಸ ನಿರ್ವಹಿಸುವುದು ಅವರದ್ದೇ ಹೊಣೆಗಾರಿಕೆಯಾಗಿದೆ. ಇಷ್ಟಾದರೂ ಕೆಲಸವಾಗದಿದ್ದರೆ ಸಾಮೂಹಿಕವಾಗಿ ಮನೆಗಂದಾಯ ಕೊಡುವುದಿಲ್ಲವೆಂದು ತೀರ್ಮಾನಿಸಬೇಕು. ಕಂದಾಯದ ಹಣವನ್ನೆಲ್ಲಾ ಮುಖಂಡರು ಕೂಡಿಸಿ, ಬಡಾವಣೆಗೆ ಅನುಗುಣವಾಗಿ ಸ್ವಚ್ಛತಾ ಕಾರ್ಯಕ್ಕಾಗಿ ಸಮಿತಿಗಳ ಮೂಲಕ ಹಣವನ್ನು ಹಂಚಿ, ಸಮಿತಿಯ ಮುಖಾಂತರ ಸ್ವಚ್ಛಗೊಳಿಸಬೇಕು.

■

## ೨೯. ಉದ್ಯೋಗಸ್ಥ ಮಹಿಳೆ – ಕೌಟುಂಬಿಕ ಹಿತಾಸಕ್ತಿ

ಮಹಿಳೆಯರು ನೌಕರಿ ಮಾಡುವುದು ಅವಶ್ಯಕವೆ ಇಲ್ಲವೆ? ಒಳ್ಳೆಯದೆ ಕೆಟ್ಟದೆ, ಸರಿಯೆ ಅಲ್ಲವೆ? ನೌಕರಿ ಮಾಡುವ ಮಹಿಳೆಯರ ಸಮಸ್ಯೆಗಳೇನು ಎಂದು ನಾನಾ ರೀತಿಯ ಜಿಜ್ಞಾಸೆಗಳು ರೇಡಿಯೋದಲ್ಲಿ, ಮಹಿಳಾ ಮಂಡಳಗಳಲ್ಲಿ ಪತ್ರಿಕೆಗಳಲ್ಲಿ ನಡೆಯುತ್ತಾ ಬಂದಿವೆ. ಅವುಗಳಲ್ಲಿ ಬರುವ ಎಲ್ಲರ ಅಭಿಪ್ರಾಯಗಳೂ ಸರಿಯೆ. ಕೆಲವರ ಅಭಿಪ್ರಾಯದಂತೆ ನೌಕರಿ ಮಾಡುವುದು ಒಳ್ಳೆಯದೂ ಹೌದು, ಕೆಲವರ ಹೇಳಿಕೆಯಂತೆ ನೌಕರಿ ಮಾಡುವುದು ಸರಿಯೂ ಅಲ್ಲ.

ಮಹಿಳೆ ದುಡಿಮೆಗೆ ಹೋಗಬೇಕೆ ಬೇಡವೆ? ಎಂದು ಸಾರಾಸಗಟಾದ ನಿರ್ಣಯಕ್ಕೆ ಬರುವುದಕ್ಕಿಂತ ಪ್ರತಿ ಮಹಿಳೆಯ ಸನ್ನಿವೇಶ, ಅವಶ್ಯಕತೆಯನ್ನು ಗಮನದಲ್ಲಿರಿಸಿಕೊಂಡು, ನಿರ್ಧರಿಸುವುದು ಉಚಿತ. ಕೆಲವು ಮಹಿಳೆಯರ ದೃಷ್ಟಿಯಿಂದ ಆಕೆ ನೌಕರಿ ಮಾಡುವುದು ಒಳ್ಳೆಯದಲ್ಲ – ಅವಶ್ಯಕವಲ್ಲ, ಸರಿಯೂ ಅಲ್ಲ, ಮತ್ತೆ ಕೆಲವರ ಸನ್ನಿವೇಶದಲ್ಲಿ ನೌಕರಿ ಮಾಡುವುದು ಅಗತ್ಯ ಒಳ್ಳೆಯದು, ಅಲ್ಲದೆ ಸರಿಯೂ ಹೌದು.

ಒಬ್ಬ ಮಹಿಳೆ ಅವಿವಾಹಿತಳಾಗಿ ಉಳಿದಿರಬಹುದು, ವಿಧವೆಯಾಗಿರಬಹುದು, ಗಂಡನ ಪಗಾರ ಕಡಿಮೆ, ಆದರೆ ಅವರು ವಹಿಸಬೇಕಾದ ಜವಾಬ್ದಾರಿ ಹೆಚ್ಚು, ಗಂಡನ ಆದಾಯ ತಮ್ಮ ಹೊಣೆಗಾರಿಕೆಗಳ ನಿರ್ವಹಣೆಗೆ ಏನೇನೂ ಸಾಲದು. ಈಗ ಆಕೆ ನೌಕರಿಗೆ ಹೋಗುವುದು ಒಳ್ಳೆಯದು. ಹೆಂಡತಿ ಸಾಕಷ್ಟು ಕಲಿತವಳಿದ್ದು, ಕೆಲಸ ತಮಗೆ ಬೇಕಾದ ಸ್ಥಳದಲ್ಲಿ ಸಿಕ್ಕುವಂತಿದೆ. ಮತ್ತೆ ಕೆಲವರ ಜೀವನದಲ್ಲಿ ಆರ್ಥಿಕವಾಗಿ ತೊಂದರೆ ಏನಿಲ್ಲ. ಎಲ್ಲಾ ಸಾಕಷ್ಟಿದೆ. ಮಕ್ಕಳನ್ನು ನೋಡಿಕೊಳ್ಳಲೂ ಗಂಡನ ತಾಯಿ ಇದ್ದಾರೆ, ಹೆಂಡತಿ ತುಂಬಾ ವಿದ್ಯಾವಂತೆ. ಮನೆಯಲ್ಲಿ ಕೆಲಸಕ್ಕೆ ಸಹಾಯಕರೂ ಇದ್ದಾರೆ. ಈಕೆಗೆ ಹೊತ್ತು ಹೋಗುವುದೇ ಕಷ್ಟ. ಮನೆಯಲ್ಲಿ ಕೂತು ಕೂತು ಬೇಜಾರು. ಏನಾದರೂ ಅವಕಾಶ ಸಿಕ್ಕರೆ ಕಲಿತ ವಿದ್ಯೆಯ ಉಪಯೋಗವನ್ನಾದರೂ ಮಾಡಿಕೊಳ್ಳಬಹುದು ಎನ್ನುವ ಅನಿಸಿಕೆ ಆಕೆಗೆ. ಈ ಸಂದರ್ಭದಲ್ಲೂ ಮಹಿಳೆ ಕೆಲಸಕ್ಕೆ ಹೋಗುವುದು ಅವಶ್ಯಕ, ಸರಿ ಮತ್ತು ಒಳ್ಳೆಯದು.

ಆದರೆ ಕೆಲವೊಂದು ಮನೆಗಳಲ್ಲಿ ಕೆಲಸಕ್ಕೆ ಹೋಗುವುದರಿಂದ ಸಂಸಾರ

ತೊಂದರೆಗೆ ಒಳಗಾಗುವ ಸಾಧ್ಯತೆ ಉಂಟು. ಗಂಡ ತರುವ ಪಗಾರ ಕುಟುಂಬವನ್ನು ಯಾವುದೇ ಆರ್ಥಿಕ ಸಮಸ್ಯೆ ಇಲ್ಲದೆ ನಡೆಸಿಕೊಂಡು ಹೋಗಲು ಸಾಧ್ಯವಿದೆ. ಮನೆಯಲ್ಲಿ ಸಣ್ಣಪುಟ್ಟ ಮಕ್ಕಳಿದ್ದಾರೆ. ಮನೆಯವರೇ ಆದ ಹಿರಿಯರ್‍ಯಾರ ಸಹಾಯವೂ ಮನೆ ಮಕ್ಕಳನ್ನು ನೋಡಿಕೊಳ್ಳಲು ಇಲ್ಲ. ಕೆಲಸದವರು ಸಿಗುವುದೂ ಸಮಸ್ಯೆ. ಪಾತ್ರೆಯವರು ಬಟ್ಟೆಯವರು ಅಷ್ಟೆ. ಒಂದು ವಾರ ಬಂದರೆ ಮತ್ತೊಂದು ವಾರ ಚಕ್ಕರ್, ಇಂತಹ ಸಂದರ್ಭದಲ್ಲಿ ಮಹಿಳೆ ನೌಕರಿಗೆ ಹೋಗುವುದು ವಿವೇಕವಲ್ಲ. ಮತ್ತೆ ಕೆಲವು ಮನೆಗಳಲ್ಲಿ ಗಂಡನಿಗೆ ಹೆಂಡತಿ ನೌಕರಿಗೆ ಹೋಗುವುದು ಅಷ್ಟು ಸೇರುವುದಿಲ್ಲ. ಮನೆಯಲ್ಲಿ ಬರುವ ಹೋಗುವ ಅತಿಥಿ ಅಭ್ಯಾಗತರು ಹೆಚ್ಚು. ತಾವಿರುವ ಊರಲ್ಲೇ ಕೆಲಸ ಸಿಕ್ಕುವಂತಿಲ್ಲ. ಬೇರೆ ಊರಲ್ಲಿ ಕೆಲಸ ಸಿಕ್ಕರೂ, ಎರಡು ಕಡೆ ಮನೆ ಮಾಡಿ, ಅಲ್ಲಿಂದಿಲ್ಲಿಗೆ ಒಬ್ಬರಲ್ಲ ಒಬ್ಬರು ಓಡಾಡುವ ಖರ್ಚಿನಲ್ಲಿ ಒಬ್ಬರ ದುಡಿಮೆ ಮುಗಿದು ಹೋಗುತ್ತದೆ. ಇಂತಹ ಸಂದರ್ಭಗಳಲ್ಲಿ ಕೆಲಸಕ್ಕೆ ಮಹಿಳೆ ಹೋಗುವುದು ಅನಗತ್ಯ. ಹೋಗಲೇಬೇಕೆಂದು ಬಯಸಿದರೆ ಸಮಸ್ಯೆಗಳನ್ನು ಆಹ್ವಾನಿಸಿದಂತೆಯೇ ಸರಿ. ಅಲ್ಲದೆ ಹಣದ ಉಳಿತಾಯವೂ ಆಗುವುದಿಲ್ಲ. ಆದ್ದರಿಂದ ಮಹಿಳೆ ಕೆಲಸಕ್ಕೆ ಹೋಗಬೇಕೆ ಬೇಡವೇ ಎಂದು ಎಲ್ಲರಿಗೂ ಒಂದೇ ಆದಂತಹ ಸಾಮಾನ್ಯ ಸೂತ್ರ ರಚಿಸುವುದು ಸಾಧ್ಯವಿಲ್ಲ.

ಈಗಿನ ಕಾಲದಲ್ಲಿ ಏನೇನೋ ಕಾರಣಗಳಿಂದ ಮಹಿಳೆಯರು ನೌಕರಿಗೆ ಹೋಗುತ್ತಾರೆ. ಹಾಗೆ ಹೋದಾಗ ಪತಿಯಾದವನೂ ಪೂರ್ಣ ಒಪ್ಪಿಗೆ ನೀಡಿ, ಪತ್ನಿಯ ಕಷ್ಟ-ಸುಖಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡು ಸಹಕರಿಸುವವನಾದರೆ ಮಹಿಳೆ ನೌಕರಿ ಮಾಡುವುದು ಒಳಿತು. ಅದರಲ್ಲಿಯೂ ಇಬ್ಬರ ದುಡಿತದಿಂದ ಬಂದ ಹಣವನ್ನು ಒಳ್ಳೆ ಲೆಕ್ಕಾಚಾರದಿಂದಲೂ, ದೂರದೃಷ್ಟಿಯಿಂದಲೂ ಬಳಸಿ, ಇನ್ನೊಬ್ಬರ ದುಡಿತವಿಲ್ಲದಿದ್ದರೆ ಉಂಟಾಗಬಹುದಾಗಿದ್ದ ಅನಾನುಕೂಲಗಳಿಗೆ ಆಸ್ಪದವಿಲ್ಲದಂತೆ ಸಂಸಾರಕ್ಕೆ ಅನುಕೂಲ ಮಾಡಿಕೊಳ್ಳುವ ಜಾಣತನವುಳ್ಳ ದುರಾಲೋಚನೆಯುಳ್ಳ ಗಂಡನಿದ್ದರೆ, ಮಿಡ್ಲ್ ಕ್ಲಾಸ್ (ಮಧ್ಯಮ ವರ್ಗದ) ಸಂಸಾರಕ್ಕೆ ಪತ್ನಿ ನೌಕರಿಗೆ ಹೋಗುವುದು ಒಂದು ವರಪ್ರಸಾದವಾಗುತ್ತದೆ. ಆದರೆ ಹೀಗೆ ಅರಿತು, ಇಬ್ಬರೂ ಸಹಕರಿಸಿಕೊಂಡು ಇದು ಗಂಡಸರು ಮಾಡುವ ಕೆಲಸ, ಇದು ಹೆಂಗಸರು ಮಾಡುವ ಕೆಲಸ ಎಂಬ ತಾರತಮ್ಯವಿಲ್ಲದೆ, ಪ್ರಸಂಗ ಬಂದಂತೆ ಇಬ್ಬರೂ ಅನುಸರಿಸಿಕೊಂಡು ಹೋದರೆ, ಹೆಂಡತಿ ಗಂಡನಿಗೆ ಎಲ್ಲಾ ಉಪಚಾರ ಮಾಡಬೇಕು. ಅವನ ಯೋಗಕ್ಷೇಮ ನೋಡಿಕೊಳ್ಳಬೇಕು, ಅವನಿಗೆ ಬೇಕಾದವರೆಲ್ಲರ ಸೇವೆ ಮಾಡುತ್ತಿರಬೇಕು ಎಂಬ ಸಂಪ್ರದಾಯದ ಭಾವನೆಗಳು ಇಲ್ಲದಿದ್ದರೆ, ಮಹಿಳೆಗೆ ನೌಕರಿ ಮಾಡುವುದೇನು ಕಷ್ಟವಾಗುವುದಿಲ್ಲ. ಅಷ್ಟೇ ಅಲ್ಲ, ಮನೆಯಲ್ಲಿರುವ ಎಲ್ಲರೂ, ಎಂದರೆ ಬೆಳೆಯುತ್ತಿರುವ ಮಕ್ಕಳೂ ಸಹ

ಜವಾಬ್ದಾರಿಯುತ ಭಾವನೆಗಳನ್ನು ಬೆಳೆಸಿಕೊಂಡು ಜವಾಬ್ದಾರಿಯುತ ವ್ಯಕ್ತಿತ್ವ ಬೆಳೆಸಿಕೊಳ್ಳಲೂ ಸಹಾಯಕವಾಗುತ್ತದೆ. ಆದರೆ ಇದು ಎಲ್ಲರ ಜೀವನದಲ್ಲೂ ಸಾಧ್ಯವಿಲ್ಲ. ಸಂಸಾರದಲ್ಲಿ ಸಮಸ್ಯೆಗಳನ್ನು ಹುಟ್ಟಿಸಿ ಎಲ್ಲರ ನೆಮ್ಮದಿ ಕೆಡಲು ಕಾರಣವಾಗುವಂತಿದ್ದರೆ, ಅಂತಲ್ಲಿ ನೌಕರಿ ಮಾಡದಿರುವುದೇ ಮೇಲು.

ಪರಂಪರಾಗತವಾಗಿ ಬೆಳೆದು ಬಂದ ಭಾವನೆಗಳನ್ನು ಅಷ್ಟು ಸುಲಭವಾಗಿ ಬದಲಾಯಿಸುವುದು ಸಾಧ್ಯವಿಲ್ಲ. ಹಾಗಾಗಿ ನೌಕರಿ ಮಾಡುವ ಮಹಿಳೆಗೆ ಬಹಳ ಸಮಸ್ಯೆಗಳು. ನೌಕರಿ ಮಾಡುತ್ತಿರುವ ಬಹಳಷ್ಟು ಮಹಿಳೆಯರ ಜೀವನದಲ್ಲಿ ಸಮಸ್ಯೆಗಳೇ ಹೆಚ್ಚು. ಆರ್ಥಿಕ ತೊಂದರೆ ಇರುವ ಮನೆಗಳ ಅವಿವಾಹಿತ ತರುಣಿ ನೌಕರಿಯಲ್ಲಿ ಇದ್ದಳಾದರೆ ಈಗಿನ ಕಾಲದಲ್ಲಿ, ಆಕೆಗೆ ಮದುವೆ ಮಾಡುವ ಪ್ರಯತ್ನವನ್ನೇ ಕೆಲವು ತಂದೆ ತಾಯಿಗಳು ಮಾಡುವುದಿಲ್ಲ. ಮಗಳ ಪಗಾರದ ರುಚಿ ಕಂಡ ಅವರಿಗೆ ಆಕೆಯ ದುಡಿಮೆ ಪರರ ಪಾಲಿಗೆ ಹೋಗಿ, ತಮಗಿಲ್ಲವಾಗುತ್ತದೆಯೆಂಬ ಭಾವನೆಯಲ್ಲಿ ಆಕೆಯ ಮದುವೆಯ ಪ್ರಶ್ನೆಯನ್ನೇ ಎತ್ತದೆ, ಅವಳ ಗೃಹಿಣಿಯಾಗಿ ಬಾಳಬೇಕೆಂಬ ಆಸೆಗೆ ತಣ್ಣೀರೆರಚಬಹುದು. ಅಲ್ಲದೆ ಮದುವೆಯಾದ ಸ್ತ್ರೀಯೇ ಕೆಲಸಕ್ಕೆ ಹೋದರೆ, ಅವರಿಬ್ಬರದೂ ಬೇರೆ ಬೇರೆ ಉದ್ಯೋಗಗಳಾಗಿ ಬೇರೆ ಬೇರೆ ಊರಲ್ಲಿರಬೇಕಾದಂತಹ ಸಂದರ್ಭ ಬಂದರೆ, ಅವರ ತೊಂದರೆ ಹೇಳತೀರದು. ಆರ್ಥಿಕವಾಗಿ, ಮಾನಸಿಕವಾಗಿ, ಕೌಟುಂಬಿಕವಾಗಿ, ಸಮಸ್ಯೆಗಳು ಮುತ್ತುತ್ತವೆ. ಬೆಳೆಯುವ ಮಕ್ಕಳ ಶಿಕ್ಷಣದ ಮೇಲೆ, ವ್ಯಕ್ತಿತ್ವದ ಮೇಲೆ ದುಷ್ಪರಿಣಾಮಗಳುಂಟಾಗುತ್ತವೆ. ಪುರುಷನು ಸಂಪ್ರದಾಯ ಮನೋಭಾವದವನಾಗಿ, ಹೆಂಡತಿಯಿಂದ ಎಲ್ಲಾ ಸೇವೆಗಳನ್ನು ನಿರೀಕ್ಷಿಸುವುದಲ್ಲದೆ, ತನ್ನ ತಂದೆ-ತಾಯಿ ಬಂಧು-ಬಳಗದವರ ಯೋಗಕ್ಷೇಮದಲ್ಲಿ ಯಾವುದೇ ಕೊರತೆಯಾದರೂ, 'ಈಕೆ ತಾನು ವಿದ್ಯಾವಂತಳೆಂದು, ತಾನು ಹಣ ತರುತ್ತೇನೆಂದು ಅಹಂಕಾರದಿಂದ ನಡೆಯುತ್ತಾಳೆಂದು ತಿಳಿದಾಗ, ಆ ಮಹಿಳೆಯ ಜೀವನ ನರಕ ಸದೃಶ. ನೌಕರಿಯಲ್ಲಿ ಪುರುಷನಂತೆ ಪೂರ್ಣ ಕೆಲಸ ಆಫೀಸಿನಲ್ಲಿ ಮಾಡಬೇಕು. ಮಹಿಳೆಯಾದುದಕ್ಕಾಗಿ ಮನೆಯವರೆಲ್ಲರ ಅವಶ್ಯಕತೆಗಳನ್ನು ಪೂರೈಸಬೇಕು. ಇದೆಲ್ಲಾ ಒತ್ತಡಗಳಿಂದ ದೈಹಿಕ ಹಾಗೂ ಮಾನಸಿಕ ಶ್ರಮದಿಂದಾಗಿ, ತಾನಿಷ್ಟು ಹೆಣಗಿದರೂ ಸರಿಯಾಗಿ ಅರ್ಥಮಾಡಿಕೊಳ್ಳುವವರು ಯಾರೂ ಇಲ್ಲವೆಂದು ಮಹಿಳೆ ಸ್ವಲ್ಪ ಅಸಮಾಧಾನ ವ್ಯಕ್ತಪಡಿಸಿದರೂ, ಅದಕ್ಕೆ ಅಪಾರ್ಥ ಬರುವ ಪರಿಸ್ಥಿತಿ, ಎಲ್ಲರ ಸ್ನೇಹ-ಪ್ರೀತಿಗಳಿಲ್ಲದ ನಡೆಯಿಂದ ಮನಸ್ಸು ಜರ್ಝರ, ಜೀವನ ಬೇಸರ, ಆಕೆಯ ಭಾವನೆಗಳನ್ನು ಹಂಚಿಕೊಳ್ಳುವವರೇ ಇಲ್ಲವಾದಾಗ ಆಕೆ ನೌಕರಿಗೆ ಹೋಗಲೇಬಾರದು. ಇಂತಹ ಸಂದರ್ಭಗಳಲ್ಲಿ ಆಕೆ, ಹೆಣ್ಣುಮಕ್ಕಳಿಗೆ ನೌಕರಿ ಸರಿಯಿಲ್ಲ ಎಂಬ ತೀರ್ಮಾನಕ್ಕೆ ಬಂದರೆ ಆಶ್ಚರ್ಯವೇನಿಲ್ಲ.

## ದುಡಿದ ಮಹಿಳೆಯ ಕಷ್ಟನಷ್ಟಗಳು

ಮತ್ತೆ ಕೆಲವು ಪ್ರಸಂಗಗಳಲ್ಲಿ ಮಹಿಳೆ ದುಡಿಯಲು ಹೋದರೆ, ಪುರುಷ ಬೇಜವಾಬ್ದಾರಿತನ ಬೆಳೆಸಿಕೊಳ್ಳಲೂಬಹುದು. ಹೇಗೂ ಇಬ್ಬರ ದುಡಿತವಿದೆ ಎಂದು ಆತನಲ್ಲಿ ಧಾರಾಳ ಪ್ರವೃತ್ತಿ ಹೆಚ್ಚಿ ಎಲ್ಲರಿಂದಲೂ ಷಹಬಾಸ್ ಪಡೆಯುವ ಹವ್ಯಾಸಕ್ಕೆ ಒಳಗಾಗಬಹುದು. ಬಡಬಗ್ಗರಿಗೆ ಸಹಾಯ, ಸ್ನೇಹಿತರಿಗೆ ಸಹಾಯ, ಬಂಧು-ಬಳಗಕ್ಕೆ ಸಹಾಯ ಇವು ಮಿತಿ ಮೀರಬಹುದು. ಇಂತಹ ಪ್ರವೃತ್ತಿ ಇದೆ ಎಂದು ಗೊತ್ತಾದರೆ, ಶೋಷಣೆ ಮಾಡಲು ಬಂಧು ಬಳಗ, ಸ್ನೇಹಿತರು, ಪರಿಚಿತರು ಎಲ್ಲರೂ ಮುತ್ತುತ್ತಾರೆ. ಆಗ ಹಣದ ಸಹಾಯದ ಜೊತೆಗೆ ಮಹಿಳೆ ಅವರನ್ನೆಲ್ಲಾ ಸಂಭಾಳಿಸಿಕೊಂಡು, ಸಹಿಸಿಕೊಂಡು ಹೋಗಬೇಕಾಗುತ್ತದೆ. ಎಲ್ಲರಿಗೂ ಸಹಾಯ ಮಾಡುವ ಪುರುಷನಿಗೆ ಯಾವ ತಾಪತ್ರಯವಿಲ್ಲ. ಮಹಿಳೆಯೇ ಎಲ್ಲರನ್ನು ನಿರ್ವಹಿಸಿಕೊಂಡು, ಯಾರಿಂದಲೂ ಕೆಟ್ಟ ಮಾತಿಗೆ ಅವಕಾಶಕೊಡದೆ, ನೋಡಿಕೊಳ್ಳುವುದರಲ್ಲಿ ಅವಳ ಜೀವ ಜರ್ಝರಿತವಾಗಿ ಹೋಗುತ್ತದೆ. ಇದನ್ನೆಲ್ಲಾ ನಡೆಸಿಕೊಂಡು ಹೋಗುವ ಆಕೆ ಸ್ವಲ್ಪ ಪಿಟಿಕ್ ಎಂದರೂ 'ಗಂಡ ಧಾರಾಳಿ, ಜನಾನುರಾಗಿ, ಎಲ್ಲರ ಬಗ್ಗೆಯೂ ಪ್ರೀತಿ ಉಳ್ಳವನು. ಈಕೆ ಸ್ವಾರ್ಥಿ, ಯಾರನ್ನೂ ಹಚ್ಚಿಕೊಳ್ಳುವವಳಲ್ಲ' ಎಂಬ ಅನೇಕ ರೀತಿಯ ಟೀಕೆಗಳಿಗೆ ಗುರಿಯಾಗುವುದಲ್ಲದೆ, ಯಾರ ಪ್ರೀತಿಯಾಗಲೀ, ಸ್ನೇಹವಾಗಲೀ, ಅನುಕಂಪವಾಗಲೀ ಇವಳ ಪಾಲಿಗೆ ಇಲ್ಲವಾಗುತ್ತದೆ. ಅಲ್ಲದೆ ಈ ರೀತಿಯ ಈಕೆಯ ಮನೋಭಾವದಿಂದಲೂ ಮನೆಯ ಪರಿಸ್ಥಿತಿಯಿಂದಲೂ ಬೆಳೆಯುವ ಮಕ್ಕಳ ಮನಸ್ಸಿನ ಮೇಲೂ ಆಕೆಯ ಬಗ್ಗೆ ಒಳ್ಳೆಯ ಅಭಿಪ್ರಾಯ ರೂಪುಗೊಳ್ಳಲಾರದು.

ಇದು ಕೆಲವು ಮಹಿಳೆಯರ ಪಾಡಾದರೆ ಮತ್ತೆ ಕೆಲವು ಮಹಿಳೆಯರ ಸ್ಥಿತಿ ಮತ್ತೊಂದು ರೀತಿಯಲ್ಲಿ ಸಮಸ್ಯಾಮಯ. ಗಂಡ ದುಶ್ಚಟಕ್ಕೆ ಒಳಗಾದವನಿದ್ದರೆ, ತನ್ನ ದುಡ್ಡೇ ಅವನ ಹವ್ಯಾಸಕ್ಕೇ ಸಾಲದು. ಮೊದಲಾದರೆ ಹೇಗೋ ಮಾಡಿ ಅಲ್ಪಸ್ವಲ್ಪವನ್ನಾದರೂ ಮನೆಗೆ ಖರ್ಚು ಮಾಡುತ್ತಿದ್ದ. ಈಗ ಇನ್ನೂ ನಿಶ್ಚಿಂತೆ. ಆಕೆಯೇ ಹೇಗೂ ದುಡಿಯುತ್ತಿದ್ದಾಳೆ. ನೋಡಿಕೊಳ್ಳುತ್ತಾಳೆ ಎಂದು ಇನ್ನೂ ಬೇಜವಾಬ್ದಾರಿ. ಇಷ್ಟಕ್ಕೂ ಬಿಡದೆ ಆಕೆಯ ದುಡಿಮೆಯಲ್ಲೂ ಪಾಲು ಬೇಕು. ಕೇಳಿದಂತೆ ಆಕೆ ಹಣ ಕೊಡದಿದ್ದರೆ ಆಕೆ ಮತ್ತಷ್ಟು ಹಿಂಸೆಗೆ ಬಲಿ. ಇಬ್ಬರಲ್ಲೂ ಮನಸ್ತಾಪ. ಒಬ್ಬರಿಂದ ಒಬ್ಬರ ಮನಸ್ಸು ದಿನವೂ ದೂರ-ದೂರ. ಇದರ ಪ್ರಭಾವ ಮಕ್ಕಳ ಮೇಲೆ ಹೇಗಾಗಬಹುದು? ಮಕ್ಕಳೂ ಬೇಜವಾಬ್ದಾರಿ ನಡೆ ಬೆಳೆಸಿಕೊಂಡು ಮಹಿಳೆಗೆ ಅದೂ ಒಂದು ಸಹಿಸಲಾರದ ನೋವಾಗಿ ಪರಿಣಮಿಸುತ್ತದೆ.

ಹೀಗೆ ಮಹಿಳೆ ನೌಕರಿಗೆ ಹೋದರೆ ಒಂದು ಕಷ್ಟ. ಹೋಗದಿದ್ದರೆ ಒಂದು ಕಷ್ಟ ಎನ್ನುವ ಪರಿಸ್ಥಿತಿಯಿಂದ ತುಂಬಾ ಗೊಂದಲಕ್ಕೆ ಈಡಾಗಬೇಕಾಗುತ್ತದೆ. ನೌಕರಿಗೆ ಹೋಗಿ ಎರಡು ಕಡೆಯೂ ದುಡಿಯುತ್ತಾ, ಎರಡು ಕಡೆಯ ಜವಾಬ್ದಾರಿಗಳನ್ನು ನಿರ್ವಹಿಸುತ್ತಾ ಇಬ್ಬರು ನಿರ್ವಹಿಸುವ ಕೆಲಸಗಳನ್ನು ತಾನೊಬ್ಬಳೇ ನಿರ್ವಹಿಸುತ್ತಾ ಮಾನಸಿಕವಾಗಿ, ದೈಹಿಕವಾಗಿ ಜರ್ಝರಿತಳಾಗುತ್ತಾಳೆ. ಎಲ್ಲವನ್ನೂ ವ್ಯವಸ್ಥಿತವಾಗಿ ಜಾಣ್ಮೆಯಿಂದ ಸಮಾಧಾನದಿಂದ ತೂಗಿಸಿಕೊಂಡ ಹೋಗಬೇಕೆಂದು ಆಸೆ ಇದ್ದರೂ ಪರಿಸ್ಥಿತಿಯಿಂದ ಸಾಧ್ಯವಾಗದೆ ಹೋಗುತ್ತದೆಯಾಗಿ, ಬಂಧು ಬಳಗದವರ ನಿಷ್ಠುರಕ್ಕೆ, ಟೀಕೆಗೆ, ಕುತಂತ್ರಕ್ಕೆ ಬಲಿಯಾಗಬೇಕಾಗುತ್ತದೆ. ಗಂಡ ಧಾರಾಳ ಸ್ವಭಾವದವನೂ, ತನ್ನ ಸಂಸಾರವೇ ಮುಖ್ಯ ಎಂಬ ಭಾವನೆ ಇಲ್ಲದವನಾಗಿ ಬಿಟ್ಟರಂತೂ 'ಇಬ್ಬರೂ ದುಡಿಯುತ್ತಾರೆ ಅವರಿಗೇನು ಕಮ್ಮಿ? ನಮಗೇಕೆ ಕೊಡಬಾರದು' ಎಂದು ತಮ್ಮ ಕಷ್ಟ ಹಾಗೂ ಸಮಸ್ಯೆಗಳನ್ನೆಲ್ಲಾ ಇವರ ಕುಟುಂಬಕ್ಕೆ ತುಂಬುತ್ತಾರೆ. ಅವರು ಉಂಡೂ ಹೋಗುತ್ತಾರೆ, ಕೊಂಡೂ ಹೋಗುತ್ತಾರೆ. ಕೊನೆಗೆ ಕೃತಜ್ಞತೆ ತೋರುವುದಿರಲಿ 'ಹಾಗೆ ಮಾಡಿದರು, ಹೀಗೆ ಮಾಡಿದರು, ಹಾಗೆಂದರು, ಹೀಗೆಂದರು" ಎಂದು ದೂರಿಕೊಳ್ಳುತ್ತಾ ತಮ್ಮ ಕೆಲಸಗಳೆಲ್ಲಾ ಮುಗಿದ ಮೇಲೆ ದೂರ ಸರಿದು ಬಿಡುತ್ತಾರೆ.

ಅನೇಕ ದುಡಿಯುವ ಮಹಿಳೆಯರ ಜೀವನಗಳನ್ನು ಅವಲೋಕಿಸಿದಾಗ, ಗಂಡನಾದವನು ದುಡಿಯುವ ಹೆಂಡತಿಯ ಕಷ್ಟ-ಸುಖಗಳನ್ನು ಅರಿತುಕೊಳ್ಳುವ ಮನೋಭಾವವಿಲ್ಲದವನಾಗಿದ್ದರೆ, ಆಕೆಯ ಕೆಲಸಗಳಲ್ಲಿ ಸಹಕರಿಸದಿದ್ದರೆ, ಆಕೆಯ ಅಸಹಾಯಕ ಪರಿಸ್ಥಿತಿಗಳಲ್ಲಿ ಅನುಕಂಪ ತೋರದೆ ಟೀಕಿಸುವ ಸ್ವಭಾವದವನಾಗಿದ್ದರೆ ಸಂಪ್ರದಾಯದ ಸ್ವಭಾವ ಬಿಟ್ಟು ದುಡಿಯುವ ಮಹಿಳೆಯನ್ನು ಇಂದಿನ ಪರಿಸ್ಥಿತಿಯಲ್ಲಿ ಅರ್ಥಮಾಡಿಕೊಳ್ಳದಿದ್ದರೆ, ಆಕೆ ನರಕಕ್ಕಿಂತಲೂ ದಾರುಣವಾದ ನೋವನ್ನು ಅನುಭವಿಸಬೇಕಾಗುತ್ತದೆ. ಹಾಗಿಲ್ಲದೆ ಅವನು ತನ್ನ ದುಡಿಮೆಯ ಜೊತೆಗೆ ಹೆಂಡತಿಯು ದುಡಿಮೆಯೂ ಸೇರುತ್ತದೆ. ಅದರಿಂದ ಜೀವನ ಹಸನುಗೊಳಿಸಿಕೊಳ್ಳಬಹುದೆಂದು ಜೀವನವನ್ನು ಒಬ್ಬರ ದುಡಿಮೆಯಲ್ಲಿದ್ದುದಕ್ಕಿಂತಲೂ ಉತ್ತಮಗೊಳಿಸಿಕೊಳ್ಳಲು ಸಹಾಯಕನಾದರೆ ಆಕೆಗೆ ದುಡಿದುದು ಸಾರ್ಥಕವೆನಿಸುತ್ತದೆ, ಕುಟುಂಬದ ಸೌಲಭ್ಯಕ್ಕಾಗಿ ಆಕೆ ತನ್ನ ಸೌಲಭ್ಯವನ್ನು ಕಡೆಗಣಿಸಿ ಎರಡೂ ಕಡೆಯ ಕೆಲಸ ಮಾಡುವ ಕಷ್ಟ ಹೊತ್ತಿದ್ದಾಳೆಂಬ ಪ್ರೀತಿ ತೋರಿಸಿದರೆ, ಆಕೆಗೆ ಎಷ್ಟು ದುಡಿದರೂ ದಣಿವು ಕಾಣದಾಗುತ್ತದೆ, ಮನೆಯಲ್ಲಿ ಹೆಚ್ಚು ದಣಿವಾಗಲೀ, ಒತ್ತಡವಾಗಲೀ ಇಲ್ಲದೆ ಇರುವ ಮಹಿಳೆಗಿಂತ ತನ್ನ ಹೆಂಡತಿಯ ಸಹನೆ, ಸಾಹಸ-ಕರ್ತವ್ಯ-ದಕ್ಷತೆ ಹೆಚ್ಚು ಎಂದು ಮೆಚ್ಚುಗೆ ತೋರಿಸಿದರೆ, ಅವನ ಬಗ್ಗೆ ಅತೀವ ಪ್ರೀತಿಯ ಭಾವನೆ ಬೆಳೆದು ಇಬ್ಬರ ಜೀವನವೂ ಸ್ವರ್ಗವಾದೀತು.

ಹೀಗೆ ಮಹಿಳೆ ನೌಕರಿ ಮಾಡುವುದು ಅವಶ್ಯಕವೇ ಅಲ್ಲವೇ ಎಂಬುದನ್ನು ಆಯಾ ವ್ಯಕ್ತಿಯ ಜೀವನದ ಪರಿಸ್ಥಿತಿ, ಪರಿಸರ, ಅಗತ್ಯ ಮುಂತಾದವುಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿ ನಿರ್ಧಾರಕ್ಕೆ ಬರುವುದು ಸರಿ ಎನ್ನಿಸುತ್ತದೆ. ಮಹಿಳೆಯೂ ಪುರುಷನಂತೆ ಎಲ್ಲಾ ಕ್ಷೇತ್ರಗಳಲ್ಲೂ ಕೆಲಸ ಮಾಡಲು ಸಮರ್ಥಳು. ಆದರೆ ಅವಳ ಹೊಣೆಗಾರಿಕೆ, ಗೃಹಿಣಿಯಾಗಿ, ಮಕ್ಕಳನ್ನು ಉತ್ತಮ ಪ್ರಜೆಗಳಾಗಿ ರೂಪಿಸುವಲ್ಲಿ, ಪುರುಷ ತನ್ನ ಕರ್ತವ್ಯವನ್ನು ನಿರ್ವಹಿಸಲು ಬೇಕಾದ ಅನುಕೂಲಗಳನ್ನು ಒದಗಿಸುವಲ್ಲಿ, ಕುಟುಂಬ ಹಿತರಕ್ಷಣೆಯಲ್ಲಿ ಬಹಳ ಮಹತ್ವದ್ದಾಗಿದೆ. ಈ ಕೆಲಸಗಳನ್ನು ತಾಯ್ತನದ ಭಾವನೆಗಳನ್ನು ಒಳಗೊಂಡು ಜನ್ಮ ತಳೆದಿರುವ ಆಕೆಯಂತೆ ಪುರುಷ ಮಾಡುವುದು ಅಸಾಧ್ಯವೆಂದರೆ ತಪ್ಪಲ್ಲ. ಆದುದರಿಂದ ಕುಟುಂಬದ ಮತ್ತು ಎಲ್ಲರ ಯೋಗಕ್ಷೇಮದ ಅಧ್ವರ್ಯುವಾದ ಆಕೆಯ ಯೋಗಕ್ಷೇಮಕ್ಕೆ ಧಕ್ಕೆ ಬರದೆ ಕುಟುಂಬದ ಸೌಕರ್ಯಗಳು, ಸುಖ-ಸಂತೋಷಗಳು ಈಕೆಯು ನೌಕರಿ ಮಾಡುವುದರಿಂದ ಹೆಚ್ಚಾಗಬಹುದಾದ ಸನ್ನಿವೇಶದಲ್ಲಿ ಮಹಿಳೆ ನೌಕರಿಗೆ ಹೋಗುವುದು ಯೋಗ್ಯ. ಒಟ್ಟಿನಲ್ಲಿ ನೌಕರಿಯಿಂದ ತನ್ನ, ಗಂಡನ, ಮಕ್ಕಳ ಸುಖ ಹೆಚ್ಚುವಂತಿದ್ದರೆ, ಕೌಟುಂಬಿಕ ಸಮಸ್ಯೆಗಳಿಗೆ ಕಾರಣವಾಗದಿದ್ದರೆ ಮಹಿಳೆ ನೌಕರಿಗೆ ಹೋಗುವುದು ಅಪೇಕ್ಷಣೀಯ. ಅಲ್ಲದೆ ಅವಳು ಒಂಟಿಯಾಗಿ, ಅಸಹಾಯಕಳಿದ್ದಾಗಲಂತೂ ನೌಕರಿ ಒಂದು ವರಪ್ರಸಾದ. ಆದರೂ ಇಂದಿನ ದಿನಗಳಲ್ಲಿ ಮಹಿಳೆ ನೌಕರಿಗೆ ಹೋಗಬೇಕೆ ಬೇಡವೇ ಎಂಬುದು ಬಿಡಿಸಲಾಗದ ಪ್ರಶ್ನೆ.

■

## ೩೦. ಇಂದಿನ ಅನಪೇಕ್ಷಣೀಯ ಸಾಮಾಜಿಕ ಸ್ಥಿತಿಗೆ ಶಿಕ್ಷಣ ಹಾಗೂ ಮಾಧ್ಯಮಗಳೇ ಕಾರಣ

ನಮ್ಮ ಭಾರತದ ಸಂಸ್ಕೃತಿ, ಪರಂಪರೆ ಮೌಲ್ಯಗಳು ತುಂಬಾ ಉತ್ಕೃಷ್ಟವಾದುವುಗಳು. ಆ್ಯನಿಬೆಸೆಂಟ್, ಮಾರ್ಗರೇಟ್ ಮುಂತಾದ ಪಾಶ್ಚಾತ್ಯರು ಇವುಗಳಟ್ಟೆಲೆಯರಿತು, ಕೊಂಡಾಡಿ, ಇಂತಹ ನಾಡಿನಲ್ಲಿ ಬದುಕಬೇಕು, ಅದರ ಪ್ರಭಾವದಿಂದ ಪುನೀತರಾಗಬೇಕೆಂದು ಭಾರತಕ್ಕೆ ಬಂದರು. ಆದರೆ ಭಾರತೀಯರಿಗೆ ಇವುಗಳ ಪರಿಚಯವಾಗಲೀ, ಮಹತ್ವವಾಗಲೀ ತಿಳಿಯದಿದ್ದುದರಿಂದ ಆ ಪಾಶ್ಚಾತ್ಯ ಮಹಿಳೆಯರು ತಮ್ಮ ಉಸಿರಿರುವ ತನಕ ಭಾರತೀಯರಿಗೆ ಅವುಗಳ ಅರಿವು ಮೂಡಿಸಲು ಹೆಣಗಾಡಿದರು. ಆದರೆ 'ಹಿತ್ತಲ ಗಿಡ ಮದ್ದಲ' ಎಂಬಂತೆ ನಮಗೆ ಅರಿವು ಮೂಡುತ್ತಿಲ್ಲ. ಈಗಂತೂ ದೇಶವೆಲ್ಲಾ ಸಾರಸಗಟಾಗಿ ಪಾಶ್ಚಾತ್ಯರನ್ನು ಅನುಕರಣೆ ಮಾಡಲು ಹೊರಟಿರುವುದನ್ನು ಕಾಣುತ್ತೇವೆ. ಪಾಶ್ಚಾತ್ಯರಲ್ಲಿ ಅನುಕರಣೀಯ ಅಂಶಗಳು ಇಲ್ಲವೆ ಇಲ್ಲ ಎಂದು ಅರ್ಥವಲ್ಲ, ಅವರ ಬಿಡುವಿಲ್ಲದ ದುಡಿಮೆ, ಸ್ವಚ್ಛತಾ ಜೀವನ, ಇತರರ ಜೀವನದಲ್ಲಿ ಅನವಶ್ಯಕ ಮೂಗು ತೂರಿಸದಿರುವ ಸ್ವಭಾವ ಮುಂತಾದ ಅನುಕರಣಿಯವಾದ ಅನೇಕ ಅಂಶಗಳು ಅವರಲ್ಲಿವೆ. ಆದರೆ ನಾವು ಅವುಗಳನ್ನೆಲ್ಲಿ ಅನುಸರಿಸುತ್ತಿದ್ದೇವೆ? ನಾವು ಅನುಸರಿಸುತ್ತಿರುವುದು ನಮ್ಮ ಭವ್ಯ ಪರಂಪರೆ ಹಾಗೂ ಮೌಲ್ಯಗಳನ್ನು ಗಾಳಿಗೆ ತೂರುವಂತಹ ನಡೆನುಡಿಗಳನ್ನು ಮಾತ್ರ. ಅವರ ಮೋಜಿನ ಜೀವನ, ಅಮಲೇರುವ ಮಾದಕ ದ್ರವ್ಯಗಳ ಸೇವನೆ ಅಂಗಾಂಗ ಪ್ರದರ್ಶಿಸುವ ಉಡುಗೆ ತೊಡುಗೆಗಳು, ಕರ್ತವ್ಯಕ್ಕೆ ತಿಲಾಂಜಲಿ, ಸೇಡಿನ ಮನೋಭಾವ, ಅವೇಶಭರಿತವಾದ ಮನಸ್ಸಿನ ಮೇಲೆ ಹಿಡಿತವಿಲ್ಲದ ನಡೆನುಡಿಗಳನ್ನು ಅನುಕರಿಸುತ್ತಿದ್ದೇವೆ. ಇಂತಹ ಪರಿವರ್ತನೆಗೆ, ಈಗೀಗ ವಿದೇಶಕ್ಕೆ ಮೋಜಿಗಾಗಿ ಹೋಗುವವರ ಸಂಖ್ಯೆ ಹೆಚ್ಚಾಗುತ್ತಿರುವುದು ಒಂದು ಕಾರಣವಾದರೆ, ಮಾಧ್ಯಮಗಳ ಬೇಜವಾಬ್ದಾರಿತನ ಇನ್ನೊಂದು ಪ್ರಮುಖ ಕಾರಣ. ಸರ್ಕಾರ ಇದಕ್ಕೆ ಬ್ರೇಕು ಹಾಕದೆ, ಹಣ ಗಳಿಸುವ ದಾರಿ ಎಂದು ಇದಕ್ಕೆಲ್ಲಾ ಮುಕ್ತ ಅವಕಾಶ ಕೊಡುತ್ತಿರುವುದು ದುರ್ದೈವವಲ್ಲದೆ ಮತ್ತೇನು? ಜನರು ರೋಗಗ್ರಸ್ತರಾಗಲು ಅವಕಾಶ ಮಾಡಿಕೊಟ್ಟು, ಆಸ್ಪತ್ರೆಗಳನ್ನು ಕಟ್ಟಿಸಲು ಹಣಗಳಿಸುವುದು ಹುಚ್ಚಾಟ. ರೋಗಿಗಳು ಹೆಚ್ಚಿಲ್ಲದಿದ್ದರೆ

ಆಸ್ಪತ್ರೆಗಳಿಗಾಗಿ ಹೆಚ್ಚು ಹಣ ಖರ್ಚು ಮಾಡುವ ಪ್ರಸಂಗ ಬರುವುದಿಲ್ಲ. ನ್ಯಾಯ, ನೀತಿ, ನಿಷ್ಠೆ ಪ್ರಾಮಾಣಿಕತೆ ಮುಂತಾದ ಮೌಲ್ಯಗಳು ಗಾಳಿಗೆ ತೂರಿಹೋಗುವಂತಹ ಪರಿಸ್ಥಿತಿ ಉಂಟುಮಾಡಿದಾಗ ಜೈಲು ನಿರ್ಮಿಸಲು, ಪೋಲಿಸರ ಸಂಖ್ಯೆ ಹೆಚ್ಚಿಸಲು ಕೋರ್ಟು-ಕಛೇರಿಗಳನ್ನುಕಟ್ಟಿಸಲು, ಸಿಬ್ಬಂದಿಗಳನ್ನು ನೇಮಿಸಲು ಲೆಕ್ಕವಿಲ್ಲದಷ್ಟು ಹಣ ಖರ್ಚು ಮಾಡಬೇಕಾಗುತ್ತದೆ. ಈಗಿನ ಸಾಮಾಜಿಕ ಹಾಗೂ ರಾಜಕೀಯ ಪರಿಸ್ಥಿತಿಗಳು ಪ್ರಜೆಗಳು ಆಲಸಿಗಳಾಗುವಂತೆ, ಭ್ರಷ್ಟಚಾರಿಗಳಾಗುವಂತೆ, ಮೌಲ್ಯಗಳನ್ನು ಗಾಳಿಗೆ ತೂರುವಂತೆ ಮಾಡಿ, ಅವುಗಳಿಂದಾಗುವ ಪರಿಣಾಮ ಸರಿಪಡಿಸಲೋಸುಗ, ದೇಶದ ಆದಾಯವೆಲ್ಲಾ ಕ್ರಿಮಿನಲ್ಸ್‌ನ್ನು ಹತೋಟಿಗೆ ತರಲು, ಅಂತಹವರ ಸಂಖ್ಯೆ ಕಡಿಮೆ ಮಾಡುವ ವ್ಯರ್ಥ ಪ್ರಯತ್ನಕ್ಕಾಗಿ ಪೋಲಾಗುತ್ತಿದೆ. ಹೀಗಾಗಿ ನಮ್ಮ ದೇಶದ ಸ್ಥಿತಿ, ಹಣ ಸಾಕಷ್ಟು ದೊರೆಯುವವರೆಗೆ ಪರಿಸ್ಥಿತಿಯನ್ನು ಹಿಡಿತಕ್ಕೆ ತರಲಾಗುವುದಿಲ್ಲ. ಪರಿಸ್ಥಿತಿ ಹಿಡಿತಕ್ಕೆ ಬರದ ಹೊರತು ಹಣದ ಅವಶ್ಯಕತೆ ತಪ್ಪುವುದಿಲ್ಲ ಎನ್ನುವಂತೆ ಸಾಗಿದೆ. ಈಗಿನ ಪರಿಸ್ಥಿತಿಯನ್ನು ಹತೋಟಿಗೆ ತರಲು ಒಂದನೆಯದಾಗಿ ಮಾಧ್ಯಮಗಳ ಮೇಲೆ ಹಿಡಿತಬೇಕು, ಎರಡನೆಯದಾಗಿ ಬಾಲ್ಯದಿಂದಲೂ ಒಳ್ಳೆಯ ವ್ಯಕ್ತಿತ್ವ ರೂಪಿಸಿಕೊಳ್ಳಲು ಸಹಾಯಕವಾಗುವಂತಹ ಶಿಕ್ಷಣ ವ್ಯವಸ್ಥೆ ಜಾರಿಗೆ ಬರಬೇಕು.

ನಮ್ಮ ಮಕ್ಕಳ ವ್ಯಕ್ತಿತ್ವ ಪ್ರಾರಂಭದಿಂದಲೇ ದೂಷಿತವಾಗಲು ಟಿ.ವಿ., ಸಿನಿಮಾ ಹಾಗೂ ಅಶ್ಲೀಲ ಸಾಹಿತ್ಯ, ಮೌಲ್ಯಗಳ ಬೆಳವಣಿಗೆಗೆ ಅವಕಾಶವಿಲ್ಲದ ಶಿಕ್ಷಣ ವ್ಯವಸ್ಥೆಗಳೇ ಕಾರಣ. ಅವುಗಳ ಮೂಲಕ ಮಕ್ಕಳಿಗೆ ಎಂತಹ ಉದಾಹರಣೆಗಳನ್ನು ನಾವು ಕೊಡುತ್ತಿದ್ದೇವೆ ಎಂದು ನಮ್ಮ ಅಂತರಂಗವನ್ನು ನಾವೇ ಪ್ರಶ್ನಿಸಿಕೊಳ್ಳಬೇಕಾಗಿದೆ. ಆ ಕಾರ್ಯಕ್ರಮಗಳ ಪ್ರಭಾವದ ಬಗ್ಗೆ ಯೋಚಿಸಿದರೆ ನಾವು ವಿಷಾದಪಟ್ಟುಕೊಳ್ಳುವಂತಿದೆ, ಮಾಧ್ಯಮಗಳಲ್ಲಿ ಒಳ್ಳೆಯ ಕಾರ್ಯಕ್ರಮಗಳಿಲ್ಲವೆಂದಲ್ಲ, ಆದರೆ ಅವುಗಳನ್ನು ಮಾತ್ರ ಮಕ್ಕಳು ನೋಡುವಂತೆ ಮಾಡಲು ಸಾಧ್ಯವೇ? ಅನೇಕ ಚಾನೆಲ್‌ಗಳಲ್ಲಿ ಬರುವ ಕಾರ್ಯಕ್ರಮಗಳು, ಅಪರಿಪಕ್ವ ಮನಸ್ಸಿನ ಪೀಳಿಗೆಯನ್ನು ಅಡ್ಡದಾರಿಗೆ ಎಳೆಯುವಂತಹ, ಅಧೋಗತಿಗೆ ನೂಕುವಂತಹವುಗಳಾಗಿವೆ, ಸಿನಿಮಾಗಳೂ ಅಷ್ಟೆ. ಬರೀ ಹೊಡೆದಾಟ-ಬಡಿದಾಟಗಳು, ಮೋಸ-ದ್ವೇಷಗಳು ಕ್ರೌರ್ಯ ಹಿಂಸೆಗಳು; ಪ್ರತೀಕಾರದ-ಸೇಡಿನ ನಡವಳಿಕೆಗಳು ಕಥೆಯ ಉದ್ದಕ್ಕೂ ಹಾಸುಹೊಕ್ಕಾಗಿ ನೇಯಲ್ಪಟ್ಟಿವೆ. ಸತತವಾಗಿ ಇವುಗಳನ್ನು ನೋಡುವ ಮಕ್ಕಳಿಗೆ ಜೀವನವೇ ಇಷ್ಟು ಭಯಯಂಕರ, ಮುಂದೆ ನಾವು ದೊಡ್ಡವರಾದ ಮೇಲೆ ಇಂತಹ ಪರಿಸ್ಥಿತಿಗಳನ್ನು ಎದುರಿಸಬೇಕಾಗುತ್ತದೆ, ಅದಕ್ಕಾಗಿ ನಾವೂ ಹೀಗೆಯೇ ಆಗಬೇಕು ಎಂಬ ಅನಿಸಿಕೆಯುಂಟಾಗುವುದು

ಸಹಜ, ಆಶ್ಚರ್ಯವೇನಲ್ಲ, ಅನೇಕ ತಂದೆತಾಯಿಗಳೂ ಸಹ ನಮ್ಮ ಮಕ್ಕಳನ್ನು ಸಭ್ಯರನ್ನಾಗಿ, ಮೃದುಮನಸ್ಸುಳ್ಳವರನ್ನಾಗಿ, ಎಂತಹ ಪ್ರಸಂಗದಲ್ಲೂ ಮೌಲ್ಯಗಳಿಗೆ ಮಹತ್ವ ಕೊಡುವವರನ್ನಾಗಿ ಬೆಳೆಸಿದರೆ, ಮುಂದೆ ದುಷ್ಟರು ಅವರನ್ನು ತುಳಿದು ಹಾಕುತ್ತಾರೆ, ಅವರು ಸಮಸ್ಯೆಗಳ ಸುಳಿಯಲ್ಲಿ ಸಿಕ್ಕು ನರಳಬೇಕಾಗುತ್ತದೆ. ಕಷ್ಟಕ್ಕೆ ಸಿಕ್ಕಿ ಒದ್ದಾಡಬೇಕಾಗುತ್ತದೆ. ಆದುದರಿಂದ ನಮ್ಮ ಮಕ್ಕಳೂ ಸಹ ದುಷ್ಟರನ್ನು ಮಟ್ಟಹಾಕುವಷ್ಟು ಸಮರ್ಥರಾಗಿ ಬೆಳೆಯಬೇಕು. ಅವರು ಒಂದೇಟು ಹಾಕಿದರೆ ಇವರು ಎರಡೇಟು ಹಾಕುವಂತಾಗಬೇಕು, ಅವರು ಒಂದು ಕಾಲು ಮುರಿದರೆ ಇವರು ಎರಡು ಕಾಲು ಮುರಿಯುವಷ್ಟು ಕ್ರೌರ್ಯತನವನ್ನು ಬೆಳೆಸಿಕೊಂಡರೆ ಮಾತ್ರ ಈಗಿನ ಕಾಲದಲ್ಲಿ ಬದುಕಲು ಸಾಧ್ಯ ಎಂದು ತೀರ್ಮಾನಿಸಿ ಮಕ್ಕಳನ್ನು ಆ ರೀತಿ ಬದುಕಲು ಪ್ರೋತ್ಸಾಹಿಸುವುದನ್ನು ನಾವಿಂದು ಸಮಾಜದಲ್ಲಿ ಕಾಣುತ್ತಿದ್ದೇವೆ. ಅಂತಹ ಮಕ್ಕಳು ಮೊದ ಮೊದಲು ತಮ್ಮ ರಕ್ಷಣೆಗಾಗಿ ದುಷ್ಟತನವನ್ನು ಬೆಳೆಸಿಕೊಳ್ಳುತ್ತಾರೆ. ಆದರೆ, ನಾಳೆ, ಅವರೇ ಸಮಾಜ ಕಂಟಂಕರಾಗಿ ಬದುಕುವಷ್ಟು ದುಷ್ಟತನ ಅವರಲ್ಲಿ ಮೈಗೂಡಿಕೊಂಡು ಬಿಡುತ್ತದೆ. ಮಾಧ್ಯಮಗಳಲ್ಲಿ ಮುಖ್ಯವಾಗಿ ಸತತವಾಗಿ ತೋರಿಸುವ ದೃಷ್ಯವೆಂದರೆ, ಪ್ರಿಯಕರ ಪ್ರೇಯಸಿಗಾಗಿ ಅಥವಾ ಪ್ರೇಯಸಿ ಪ್ರಿಯಕರನಿಗಾಗಿ ಏನೆಲ್ಲಾ ಮಾಡಲು ಸಿದ್ಧರಿರುವ ಕಥೆಗಳು. ಅದಕ್ಕಾಗಿ ಕೊಲೆ ಮಾಡಲು, ತಂದೆ-ತಾಯಿಗಳನ್ನು ತುಚ್ಛೀಕರಿಸಲು, ಮನೆಬಿಟ್ಟು ಹೋಗಲು ಆತ್ಮಹತ್ಯೆ ಮಾಡಿಕೊಳ್ಳಲು ಹೇಸುವುದಿಲ್ಲ. ಇಂತಹ ಕಥೆಗಳನ್ನು ಮೇಲಿಂದ ಮೇಲೆ ನೋಡುವ ಮಕ್ಕಳು, ಜೀವನದಲ್ಲಿ ಇದೇ ಮಹೋನ್ನತ ಆದರ್ಶ, ಇದಕ್ಕಿಂತ ಹೆಚ್ಚಿನ ಆದರ್ಶಗಳು ಜೀವನದಲ್ಲಿ ಇಲ್ಲ ಎಂದು ಸಹಜವಾಗಿ ತಿಳಿದುಕೊಳ್ಳಲು, ಅದರಂತೆ ಅನುಕರಿಸಲು ಪ್ರೇರಕವಾಗಿವೆ. ಯುವಕ-ಯುವತಿಯರು ಪ್ರೇಮ ಗೀತೆಗಳನ್ನು ಹಾಡುತ್ತ, ದೇಹದ ವಿವಿಧಾಂಗಗಳನ್ನು ಪ್ರದರ್ಶಿಸುತ್ತಾ, ಅಶ್ಲೀಲವಾಗಿ ವರ್ತಿಸುತ್ತಾ ಕುಣಿಯುವದನ್ನು ತೋರಿಸುತ್ತಾರೆ. ಬಟ್ಟೆ-ಬರೆಗಳನ್ನಂತೂ ಶರೀರದ ಕಾಮೋದ್ರೇಕಗೊಳಿಸುವ ಅಂಗಗಳನ್ನು ಅಸಹ್ಯ ರೀತಿಯಲ್ಲಿ ಪ್ರದರ್ಶಿಸಲೆಂದೇ ಹಾಕಿಕೊಳ್ಳುತ್ತಾರೇನೋ ಎನ್ನುವಂತೆ ಧರಿಸಿರುತ್ತಾರೆ. ಹದಿವಯಸ್ಸಿನ ಮಕ್ಕಳ ಮನಸ್ಸಿನಲ್ಲಿ ಅನೇಕ ರೀತಿ ಗೊಂದಲಗಳಿರುವಾಗ ಇಂತಹ ಪ್ರದರ್ಶನಗಳು ಅವರ ಮನಸ್ಸನ್ನು ಅಶ್ಲೀಲ ರೀತಿಯ ಆಕರ್ಷಣೆಗೆ ಒಳಗಾಗುವಂತೆ ಮಾಡಿ ಅವರು ಹಾದಿತಪ್ಪಲು ಪ್ರೇರಣೆ ನೀಡುತ್ತವೆ. ನಮ್ಮ ಯುವ ಪೀಳಿಗೆಯ ಶಕ್ತಿ-ಸಾಮರ್ಥ್ಯಗಳು, ವಿಚಾರ ಚಿಂತನೆಗಳು ಹೀಗೆ ಅಪವ್ಯಯವಾಗುತ್ತಿವೆಯಲ್ಲಾ, ದಿಕ್ಕುಗೆಟ್ಟು ಹೋಗುತ್ತಿವೆಯಲ್ಲಾ ಎಂದು ವ್ಯಥೆಯಾಗುತ್ತದೆ. ಇವರಿಷ್ಟು ಜನರು ಹಾಳಾಗುವುದಿರಲಿ, ಅದನ್ನು ವೀಕ್ಷಿಸುವ ಲೆಕ್ಕವಿಲ್ಲದಷ್ಟು ಮಕ್ಕಳು, ಯುವಕ-ಯುವತಿಯರು ಅವರಂತೆ ಉಡುಗೆ ತೊಡುವದು, ಕುಣಿಯುವದನ್ನು ನೋಡಿದರೆ

ಪ್ರಜ್ಞಾವಂತರಾದ ಯಾರಿಗಾದರೂ ಮೈ ಉರಿದು ಹೋಗುವುದರಲ್ಲಿ ಸಂಶಯವಿಲ್ಲ. ಪೀಳಿಗೆಯ ಬಹಳಷ್ಟು ಸಮಯ ಹಾಗೂ ಸಾಮರ್ಥ್ಯಗಳು ಇಂತಹ ದುಷ್ಪರಿಣಾಮ ಬೀರುವ ಟಿ.ವಿ.ಯ ಕಾರ್ಯಕ್ರಮಗಳನ್ನು, ಸಿನಿಮಾಗಳನ್ನು ನೋಡುವುದರಲ್ಲಿ ಅವರಂತೆ ಕುಣಿಯುವುದರಲ್ಲಿ ವ್ಯರ್ಥವಾಗುವುದಲ್ಲದೆ, ಅವರ ಅಭ್ಯಾಸ, ಕೆಲಸ-ಕಾರ್ಯಗಳು ಕುಂಠಿತವಾಗುವುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ದೂರದೃಷ್ಟಿ ಇಲ್ಲದ ಕೆಲವು ತಂದೆ-ತಾಯಿಗಳು ತಮ್ಮ ಪುಟ್ಟ ಮಕ್ಕಳು ಹಾಗೆ ಕುಣಿಯುವುದನ್ನು ಪ್ರೋತ್ಸಾಹಿಸಿ ನೋಡಿ ಆನಂದಿಸುವುದನ್ನು ನೋಡಿದರೆ ವಿಚಿತ್ರವೆನಿಸುತ್ತದೆ. ಕೆಲವು ಧಾರ್ಮಿಕ ಸಂಸ್ಥೆಗಳ ಕಾರ್ಯಕ್ರಮದಲ್ಲಿ 'ಚೋಲಿ ಕೆ ಪೀಚೇ' ಎಂಬ ಹಾಡಿನ ರೆಕಾರ್ಡ್ ಹಾಕಿ, ಆ ಹಾಡಿಗೆ ತಕ್ಕಂತೆ "ಮಗು ಕುಣಿಯುವಂತೆ" ಮಾಡುವ ಮಟ್ಟಕ್ಕೆ ಮೌಲ್ಯಗಳು ಕುಸಿದಿರುವುದು ನಮ್ಮ ದೇಶದ ದುರಂತವೆಂದೇ ಹೇಳಬೇಕು.

ಇಂದಿನ ಅನಪೇಕ್ಷಣೀಯ ಪರಿಸ್ಥಿತಿ ಇಲ್ಲವಾಗಿ, ಆಧುನಿಕ ತಂತ್ರಜ್ಞಾನದ, ವಿಜ್ಞಾನಗಳ ಫಲದ ಪ್ರಯೋಜನವನ್ನೂ ಪಡೆದು ದೇಶ ಅಭಿವೃದ್ಧಿಗೊಳ್ಳಬೇಕಾದರೆ ನಮ್ಮ ಜನತೆಯು ಭಾರತೀಯತೆಯನ್ನೂ ಉಳಿಸಿಕೊಂಡು ದೇಶದ ಔನ್ನತ್ಯ ಸಾಧಿಸಬೇಕಾದರೆ, ಅದಕ್ಕೆ ಪೂರಕವಾದ ಶಿಕ್ಷಣ ಕ್ರಮ ಅವಶ್ಯಕ. ಯಾವ ರೀತಿಯ ಕಾನೂನೂ, ಶಿಕ್ಷಣವೂ ಜನರ ನಡೆ-ನುಡಿಗಳನ್ನು ಅವ್ಯವಸ್ಥಿತ ಪರಿಸರದಲ್ಲಿ ಸುಧಾರಿಸಲು ಸಾಧ್ಯವಾಗಲಾರದು. ಮಕ್ಕಳು ಬಾಲ್ಯದಿಂದ ಹಿಡಿದು, ಹದಿವಯಸ್ಸು ಮುಗಿಸುವವರೆಗೂ ಹೆಚ್ಚಾಗಿ ಒಳ್ಳೆಯದನ್ನೇ ನೋಡಬೇಕು, ಒಳ್ಳೆಯದನ್ನೇ ಮಾಡಬೇಕು, ಒಳ್ಳೆಯದನ್ನೇ ಆಡಬೇಕು, ಒಳ್ಳೆಯದನ್ನೇ ಕೇಳಬೇಕು ಅಂತಹ ಶಿಕ್ಷಣ ವ್ಯವಸ್ಥೆ ಹಾಗೂ ಕಾರ್ಯಕ್ರಮಗಳನ್ನು ರೂಪಿಸಬೇಕು. ಅಲ್ಲದೆ ಮನೆಯ ಜನರೂ ಸಹ ಮಕ್ಕಳಿಗೆ ಒಳ್ಳೆಯ ಉದಾಹರಣೆಯಾಗಿ ಬದುಕಿ ಕುಟುಂಬದಲ್ಲಿ ಉತ್ತಮ ಪರಿಸರ ಉಂಟು ಮಾಡಬೇಕು. ಸಮಾಜದಲ್ಲಿ ನೆಮ್ಮದಿ, ಸಹಕಾರ, ಉತ್ತಮ ಚಟುವಟಿಕೆಗಳು ಇರುವಂತಹ ಸ್ಥಿತಿ ನೆಲಸಬೇಕು. ಉತ್ತಮ ಶಿಕ್ಷಣ ವ್ಯವಸ್ಥೆಯ ಮೂಲಕ ಭಾರತೀಯ ಮೌಲ್ಯಗಳ ಮಹತ್ವ ಮನೆ-ಮನೆಯನ್ನು ಸಕಾಲದಲ್ಲಿ ಮುಟ್ಟುವಂತಾಗಬೇಕು. ಇದರ ಜೊತೆಗೆ ಮಾಧ್ಯಮಗಳ ಮೇಲೆ ಸರಿಯಾದ ಹಿಡಿತಬೇಕು. ಮನಸ್ಸು ಕೆರಳಿಸದೆ ಅರಳಿಸುವಂತಹ, ಮನಸ್ಸು ಹೂವಿನ ಹಂದರವಾಗುವ ಕಾರ್ಯಕ್ರಮಗಳಿಗೆ ಮಾತ್ರ ಅವಕಾಶ ನೀಡಬೇಕು, ಕ್ವಚಿತ್ತಾಗಿ, ಕೆಡುಕಾದ ನಡೆ-ನುಡಿಯಿಂದಾಗುವ ದುಷ್ಪರಿಣಾಮಗಳನ್ನು ಎತ್ತಿ ತೋರಿಸುವಂತಹ ಕಾರ್ಯಕ್ರಮಗಳಿಗೂ ಆಸ್ಪದವಿರಬೇಕು. (ಅವೂ ಸಹ ಅತಿಯಾದ ವರ್ಣರಂಜಿತ ರೀತಿಯಲ್ಲಿರಬಾರದು) ಮಾಧ್ಯಮಗಳ ಕಾರ್ಯಕ್ರಮಕ್ಕೆ ಆಸ್ಪದ ನೀಡುವಾಗ ಆಯವ್ಯಯ ಅಂದರೆ ಹಣದ ಲಾಭದ ದೃಷ್ಟಿ ಮುಖ್ಯವಾಗಿರಬಾರದು.

ಮಕ್ಕಳು ಹಾಳಾದರೆ, ಏನು ಮಾಡಿದರೆ ತಾನೇ ದೇಶ ಉದ್ಧಾರವಾದೀತು? ಮಕ್ಕಳನ್ನು ಕಡೆಗಣಿಸಿ ದೇಶದ ಅಭಿವೃದ್ಧಿಗೆಂದು ಮಾಡಿದ ಯಾವ ಯೋಜನೆಯೂ ಫಲಕಾರಿಯಾಗಲು ಸಾಧ್ಯವಿಲ್ಲವೆಂಬುದನ್ನು ಪಾಲಕರು ರಾಜಕಾರಣಿಗಳು, ಅಧಿಕಾರಿಗಳು, ಸಮಾಜದ ಹಿತಚಿಂತಕರು, ಶಿಕ್ಷಣ ತಜ್ಞರು ಯೋಚಿಸಿ, ಉತ್ತಮ ವ್ಯಕ್ತಿತ್ವದ ಪೀಳಿಗೆ ರೂಪಿಸಲು ಆದ್ಯತೆ ಕೊಡಬೇಕು. ಮುಳ್ಳಿನ ಗಿಡನೆಟ್ಟು ಮಾವಿನ ಮರ ಬೆಳೆಯಲೆಂದು ಆಶಿಸುವುದು ಮೂರ್ಖತನದ ಪರಮಾವಧಿಯಾಗುವುದಿಲ್ಲವೆ?

■

## ಅನುಬಂಧ

**(ಧಾರವಾಡ ಆಕಾಶವಾಣಿ–ಪುಸ್ತಕ ಪರಿಚಯ– ಪ್ರೊ. ಎ.ಎ. ಜೋಶಿ)**

ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿಯವರು ವಿವಿಧ ವಿಷಯಗಳ ಕುರಿತು ಹರಿದ ವಿಚಾರ ಲಹರಿಯ ಕೃತಿ – ರಚನಾತ್ಮಕ ಚಿಂತನೆಗಳು. ಈ ಹಿನ್ನೆಲೆ ಸಾಮಾನಿಕ ಕಳಕಳಿ ಇದೆ.

ಸಾಹಿತ್ಯದ ಗುರಿ ಲೇಖನದಲ್ಲಿ ಲೇಖನಿ ಖಡ್ಗಕ್ಕಿಂತ ಹರಿತವಾಗಿ ಪರಿವರ್ತನೆಗೆ ಮಾರ್ಗ ಮಾಡಿಕೊಡಬೇಕೆಂದು ಬಯಸುವರು ಮನಸ್ಸನ್ನು ವಿಕೃತಗೊಳಿಸುವ ಅಶ್ಲೀಲ ಸಾಹಿತ್ಯ, ಸಮಾಜದ ಅಧಃಪತನಕ್ಕೆ ಕಾರಣವಾಗುತ್ತದೆ...... ಒಳ್ಳೆಯದನ್ನೂ ಸಾಧಿಸಿಯೇ ತೀರುತ್ತೇನೆ ಅನ್ನುವ ಹಂಬಲ ಬೆಳೆಯಬೇಕೆಂಬ ವಿಚಾರ 'ಛಲ'. ಪ್ರಬಂಧದ ಹೂರಣ. "ಛಲ" ಸಾತ್ವಿಕವಾಗಿರಬೇಕು. ಪರಪೀಡನೆಯ ಉದ್ದೇಶ ಹೊಂದಿರಬಾರದೆಂದು ಲೇಖಕಿ ಎಚ್ಚರಿಸುವರು. "ಗೃಹಣೀ ಗೃಹಮುಚ್ಯತೆ" ಎಂಬ ಪ್ರಬಂಧದಲ್ಲಿ, ಕುಟುಂಬ ಜೀವನದಲ್ಲಿ ಗೃಹಣಿಯ ಸ್ಥಾನವನ್ನು ಗುರುತಿಸುವ ಹವಣಿಕೆ ಇದೆ. ಗೃಹಿಣಿ ಕುಟುಂಬದ ಆಗು ಹೋಗುಗಳಿಗೆ, ಬೇಕು ಕೆಡುಕುಗಳಿಗೆ, ಶಾಂತಿ–ಅಶಾಂತಿಗಳಿಗೆ ಹೇಗೆ ಕಾರಣಳಾಗುತ್ತಾಳೆಂದು ಇಲ್ಲಿ ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ.

ಮಹಿಳೆಯರಿಗೆ ನೇರವಾಗಿ ಸಂಬಂಧಿಸಿದ ನಾಲ್ಕಾರು ಚಿಂತನೆಯ ಎಳೆಗಳು, ಈ ಸಂಕಲನದಲ್ಲಿ ಸೇರಿವೆ. "ಮಹಿಳಾ ಪರ ಚಳುವಳಿ" "ಪತಿತ ಪಾವನೆಯರು" "ಉದ್ಯೋಗಸ್ತಮಹಿಳೆ–ಕೌಟುಂಬಿಕ ಹಿತಾಸಕ್ತಿ– ಇಂತಹ ಪ್ರಬಂಧಗಳಲ್ಲಿ ಮಹಿಳೆಯು ಎದುರಿಸುತ್ತಿರುವ ವಿವಿಧ ಸಮಸ್ಯೆಗಳ ವಿಶ್ಲೇಷಣೆ ಇದೆ. ವೇಶ್ಯಾವಾಟಿಕೆಗಳ ನಿರ್ಮೂಲನಗೆ ಪ್ರತಿಪಾದಿಸುತ್ತಾ ಲೇಖಕಿ ಹೇಳಿರುವ ಮಾತು ಧಾರ್ಮಿಕ ಸುಧಾರಿತ ಸಮಾಜಕ್ಕೆ ಸವಾಲಾಗಿರುವ, ಮಹಿಳೆಯರ ಗೌರವಕ್ಕೆ ಕುಂದು ತರುವ ಈ ಸ್ಥಿತಿ ಆದಷ್ಟು ಬೇಗ ಹಿಡಿತಕ್ಕೆ ಬರಬೇಕು" ಮತ್ತು ಮಹಿಳೆಯರಿಗೆ ಅಸಹಾಯಕ ಪರಿಸ್ಥಿತಿ ಇಲ್ಲವಾಗಬೇಕು. ಆಗ ಮಾತ್ರ ಪುರುಷರಿಗೂ ಗೌರವ; ಮಹಿಳೆಯರಿಗೂ ನೆಮ್ಮದಿ.

"ರಾಷ್ಟ್ರೀಯ ಭಾವೈಕ್ಯತೆ", "ರಾಷ್ಟ್ರಪ್ರೇಮ", "ಪ್ರಜಾಪ್ರಭುತ್ವದ ಪ್ರಜೆಗಳು ದೇಶದ

ಅಭಿವೃದ್ಧಿ"- ಈ ಪ್ರಬಂಧಗಳು ಲೇಖಕಿಯ ಜಾಗೃತ ಪ್ರಜ್ಞೆಯನ್ನು ಮತ್ತು ದೇಶಭಕ್ತಿಯನ್ನು ಬಿಂಬಿಸುತ್ತವೆ. "ರಾಷ್ಟ್ರಪ್ರೇಮ ಪ್ರತಿಯೊಬ್ಬರಲ್ಲೂ ಇರಲೇಬೇಕಾದ ಒಂದು ಶ್ರೇಷ್ಠಗುಣ" ಎಂದು ಬರೆಯುವ ಲೇಖಕಿ ದೇಶಪ್ರೇಮ, ಕರ್ತವ್ಯ ಪ್ರಜ್ಞೆ, ಪರಿಶ್ರಮ, ಪ್ರಾಮಾಣಿಕತೆ- ಈ ಮೌಲ್ಯಗಳು ನಾಗರಿಕರಲ್ಲಿ ಬೆಳೆದಾಗ ಮಾತ್ರ ದೇಶದ ಉದ್ಧಾರ ಸಾಧ್ಯ ಎಂದು ಪ್ರತಿಪಾದಿಸುವರು.

"ಮಕ್ಕಳಲ್ಲಿ ಪ್ರೀತಿ-ಜಗತ್ತಿನಲ್ಲಿ ಶಾಂತಿ" - ಇಲ್ಲಿಯ ಒಂದು ಮೌಲಿಕ ಬರಹ, "ಇಂದಿನ ಮಕ್ಕಳು ನಾಳಿನ ನಾಗರಿಕರಾಗಿದ್ದು, ಒಳ್ಳೆಯ ಜಗತ್ತಿನ ನಿರ್ಮಾಣಕ್ಕೆ ಮನೆಯೆ ಮೊದಲ ಮೆಟ್ಟಿಲು ಎಂದು ನಂಬಿರುವ ಲೇಖಕಿ, ಮಕ್ಕಳಿಗೆ ಮನೆಯಲ್ಲಿ, ಶಾಲೆಯಲ್ಲಿ, ಸಮಾಜದಲ್ಲಿ ಒಳ್ಳೆಯ ಪ್ರೋತ್ಸಾಹಕರವಾದ ಸ್ನೇಹಮಯವಾದ, ಉತ್ಸಾಹ ಮೂಡಿಸುವ ಸನ್ನಿವೇಶ ಅವಶ್ಯಕವೆಂದು ಸಾರುತ್ತದೆ.

ನಮ್ಮ ಸಮಾಜ ಜೀವನ ಕಲುಷಿತವಾಗಿದ್ದು, ಅದು ಪರಿಶುದ್ಧವಾಗಿರಬೇಕೆಂಬ ಕಳಕಳಿಯನ್ನು ಪ್ರಸ್ತುತ ಸಂಕಲನದ ಬರಹದಲ್ಲಿ ಕಾಣಬಹುದು. ಕಳಕಳಿಯ ಜೊತೆಗೆ, ವೈಚಾರಿಕ ಪ್ರಜ್ಞೆಯನ್ನು ಬೆರೆಸಿರುವುದರಿಂದ ಸಾಮಾಜಿಕ ಅನಿಷ್ಟಗಳಿಗೆ ಪರಿಹಾರ ನೀಡುವಲ್ಲಿ ಲೇಖಕಿ ಯಶಸ್ವಿಯಾಗಿದ್ದಾರೆ. ಇಲ್ಲಿಯ ಬರಹಗಳು ಆಕಾರದಲ್ಲಿ ಚಿಕ್ಕವಾಗಿದ್ದರೂ ವಿಷಯ ನಿರೂಪಣೆಯಲ್ಲಿ ಚೊಕ್ಕವಾಗಿವೆ. ಸಮಸ್ಯೆಗಳನ್ನು ತೆರೆದ ಮನಸ್ಸಿನಿಂದ ವಿಶ್ಲೇಷಿಸುವ ಲೇಖಕಿಗೆ ಅಭಿನಂದನೆಗಳು.

ಪರಿಚಯಿಸಿದವರು
- ಪ್ರೊ. ಎ.ಎ. ಜೋಶಿ
"ಸುಹಾಸ" ೨ನೇ ಕ್ರಾಸ್
ಮಂಜುನಾಥಪುರ
ಧಾರವಾಡ - ೫೮೦ ೦೦೭.

# ಅನುಬಂಧಗಳು

ಅನುಬಂಧ –೧– ಅಪ್ರಕಟಿತ ಬರಹಗಳು

೧. ನನ್ನ ಬಾಳ ಸಂಗಾತಿ

೨. ನಂಬಿ ಕರೆದರೆ

೩. ಈ ಅದೃಷ್ಟ ಯಾರಿಗುಂಟು ಯಾರಿಗಿಲ್ಲ

೪. ಮುಡಿಗೆ ಹೂಚೆಂದ ಬರಹಕ್ಕೆ ಗಾದೆ

೫. ಸ್ತ್ರೀವಾದಿ ಚಳುವಳಿ ಮತ್ತು ಸುಖೀ ಕುಟುಂಬ

೬. ನಾನೇಕೆ ಬರೆಯುತ್ತೇನೆ

ಅನುಬಂಧ – ೨ ಸ್ಮರಣಾಂಜಲಿ

ಅನುಬಂಧ – ೩ ಶ್ರದ್ಧಾಂಜಲಿ..........

## ಅನುಬಂಧ- ೧

# ನನ್ನ ಬಾಳಸಂಗಾತಿ

-ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ

ಸುಮಾರು ನಲವತ್ತು ವರುಷಗಳ ನಮ್ಮ ಬದುಕಿನ ಸಿಂಹಾವಲೋಕನವನ್ನು ಮನಸ್ಸಿನಲ್ಲಿಯೇ ಮಾಡಿದಾಗ, ನೋವು-ನಲಿವುಗಳ, ಏರಿಳಿತಗಳ, ಸುಖ-ದುಃಖಗಳ 'ಯಾದೋಂಕಿ ಬಾರಾತ್' ನನ್ನ ಕಣ್ಣು ಮುಂದೆ ಹಾದುಹೋಯಿತು.

ಡಾ. ವೃ. ಸ್ವಾಮಿಯವರ ಬದುಕು ತೆರೆದಿಟ್ಟ ಪುಸ್ತಕದಂತೆ ಮುಚ್ಚು ಮರೆಯಿಲ್ಲದೆ, ಬಿಚ್ಚಿಟ್ಟ ಜೀವನ. ಕಪಟ-ವಂಚನೆಗಳಿಲ್ಲ; ಮರೆಮೋಸಗಳಿಲ್ಲ; ಕುತಂತ್ರಗಳನ್ನು ಮಾಡಲಿಕ್ಕೇ ಬಾರದ ವ್ಯಕ್ತಿತ್ವ, ಸಾಮಾಜಿಕ ಜೀವನದಲ್ಲಿಯೇ ತಮ್ಮನ್ನು ಹೆಚ್ಚಾಗಿ ತೊಡಗಿಸಿಕೊಂಡವರು. ಕುಟುಂಬ, ಮನೆ, ಅವರಿಗೆ ಬೇಕೆನಿಸಿದಾಗ ಒಂದು ನೆಲೆಯಷ್ಟೇ! ವಿದ್ಯಾಭ್ಯಾಸದ ಸಲುವಾಗಿ ಹತ್ತು ಹನ್ನೊಂದನೆಯ ವಯಸ್ಸಿನಿಂದಲೇ 'ಮನೆ'ಯಿಂದ ಹೊರಗೆ ಬದುಕಿದ ಅವರು, ಸಮಾಜದೊಡನೆ ಕೂಡಿ ಬೆಳೆದವರು. ಅವರ ಜೀವನದ ಬಹಳಷ್ಟು ಆಗು-ಹೋಗುಗಳಿಗೆ, ಸೋಲು-ಗೆಲುವುಗಳಿಗೆ ಸಮಾಜವೇ ಹಿನ್ನೆಲೆ. ಹೀಗಾಗಿ ಅವರನ್ನು 'ಕುಟುಂಬ ಜೀವಿ' ಎನ್ನುವುದಕ್ಕಿಂತ 'ಸಮಾಜ ಜೀವಿ' ಎಂದರೆ ಹೆಚ್ಚು ಸೂಕ್ತವೆನಿಸುತ್ತದೆ.

ಹೆಂಡತಿ-ಮಗನ ಒಳಿತನ್ನು ಅಪೇಕ್ಷಿಸಿದರೂ, ಅವರಿಗಾಗಿ ಹೆಚ್ಚು ಚಿಂತೆ ಮಾಡಿದರೆ, ಕಾಳಜಿ ವಹಿಸಿದರೆ ಏನೋ ತಪ್ಪು ಮಾಡಿದಂತೆ ಅಥವಾ ಸ್ವಾರ್ಥ ಸಾಧಿಸಿದಂತೆ ಎಂಬ ಭಾವನೆ ಅವರಿಗಿರಬಹುದೆಂದು ನನಗೆಷ್ಟೋ ಬಾರಿ ಅನ್ನಿಸಿದೆ. ಸಂಸಾರದ ಭವಿಷ್ಯಕ್ಕಾಗಿ, ಒಳಿತಿಗಾಗಿ ಅವರೆಂದೂ ತಲೆಕೆಡಿಸಿಕೊಂಡವರಲ್ಲ. ಪ್ರಾರಂಭದ ಜೀವನದಲ್ಲಿ ಸಂಸಾರದ ಬಗೆಗೆ, ಅದನ್ನು ಬಹು ಚೆನ್ನಾಗಿ ಮಾಡಿಕೊಳ್ಳುವ ಬಗ್ಗೆ ನಾನು ಎಷ್ಟೋ ಕನಸು ಕಟ್ಟಿಕೊಂಡಿದ್ದೆ. ಆದರೆ ಆ ಬಗ್ಗೆ ಇವರಿಗೆ ಮಾತಾಡಲೂ ಸಹ ಆಸಕ್ತಿ ಇರುತ್ತಿರಲಿಲ್ಲ. ಆ ಬಗೆಗೆ ಇವರಿಗೆ 'ಕನಸು'ಗಳೇ ಇರಲಿಲ್ಲವೇನೋ ಎನ್ನಿಸುತ್ತದೆ. ಬಸವಣ್ಣನವರ,

'ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ
ಎನ್ನ ಒಡಲಿಂಗೆ, ಎನ್ನ ಒಡವೆಗೆಂದು, ಎನ್ನಮಡದಿ ಮಕ್ಕಳಿಗೆಂದು
ಕುದಿದೆನಾದಡೆ, ಎನ್ನ ಮನಕ್ಕೆ ಮನವೇ ಸಾಕ್ಷಿ
ನಿಮ್ಮ ನಿಲವಿಂಗೆ ಕುದಿವೆನಲ್ಲದೆ, ಎನ್ನ ಒಡಲವಸರಕ್ಕೆ ಕುದಿದೆನಾದಡೆ
ತಲೆದಂಡ ಕೂಡಲಸಂಗಮದೇವಾ ॥

ಎಂದು ಬಸವಣ್ಣನಿಗೆ ತಮ್ಮನ್ನು ಒಪ್ಪಿಸಿಕೊಂಡು ಈ ಆದರ್ಶದಂತೆ ಬಾಳುತ್ತಿದ್ದಾರೆ ಎಂದು ನನಗೆ ಅನ್ನಿಸಿದೆ. 'ನಾಲ್ಕು ಜನರಿಗೆ ಬೇಕಾದವನಾಗಿ, ಬಾಳಬೇಕು, ಸಮಾಜದ ಋಣ ತೀರಿಸಬೇಕು, ನನ್ನ ಬದುಕು ರೂಪಿತವಾದುದೇ ಸಮಾಜದಿಂದ' ಎನ್ನುತ್ತಾರೆ.

ವಿದ್ಯಾರ್ಥಿಗಳು, ಬಡವರು, ಹಳ್ಳಿಗರು, ದಡ್ಡರು, ಮುದುಕರು, ಅಸಹಾಯಕರು ಎಂದರೆ ಇವರಿಗೆ ಹೆಚ್ಚಿನ ಕಾಳಜಿ. ಜೀವನದ ಪ್ರಾರಂಭದ ಬಹು ಸಮಯವನ್ನೆಲ್ಲಾ ಇವರಿಗಾಗಿಯೇ ವಿನಿಯೋಗಿಸಿದರೆನ್ನಬಹುದು. 'ಸಮಾಜ ನನ್ನನ್ನೂ ಕೈಹಿಡಿದು ಎತ್ತದಿದ್ದರೆ, ನಾನು ಎಲ್ಲೋ ಹಳ್ಳಿಯಲ್ಲಿ ಅನಾಮಧೇಯನಾಗಿ ಬದುಕುತ್ತಿದ್ದೆ. ಸಮಾಜದಿಂದ ಮುಂದೆ ಬಂದ ನಾನು ಸಮಾಜಕ್ಕೆ ಕೈಲಾದುದನ್ನು ಮಾಡಬೇಕು ಎಂಬ ಪ್ರಜ್ಞೆ' ಇವರಲ್ಲಿ ಸದಾ ಜಾಗೃತ. ಅವರು ಮಾಡಿದುದೆಲ್ಲವನ್ನು ಪ್ರತಿಫಲಾಪೇಕ್ಷೆ ಇಲ್ಲದೆ ಮಾಡಿದ್ದಾರೆ. ಆದರೆ ಇವರಿಂದ ಅನುಕೂಲ ಪಡೆದುಕೊಂಡವರು ಕೃತಘ್ನರಾಗಿ ನಡೆದುಕೊಂಡ ಉದಾಹರಣೆಗಳು ಹೆಚ್ಚಾದಾಗ, ಈಚೆಗೆ ಒಮ್ಮೊಮ್ಮೆ ನೊಂದುಕೊಳ್ಳುವರು. ಆಗಲೂ 'ನಾನು ಹಾಗೆ ಮಾಡಿದೆ, ಹೀಗೆ ಮಾಡಿದೆ' ಎಂದು ಹೇಳಿಕೊಳ್ಳುವುದು ಬಹಳ ಕಡಿಮೆ. ಹಾಗೆ ಅನ್ನುವವಳು ನಾನು ಅಷ್ಟೆ ಅವರು ಒಂದಲ್ಲ ಒಂದು ರೀತಿಯಲ್ಲಿ ಸದಾಕಾಲವೂ ಸಮಾಜ ಸೇವೆಯನ್ನೂ ಅತ್ಯಂತ ಸಮರ್ಪಣಾಭಾವದಿಂದ ಮಾಡುತ್ತ ಬಂದಿದ್ದಾರೆ. ಜಗತ್ತೆಲ್ಲ ಸುಖದಿಂದಿರಬೇಕು, ಜನರೆಲ್ಲ ಒಬ್ಬರಿಗೊಬ್ಬರು ಅನ್ಯೋನ್ಯವಾಗಿ, ಸಹಕಾರದಿಂದ ಬದುಕಬೇಕೆಂಬುದು ಇವರ ಆಸೆ. ಇವರಲ್ಲಿ ತಾರತಮ್ಯಗಳು ಕಡಿಮೆ. ಕಡಿಮೆ ಏನು? ಇಲ್ಲವೆಂದೇ ಹೇಳಬೇಕು. ತಮ್ಮ ಮೊಮ್ಮಗಳನ್ನೂ 'ಪಾಪು' ಎಂದು ಕರೆದಂತೆ ಕೆಲಸದವರ ಮಕ್ಕಳನ್ನೂ 'ಪಾಪು' ಎಂದೇ ಕರೆಯುವರು.

ಪ್ರತಿಷ್ಠಿತ ಸಾಹಿತಿಯೊಬ್ಬರು ಮನೆಗೆ ಬಂದಾಗ ಆತ್ಮೀಯತೆಯಿಂದ, ಸಲುಗೆಯಿಂದ ಮಾತನಾಡಿದಂತೆಯೇ, ಕೈದೋಟದ ಕೆಲಸಕ್ಕೆ ಬಂದ ಕೂಲಿಯವನೊಡನೆಯೂ ಮಾತನಾಡುತ್ತಾರೆ. ಮಾನವೀಯ ದೃಷ್ಟಿಯಿಂದ ಅವರಿಬ್ಬರಲ್ಲಿ ಅವರಿಗೆ ಭೇದವೇ ಕಾಣುವುದಿಲ್ಲ. ಆ ಬಗ್ಗೆ ನಾನು ಅವರೊಡನೆ ಎಷ್ಟೋ ಬಾರಿ ಚರ್ಚಿಸಿದುದುಂಟು. ವಾದ ಮಾಡಿಯೂ ಇದ್ದೇನೆ. 'ಇದು ಒಂದು

ಆದರ್ಶದ ಗುಣ ಹೌದು. ಆದರೆ ಲೌಕಿಕ ಜೀವನದಲ್ಲಿ ಇಂತಹ ನಡೆ ಅನೇಕ ಸಮಸ್ಯೆಗಳಿಗೆ ಎಡೆ ಮಾಡಿಕೊಡುತ್ತದೆ. ಇದನ್ನು ಕೆಳಮಟ್ಟದ ಜನ ದುರುಪಯೋಗಮಾಡಿಕೊಳ್ಳುತ್ತಾರೆ. ಮೇಲ್ಮಟ್ಟದ ಜನ ನಿಮ್ಮ ಬಗ್ಗೆ 'ಅವ್ಯವಹಾರಿ' ಎಂದು ಕೊಳ್ಳುತ್ತಾರೆ. ಅಗ್ಗವಾಗಿ ಮಾತನಾಡುತ್ತಾರೆ' ಎಂದು ಎಷ್ಟೋ ಬಾರಿ ಸಮಾಜದ ಜನರ ಭಾವನೆಗಳತ್ತ ಅವರ ಮನಸ್ಸನ್ನು ತಿರುಗಿಸಲು ಪಟ್ಟ ಶ್ರಮವೆಲ್ಲ ವ್ಯರ್ಥವಾಗಿದೆ. ಅವರಿಗೆ ಈ 'ಸ್ಟ್ಯಾಂಡರ್ಡ್'ಗಳ ಬಗ್ಗೆ ಮೆಚ್ಚುಗೆ ಇಲ್ಲವಾಗಿ, ನಮಗೆ ಅದರಿಂದಾಗುವ ಪರಿಣಾಮಗಳನ್ನು ಎದುರಿಸದೇ ವಿಧಿ ಇಲ್ಲವಾಗಿದೆ.

ಬಡವರ, ಮುದುಕರ, ಹಳ್ಳಿಗರ, ಕಷ್ಟದಲ್ಲಿರುವವರ ಬಗ್ಗೆ ಇವರಿಗೆ ಎಲ್ಲಿಲ್ಲದ ಕಕ್ಕುಲಾತಿ. ಅವರಿಗೆ ತಮ್ಮ ಕೈಲಾದ ಸಹಾಯ ಮಾಡಬೇಕೆಂಬುದು ಇವರ ಸ್ವಭಾವ. ಅವರುಗಳ ಕಷ್ಟಕಂಡ ಆ ಕ್ಷಣದಲ್ಲಿ ಇವರಿಗೆ ತಮ್ಮ ವೈಯಕ್ತಿಕ ತೊಂದರೆಗಳೆಲ್ಲ ಮರೆತು ಹೋಗುತ್ತವೆ. ಅವರ ಕಷ್ಟಗಳೇ ತಮ್ಮ ಕಷ್ಟಗಳೆಂಬಂತೆ, ಅವುಗಳನ್ನೂ ಪರಿಹರಿಸುವ ಬಗ್ಗೆ ಪರದಾಡಿದ ಲೆಕ್ಕವಿಲ್ಲದಷ್ಟು ಘಟನೆಗಳನ್ನು ಅಸಹಾಯಕಳಾಗಿ ಗಮನಿಸಿದ್ದೇನೆ. ಇವರ ಈ ದೌರ್ಬಲ್ಯವನ್ನು ಕಂಡುಕೊಂಡ ಅನೇಕ ಮಂದಿ ದುರುಪಯೋಗ ಪಡಿಸಿಕೊಂಡಿರುವುದೂ ಉಂಟು; ಮೋಸ ಮಾಡಿರುವುದೂ ಉಂಟು.

**ಬಸ ರಿಕ್ಷಚಾಲಕನಿಗೆ ನೆರವು :**

ನಮ್ಮ ವಿವಾಹವಾದ ಹೊಸದರಲ್ಲಿ ನಮ್ಮವೇ ಅನೇಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲಾಗಿರಲಿಲ್ಲ. ಬಳ್ಳಾರಿಯಲ್ಲಿ ಮನೆ ಮಾಡಿದ್ದೆವು. ಒಮ್ಮೆ ಸೈಕಲ್ ರಿಕ್ಷಾದಲ್ಲಿ ಬಂದಾಗ ಅದನ್ನು ನಡೆಸುವವನು ಪರಿಚಯವಾದ. ಇವರೊಡನೆ ಮಾತನಾಡುತ್ತಲೇ ಇವರ ಸ್ವಭಾವವನ್ನು ಅವನು ಅರ್ಥಮಾಡಿಕೊಂಡ. ಅವನ ಗುಡಿಸಲು ನಮ್ಮ ಮನೆಗೆ ಸಮೀಪದಲ್ಲೇ ಇತ್ತು. ಆಗಾಗ್ಗೆ ಬರತೊಡಗಿದ. ತನ್ನ ಕಷ್ಟ-ಸುಖ ಹೇಳಿಕೊಳ್ಳುತ್ತಿದ್ದ. ಕೊನೆಗೆ ತನಗೆ ಗುಡಿಸಲು ಹಾಕಿಕೊಳ್ಳಲು ಸಹಾಯ ಮಾಡಬೇಕಾಗಿಯೂ, ದಿನಾ ಸ್ವಲ್ಪ ಸ್ವಲ್ಪ ಕೊಟ್ಟು (ರಿಕ್ಷಾ ಬಾಡಿಗೆಯ ಹಣದಿಂದ)ತೀರಿಸುವುದಾಗಿಯೂ ಗಂಟುಬಿದ್ದ. ನಮಗೇ ಸಾಕಷ್ಟು ತೊಂದರೆಗಳಿದ್ದರೂ, ನಾನೆಷ್ಟು ಹೇಳಿದರೂ ಕೇಳದೆ ಅವನಿಗೆ ಎಂಟುನೂರು ರೂಪಾಯಿ ಕೊಟ್ಟರು! ಅಂದರೆ ಈಗ್ಗೆ ಮೂವತ್ತೊಂಬತ್ತು ವರ್ಷಗಳ ಹಿಂದಿನ ಮಾತು. ನೂರು ರೂಪಾಯಿಗೆ ಒಂದು ತೊಲ ಚಿನ್ನವಿದ್ದ ಕಾಲವದು. ಸುಮಾರು ಎಂಟು ತೊಲ ಬಂಗಾರದ ಬೆಲೆ (ಈಗಿನ ಲೆಕ್ಕದಲ್ಲಿ ಕನಿಷ್ಠ ರೂ. ೪೦,೦೦೦ಗಳು) ಏನೂ ಕೈಲಿಲ್ಲದ ಅವನಿಗೆ, ಯಾವ ಆಧಾರವೂ ಇಲ್ಲದೆ ನಮ್ಮ ಅನೇಕ ಅವಶ್ಯಕತೆಗಳನ್ನು ಬದಿಗಿರಿಸಿ ಕೊಟ್ಟುಬಿಟ್ಟರು. ಆ ಕಾಲದಲ್ಲಿ ಡಾ. ವ್ಯ ಸ್ವಾಮಿಯವರಿಗೆ

ರೂ.೧೨೫, ನನಗೆ ರೂ.೧೦೦ ಸಂಬಳ ಬರುತ್ತಿತ್ತು. ಹಣ ಪಡೆದಂದಿನಿಂದ ಅವನ ಪತ್ತೆಯೇ ಇಲ್ಲ. ಅಕಸ್ಮಾತ್ ದೂರದಲ್ಲಿ ಕಾಣಿಸಿದರೂ, ರಿಕ್ಷಾವನ್ನು ಬೇರೆ ರೋಡಿಗೆ ತಿರುಗಿಸಿಕೊಂಡು ಹೋಗಿಬಿಡುತ್ತಿದ್ದ. ಇಂತಹ ಘಟನೆಗಳನ್ನು ಬರೆಯುತ್ತಾ ಹೋದರೆ ಐದುನೂರು ಪುಟದ ಪುಸ್ತಕವಾದರೂ ಮುಗಿಯಲಾರದು. ನನ್ನ ಪುಣ್ಯಕ್ಕೆ ಈಚೆಗೆ ಇವರಿಗೆ ಜನರ ಮೋಸಗಾರಿಕೆ, ವಂಚಕತನ ಅರ್ಥವಾಗಿದೆ; ಆಗುತ್ತಿದೆ. ಮೊದಲಿನ ಆ ಧಾರಾಳತನ, ಸುಲಭವಾಗಿ ಜನರನ್ನು ನಂಬುವ ಸ್ವಭಾವ ಎಷ್ಟೋ ಕಡಿಮೆಯಾಗಿದೆ. ಇದು ನನಗೆಷ್ಟೋ ಸಂತೋಷ ಕೊಟ್ಟಿದೆ.

**ಹೌಸಿಂಗ್ ಬೋರ್ಡ್ ವಿಚಾರ :**

ಸಮಾಜದ ಋಣ ತೀರಿಸಬೇಕಂಬ ಭಾವನೆ ಇವರದು. ಜೊತೆಗೆ, ಸ್ವತಃ ಜೀವನದಲ್ಲಿ ಕಷ್ಟ ಅನುಭವಿಸಿದ ಇವರಿಗೆ ಬೇರೆಯವರ ಕಷ್ಟ ನೋಡಲಾಗುವುದಿಲ್ಲ. ಎಲ್ಲರೂ ಸುಖವಾಗಿರಬೇಕೆಂಬುದು ಅವರ ಆಸೆ. ಆದುದರಿಂದ ತಮ್ಮ ಕೈಲಾದ ಸಹಾಯವನ್ನೂ ಕಷ್ಟದಲ್ಲಿದ್ದವರಿಗೆ ಮಾಡುತ್ತಾ ಬಂದಿದ್ದಾರೆ. ಧಾರವಾಡಕ್ಕೆ ಬಂದ ಮೇಲೆ ಮನೆ ಕಟ್ಟಿಸಬೇಕೆಂಬ ನನ್ನ ಒತ್ತಾಯದಿಂದ, ನಾನೇ ಕೂಡಿಟ್ಟ ಹಣದಿಂದ ಒಂದು ಸೈಟ್ ಕೊಂಡೆವು. ಆದರೆ ಮನೆ ಕಟ್ಟಿಸಲು ಹಣವೆಲ್ಲಿಂದ ಬರಬೇಕು" ಆಗಿನ ಕಾಲದಲ್ಲಿ ಪಗಾರಬಹಳ ಕಡಿಮೆ ಇರುತ್ತಿತ್ತು. ಇಬ್ಬರೂ ದುಡಿಯುತ್ತಿದ್ದೇವೇನೋ ನಿಜ. ಆದರೆ ಮನೆತುಂಬ ಬಂಧು ಬಾಂಧವರು ಓದುವ ಮಕ್ಕಳು, ಅಲ್ಲದೆ ಊರಿನಲ್ಲಿರುವ ಬಂಧುಗಳಿಗೂ ಸಹಾಯ ಮಾಡಬೇಕಾಗುತ್ತಿತ್ತು. ಹಾಗಾಗಿ ಮನೆ ಕಟ್ಟಿಸಲು ಸಾಲ ತೆಗೆದುಕೊಳ್ಳದೆ ವಿಧಿ ಇರಲಿಲ್ಲ.

ಆಗಿನ ಕಾಲದಲ್ಲಿ, ಧಾರವಾಡದಲ್ಲಿ ಹೌಸಿಂಗ್ ಬೋರ್ಡ್ ಮುಂತಾದ ಮನೆ ಕಟ್ಟಲು ಸಾಲ ಕೊಡುವ ಯಾವ ಸಂಸ್ಥೆಗಳೂ ಇರಲಿಲ್ಲ. ಅದೇ ಸಮಯಕ್ಕೆ ಸರಿಯಾಗಿ ಬೆಂಗಳೂರಿನಲ್ಲಿ ಕೋ-ಆಪರೇಟಿವ್ ಹೌಸಿಂಗ್ ಬೋರ್ಡಿನ ಕೇಂದ್ರ ಕಚೇರಿಯಲ್ಲಿ ಕಾನೂನು ಸಲಹೆಗಾರರಾಗಿದ್ದ ಇವರ ಹಳೆಯ ವಿದ್ಯಾರ್ಥಿಯೊಬ್ಬರು, ರೈಲಿನಲ್ಲಿ ಸಿಕ್ಕಾಗ, ಅಧ್ಯಾಪಕರು ಮನೆ ಕಟ್ಟಿಕೊಳ್ಳಲು ಸಹಾಯಕವಾಗುವಂತೆ ಹೌಸಿಂಗ್ ಬೋರ್ಡ್‌ವೊಂದನ್ನು ಧಾರವಾಡದಲ್ಲಿ ಸ್ಥಾಪಿಸುವುದಾದರೆ ಸಾಲ ದೊರೆಯುವಂತೆ ಮಾಡುವುದಾಗಿ ಹೇಳಿದರಂತೆ. ಆಗ ಇವರಿಗೆ ಇಂತಹ ಒಂದು ಸಂಸ್ಥೆ ಇದ್ದರೆ, ವಿಶ್ವವಿದ್ಯಾಲಯದ ನೌಕರರಿಗೆಲ್ಲ ವಾಸಕ್ಕೆ ತಮ್ಮದೇ ಆದ ಮನೆ ಕಟ್ಟಿಕೊಳ್ಳಲು ಸಹಾಯವಾದೀತು ಎನ್ನಿಸಿತು (ಏಕೆಂದರೆ ೧೯೬೧-೬೫ರ ಸಮಯದಲ್ಲಿ ಸಂಬಳ ಈಗಿನಂತೆ ಇರಲಿಲ್ಲ. ತುಂಬ ಕಡಿಮೆ ಇತ್ತು. ಹಾಗಾಗಿ ಮನೆ ಕಟ್ಟಿಸುವ ಗೊಡವೆಗೇ ಯಾರೂ ಹೊಗುತ್ತಿರಲಿಲ್ಲ) ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಆಗಿದ್ದ ಶ್ರೀ ಎಸ್.ಎಸ್. ಒಡೆಯರ ಹಾಗೂ ಆಫೀಸ್ ಸುಪರಿಟೆಂಡೆಂಟ್

ಶ್ರೀ ಸಿರಿಯಣ್ಣನವರಲ್ಲಿ ಈ ವಿಷಯ ಪ್ರಸ್ತಾಪಿಸಿದರು. ಆದರೆ ಸಿರಿಯಣ್ಣನವರು, 'ನಮ್ಮವೇ ನೀಗದಷ್ಟು ಕೆಲಸಗಳಿವೆ ಮತ್ತೆ ಇದನ್ನೂ ಕಟ್ಟಬೇಡಿಸಾಹೇಬ್ರೆ' ಎಂದು ಬಿಟ್ಟರಂತೆ. ಸಿರಿಯಣ್ಣನವರೂ ಸಹ ಜನರಿಗೆ ಒಳಿತಾಗಲಿ ಎಂಬ ಸ್ವಭಾವದವರು. ಆದರೆ ಪರಿಸ್ಥಿತಿಯನ್ನು ಅನುಲಕ್ಷಿಸಿ ಹಾಗೆ ಹೇಳಿದರು. ಆದರೆ, ಇವರು "ಇಲ್ಲ ಇದು ನೌಕರದಾರರಿಗೆ ಮನೆ ಕಟ್ಟಿಕೊಳ್ಳಲು ತುಂಬಾ ಅನುಕೂಲವಾಗುತ್ತದೆ. ಅವರಿಗೆಲ್ಲಾ ಮನೆ ಕಟ್ಟಿಕೊಳ್ಳಲು ಸಹಾಯ ಮಾಡಿದ ಪುಣ್ಯ ನಿಮ್ಮದಾಗುತ್ತದೆ" ಎಂದು ಗಂಟೇಬಿದ್ದರಂತೆ. ಮೇಲಾಗಿ ಶ್ರೀ ಒಡೆಯರವರೂ ಸಹ ನೌಕರದಾರರಿಗೆ ಸಹಾಯವಾಗುತ್ತದೆ ಎಂದು ಮನವರಿಕೆಯಾದರೆ ಕೈಬಿಡುವವರಲ್ಲ. ಹಾಗಾಗಿ ವಿಶ್ವವಿದ್ಯಾಲಯದ ನೌಕರರ ಹೌಸಿಂಗ್ ಬೋರ್ಡ್ ಪ್ರಾರಂಭವಾಯಿತು.

ಹಣದ ಅನುಕೂಲ ಸಾಕಷ್ಟು ಇಲ್ಲದಿದ್ದ ಕಾಲದಲ್ಲಿ 'ನೌಕರದಾರರಿಗೆ ಇದೊಂದು ವರವೇ ಆಯಿತೆನ್ನಬಹುದು. ಮನೆ ಕಟ್ಟಲೇನೋ ಹಣ ಸಿಕ್ಕುವಂತಾಯ್ತು. ಆದರೆ ಅದಕ್ಕೆ ಮೊದಲು ಸಐಟ್ ಕೊಳ್ಳಬೇಕಾಗಿತ್ತಲ್ಲ, ವಿಶ್ವವಿದ್ಯಾಲಯದ ಸಮೀಪದಲ್ಲಿ ಬೇಕಾದಷ್ಟು ಪಾಳುಬಿದ್ದ ಪ್ರೈವೇಟ್ ಜಮೀನಿತ್ತು. ಈಗಿನ ಕಲ್ಯಾಣನಗರ, ನಿರ್ಮಲನಗರ, ನಮೋದಯನಗರ, ಜಯನಗರ, ಶಿವಗಿರಿ ಇದೆಲ್ಲ ಖಾಲಿ ಇತ್ತು. ಆಗ ಆ ಜಮೀನಿನ ಮಾಲೀಕರನ್ನು ಪತ್ತೆ ಹಚ್ಚಿ, ಸಂಪರ್ಕಿಸಿದಾಗ ಅವರಿಗೆ ಅದನ್ನೆಲ್ಲ ಸೈಟ್ ಮಾಡಿ ಮಾರುವ ಉದ್ದೇಶವಿದೆ ಎಂದು ಗೊತ್ತಾಯ್ತು. ಭೂಮಿಯ ಬೆಲೆ ಈಗ ಮೂವತ್ತೈದು ವರ್ಷಗಳ ಹಿಂದೆ ಬಹಳ ಕಡಿಮೆ ಇತ್ತು. ಹಲವು ಮಿತ್ರರ ಸಹಾಯದಿಂದ ಗೃಹನಿರ್ಮಾಣ ಸಂಘದ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸಿದರು. ಇವರು ಅದರ ಸ್ಥಾಪಕ ನಿರ್ದೇಶಕರಲ್ಲೊಬ್ಬರಾಗಿದ್ದರು. ನೌಕರರಿಗಾಗಿ ನಿವೇಶನಗಳ ವ್ಯವಸ್ಥೆ ಆಯಿತು. ಆ ಬಗ್ಗೆ ದಿವಂಗತ ಕಟ್ಟಿ ಎಂಜಿನಿಯರ್ ಅವರನ್ನು ನೆನೆಯಬೇಕು. ಆಗ ಇವರು ತಮಗೆ ಪರಿಚಯವಿದ್ದ ; ಪ್ರೊಫೆಸರ್‌ಗಳ ಮನೆಗೆಲ್ಲಾ ಹೋಗಿ, ಸೈಟ್‌ಗಳು ಸಿಕ್ಕುವ ವಿಚಾರ ತಿಳಿಸಿ, ಕೊಂಡುಕೊಳ್ಳಿರೆಂದು ಒತ್ತಾಯಿಸಿದರು. ಎಷ್ಟೋ ಜನರು, ನಮ್ಮ ಬಳಿ ಹಣವಿಲ್ಲ ನಮಗೆ ಬೇಡ ಎನ್ನುತ್ತಿದ್ದರಂತೆ. ಆಗ ಇವರು 'ಮುಂದೆ ಈ ಬೆಲೆಗೆ ನಿಮಗೆ ಸೈಟ್ ಸಿಕ್ಕೋಲ್ಲ, ಪ್ರಾವಿಡೆಂಟ್ ಫಂಡ ಸಾಲ ತೆಗೆದುಕೊಂಡು ಅಥವಾ ಬಂಗಾರ ಅಡವಿಟ್ಟು ಸೈಟ್ ಕೊಂಡುಕೊಳ್ಳಿ' ಎಂದು ಮನವೊಲಿಸಿ ಮನೆಮನೆಗೆ ಹೋಗಿ ಒತ್ತಾಯಿಸಿದಾಗ, ಕೆಲವರು ಡಾ. ಸ್ವಾಮಿಯವರು ಕಮೀಶನ್ ತೆಗೆದುಕೊಳ್ಳುತ್ತಿರಬೇಕು ಎಂದು ಅನುಮಾನಿಸಿದರು. ಈ ಅನಿಸಿಕೆಯ ಬಗ್ಗೆ ನನಗೆ ಗೊತ್ತಾಗುತ್ತಲೇ ಇರಲಿಲ್ಲ.

ಒಮ್ಮೆ ನನಗೂ, "ನಿಮ್ಮ ಕಾಲೇಜಿನಲ್ಲಿ ಯಾರಾದರೂ ಸೈಟ್ ತೆಗೆದುಕೊಳ್ಳುತ್ತಾರೇನೋ ಕೇಳು. ಸೈಟ್ಸ್ ಆಗಲೇ ಮುಗಿಯುತ್ತಾ ಬಂದಿವೆ. ಪಾಪ

ಯಾರಿಗಾದರೂ ಸಾಧ್ಯವಿದ್ದರೆ ತೆಗೆದುಕೊಳ್ಳಲಿ" ಎಂದರು (ಆಗ ಮೂರು ಸಾವಿರ ಬಾಳುತ್ತಿದ್ದ ಸೈಟಿನ ಬೆಲೆ, ಈಗ ಆರು ಲಕ್ಷ) 'ಆಗ ನಾನು, ನೀವು ಉದ್ಧರಿ ಕೆಲಸಕಟ್ಟಿಕೊಂಡು ಓಡಾಡುವುದಲ್ಲದೆ ನನಗೂ ಮಾಡಲು ಹೇಳುತ್ತೀರಿ' ಎಂದು ಅಸಮಾಧಾನ ತೋರಿದರೂ ಕಾಲೇಜಿಗೆ ಹೋದಾಗ, ಒಬ್ಬಿಬ್ಬರಲ್ಲಿ ಈ ಪ್ರಸ್ತಾಪ ಮಾಡಿದೆ. ಆಗ ಅವರು ನೇರವಾಗಿ ಹೇಳದಿದ್ದರೂ 'ನಾವು ಮಧ್ಯಸ್ಥಗಾರರಾಗಿ ದುಡ್ಡು ತಿನ್ನಲು ಇಷ್ಟು ಮುತುವರ್ಜಿ ವಹಿಸುತ್ತಿದ್ದೇವೆ' ಎಂಬ ಅರ್ಥಬರುವ ಟೋನಿನಲ್ಲಿ ಮಾತನಾಡಿದರು! ಅವರ ಅರ್ಥಗ್ರಹಿಸಿ, ಮಾತನ್ನು ಅಷ್ಟಕ್ಕೆ ನಿಲ್ಲಿಸಿ ಮುಗಿಸಿದೆ. ಮನೆಗೆ ಬಂದಮೇಲೆ ಅಲ್ಲಿ ನಡೆದದ್ದನ್ನೆಲ್ಲ ಇವರಿಗೆ ಹೇಳಿ, 'ಇಂತಹ ಉಸಾಬರಿಗೆ ಇನ್ನು ಹೋಗಬೇಡಿ' ಎಂದು ಪರಿಪರಿಯಾಗಿ ಹೆಳಿದೆ. ಆದರೆ ಅವರ ಕೆಲಸ ಅವರು ಬಿಡಲಿಲ್ಲ. ಇವರ ಸ್ವಭಾವದ ಪರಿಚಯವಿದ್ದ ಅನೇಕರು, ತಪ್ಪಾಗಿ ತಿಳಿದುಕೊಳ್ಳದೆ, ಸೈಟು ಕೊಂಡರು; ಮನೆ ಕಟ್ಟಿಸಿಕೊಂಡರು. ಈಗ 'ಸಾಹೇಬ್ರೇ, ನೀವು ಒತ್ತಾಯಿಸದೆ ಇದ್ದಿದ್ದರೆ, ನಾವು ಆಗ ಸೈಟ್ ಕೇಳುತ್ತಿರಲಿಲ್ಲ ಎಂದು ಹಿಂದಿನದನ್ನು ನೆನೆಸಿಕೊಂಡು ಒಳ್ಳೆಯ ಮಾತನಾಡುತ್ತಾರೆ. ಆದರೆ ನೆನೆಸದವರೂ ಲೆಕ್ಕವಿಲ್ಲದಷ್ಟು ಮಂದಿ ಇದ್ದಾರೆ. ನೆನೆಸಿಲ್ಲವೆಂದು ಇವರು ಎಂದೂ ಬೇಜಾರು ಮಾಡಿಕೊಳ್ಳುವುದಿಲ್ಲ. ಅವರಿಗೆಲ್ಲಾ ಒಳ್ಳೆಯದಾಗಬೇಕೆಂಬ ಆಸೆ ಇತ್ತು. ಅದು ನೆರವೇರಿದುದೇ ಇವರಿಗೆ ಸಂತೋಷ, ತೃಪ್ತಿ. ಧಾರವಾಡದ ವಿಶ್ವವಿದ್ಯಾಲಯದ ನೌಕರರ ಹೌಸಿಂಗ್ ಬೋರ್ಡ್‌ಗೆ ಇವರೂ ಒಬ್ಬ ಡೈರೆಕ್ಟರ್‌ರಾಗಿದ್ದದ್ದು ನನಗೆ ಎಲೆಕ್ಷನ್ ಬರುವ ತನಕ ಗೊತ್ತೇ ಇರಲಿಲ್ಲ. ಎಲೆಕ್ಷನ್ ಸಮಯಕ್ಕೆ ರಾಜಕೀಯ ಶುರುವಾಯ್ತು. ಕೆಲವರು ಡೈರೆಕ್ಟರ್‌ಗಳಾಗುವುದಕ್ಕೆ ಹಂಚಿಕೆ ಮಾಡಿಕೊಂಡಿದ್ದರೆಂದು ಕಾಣಿಸುತ್ತದೆ.

ಹೀಗೆ ಯಾವುದೋ ಸ್ವಾರ್ಥವಿಟ್ಟುಕೊಂಡು ಗುಂಪು ಕಟ್ಟಿಕೊಳ್ಳುವುದು ಇವರ ಜಾಯಮಾನಕ್ಕೆ ಸಾಧ್ಯವಿಲ್ಲ. ಹಾಗಾಗಿ ಅಂತಹ ಗುಂಪಿನವರಿಗೆ ಇವರು ಡೈರೆಕ್ಟರ್‌ರಾಗಿ ಬರುವುದು ಬೇಕಿರಲಿಲ್ಲ. ಇವರು ಚುನಾಯಿತರಾಗಿ ಬರದಂತೆ ಮಾಡಬೇಕೆಂಬುದು ಕೆಲವರ ಹಂಚಿಕೆ. ಎಲೆಕ್ಷನ್‌ಗೆ ಸ್ವಲ್ಪ ಕಾಲಕ್ಕೆ ಮೊದಲು ಹೌಸಿಂಗ್ ಬೋರ್ಡ್‌ನಲ್ಲಿ ತುಂಬಾ ಹಣದ ಅವ್ಯವಹಾರ ನಡೆದಿದೆ ಎಂಬ ಸುದ್ದಿ ಹಬ್ಬಿತು ಅದು ನನ್ನ ಕಿವಿಗೆ ಬಿದ್ದಾಗ ಕಿಡಿಕಿಡಿಯಾದೆ. "ಸ್ವಂತ ಕೆಲಸ ಅಲಕ್ಷಿಸಿ ಈ ಕೆಲಸಗಳನ್ನು ಮಾಡುವುದಲ್ಲದೆ, ಕೆಟ್ಟ ಹೆಸರು ಬೇರೆ ಕಟ್ಟಿಕೊಳ್ಳಬೇಕೆ" ಎಂದು ಇವರ ಮೇಲೆ ಸಿಟ್ಟು ಬಂತು. ಒಬ್ಬ ವ್ಯಕ್ತಿ ಬಂದು ನನ್ನ ಮುಖದೆದುರೇ ಡಾ. ಸ್ವಾಮಿಯರು ಸಕತ್ ರೊಕ್ಕ ಹೊಡೆದಿದ್ದಾರಂತೆ, ಬೇಕಾದಷ್ಟು ಪ್ರೂಫ್ ಸಿಕ್ಕಿದೆಯಂತೆ. ಹಾಗೇ–ಹೀಗೇಂತ ನನಗೇ ಇವರ ಮೇಲೆ ಅನುಮಾನ ಹುಟ್ಟುವಂತೆ ಹೇಳಿದರು. ಆ ಸಮಯದಲ್ಲಿ ಇವರ ಅಣ್ಣನವರ ಆರ್ಥಿಕ ಸ್ಥಿತಿ ಅಷ್ಟು ಚೆನ್ನಾಗಿರಲಿಲ್ಲ. ಇವರು ನೆರವು ನೀಡುತ್ತಿದ್ದರಾದರೂ

ಅವರ ಅವಶ್ಯಕತೆಗಳನ್ನು ಪೂರೈಸುವಷ್ಟು ಆಗುತ್ತಿರಲಿಲ್ಲ. ಅವರಿಗೆ ಸಾಕಷ್ಟು ನೆರವು ನೀಡಲಾಗುತ್ತಿಲ್ಲ ಎಂಬ ಕೊರಗು ಇವರನ್ನು ಕಾಡಿಸುತ್ತಿತ್ತು.

ಹಾಗಾದರೆ ಇವರು ಇಲ್ಲಿ ದುಡ್ಡು ಹೊಡೆದು ನನಗೆ ಗೊತ್ತಿಲ್ಲದಂತೆ ಅವರಣ್ಣನವರಿಗೇನಾದರೂ ಕಳಿಸಿರಬಹುದೇ ಎಂಬ ಅನುಮಾನವೂ ಬಂತು. ಇವರು ಹಣ ಹೊಡೆಯದಿದ್ದರೆ, ಬೇರೆಯವರು ಬಂದು ನನ್ನ ಮುಂದೆ ಇಷ್ಟು ಧೈರ್ಯವಾಗಿ ಹೇಳಲು ಹೇಗೆ ಸಾಧ್ಯ? ಎಂದು ತರ್ಕಿಸಿದೆ. 'ಮನೆಗೆ ಹೋದಮೇಲೆ ಇವರನ್ನು ಈ ವಿಷಯದ ಬಗ್ಗೆ ಪ್ರಾಮಾಣಿಕವಾಗಿ ಹೇಳಬೇಕೆಂದು ದೇವರ ಹೆಸರಿನಲ್ಲಿ ಆಣೆ ಇಟ್ಟು ಕೇಳಿದೆ. ಜನ ದುರುದ್ದೇಶದಿಂದ ಆಪಾದಿಸುತ್ತಾರೆ ಎಂದು ಲಕ್ಷ್ಯ ಕೊಡದಿದ್ದ ಇವರಿಗೆ ನಾನೇ ಸಂಶಯಪಡುವುದನ್ನು ನೋಡಿ ವ್ಯಥೆಯಾಯಿತು.

ಆಗ ನನಗೆ ಇದು 'ಮಿಥ್ಯಾರೋಪ' ಎಂದು ಸ್ಪಷ್ಟವಾಗಿ, "ನಿಮ್ಗೇನು ಬರ್‍ಯೋದು– ಓದೋದು ಬೇಕಾದಷ್ಟಿದೆ. ಈಚಲು ಮರದ ಕೆಳಗೆ ಮಜ್ಜಿಗೆ ಕುಡಿದರೂ ಹೆಂಡ ಎನ್ನುತ್ತಾರೆ. ನೀವು ಅಂತಹ ಕೆಲ್ಸ ಯಾಕೆ ಮಾಡೋಕೆ ಹೋಗ್ತೀರಿ? ದುಡ್ಯೋದು ಅಲ್ದೆ ಅಪವಾದನೂ ಏಕೆ ಹೊರಬೇಕು" ಎಂದೆ. ಆಗ, "ಏನೋ ನಾಲ್ಕು ಜನಕ್ಕೆ ಉಪಯೋಗವಾಗ್ಲಿ ಅಂತ ನಿಂತೆ ಅಷ್ಟೇ. ಸ್ವಂತ ಲಾಭದ ಆಸೆ ಇಲ್ಲದೆ ದುಡಿಯುವವರು ಇಲ್ಲದಿದ್ದರೆ, ಅವಶ್ಯಕತೆ ಇದ್ದವರಿಗೆ ನೆರವು ಸಿಗದಂತಹ ಪರಿಸ್ಥಿತಿ ಉಂಟಾಗಿಬಿಡುತ್ತೆ. ಹೆಸರಿನ ಆಸೆ ಇಲ್ಲ" ಎಂದರು. ಸುಮ್ಮಸುಮ್ಮನೆ ಕೆಟ್ಟ ಹೆಸರೇಕೆ ಹೊಂದಬೇಕು ಎಂದುದಕ್ಕೆ "ಸಾರ್ವಜನಿಕ ಕೆಲಸ ಮಾಡುವಾಗ ಅಪವಾದಗಳು ಸರ್ವೇಸಾಮಾನ್ಯ ಅದಕ್ಕೆಲ್ಲಾ ಹೆದರುವಂತಿದ್ದರೆ, ಜಗತ್ತಿನಲ್ಲಿ ಸಾರ್ವಜನಿಕವಾದ ಕೆಲಸಗಳೇ ಆಗುತ್ತಿರಲಿಲ್ಲ. ಇದಕ್ಕೆಲ್ಲ ಸಿದ್ಧವಾಗೇ ಸಾರ್ವಜನಿಕ ಸೇವೆ ಮಾಡಬೇಕು" ಎಂದು ಬಿಟ್ಟರು. ಅದೆಲ್ಲ ಹಿಂದಿನ ಕಾಲದ ಆದರ್ಶ. ಈಗಂತೂ ನೂರಕ್ಕೆ ತೊಂಬತ್ತೊಂಬತ್ತು ಜನ ಸ್ವಾರ್ಥವನ್ನು ಮೂಲವಾಗಿಟ್ಟುಕೊಂಡೇ ಸಾರ್ವಜನಿಕ ಕೆಲಸಕ್ಕೆ ಕೈಹಾಕುತ್ತಾರೆ. ಅದು ಬೇರೆ ಮಾತು. ಅಂತೂ ಇವರು ತಮ್ಮ ಸಾರ್ವಜನಿಕ ಸೇವೆಯನ್ನು ಬಿಡಲೇ ಇಲ್ಲ.

ಈ ಹೌಸಿಂಗ್ ಬೋರ್ಡ್ ಕಥೆ ಇಲ್ಲಿಗೇ ಮುಗಿಯಲಿಲ್ಲ. ಸ್ವಾರ್ಥಿಗಳ ಕುತಂತ್ರದಿಂದಲೂ ನನ್ನ ಬಿರುಸಿನ ಮಾತುಗಳಿಂದ ಬೇಜಾರಾಗಿ ಎಲೆಕ್ಷನ್ನಿಗೆ ನಿಲ್ಲಲೇ ಇಲ್ಲ. ಎಲೆಕ್ಷನ್ ಆದ ನಂತರ, ನಮ್ಮ ಮನೆಯವರು ಹಣ ಲಪಟಾಯಿಸಿದ್ದಾರೆ ಎನ್ನುವ ಮಾತು ಸತ್ಯ ಎನ್ನುವಂತೆ ನನ್ನೊಡನೇ ಹೇಳಿದವರೇ ಬಂದು 'ನೋಡಿ ಸ್ವಾಮಿಯವರು ಅಂತಹವರಲ್ಲವಂತೆ, ಅವರ ಹೆಸರು ಕೆಡಿಸಿ, ಅವರು ಆರಿಸಿ ಬರದಂತೆ ಮಾಡಬೇಕೆಂದು ಹೀಗೆಲ್ಲಾ ಕತೆ ಕಟ್ಟಿದ್ದರಂತೆ" ಎಂದರು. ಅವರೇನೋ ತಮ್ಮ ಉದ್ದೇಶ ಸಾಧಿಸಿಕೊಂಡರು. ಕೆಲವರಿಗೆ ಸತ್ಯ ಏನು ಎನ್ನುವದು ಗೊತ್ತಾಯ್ತು.

ಆದರೆ ಸತ್ಯಾಂಶ ಗೊತ್ತಾಗದವರೂ ಅನೇಕರಿರಬಹುದಲ್ಲ. ಅವರ ದೃಷ್ಟಿಯಲ್ಲಿ ಇವರು ಯಾವ ಮಟ್ಟಿದವರಾಗಿ ಕಾಣಿಸಬಹುದು. ಇದನ್ನು ಯೋಚಿಸಿಕೊಂಡು ನನಗೆ ತುಂಬಾ ನೋವಾಗುತ್ತಿತ್ತು. ಅದರೆ ಇವರು ಮಾತ್ರ ನಿರ್ಲಿಪ್ತರಾಗಿ, ಜಗತ್ತೇ ಹಾಗೆ ಎಲ್ಲರನ್ನು ಮೆಚ್ಚಿಸಲಾಗುವುದಿಲ್ಲ, ಜನ ನನ್ನನ್ನು ಕೆಟ್ಟವನು ಎಂದ ಮಾತ್ರಕ್ಕೆ ನಾನು ಕೆಟ್ಟವನಾಗುವುದಿಲ್ಲ. ನಾನು ಇದ್ದಂತೆಯೇ ಇರುತ್ತೇನೆ. ಜನ ಅಂದದ್ದಕ್ಕೆಲ್ಲಾ ಬೆಲೆ ಕೊಡುತ್ತಾ ಕೂತರೆ, ಬದುಕೋಕೆ ಆಗೋಲ್ಲ' ಎಂದರು. ಎಲೆಕ್ಷನ್‌ಗೆ ನಿಂತು ಗೆದ್ದಿದ್ದರೆ ಯಾರೂ ಲಕ್ಷ್ಯ ಕೊಡದ ಅಸಹಾಯಕರಿಗೆ ಸಹಾಯ ಮಾಡಬಹುದಿತ್ತು, ಈಗ ಅದು ಸಾಧ್ಯವಿಲ್ಲ ಎಂಬ ಅನಿಸಿಕೆಯು ಹೊರತು ಅವರು ಬೇಸರಪಟ್ಟುಕೊಳ್ಳಲಿಲ್ಲ.

ಬರಬರುತ್ತಾ ಆ ಸಂಸ್ಥೆಯೊಡನೆ ದೂರ ದೂರ ಉಳಿದಂತೆ ನನಗೆನ್ನಿಸಿತು. ಇನ್ನೂ ಒಂದು ತಮಾಷೆ ಎಂದರೆ ಆ ಸಂಸ್ಥೆಗೆ ಇಪ್ಪತ್ತೈದು ವರ್ಷಗಳಾದಾಗ ಒಂದು ದೊಡ್ಡ ಸಮಾರಂಭವನ್ನು ಏರ್ಪಡಿಸಿದ್ದರು. ಸಮಾರಂಭದ ಎರಡು ದಿನ ಮೊದಲು ಇವರಿಗೂ ಆಮಂತ್ರಣ ಪತ್ರಿಕೆ ಬಂತು. ಅದರಲ್ಲಿ 'ಫೌಂಡರ್ ಮೆಂಬರ್ಸ್' ಎಂದು ಅನೇಕರಿಗೆ ಸನ್ಮಾನವಿಟ್ಟುಕೊಂಡಿದ್ದರು. ಎಷ್ಟೋ ವರ್ಷಗಳ ನಂತರ ಆ ಸಂಸ್ಥೆ ಸೇರಿದ ಕೆಲವರ ಹೆಸರುಗಳೂ ಆ ಸನ್ಮಾನಿತರ ಪಟ್ಟಿಯಲ್ಲಿದ್ದವು. ಅದನ್ನು ಓದಿದ ನಾನು, "ಆಮಂತ್ರಣ ಪತ್ರಿಕೆ ಕಳಿಸುವವರ ಲಿಸ್ಟಿನಲ್ಲಾದರೂ ನಿಮ್ಮನ್ನು ಸೇರಿಸಿಕೊಂಡಿದ್ದಾರಲ್ಲ ಅದೇ ದೊಡ್ಡ ಸಂತೋಷ" ಎಂದು ಹೇಳಿ, 'ಇಂತಹ ಅನ್ಯಾಯಗಳನ್ನೆಲ್ಲ ನುಂಗಿಕೊಳ್ಳಬಾರದು, ಪ್ರತಿಭಟಿಸಬೇಕು. ಆ ಸಂಸ್ಥೆ ಪ್ರಾರಂಭವಾಗಲು ಮೂಲಕಾರಣರು ನೀವು. ನಿಮ್ಮನ್ನು ಅವರು ಅಲಕ್ಷಿಸಿದರೆ ನೀವು ಅದಕ್ಕೆ ಅಸ್ಪದ ಕೊಡಬಾರದು' ಎಂದೆ. "ಈಗ ಹೋಗಿ ನನಗೂ ಸನ್ಮಾನ ಮಾಡಿರಿ" ಎಂದು ಕೇಳಲೇ? ಜನರಿಗೆ ಸಹಾಯವಾಗಲಿ ಎಂದು ಪ್ರಾರಂಭಿಸಿದೆ. ಅದು ಆದರೆ ಸಾಕು" ಎಂದು ನನ್ನ ಬಾಯಿ ಮುಚ್ಚಿಸಿದರು. ಅವರ ಸಾಮಾಜಿಕ ಜೀವನದಲ್ಲಿ ಹೀಗೆ ಪ್ರತಿಭಟನೆ ಇಲ್ಲದೆ ನುಂಗಿಕೊಂಡ ಘಟನೆಗಳಿಗೆ ಲೆಕ್ಕವಿಲ್ಲ. ಈ ಗುಣವನ್ನು ಹೃದಯವಂತಿಕೆ ಎನ್ನಬೇಕೋ, ಹೇಡಿತನವೆನ್ನಬೇಕೋ, ನನಗೆ ಅನೇಕ ಬಾರಿ ಗೊಂದಲ.

**ಆದರ್ಶ ಶಿಕ್ಷಕ :**

'ಇವರು' ಹುಟ್ಟನಿಂದ ಆದರ್ಶ ಶಿಕ್ಷಕರು. ಬೋಧನೆ ಅವರ ಅತ್ಯಂತ ಪ್ರಿಯವಾದ ವಿಷಯ. ವಿದ್ಯಾರ್ಥಿಗಳನ್ನು ಕಂಡರೆ ಅಪರಿಮಿತವಾದ ಪ್ರೇಮ, ಆಸಕ್ತಿ. ಇವರು ಅತ್ಯುತ್ತಮ ಶಿಕ್ಷಕರೆಂದು ಅವರ ಅನೇಕ ವಿದ್ಯಾರ್ಥಿಗಳು ನನ್ನ ಮುಂದೆ ವರ್ಣಿಸಿದ್ದಾರೆ. ಅವರೆಂದೂ ಬೋಧನೆ ಮಾಡಲು ಬೇಸರಗೊಂಡದ್ದನ್ನು ನೋಡಿಲ್ಲ; ಕೇಳಿಲ್ಲ.

ಅವರು ಲೆಕ್ಚರರ್ ಆಗಿದ್ದಾಗ ಬೇರೆ ಯಾವ ಜವಾಬ್ದಾರಿಗಳೂ ಹೆಚ್ಚಿರಲಿಲ್ಲ. ಆಗ ಸಂಜೆ ಮನೆಗೆ ಬಂದಾಗ ದಿನವೂ ಖುಷಿಯಿಂದ ಅವರ ಕ್ಲಾಸಿನ ಬಗ್ಗೆ, ವಿದ್ಯಾರ್ಥಿಗಳ ಬಗ್ಗೆ, ತಾವು ಮಾಡಿದ ಪಾಠದ ಬಗ್ಗೆ ಹೇಳಿಕೊಂಡು ಆನಂದಪಡುತ್ತಿದ್ದ ಹಾಗೂ ನಾವೂ ಆನಂದಗೊಳ್ಳುವಂತೆ ಮಾಡುತ್ತಿದ್ದ ದಿನಗಳು ಇನ್ನೂ ನನ್ನ ಕಣ್ಮುಂದಿವೆ. ವಿದ್ಯಾರ್ಥಿಗಳಿಗೆ ಎಲ್ಲಾ ರೀತಿಯಿಂದಲೂ ತಮ್ಮ ಕೈಲಾದ ಸಹಾಯ ಮಾಡುತ್ತಿದ್ದರು.

ವಿದ್ಯಾರ್ಥಿದೆಸೆಯಲ್ಲಿ ತಾವು ಹಣದ ತೊಂದರೆ ಅನುಭವಿಸಿದ ಅನುಭವದಿಂದ, ಬಹಳಷ್ಟು ವಿದ್ಯಾರ್ಥಿಗಳಿಗೆ ಹಣದ ಮೂಲಕ ಸಾಕಷ್ಟು ಸಹಾಯ ಮಾಡಿದ್ದಾರೆ. ಮಾಡಿದ ಸಹಾಯದ ಬಗ್ಗೆ ಅವರೆಂದೂ ನನ್ನ ಮುಂದೆ ಹೇಳಿಕೊಂಡಿಲ್ಲ. ಆ ವಿದ್ಯಾರ್ಥಿಗಳೇ ಪತ್ರ ಬರೆದಾಗ ಅಥವಾ ಮನೆಗೆ ಬಂದಾಗ ಮಾತನಾಡುತ್ತ ಹೇಳಿದರೆ ಮಾತ್ರ ನನಗೆ ಗೊತ್ತಾಗುತ್ತಿತ್ತು. ಅನೇಕ ವಿದ್ಯಾರ್ಥಿಗಳಿಗೆ ಹಾಸ್ಟೆಲಿನಲ್ಲಿ ಫ್ರೀಯಾಗಿ ಊಟ ಸಿಕ್ಕುವಂತೆ ನೆರವೀಯುತ್ತಿದ್ದರು: ಬಡ ಹಾಗೂ ದಡ್ಡ ವಿದ್ಯಾರ್ಥಿಗಳನ್ನು ಕಂಡರೆ ಹೆಚ್ಚಿನ ಕಳಕಳಿ. ಜಾಣ ವಿದ್ಯಾರ್ಥಿಗಳನ್ನೂ ಕಂಡರೆ ಮೆಚ್ಚುಗೆ, ಯಾವುದೇ ವಿದ್ಯಾರ್ಥಿ, ಯಾವುದೇ ರೀತಿಯ ಸಹಾಯ ಕೋರಿ ಬಂದರೂ ನನಗೆ ತಿಳಿದಂತೆ ಯಾರನ್ನೂ ಅವರು ಹಾಗೆಯೇ ಕಳಿಸಿಲ್ಲ. ಸಾಹಿತ್ಯ ಅಥವಾ ತಮ್ಮ ವಿಷಯದ ಸಮಸ್ಯೆಯ ಬಗ್ಗೆ ಕೇಳಲಿ ವಿದ್ಯಾರ್ಥಿಗಳು ಬರುತ್ತಿದ್ದರು. ಆಗ ಅವರ ಸ್ನಾನ, ಊಟ ಆಗದಿದ್ದರೂ ಸಹ ಅದನ್ನೆಲ್ಲ ಮರೆತು ಗಂಟೆಗಟ್ಟಲೆ ಅವರೊಂದಿಗೆ ಚರ್ಚಿಸುತ್ತಾ ಕುಳಿತು ಬಿಡುತ್ತಿದ್ದರು. ಈಗ ನಿವೃತ್ತರಾದ ಮೇಲೂ ಅನೇಕ ವಿದ್ಯಾರ್ಥಿಗಳು ಬರುತ್ತಾರೆ. ಆಗ ತಾಸುಗಟ್ಟಲೆ ವಿಚಾರ ವಿನಿಮಯ ಮಾಡುತ್ತಾರೆ. ಸಲಹೆ ಕೊಡುತ್ತಾ, ರೆಫರೆನ್ಸ್ ಸೂಚಿಸುತ್ತಾರೆ. ತಮ್ಮಲ್ಲಿರುವ ಪುಸ್ತಕಗಳನ್ನು ಕೊಡುತ್ತಾರೆ, ಆ ಅಪರಿಚಿತ ವಿದ್ಯಾರ್ಥಿಗಳು ಸುಪರಿಚಿತರಾಗುತ್ತಾರೆ.

ಇವರು ಪ್ರಾಧ್ಯಾಪಕರಾಗಿದ್ದಾಗ ತುಂಬಾ ವಿದ್ಯಾರ್ಥಿಗಳು ಮನೆಗೆ ಬರುತ್ತಿದ್ದರು. ಬಹಳಷ್ಟು ಪ್ರೀತಿ ಗೌರವ ತೋರಿಸುತ್ತಿದ್ದರು. ಆಗ ಇವರ ವಿದ್ಯಾರ್ಥಿಪ್ರಿಯತೆ ಬಗ್ಗೆ ಅವರ ಗೌರವಕ್ಕೆ ಪಾತ್ರರಾಗುವಂತೆ ಇರುವ ಬಗ್ಗೆ ನನಗೆ ತುಂಬಾ ಹೆಮ್ಮೆ ಎನ್ನಿಸುತ್ತಿತ್ತು. ಇವರು ಧಾರವಾಡದ ವಿಶ್ವವಿದ್ಯಾಲಯಕ್ಕೆ ಲೆಕ್ಚರರ್ ಆಗಿ ಬಂದಾಗ, ಎಂ.ಎ. ಮುಗಿಸಿಕೊಂಡು ಹೋದ, ಮೊದಲನೆಯ ಬ್ಯಾಚಿನಲ್ಲಿ ಶ್ರೀ ಬಿ.ಬಿ. ನಾಡಗೌಡ, ಶ್ರೀ ಸಂಗಮನಾಥ ಹಂಡಿ, ಡಾ. ಎಂ.ಎಂ. ಕಲಬುರ್ಗಿ, ಶ್ರೀ ಎಂ. ರಾಮಚಂದ್ರ ಮುಂತಾದವರಿದ್ದರು.. ಅವರೆಲ್ಲರಿಗೂ ಇವರು ಅಚ್ಚುಮೆಚ್ಚಿನ ಗುರುಗಳಾಗಿದ್ದರು. ಅವರುಗಳು ಎಂ.ಎ. ಮುಗಿಸಿ ಊರಿಗೆ ಹೋಗುವ ಮುನ್ನ ಡಾ. ಕಲ್ಬುರ್ಗಿ (ಆಗಿನ್ನೂ ಡಾ. ಆಗಿರಲಿಲ್ಲ) ಮನೆಗೆ ಬಂದು, "ಸಾರ್, ಇನ್ನು ದೂರ ಹೋಗಿಬಿಡುತ್ತೇವೆ, ಜೀವನದಲ್ಲಿ ಮತ್ತೆ ಕೂಡುವುದು ಯಾವಾಗಲೋ ಏನೋ,

ನಿಮ್ಮಂತಹ ಗುರುಗಳು ದೊರೆಯುವದು ಅಪರೂಪ. ದಿನಾ ನಿಮ್ಮ ಫೋಟೋವನ್ನಾದರೂ ನೋಡಬೇಕು. ನಮ್ಮ ಜೊತೆಯಲ್ಲಿ ನೀವು ಫೋಟೋ ತೆಗೆಸಿಕೊಳ್ಳಬೇಕೆಂದು ಕೇಳಿ ಒತ್ತಾಯ ಮಾಡಿ ಕರೆದುಕೊಂಡು ಹೋಗಿ ಫೋಟೋ ತೆಗೆಸಿಕೊಂಡು, ನಮಗೂ ಒಂದು ಪ್ರತಿ ಕೊಟ್ಟುಹೋದರು.

ಶ್ರೀ ಬಿ.ಬಿ. ನಾಡಗೌಡರು ಮರುವರ್ಷವೇ ಜಮಖಂಡಿ ಕಾಲೇಜಿನಲ್ಲಿ ಲೆಕ್ಚರರ್ ಆದರು. ಆಗ ಕರ್ನಾಟಕ ಸಂಘ ಸ್ಥಾಪಿಸಿ, ಅದನ್ನು ಇವರಿಂದಲೇ ಉದ್ಘಾಟಿಸಬೇಕೆಂದು ಅಮಂತ್ರಿಸಿದರು. ಆಗ ನನ್ನನ್ನೂ ವಿಶೇಷವಾಗಿ ಆಹ್ವಾನಿಸಿದ್ದರು. ಅಲ್ಲಿ ಪ್ರೊ. ರೂಬೆನ್ನರು ಪ್ರಿನ್ಸಿಪಾಲರಾಗಿದ್ದರು. ಇವರನ್ನು ಶ್ರೀ ನಾಡಗೌಡರು ಪರಿಚಯಿಸುವಾಗ ಇವರ ಬಗ್ಗೆ ತುಂಬ ಪ್ರಶಂಸನೀಯವಾದ ಮಾತು ಹೇಳುತ್ತಾ, "ನಾನು ಎಂ.ಎ. ಎರಡನೆಯ ವರ್ಷಕ್ಕೆ ಓದುತ್ತಿದ್ದಾಗ, ಯಾರೋ ವೃಷಭೇಂದ್ರಸ್ವಾಮಿ ಎನ್ನುವವರು ಡಿಪಾರ್ಟ್‌ಮೆಂಟಿಗೆ ಅಪಾಯಿಂಟ್ ಆಗಿದ್ದಾರೆ. ಅವರು ಇಷ್ಟರಲ್ಲೇ ಬರಲಿದ್ದಾರೆ ಎಂದು ಕೇಳಿದಾಗ ಬಹುಶಃ ಯಾರೋ ವಯಸ್ಸಾದ ಕಾವಿ ಸ್ವಾಮಿ ಇರಬಹುದು ಎಂದುಕೊಂಡಿದ್ದೆವು. ಆದರೆ ಮೊದಲದಿನ ಕ್ಲಾಸಿಗೆ ಬಂದಾಗ, ಇವರೊಬ್ಬ ಉತ್ಸಾಹೀ ತರುಣರಾಗಿದ್ದರು! (ಆಗ ಇವರಿಗೆ ಮೂವತ್ಮೂರು ವರ್ಷ ವಯಸ್ಸು) ಅವರ ಉತ್ಸಾಹ, ಪಾಠ ಮಾಡುವ ರೀತಿ, ವಿದ್ಯಾರ್ಥಿಗಳನ್ನು ಹುರಿದುಂಬಿಸುವಿಕೆ ಸಾಕ್ಷಾತ್ ವಿವೇಕಾನಂದರನ್ನು ನೆನಪಿಗೆ ತರುವಂತಿತ್ತು. ನಮ್ಮ ಉತ್ಸಾಹವು ಪುಟಿದೇಳುವಂತಾಯ್ತು. ಡಿಪಾರ್ಟ್‌ಮೆಂಟಿನಲ್ಲಿ ಲೆಕ್ಕವಿಲ್ಲದಷ್ಟು ಸಾಹಿತ್ಯಿಕ ಸಾಂಸ್ಕೃತಿಕ ಚಟುವಟಿಕೆಗಳು ಪ್ರಾರಂಭವಾದವು. ಅಲ್ಲಿಯವರೆಗೆ ನಮಗೆ ಬಿ.ಎ. ಹಾಗೂ ಎಂ.ಎ. ಗೆ ವ್ಯತ್ಯಾಸವೆ ಗೊತ್ತಾಗಿರಲಿಲ್ಲ.

"ಇವರು ಬಂದ ಮೇಲೆ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಕರ್ನಾಟಕ ಸಂಘ ಪ್ರಾರಂಭವಾಯ್ತು. ಸೆಮಿನಾರ್‌ಗಳು ಸಂಯೋಜಿಸಲ್ಪಟ್ಟವು. ಪ್ರತಿಯೊಬ್ಬ ವಿದ್ಯಾರ್ಥಿಯೂ ಒಂದಲ್ಲ ಒಂದು ಚಟುವಟಿಕೆಯಲ್ಲಿ ಭಾಗವಹಿಸಬೇಕಾಗುತ್ತಿತ್ತು. ಡಿಬೇಟ್‌ಗಳು, ನಾಟಕಗಳೂ ನಡೆದವು. ಡಿಪಾರ್ಟ್‌ಮೆಂಟ್‌ನಲ್ಲಿ ಒಂದು ರೀತಿಯ ಮಿಂಚು ಸಂಚರಿಸಿದಂತಾಯ್ತು. ನಮ್ಮಲ್ಲಿ ಬಹುಪಾಲು ವಿದ್ಯಾರ್ಥಿಗಳಿಗೆ ಸಭೆಯಲ್ಲಿ ನಿಂತು ಮಾತನಾಡಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಅಂತಹವರನ್ನು ಪ್ರೋತ್ಸಾಹಿಸಿ, ಬೆನ್ನುತಟ್ಟಿ ಮುಂದೆ ಬರುವಂತೆ ಮಾಡುತ್ತಿದ್ದರು. ಇವರ ಮಾಗದರ್ಶನದಿಂದ ನಮಗೆ ಸಭೆಯಲ್ಲಿ ನಿಂತು ನಿರ್ಭಯವಾಗಿ ಮಾತನಾಡುವ ವ್ಯವಸ್ಥಿತವಾಗಿ ಓದುವ ಹಾಗೂ ಬರೆಯುವ ಕಲೆ ಕುದುರಿತು" ಎಂದು ಇನ್ನೂ ಅನೇಕ ರೀತಿಯಲ್ಲಿ ಪ್ರಶಂಸಿಸಿದರು. ಮುಂದುವರಿದು, "ಇಂದು ನಾನು ಒಬ್ಬ ಉತ್ತಮ ಶಿಕ್ಷಕನಾಗಿದ್ದರೆ, ಅದು ಇವರ ಪ್ರಭಾವ, ಅವರಿಂದಲೇ ಈ ಕರ್ನಾಟಕ ಸಂಘವನ್ನೂ

ಉದ್ಘಾಟಿಸಬೇಕೆಂದು ನಿಶ್ಚಯಿಸಿ ಪ್ರೊ. ಸ್ವಾಮಿಯವರನ್ನು ಆಮಂತ್ರಿಸಿದಾಗ, ಅವರು ಬಂದುದು ಸುದೈವ" ಎಂಬ ಮಾತುಗಳನ್ನು ಸುಮಾರು ಮೂವತ್ಮೂರು ವರ್ಷಗಳ ಹಿಂದೆ ಹೇಳಿದ್ದರೂ ಇಂದೂ ನನಗೆ ಆ ಮಾತುಗಳೆಲ್ಲ ಮನಸ್ಸಿನಲ್ಲಿ ಹಚ್ಚ ಹಸುರಾಗಿ ಉಳಿದಿವೆ. ಏಕೆಂದರೆ ನನಗೆ ಇವರೊಬ್ಬ ವಿದ್ಯಾರ್ಥಿಗಳ ಏಳ್ಗೆಗೆ ದುಡಿಯುವ ಪ್ರಾಮಾಣಿಕ ಶಿಕ್ಷಕ ಎಂದು ಆನಂದ, ಹೆಮ್ಮೆಯುಂಟಾಗಿತ್ತು. ಮನಸ್ಸಿಗೆ ಬಹಳ ಹಿತವೆನ್ನಿಸಿತ್ತು.

ಶ್ರೀ ನಾಡಗೌಡರು ಇಂದೂ ಅವರ ಅಚ್ಚುಮೆಚ್ಚಿನ ವ್ಯಕ್ತಿಯಾಗಿದ್ದಾರೆ. ಅದೇ ಪ್ರೀತಿಯ ಭಾವ ಒಬ್ಬರಿಗೊಬ್ಬರಿಗೆ ಇದೆ. ಇವರು ಬಿಜಾಪುರಕ್ಕೆ ಹೋದರೆ ಅವರನ್ನೂ ಕಾಣದೆ ಬರುವುದಿಲ್ಲ. ಅವರು ಧಾರವಾಡಕ್ಕೆ ಬಂದರೆ 'ಇವರನ್ನು' ಕಾಣದೆ ಹೋಗುವುದಿಲ್ಲ. ಅಂದಿನ ಪ್ರೀತ್ಯಾದರಗಳು ಇಂದಿನವರೆಗೂ ಒಂದೇ ಮಟ್ಟದಲ್ಲಿ ಉಳಿದುಬಂದಿವೆ.

ಅಂಕೋಲದ ಶ್ರೀ ಎನ್.ಆರ್. ನಾಯಕ್ ಅವರೂ ಇವರ ವಿದ್ಯಾರ್ಥಿ ಇವರೂ ಮನೆಗೆ ಬರುತ್ತಿದ್ದರು. ಈಗಲೂ ಒಮ್ಮೊಮ್ಮೆ ಬರುತ್ತಿರುತ್ತಾರೆ. ಈಚೆಗೆ ಒಮ್ಮೆ ಹೀಗೆ ಮಾತನಾಡುತ್ತಾ ಇವರ ಬಗ್ಗೆ ತುಂಬಾ ಗೌರವದ ಮಾತುಗಳನ್ನಾಡಿದರು. ಅಗ ನಾನು, "ಏನಾದ್ರೆ ಏನ್ರಿ, ಇದನ್ನೆಲ್ಲಾ ಯಾರು ಕೇಳ್ತಾರೆ? ಒಬ್ಬ ಸಾಹಿತಿಯಾಗಿ ಇವರೆಷ್ಟು ಬರೆದಿದ್ದಾರೆ ಎಂದು ಎಲ್ಲರೂ ಅನ್ನುತ್ತಾರೆ. ಇವರು ತಮ್ಮ ಸಮಯವನ್ನೆಲ್ಲ ಬರೀ ಪಾಠ ಮಾಡುವುದರಲ್ಲಿ, ವಿದ್ಯಾರ್ಥಿಗಳೊಡನೆ ಸಮಾಲೋಚನೆ ಮಾಡುವುದರಲ್ಲಿ, ಎಲ್ಲಾ ಕಡೆ ಭಾಷಣ ಮಾಡುವುದರಲ್ಲಿ ಕಳೆದರು. ಇವರಷ್ಟು ಕಷ್ಟಪಡುವವರು ಯಾರೂ ಇಲ್ಲ. ಆದರೆ 'ಇವರೇನ್ಮಾಡಿದಾರೆ?' ಎನ್ನುವಂತಾಗಿದೆ ಎಂಬುದಕ್ಕೆ ಅವರು, 'ಏನ್ ಮೇಡಮ್ ಹೀಗಂತೀರಿ ಬರ್‍ಯೋದು ಒಂದೇನೇ ಸಾಹಿತ್ಯ ಸೇವೇನೇ? ಬರ್‍ಯೋ ಅಂಥವರನ್ನು ಎಷ್ಟು ಜನರನ್ನು ನಿರ್ಮಾಣ ಮಾಡಿದ್ದಾರೆ? ಆ ಕಾಲದಲ್ಲಿ ಉತ್ತರ ಕರ್ನಾಟಕದ ಮೂಲೆ ಮೂಲೆಯಲ್ಲಿ ಸಾಹಿತ್ಯದ ಅವೇರ್‌ನೆಸ್ ಉಂಟು ಮಾಡಿದವರು ಇವರು. ಇವರ ಭಾಷಣಗಳಿಂದ ಎಷ್ಟೊಂದು ಜನ ಸ್ಫೂರ್ತಿ ಪಡೆದು ಮುಂದೆ ಬಂದಿದ್ದಾರೆ, ಸಾಕಷ್ಟು ಬರೆದೂ ಇದ್ದಾರೆ. ಬರೀ ಸಂಖ್ಯೆ ಮುಖ್ಯನಾ? ಬಿ.ಎಂ.ಶ್ರೀ.ಯವರು ಎಷ್ಟು ತಾನೆ ಬರೆದಿದ್ದಾರೆ? ಅವರು ಕನ್ನಡಕ್ಕೆ ಮಾಡಿದ ಸೇವೆ ಕಡಿಮೆ ಎಂದು ಹೇಳಲು ಸಾಧ್ಯವೇ? ಇವರ ಒಬ್ಬೊಬ್ಬ ವಿದ್ಯಾರ್ಥಿಯೂ ಹತ್ತತ್ತು ಪುಸ್ತಕಗಳಿದ್ದಂತೆ", ಎಂದು ಹೇಳಿದಾಗ ಇವರು ಬರೆಯದೇ ಭಾಷಣದಲ್ಲೇ ಮುಕ್ತಾಯಗೊಳಿಸುತ್ತಾರಲ್ಲ ಎಂಬ ನನ್ನ ಕೊರಗಿಗೆ ಸ್ವಲ್ಪ ಸಮಾಧಾನ ದೊರೆತಂತಾಯಿತು. 'ಭಾಷಣ ಬರಹದ ಶತ್ರು' ಎಂಬುದು ಇವರ ವಿಷಯದಲ್ಲಿ ನೂರಕ್ಕೆ ನೂರರಷ್ಟು ಸತ್ಯ. ಭಾಷಣದ ಕಡೆಗೆ ಇವರ ಒಲವು ಹೆಚ್ಚಲು ಪರಿಸ್ಥಿತಿಯೂ

ಕಾರಣವಾಗಿತ್ತು. ಇವರು ಪಠ್ಯಪುಸ್ತಕ ನಿರ್ದೇಶಕರಾದ ಮೇಲೆ ಕೆಲವು ವರುಷಗಳು ಇವರಿಗೆ ಟೀಚಿಂಗ್ ತಪ್ಪಿಹೋಗಿತ್ತು. ಅದು ಇವರ ಮನಸ್ಸಿಗೆ ಬಹಳ ನೋವುಂಟು ಮಾಡಿತ್ತು. ಆ ನೋವುಗಳಿಂದ ಮನಸ್ಸನ್ನು ಡೈವರ್ಟ್ ಮಾಡಿಕೊಳ್ಳಲು ಮತ್ತು ಬೋಧನೆಯ ಹವ್ಯಾಸವನ್ನು ಪೂರೈಸಿಕೊಳ್ಳಲು ಭಾಷಣಕ್ಕೆ ಬಂದ ಯಾವ ಕರೆಗೂ 'ಇಲ್ಲ' ಎನ್ನದೆ ಹೋಗತೊಡಗಿದುದು, ನಂತರ ಅದೇ ರೂಢಿಯಾಯಿತು ಎಂದುಕೊಳ್ಳುತ್ತೇನೆ.

ಪರಸ್ಥಳದ ಒಂದು ಭಾಷಣಕ್ಕೆ ಹೋದರೆ ಮೂರು ದಿನಗಳಾದರೂ ನಷ್ಟವಾಗುತ್ತವೆ. ಉತ್ತರ ಕರ್ನಾಟಕದಲ್ಲಿ ೧೯೭೦ರಿಂದ ಈವರೆಗೆ ಇವರು ಹೋಗಿ ಭಾಷಣ ಮಾಡದಿರುವ ಯಾವ ಕಾಲೇಜುಗಳೂ, ಮಠಗಳೂ, ಸಾಹಿತ್ಯಕ, ಧಾರ್ಮಿಕ ಸಂಸ್ಥೆಗಳೂ ಇಲ್ಲ ಎಂದರೆ ತಪ್ಪಾಗದೇನೋ! ಉಳಿದಿದ್ದರೂ ಅಲ್ಲೊಂದು ಇಲ್ಲೊಂದು ಉಳಿದಿರಬಹುದು ಅಷ್ಟೇ. ಈ ಭಾಷಣಗಳಿಗಾಗಿ ಅನೇಕ ವಿಷಯಗಳ ಬಗ್ಗೆ ಮಾಡಿದ ಟಿಪ್ಪಣಿಯ ಫೈಲುಗಳು ಸಾಕಷ್ಟಿವೆ. ಆದರೆ ಲೇಖನ ರೂಪದಲ್ಲಾಗಲೀ, ಪುಸ್ತಕ ರೂಪದಲ್ಲಾಗಲೀ ಪ್ರಕಟಿಸದಿರುವದರಿಂದ ಅವುಗಳಿಗೆ ಮಹತ್ವವಿಲ್ಲವಾಗಿದೆ.

**ಶಿವಶರಣ ಸಂಶೋಧನ ಹಗರಣ :**

ಡಾ. ಸ್ವಾಮಿಯವರ ವಿದ್ಯಾರ್ಥಿ ಬಳಗ ದೊಡ್ಡದು. ಅಧಿಕಾರವಿಲ್ಲದ ಇಂದಿನ ದಿನದಲ್ಲೂ ಗೌರವಿಸುವ ಆದರಿಸುವ ಅನೇಕ ವಿದ್ಯಾರ್ಥಿಗಳಿದ್ದಾರೆ. ಅದರಂತೆಯೇ ಅಲಕ್ಷಿಸುವ, ಅಗೌರವದಿಂದ ಕಾಣುವ, ಕೃತಘ್ನರಾದ ಕೆಲವು ವಿದ್ಯಾರ್ಥಿಗಳಿದ್ದಾರೆ. ಇದೆಲ್ಲಾ ಇಂದಿನ ವ್ಯವಹಾರಿಕ ಜಗತ್ತಿನ ಲಕ್ಷಣ. ಈಗಿನ ಕಾಲದಲ್ಲಿ ಜನರು ಸ್ವಂತ ಲಾಭಕ್ಕಾಗಿ ಯಾವ ಮಟ್ಟಕ್ಕೆ ಬೇಕಾದರೂ ಇಳಿಯಬಲ್ಲರು. ಹಾಗೆಯೇ ವಿದ್ಯಾರ್ಥಿಗಳೂ ಎಂದುಕೊಳ್ಳಬೇಕಷ್ಟೇ. ಜೀವನದಲ್ಲಿ ಎಷ್ಟೋ ಅನ್ಯಾಯಗಳನ್ನು ನುಂಗಿಕೊಂಡು ಬಂದರೂ ಯಾರನ್ನೂ ವಿರೋಧಿಸಿದವರು ಇವರಲ್ಲ. ಆದರೆ ಒಂದು ಸಂದರ್ಭದಲ್ಲಿ ತಮ್ಮ ಸಹನೆಯನ್ನು ಕಳೆದುಕೊಂಡರು. ಇಂತಹವರು ಸಹನೆಯನ್ನು ಕಳೆದುಕೊಳ್ಳಬೇಕೆಂದರೆ, ಅವರಿಗೆಷ್ಟು ಅಪಚಾರವಾಗಿರಬೇಕು, ನೋವಾಗಿರಬೇಕೆಂಬ ಅಂಶವನ್ನು ಅವರ ಪರಿಚಯದವರು ಅರ್ಥಮಾಡಿಕೊಳ್ಳಬೇಕಷ್ಟೆ. ಆ ಪ್ರಸಂಗ ತಮಗಾದ ಅವಮಾನವಲ್ಲ ಶಿವಶರಣರಿಗೆ, ಸಮಾಜಕ್ಕೆ ಆದ ಅಪಮಾನ. ಶತಶತಮಾನಗಳಿಂದ ನಂಬಿಕೊಂಡು ಬಂದಿದ್ದ ಧಾರ್ಮಿಕ ವಿಚಾರ ಹಾಗೂ ಶರಣರ ವ್ಯಕ್ತಿತ್ವದ ಬಗ್ಗೆ ಅಘಾತವನ್ನುಂಟು ಮಾಡುವಂತಹ ರೀತಿಯ ವಿಷಯಗಳು ಶಾಶ್ವತ ದಾಖಲೆಯಾಗಿ ಉಳಿಯುವಂತಹ ರೀತಿಯಲ್ಲಿ ಸಂಶೋಧನೆಯ ಹೆಸರಿನಲ್ಲಿ ಪ್ರಕಟವಾದಾಗ ಇವರಿಗೆ ಪ್ರತಿಭಟಿಸದೆ ಸುಮ್ಮನಿರಲು ಸಾಧ್ಯವಾಗಲಿಲ್ಲ. ಈ ವಿವಾದಿತ ಲೇಖನಗಳು ಕೆಲವು ವರ್ಷಗಳ

ಹಿಂದೆ ಪತ್ರಿಕೆಯಲ್ಲಿ ಪ್ರಕಟವಾಗಿದ್ದವು. ಆಗ ಅನೇಕ ವೀರಶೈವ ಗಣ್ಯರು ರೊಚ್ಚಿಗೆದ್ದು ಲೇಖಕರನ್ನು ಹಾಗೂ ಅವರ ಬೆಂಬಲಿಗರನ್ನು ಸಾರ್ವಜನಿಕವಾಗಿ ತರಾಟೆಗೆ ತೆಗೆದುಕೊಳ್ಳಬೇಕೆಂದು ಇವರ ಬಳಿ ಸಲಹೆಗೆ ಬಂದಿದ್ದರು. ಆದರೆ ಇಂತಹ ವಿಚಾರಗಳನ್ನು ಬೀದಿಗೆಳೆಯದೆ, ಹೇಗೆ ಸರಿಪಡಿಸಿಕೊಳ್ಳಬೇಕೆಂದು ಸಲಹೆಕೊಟ್ಟು ಸಮಾಧಾನ ಮಾಡಿ ಕಳಿಸಿದ್ದರು. ಅದೇ ರೀತಿ ಅದು ಪರಿಹಾರಗೊಂಡಿತು.

ಆದರೆ ಇದ್ದಕ್ಕಿದ್ದಂತೆಯೇ ಸಮಾಜದ ಪ್ರತಿಭಟನೆಯನ್ನು ಅಲಕ್ಷಿಸಿ, ಆ ಸಂಶೋಧನಾ ಲೇಖನಗಳು ಗ್ರಂಥ ರೂಪದಲ್ಲಿ ಅಚ್ಚಾಗಿ ಬಂದಾಗ, ಧರ್ಮಕ್ಕಾದ ಅಪಚಾರವನ್ನು ವೀರಶೈವ ಅಭಿಮಾನಿಗಳೊಂದಿಗೆ ಖಂಡಿಸಿದರು. ಆಗ ಇವರ ಮೇಲೆ ಇಲ್ಲದ ಅಪಪ್ರಚಾರವನ್ನು ರಾಜಕೀಯ ಕ್ಷೇತ್ರದಲ್ಲಿ ಮಾಡುವಂತೆ, ಇರುವ ವಿಚಾರ ಒಂದಾದರೆ, ಜನರಿಗೆ ಬೇರೆಯೇ ಆಗಿ ಕಾಣುವಂತೆ ಮಾಡುವ ಚಾಣಕ್ಯ ರೀತಿಯ ವ್ಯವಹಾರಗಳಿಗೆ ಪತ್ರಿಕೆಯ ಹೇಳಿಕೆಗಳಿಗೆ ಅವಕಾಶವಿತ್ತುದು, ನನಗೆ ತುಂಬಾ ಬೇಸರವಾಯಿತು. ರಿಟೈರ್ ಆಗುವ ಕಾಲದಲ್ಲಿ ಈ ಗೊಂದಲಕ್ಕೆ ಕೈಹಾಕಬಾರದೆಂದು ನನ್ನ ಒತ್ತಾಯವಾಗಿತ್ತು. ಆದರೆ ತಮಗೆ ಸರಿ ಕಂಡುದನ್ನು ಮಾಡಿಯೇ ಬಿಡುವ ಪ್ರವೃತ್ತಿಯ ಇವರನ್ನು ನನಗೆ ತಡೆಗಟ್ಟಲಾಗಲಿಲ್ಲ. ಇವರ ಪ್ರತಿಭಟನೆ ನ್ಯಾಯವೇ ಆಗಿದ್ದರೂ, ಈಗಿನ ಕಾಲದಲ್ಲಿ ತಂತ್ರಗಳು ಗೊತ್ತಿಲ್ಲದವರು ದೂರವಿರುವುದು ಬುದ್ಧಿವಂತಿಕೆ ಎಂಬುದು ನನ್ನ ಅನಿಸಿಕೆ.

ಆ ಸಂದರ್ಭದಲ್ಲಿ ಇವರ ಬಗ್ಗೆ ಹೊರಿಸಿದ ಸುಳ್ಳು ಆರೋಪಗಳು, ಜನ 'ಹೌದು' ಎನ್ನುವಂತೆ ನಿರ್ಮಿಸಿದ ಸಂದರ್ಭಗಳು, ಯಾವ ಕುತಂತ್ರದ ರಾಜಕೀಯ ಕ್ಷೇತ್ರದಲ್ಲೂ ಇರಲಾರದೇನೋ. ಆ ಪ್ರಸಂಗದಲ್ಲಿ ಇವರು, ತಮ್ಮ 'ವಿದ್ಯಾರ್ಥಿ' ಮುಂದೆ ಹೋಗುವುದನ್ನು ಸಹಿಸದೆ, ಅವರ ಹೆಸರು ಕೆಡಿಸಲು ಪ್ರಯತ್ನಿಸುತ್ತಿದ್ದಾರೆ ಎಂಬ ಅಪಾದನೆ ಕೇಳಿಬಂತು. ಬಹುಶಃ ಇವರಿಗೆ ಇದಕ್ಕಿಂತ ಅಪಚಾರವಾದ ಘೋರವಾದ ಮಾತು ಬೇರೊಂದಿರಲಾರದು. ವಿದ್ಯಾರ್ಥಿಗಳ ಏಳಿಗೆಗಾಗಿ, ಒಳಿತಿಗಾಗಿ ಇವರಿಗಿರುವ ಕಳಕಳಿ, ಆಸೆ ನೂರಕ್ಕೆ ತೊಂಬತ್ತೊಂಬತ್ತು ಮಂದಿ ಶಿಕ್ಷಕರಿಗೆ ಇರುವುದಿಲ್ಲ. ಎಂದು ಘಂಟಾಘೋಷವಾಗಿ ಹೇಳಬಲ್ಲೆ. ಆದರೆ ಕೆಲವು ಪ್ರಸಂಗಗಳು ಜೀವನದಲ್ಲಿ ವಿರುದ್ಧ ಸನ್ನಿವೇಶದಲ್ಲಿ ಯಾವ ಅಪವಾದ ಬೇಕಾದರೂ ಬರಲು ಸಾಧ್ಯ ಎಂಬುದಕ್ಕೆ ಇದೊಂದು ಉತ್ತಮ ನಿದರ್ಶನವೆಂದು ಹೇಳಬಹುದು.

**ಪಿಎಚ್.ಡಿ. ವಿದ್ಯಾರ್ಥಿಗಳು :**

ಪಿಎಚ್.ಡಿ. ವಿದ್ಯಾರ್ಥಿಗಳು ತಮ್ಮ ಪ್ರಬಂಧಗಳನ್ನೊಪ್ಪಿಸುವಾಗ ಆಯಾ ಪ್ರಬಂಧಗಳ ಮುನ್ನುಡಿಯಲ್ಲಿ ತಮಗೆ ನೆರವಾದವರ ಬಗ್ಗೆ ಕೃತಜ್ಞತೆಗಳನ್ನರ್ಪಿಸುವದು ಕ್ರಮ. ವಿದ್ಯಾರ್ಥಿಗಳಿಗಾಗಿ ಯಾವ ಸಹಾಯ ಬೇಕಾದರೂ ಮಾಡುತ್ತಾರೆಂಬುದನ್ನು

ಅರಿತ ಕೆಲವು ವ್ಯವಹಾರ ಚತುರರಾದ ಪಿಎಚ್.ಡಿ. ವಿದ್ಯಾರ್ಥಿಗಳು, ಬೇರೆ ಯಾರು ಯಾರಿಗೋ ಕೃತಜ್ಞತೆ ಸಲ್ಲಿಸುವಾಗ ಅದನ್ನು ವೈಭವೀಕರಿಸಿ ಬರೆದು, ತಮ್ಮ ಮಾರ್ಗದರ್ಶಕರಾದ ಇವರ ಬಗ್ಗೆ ವ್ಯವಹಾರಿಕವಾಗಿ ಬರೆಯಬೇಕಾದಷ್ಟನ್ನು ಮಾತ್ರ ಬರೆದುದೂ ಉಂಟು! ಒಬ್ಬರಂತೂ ತಾವೇ ಎಲ್ಲ ಮಾಡಿಕೊಂಡು ಬಂದು, ಇವರಿಂದ ಒತ್ತಾಯಪೂರ್ವಕ ಒಪ್ಪಿಗೆ ಪಡೆದುಕೊಳ್ಳಬೇಕಾಯಿತೆಂಬ ಅರ್ಥ ಬರುವಂತೆ ಬರೆದುಕೊಂಡು ಬಂದಾಗಲೂ ಒಂದೂ ಮಾತಿಲ್ಲದೆ ಸಹಿ ಮಾಡಿಕೊಟ್ಟಿದ್ದಾರೆ; ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಅನುಮತಿ ಕೊಟ್ಟಿದ್ದಾರೆ.

ಆ ಸಂದರ್ಭಗಳಲ್ಲಿ ನಾನು, "ಏನ್ರಿ ಹೀಗೆಲ್ಲಾ ಬರೆದರೂ ಸಹಿ ಮಾಡ್ತೀರಲ್ಲಾ ನೋಡಿದವರು ನೀವೇನೂ ಮಾಡೇ ಇಲ್ಲ ಎಂದುಕೊಳ್ಳುವುದಿಲ್ಲವೆ? ಇಂತಹ ಕನ್ನಿಂಗ ಆದವರಿಗೆಲ್ಲಾ ಆಸ್ಪದ ಕೊಡ್ತೀರಲ್ಲ" ಎಂದಾಗ, "ನಾನಾಗ್ಲೇ ರಿಟೈರ್ ಆಗಲು ಬಂದಿದ್ದೇನೆ. ಇನ್ನೂ ಅಧಿಕಾರದಲ್ಲಿದ್ದವರ ಬಗ್ಗೆ ಸ್ವಲ್ಪ ಹೊಗಳಿ ಬರೆದರೆ ಅವರಿಗೆ ವಿದ್ಯಾರ್ಥಿಗಳಿಗಾಗುತ್ತದೆ. ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತಿದ್ದರೆ, ಅವರ ಭವಿಷ್ಯ ಚೆನ್ನಾಗಿ ಆದರೆ ಸಾಕು. ನನ್ನ ಪ್ರತಿಷ್ಠೆಗಾಗಿ ಯಾಕೆ ತಪ್ಪಿಸಬೇಕು. ಅವರು ಹಾಗೆ ಬರೆದುದರಿಂದ ನನಗೆ ಯಾವ ನಷ್ಟವೂ ಆಗುವುದಿಲ್ಲ. ನನ್ನ ಕಾಲ ಮುಗಿದಿದೆ. ಮುಂದೆ ನನಗೆ ಆಗಬೇಕಾದುದು; ಏನೂ ಇಲ್ಲ' ಎಂದು ನನ್ನ ವಾದವನ್ನು ತಳ್ಳಿಹಾಕಿ ಬಿಡುತ್ತಿದ್ದರು. ಅವರ ಈ ಸ್ವಭಾವ ಸಾಮಾನ್ಯವಾಗಿ ಎಲ್ಲ ವಿದ್ಯಾರ್ಥಿಗಳಿಗೆ ಗೊತ್ತಿತ್ತು. ಹಾಗಾಗಿ ಕೆಲವು ಚಾಣಾಕ್ಷ ವಿದ್ಯಾರ್ಥಿಗಳು ನಿರ್ದಾಕ್ಷಿಣ್ಯವಾಗಿ ಅದರ ದುರುಪಯೋಗ ಮಾಡಿಕೊಂಡಿದ್ದಾರೆ. ಇವರು ವಿದ್ಯಾರ್ಥಿಗಳ ಅಭ್ಯಾಸದ ಬಗ್ಗೆಯಷ್ಟೇ ಅಲ್ಲ ಅವರ ಜೀವನದ ಬಗ್ಗೆಯೂ ಕಾಳಜಿ ವಹಿಸುತ್ತಿದ್ದರು. ಅಂತಹ ಉದಾಹರಣೆಗಳಿಗೆ ಲೆಕ್ಕವಿಲ್ಲ.

ಅವರ ಒಬ್ಬ ವಿದ್ಯಾರ್ಥಿ ಲೆಕ್ಚರರ್ ಆಗಿ ಕೆಲಸ ಮಾಡುತ್ತಿದ್ದರು. ಆಗ ತಾನೆ ಮದುವೆಯಾಗಿತ್ತು. ಅಷ್ಟರಲ್ಲಿ ತಂದೆ ತೀರಿಹೋದರು. ಹಾಗಾಗಿ ಹಿರಿಯ ಮಗನಾದ ಆತನ ಮೇಲೆಯೇ ತಮ್ಮಂದಿರ ವಿದ್ಯಾಭ್ಯಾಸ, ತಂಗಿಯ ಮದುವೆ, ತಾಯಿಯ ರಕ್ಷಣೆ, ಸಂಸಾರದ ನಿರ್ವಹಣೆ ಬಿದ್ದಿತು. ಅದೇ ಸಮಯದಲ್ಲಿ ಯಾವದೋ ತಾಂತ್ರಿಕ ಕಾರಣಕ್ಕಾಗಿ ಈತನನ್ನು ಕೆಲಸದಿಂದ ತೆಗೆದುಹಾಕಿದರು. ಈಗ ಕೇಳಬೇಕೇ ಆತನ ಗೋಳನ್ನು? ಆಗ ಆತನಿಗೆ ನೆನಪು ಬಂದುದು ಆಪದ್ಬಾಂಧವರಾದ ಈ ಗುರುಗಳು. ಕೂಡಲೇ ತನ್ನ ಪರಿಸ್ಥಿತಿ ವಿವರಿಸಿ ಬರೆದರು. ಆತ್ಮಹತ್ಯೆ ಮಾಡಿಕೊಳ್ಳಬೇಕೆನ್ನಿಸುವ ಮಟ್ಟಕ್ಕೆ ಬಂದಿತ್ತು, ಆತನು ಮನಸ್ಸು. ಈ ವಿಷಯ ತಿಳಿದಕೂಡಲೇ ಡಾ. ಸ್ವಾಮಿಯವರು ಮರುನೇಮಕಕ್ಕೆ ಆಕಾಶ ಭೂಮಿ ಒಂದಾಗುವಂತಹ ಪ್ರಯತ್ನ ನಡೆಸಿದರು.

ಅದೇ ಸಮಯದಲ್ಲಿ ನಮ್ಮ ಮಗನಿಗೆ ಪ್ಯಾರಾ ಟೈಫಾಯಿಡ್ ಆಗಿತ್ತು. ಡಾಕ್ಟರು ಮನೆಗೆ ಬಂದು ಚಿಕಿತ್ಸೆ ನಡೆಸುತ್ತಿದ್ದರು. ಒಂದು ರಾತ್ರಿ ಜ್ವರ ವಿಪರೀತವಾಯಿತು. ಜ್ವರದ ಕಾರಣವೋ, ಔಷಧದ ಪರಿಣಾಮದಿಂದಲೋ ರಾತ್ರಿ ಎಲ್ಲಾ ಅಂಗಾಲು, ಮೈ ಕೈ ಉರಿ ಎಂದು ಒದ್ದಾಡುತ್ತಿದ್ದ. ನಾನು ಗಾಬರಿಯಾಗಿ ಇಡೀ ರಾತ್ರಿ ಹಾಸಿಗೆಯ ಬಳಿಯೇ ಕುಳಿತು ಕೈ, ಕಾಲು ಎಲ್ಲಾ ಸವರುತ್ತಿದ್ದೆ. ಏನು ಮಾಡಲು ತಿಳಿಯದೆ ಮನಸ್ಸೆಲ್ಲಾ ತಳಮಳಗುಡುತ್ತಿತ್ತು. ಇವರು ಮಾತ್ರ ರೂಮಿನಿಂದ ಎದ್ದು ಬರಲೇ ಇಲ್ಲ. 'ಹೇಗಿದೆ' ಎಂದು ವಿಚಾರಿಸಲೂ ಇಲ್ಲ.

ಇಂತಹ ಸ್ಥಿತಿಯಲ್ಲೂ ಇವರದ್ದು ಎಂತಹ ನಿದ್ದೆಯಪ್ಪಾ ಎನ್ನಿಸುತ್ತಿತ್ತು ನನಗೆ. ಇವರು ಬಂದು ಏನು ಮಾಡುವಂತಿರಲಿಲ್ಲ ನಿಜ. ಆದರೆ ಜೊತೆಗಿದ್ದರೆ ಮನಸ್ಸಿನ ಆತಂಕವನ್ನು ಹೇಳಿಕೊಂಡರೆ ಮನಸ್ಸು ಸ್ವಲ್ಪ ಹಗುರಾಗುತ್ತಿತ್ತು; ಸ್ವಲ್ಪ ಧೈರ್ಯ ಬರುತ್ತಿತ್ತು. ಆದರೆ ಇಡೀ ರಾತ್ರಿ ಬರಲೇ ಇಲ್ಲ. ನಾನು ಎಬ್ಬಿಸಲು ಹೋಗಲೂ ಇಲ್ಲ. ಬೆಳಗಾಗುವ ಹೊತ್ತಿಗೆ ಜ್ವರ ಸ್ವಲ್ಪ ಇಳಿಯಿತು. ಮಗನಿಗೆ ಸ್ವಲ್ಪ ನಿದ್ದೆಯೂ ಹತ್ತಿತ್ತು. ಆ ಸಮಯ ನೋಡಿ ಬೇಗ ಮುಖ ತೊಳೆದುಕೊಂಡು ಬಂದರಾಯ್ತೆಂದು ಎದ್ದುಬಂದೆ. ಇವರು ಪ್ಯಾಂಟ್ ಹಾಕಿಕೊಳ್ಳುತ್ತಿದ್ದರು. ತಡೆಯಲಾರದಷ್ಟು ಸಿಟ್ಟು ಬಂದರೂ ನುಂಗಿಕೊಂಡು 'ಬೆಳಗಾಗುತ್ತಲೇ ಎಲ್ಲಿಗೆ?' ಎಂದೆ. 'ಇಲ್ಲೇ ವಜ್ರಕುಮಾರರವರ ಕಡೆ ಹೋಗಿ ಬರ್ತೇನೆ. ಲೇಟ್ ಆದರೆ ಅವರು ಬಿಸಿ ಆಗ್ಬಿಟ್ತಾರೆ. ಸಿಕ್ಕೋದಿಲ್ಲ. ಅವರಲ್ಲೇನಾದ್ರೂ ಒಂದು ವೇಕೆನ್ಸಿ ಇದ್ಯಾಂತ ಕೇಳ್ಕೊಂಡು ಬರ್ತೀನಿ ಎಂದರು. ನನಗೆ ಸಿಟ್ಟು ತಡೆಯಲಾಗಲಿಲ್ಲ. ಇಲ್ಲಿ ಮಗ ರಾತ್ರಿ ಎಲ್ಲಾ ಜ್ವರದಿಂದ ಒದ್ದಾಡ್ತಾ ಇದ್ರೆ ನಿಮ್ಗೆ ಯಾರ್‍ಯಾರ ಕೆಲಸ ಹೆಚ್ಚಾಯ್ತು ಅಲ್ವಾ? ಎಂದೆ ಬಿರುಸಾಗಿ. ಆಗ ಅವರು ಕೂಲಾಗಿ, "ನಾನ್ಮಾಡೋದೇನಿದೆ? ಡಾಕ್ಟ್ರು ನೋಡಿ ಔಷಧಿ ಕೊಟ್ಟಿದ್ದಾರೆ. ನೀನು ನೋಡ್ಕೋಳ್ತಾ ಇದ್ದೀಯ. ಪಾಪ ಆ ಬಡಪಾಯಿಗೆ ಯಾರು ದಿಕ್ಕಿದಾರೆ. ದಿನಬೆಳಗಾದ್ರೆ ಮನೆಲಿರೋ ಜನಕ್ಕೆ ಒಂದು ತುತ್ತು ಅನ್ನ ಹಾಕೋರು ಅವ್ನಿಗಿಲ್ಲ. ಅವ್ನಿಗೇನಾದ್ರು ವ್ಯವಸ್ಥೆ ಮಾಡದಿದ್ರೆ ಅವ್ನ ಲೈಫ್ ದುರಂತಕ್ಕೀಡಾಗುತ್ತದೆ" ಎಂದರು. ನನಗೆ ಮುಂದೆ ಏನೂ ಮಾತಾಡಬಾರದು; ಆಡಿದ್ರೂ ಪ್ರಯೋಜನವಿಲ್ಲವೆನ್ನಿಸಿ ಒಳಗೆ ಹೋಗಿಬಿಟ್ಟೆ, (ಇದನ್ನು ಇಲ್ಲಿ ಬರೆಯುವದಕ್ಕೂ ಇವರ ಸಮ್ಮತಿ ಇಲ್ಲ)

ಈ ವಿಚಾರ ಏಕೆ ಬರಿತೀದೀನಿಂದ್ರೆ, ಇವರ ಕಾಳಜಿ ತಮ್ಮ ಕುಟುಂಬಕ್ಕಿಂತ ತಮ್ಮ ವಿದ್ಯಾರ್ಥಿಗಳ ಬಗ್ಗೆ ಹೆಚ್ಚಾಗಿತ್ತು ಎಂಬುದನ್ನು ತಿಳಿಸುವ ಕಾರಣ ಈ ಘಟನೆ ಹೇಳಿದೆ ಅಷ್ಟೇ. ಇಂತಹ ಉದಾಹರಣೆಗಳು ಹಲವಾರು, ಹಣ ಪಡೆದವರಿಗೆ ಲೆಕ್ಕವಿಲ್ಲ. ಆದರೆ ಅದನ್ನೆಂದೂ ಇವರು ನನಗೆ ಹೇಳಿಲ್ಲ. ಆಕಸ್ಮಾತ್ತಾಗಿ ನನಗೆ ಗೊತ್ತಾಗಿದೆ ಅಷ್ಟೆ. ಅವುಗಳನ್ನೆಲ್ಲ ಹೇಳುತ್ತಾ ಹೋದರೆ ಆತ್ಮಪ್ರಶಂಸೆ

ಎನ್ನಿಸುತ್ತದೆಯಲ್ಲದೆ, ಹೊಗಳಿಸಿಕೊಳ್ಳುವದಕ್ಕಾಗಿ ಬೇರೆಯವರಿಗೆ ಸಹಾಯ ಮಾಡದ ಅವರ ತತ್ವಕ್ಕೆ ವಿರುದ್ಧವಾಗುತ್ತದೆ. ಆದರೂ ಅವರು ಸಮಾಜಕ್ಕಾಗಿ, ವಿದ್ಯಾರ್ಥಿಗಳಿಗಾಗಿ, ಧರ್ಮಕ್ಕಾಗಿ, ಜೀವನವಿಡೀ ದುಡಿದಿದ್ದಾರೆ. ಅದು ನಾಲ್ಕು ಜನರ ಕಿವಿಗೆ ಬಿದ್ದರೆ ಒಬ್ಬರಾದರೂ ಅಂತಹ ಆದರ್ಶ ಬೆಳೆಸಿಕೊಳ್ಳಲು ಪ್ರಯತ್ನಿಸಲಿ ಎಂಬುದು ನನ್ನ ಅನಿಸಿಕೆ. ನನಗೇನು ಇವರು ಬೇರೆಯವರಿಗೆ ನೆರವಾಗಬಾರದೆಂಬ ಉದ್ದೇಶವಿಲ್ಲ. ಆದರೆ ನಮ್ಮದನ್ನು ಅಲಕ್ಷಿಸಿ, ಹೆರವರದ್ದೇ ಮಹತ್ವದ್ದು ಎನ್ನುವಷ್ಟರ ಮಟ್ಟಿಗೆ ಇರಬಾರದು ಅಷ್ಟೇ. ಎಷ್ಟೋ ಬಾರಿ ಇವರ ಉದಾರತೆ, ಹೃದಯವಂತಿಕೆಯನ್ನು ನೋಡಿ ದಂಗಾಗಿದ್ದೇನೆ. ಒಳಗೆ ಮೆಚ್ಚುಗೆ ಉದಾರತೆಗೆ ಸಿಕ್ಕಿಬಿಟ್ಟರೆ ಮಿತಿಮೀರಿ ಹೋಗಬಹುದು. ಹಾಗಾದಾಗ ನಮ್ಮ ಸಂಸಾರದ ಗತಿ ಏನು ಎಂಬ ಚಿಂತೆ ಅಷ್ಟೆ. ಉದಾರತೆಗೂ ಒಂದು ಮಿತಿ ಇರಬೇಕಲ್ಲವೇ?

**ಹಣವಿರುವುದು ನಮ್ಮ ಸೇವೆಗೆ :**

ಹಣ ಕೂಡಿಡುವ ಸ್ವಭಾವ ಇವರದ್ದಲ್ಲ. ನಾಳೆಗಾಗಿ ಚಿಂತಿಸುವ ಜಾಯಮಾನವೂ ಇವರದ್ದಲ್ಲ. ಹಾಗಾಗಿ ಮೊದಮೊದಲು ತುಂಬಾ ಕಷ್ಟ ಅನುಭವಿಸಬೇಕಾಯ್ತು. 'ತಾನು ದುಡಿಯುತ್ತೇನೆಂದು ಗರ್ವ' ಎಂಬ ಮಾತು ಬರಬಾರದೆಂದು (ಆಗಿನ ಕಾಲದಲ್ಲಿ ಹೆಣ್ಣುಮಕ್ಕಳು ಹೆಚ್ಚಾಗಿ ನೌಕರಿಗೆ ಹೋಗುತ್ತಿರಲಿಲ್ಲ)ನನ್ನ ಬ್ಯಾಂಕಿನ ಹಣ ಡ್ರಾ ಮಾಡುವ ಅಧಿಕಾರ ಇವರಿಗೇ ಬರೆದುಕೊಟ್ಟುಬಿಟ್ಟಿದ್ದೆ. ನಾನೆಂದೂ ಬ್ಯಾಂಕಿಗೇ ಹೋದವಳಲ್ಲ. ಆಗ ನಮ್ಮ ಇಬ್ಬರ ಪಗಾರವನ್ನು ಎಂಟು ದಿನಗಳಲ್ಲಿ ಮುಗಿಸಿ, 'ಹಣವೆಲ್ಲಾ ಮುಗಿಯಿತು, ಮುಂದೆ ನನ್ನಲ್ಲಿ ಏನೂ ಇಲ್ಲ' ಎಂದು ಬಿಡುತ್ತಿದ್ದರು. ಐದು ರೂಪಾಯಿ ಸಹ ಬೇರೆಯವರನ್ನು ಕೇಳುವಂತಾಗುತ್ತಿತ್ತು. ಉಡಲು ಸೀರೆಗಳಿಲ್ಲದೆ, ದೊಡ್ಡ ದೊಡ್ಡ ಸೀರೆಗಳನ್ನೇ ಕಾಲೇಜಿಗೆ ಉಟ್ಟು ಹರಿದೆ.

೧೯೭೦ ನನ್ನ ಕೊನೆಯ ತಂಗಿಯ ಮದುವೆಯಾದಾಗ, ಮದುವೆಗೆ ಉಡಲು ಸೀರೆಗಳಿರಲಿಲ್ಲ. ಇವರಿಗೂ ಸರಿಯಾದ ಬಟ್ಟೆಗಳಿರಲಿಲ್ಲ. ಆಗ ಇವರ ಮಿತ್ರ ಹತ್ತಿರ ಎಂಟುನೂರು ರೂ. ಸಾಲಮಾಡಿ ಮೂರಜನಕ್ಕೆ ಬಟ್ಟೆಕೊಂಡು ಮದುವೆಗೆ ಹೋದೆವು. ಆಗ ನನಗೆ ತುಂಬಾ ಅವಮಾನವೆನ್ನಿಸಿ ಮನಸ್ಸನ್ನು ಗಟ್ಟಿಮಾಡಿಕೊಂಡು, ನನ್ನ ಸಂಬಳವನ್ನು ದಿನನಿತ್ಯದ ಖರ್ಚಿಗೆ ಕೊಡುವುದಿಲ್ಲ ಅನಿವಾರ್ಯ ಪ್ರಸಂಗಗಳಲ್ಲಿ ಮಾತ್ರ ಖರ್ಚು ಮಾಡುತ್ತೇನೆ ಎಂದು ಹಠ ಹಿಡಿದೆ. ಆ ಬ್ಯಾಂಕಿಗೆ ಇವರೇ ಡ್ರಾ ಮಾಡುವಂತೆ ಬರೆದುಕೊಟ್ಟಿದ್ದೆ. ಈಗ ಅವರಿಗೆ ಕೊಡಬೇಡಿ ಎಂದು ಹೇಳುವುದು ಸರಿಯಲ್ಲವೆಂದು, ಇನ್ನೊಂದು ಬ್ಯಾಂಕಿನಲ್ಲಿ ನನ್ನ ಹೆಸರಿನಲ್ಲಿ ಅಕೌಂಟ್ ತೆರೆದು, ಅಲ್ಲಿಗೆ ನನ್ನ ಸಂಬಳ ತುಂಬುವಂತೆ ಮಾಡಿದೆ.

ಹೀಗೆ ಹಿಡಿತ ಮಾಡಿದ ಮೇಲೆ ಹಣದ ಅಡಚಣೆ ಕಡಿಮೆಯಾಗುತ್ತಾ ಬಂತು. ಈಚೆಗೆ ಸಂಬಳವೂ ಹೆಚ್ಚಾಯ್ತು, ಮನೆಯಲ್ಲಿರುವ ಬಂಧುಗಳ ಸಂಖ್ಯೆಯೂ ಕಡಿಮೆಯಾಯ್ತು. ಇವರಿಗೂ ಸ್ವಲ್ಪ ಬುದ್ಧಿ ಬರುವಂತಹ ಅನುಭವಗಳಾದವು. ಹಾಗಾಗಿ ಆರ್ಥಿಕ ಸ್ಥಿತಿ ಉತ್ತಮಗೊಂಡಿತೆನ್ನಬೇಕು.

**ನಿಶ್ಚಿಂತತೆಯ ಸ್ವಭಾವ :**

ಎಷ್ಟೇ ಸಮಸ್ಯೆಗಳಿದ್ದರೂ ಯಾವುದನ್ನೂ ಹಚ್ಚಿಕೊಂಡು ಕೊರಗುವ ಸ್ವಭಾವದವರಲ್ಲ. ಎಂತೆಂತಹ ಸಂದರ್ಭಗಳಲ್ಲಿಯೂ ಹಾಸಿಗೆಗೆ ತಲೆ ಇಡುತ್ತಲೇ ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಾರೆ. ಎಷ್ಟೋ ಬಾರಿ ಇವರ ಸಮಸ್ಯೆಗಳ ಕಾರಣ ಇಡೀ ರಾತ್ರಿ ನಾನು ಕಣ್ಣು ತೆರೆದು ಚಿಂತೆ ಮಾಡುತ್ತಿದ್ದರೆ, ಇವರು ಸುಖವಾಗಿ ನಿದ್ದೆ ಮಾಡಿದ್ದುಂಟು. ನಾನೊಮ್ಮೆ ಅವರನ್ನು, 'ಇದು ಹೇಗೆ ಸಾಧ್ಯ' ಎಂದು ಕೇಳಿದಾಗ, 'ನಾನು ಏನೇ ಸಮಸ್ಯೆಗಳಿದ್ದರೂ (ತಲೆತೋರಿಸಿ) ಈ ಮಟ್ಟದಲ್ಲಷ್ಟೇ ವಿಚಾರ ಮಾಡುತ್ತೇನೆ. ಅವು ಇಲ್ಲಿಯವರೆಗೆ (ಹೃದಯ ತೋರಿಸುತ್ತ) ಇಳಿಯಲು ಬಿಡುವುದೇ ಇಲ್ಲ' ಎಂದರು. ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಎಲೆಕ್ಷನ್‌ಗೆ ನಿಂತಾಗ, ನಾನು ಜಿಲ್ಲೆಯ ಮಟ್ಟದಲ್ಲಿ ನಿಲ್ಲುವುದು ಬೇಡವೆಂದು ಅಭಿಪ್ರಾಯಪಟ್ಟೆ. ಎಂದಿಗೂ ಸ್ಥಾನ-ಮಾನ, ಪ್ರೆಸ್ಟೀಜ, ಡಿಗ್ನಿಟಿ ಎಂದು ತಲೆಕೆಡಿಸಿಕೊಳ್ಳದ ಇವರು, ತಾವು ರಿಟೈರ ಆಗುವುದರಿಂದ ಸಾಕಷ್ಟು ಬಿಡುವು ಸಿಕ್ಕುತ್ತದೆ. ಬೆಂಗಳೂರಿನಲ್ಲಿರುವ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳಲ್ಲಿ ಉತ್ತರ ಕರ್ನಾಟಕದ ಎಲ್ಲಾ ಸಾಹಿತಿಗಳಿಗೂ ಅವಕಾಶ ದೊರೆಯಲು ಸಾಧ್ಯವಿಲ್ಲ. ಇದನ್ನು ಅದೇ ಮಟ್ಟದಲ್ಲಿ ಬೆಳೆಸಬೇಕೆಂಬ ತಮ್ಮ ಅನೇಕ ಯೋಜನೆಗಳನ್ನು ವಿವರಿಸಿದರು. ಆಗಲೂ ನಾನು, ಎಲ್ಲರೂ ಒಮ್ಮತದಿಂದ ಆರಿಸಿದರೆ ಮಾತ್ರ ಒಪ್ಪಬೇಕು, ಎಲೆಕ್ಷನ್‌ಗೆ ಮಾತ್ರ ನಿಲ್ಲಬೇಡಿ ಎಂದೆ.

ಕೆಲವು ಪ್ರಮುಖರನ್ನು ಭೆಟ್ಟಿಯಾದಾಗ, ಅವರು ನೀವು 'ನಿಂತಿರುವಾಗ, ಬೇರೆಯವರು ನಿಲ್ಲುವುದೇ? ಅವರಿಗೆ ಹಿಂತೆಗೆದುಕೊಳ್ಳಲು ಹೇಳುತ್ತೇವೆ ಎಂದರಂತೆ. ಆದರೆ, ಈಗಿನ ಯುವಕರಿಗೆ ತಾವು ಮುಂದೆ ಬರಬೇಕು, ಅವಕಾಶ ಗಿಟ್ಟಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆ ಇರುತ್ತದೆ. ಈ ಕಾಲದಲ್ಲಿ ತಾರತಮ್ಯಗಳಿಗೆ ಮಹತ್ವವಿಲ್ಲ. ಹಾಗಾಗಿ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲಿಲ್ಲ. ಕೊನೆಯಲ್ಲಿ ಎಲೆಕ್ಷನ್ ನಡೆಯುವದು ಖಚಿತವಾಯಿತು. ಹಳೆಯ ಮೌಲ್ಯಗಳಲ್ಲಿ ನಂಬುಗೆ ಇಟ್ಟಿದ್ದ ಇವರು ಓವರ್ ಕನ್‌ಫಿಡನ್ಸ್‌ನಲ್ಲಿ ನಿಶ್ಚಿಂತರಾದರು. ಎಲೆಕ್ಷನ್‌ಗೆ ನಿಲ್ಲಬಾರದಿತ್ತು, ನಿಂತ ಮೇಲೆ ಆಧುನಿಕ ರಾಜಕೀಯ ತಂತ್ರಗಳನ್ನಾದರೂ ಉಪಯೋಗಿಸಬೇಕಿತ್ತು. ಗುಂಡಿಗೆ ಎದೆಯೊಡ್ಡಿ ನಿಂತ ಸ್ವಾತಂತ್ರ್ಯ ಯೋಧನಂತೆ, ವರ್ತಿಸಿದಾಗ ಎಲೆಕ್ಷನ್

ನಿರ್ಣಯ ಇವರ ನಿರೀಕ್ಷೆಯನ್ನು ತಲೆಕೆಳಗು ಮಾಡಿತು. ಒಂದೇ ಒಂದು ಓಟಿನಿಂದ ಸೋತರು! ಮೋಸವಾಯಿತು. ಆ ದಿನ ರಾತ್ರಿ ಸಹ ನಿಶ್ಚಿಂತೆಯಿಂದ ನಿದ್ದೆ ಮಾಡಿ, ಮರುದಿನ ಬೆಳಿಗ್ಗೆ ಡಿಪಾರ್ಟ್‌ಮೆಂಟಿನಲ್ಲಿ ಎಂದಿನಂತೆ ಕ್ಲಾಸ್ ತೆಗೆದುಕೊಂಡು ಬಂದರು. ಸಂಜೆ ಮನೆಗೆ ಬಂದ ಶ್ರೀ ಬಸವರಾಜ ಕಟ್ಟಿಮನಿಯವರು, ಇವರು ರಾತ್ರಿ ನಿಶ್ಚಿಂತೆಯಿಂದ ಊಟ ಮಾಡಿ ನಿದ್ದೆ ಮಾಡಿದುದನ್ನೂ, ಬೆಳಿಗ್ಗೆ ತರಗತಿಗೆ ಹೋಗಿ ಕ್ಲಾಸ್ ತೆಗೆದುಕೊಂಡುದನ್ನೂ ಕೇಳಿ ದಿಗ್ಭ್ರಮೆಗೊಂಡರು. ತಮಗೆ ಮಾತ್ರ ರಾತ್ರಿ ಊಟ ಸೇರಲಿಲ್ಲವೆಂದೂ, ನಿದ್ದೆಬರಲೇ ಇಲ್ಲವೆಂದು ಹೇಳಿದರು.

ಆಗ ಇವರು "ಏನೇನೋ ಕಲಸ ಮಾಡಬೇಕೆಂದು ಯೋಜನೆ ಹಾಕಿಕೊಂಡಿದ್ದೆ. ಆರಿಸಿ ಬರಲಿಲ್ಲ, ಕೆಲಸ ಮಾಡುವುದು ಸಾಧ್ಯವಾಗುವುದಿಲ್ಲ. ಅಷ್ಟೆ. ಒಳ್ಳೆಯದೇ ಆಯಿತೇನೋ ಈ ವಯಸ್ಸಿನಲ್ಲಿ ಅಷ್ಟೊಂದು ದುಡಿಯುವುದು ಒಳ್ಳೆಯದಲ್ಲವೆಂದು ಹೀಗಾಗಿರಬೇಕು. ಈ ಕಾಲದಲ್ಲಿ ಎಲೆಕ್ಷನ್ ಗೆದಿಯಲು ಬೇಕಾದ ಕ್ವಾಲಿಫಿಕೇಶನ್ನೇ ಬೇರೆ, ಅವು ನಮಗಿಲ್ಲ ಎಂದುಕೊಂಡರಾಯ್ತು" ಎಂದರು.

ಹೀಗೆ ತಮ್ಮ ಎಣಿಕೆಯಂತೆ ಕೆಲಸಗಳಾದರೆ ಉತ್ಸಾಹದಿಂದ ದುಡಿಯುವುದು; ಆಗದಿದ್ದರೆ ಮನಸ್ಸಿಗೆ ಹಚ್ಚಿಕೊಳ್ಳದೆ ಮರೆತುಬಿಡುವುದು ಇವರ ಅಪರೂಪದ ಸ್ವಭಾವ. ಫಲಿತಾಂಶ ಅವರಿಗೂ ಸಾಕಷ್ಟು ನೋವು ಉಂಟುಮಾಡಿದೆ ಎನಿಸಿತು. ನನಗಂತೂ ತುಂಬಾ ಕೆಡುಕೆನ್ನಿಸಿತ್ತು. ಜಿಲ್ಲೆಯ ಸ್ಪರ್ಧೆಯಲ್ಲಿ ಹೀಗಾಯ್ತಲ್ಲ ಎಂಬುದು ಒಂದು ನೋವಾದರೆ, ಅವರ ನೆರವು ಪಡೆದ ವಿದ್ಯಾರ್ಥಿ ಪೈಪೋಟಿ ನಡೆಸಿದುದು, ಹಳೆಯ ಮೌಲ್ಯಗಳಿಗೆ ಅಂಟಿಕೊಂಡಿದ್ದ ನನಗೆ ನುಂಗಲು ಕಷ್ಟವೆನ್ನಿಸಿತ್ತು. ಕಟ್ಟೀಮನಿಯವರೊಡನೆ 'ಇವರ ಸ್ಪರ್ಧಿಯಾಗಿ ನಿಂತಿದ್ದ ಇವರ ಹಳೆಯ ವಿದ್ಯಾರ್ಥಿಗೆ ಮೊದಲ ಬಾರಿ ಎಂ.ಎ. ಥರ್ಡ್‌ಕ್ಲಾಸ್‌ನಲ್ಲಿ ಆಗಿತ್ತಂತೆ. ಆಗ ಕೆಲವು ಪ್ರಾಧ್ಯಾಪಕರು, ಜಾತಿಯ ಕಾರಣ ಇವರಿಗೆ ಹಾಗೆ ಮಾಡಿದರೆಂದು ತುಂಬಾ ಬೇಜಾರು ಮಾಡಿಕೊಂಡು, ಇನ್ನು ವಿಶ್ವವಿದ್ಯಾಲಯದ ಕಡೆ ತಿರುಗಿ ನೋಡುವುದು ಬೇಡವೆಂದು ಹೈಸ್ಕೂಲಿನಲ್ಲೆ ಇದ್ದು ಬಿಡಬೇಕೆಂದು ನಿರ್ಧರಿಸಿದ್ದರಂತೆ'.

ಆಗ 'ಇವರು' ಅವರನ್ನು ಕರೆಸಿ, 'ಹಾಗೆ ಮಾಡಬೇಡ. ಇನ್ನೊಮ್ಮೆ ಪರೀಕ್ಷೆ ಕಟ್ಟು, ನಾನು ನಿನಗೆ ಓದಲು ಬೇಕಾದ ಸಹಾಯವನ್ನೆಲ್ಲಾ ಮಾಡುತ್ತೇನೆ, ನಿರಾಶನಾಗುವುದು ಸರಿಯಲ್ಲ ಎಂದು ನಾನಾ ವಿಧವಾಗಿ ಪ್ರೋತ್ಸಾಹಿಸಿ ಮತ್ತೆ ಪರೀಕ್ಷೆ ಕಟ್ಟುವಂತೆ ಮಾಡಿ, ಪುಸ್ತಕಗಳನ್ನೆಲ್ಲಾ ಕೊಟ್ಟು, ಓದುವ ಬಗ್ಗೆ ಮಾರ್ಗದರ್ಶನ ಮಾಡಿದರಂತೆ! ಅದರಂತೆ ಅವರು ಪರೀಕ್ಷೆಗೆ ಕುಳಿತು ಉತ್ತಮ ರೀತಿಯಲ್ಲಿ ತೇರ್ಗಡೆಯಾದರು. ಆಸಂದರ್ಭದಲ್ಲಿ ನಮ್ಮಿಬ್ಬರನ್ನು ಚಹಾಕ್ಕೆ ಕರೆದಿದ್ದರು. ಆ ವಿದ್ಯಾರ್ಥಿಯೇ ನನಗೆ ಇದೆಲ್ಲಾ ವಿಷಯವನ್ನು ತಿಳಿಸಿದರು. ಸ್ವಾಮಿಯವರೆಂದೂ

ಈ ಬಗೆಗೆ ಮೊದಲು ನನ್ನೊಡನೆ ಮಾತನಾಡಿರಲಿಲ್ಲ. ಈ ವಿಚಾರಗಳನ್ನೆಲ್ಲಾ ಕಟ್ಟೀಮನಿಯವರಿಗೆ ಹೇಳಿ, 'ನೋಡಿ, ಆ ದಿನ, ನಿಮ್ಮಿಂದ ನಾನು ಎಂ.ಎ. ಮಾಡಿದೆ ಸಾರ್, ಇಲ್ಲದಿದ್ದರೆ ನಾನು ಹೈಸ್ಕೂಲಿನಲ್ಲೇ ಕೊಳೆಯುತ್ತಿದ್ದೆ' ಎಂದವರು. ಈ ದಿನ ತಮಗೆ ಸಹಾಯ ಮಾಡಿದವರ ವಿರುದ್ಧವೇ ಸ್ಪರ್ಧಿಗಿಳಿದರಲ್ಲಾ ಎಂದು ಬೇಸರ ತೋರಿಸಿದ್ದೆ.

ಈಗ ನನಗೂ ಜಗತ್ತಿನ ಪರಿಚಯವಾಗಹತ್ತಿದೆ. ಅವರವರಿಗೆ ಅವರವರ ಶ್ರೇಯಸ್ಸು ಮುಖ್ಯ. ಇಂದು ಸಾಮಾಜಿಕವಾಗಿಯೇ ಮೌಲ್ಯಗಳು ಕುಸಿದಿರುವಾಗ ನಾವು ಅವುಗಳನ್ನು ಯಾರಿಂದಲಾದರೂ ನಿರೀಕ್ಷಿಸುವುದು ಸರಿಯಲ್ಲ. ಜಗತ್ತು ಬದಲಾದಂತೆ ನಾವು ಬದಲಾಗಬೇಕು. ಇಲ್ಲದಿದ್ದರೆ ಪೆಟ್ಟುಗಳನ್ನು ತಿನ್ನುತ್ತಿರಬೇಕಾಗುತ್ತದೆ ಎಂಬ ಅರಿವು ಮೂಡಿ, ಅಂದು ಆ ವಿದ್ಯಾರ್ಥಿ ಯಾರು ತಮಗೆ ಅನ್ಯಾಯ ಮಾಡಿದ್ದರೆಂದು ಹೇಳಿದ್ದರೋ ಅವರ ಬೆಂಬಲವನ್ನೇ ಪಡೆದುದು ಇಂದಿನ ಸಮಾಜದ ರೀತಿಯಲ್ಲಿ ಆಕ್ಷೇಪಣೀಯವೇನಲ್ಲ ಎಂಬ ಅರಿವು ನನಗುಂಟಾಗಿದೆ. ಗಾಯ ಮಾಯವಾದರೂ ಗಾಯದ ಗುರುತು ಇರುತ್ತದೆ. ಆದರೆ ಗಾಯದ ನೋವಿರುವುದಿಲ್ಲ. ಹಾಗೆ ನಾವೂ ಅದನ್ನೆಲ್ಲಾ ಮರೆತಿದ್ದೇವೆ. ಆತನೂ ಸಹ ಇವರೊಂದಿಗೆ ಎಂದಿನಂತೆ ಗೌರವದಿಂದ ನಡೆದುಕೊಳ್ಳುತ್ತಾನೆ. ಕೆಟ್ಟ ಗಳಿಗೆಗಳು ಅನಪೇಕ್ಷಣೀಯವಾಗಿ ಜೀವನದಲ್ಲಿ ಬರುತ್ತವೆ, ತಪ್ಪಿಸಲಾಗುವುದಿಲ್ಲ.

**ತೃಪ್ತಿ ತುಂಬಿದ ಜೀವ :**

'ಇದ್ದರುಂಟು ಇಲ್ಲದಿದ್ದರೆ ಇಲ್ಲ' ಇದು ಇವರ ಫಿಲಸಫಿ. ಊಟದಲ್ಲೂ, ಹಾಗೆಯೇ ತುಂಬಾ ಪ್ರೀತಿಯಿಂದ ಊಟ ಸವಿಯುತ್ತಿದ್ದರು. (ಈಗ ವಯಸ್ಸಾದ ಮೇಲೆ ಇಲ್ಲ) ಹೀಗೆ ಚೆನ್ನಾಗಿ ಊಟ ಮಾಡುತ್ತಿದ್ದ ಇವರು ಸಂದರ್ಭಶಾತ್ ಇಡೀ ದಿನ ಉಪವಾಸ ಇರಬೇಕೆಂದರೂ ಏನೂ ಕಷ್ಟವಿಲ್ಲದೆ, ಊಟದ ನೆನಪೂ ಇಲ್ಲದಂತೆ ಉಪವಾಸವಿದ್ದು ಬಿಡುತ್ತಿದ್ದರು. ಚೆನ್ನಾಗಿ ಬಟ್ಟೆಬರೆ ಹಾಕಿಕೊಳ್ಳಲು ಇಷ್ಟ, ಇದ್ದರೆ ಹಾಕಿಕೊಂಡು ಸಂತೋಷಿಸುತ್ತಾರೆ. ಇಲ್ಲದಿದ್ದರೆ ಇಲ್ಲವೆಂದು ಅಸಮಾಧಾನ ಪಟ್ಟುಕೊಂಡವರೇ ಅಲ್ಲ. ಅವರಿಗೆ ಎಲ್ಲರೊಡನೆ ಪ್ರೀತಿಯಿಂದ ನಕ್ಕು ನಲಿಯುತ್ತಾ ಸಂತೋಷವಾಗಿರಬೇಕೆಂದು ತುಂಬಾ ಇಷ್ಟ. ಅವರು ಮನೆಯವರೇ ಆಗಿರಬೇಕೆಂದಿಲ್ಲ. ಮನೆಯವರ ಹಿತ ಎಷ್ಟು ಸಂತೋಷವೋ ಬೇರೆಯವರ ಒಳಿತೂ ಅವರಿಗೆ ಅಷ್ಟೇ ಸಂತೋಷ ಕೊಡುತ್ತದೆ. ಎಷ್ಟೋ ಸಾರಿ ಅವರ ಮನೆಗೆ ಬರುತ್ತಲೇ ಇವತ್ತೊಂದು ಸಂತೋಷ ಕೊಡುವಸಮಾಚಾರ ಎಂದು ಹೇಳುತ್ತಾ ಉತ್ಸಾಹದಿಂದ ಬಂದಾಗ, ನಾನು ಮೊದಮೊದಲು ಆ ಸಂತೋಷ ಸಮಾಚಾರ, ನಮಗೇ ಸೇರಿದ್ದೆಂದು ಬಹು ಖುಷಿಯಿಂದ ಅದೇನೆಂದು ತಿಳಿದುಕೊಳ್ಳಲು ಒಳಗಿನಿಂದ

ಓಡಿಹೋಗುತ್ತಿದ್ದೆ. ಆಗ ಅವರು ಬೇರೆ ಯಾರದೋ ಹೆಸರು ಹೇಳುತ್ತಾ ಇಂಥವರಿಗೆ ಪ್ರಮೋಷನ್ ಆಯಿತೆಂದೂ, ಅಪಾಯಿಂಟ್‌ಮೆಂಟ್ ದೊರೆಯಿತೆಂದೂ, ಪ್ರಶಸ್ತಿ ಪಡೆದರೆಂದೋ ಹೇಳುತ್ತಿದ್ದರು!

ಈ ರೀತಿ ಇರುವ ಜನ ಖಂಡಿತವಾಗಿಯೂ ವಿರಳ. ಬೇರೆಯವನ್ನು ಟೀಕಿಸಿ ಎಂದೂ ಮಾತನಾಡುವವರಲ್ಲ. ಈಗೀಗ ಬೇರಯವರ ಕಾರಣ ತುಂಬ ನೋವಿಗೆ ಮೇಲಿಂದ ಮೇಲೆ ಒಳಗಾದ ನಂತರ, ನಾನು ಈ ಬಗ್ಗೆ ದಿನವೂ ಮಾನವಾಗಿಯೋ ಏನೋ ಒಮ್ಮೊಮ್ಮೆ ಬಹಳ ಅಪರೂಪವಾಗಿ ಅಸಮಾಧಾನ ವ್ಯಕ್ತಪಡಿಸುತ್ತಾರೆ. ತಾವು ಬೇರೆಯವರಿಗೆ ಮಾಡಿದ ಉಪಕಾರದ ಬಗ್ಗೆ ನನಗೆ ಸಹ ಹೇಳುತ್ತಿರಲಿಲ್ಲ. ಈಗಿಗ ಬಹಳ ಅಪರೂಪವಾಗಿ, ಅಂಥವರು ಕೃತಘ್ನರಾಗಿ ನಡೆದುಕೊಂಡಾಗ, ಹೇಳಿಕೊಳ್ಳುತ್ತಾರೆ. ಸಿಟ್ಟಿಗೇಳುತ್ತಾರೆ, ಆದರೆ, ಕೆಟ್ಟದಾಗಲಿ ಎಂದು ಎಂದೂ ಬಯಸಿದವರಲ್ಲ.

ಗುಂಪುಗಾರಿಕೆಯಂತೂ ಇವರಿಗೆ ಸೇರುವುದೇ ಇಲ್ಲ. ಇವರು ಪಠ್ಯ ಪುಸ್ತಕ ನಿರ್ದೇನಾಲಯದ ಡೈರೆಕ್ಟರ್‌ರಾದ ಕಾಲದಲ್ಲಿ ಸ್ವಲ್ಪ ಸಮಸ್ಯೆಗಳುಂಟಾಗಿ ಮಾನಸಿಕವಾಗಿ ಬಹಳಷ್ಟು ನೋವಿಗೆ ಗುರಿಯಾಗಿದ್ದರು. ಆಗ ಇವರ ಸಹೋದ್ಯೋಗಿಗಳಲ್ಲಿ ಒಬ್ಬಿಬ್ಬರು ನನ್ನ ಬಳಿ ಬಂದು, 'ನೋಡ್ರಿ ಲಲಿತಕ್ಕಾರೆ, ಸ್ವಾಮಿಗಳು 'ಆನೆ' ಇದ್ದ ಹಾಗೆ, ತಾನು ಹೋದದ್ದೇ ದಾರಿ. ಈಗ ಹಾಗೆ ಒಂಟಿಯಗಿ ಬದುಕುವುದು ಕಷ್ಟ. ನಾವೆಲ್ಲ ಒಂದು ಗುಂಪು ಮಾಡಿಕೊಳ್ಳೋಣ. ನಾವೆಲ್ಲ ಅವರಿಗೆ ಬೆಂಬಲವಾಗಿ ನಿಲ್ಲುತ್ತೇವೆ' ಎಂದರು.

ನಾನು ಈ ವಿಷಯುವನ್ನು 'ಇವರಿಗೆ' ತಿಳಿಸಿದಾಗ, 'ಅದೆಲ್ಲಾ ನನ್ನಿಂದಾಗೋದಿಲ್ಲಪ್ಪ' ಹಾಗೆ ಮಾಡಿಕೊಂಡರೆ, ಕೆಲವು ಸಂದರ್ಭಗಳಲ್ಲಿ ನಮ್ಮ 'ಪಾರ್ಟಿಯವರನ್ನು ಅನ್ಯಾಯವಿದ್ದರೂ ಬೆಂಬಲಿಸಬೇಕಾಗುತ್ತದೆ. ನನಗೆ ಅದೆಲ್ಲ ಸಾಧ್ಯವಿಲ್ಲ ಎಂದುಬಿಟ್ಟರು. ಅವರಿಗೆ ತಮ್ಮದೇ ಅಭಿಪ್ರಾಯ. ಬೇರೆಯವರ ಮಾತನ್ನು ಕೇಳುವವರಲ್ಲ. ಇದನ್ನರಿತ ಕೆಲವರು ಇವರಿಂದ ಸ್ವಾರ್ಥ ಸಾಧಿಸಿಕೊಳ್ಳಬೇಕೆಂದರೆ, ಡಿಪಾರ್ಟ್‌ಮೆಂಟಿನ ಒಳಿತಿಗೆ ಎಂಬಂತೆ ಆ ವಿಚಾರಗಳನ್ನು ಇವರಿಗೆ ಬಿಂಬಿಸಿ ಸಾಧಿಸಿಕೊಳ್ಳುತ್ತಿದ್ದರು. (ಅವರ ಕೈಲಿ ಕೆಲವು ಅಧಿಕಾರಗಳಿದ್ದಾಗ) ಇವರು ಡಿಪಾರ್ಟ್‌ಮೆಂಟಿನ ಹೆಡ್ ಆಗಿದ್ದಾಗ ಒಬ್ಬ ಪ್ರಾಧ್ಯಾಪಕರೊಡನೆ ತುಂಬಾ ಆತ್ಮೀಯತೆಯಿಂದ ಇದ್ದರಂತೆ (ಆಗಿನ್ನೂ ರೋಟೇಶನ್ ಪದ್ಧತಿ ಜಾರಿಗೆ ಬಂದಿರಲಿಲ್ಲ) ಹೆಚ್ಚು ಕಡಿಮೆ ಸ್ಟಾಫ್‌ನವರೆಲ್ಲಾ ಇವರ ಹಿಂದಿನ ವಿದ್ಯಾರ್ಥಿಗಳೇ ಆಗಿದ್ದರು.

ಆಗ ಗೌರವಾನ್ವಿತರಾದ ಒಬ್ಬ ಹಿರಿಯ ಪ್ರಾಧ್ಯಾಪಕರು ಬಂದು, "ನೋಡಿ

ಮೇಡಂ, ಸರ್ ಇಂಥವರ ಬಳಿ ಬಹಳ ಕ್ಲೋಸ್ ಇದ್ದಾರೆ. ಒಂದಲ್ಲ ಒಂದು ದಿನ ಅವನು ಇವರಿಗೆ ಕೆಡುಕು ಮಾಡುತ್ತಾನೆ. ಆತನನ್ನು ಎಷ್ಟು ದೂರದಲ್ಲಿಟ್ಟಿದರೆ ಅಷ್ಟೇ ಕ್ಷೇಮ. ನಾವು ಅವರ ವಿದ್ಯಾರ್ಥಿಗಳಾಗುತ್ತೇವೆ ಇಂತಹುದನ್ನೆಲ್ಲ ನಾವು ಹೇಳಲು ಬರುವುದಿಲ್ಲ" ಎಂದು ಅಕಸ್ಮಾತ್ತಾಗಿ ಭೆಟ್ಟಿಯಾದಾಗ ಹೇಳಿದರು. ನನಗೂ ಆ ವ್ಯಕ್ತಿಯ ಬಗ್ಗೆ ಅಂತಹದೇ ಭಯವಿತ್ತು. ಇವರು ಜಾಣತನದಿಂದ ಹೇಳುವವರ ಮಾತಿಗೆ ಬಲಿಬಿದ್ದು ಬಿಡುತ್ತಾರೆಂದು ಭಯ ನನಗಿದ್ದುದರಿಂದ ಪ್ರಾಧ್ಯಾಪಕರು ಹೆಳಿದ ಮಾತನ್ನು ಹೇಳಿದೆ, 'ಅವನು ಬಹಳ ಜಾಣ ಇದ್ದಾನೆ, ಅದಕ್ಕೆ ಇವರುಗಳಿಗೆ ಅವನ ಮೇಲೆ ಹೊಟ್ಟಕಿಚ್ಚು' ಎಂದು ಹೇಳಿ, ಆ ಸಲಹೆಯನ್ನು ತಳ್ಳಿಹಾಕಿಬಿಟ್ಟರು. ಪ್ರಾಧ್ಯಾಪಕರು ಹೇಳಿದ ಮಾತು ನಿಜವಾಗಿ, ಇವರೇ ತಮ್ಮ ವಿದ್ಯಾರ್ಥಿ ಏಳ್ಗೆಯನ್ನು ಸಹಿಸದೆ ಹೆಸರು ಕೆಡಿಸಲು ಪ್ರಯತ್ನಿಸುತ್ತಾರೆ' ಎಂಬ ಅಪವಾದಕ್ಕೆ ಆ ವ್ಯಕ್ತಿಯಿಂದಲೇ ಗುರಿಯಾದರು! ಎಂದೂ ಯಾರ ವಿರುದ್ಧವೂ ಕೆಲಸ ಮಾಡದ ಇವರು ತಮ್ಮನೌಕರಿಯ ಕೊನೆಯ ದಿನಗಳಲ್ಲಿ ಸ್ವಲ್ಪ ಗೊಂದಲದ ಪರಿಸ್ಥಿತಿಯನ್ನು ಎದುರಿಸಬೇಕಾಯ್ತು. ಅವರವರ ಸಂಸ್ಕಾರಕ್ಕೆ, ಅನುಭವಕ್ಕೆ ತಕ್ಕಂತೆ ಯಾವುದೇ ವಿಚಾರವನ್ನು ಅವಲೋಕಿಸುವುದು ಸಹಜ. ಪ್ರತಿಯೊಬ್ಬರಿಗೂ ತಮಗನಿಸಿದಂತೆ ವಿಷಯಗಳನ್ನು ಅರ್ಥೈಸುವ ಸ್ವಾತಂತ್ರ್ಯವಿದೆತಾನೆ. ಆದರೆ ಇಷ್ಟು ಸಮಾಧಾನದ ವ್ಯಕ್ತಿಯೂ ಕೆರಳುವಂತಹ ರೀತಿಯಲ್ಲಿ ಘಟನೆಗಳು ಜರುಗಿದ್ದವು. ಇವರೂ ಮನುಷ್ಯರು ತಾನೆ?

ನಾನೇನು ಇವರು ದೇವಮಾನವರು. ಇವರಲ್ಲಿ ದೋಷಗಳೇ ಇಲ್ಲವೆನ್ನುವುದಿಲ್ಲ. ಇವರ ಹೃದಯವಂತಿಕೆ, ಪರೋಪಕಾರ ಬುದ್ಧಿ, ನಿಸ್ವಾರ್ಥ ಮನೋಭಾವ, ಬೇರೆಯವರ ಏಳ್ಗೆಯ ನೋಡಿ ಹಿಗ್ಗುವ ದೊಡ್ಡತನ, ಕಷ್ಟದಲ್ಲಿರುವವರಿಗೆ ಉತ್ಸಾಹ ನೀಡಿ ಮುಂದೆ ತರುವಂತಹ ಅಪರೂಪದ ಗುಣಗಳ ಮುಂದೆ, ಇವರಲ್ಲಿರುವ ದೋಷಗಳು ಗೌಣ ಎಂಬುದು ನನ್ನ ಅನಿಸಿಕೆ. ಇವರಿಗಿಂತಲೂ ಬೇಕಾದಷ್ಟು ಬುದ್ಧಿವಂತೂ, ವ್ಯವಹಾರ ಚರುರತೂ, ಚುರುಕಾದವರೂ ಅನೇಕರಿದ್ದಾರೆ. ಆದರೆ ಇವರ ಹೃದಯವಂತಿಕೆ ಬಹಳಷ್ಟು ಜನಕ್ಕಿಲ್ಲ ಎಂಬುದು ನಿರ್ವಿವಾದ. ಇವರ ಒಳ್ಳೆಯತನಗಳನ್ನು ವ್ಯವಹಾರ ಚತುರರಾದವರು ಮೂರ್ಖತನವೆಂದು ಗುರುತಿಸಿದರೂ ಆಶ್ಚರ್ಯವಿಲ್ಲ.

[ಡಾ॥ ವೃಷಭೇಂದ್ರಸ್ವಾಮಿಯವರ ಅಭಿನಂದನ ಕೃತಿ 'ಸಹೃದಯಿ' ಗ್ರಂಥದಿಂದ]

– ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ

■

## ೨. ನಂಬಿ ಕರೆದರೆ

### ೧. ನಂಬಿ ಕರೆದರೆ ಓ ಎನ್ನನೆ ಶಿವನು ?

ದೇವರ ಬಗೆಗೆ ಬೇಕಾದಷ್ಟು ಜನ ಬೇಕಾದಷ್ಟು ಹೇಳುತ್ತಾರಾದರೂ,ದೇವರು ಇದ್ದಾನೆಯೇ ಇಲ್ಲವೇ ಎಂಬುದನ್ನು ಖಚಿತವಾಗಿ ಯಾರೂ ಹೇಳಲಾರರು ಇದ್ದಾನೆಂದೆ, Proove ಮಾಡಿ ತೋರಿಸಲು ಯಾರಿಗೂ ಸಾಧ್ಯವಿಲ್ಲ. ಇದ್ದಾನೆಂದು ಹೇಳಿದರೆ, ಹೇಗಿದ್ದಾನೆ ? ಮನುಷ್ಯನಂತೆ ಅವನಿಗೆ ಆಕಾರವಿದೆಯೇ? ಕೈಕಾಲುಗಳಿಗೆಯೆ? ಯಾವ ಭಾಷೆ ಮಾತನಾಡುತ್ತಾನೆ? ಯಾವ ಭಾಷೆ ಅವನಿಗೆ ಅರ್ಥವಾಗುತ್ತದೆ, ಎಂದರೆ ಏನು ಉತ್ತರ ಕೊಡಲು ಸಾಧ್ಯ? ಉತ್ತರ ಹೇಳುವವರಿದ್ದರೂ ಅವರವರ ಜ್ಞಾನಕ್ಕೆ, ಅನುಭವಕ್ಕೆ, ಕಲ್ಪನೆಗೆ ಸಿಕ್ಕಿದಂತೆ ಹೇಳಬಹುದೇ ಹೊರತು, ನೀರಿನಿಂದ, ವಿದ್ಯುತ್ತು ಹೇಗೆ ಉತ್ಪನ್ನವಾಗುತ್ತದೆ ಎಂಬುದನ್ನು ವಿವರಿಸಿ ಹೇಳುವಂತೆ, ಪ್ರಯೋಗ ಮಾಡಿ ತೋರಿಸಲು ಅಥವಾ ಹೇಳಲು ಸಾಧ್ಯವಿಲ್ಲ.

ಆಧ್ಯಾತ್ಮ ಕ್ಷೇತ್ರದಲ್ಲಿ ಆಳವಾಗಿ ಬದುಕಿದ ಸತ್ಪುರುಷರು ಭಗವಂತನನ್ನು ನಿರಾಕಾರ, ನಿರ್ಗುಣ, ಸರ್ವಶಕ್ತ, ಸರ್ವಜ್ಞ, ಸರ್ವಾಂತರ್ಯಾಮಿ ಎಂದು ನಾನಾ ರೀತಿಯಿಂದ ಗುರುತಿಸಿದ್ದಾರದೂ, ಭಕ್ತರಲ್ಲದವರಿಗೆ, ದೇವರ ಬಗ್ಗೆ ನಂಬಿಕೆ ಇಲ್ಲದವರು ಒಪ್ಪುವಂತೆ, ಖಚಿತ ಉತ್ತರವನ್ನು ಕೊಡಲಾರರು.

ಪವಾಡಗಳ ಬಗೆಗೂ ಅಷ್ಟೆ. ಪವಾಡಗಳು ನಿಜವೆಂದಾದರೆ ಮೇಲಿನ ವಿವರಗಳೆಲ್ಲ ನಿಜವೆ? ಆದರೆ ಬಹಳಷ್ಟು ಜನ 'ಪವಾಡ'ಗಳನ್ನು ನಂಬುವುದಿಲ್ಲ. ಇದು ದೇವರ ಬಗ್ಗೆ ಜನರಿಗಿರುವ ಉತ್ಪ್ರೇಕ್ಷೆಯ ಅತಿರೇಕವೆನ್ನುತ್ತಾರೆ. ಹಾಗಾದರೆ ದೇವರೆನ್ನುವುದು ಸುಳ್ಳೆ? ದೈವದಲ್ಲಿ ಭಕ್ತಿಯಿಂದ ಪ್ರಾರ್ಥಿಸುವವರನ್ನು, ಪರಿಶುದ್ಧ ಜೀವನ ಬದುಕಿದವರನ್ನು, ಒಳ್ಳೆಯದನ್ನೇ ಮಾಡಿದವರನ್ನು ದೇವರು ರಕ್ಷಿಸುತ್ತಾನೆ; ಅವರ ಬೇಡಿಕೆಗಳನ್ನು ಈಡೇರಿಸುತ್ತಾನೆ; ಇಷ್ಟ ಬಂದರೆ ಸಹಾಯ ಮಾಡುತ್ತಾನೆ ಎಂಬ ನಂಬಿಕೆಗಳೆಲ್ಲವೂ ಸುಳ್ಳೆ ? ಹಾಗೆ ಸುಳ್ಳಾಗಿದ್ದಿದ್ದರೆ, ದೇವರೆಂಬ ನಂಬಿಕೆ, ಭಕ್ತಿ, ಶ್ರದ್ಧೆ, ಪೂಜೆ ಪುನಸ್ಕಾರಗಳು ಮನುಷ್ಯನೊಂದಿಗೇ ಹುಟ್ಟಿ ಬಂದುವು ಹೇಗೆ? ಇಷ್ಟು ಪ್ರಾಚೀನ ಕಾಲದಿಂದಲೂ ಇಲ್ಲಿಯವರೆಗೂ ಸುಳ್ಳು ವಿಚಾರಗಳು

ಉಳಿದುಕೊಂಡು ಬರಲು ಸಾಧ್ಯವೆ? ಈ ನಂಬಿಕೆ ಇಲ್ಲಿ ಒಂದೇ ಅಲ್ಲ ; ಅಲ್ಲಿ ಒಂದೆ ಅಲ್ಲ ; ಎಲ್ಲೆಲ್ಲಿಯೂ ಇರುವುದು ಹೇಗೆ ಸಾಧ್ಯ ? 'ಪವಾಡ'ಗಳೂ ಸಹ, ಎಲ್ಲ ದೇಶದಲ್ಲಿ, ಎಲ್ಲ ಜನರಲ್ಲಿ, ಎಲ್ಲಾ ಕಾಲದಲ್ಲೂ ಜೀವಂತವಿರುವಾಗ ಇದನ್ನು ಸುಳ್ಳೆಂದು ಹೇಳಲು ಹೇಗೆ ಸಾಧ್ಯ ? 'ಸತ್ಯಕ್ಕೆ ಸಾವಿಲ್ಲ, ಸುಳ್ಳಿಗೆ ಉಳಿಗಾಲವಿಲ್ಲ' ಎಂಬ ಗಾದೆಗೆ ಏನುತ್ತರ ?

ಹೀಗೆ ದೇವರ ಬಗ್ಗೆ ನಾನಾ ರೀತಿಯ ಜಿಜ್ಞಾಸೆಗಳು, ಪ್ರಶ್ನೆಗಳು, ಕಲ್ಪನೆಗಳು ಸಂದೇಹಗಳು ಎಲ್ಲೆಲ್ಲೂ ಕಾಣಸಿಗುತ್ತವೆ, ಕೇಳಸಿಗುತ್ತವೆ.

ಈ ಎಲ್ಲಾ ಪ್ರಶ್ನೆಗಳಿಗೆ ಸಂದೇಹಗಳಿಗೆ 'ಇದಮಿತ್ಥಂ' ಎಂದು ಹೇಳಲಾಗದಿದ್ದರೂ, ದೇವರು ಒಂದು ಶಕ್ತಿ, ಜ್ಯೋತಿಸ್ವರೂಪ, ಎನ್ನುವುದನ್ನಂತೂ ನಂಬಬಹುದೇನೋ ಎನ್ನಿಸುತ್ತದೆ, ಶಕ್ತಿಯನ್ನು ಗುರುತಿಸಬಹುದೇ ಹೊರತು, ನೋಡಲು ಸಾಧ್ಯವಿಲ್ಲ ಹಾಗೆ. ದೇವರ ಶಕ್ತಿಯ ಪ್ರದರ್ಶನವನ್ನು ವಿವಿಧ ಸಂದರ್ಭಗಳಲ್ಲಿ ಗುರುತಿಸಬಹುದು. ಅನುಭವದಿಂದ ಕಂಡುಕೊಳ್ಳಬಹದು.

ಅಂತಹ ಒಂದು ಸಂದರ್ಭ ನೆನಪಿಗೆ ಬರುತ್ತದೆ. ಒಮ್ಮೆ ನಾನು ಮತ್ತು ನಮ್ಮ ಯಜಮಾನರು ಬೆಂಗಳೂರಿಂದ ತುಮಕೂರಿಗೆ ಹೋಗಬೇಕಿತ್ತು; ಯಾವ ಟೈಂಗೆ ಹೊರಡಲು ಸಾಧ್ಯವಾಗುತ್ತದೆ ಎಂಬುದನ್ನು ಹೇಳಲು ಸಾಧ್ಯವಿರಲಿಲ್ಲ. ಅದಕ್ಕಾಗಿ ನಾವು ಹೋಗಬೇಕಾಗಿದ್ದ ಬಂಧುಗಳ ಮನೆಯವರಿಗೆ, 'ನಾವು ಇಂತಹ ದಿನ ಬರುತ್ತೇವೆ, ಎಷ್ಟುಹೊತ್ತಿಗೆ ಹೊರಡುತ್ತೇವೆ ಎಂಬುದು ಇನ್ನೂ ಖಚಿತವಿಲ್ಲ. ಆ ದಿನ ರಾತ್ರಿ ಒಂಭತ್ತು ಅಥವಾ ಒಂಭತ್ತೂವರೆಯ ಒಳಗೆ ಬರುತ್ತೇವೆ. ಆದುದರಿಂದ ನಮ್ಮನ್ನು ಕರೆದುಕೊಂಡು ಹೋಗುವುದಕ್ಕೆ ನೀವೇನೂ ಬರುವುದು ಬೇಡ, ನಾವೇ ಬರುತ್ತೇವೆ' ಎಂದು ಫೋನ್ ಮೂಲಕ ತಿಳಿಸಿದೆವು. ನಮ್ಮ ಕೆಲಸಗಳನ್ನೆಲ್ಲಾ ಮುಗಿಸಿ ಹೊರಟಾಗ ತುಂಬಾ ತಡವಾಗಿತ್ತು. ಆಗ ತುಮಕೂರು ಕಡೆಗೆ ರೈಲೊಂದಿದೆಯೆಂದು ತಿಳಿದು, ಗಡಿಬಿಡಿಯಿಂದ ಸ್ಟೇಷನ್‌ಗೆ ಹೋದೆವು. ರೈಲು ಹೊರಡುವುದರಲ್ಲಿತ್ತು. ಅವಸವಸರವಾಗಿ ಕೊನೆಯ ಬೋಗಿಯೊಳಗೆ ತೂರಿಕೊಂಡೆವು ಸಾಮಾನುಗಳು ಬಹಳವಿದ್ದವು. ಜೊತೆಗೆ ಪುಸ್ತಕಗಳ ಬಂಡಲುಗಳೂ ಇದ್ದವು. ಅಂತೂ ರೈಲೊಳಗೆ ಸಾಮಾನಗಳೊಡಗೂಡಿ ಹತ್ತಿದೆವು. ರೈಲು ಹೊರಟಿತು. ತುಮಕೂರು ತಲ್ಪಿದಾಗ ಸಮಯ ರಾತ್ರಿ ಒಂಭತ್ತರ ಮೇಲಾಗಿತ್ತು. ರೈಲು ಸ್ಟೇಷನ್‌ದಲ್ಲಿ ನಿಂತಾಗ ನೋಡುತ್ತೇವೆ ನಾವಿದ್ದ ಕೊನೆಯ ಬೋಗಿಯು ಸ್ಟೇಷನಿಂದ ತುಂಬಾ ದೂರವಿತ್ತು. ಹೊರಗೆ ನೋಡುತೇವೆ ಕತ್ತಲೆಯೋ ಕತ್ತಲೆ, ಎಲ್ಲೆಲ್ಲೂ ಲೈಟಿಲ್ಲ. ಜೋರು ಮಳೆ ಬಂದು ಆ ತಾನೆ ನಿಂತಂತ್ತಿತ್ತು. ಮುಗಿಲಲ್ಲಿ ಕಾರ್ಮೋಡ ಕವಿದಿತ್ತು ಸಾಮಾನುಗಳನ್ನು ರೈಲಲ್ಲಿ ಇದ್ದವರ ಸಹಾಯದಿಂದ ಇಳಿಸಿಕೊಂಡು ಇಳಿದೆವು

ರೈಲು ಮುಂದೆ ಹೊರಟಿತು. ನಾವೆಲ್ಲಿ ಇದ್ದೇವೆ ಯಾವ ಕಡೆ ಹೋಗಬೇಕು ಎಂಬುದೂ ತಿಳಿಯದಷ್ಟು ಕತ್ತಲು! ಒಂದು ಸೆಳಕು ಮಿಂಚಿದಾಗ, ಸುತ್ತ-ಮುತ್ತ ಗುಂಡಿಗಳಲ್ಲಿ ನೀರು ತುಂಬಿದುದೂ, ಅಲ್ಲಲ್ಲಿ ರಿಪೇರಿಗಾಗಿ ಸೈಜುಗಲ್ಲುಗಳ ರಾಶಿ ಹಾಕಿದುದೂ ಕಾಣಿಸಿತು, ಒಬ್ಬ ಕೂಲಿಯೂ ಕಣ್ಣಿಗೆ ಬೀಳಲಿಲ್ಲ. ನಮಗೇನು ಮಾಡಬೇಕೆಂಬುದೇ ತಿಳಿಯದೆ ದಿಕ್ಕು ತೋಚದಂತಾಯ್ತು. ರೈಲಿನಿಂದ ಇಳಿದ ಜನರೆಲ್ಲ ಹೋದರು ನಾವಿಬ್ಬರೇ ಉಳಿದೆವು. ವೃದ್ಧರಾದ ನಮಗೆ ಅಷ್ಟು ಸಾಮಾನು ಹೊತ್ತಕೊಂಡು ಹೋಗಲು ಸಾಧ್ಯವಿರಲಿಲ್ಲ, ನನ್ನ ಒಬ್ಬಳನ್ನೇ ಬಿಟ್ಟು ಕೂಲಿಯನ್ನು ಹುಡುಕಿಕೊಂಡು ಬರಲು ಸ್ಟೇಷನ ಕಡೆ 'ಇವರು' ಹೋಗುವಂತಿರಲಿಲ್ಲ, ಇವರನ್ನು ಸಾಮಾನಿನ ಹತ್ತಿರ ನಿಲ್ಲಿಸಿ, ಕೂಲಿ ಹುಡುಕಿಕೊಂಡು ಬರಲು ಆ ಕತ್ತಲಲ್ಲಿ ನಾನು ಹೋಗುವುದಂತೂ ಕಲ್ಪಿಸಲಾರದ ಸಂಗತಿ ! ಏನು ಮಡಲೂ ತಿಳಿಯದಂತಹ ಪರಿಸ್ಥಿತಿ. ಅಲ್ಲಿ ಒಂದ ನರಪಿಳ್ಳೆಯ ಸುಳಿವೂ ಇರಲಿಲ್ಲ. ನನಗಂತೂ ಭಯವೋ ಭಯ ಯಾರಾದರೂ ದುಷ್ಟರು ಆ ಹೊತ್ತಿನಲ್ಲಿ ಬಂದು, ನಮ್ಮ ಅಸಹಾಯಕತೆ ನೋಡಿ, ನಮ್ಮ ತಲೆ ಒಡೆದು ದೋಚಿಕೊಂಡು ಹೋಗಿದ್ದರೂ ಕೇಳುವವರಿಲ್ಲದ ಪರಿಸ್ಥಿತಿ. ನಾನಂತೂ ದೇವರನ್ನು ನಾನಾ ಪರಿ ಬೇಡುತ್ತಿದ್ದೆ. ಆಗ ಯಾರೋ ಒಬ್ಬರು ಬಂದು, 'ಬನ್ನಿ ಸಾರ್, ನಾನು ಕರ್ಕೊಂಡ ಹೋಗ್ತೀನಿ, ತುಂಬಾ ಕತ್ತಲು, ಅಪರಿಚಿತ ದಾರಿ' ಎಂದು ಹೇಳಿ, ಬಹಳಷ್ಟು ಸಾಮಾನುಗಳನ್ನು ಅವರೇ ತೆಗೆದುಕೊಂಡರು. ನಮ್ಮ ಮನೆಯವರೂ ಹೊರಲಾಗದಿದ್ದರೂ ಒಂದೆರಡು ಸಾಮಾನುಗಳನ್ನು ತೆಗೆದುಕೊಂಡರು. ಎಲ್ಲರೂ ಹೊರಟೆವು ಆ ಮಹಾನುಭಾವರು ನಮ್ಮ ಸಾಮಾನುಗಳನ್ನು ಹೊತ್ತಕೊಂಡು ಮುಂದೆ ಮುಂದೆ, ನಾವು ಹಿಂದೆ ಹಿಂದೆ ಸಾಗಿದೆವು. ಅವರು ಸ್ಟೇಷನ್ನಿನ ಮೂಲಕ ಮುಂಭಾಗಕ್ಕೆ, ರಿಕ್ಷಾಗಳು ನಿಲ್ಲುವಲ್ಲಿಗೆ ಕರೆದುಕೊಂಡು ಹೋದರು. ಹೋಗುವಾಗ ಅತೀ ಎಚ್ಚರಿಕೆಯಿಂದ, 'ಅಮ್ಮಾ ಅಲ್ಲಿ ನೀರಿದೆ, ಈ ಕಡೆ ಬನ್ನಿ, ಅಮ್ಮಾ ಅಲ್ಲಿ ತಗ್ಗಿದೆ ಎಚ್ಚರ, ಅಮ್ಮಾ ಅಲ್ಲಿ ಕಲ್ಲಿನ ರಾಶಿ ಇದೆ ಪಕ್ಕದಲ್ಲಿ ಬನ್ನಿ' ಎಂದು ಅಷ್ಟು ಭಾರ ಹೊತ್ತಿದ್ದರೂ, ಮಗನಂತೆ ಮಾರ್ಗದರ್ಶನ ಮಾಡುತ್ತಾ ಕರೆದುಕೊಂಡು ಹೋಗಿ, ಒಂದು ರಿಕ್ಷಾ ಮಾಡಿಕೊಟ್ಟು, 'ಇನ್ನು ಸುರಕ್ಷಿತವಾಗಿ ಹೋಗಿ' ಎಂದ ಆಗ ಅವರು 'ನಾನು ಇಲ್ಲಿಯವನೆ, ನಿಮ್ಮ ಜೊತೆಯಲ್ಲೇ ರೈಲಿನಲ್ಲಿ ಬಂದೆ' ಎನ್ನುತ್ತಾ ಕತ್ತಲಲ್ಲಿ ಕರಗಿದರು. ಅವರು ಹೋದ ಮೇಲೆ ಬಂದ ಯೋಚನೆ ಎಂದರೆ, 'ಅವರು ನಾವು ಇಳಿದಾಗ ಎಲ್ಲಿದ್ದರು ?' ನಾವು ಅಷ್ಟು ಹೊತ್ತಿನವರೆಗೆ ದಿಕ್ಕುತೋಚದೆ ನಿಂತಿದ್ದಾಗ ಎಲ್ಲಿದ್ದರು? ಏನು ಮಾಡುತ್ತಿದ್ದರು? ಎನ್ನಿಸಿದಾಗ ವಿಚಿತ್ರವೆನ್ನಿಸಿತು. ಇದು ದೈವ ಸಹಾಯವಲ್ಲದೆ ಬೇರಲ್ಲ, ಎಂದುಕೊಂಡೆ?

ಒಂದು ಸಾರಿ ಬೇಸಿಗೆಯಲ್ಲಿ ಹೊರನಾಡು ಶೃಂಗೇರಿ ಬಾಳೆಹೊನ್ನೂರು

ಮುಂತಾದ ಸ್ಥಳಗಳಿಗೆ ಕಾರಿನಲ್ಲಿ ಪ್ರವಾಸ ಹೋಗಿದ್ದೆವು. ನಮ್ಮ ಮಗನಿಗೆ ಆಗ ೧೪-೧೬ ವರ್ಷಗಳಿರಬಹದು ಅವನ ಜೊತೆಗೆಂದು ಹೆಚ್ಚು ಕಡಿಮೆ ಅವನ ವಯಸ್ಸಿನ ಬಂಧುಗಳ ಇಬ್ಬರು ಹುಡುಗರನ್ನು ಕರೆದುಕೊಂಡು ಹೋಗಿದ್ದೆವು. ಶೃಂಗೇರಿಗೆ ಹೋದಾಗ ಆಗಲೇ ಬೆಳಗಿನ ಪೂಜೆ ಮುಗಿದಿತ್ತುಬಾಗಿಲು ಮುಚ್ಚಿತ್ತು ಹಾಗಾದರೆ, ಅಮ್ಮನವರ ದರ್ಶನವನ್ನು ಎರಡನೆಯ ಪೂಜೆಯ ತನಕ ಇದ್ದು ನೋಡಿಕೊಂಡು ಹೋದರಾಯ್ತೆಂದು ಕಾಯುತ್ತಾ ಕುಳಿತೆವು. ಅಲ್ಲಿ ಭದ್ರಾ ನದಿ ದೇವಸ್ಥಾನದ ಬಳಿಯೇ ಹರಿಯುತ್ತದೆ, ನದಿಯ ಇನ್ನೊಂದು ದಡದಲ್ಲಿ ಉಪವನ ಹಾಗೂ ಸ್ವಾಮಿಗಳ ಆಶ್ರಮ ಎಲ್ಲ ಇವೆ. ನದಿಯನ್ನು ದಾಟಲು ಬಿದಿರು ಬೊಂಬುಗಳಿಂದ ಒಂದು ಸೇತುವೆ ಕಟ್ಟಿದ್ದರು ಜನ ಸೇತುವೆಯ ಮೂಲಕ ಈ ದಡದಿಂದ ಆ ದಡಕ್ಕೆ ಹೋಗುತ್ತಿದ್ದರು ಬೇಸಗೆ ಯಾದುದರಿಂದ ನದಿ ಅಷ್ಟೊಂದು ತುಂಬಿ ಹರಿಯುತ್ತಿರಲಿಲ್ಲವಾದರೂ, ಸಹ ಸೇತುವೆ ಕಟ್ಟಿದ್ದ ಬಳಿ ತುಂಬಾ ಆಳವಾಗಿ ಹರಿಯುತ್ತಿದ್ದಂತೆ ಕಾಣಿಸಿತು. ಈ ಹುಡುಗರು ಆ ನೀರನ್ನು ನೋಡಿ, ಈಜುವ ಆಸೆ ತೋರಿಸಿದರು ನನಗೆ ಆ ತುಂಬಿ ಹರಿಯುವ ನದಿಯನ್ನು ನೋಡಿ ಏಕೋ ಬೇಡವೆನಿಸಿತು ನಾನೊಪ್ಪಲಿಲ್ಲ ಆದರೆ ಹುಡುಗರಿಗೆ ಆಸೆ ಬಲವಾಗಿತ್ತು. ನಮ್ಮ ಮನೆಯವರನ್ನು ಕೇಳಿದರು, ನಾನೆಷ್ಟೇ ಬೇಡೆಂದರೂ ಅವರು ಈಜಲಿ ಬಿಡು ಆಡುವ ಹುಡುಗರು, ದೇವಸ್ಥಾನದ ಬಾಗಿಲು ತೆಗೆಯುವ ತನಕ ಹೇಗೆ ಕಾಲ ಕಳೆಯಬೇಕು ಎಂದು ಒಪ್ಪಿಯೇ ಬಿಟ್ಟರು ! ಆಗ ಹುಡುಗರು ಷರಟು ತೆಗೆದು ಸೇತುವೆ ಮೇಲಿನಿಂದ ನೀರಿಗೆ ಜಿಗಿದರು. ಈಜಾಡಿ ಮೇಲೆ ಬರುತ್ತಿದ್ದರು. ಮತ್ತೆ ಸೇತುವೆಯಿಂದ ನೀರಿಗೆ ಜಿಗಿದು ಮೇಲೆ ಬಂದು ಮತ್ತೆ ಹಾರುತ್ತಿದ್ದರು ! ಇದನ್ನು ನೋಡುತ್ತಿದ್ದ ನನ್ನ ಜೀವ ಬಾಯಿಗೆ ಬಂದಂತೆನಿಸುತ್ತಿತ್ತು ; ಮನಸ್ಸು ಭಯದಿಂದ ತಲ್ಲಣಗೊಂಡಿತ್ತು. ಇವರಿಗೆ ಎಷ್ಟೋ ವಿಧವಾಗಿ ಹುಡುಗರನ್ನು ಈಜು ನಿಲ್ಲಿಸಿ ಬರಲು ಹೇಳಿರೆಂದು ಕೇಳಿದರೆ, ನನಗೇ ಬೈದರು. ನೀನು ಹೆದರುತ್ತೀ ಉಳಿದವರನ್ನು ಹೆದರಿಸುತ್ತೀ, ಹುಡುಗರು ನಿನ್ನಂಥವರಿದ್ದರೆ ಧೈರ್ಯ ಕಲಿಯುವುದೇ ಇಲ್ಲ. ಈಜು ಬಂದವರಿಗೆ, ಭಯವೇಕೆ ಎಂದು ಬಿಟ್ಟರು. ನಾನಂತೂ ಭಯದಿಂದ ಶಾರದೆಯನ್ನು ಪ್ರಾರ್ಥಿಸುತ್ತಿದ್ದೆ. 'ತಾಯಿ ನಿನ್ನ ದರುಶನಕ್ಕಾಗಿ ಕುಳಿತಿದ್ದೇವೆ, ಏನು ಅಪಾಯವಾಗದೆ ಕ್ಷೇಮವಾಗಿ ಹೋಗುವಂತೆ ಆಶೀರ್ವದಿಸು' ಎಂದು ಬೇಡುತ್ತಾ ನಿಂತಿದ್ದೆ. ಆಗ ಉಪವನದ ಕಡೆಯಿಂದ ಒಬ್ಬ ಬ್ರಾಹ್ಮಣರು ತಾಯಿಯೇ ಆ ರೂಪದಲ್ಲಿ ಬಂದಳೇನೋ ಎಂಬಂತೆ ಬಂದರು. "ಇದ್ಯಾರು ಇಬ್ಬರು ಹುಡುಗರು ಹೊಳೆಗೆ ಧುಮುಕುತ್ತಿರುವುದು? ಪರಸ್ಥಳದಿಂದ ಬಂದಿದ್ದೀರಿ, ಕ್ಷೇಮದಿಂದ ಊರಿಗೆ ಹೋಗಿ, ಹೊಳೆಯಲ್ಲಿ 'ಸುಳಿ'ಗಳು ಒಳಗೆ ಇವೆ, ಮೇಲೆ ಕಾಣುವುದಿಲ್ಲ ಮೇಲಿನಿಂದ ಹಾರಿದಾಗ ಒಳಗೆ ಸುಳಿಯೊಳಗೆ ಸಿಕ್ಕಿದರೆ ಮೇಲೆ ಬರುವುದಿಲ್ಲ" ಎಂದರು.

ನನಗೆ ಜೀವವೇ ಹೋದಂತಾಯ್ತು. ಅರಚಾಡುತ್ತಾ ಹೋಗಿ, ಇವರಿಗೆ ವಿಷಯ ತಿಳಿಸಿ, ಹುಡುಗರನ್ನು ಕರೆಯಲು ಹೇಳಿದೆ. ಆಗ ಪುಣ್ಯಕ್ಕೆ ಕರೆದರು. ಹುಡುಗರು ಈಜುವುದನ್ನು ನಿಲ್ಲಿಸಿ, ಮೇಲೆ ಬಂದಾಗ ನನಗೆ ಜೀವನ ಬಂದಂಥಾಯ್ತು ! ಸಕಾಲದಲ್ಲಿ ಬ್ರಾಹ್ಮಣರನ್ನು ಕಳಿಸಿ, ಸಹಾಯ ಮಾಡಿ, ಕಷ್ಟದಿಂದ ಪಾರು ಮಾಡಿದ ತಾಯಿಯನ್ನು ಮನಸ್ಸಿನಲ್ಲಿಯೇ ವಂದಿಸಿದೆ. ಸಾಯಂಕಾಲದವರೆಗೆ ದೇವಸ್ಥಾನದ ಬಳಿಯೇ ಕುಳಿತಿದ್ದು, ತಾಯಿಯ ದರ್ಶನ ಮಾಡಿಕೊಂಡು ಊರಿಗೆ ಹಿಂತಿರುಗಿದೆವು. ಹೀಗೆ ದೇವರು, ತಾನೆ ಬಂದು ಭಕ್ತರ ಕಷ್ಟಪರಿಹರಿಸುವುದಿಲ್ಲ ನಿಜ ಆದರೆ ಯಾರ ಮುಖಾಂತರವೋ ಸಹಾಯ ಮಾಡಿಸುತ್ತಾನೆ. ಅಲ್ಲಿ ದೇವರ ಪ್ರೇರೇಪಣೆ ಇರುತ್ತದೆ. ಈ ಘಟನೆಯು 'ಒಂದು ಪವಾಡ' ಎಂದರೆ ಏನು ಆಶ್ಚರ್ಯ !

ಸುಮಾರು ಮೂವತ್ತೈದು ವರ್ಷಗಳ ಹಿಂದಿನ ಮಾತು. ಬಿಜಾಪೂರ ಜಿಲ್ಲೆಯ ಒಂದೂರಿನ ಶಾಲೆಯ ವಾರ್ಷಿಕೋತ್ಸವಕ್ಕೆ ಮುಖ್ಯ ಅತಿಥಿಗಳನ್ನಾಗಿ ನಮ್ಮಿಬ್ಬರನ್ನು ಕರೆದಿದ್ದರು. ನಮ್ಮ ಮಗ ಇನ್ನು ಹತ್ತು ಹನ್ನೆರಡು ವರ್ಷದವನು. ಕಾರ್ಯಕ್ರಮ ಮುಗಿದ ಮೇಲೆ ಅಲ್ಲಿಯವರೆಲ್ಲಾ, 'ಹೇಗೋ ಇಲ್ಲಿಯತನಕ ಬಂದಿದ್ದೀರಿ, ಈ ದಿನ ಇಲ್ಲೇ ಉಳಿದುಕೊಂಡು, ನಾಳೆ ಕೂಡಲ ಸಂಗಮ, ಶಿವಯೋಗಮಂದಿರ ಮುಂತಾದ ಕ್ಷೇತ್ರಗಳನ್ನು ನೋಡಿಕೊಂಡು ಹೋಗಿ' ಎಂದರು. ಅದೂ ಒಂದು ಒಳ್ಳೆಯ ಸಲಹೆ ಎಂದುಕೊಂಡು ಉಳಿದೆವು. ಮರುದಿನ ಸುಮಾರು ಹನ್ನೆರಡು ಘಂಟೆಯ ಹೊತ್ತಿಗೆ ಶಿವಯೋಗ ಮಂದಿರಕ್ಕೆ ಹೋದೆವು. ಅಲ್ಲಿ ನೋಡುವುದನ್ನೆಲ್ಲಾ ನೋಡಿ ಹೊರಟಾಗ ಸ್ವಾಮಿಗಳು, 'ಅಪರೂಪಕ್ಕೆ ಬಂದಿದ್ದೀರಿ ಅಡಿಗೆಯಾಗುತ್ತಿದೆ, ಪ್ರಸಾದ ತೆಗೆದುಕೊಂಡು ಹೋಗಿ' ಇಲ್ಲೇ ಮಠದ ಮುಂದೆ ಆಡ್ಡಾಡುತ್ತಿರಿ, ಪ್ರಸಾದಕ್ಕೆ ಸಿದ್ಧ ಮಾಡಿಸುತ್ತೇನೆ ಎಂದು ಒಳಗೆ ಹೋದರು. ನಾವು ಹೊರಗೆ ಬಂದೆವು. ಅಲ್ಲೇ ಪಕ್ಕದಲ್ಲಿ ಮಲಪ್ರಭಾ ತುಂಬಿ ತುಳುಕುತ್ತಾ ಹರಿಯುತ್ತಿತ್ತು. ಅದನ್ನು ನೋಡುತ್ತಲೇ ಇವರಿಗೆ ಈಜಾಡುವ ಆಸೆ ಹುಟ್ಟಿತು.

ಇವರನ್ನು ನೋಡಿ ಮಗನೂ ಷರ್ಟು ಬಿಚ್ಚಿದ, ನನಗೆ ಆ ತುಂಬಿದ ನದಿಯನ್ನು ನೋಡಿ ಎದೆ ಡವಡವ ಎಂದು ಬಡಿದುಕೊಳ್ಳುತ್ತಿತ್ತು. 'ಕಾಣದ ಜಾಗದಲ್ಲಿ, ಈಜುವುದು ಬೇಡ' ಎಂದೆ ಇದೇನು ಕಾಣದ ಜಾಗ, ಇಲ್ಲೇ ಮಠ ಇದೆ ಎಂದು ನೀರಿನೊಳಗೆ ಹಾರಿದರು. ಹಿಂದೆಯೇ ಮಗನೂ ಜಿಗಿದ, ಅವರನ್ನು ನೋಡುತ್ತಿದ್ದ ನನ್ನ ಜಂಘಾ ಬಲವೇ ಉಡುಗಿಹೋಯಿತು. ಇಲ್ಲಿ ಮುಳುಗಿದವರು ಮುಂದೆಲ್ಲೋ ಏಳುತ್ತಿದ್ದರು ಅವರ ತಲೆ ಮೇಲೆ ಕಾಣಿಸುವವರೆಗೆ ಉಸಿರೇ ಆಡುತ್ತಿರಲಿಲ್ಲ, ದೇವರನ್ನು ಪ್ರಾರ್ಥಿಸಿಕೊಂಡು ಹೊಳೆಯ ಕಡೆ ನೋಡುತ್ತಾ ನಿಂತು ಬಿಟ್ಟಿದ್ದೆ. ಅಷ್ಟರಲ್ಲಿ ಸ್ವಾಮಿಗಳು, ಸಾಹೇಬರೇ, ಸಾಹೇಬರೇ ಎಂದು ಕರೆಯುತ್ತಾ ಬಂದು ನನ್ನನ್ನು ನೋಡಿ, 'ಪ್ರಸಾದ ಸಿದ್ಧವಾಗಿದೆ, ಸಾಹೇಬ್ರು ಎಲ್ರವ್ವಾ'

ಎಂದರು. ಮಾತನಾಡಲೂ ಬರದಂತೆ ನಾಲಿಗೆಯ ದ್ರವವೆಲ್ಲಾ ಆರಿ ಹೋಗಿತ್ತು. ಹೊಳೆಯ ಕಡೆ ಕೈ ಮಾಡಿ ತೋರಿಸಿದೆ. ನೋಡಿದ್ದೇ ತಡ, ಸ್ವಾಮಿಗಳು ಗಾಬರಿಯಿಂದ 'ಸಾಹೇಬ್ರೇ ಲಗೂನ ನೀರಿನಿಂದ ಈಚೆಗೆ ಬರ್ರಿ' ಎಂದು ಕೂಗುತ್ತಾ ಕೈ ಬೀಸಿ ಕರೆದರು. ಅವರಿಬ್ಬರೂ ನೀರಿನಿಂದ ದಡಕ್ಕೆ ಬಂದಾಗ ನಾನು ಸರಾಗವಾಗಿ ಉಸಿರಾಡಿದೆ. ಆಗ ಸ್ವಾಮಿಗಳು, 'ಏನು ಸಾಹೇಬ್ರೆ ಕಾಣದ ಜಾಗದಲ್ಲಿ ಯಾರನ್ನೂ ಕೇಳ್ದೆ, ನೀರಿಗೆ ಇಳಿಬಾರ್ದು, ಅಲ್ಲೆಲ್ಲಾ ದೊಡ್ಡ ಮೊಸಳೆಗಳಿವೆ. ನಿಮ್ಮ ಪುಣ್ಯ ಚೆನ್ನಾಗಿತ್ತು ಪಾರಾಗಿ ಬಂದ್ರಿ ಇನ್ನೆಂದೂ ಹಿಂಗೆ ಸಿಕ್ಕಿದಲ್ಲಿ ಗೊತ್ತಿಲ್ದೆ ನೀರಲ್ಲಿ ಇಳೀಬ್ಯಾಡ್ರಿ' ಎಂದರು.

ಆಗ ನಾನು 'ದೇವರೇ, ಇವರು ಈಜಾಡುವ ಹೊತ್ತಿನಲ್ಲಿ ಆಕಡೆ ಮೊಸಳೆ ಬರದಂತೆ ಮಾಡಿದ್ದಲ್ಲದೆ, ಸ್ವಾಮಿಗಳಿಂದ ಅವರು ನೀರಿನಿಂದ ಬೇಗ ಹೊರಗೆ ಬರುವಂತೆ ಮಾಡಿದೆ' ಎಂದು ಮನಸ್ಸಿನಲ್ಲಿಯೆ ಭಗವಂತನಿಗೆ ಕೃತಜ್ಞತೆಗಳನ್ನರ್ಪಿಸಿದೆ. ಹೀಗೆ ದೇವರು ನಂಬಿ ಕರೆದವರಿಗೆ ನಾನಾ ರೂಪದಲ್ಲಿ ಬಂದು ನಾನಾ ರೀತಿಯಿಂದ ಭಕ್ತರಿಗೆ ಸಹಾಯ ಮಾಡುತ್ತಾನೆಂಬುದರಲ್ಲಿ ನನಗೆ ಸಂಶಯವಿಲ್ಲ. ಈ ಘಟನೆಗಳ ಬಗ್ಗೆ ಬಹಳ ಅಲೋಚಿಸಿದ್ದೇನೆ ಆಗ ನನಗನ್ನಿಸಿರುವುದು ಇಷ್ಟು, ನಾವು ಅತ್ಯಂತ ಭಕ್ತಿಯಿಂದ ಪ್ರಾರ್ಥಿಸಿದಾಗ ಸರ್ವಜ್ಞ, ಸರ್ವಶಕ್ತ, ಸರ್ವಾಂತರ್ಯಾಮಿಯಾದ ದೇವರು ಸಹಾಯಕ್ಕೆ ಬರುತ್ತಾನೆ. ಹೇಗೆ? ಯಾರೋ ಒಬ್ಬರ ಮನಸ್ಸಿಗೆ ಕಷ್ಟದಲ್ಲಿರುವವರ, ನೆರವಿಗೆ ಹೋಗುವಂತಹ ಮನಸ್ಸು ಕೊಡುತ್ತಾನೆ. ಆ ಭಕ್ತರಿಗೆ ಏನು ಮಾಡಬೇಕೋ ಅದನ್ನೆಲ್ಲಾ ಮಾಡುವಂತೆ ಆ ವ್ಯಕ್ತಿಯನ್ನು ಪ್ರೇರೆಪಿಸುತ್ಥಾನೆ. ಹಾಗಾಗಿ ಅವನ ಪ್ರಾರ್ಥಿಸಿದವರ ಕಷ್ಟ ನಿವಾರಣೆಯಾಗುತ್ತದೆ. ಅವನು ಸರ್ವಜ್ಞನಾಗಿರುವುದರಿಂದ ಇವರ ಮನಸ್ಸಿನ ಭಾವನೆ ಭಗವಂತನಿಗೆ ತಿಳಿಯುತ್ತದೆ ; ಸರ್ವಾಂತರ್ಯಾಮಿಯಾದುದರಿಂದ ಭಕ್ತರು ಎಲ್ಲಿ ಪ್ರಾರ್ಥಿಸಿದರೂ ಅಲ್ಲೆಲ್ಲಾ ಇರುವ ದೇವರಿಗೆ ಗೊತ್ತಾಗುತ್ತದೆ. ಸರ್ವಶಕ್ತನಾದುದರಿಂದ ಅದನ್ನು ಇನ್ನೊಬ್ಬರ ಮನಸ್ಸಿನಲ್ಲಿ ಪ್ರವೇಶಿಸಿ, ಆ ಜವಾಬ್ದಾರಿ ನಿಭಾಯಿಸುತ್ತಾನೆ. ದೇವರು ಮನುಷ್ಯನಂತೆ ನಮ್ಮ ಮುಂದೆ ಬಂದು ನಿಲ್ಲುವುದಿಲ್ಲ. ನಿಜ ಇನ್ನೊಬ್ಬ ಭಕ್ತನಿಗೆ ಆ ಮನಸ್ಸು ಕೊಟ್ಟು ಬೇಡಿದ ಭಕ್ತನಿಗೆ ಸಹಾಯ ಮಾಡಿಸುತ್ತಾನೆ ಎಂದು ಅನಿಸಿಕೆ ನನ್ನದಾಗಿದೆ ಇಂತಹ ಅನುಭವಗಳು ಅನೇಕರ ಜೀವನದಲ್ಲಿ ನಡೆದಿರಬಹುದು, ಅವುಗಳನ್ನು ಎಲ್ಲರೂ ಬರೆದಿದ್ದರೆ ಭಗವಂತ ಇರುವಿಕೆಯನ್ನು ಅರ್ಥಮಾಡಿಕೊಳ್ಳಬಹುದು.

– ಪ್ರೊ. (ಶ್ರೀಮತಿ) ಲಲಿತಾಂಬ ವೃಷಭೇಂದ್ರ ಸ್ವಾಮಿ
ಧಾರವಾಡ

■

## ೩. ಈ ಅದೃಷ್ಟ ಯಾರಿಗುಂಟು ಯಾರಿಗಿಲ್ಲ

'ಅಮ್ಮಾ, ದವಾಖಾನೆಗೆ ಹೋಗಿ ಬರೋಣ ಬಾ, ಆ ಪಾಪೂನ್ನ ಯಾರಾದರೂ ಕರೆದುಕೊಂಡು ಹೋದರೋ ಇಲ್ಲವೋ ನೋಡಿಬರೋಣ' ಎಂದು ಮಕ್ಕಳಿಬ್ಬರೂ ಒಂದೇ ಸಮನೆ ಶಾಂತಿಗೆ ಬೆಳಗಿನಿಂದ ದುಃಬಾಲು ಬಿದ್ದರು ಎಷ್ಟು ಹೇಳಿದರೂ ಅವರು ಸುಮ್ಮನಾಗದಿದ್ದಾಗ ಶಾಂತಿ ಡ್ರೈವರ್ ರುದ್ರಪ್ಪನಿಗೆ ಕಾರು ರೆಡಿ ಮಾಡಲು ಹೇಳಿ ಮಕ್ಕಳೊಡನೆ ದವಾಖಾನೆಗೆ ಹೊರಟಳು.

ಕಾರಿನಿಂದ ಇಳಿಯುತ್ತಲೇ ಮಕ್ಕಳಿಬ್ಬರೂ ನಾಗಾಲೋಟದಿಮದ ಮಗುವನ್ನಿಟ್ಟಿದ್ದ ಕೊಠಡಿಗೆ ಓಡಿದರು. ಅಲ್ಲಿ ಮಗು ನಿನ್ನೆಯಂತೆಯೇ ಯಾರೂ ದಿಕ್ಕಿಲ್ಲದೆ ಅಳುತ್ತಾ ಮಲಗಿತ್ತು. ಶಾಂತಿಯು ತಮ್ಮ ಆಪ್ತರಾಗಿದ್ದ ಡಾ॥ ಶಂಕರ್ ನನ್ನು, 'ಏಕೆ ಡಾಕ್ಟರ್, ನಾನು ನೆನ್ನೆ ಕಳಿಸಿದವರು ಮಗುವನ್ನು ಕರೆದುಕೊಂಡು ಹೋಗಲಿಲ್ಲವೆ?' ಎಂದು ಕೇಳಿದಳು.

ಇಲ್ಲಮ್ಮಾ, ಅವರು ಮಗುವನ್ನು ನೋಡಿ, 'ಇದು ಕಪ್ಪಗಿದೆ, ಲಕ್ಷಣವಾಗಿಯೂ ಇಲ್ಲ. ಬೇರೆಯ ಮಗುವನ್ನು ನಮ್ಮದೆಂದು ಸಾಕುವಾಗ, ಅದು ಚೆನ್ನಾಗಿದ್ದರೆ ಪ್ರೀತಿ ಬರುತ್ತದೆ. ಈ ಮಗು ಬೇಡ' ಎಂದರು.

ಮತ್ತೆ ಈಗ ಮಗುವಿಗೆ ಗತಿ?

ಏನೋಮ್ಮ ನನಗೂ ಏನೂ ತೋಚದಾಗಿದೆ. ನೆನ್ನೆ ಬೆಳಗ್ಗೆ ನರ್ಸಿಂಗ್‌ಹೋಂಗೆ ಬಂದಾಗ, ಬಾಗಿಲಲ್ಲೇ ಈ ಮಗು ಅಳುತ್ತಾ ದಿಕ್ಕಿಲ್ಲದೆ ಬಿದ್ದಿದ್ದನ್ನು ನೋಡಿ, ನೋಡಿ ಹಾಗೇ ಹೋಗುವುದು ಹೇಗೆ ? ಏನಾದರೂ ವ್ಯವಸ್ಥೆ ಮಾಡಿದರಾಯ್ತು ಎಂದು ತರಸಿ ರೂಮಿನಲ್ಲಿಡಿಸಿದೆ. ಅದೇ ಹೊತ್ತಿಗೆ ನೀವು ಬಂದಿರಿ ಮಗುವನ್ನು ನೋಡಿ, ಯಾರೋ ನಿಮ್ಮ ಸ್ನೇಹಿತರು ಮಕ್ಕಳಿಲ್ಲದೆ, ಅನಾಥ ಮಗುವನ್ನು ಸಾಕಬೇಕೆಂದಿದ್ದಾರೆ. ಅವರಿಗೆ ಹೇಳುತ್ತೇನೆ; ಎಂದಾಗ ನನಗೆ ತುಂಬಾ ಖುಷಿಯಾಗಿತ್ತು. ಅವರು ಬಂದು ಹಾಗೆ ಹೇಳಿದ ಮೇಲೆ, ನನಗೀಗ ಏನು ಮಾಡಬೇಕೆಂಬುದೇ ತಿಳಿಯುತ್ತಿಲ್ಲ ಎಂದು ಡಾಕ್ಟರು ಹೇಳುತ್ತಿದ್ದಂತೆಯೇ ಶ್ರುತಿ ಮತ್ತು ಕೈವಲ್ಯ ಇಬ್ಬರೂ.

ಅಮ್ಮಾ ನಾವು ಕರೆದುಕೊಂಡು ಹೋಗೋಣ, ನಾವು ಸಾಕೋಣ ಎಂದು ಒತ್ತಾಯಿಸಿದರು.

ನಾಯಿಮರಿ ಸಾಕೋಣ ಎಂದು ಹೇಳಿದಂತೆ ಹೇಳ್ತೀರಲ್ಲ. ಮಗು ತೊಗೊಂಡು ಹೋಗೋದು ಕಡಿಮೆ ಜವಾಬ್ದಾರೀನೇ ನಮಗೇನು ಮಕ್ಕಳಿಲ್ಲವೆ? ನಿಮ್ಮಿಬ್ಬರನ್ನು ಬೆಳೆಸಿ ಓದಿಸಿ ಮುಂದೆ ತರುವ ಜವಾಬ್ದಾರಿಯೇ ಸಾಕಷ್ಟಿದೆ. ಮತ್ತೊಂದನ್ನು ಕಟ್ಟಿಕೊಂಡು ನಾನೆಲ್ಲಿ ಒದ್ದಾಡಲಿ'

ಇಲ್ಲಮ್ಮಾ ಬೇಡ ಅನ್ನಬೇಡ ಸಾಕಲು ನಿನಗೆ ನಾವು ಸಹಾಯ ಮಾಡ್ತೀವಿ. ನಿನಗೆ ತೊಂದರೆ ಯಾಗದ ಹಾಗೆ ನೋಡ್ಕೊಳ್ತೀವಿ. ತೊಗೋಮ್ಮ ಬಿಡ್ಬೇಡ. ಪಾಪ. ಯಾರೂ ಇಲ್ಲದೆ ಇದೆ, ಅದ್ರ ಗತಿ ಏನು?

ಹುಚ್ಚು ಮಕ್ಕಳೆ ? ಇದೇನು ನಾಯಿ ಸಾಕಿದಷ್ಟು ಸುಲಭದ ಕೆಲಸವಲ್ಲ ನಾಳೆ ಸ್ಕೂಲಿಗೆ ಕಳಿಸಬೇಕು. ಕಾಯಿಲೆ ಕಸಾಲೆ ಆದ್ರೆ ನೋಡ್ಕೋ ಬೇಕು. ಅವನಿಗೆ ತನ್ನ ಕಾಲಮೇಲೆ ತಾನು ನಿಲ್ಲೋ ಹಾಗೆ ಮಾಡಬೇಕು ಇದೆಲ್ಲ ತುಸು ಜವಾಬ್ದಾರೀನೆ ಎಂದು ಕರೆದುಕೊಂಡು ಹೋಗಲು ಹಿಂದೆ ಮುಂದೆ ನೋಡಿದಳು.

ಮಕ್ಕಳಿಬ್ಬರೂ ಆ ಮಗುವನ್ನು ಕರೆದುಕೊಂಡು ಹೋಗದಿದ್ದರೆ ನಾವಿಲ್ಲಿಂದ ಕದಲುವುದಿಲ್ಲವೆಂದು ಹಠ ಹಿಡಿದಾಗ, ನಿರ್ವಾಹವಿಲ್ಲದೆ ಶಾಂತಿ ಮಗುವನ್ನೆತ್ತಿಕೊಂಡು ಮಕ್ಕಳೊಂಡದಿಗೆ ಮನೆಯ ದಾರಿ ಹಿಡಿದಳು.

ಮಗುವಿಗೆ ಸ್ನಾನ ಮಾಡಿಸಿ, ಹಾಲು ಕುಡಿಸಿ, ಅಂಗಡಿಯಿಂದ ಅದೇ ತಾನೆ ತರಿಸಿದ ಹೊಸಬಟ್ಟೆ ಹಾಕಿದಳು. ಹುಡುಗರಿಬ್ಬರೂ ಸಡಗರದಿಂದ ಮಗುನಿನ ಸುತ್ತ ಕುಣಿದದ್ದೇ ಕುಣಿದದ್ದು. ಸಂಜೆ, ಆಫೀಸಿನಿಂದ ಭಾಸ್ಕರ್ ಬಂದಾಗ ಮಗುವನ್ನು ನೋಡಿದ ಮನೆಗೆಯಾರೋ ಅತಿಥಿಗಳು ಬಂದಿದ್ದಾರೆಂದು ಕೊಂಡ. ಆದರೆ ಅಷ್ಟರಲ್ಲೇ ಮಕ್ಕಳು ಓಡಿಬಂದು ಅಪ್ಪಾಜಿ, ನಾವೊಂದು ಪುಟ್ಟ ಪಾಪುವನ್ನು ಆಸ್ಪತ್ರೆಯಿಂದ ತಂದಿದ್ದೇವೆ. ಇನ್ನು ನಿಮಗೆ ಮೂರು ಮಕ್ಕಳು ಎಂದಾಗ, ಆಶ್ಚರ್ಯವಾಯಿತು. ಆಗ ಶಾಂತಿ ಬಂದು ನಡೆದ ವಿಚಾರವನ್ನು ಹೇಳಿ, ನಿಮ್ಮನ್ನು ಕೇಳಿ, ನಿರ್ಧಾರ ತೆಗೆದುಕೊಳ್ಳಲೂ ಈ ಹುಡುಗರು ಟೈಂ ಕೊಡಲಿಲ್ಲ. ಬೇರೆ ಉಪಾಯವಿಲ್ಲದೆ ಕರೆದುಕೊಂಡು ಬಂದು ಬಿಟ್ಟೆ ಎಂದಳು.

ಇರಲಿ ಬಿಡು, ಶ್ರುತಿ ಮದುವೆಯಾಗಿ ಗಂಡನ ಮನೆಗೆ ಹೋಗುತ್ತಾಳೆ. ಕೈವಲ್ಯ ಓದಿದ ನಂತರ ನೌಕರಿಗೆ ಯಾವ ಊರಿಗೆ ಹೋಗುತ್ತಾನೋ ಏನೋ, ವಯಸ್ಸು ಹೋದ ಕಾಲದಲ್ಲಿ ನಮ್ಮ ಜೊತೆಗೆ ನಮ್ಮವರೆನ್ನುವವರು ಯಾರಾದರೂ ಬೇಕಲ್ಲ. ಇವನಾದರೂ ನಮ್ಮೊಂದಿಗೆ ಇದ್ದು ವೃದ್ಧಾಪ್ಯದಲ್ಲಿ ಆಸರೆಯಾಗುತ್ತಾನೆ.

ನಮ್ಮ ಮಕ್ಕಳೇ ನಮ್ಮ ರಕ್ಷಣೆ ಮಾಡುವುದು ಕಷ್ಟ ಈಗಿನ ಕಾಲದಲ್ಲಿ, ಬೇರೆಯವರ ಮಕ್ಕಳು ನೋಡಿಕೊಳ್ಳುತ್ತಾರೆಯೆ?

ಹಾಗೆನ್ನಬೇಡ, ಶ್ರೀಧರನನ್ನು ನೋಡು, ಅವನಿಗೆ ಮಕ್ಕಳಾಗಲಿಲ್ಲವೆಂದು ಅವರಣ್ಣನ ಮಗುವನ್ನು ತಂದು ಸಾಕಿದ್ದ. ಎಸ್.ಎಸ್.ಎಲ್.ಸಿ. ತನಕ ಓದಿಸಿ, ಒಂದು ಕ್ಲಾರ್ಕ್ ಕೆಲಸ ಕೊಡಿಸಿದ ಮದುವೆ ಮಾಡಿದ. ಮಕ್ಕಳಾಗಿವೆ. ಈಗ ಆ ಸೊಸೆ, ಶ್ರೀಧರನ ಹೆಂಡತಿಯನ್ನು ತಾಯಿಗಿಂತಲೂ ಹೆಚ್ಚಾಗಿ ನೋಡಿಕೊಳ್ಳುತ್ತಾಳೆ. ಮೊಮ್ಮಕ್ಕಳಂತೂ ದಿನವೂ ಸಂಜೆ ವಾಕ್ ಹೋಗುವಾಗ ತಾತನ ಕೈಹಿಡಿದುಕೊಂಡು ಜೊತೆಗಿರುತ್ತಾನೆ.

ಅಯ್ಯೋ ಬಿಡಿ. ಅವರ ಆಸ್ತಿಗಾಗಿ ಅವರನ್ನು ಓಲೈಸುತ್ತಾರೆ ಅಷ್ಟೆ. ಯಾವುದಕ್ಕಾದರೂ ಆಗಲಪ್ಪಾ. ಅವರಿಗೆ ಆಸರೆಯಾಗಿಯಂತೂ ಇದ್ದರಲ್ಲ ! ಅಲ್ಲದೆ ಆಸ್ತಿಗಾಗಿಯೇ ಮಾಡುತ್ತಾರೆನ್ನಬೇಡ. ಒಬ್ಬರಿಗೊಬ್ಬರು ಸಹಾಯಕವಾಗಿ ಬಹಳ ವರ್ಷ ಜೊತೆಯಲ್ಲೇ ಇದ್ದು ಬಿಟ್ಟರೆ ಪ್ರೀತಿ ಬೆಳೆದೇ ಬಿಡುತ್ತೆ ಅಲ್ಲದೆ ಈ ಮಗೂಗೆ ತನ್ನ ತಂದೆ – ತಾಯಿ ಯಾರೂಂತಲೇ ಗೊತ್ತಿರುವುದಿಲ್ಲ. ನಮ್ಮನ್ನೇ ನಿಜವಾದ ತಂದೆ–ತಾಯೀಂತ ಪ್ರೀತಿಸುತ್ತೆ ನಾವೂ ಹಾಗೆ ಕಂಡರೆ ಸಮಸ್ಯೆಯೇ ಬರುವುದಿಲ್ಲ. ಎನ್ನುತ್ತಿದ್ದಂತೆಯೇ, ಬಾಗಿಲಲ್ಲಿ ನರ್ಸಿಂಗ್ ಹೋಂನ ಆಯಾ ಮಗಳು ವೀಣಾ ಬಂದು ನಿಂತುದರಿಂದ ಹೊರಗೆ ಹೋದಳು.

ಏನ್ ವೀಣಾ ಇಷ್ಟು ಸಂಜೇಲಿ ಬಂದೆ ಏನ್ಬೇಕಾಗಿತ್ತು ? ಏನಿಲ್ರಿ ಅಮ್ಮಾರೆ. ನಾನು ಕೆಲಸ ಮಾಡುತ್ತಿದ್ದ ಮನೆಯವರು ಟ್ರಾನ್ಸ್‌ಫರ್ ಆಗಿ ಹೋದ್ರು, ಕೆಲ್ಸ ಇರ್ಲಿಲ್ಲ. ನಿಮ್ಮ ಮನೇಲಿ ಪಾತ್ರೆ ಬಟ್ಟೆ ಕೆಲಸ ಇದ್ರೆ ಕೇಳೋಣಾಂತ ಬಂದೆ.

ಹೌದಾ ನಮ್ಮ ಆ ಕೆಲ್ಸಕ್ಕೇನೋ ಬೇರೆಯವಳಿದ್ದಾಳೆ. ಆದ್ರೆ, ಈಗೊಂದು ಮಗೂ ತೊಗೊಂಡು ಬಂದಿದೀವಿ ಅದನ್ನ ನೋಡ್ಕೊಳ್ಳೋಕೆ ಒಬ್ರು ಬೇಕು. ಆದ್ರೆ ಆಕೇನೂ ಎಳೇ ಮಗುವಿನವಳಾದ್ರೆ ಚೆನ್ನಾಗಿರುತ್ತೆ ಮಕ್ಕಳಿಗೆ ಎಷ್ಟೇ ಮೇಲಿನ ಹಾಲು ಹಾಕಿದ್ರೂ, ಎದೆ ಹಾಲು ಕುಡಿದ ತೃಪ್ತಿ ಸಿಕ್ಕೋಲ್ಲ. ಯಾರಾದ್ರೂ ಎಳೇ ಮಗೂನ ತಾಯಿ ಇದ್ರೆ ನೋಡು.

ನಾನು ಮಗು ಹೆತ್ತು ಮೂರು ತಿಂಗ್ಳಾತು ಅಮ್ಮಾರೆ. ಮೊನ್ನ ಬೇಧಿಯಾಗಿ ಮಗೂ ತೀರಿಹೋಯ್ತು. ನನ್ನದೇಲಿ ಇನ್ನು ಹಾಲು ಬತ್ತಿಲ್ಲ ನಾನೇ ಮಗೂ ನೋಡ್ಕೊಳ್ತೀನಿ ಎಂದಾಗ ಶಾಂತಿಗೆ ದೊಡ್ಡದೊಂದು ಭಾರ ಇಳಿದಂತಾಯ್ತು.

ನಿನ್ಗೇನೂ. ಬೇರೆ ಕೆಲ್ಸ ಇಲ್ಲಾ ತಾನೆ? ಬೆಳಗ್ಗೆ ಏಳು ಗಂಟೆಗೆ ಬಂದು ಸಂಜೆ ಏಳು ಗಂಟೆಗೆ ಹೋಗ್ಬೇಕು. ಮಗೂನ ಕೆಲ್ಸವೆಲ್ಲಾ ನಿಂದೆ. ಹೊತ್ತು ಹೊತ್ತಿಗೆ

ಹಾಲು ಕುಡ್ಸಿದ್ರೆ, ಸಾಕು. ಉಳಿದ ಸಮಯದಲ್ಲಿ ಮನೆ ಕೆಲಸ ಮಾಡು. ಮಗೂನ ನಾನೇ ನೋಡ್ಕೊಳ್ತೀನೀಂತ ಹೇಳಿದಾಗ ವೀಣಾಗೆ ತಾನು ಬಂದ ಕೆಲಸದಲ್ಲಿ ಜಯ ದೊರೆತುದರಿಂದ ಒಪ್ಪಿಗೆ ಕೊಟ್ಟು ಖುಷಿಯಿಂದ ಮನೆಗೆ ಹೋದಳು.

ಮಗುವಿಗೆ ಪ್ರೇಮನಾಥನೆಂದು ಹೆಸರಿಟ್ಟರು. ಹುಡುಗರಂತೂ ಶಾಲೆಯಿಂದ ಬಂದರೆ ಮಗುವಿನ ಜೊತೆಗೆ ಕಾಲಕಳೆಯುತ್ತಿದ್ದರು. ಎಲ್ಲರ ಪ್ರೀತಿಯನ್ನುಂಡು ಪ್ರೇಮನಾಥ ಸಂತೃಪ್ತಿಯಿಂದ ಬೆಳೆದ. ಮಗು ವೀಣಾಳಂತೂ ಹೆತ್ತತಾಯಿಯಂತೆ ಮಗುವನ್ನು ನೋಡಿಕೊಳ್ಳುತ್ತಿದ್ದಳು. ಅವಳು ಮಗುವಿಗೆ ಹಾಲೂಡಿಸುವುದನ್ನು ನೋಡಿದರೆ, ಆಕೆ ಯಾವುದೋ ಬೇರೆಯ ಮಗುವಿಗೆ ಹಾಲು ಕುಡಿಸುತ್ತಿದ್ದಾಳೆ ಎನ್ನಿಸುತ್ತಲೇ ಇರಲಿಲ್ಲ. ಅದನ್ನು ಭಾಸ್ಕರ ನೋಡಿ ಮೆಚ್ಚುಗೆಯಿಂದ,

ನೋಡು ಶಾಂತಿ ನಮ್ಮ ಆಫೀಸಿನಲ್ಲಿ ಎಲ್ಲರೂ ನಾವು ಈ ಮಗುವನ್ನು ಸಾಕುತ್ತಿರುವುದನ್ನು , ಸ್ವಂತ ಮಗುವಿನಂತೆ ಕಾಳಜಿ ಮಾಡುವುದನ್ನು ನೋಡಿ, ಸಾಹೇಬರೆ ನಿಮ್ಮದು ಬಹಳ ದೊಡ್ಡ ಮನಸ್ಸು. ಸ್ವಂತ ಮಕ್ಕಳಿದ್ದು ಬೀದಿಯಲ್ಲಿ ಸಿಕ್ಕಿದ ಮಗುವನ್ನು ಎಷ್ಟು ಚೆನ್ನಾಗಿ ಸಾಕುತ್ತಿದ್ದೀರಿ ಎನ್ನುತ್ತಾರೆ. ನಮ್ಮಲ್ಲಿ, ಸ್ವಾರ್ಥವಿದೆ. ನಮ್ಮ ಮಕ್ಕಳು ಆಶೆ ಪಟ್ಟರೂಂತ ಅದನ್ನು ತಂದೆವು. ಮುಂದೆ ವಯಸ್ಸು ಹೋದ ಕಾಲದಲ್ಲಿ ನಮ್ಮ ಜೊತೆಗಿರುತ್ತಾನೆ ಎಂಬ ಉದ್ದೇಶವೂ ಇದೆ. ಆದರೆ ಈ ಹುಡುಗಿ ಯಾವ ಪ್ರತಿಫಲವೂ ಇಲ್ಲದೆ ಮಗುವನ್ನು ಎಷ್ಟು ಪ್ರೀತಿಸುತ್ತಾಳೆ. ಮಗು ಸ್ವಲ್ಪ ಅತ್ತೂ, ಎಲ್ಲಿದ್ದರೂ ಓಡಿಬಂದು ಎತ್ತಿಕೊಳ್ಳುತ್ತಾಳೆ.

ಹೌದು ನನಗೂ ಅವಳ ಸ್ವಭಾವವನ್ನು ನೋಡಿ, ಎಷ್ಟು ದೊಡ್ಡ ಸಂಸ್ಕಾರ ಇವಳದು ಎನ್ನಿಸಿತು. ಆ ದಿನ ಮಗುವಿನ ಬೆರಳಿಗೆ ಗೊದ್ದ ಕಚ್ಚಿ ಬೆರಳು ಊದಿಕೊಂಡುಬಿಟ್ಟಿತ್ತು. ಅದನ್ನು ನೋಡಿ ಒದ್ದಾಡಿ ಬಿಟ್ಟಳು. ಎಂದು ಮಾತಾಡಿಕೊಳ್ಳುತ್ತಿದ್ದಂತೆಯೇ ಶ್ರುತಿ ಮತ್ತು ಕೈವಲ್ಯ ಶಾಲೆಯಿಂದ ಬಂದವರೇ ವೀಣಾಳ ಹತ್ತಿರ ಹೋಗಿ ಪ್ರೇಂ ನನ್ನು ಎತ್ತಿಕೊಂಡು ಬಂದರು. ತಪ್ಪು ಹೆಜ್ಜೆ ಇಡುತ್ತಿದ್ದ ಅವನನ್ನು ಇಬ್ಬರೂ ಕೈ ಹಿಡಿದುಕೊಂಡು ನಡೆಸುತ್ತಾ, ಒಮ್ಮೆ ಕೈಬಿಟ್ಟು ಅವನೇ ನಡೆಯುವಂತೆ ಮಾಡಿ, ಚಪ್ಪಾಳೆ ತಟ್ಟುತ್ತಾ ನಗುವರು. ಹೀಗೆ ಮನೆ ಮಂದಿ ಎಲ್ಲರ ಕೇಂದ್ರ ಬಿಂದುವಾಗಿ ಬೆಳೆಯುತ್ತಿದ್ದ ಪ್ರೇಂನಾಥ. ಎಲ್ಲರ ಅಕ್ಕರೆ, ಉತ್ತಮ ಆಹಾರದಿಂದ ಅವನ ಬಣ್ಣವೂ ಉತ್ತಮಗೊಂಡಿತು. ಲಕ್ಷಣವೂ ಸುಧಾರಿಸಿತು. ದುಂಡು ದುಂಡಾಗಿ ಮುದ್ದು ಮುದ್ದಾಗಿ ಕಾಣುತ್ತಿದ್ದ. ಅವನಿಗೆ ವರುಷ ತುಂಬುತ್ತಿದ್ದಂತೆಯೇ, ಶಾಂತಿ ಮಗುವಿಗೆ ವೀಣಾ ಹಾಲು ಕೊಡುವುದನ್ನು ನಿಲ್ಲಿಸಬೇಕೆಂದು ಯೋಚಿಸಿ, ವೀಣಾ ನಾಳೆಯಿಂದ ನಿನ್ನ ಹಾಲು ಪಾಪೂಗೆ ಕುಡಿಸಬೇಡ ಯಾಕ್ರಿ ಅಮ್ಮಾರೆ, ನನಗೆ ಬೇಕಾದಷ್ಟು ಹಾಲಿದೆ. ಇನ್ನೊಂದು ವರ್ಷ ಕುಡಿಯಲಿ.

ಬೇಡ–ಬೇಡ ಎದೆ ಹಾಲು ಕುಡಿಯುತ್ತಿದ್ದರೆ ಮಕ್ಕಳು ಊಟ ಚೆನ್ನಾಗಿ ಮಾಡುವುದಿಲ್ಲ. ಅಲ್ಲದೆ ಮುಂದೆ ಅದನ್ನು ಬಿಡಿಸುವುದೂ ಕಷ್ಟವಾಗುತ್ತದೆ. ಎಂದಾಗ, ಅವಳಿಗೆ ತಾನೇನನ್ನೋ ಕಳೆದುಕೊಂಡಂತೆ ಕಸಿವಿಸಿಯಾಯ್ತು. ಒಂದು ವರ್ಷ ತುಂಬಿದಾಗ ಮಕ್ಕಳು ಪ್ರೇಂಗೆ ಹುಟ್ಟಿದ ಹಬ್ಬದೊಡ್ಡದಾಗಿ ಮಾಡಬೇಕೆಂದು ಹಠ ಹಿಡಿದರು. ಒಳ್ಳೆಯ ಸಂಭ್ರಮದಿಂದ ಹುಟ್ಟಿದ ಹಬ್ಬವೂ ನಡೆಯಿತು. ಈಗಾಗಲೆ ಮನೆತುಂಬಾ ಓಡಾಡುತಿತ್ತು. ತೊದಲು ನುಡಿ ಶುರುವಾಯ್ತು. ಅಣ್ಣ, ಅಕ್ಕ, ಅಮ್ಮ ಅಪ್ಪ ಎಂದು ಸರಾಗವಾಗಿ ನುಡಿಯುತ್ತಿದ್ದ ಕೈಗೆ ಎಟಕುವ ಒಂದು ಸಾಮಾನೂ ಇದ್ದಲ್ಲಿ ಇರಗೊಡುತ್ತಿರಲಿಲ್ಲ. ವೀಣಾಳಿಗೆ ಅವುಗಳನ್ನು ಎತ್ತಿಡಲೇ ಸಾಕಾಗುತ್ತಿತ್ತು. ಎರಡು ವರ್ಷದ ಪ್ರೇಂ ಅಣ್ಣ ಅಕ್ಕ ಓದುತ್ತಿದ್ದರೆ, ತನಗೂ 'ಪುಸ್ತಕ, ಪೆನ್ನು ಕೊಡು ಎಂದು ಜಗಳಾಡುತ್ತಿದ್ದ. ಸಿಕ್ಕ ಪುಸ್ತಕಗಳನ್ನು ಹಿಡಿದುಕೊಂಡು ತಾನೂ ಅಣ್ಣ ಅಕ್ಕನೊಂದಿಗೆ ಕೂತು ಓದುವಂತೆ ಮಾಡುತ್ತಿದ್ದೆ. ಆದರೆ ಅವನಿದ್ದಾಗ ಶಾಂತಿಯ ಹತ್ತಿರ ಅವರುಗಳನ್ನು ಬರಗೊಡುತ್ತಿರಲಿಲ್ಲ. ಅವರು 'ನಮ್ಮಮ್ಮ' ಎಂದು ಅವಳನ್ನು ಹಿಡಿದುಕೊಂಡರೆ, ತಾನು ಅವರನ್ನೂ ದೂಡಿ, 'ನನ್ನಮ್ಮಾ' ಎನ್ನುತ್ತಿದ್ದ. ಅವರು ಹೋಗದಿದ್ದರೆ. ಬಿದ್ದು ಹೊರಳಾಡಿ ನಮ್ಮಮ್ಮ ಎಂದು ಅತ್ತಾಗ, ಶಾಂತಿ ಶ್ರುತಿ ಮತ್ತು ಕೈವಲ್ಯನನ್ನು ದೂರಕಳಿಸಿ, 'ಹೌದಪ್ಪಾ ನಾನು ನಿಮ್ಮಮ್ಮ. ಅವರಮ್ಮ ಅಲ್ಲ' ಎಂದು ರಮಿಸುತ್ತಿದ್ದಳು.

ಆಗ ಹುಡುಗರು ಚಪ್ಪಾಳೆ ತಟ್ಟಿ ನಗುತ್ತಿದ್ದರು. ವೀಣಾ ದೂರದಿಂದಲೇ ಇದನ್ನೆಲ್ಲಾ ನೋಡಿ ಆನಂದಿಸುತ್ತಿದ್ದಳು.

ಒಂದು ದಿನ ವೀಣಾ ಬಂದವಳೇ, 'ಅಮ್ಮಾ ನಾಳೆಯಿಂದ ನಾನು ಕೆಲಸಕ್ಕೆ ಬರೋದಿಲ್ಲಮ್ಮಾ. ನನಗೆ ಮದುವೆಗೊತ್ತಾಗಿದೆ' ಎಂದಳು.

ಮದುವೆ ! ಇದೇನೆ ಹಿಂಗಂತೀಯಾ. ಮಗು ಆಗಿತ್ತು ಭೇದಿಯಾಗಿ ತೀರಿಹೋಯ್ತು. ಅಂದಿದ್ಯಲ್ಲೇ ಆಗ ಮಗು ಇದ್ದಿದ್ದರೆ ನಮ್ಮ ಪ್ರೇಂನ ವಯಸ್ಸಿನದಿರಬೇಕಿತ್ತು ಅಲ್ವೆ?

ಅದೂ ನಿಜಾಮ್ಮ ಅದೊಂದು ಕಥೆ. ನಮ್ಮಮ್ಮ ಡ್ಯೂಟಿಗೆ ಹೋಗುತ್ತಿದ್ದಾಗ ನಾನು ಕೆಲಸ ಮಾಡಿಕೊಂಡು ಮನೇಲೆ ಇರುತ್ತಿದ್ದೆ. ನಮ್ಮಪ್ಪ ನಾನು ಸಣ್ಣವಳಿದ್ದಾಗಲೇ ತೀರಿ ಹೋಗಿದ್ದ. ಬಹಳ ಕಷ್ಟಪಟ್ಟು ನನ್ನನ್ನು ಸಾಕಿದಳೂ. ಆದರೆ ನನ್ನನ್ನು ಮಾತ್ರ ಎಲ್ಲಿಗೂ ಕೆಲಸಕ್ಕೆ ಕಳಿಸುತ್ತಿರಲಿಲ್ಲ. ನಮ್ಮ ಮನೆ ಪಕ್ಕದಲ್ಲೇ ಒಂದು ಅಪಾರ್ಟ್‌ಮೆಂಟ್ ಕಟ್ಟುತ್ತಿದ್ದರು. ಅದರ ಉಸ್ತುವಾರಿ ಒಬ್ಬ ಮೇಸ್ತ್ರಿ ನೋಡುತ್ತಿದ್ದ. ಒಂದೊಂದು ಸಲ ನಮ್ಮನೆಗೇ ನೀರು ಕುಡ್ಯೋಕೆ ಅಂತ ಬರ್ತಿದ್ದ, ಒದ್ಸಾರಿ ನಾನು ನೀರು ತರೋಕೆ

ಅಂತ ಒಳಗೆ ಹೋಗಿದ್ದಾಗ ಮನೆ ಒಳಗೆ ಬಂದು ಬಾಗಿಲು ಹಾಕಿಕೊಂಡುಬಿಟ್ಟ ನೀರು ತಗೊಂಡು ಹೊರಗೆ ಬಂದಾಗ ಬಾಗಿಲು ಹಾಕಿದ್ದು ನೋಡಿ ಗಾಬರಿಯಾಯ್ತು ಚೀರಲು ಹೋದೆ ಬಂದವನೆ ಬಾಯಿ ಗಟ್ಟಿಯಾಗಿ ಮುಚ್ಚಿ, ಏನೇನೋ ರಮಿಸಿದ. ನನ್ನನ್ನು ಎಂದೂ ಕೈಬಿಡೋಲ್ಲ ಅಂತ ಭಾಷೆ ಹಾಕಿದ. ನನಗೂ ತಿಳಿವಳಿಕೆ ಇಲ್ಲದ ವಯಸ್ಸು. ಅವನ ಮಾತಿಗೆ ಮರುಳಾಗಿ ಬಿಟ್ಟೆ. ಹೀಗೆ ದಿನಾ ಬಂದು ಹೋಗ್ತೀದ್ದ. ನಮ್ಮವ್ವನಿಗೆ ಹೇಳೇ ಇರಲಿಲ್ಲ. ನನಗೆ ಮೂರು ತಿಂಗಳಾದಾಗ ಆಕೆಗೆ ಗೊತ್ತಾಗಿ ಗಾಬರಿಯಾದಳು. ಎಲ್ಲಾ ವಿಚಾರ ತಿಳ್ಕೊಂಡು ಆ ಮೇಸ್ತ್ರೀನ ಕರ್ಸಿ ಕೇಳಿದಳು. ನೀವೇನೂ ಚಿಂತಿ ಮಾಡಬೇಡ್ರಿ. ಈ ಅಪಾರ್ಟ್‌ಮೆಂಟ್ ಮುಗ್ಯೋದ್ರಾಗೆ ಮದ್ವೆ ಮಾಡ್ಕಳ್ತೀನಿ' ಅಂತ ಭರವಸೆಕೊಟ್ಟ ಅದಕ್ಕೆ ನಮ್ಮವ್ವ ಅಭಾರ್ಶನ್ ಮಾಡ್ಸೋದು ಬ್ಯಾಡ ಅಂತ ನಮ್ಮ ಅಜ್ಜಿ ಊರಿಗೆ ಕಳ್ಸಿದ್ಲು. ಅಲ್ಲೇ ಹೆರಿಗೆ ಆಯ್ತು. ಇಲ್ಲಿ ಆಕೆ ಬಂದ್ಮೇಲೆ ಮದ್ವೆ ಮಡ್ಕೊಳ್ತೀನಿ ಮಗುನೂ ಕರ್‍ಕೊಂಡು ಹೋಗ್ತೀನಿ ಅಂತ ಹೇಳ್ತಾ ಇದ್ನಂತೆ. ಮಗೂಗೆ ಎರಡು ತಿಂಗಳು ತುಂಬಿದ ಮೇಲೆ ಊರಿಗೆ ವಾಪ್ಸು ಬಂದೆ. ಆದ್ರೆ ಓಣಿಯವರಿಗೆ, ನಮ್ಮ ಅಕ್ಕಪಕ್ಕದೋರಿಗೆ ಯಾರಿಗೂ ಏನೂ ಗೊತ್ತಿರ್ಲಿಲ್ಲ. ಮಗೂನೂ ಯಾರ್‍ಗೂ ತೋರಿಸ್ಲಿಲ್ಲ. ಮದ್ವೆ ಆದ್ಮೇಲೆ ಗೊತ್ತಾಗ್ಲಿ ಬೇಕಾದ್ರೆ ಅಂತ ಸುಮ್ಮಿದ್ವಿ- ನಾನು ಬಂದ ಮೇಲೆ ಒಂದೆಲ್ಡು ಸಲ ಬಂದಿದ್ದ. ಮಗೀಗೆಬಟ್ಟೆ ಬರೆ ಕೂಡ ತಂದ್ಕೊಟ್ಟ ಆದ್ರೆ ಆಮೇಲೆ ಅವನ ಪತ್ತೇನೆ ಇಲ್ಲ. ಅಷ್ಟರಲ್ಲಿ ಅಪಾರ್ಟ್‌ಮೆಂಟ್ ಕೆಲ್ಸಾನು ಮುಗ್ದಿತ್ತು. ಯಾರನ್ನೂ ಕೇಳಿದ್ರೂ ಅವ್ನು ಎಲ್ಲಿರ್‍ತಾನೆ ಅನ್ನೋದೇ ಗೊತ್ತಾಗ್ಲಿಲ್ಲ. ಆಗ ನಮ್ಮವ್ವ ಮೂರು ತಿಂಗಳ ಮಗೂನ ನರ್ಸಿಂಗ್ ಹೋಂ ಬಾಗ್ಲಲ್ಲಿ ಮಲಗಿಸಿ ಬಂದ್ಲು. ಡಾ॥ ಶಂಕರ ಅವರ ಮನಸ್ಸು ಆಕೆಗೆ ಗೊತ್ತಿತು. ಅವ್ರೇನಾದ್ರೂ, ಮಗೀನ ವ್ಯವಸ್ಥೆ ಮಾಡ್ತಾರೇಂತ ಅವರು ಬರೋ ಹೊತ್ಗೆ ಬಾಗ್ಲಗೆ ಮಲಗಿಸಿ ಬಂದ್ಲು ಮುಂದಿಂದು ನಿಮ್ಗೇ ಗೊತ್ತೈತ್ರಿ

ಹಂಗಾದ್ರೆ ಪ್ರೇಂ ನಿನ್ನ ಮಗಾನಾ? ಮದ್ವೆ ಆದ್ಮೇಲೆ ಕರ್‍ಕೊಂಡು ಹೋಗ್ತೀಯಾ? ಅಂತ ಶಾಂತಿ ಗಾಬರಿಯಾಗಿ ಕೇಳಿದಳು

ಪ್ರೇಂ. ನನ್ನ ಮಗಾಂತ ನಾನು ಹೇಗೆಲ್ಲಿ ಅವ್ವಾರೆ. ಬೀದಿಗೆ ಎಸ್ದ ಕೂಸ್ನ ಇಷ್ಟು ಚೆನ್ನಾಗಿ ಸಾಕಿದ್ದೀರಾ? ದೊಡ್ಡ ಸಾಹೇಬ್ನಂಗೆ ಬೆಳೀತಾ ಇದಾನೆ. ನನ್ನ ಹಾಲು ಕುಡುಸ್ದೆ ಅಷ್ಟೆ. ನನಗಷ್ಟೇ ಸಾಕು. ನನ್ನ ಮಗ ನಿಮ್ಮ ಹತ್ರ ಸುಖವಾಗಿ ಬೆಳೀತಿದ್ದಾನೆ. ಅನ್ನೋದೆ ನನ್ಗೆ ಬಾಳ ಖುಷಿ ಆಗ್ಯೆತೆ. ನಾನು ಹೋಗಿ ಬರ್ತೀನಿ ಪ್ರೇಂ ನನ್ನ ಮಗ ಅಲ್ಲ. ನಿಮ್ಮ ಮಗ ನಿಜವಾಗೂ ನಿಮ್ಮ ಮಗ ಎಂದು ಹೇಳುತ್ತಾ, ಕಣ್ಣಿನಿಂದ ಜಾರಿದ ಕಣ್ಣೀರನ್ನು ಒರೆಸಿಕೊಳ್ಳುತ್ತಾ, ಹಿಂತಿರುಗಿನೋಡದೆ ಹೋಗಿಬಿಟ್ಟಳು.

ಪ್ರತಿಭಾ ತನ್ನ ಗೆಳತಿ ಸುಮಾಗೆ ಫೋನ್‌ಮಾಡಿ, ಸಂಜೆ ಐದು ದಿನಗಳ ಹಿಂದೆ ತನ್ನ ಯಜಮಾನ ಮೇಲಧಿಕಾರಿಯಾಗಿದ್ದ ಸುಶೀಲಳ ಯಜಮಾನರು ತೀರಿ ಹೋಗಿದ್ದರು. ಆಗಿ ಜನರ ಮಧ್ಯೆ ಸುಶೀಲಳೊಂದಿಗೆ ಮಾತನಾಡಲು, ಸಮಾಧಾನ ಪಡಿಸಲು ಸಾಧ್ಯವಾಗಿರಲಿಲ್ಲ. ಈಗ, ಬಂದು ಹೋಗುವವರ ಗದ್ದಲ ಕಡಿಮೆಯಾಗಿರಬೇಕೆಂದು ತಿಳಿದು, ಸುಶೀಲನ್ನು 'ಮಾತನಾಡಿಸಿ'ಕೊಂಡು ಬರಲು ಹೋಗುವುದಾಗಿ ಸುಮಾ ಮುಂದೆ ಹೇಳಿದಾಗ ಸುಮಾ,

'ನಾನೂ ಆದಿನ ಊರಲ್ಲಿರಲಿಲ್ಲ. ಹಾಗಾಗಿ ಮಣ್ಣಿನ ದಿನ ಬರಲಿಕ್ಕೆ ಆಗಲಿಲ್ಲ. ಈದಿನ ನಿನ್ನ ಜೊತೆ ನಾನೂ ಸುಶೀಲ ನಮ್ಮನವರನ್ನು ಮಾತನಾಡಿಸಲು ಬರುತ್ತೇನೆ' ಎಂದಳು ಆದ್ದರಿಂದ, ಈಗ ಫೋನ್ ಮಾಡಿ ಸಾಯಂಕಾಲ ಐದಕ್ಕೆ ಬರಬೇಕೆಂದು ಹೇಳಿದಳು

ಇಬ್ಬರೂ ಕೂಡಿ, ಸುಶೀಲಮ್ಮನ ಮನೆಗೆ ಹೋದಾಗ, ಜನರ ಗದ್ದಲವಿರಲಿಲ್ಲ. ಒಬ್ಬಿಬ್ಬರು ಬಂಧುಗಳಷ್ಟೇ ಉಳಿದಿದ್ದರು. ಈಕೆ ಬಂದದ್ದನ್ನು ನೋಡಿದ ಸುಶೀಲಮ್ಮ ಮುಖಕ್ಕೆ ಸೆರಗುಮುಚ್ಚಿಕೊಂಡು ಬಿಕ್ಕತೊಡಗಿದಳೂ. 'ಸಮಾಧಾನ ಮಾಡಿಕೊಳ್ಳಿ ಸುಶೀಲಮ್ಮ, ಈಗ ಎಲ್ಲಾ ಮುಗಿದ ಕಥೆ. ಈಗ ಏನು ಮಾಡಲೂ ಸಾಧ್ಯವಿಲ್ಲ. ಮನಸ್ಸನ್ನು ಗಟ್ಟಿಮಾಡಿಕೊಳ್ಳಿ'.

'ಈ ವಯಸ್ಸಿನಲ್ಲಿ ನಾನು ಈ ದುಃಖ ಹೇಗೆ ತಡೆದುಕೊಳ್ಳಲಿ? ಈ ಜವಾಬ್ದಾರಿಯನ್ನೆಲ್ಲಾ ಹೇಗೆ ನೋಡಿಕೊಳ್ಳಲಿ?'

'ನೀವೇ ಹೀಗೆ ಧೈರ್ಯ ಕಳೆದುಕೊಂಡರೆ ಮಕ್ಕಳಿಗೆ ಧೈರ್ಯಕೊಡುವವರಾರು? ನೀವೆಷ್ಟೇ ದುಃಖಪಟ್ಟರೂ ಹೋದವರು ಹಿಂದಿರುಗಿ ಬರುವಂತಿಲ್ಲ. ಕೈ ಕಟ್ಟಿ ಕುಳಿತುಕೊಳ್ಳಲೂ ಆಗುವುದಿಲ್ಲ. ಧೈರ್ಯತಂದುಕೊಂಡು ಬಾಳು ಸಾಗಿಸಬೇಕು.

ಯಜಮಾನರು ತೀರಿದ ದುಃಖವೊಂದೇ ಆಗಿದ್ದರೆ ಹೇಗಾದರೂ ಸಹಿಸಿಕೊಳ್ಳಬಹುದಿತ್ತು. ಆದರೆ ಕಿರಿಯ ಮಗಳ ಮದುವೆ ಮಾಡಬೇಕು. ಇರುವ ಒಬ್ಬ ಮಗ, ಬಿದ್ದು ಕಾಲುಮುರಿದುಕೊಂಡಿದ್ದಾನೆ. ಹಾಗಾಗಿ ಅವನ ನೌಕರಿಯೂ ಇಲ್ಲವಾಗಿದೆ. ಅವನ ಹೆಂಡತಿ, ಆಸ್ತಿಯನ್ನೆಲ್ಲ ತನ್ನ ಹೆಸರಿಗೆ ಮಾಡದ ಹೊರತು ತಾನು ಬರುವುದಿಲ್ಲವೆಂದು ತವರು ಮನೆಯಲ್ಲಿ ಕುಳಿತಿದ್ದಾಳೆ. ಅಲ್ಲದೇ ಇನ್ನೊಬ್ಬ ಮಗನ ವಿಧವಾ ಹೆಂಡತಿ ತನಗೆ ಆಸ್ತಿಯಲ್ಲಿ ಪಾಲು ಬರಬೇಕೆಂದು ಕೋರ್ಟಿಗೆ ಹೋಗಿದ್ದಾಳೆ. ಇವರೆಲ್ಲರ ಗದ್ದಲದಿಂದ ಬೇಜಾರಾಗಿದ್ದ ಸಾಹೇಬರು ಆಸ್ತಿಯನ್ನೆಲ್ಲಾ ಬಾಲ ವಿಧವೆಯಾಗಿರುವ ತಂಗಿಯ ಹೆಸರಿಗೆ ಮಾಡಿ ಹೋಗಿದ್ದಾರೆ. ಅವರಿದ್ದಿದ್ದರೆ ಇದನ್ನೆಲ್ಲಾ ಹೇಗಾದರೂ ಬಗೆಹರಿಸುತ್ತಿದ್ದರು. ನನಗೆ ಯಾವ ಚಿಂತೆ ಇರುತ್ತಿರಲಿಲ್ಲ. ಈಗ ಈ ಸಮಸ್ಯೆಗಳನ್ನೆಲ್ಲಾ ನಾನು ಹೇಗೆ ನಿಭಾಯಿಸಲಿ ? ದೊಡ್ಡ ಮಗುವಿಗೆ ಮಕ್ಕಳಾಗಿರಲಿಲ್ಲ ಅವನ ಹೆಂಡತಿ ಪಾಲು ಬೇಕೆನ್ನುತ್ತಾಳೆ. ಎರಡನೆಯವನು

ದುಡಿಯುತ್ತಿಲ್ಲ ಆದ್ದರಿಂದ ಗಂಡನ ಪಾಲನ್ನು ತನ್ನ ಹೆಸರಿಗೆ ಮಾಡಿದರೆ ಮಾತ್ರ ಗಂಡನೊಡನೆ ಬಾಳುವೆಗೆ ಬರುತ್ತೇನೆ. ಇಲ್ಲದಿದ್ದರೆ ಇಲ್ಲ ಎಂದು ಹಠಹಿಡಿದು ಎರಡು ವರ್ಷದ ಮಗನನ್ನು ಕರೆದುಕೊಂಡು ತವರಿನಲ್ಲಿ ಕುಳಿತದ್ದಾಳೆ. ಮನೆಯಲ್ಲಿ ಕಾಲೇಜಿಗೆ ಹೋಗುವ ಮಗಳು. ನನಗೋ ಹಾರ್ಟ್‌ನ ತೊಂದರೆ. ನನಗೇ ಒಂದು ಕಪ್ ಚಹಾ ಮಾಡಿಕೊಡುವವರಿಲ್ಲ. ಹೀಗಿರುವಾಗ ಕಾಲು ಮುರಿದು ಮಲಗಿರುವ ಮಗನ ಉಪಚಾರ ಮಾಡುವವರಾರು? ಕಾಲೇಜಿಗೆ ಹೋಗುವ ಹುಡುಗಿಗೆ, ಅಡಿಗೆಮಾಡಿ ಹಾಕುವವರು ಯಾರು? ಈ ವ್ಯವಹಾರಗಳನ್ನೆಲ್ಲಾ ನೋಡಿಕೊಳ್ಳುವವರು ಯಾರು? ಸಾಹೇಬರೇನೋ ಯಾವ ಜಂಝಾಟವೂ ಇಲ್ಲದೆ ಹೋಗಿ ಬಿಟ್ಟರು. ಇದನ್ನೆಲ್ಲಾ ಕಟ್ಟಿಕೊಂಡು ಒದ್ದಾಡುವ ಪರಿಸ್ಥಿತಿ ನನಗೆ ಬಂದಿದೆ.

ನಿಜ ಸುಶೀಲಮ್ಮ, ನಿಮ್ಮ ಪರಿಸ್ಥಿತಿ ಗಂಭೀರ ಇದೆ. ಏನು ಮಾಡುವುದು ಬಂಧುಗಳ, ಆಫೀಸಿನವರ, ಸ್ನೇಹಿತರ ಸಹಾಯ ಪಡೆದು ಎಲ್ಲಾ ನಿಭಾಯಿಸಬೇಕೂರಿ, ನಿರ್ವಾಹವಿಲ್ಲ. ಎಲ್ಲ ಚಿಕ್ಕಮಕ್ಕಳು. ಆ ಬಾಲ ವಿಧವೆ ಸಾಹೇಬರ ತಂಗಿ, ಮನೆಯ ಕೆಲಸಕ್ಕೆ ನೆರವಾಗಬಹುದಲ್ಲ.

ಇಲ್ಲ. ಅವಳು ಇಲ್ಲಿರುವುದಿಲ್ಲ. ಅವರ ಅಪ್ಪ ಅಮ್ಮನ ಹತ್ತಿರ ಊರಲ್ಲಿ ಇರುತ್ತಾಳೆ. ಅವಳನ್ನು ಬಹಳ ಅಚ್ಚಾಮಾಡಿ ಇಟ್ಟುಕೊಂಡಿದ್ದಾರೆ. ಇಲ್ಲಿ ಬಂದು ಆಕೆ ಕೆಲಸಮಾಡೋದಿಲ್ಲ. ಸಂಬಂಧಿಕರು ಸ್ನೇಹಿತರು, ಆಫೀಸಿನವರು ಆಗ ಒಂದೆರಡು ದಿನ ಓಡಾಡಿದರು. ಈಗ ಒಬ್ಬರ ಸುಳಿವೂ ಇಲ್ಲ. ಸಾಹೇಬರಿದ್ದಾಗ ಹೇಳಿಕಳಿಸಿದ್ರೆ, ಸಾಕು, ಓಡಿ ಬರ್ತಿದ್ರು, ಈಗ ಎಷ್ಟೇ ಫೋನ್ ಮಾಡಿದ್ರೂ, ಮನೇಲಿ ಇದ್ರೂ, ಇಲ್ಲಾಂತ ಹೇಳಿಸ್ತಾರೆ. ಹಿಂಗಿರೋವಾಗ, ಈ ಸಮಸ್ಯೆಗಳಿಗೆ ನಿಂತು ಸಹಾಯ ಮಾಡ್ತಾರಾ? ಅದೆಲ್ಲಾ ಸುಳ್ಳುಮಾತು.

■

## ೪. ಮುಡಿಗೆ ಹೂ ಚಂದ–ಬರಹಕ್ಕೆ ಗಾದೆ ಅಂದ

**ಸು**ರಭಿ, ಸುಗಂಧಿಯ ಅಪರೂಪದ ಮಗಳು. ಮದುವೆಯಾಗಿ ಐದು ವರ್ಷ ಆದರೂ ಮಕ್ಕಳಾಗದಾಗ, ಹರಕೆ ಹೊತ್ತು, ವ್ರತ ಮಾಡಿದ್ಮೇಲೆ ಹುಟ್ಟಿದೋಳು. ತಾಯಿಗಂತೂ ಮಗಳನ್ನು ಎಷ್ಟು ನೋಡಿದರೂ ಸಾಲದಾಗಿತ್ತು. ದಿನಕ್ಕೆ ಮೂರು ನಾಲ್ಕು ತರಹ ಡ್ರೆಸ್ ಮಾಡಿ, ನೋಡಿ ಹಿಗ್ಗುತ್ತಿದ್ದಳು ಅವಳನ್ನು ಚನ್ನಾಗಿ ಸಾಕಬೇಕು, ಜಾಣೆ ಮಾಡ್ಬೇಕು, ಜೀವನದಲ್ಲಿ ಎಂದೂ ಕಷ್ಟನೇ ಪಡಬಾರ್ದು ಹಾಂಗೆ ಬುದ್ಧಿ ಕಲಿಸಿ, ಅವಳು ಸುಖವಾಗಿರೋ ಹಂಗೆ ಮಾಡಬೇಕೂ ಅನ್ನೋದೆ ಸುಗಂಧಿಯ ಕನಸಾಗಿತ್ತು.

ಸುರಭಿ ಹೇಳಿದ್ದನ್ನು ತಿಳ್ಕೊಳ್ಳೋವಷ್ಟು ದೊಡ್ಡವಳಾದದ್ದೆ ತಡ, ದಿನದ ಪ್ರತಿಯೊಂದು ಸಂದರ್ಭವನ್ನೂ ಉಪಯೋಗಿಸಿಕೊಂಡು ಜೀವನದ ಬಗ್ಗೆ ಹೇಳಿದ್ದೂ ಹೇಳಿದ್ದೆ ; ಯಾವಾಗ ಹೆಂಗೆ ನಡೀಬೇಕು ; ಜಾಣತನದದಿಂದ ಹೆಂಗೆ ಬದುಕ್ಬೇಕೂ ಅಂತ ಉಪದೇಶ ಮಾಡಿದ್ದೂ ಮಾಡಿದ್ದೆ, ಚಿಕ್ಕವಳಿದ್ದಾಗಿನಿಂದಲೇ ಗಂಡನ್ಮನೇಗೆ ಹೋದ್ಮೇಲೆ ಅಲ್ಲಿ ಹೆಂಗಿರ್ಬೇಕು, ಯಾರ್‍ಯಾರನ್ನು ಹೆಂಗೆ ಕಂಡು, ಎಚ್ಚರಿಕೆಯಿಂದ ಇರ್ಬೇಕು ಅನ್ನೋದ್ನೆಲ್ಲಾ ಹೇಳಿ, ಒಂದೊಂದು ಸಾರಿ ಹೇಳಿದ ಮಾತನ್ನೇ ಮತ್ತೆ ಮತ್ತೆ ಹೇಳುತ್ತಾ 'ಇದೇನಿದು ಹೇಳಿದ್ದನ್ನೇ ಹೇಳೊ ಕಿಸಬಾಯಿದಾಸ' ಅನ್ನೋ ಹಂಗೆ ಹೇಳುತ್ತಿದ್ದಳು. ಮತ್ತೆ, ನೋಡು ಮಗು, 'ವೇದ ಸುಳ್ಳಾದ್ರು ಗಾದೆ ಸುಳ್ಳಾಗೋಲ್ಲ' ಅದ್ಕೆ ಗಾದೆ ಮಾತ್ನಲ್ಲಿರೋ ಅರ್ಥ ತಿಳ್ಕೊಂಡು ಎಚ್ಚರದಿಂದ ಇರು. ಹಿರಿಯೋರು ತಮ್ಮ ಅನುಭವದಿದಮ ಕಂಡ್ಕೊಂಡ ಸತ್ಯಾನ ಗಾದೆ ರೂಪದಲ್ಲಿ ಹೇಳಿದಾರೆ. ಅವು ಅನುಭವದ ಮಾತುಗಳು. ಅವೆಂದೂ ಸುಳ್ಳಾಗೋದಿಲ್ಲ ದೊಡ್ಡೋರು, ಚಿಕ್ಕೋರು ತಪ್ಪು ಮಾಡಿದಾಗ ಬಯ್ಯಬಹುದು ಆಗ 'ಬಯ್ಯೋರು ಬದ್ಕೋಕೆ ಹೇಳ್ತಾರೆ'ಂತ ತಿಳ್ಕೊಂಡು, ನಿನ್ನ ತಪ್ಪನ್ನು ತಿದ್ದಿಕೊ ಬೇಜಾರು ಮಾಡ್ಕೋಬೇಡ. ನೋಡು 'ಮಾಡಿದ್ದುಣ್ಣೋ ಮಹಾರಾಯ' ಅಂತ ಹೇಳ್ತಾರೆ. ನಾವು ಒಳ್ಳೇದು ಮಾಡಿದ್ರೆ, ಒಳ್ಳೇದು ಸಿಕ್ಕುತ್ತೆ, ಕೆಟ್ಟದ್ಮಾಡಿದ್ರೆ ಕೆಟ್ದೆ ಸಿಕ್ಕೋದು, ಅದೇ ನಾವು ಯಾವಾಗ್ಲೂ ಒಳ್ಳೇದನ್ನೇ ಮಾಡ್ತಾ, ಒಳ್ಳೇದನ್ನು ಪಡ್ಕೊಂಡು ಸುಖವಾಗಿ ಬದುಕಬೇಕು. ಬಾಳ್ವೆ ಮಾಡ್ಬೆಕಾದ್ರೆ ಎಚ್ಚರವಾಗಿರ್ಬೇಕು. ನೆರೆಹೊರೆಯೋರ್ಹತ್ರ ವಿಶ್ವಾಸ ಕೆಡಿಸ್ಕೊಳ್ದೆ ಸ್ನೇಹದಿಂದ ಇರಬೇಕು. ಸಮಯ ಸಂದರ್ಭ ಬಂದ್ರೆ, ಹತ್ತಿರದಲ್ಲಿ ಬಂಧು–ಬಳಗ

ಯಾರೂ ಇರಲ್ಲ ಕಷ್ಟಕ್ಕೆ ಆಗೋರು-ಹೋಗೋರು ಅಂದ್ರೆ ಅಕ್ಕಪಕ್ಕದವರೆ ! ಆದ್ರೆ ಅವ್ರು ಎಂಥವರು ಅಂತ ನೋಡಿ, ಅವರ ಸ್ನೇಹ ಬೆಳಸ್ಕೋ ಬೇಕು. ಈಗಿನ ಕಾಲದಲ್ಲಿ ನಾನಾ ರೀತಿ ಜನ ಇರ್ತಾರೆ. ಕೆಲವ್ರು, 'ಇತ್ತತ್ ಬಾ ಅಂದ್ರೆ ಇದ್ದ ಗೋಡೆ ಕೆಡವ್ತೀನಿ' ಅಂದ್ರಂತೆ ಅಂಥಾ ಜನ ಇರ್ತಾರೆ, 'ಬೆರಳು ತೋರ್ಸಿದ್ರೆ ಹಸ್ತಾನೆ ನುಂಗೋ ಜನಾ'ನೂ ಇರ್ತಾರೆ ಅಂಥವ್ರನ್ನ ತುಂಬಾ ಹಚ್ಕೋ ಬಾರ್ದು ತಿಳೀತಾ. ಮನೆ ಬಗ್ಗೆ ಕಾಳಜಿಯಿಂದ ಇರ್ಬೇಕು. ನಮ್ಮ ಆದಾಯಕ್ಕೆ ಮೀರಿ ಖರ್ಚು ಮಾಡಬಾರ್ದು 'ಹಾಸ್ಗೆ ಇದ್ದಷ್ಟು ಕಾಲು ಚಾಚಬೇಕು ಯಾರೋ ದುಡ್ಡಿದ್ದವ್ರು ಒಡ್ವೆ ವಸ್ತು ಹಾಕ್ಕೊಂಡ್ರೆ ನಾನೀ ಹಾಕ್ಕೋಬೇಕೂಂತ ಸಾಲಾಮಾಡಿ, ಅವ್ರು ಮಾಡಿದಂತೆ ಮಾಡಿದ್ರೆ, 'ಸಾಲ ಮಾಡಿ ಓಲೆ ತಂದ; ಓಲೆ ಮಾರಿ ಬಡ್ಡಿ ತೀರಿಸಿದ' ಅನ್ನೋ ಸ್ಥಿತಿಯಾಗುತ್ತೆ. ಯಾರೋ ಮಾಡಿದ್ರೂಂತ ನಮಗೆ ನೀಗದ್ದನ್ನ ಮಾಡಿದ್ರೆ, 'ನವಿಲನ್ನ ನೋಡಿ, ಕೆಂಬೂತ ಪುಕ್ಕ ಬಿಚ್ಕೊಳ್ತಂತೆ' ಅಂತಾರಲ್ಲ ಹಾಗೆ ಅಂತ ಜನ ಆಡ್ಕೋಳ್ತಾರೆ ಯಾರೋ ಅಡ್ಡಿಕೆ ಹಾಕ್ಕೊಂಡ್ರೆತಾವು ಹಾಕ್ಕೋಬೇಕು ಅಂತ ಇಲ್ದವ್ರು ಆಸೆ ಮಾಡಿದ್ರೆ ನೆರೆ ಮನೆಯೋರು ಅಡ್ಡಿಕೆ ಹಾಕ್ಕೊಂಡ್ರೂಂತ ಇವರು ನೇಣು ಹಾಕ್ಕೊಂಡ್ರಂತೆ' ಅಂತಾರೆ.

ಬೇರೆಯವರಿಗೆ ನಮ್ಮ ಕೈಲಾದಷ್ಟು ಸಹಾಯ ಮಾಡಬೇಕು ನಿಜ, ಆದ್ರೆ ಕೆಲವ್ರು ತಮ್ಮ ಮನೆಯದನ್ನು ಅಲಕ್ಷ್ಯ ಮಾಡ್ಕೊಂಡು ಇತರರ ಮನೆ ಕೆಲಸಗಳನ್ನು ಹುರುಪಿನಿಂದ ಮಾಡ್ತಾರೆ. ಆಗ ಮನೆಯೋರೆಲ್ಲ ಅಂತಹವರ್ನ 'ಮನೆಗೆ ಮಾರಿ, ಪರರಿಗೆ ಉಪಕಾರಿ' ಅಂತ ಹೀಗಳೆದು ಮಾತ್ನಾಡ್ತಾರೆ. ನಮ್ಗೆ ಯಾರಾದ್ರೂ ಅನ್ಯಾಯ ಮಾಡ್ದಾಗ ಬಾಯಿ ಮುಚ್ಕೊಂಡು ಸುಮ್ನಿದ್ರೆ, ಅವ್ರು ಇನ್ನೋ ಜೋರಾಗಿ, ನಮಗೆ ಅಸಹ್ಯ ಆಗೋ ಹಂಗೂ ಮಾಡ್ತಾರೆ ; ನಷ್ಟ ಆಗೋ ಹಂಗು ಮಾಡ್ತಾರೆ. ಅದ್ಕೆ, ಸಮಯ ಬಂದಾಗ ಜೋರಾಗಿ ಇರೋದನ್ನು ಕಲ್ತಿರ್ಬೇಕು. ಬಾಯುಳ್ಳೋರು ಬಾರ್ದಾಗುಳುಕೊಂಡ್ರು ಅನ್ನೋಹಂಗೆ, ಕಷ್ಟದಿಂದ ಬಚಾವಾಗ್ಬಹ್ದು. ಪಕ್ಕದವರ ಮನೇಲಿ ಹಬ್ಬ ಹುಣ್ಣಿಮೆ, ಕೆಲಸ-ಕಾರ್ಯ ಇದ್ದಾಗ, ಮದ್ವೆ ಕಾರ್ಯಕ್ಕೆ ಊಟಕ್ಕೆ ಕರೆದ್ರೆ, ಕೆಲವರು ಅದನ್ನೇ ನೆಂಬ್ಕಂಡು, ತಮ್ಮ ಮನೆ ಮಹತ್ವದ ಕೆಲಸ ಕಡೆಗಣಿಸಿ, ಇಡೀ ದಿನ ಊಟದ ಸಡಗರದಲ್ಲೇ ಕಾಲ ಕಳೆದು ಬಿಡ್ತಾರೆ. ಕೆಲವೊಮ್ಮೆ ಹೀಗೆ ಮಾಡಿದಾಗ, ನಿನ್ನ ಮಹತ್ವದ ಕೆಲಸ ಕೆಟ್ಟು ವರ್ಷವೆಲ್ಲಾ ಕಷ್ಟಪಡಬೇಕಾದ ಸಂದರ್ಭ ಬರಬಹುದು. ಆಗ ನೋಡ್ದವ್ರು 'ಅರಿಸಿನದ ಕೊಳಿಗಾಗಿ ವರ್ಷದ ಕೂಳು ಕಳ್ಕೊಂಡ್ರು' ಅಂತ ಹಾಸ್ಯ ಮಾಡ್ತಾರೆ ಇನ್ನೊಂದು ವಿಚಾರ ಯಾರಿಗೂ ಕೇಳ್ದೇನೆ ಸಲಹೆ ಕೊಡೋಕೆ ಹೋಗ್ಬೇಡೆ, ನಾವೇ ಮೇಲ್ಬಿದ್ದು ಅವರಿಗೆ ಸಲಹೆ ಕೊಟ್ರೆ ಅದಕ್ಕೆ ಬೆಲೇನೇ ಇರೋದಿಲ್ಲ. 'ಮದ್ವೆ ಆಗೋ ಬ್ರಾಹ್ಮಣ ಅಂದ್ರೆ, ನಿನ್ನನ್ನೆ ಆಗ್ತೀನಿ'

ಅಂದ್ನಂತೆ ಅನ್ನೋ ಹಂಗೆ, ನಿನಗೇ ಗಂಟು ಬೀಳುತ್ತಾನೆ. ಸಮಸ್ಯೆ ತಂದು ಹಾಕ್ತಾರೆ.

ಚಿತ್ರ ವಿಚಿತ್ರ ಜನ ಇರ್ತಾರೆ, 'ಹೊಟ್ಟೆಗಿದ್ರೆ, ಬಟ್ಟೆಗಿಲ್ಲ ಬಟ್ಟೆಗಿದ್ರೆ ಹೊಟ್ಟೆಗಿಲ್ಲ' ಅನ್ನೋ ಅಷ್ಟು ಬಡತನ ಇದ್ರೂ ' ಹೊಟ್ಟೆಗಿಲ್ದಿದ್ರೂ ಜುಟ್ಟಿಗೆ ಮಲ್ಲಿಗೆಹೂವು' ಅನ್ನೋಹಂಗೆ ಬೇಕೆ ಬೇಕಾದ ಸೀರೆ ತೊಗೊಂಡ್ರೆ, ಒಡ್ವೆ ಮಾಡಿಸ್ಕೊಂಡ್ರೆ, ನಾಚಿಕೆಗೇಡಲ್ವಾ, 'ದುಡ್ಡಿದ್ದವನು ದೊಡ್ಡಪ್ಪಾ' ಅಂತಾರೆ ನಿಜ. ಆದ್ರೆ ನಿಜವಾಗ್ಲೂ ದುಡ್ಡರ್ಬೇಕಲ್ಲ, ! ಇದೇಂತ ತೊರಿಸ್ಕೊಂಡ್ರೆ, ದುಡ್ಡಿದ್ದಂಗಾಗುತ್ತಾ ? ಬೆನ್ನ ಹಿಂದೆ ಎಲ್ರೂ ಆಡ್ಕೊಂಡು ನಗ್ತಾರೆ, ಅಷ್ಟೆ.

ನೋಡು ಮಗೂ, ನೀನು ಮದುವೆಯಾಗಿ ಗಂಡನ ಮನೆಗೆ ಹೋದಾಗ, ಅಲ್ಲಿಯವರೆಲ್ಲಾ ಹೊಸಬರು. ಒಬ್ಬೊಬ್ಬರು ಒಂದೊಂದು ಥರಾ ಇರಬಹುದು. ಕೆಲವರು ಸಣ್ಣ ಕಾರಣಕ್ಕೆ ಕಾಲಕೆರೆದು ಜಗಳಕ್ಕೆ ಬರೋವಂಥವರೂ ಇರ್ತಾರೆ. ಆಗ ಸಿಟ್ಟಿಗೆದ್ದು ನೀನು ಜಗಳಕ್ಕೆ ನಿಂತರೆ, ಹೋದ ಹೊಸದರಲ್ಲೇ ಜಗಳಗಂಟೀ ಅಂತ ಹೆಸರಿಟ್ಟಬಿಡ್ತಾರೆ. ಆ ಮೇಲೆ ಆ ಹೆಸರು ಕಳ್ಕೊಳ್ಳೋದು ಕಷ್ಟ, ನೀನು ಹುಟ್ಟಿದ ಮನೆಗೂ ಕೊಟ್ಟ ಮನೆಗೂ ಗೌರವ ಬರುವಂತೆ ಬದುಕ್ಬೇಕು. ಅದಕ್ಕೆ 'ತಾಳಿದವರು ಬಾಳಿಯಾರು' ಎಂಬುದನ್ನು ನೆನಪಿಟ್ಟುಕೊಂಡು ಸ್ವಲ್ಪ ತಾಳ್ಮೆಯಿಂದ ಇರು. ಆ ಮೇಲೆ ಎಲ್ಲಾ ತಾನೇ ಸರಿಹೋಗುತ್ತೆ. ಅವರು ನಿನಗೆ ಗೌರವ ಕೊಡಬೇಕೂಂತ ಒತ್ತಾಯ ತರಬೇಡ. ಅವರಾಗವ್ರೆ ನಿನ್ನನ್ನು ಮೆಚ್ಚಿ, ಗೌರವ ಕೊಡಬೇಕು ಹಾಗೆ ನಿನ್ನ ಗುಣ ಇರ್ಬೇಕು 'ಅತ್ತು ಕರ್ದು ಔತಣಕ್ಕೆ ಹೇಳಿಸ್ಕೊಂಡ್ರು' ಅನ್ನೋ ಹಾಗೆ ಆಗ್ಬಾರ್ದು. ನಿನ್ನ ಒತ್ತಾಯಕ್ಕೆ ಎಲ್ರೂ ನಿನಗೆ ಗೌರವ ಕೊಟ್ರೆ ಪ್ರಯೋಜ್ನ ಇಲ್ಲ. ಅದಕ್ಕೆ ಬೆಲೇ ನೂ ಬರೋಲ್ಲ, ತಿಳ್ಕೊಂಡಿರು.

ಏನೇ ಸಮಸ್ಯೆ ಬಂದ್ರೂ ಆಗಿಂದಾಗ್ಲೆ ಸರಿಪಡ್ಸಿಕೊಂಡುಬಿಡು. ಅದು ದೊಡ್ಡದಾದ್ಮೇಲೆ ಬಗೆ ಹರ್ಸೋದು ಕಷ್ಟ ಅದಕ್ಕೆ ಪ್ರಾರಂಭದಲ್ಲೇ ಸರಿಮಾಡ್ಕೋಬೇಕು. ಇಲ್ದಿದ್ರೆ 'ಮುಂಗೈ ಬಿಟ್ಟು ಮೊಳಕೈ ಹಿಡ್ಕೊಂಡ್ಹಾಗೆ' ಆಗುತ್ತೆ ಅಷ್ಟೆ. ಆಳುಗಳು ಇಲ್ಲದ ತಲೆಹರಟೆ ಮಾಡಿದಾಗ, ಮಾಲಿಕರು ಸಿಟ್ಟಿಗೆದ್ದು ಕೆಲಸದಿಂದ ಬಿಡಿಸ್ಬಹ್ದು. ಆಗ ಅವರ ಜೀವನ ಬಹಳ ಕಷ್ಟಕ್ಕೆ ಗುರಿಯಾಗುತ್ತೆ. ಬಡವರನ್ನು ಕಂಡರೆ ನಿನಗೆ ಕನಿಕರ ಇರ್ಲಿ' ಆಳುಗಳೇನಾದ್ರು ದಿಮಾಕ ಮಾಡಿದ್ರೆ ಅವರಿಗೆ ಬುದ್ದಿ ಹೇಳಿ ತಿದ್ದು. 'ಬಡವಾ ನೀನು ಮಡಗಿದ್ಹಂಗಿರು' ಮತ್ತೆಲ್ಲಾದ್ರೂ ಕೆಲಸ ಕಳ್ಕೊಂಡೀಯೆ. 'ಬಡವನ ಸಿಟ್ಟುದವಡೆಗೆ ಮೂಲ' ಅಂದ್ಹಂಗೆ, ಅದು ನಿನಗೇ ತೊಂದರೆ ಕೊಡುತ್ತೆ, ಸ್ವಲ್ಪ ಸಹನೆಯಿಂದ ಇದ್ರೆ ಎಲ್ಲಾ ಸರಿಹೋಗುತ್ತೇಂತ ಹೇಳು, ನೀನೂ ಅಷ್ಟೆ. ಪರರ ಮನೆಯ ಕಾರ್ಯದಲ್ಲಿ ಅತೀ ಸಡಗರದಿಂದ ಓಡಾಡಬೇಡ. ಗಾಂಭೀರ್ಯದಿಂದ ಇರು. ಇಲ್ಲದಿದ್ದರೆ, ಬೇರೆಯವರು, 'ಏನೇ ಬೀರಿ ಓಡಾಟ ಅಂದ್ರೆ, ಶಾನುಭೋಗರ

ಮನೆ ದೇವ್ರೂಟ ಅಂದ್ಲಂತೆ' ಹಂಗೆ ಅವರ ಮನೆ ಸಡಗರಕ್ಕೆ ಇವಳು ಮನೆವ್ರಿಗಿಂತ ಹೆಚ್ಚಾಗಿ ಬಡಿವಾರ ಮಾಡ್ಕಂಡು ಓಡಾಡ್ತಾಳೇಂತ ಟೀಕೆ ಮಾಡ್ತಾರೆ, ಯಾವ್ದಾದ್ರು ಕೆಲ್ಸ ಸರಿಯಾಗಿ ಗೊತ್ತಿದ್ರೆ ಮಾತ್ರ ತಲೇ ಹಾಕು. ಇಲ್ದೇನೆ ನೀನು ಎಲ್ಲಾ ಗೊತ್ತಿದ್ದವಳಂತೆ ಬಾಯಿ ಹಾಕಿ, ಆಮೇಲೆ ಅವ್ರು ನಿನ್ನನ್ನೇ ಎಲ್ಲದಕ್ಕೂ ಸಲಹೆ ಕೇಳ್ತಾರೆ. ಆಗ ನಿನಗೇನು ಗೊತ್ತಿಲ್ಲ ಅಂತ ಗೊತ್ತಾದ್ರೆ, 'ಅಡಿಗೇಲಿ ಜಾಣೇಂತ ಹಡಗ್ನಿಂದ ಕರೆಸಿದ್ರೆ, ಹುಳ್ಚಿಕ್ಕ ಸೊಪ್ಪಿನ ಸಾರಿಗೆ, ಹುಳಿ ಎಷ್ಟು ಹಾಕ್ಬೇಕು ಅಂತ ಕೇಳಿದ್ಲಂತೆ' ಎಂದು ನಗುಪಾಟಲು ಮಾಡ್ತಾರೆ.

ಯಾವಾಗ್ಲೂ ಹಾವು ಸಣ್ಣದಂತ, ಗಂಡ ತನ್ನವನೇ ಅಂತ ತಿಳ್ಕೋಬಾರ್ದು. ಏಕಂದ್ರೆ, 'ಹಾವು ಸಣ್ಣದು ಅನ್ನ ಬಾರದಂತೆ, ಗಂಡ್ಸನ್ನ ನನ್ನದನ್ನಬಾರದಂತೆ' ಹಾವು ಸಣ್ಣದಾದ್ರೂ ಹಾವಿನ ವಿಷ, ವಿಷವೇ ಗಂಡಸು ಅಷ್ಟೆ. ಹೆಂಡತಿ ಗಂಡನಿಗೆ ನಿಷ್ಠೆಯಿಂದ ನಡೆದುಕೊಂಡರೂ ಬಹಳ ಮಂದಿ ಗಂಡಸರು ನಿಷ್ಠೆಯಿಂದ ಇರೋದಿಲ್ಲ. ಎಷ್ಟೇ ವಯಸ್ಸಾಗಿದ್ರು ಅವ್ರನ್ನ ಕಷ್ಟ ಅಂತಾರೆ. ಹುಣಸೀ ಮುಪ್ಪಾದ್ರೂ, ಅದರ ಹುಳಿ ಮುಪ್ಪಲ್ಲ ಅಂತಾರಲ್ಲ ಹಂಗೆ, ಗಂಡಸ್ರ ಬಗ್ಗೆ ಜನ ಹೇಳ್ತಾರೆ.

ನೋಡು ಮಗೂ, ಆ ಚನ್ನಮ್ಮಂಗೆ ಅವರಣ್ಣನ ಮಗಳ ಮದುವೆಗೆ ಹೋದಾಗ ಬೀಗರ ಕಡೆಯವ್ರು ಸೀರಿ ಮಾಡಿದ್ರಂತೆ ಆಕೆ ಮನೆಗ್ಬಂದ ಆ ಸೀರಿ ಬೀ ಕ್ವಾಲಿಟಿ, ಅಂದ-ಚಂದ, ಅದ್ರ ಬೆಲೆ ತುಂಬಾ ಟೀಕೆ ಮಾಡಿದ್ಲಂತೆ, ಏನೋ ಪದ್ಧತಿ ಅಂತ ಕೊಡ್ತಾರಪ್ಪ ತುಟ್ಟೀದು ತರೋಕೆ ಕಷ್ಟ ಆಗಿರ್ಬೇಕು. ಎಷ್ಟು ಜನಕ್ಕೆ ಸೀರೆ ಕೊಡ್ಬೇಕಲ್ಲ! ಅದ್ಕೇ ಸುಮಾರದಲ್ಲಿ ತಂದಿರ್ತಾರೆ, ಮಹತ್ವ ಕೊಡ್ಬೇಕು, 'ದಾನಕ್ಕೆ ದಟ್ಟಿಕೊಟ್ರೆ ಹಿತ್ಲಿಗೆ ಹೋಗಿ ಮೊಳಹಾಕಿದ್ರಂತೆ' ಅನ್ನೋಹಂಗೆ ಅವ್ಳು ಅದ್ರ ಬೆಲೆ ಕಟ್ತಾಳೆ ಒಲೆ ಮೇಲೆ ಅನ್ನಕ್ಕೆ ಇಟ್ಟಿದ್ದೆ. ಈ ಮಾತಿನ ಗದ್ದಲದಾಗ, ಅನ್ನ, ಕೆಡಬಾರ್ದು. 'ಮಾತು ಮನೆ ಕೆಡುಸ್ತು, ತೂತು ಒಲೆ ಕೆಡುಸ್ತು' ಅಂತಾರಲ್ಲ ಹಂಗಾದೀತು. ನಾನು ಇಷ್ಟೆಲ್ಲಾ ಹೇಳೋದನ್ನ ಕೇಳಿ, ನನ್ಗೇನು ಮದ್ವೆ ಆಗಿದ್ಯೆ, ಈಗ್ಲೆ ಇಷ್ಟೊಂದು ಹೇಳೋಕೆ 'ಅಡೀ ಅನ್ನೋಕೆ ಅವ್ವೆ ಇಲ್ಲ ; ಪುಳ್ಳೀಪೇರು ರಾಮಚಂದ್ರ' ಅಂದ್ಹಾಗೆ ಈಗ್ಲೆ ಏನು ಅವಸ್ರ, ಇಷ್ಟೆಲ್ಲಾ ಹೇಳೋಕೆ ಅಂದ್ಕೋಬೇಡ. ಇದೆಲ್ಲಾ ಮೊದ್ಲಿಂದ ತಿಳ್ಕೊಂಡು ಇದ್ರೆ, ಜವಾಬ್ದಾರಿ ಬಂದಾಗ, ಸರಿಯಾಗಿ ಸ್ಪಂದಿಸೋಕೆ ಆಗುತ್ತೆ. ಕೆಲವರು ಎಲ್ಲಾ ಬಿಟ್ಕೊಂಡು ತಮ್ಮ ಪಾಡಿಗೆ ತಾವು ನಿಶ್ಚಿಂತೆಯಿಂದ ಇರ್ತಾರೆ ಏನಾದ್ರೂ ಅವರ್ಗೆ ಚಿಂತೆ ಇಲ್ಲ. ಆಗ 'ಚಿಂತೆ ಗೆಟ್ಟೋಳ್ಗೆ ಸಂತೇಲಿ ನಿದ್ದೆ ಬಂತಂತೆ' ಅನ್ನೋಹಂಗೆ ರಾಶಿ, ರಾಶಿ ಕೆಲ್ಸ ಇದ್ರೂ, ಲಕ್ಷ್ಯ ಕೊಡದೆ ತಮ್ಮ ಪಾಡಿಗೆ ತಾವು ನಿಶ್ಚಿಂತೆಯಾಗಿ ನಿದ್ದೆ ಮಾಡ್ಕೊಂಡು ಕಾಲ ಕಳೀತಾಳೆ ಅಂತ ಟೀಕಿಸ್ತಾರೆ.

ಹೆಣ್ಣು ಮಕ್ಕಳು ಕೆಲವರು ಮೂರು ಹೊತ್ತು ಅವರಿವರ ಮನೆಗೆ ತಿರುಗ್ತಾ ಕಾಲ ಕಳೀತಾರೆ. ಅಂಥವರಿಗೆ ಕಾಲ ಮನೇಲಿ ನಿಲ್ಲೋದೇ ಇಲ್ಲ. ಮುಗೀಲಿ

ಮುಗೀದೆ ಇಲ್ಲಿ ಅವ್ರು ಹೊರಗೆ ಹೋಗ್ಲೇ ಬೇಕು. ಅಂತಹ ಚಾಳಿ ಇದ್ರೆ, ಮನೆಯ ವ್ಯವಸ್ಥೆ ಸರಿಯಾಗೋಲ್ಲ ! ಮಾಡಬಹದಾದ ಮುಖ್ಯ ಕೆಲಸಗಳೆ ಹಂಗೆ ಉಳ್ದು ತುಂಬಾ ನಷ್ಟ ಆಗುತ್ತೆ ಅದಕ್ಕೆ ಹೆಣ್ಣು ತಿರುಗಿ ಕೆಟ್ಲು, ಗಂಡ್ಸು ಕುಂತು ಕೆಟ್ಟ ! ಅಂತ ಟೀಕೆ ಮಾಡೋ ಗಾದೆ ಕಟ್ಟಿದ್ದಾರೆ. ನೋಡಮ್ಮ, ಇನ್ನೊಂದ್ಮಾತು ಮನೆಯ ಆದಾಯ ಎಷ್ಟೇ ಇದ್ದರೂ ಗೃಹಿಣಿ ದುಂದು ಕೈನವಳಾಗಿದ್ದರೆ ಆರ್ಥಿಕ ದುಸ್ಥಿತಿ ತಪ್ಪಿದ್ದಲ್ಲ ಸಣ್ಣ ಪುಟ್ಟದ್ದರಲ್ಲೂ ಎಚ್ಚರಿಕೆ ಇರಬೆಕು. ಇಷ್ಟರಿಂದ ಎನ್ ಮಹಾನಷ್ಟ ಆಗುತ್ತೇಂತ ಅಲಕ್ಷ್ಯ ಮಾಡುವ ಸ್ವಭಾವ ಬೆಳೆಸಿಕೊಂಡರೆ, ಇಷ್ಟು, ಇಷ್ಟೊಂತನೇ ಲೆಕ್ಕವಿಲ್ಲದಷ್ಟು ಖರ್ಚಾಗಿ ಬಿಡುತ್ತದೆ. ನೀನು, 'ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಭತ್ತ' ಎಂಬ ಗಾದೆಯನ್ನು ಕೇಳಿರಬೇಕು. ಅದೇ ರೀತಿ ಇಷ್ಟಿಷ್ಟೇ ಸೇರಿ ಹನಿ-ಹನಿಗೂಡಿ ಹಳ್ಳವಾಗುವಂತೆ ಎಲ್ಲಾ ಕಡೆ ಒಂದಿಷ್ಟು ಉಳಿತಾಯ ಮಾಡಿದರೆ ದುಡ್ಡು ಸೇರುತ್ತೆ. ಕಷ್ಟದಲ್ಲಿ ಉಪಯೋಗಕ್ಕೆ ಬರುತ್ತೆ ಅಲ್ವೆ, ಮನೇಲಿ ಗಂಡ-ಹೆಂಡಿರಿಬ್ಬರೂ ಅನ್ಯೋನ್ಯವಾಗಿದ್ದುಕೊಂಡು, ಸಂಸಾರ ಸಾಗಿಸಿದರೆ ನೆಮ್ಮದಿ ಇರುತ್ತೆ, ಇಲ್ಲದೆ, 'ಎತ್ತು ಏರಿಗೆ ಎಳೆಯಿತು ಕೋಣ ನೀರಿಗೆ ಎಳೆಯಿತು' ಎನ್ನುವಂತೆ ಒಬ್ಬರ ಮುಖ ಅತ್ತ, ಇನ್ನೊಬ್ಬರ ಮುಖ ಇತ್ತ ಇದ್ದರೆ ಮನೆ ಬೆಳೆಯಲು ಸಾದ್ಯವಿಲ್ಲ' ನಿಮ್ಮ ಪಾಡಿಗೆ ನೀವು ಹೊಂದಿಕೊಂಡಿರಿ,ಹೊಟ್ಟೆಕಿಚ್ಚಿನಿಂದ ಏನಾದರೂ ಜನ ಅಂದರೂ ಲಕ್ಷ್ಯ ಕೊಡಬೇಡ ನಾಯಿ ಬೊಗಳಿದರೆ ದೇವಲೋಕ ಹಾಳಾಗೋದಿಲ್ಲ' ಕಷ್ಟ ಪಟ್ಟು ದುಡಿದರೆ ಕೈತುಂಬಾ ಸಿಕ್ಕುತ್ತದೆ. 'ಕೈಕೆಸರಾದರೆ ತಾನೆ ಬಾಯಿ ಮೊಸರಾಗುವುದು'.

ಅಲ್ವೇ ತಂಗಿ, ನಮ್ಮ ಪಕ್ಕದ್ಮನೆ ಪದ್ದಕ್ಕನ ಮಗ ಎಷ್ಟು ಜಾಣ ಇದ್ದ ಅಲ್ವೆ ಇಗೀಗ ತುಂಬಾ ಆಟಗುಳಿಯಾಗಿ ಓದೋದೇ ಇಲ್ಲ. ಕ್ಲಾಸ್‌ನಲ್ಲಿ ಫೇಲಾಗಿದ್ದಾನಂತೆ 'ಬರ್‍ತಾ ಬರ್‍ತಾ ರಾಯರ ಕುದ್ರೆ ಕತ್ತೆ ಆಯ್ತು' ಅಂತಾರಲ್ಲ ಹಾಗಾಗಿದೆ. ಪಾಪ ಅವರ ಮನೆಯವರು ಒದ್ದಾಡ್ತಿದ್ದಾರೆ. ಇದೊಂದು ವರ್ಷ ಚಲೋ ಮಾರ್ಕ್ಸ್‌ತೆಗ್‌ದಿದ್ರೆ ಎಲ್ಲಾದ್ರೂ ಒಂದು ಕೆಲಸ ನೋಡಬಹುದಿತ್ತು. ನಮಗೆ ಆಸರೆಯಾಗ್ತಾ ಇದ್ದ ಅಂತ ಈಗ, 'ಕೈಗೆ ಬಂದ ತುತ್ತು ಬಾಯಿಗಿಲ್ಲ'ವಾಗಿದೆ ತುಂಬಾ ಬೇಜವಾಬ್ದಾರಿ, ಆದರೆ, ಯಾರ ಜೊತೇನು ಜಗಳ ಆಡ್ಕೊಂಡು ಬರೋಲ್ಲ. ಸುಮ್ನೆ ತರ್ಲೆ. ಹೊಡದಾಟಕ್ಕೆ ಹೋಗಲ್ಲ. 'ಬೊಗೊಳೋ ನಾಯಿ ಕಚ್ಚೋದಿಲ್ಲ, ಕಚ್ಚೋನಾಯಿ ಬಗ್ಳೋದಿಲ್ಲ' ಎಂತ ಗೊತ್ತಲ್ಲ. ಜಗಳಾಡಿದ್ರೂ ಯಾರ್ಗೂ ಏನೂ ತೊಂದ್ರೆ ಮಾಡೋದಿಲ್ಲ. ನಿನು ಅವ್ರಿವ್ರ ತರ್ಲೇಲಿ ತಲೇ ಹಾಕ್ದೆ ಬಿಡುವಿನ ಸಮಯದಲ್ಲಿ ಸಂಗೀತ ಪ್ರ್ಯಾಕ್ಟೀಸ್ ಮಾಡ್ಕೊ' ಕಲಿತ ವಿದ್ಯೆ ಕಳ್ಕೋಬೇಡ 'ಹಾಡ್ತಾ ಹಾಡ್ತಾ ರಾಗ, ನರಳ್ತಾ, ನರಳ್ತಾ ರೋಗ' ಎನ್ನುವಂತೆ, ಹಾಡ್ತಾ ಇಲ್ಲದಿದ್ದರೆ, ಹಾಡೋಕೇ ಬರ್‍ದ ಹಾಂಗೆ ಆಗುತ್ತೆ. ಸಂಗೀತಕ್ಕೆ ಪ್ರಾಕ್ಟೀಸ್ ಬೇಕು ನಿಮ್ಮ ದೊಡ್ಡಮ್ಮನ ಮಗಳನ್ನು

ನೋಡು, ನೌಕರಿಗೆ ಹೋಗೋಕೆ ಶುರುಮಾಡಿದ್ಲು, ಹಾಡೋದು ಬಿಟ್ಬಿಟ್ಲು ಈಗ 'ಸಾ' ಅನ್ನೋದಕ್ಕೂ ಬರದ್ಹಾಂಗೆ ಆಗಿದೆ 'ಅಂಗೈ ಹುಣ್ಣಿಗೆ ಕನ್ನಡಿ ಯಾತಕ್ಕೆ' ಬೇರೆ ಹೇಳೋದೇನಿದೆ ? ನಿಮ್ಮ ದೊಡ್ಡಪ್ಪನ ಮಗಳನ್ನು ನೋಡಿದ್ರೇ ಸಾಕು. ಹಾಡೋದನ್ನೆಲ್ಲಾ ಮರೆತ ಮೇಲೆ ಪಾಶ್ಚಾತ್ತಾಪ ಪಡುತ್ತಾಳೆ. 'ಊರು ಹಾಳಾದ ಮೇಲೆ ದಿಡ್ಡಿ ಬಾಗಿಲು ಹಾಕಿದಂಗೆ' ಏನೂ ಉಪಯೋಗ ಆಗೋದಿಲ್ಲ. ತಿಳೀತಾ. ಕೆಲವರಂತೂ ಹೊಗಳಿಸ್ಕೊಳ್ಳೋಕೆ ಬೇರೆಯವರ ಕೆಲಸ ಮಾಡ್ತಾ ಕಾಲಕಳ್ದು ಒಳ್ಳೆಯವ್ರುಂತಾ ಬಿರುದು ತೊಗೋತಾರೆ. ಅವ್ರಿಗೆ ಅದೇ ಚಟವಾಗಿ ಬಿಡುತ್ತೆ. ಹಂಗಾಗಿ ಅವ್ರ ಮನೆ ಕೆಲ್ಸ ಎಲ್ಲಾ ಹಾಗೆ ಉಳ್ದು ತೊಂದ್ರೇನೋ ತೊಂದ್ರೆ, ನಮ್ಮ ಮಾಮನ ಸ್ವಭಾವ ಹಾಗೇನೆ. ಅದ್ಕೆ ನಮ್ಮ ಸೋದರತ್ತೆ ಇವ್ರು 'ಊರು ದನಕಾದು ದೊಡ್ಡ ಬೋರೇಗೌಡ ಅನ್ನಾಸಿಕೊಳ್ಳೋದ್ರೊಳ್ಗೆ, ನಾವು ಇಲ್ಲಿ ಪರದಾಡ್ಕೊಂಡು ಒದ್ದಾಡ್ಬೇಕು ಅಂತಿರ್ತಾರೆ. ನೀನು ಮಾತ್ರ ಹಾಗೆ ಮಾಡ್ಬೇಡಮ್ಮ. ನೀನು ಮಾಡದಿರೋದು ಒಂದೇ ಅಲ್ಲ ನಿನ್ನ ಗಂಡನೂ ಹಾಗೆ ಮಾಡೋಕೆ ಬಿಡಬೇಡ, ನೆನಪಿರ್ಲಿ.

ಮೊನ್ನೆ ಸರೋಜ ಅವಳ ಫ್ರೆಂಡ್ ಮನೆಗೆ, ಅವಳ ಹೊಸ ಸೊಸೇನೆ ನೋಡೋಣಾಂತ ಹೋಗಿದ್ದಳಂತೆ. ಆ ವಯ್ಯಾತಿ ಹೊರಗೇ ಬರ್ಲಿಲ್ಲಂತೆ. ಇವಳು ಕಾದೂ ಕಾದೂ, ನೋಡ್ದೇನೆ ಬಂದು ಬಿಟ್ಲಂತೆ. ಅವರ ದಿಮಾಕ್ ನೋಡಿ ತುಂಬಾ ಬೇಜಾರಾಗಿದ್ಲು. ಆಗ ನಾನು, ಅವ್ರು ಕರೀದೇ ನೀನ್ಯಾಕೆ ಹೋಗಿದ್ದೆ ಅವಳ್ನ ನೋಡೊ ಅವಸರ ಏನಿತ್ತು., 'ಊರಿಗೆ ಬಂದೋಳು ನೀರಿಗೆ ಬರೋಲ್ವೆ' ಒಂದಲ್ಲ ಒಂದು ಕಾರಣಕ್ಕೆ ಒಂದಲ್ಲ ಒಂದು ದಿನ ಬಂದೇ ಬರ್ತಾಳೆ. ಆವಾಗ ನೋಡಬಹುದು. ಅಂಥ ಜಂಬ್'ದವರ್ನ ನೋಡದಿದ್ರೂ ತಾನೆ ಏನಾಗುತ್ತೆ. ಅದಕ್ಕೇಕೆ ಬೇಜಾರು ಮಾಡ್ಕೊಳ್ತೀಯಾಂತ ಸಮಾಧಾನ ಮಾಡ್ದೆ. ಇದನ್ನು ಯಾರ್ಗೂ ಹೇಳೋಕೆ ಹೋಗ್ಬೇಡ. 'ಬಾಯ್ಬಿಟ್ರೆ ಭಂಡಗೇಡು' ಅಂತಾರಲ್ಲ, ನಿನಗೆ ಅವಮಾನ ಆಗುತ್ತೆ ಅಂತ್ಲೂ ಹೇಳ್ದೆ.

ಅಯ್ಯೋ, ನಿನ್ನ ಫ್ರೆಂಡ್ ಮದುವೆ ಆಯ್ತು ಕಣೆ ನೀನು ಊರಿಗೆ ಹೋಗಿದ್ದಾಗ ನಾನೇ ಹೋಗಿದ್ದೆ ಏನೊಂದು ವ್ಯವಸ್ಥೇನೂ ಚನ್ನಾಗಿರಲಿಲ್ಲ. ಸಿಕ್ಕ ಸಿಕ್ಕವರೆಲ್ಲಾ ಒಂದು ಊಟ ಮಾಡಿದ್ರು ದುಡ್ಡು ಕೂಡ ಹಿಡ್ತ ಇಲ್ಲ. ಯಾರ್ಬೇಕಂದ್ರವ್ರು ಇದಕ್ಕೆ ಬೇಕು ; ಅದದ್ಬೇಕೂಂತ ದುಡ್ಡು ಕಿತ್ಕೊಂಡು ಹೋಗ್ತೀದ್ರು, ಪಾಪ ಅವ್ರತಂದೆಗೆ ಇಂಥ 'ಜಾಣ;ರನ್ನು ದೂರ ಇಡೋದು ಗೊತ್ತಿಲ್ಲ. 'ಹುಚ್ಚು ಮುಂಡೆ ಮದ್ವೇಲಿ ಉಂಡವನೆ ಜಾಣ' ಅನ್ನೊಹಂಗಿತ್ತು ಪರಿಸ್ಥಿತಿ. ಜೀವನದಲ್ಲಿ ಒಂದೊಂದು ಘಟನೇನೂ ನಮಗೆ ಪಾಠ ಕಲಿಸುತ್ತೆ. ಹಾಗೆ ಎಚ್ಚರದಿಂದಿದ್ದು, ತಿಳ್ಕೊಂಡು ಬದುಕಿದ್ರೆ, ಎಷ್ಟೋ ಸಮಸ್ಯೆಗಳು ಬರದ ಹಾಂಗೆ ಬದುಕಬಹುದು. ಅದಕ್ಕಾಗಿ ತೆರೆದ ಮನಸ್ಸಿರಬೇಕು.

'ಜೀವನವೇ ಒಂದು ಪಾಠ' ಎಂದು ಬದುಕಬೇಕು.

'ಕೆಲವಂ ಬಲ್ಲವರಿಂದ ಕಲಿತು,
ಕೆಲವಂ ಶಾಸ್ತ್ರಂಗಳಂ ಕೇಳುತಂ
ಕೆಲವಂ ಮಾಳ್ಪವರಿಂದ ಕಂಡು
ಕೆಲವಂ ಸುಜ್ಞಾನದಿಂದಲರಿಯಲ್
ಕೆಲವಂ ಸಜ್ಜನರ ಸಂಗದಿಂದ ಅರಿಯಲ್
ಸರ್ವಜ್ಞನಪ್ಪಂ ನರಂ,
ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀ ಚನ್ನ ಸೋಮೇಶ್ವರಾ'.

ಹೀಗೆ ಜೀವನದಲ್ಲಿ ಮನುಷ್ಯ ಎಲ್ಲದರಿಂದಲೂ ಪಾಠ ಕಲಿತು, ಎಚ್ಚರದಿಂದ ಬದುಕಬೇಕು, ಆಗ ಬೇಕಾದ ಒಡ್ವೆ ಮಾಡಿಸ್ಕೊಂಡು ಹಾಕ್ಕೊ; ಸೀರೆ ತೊಗೊಂಡು ಉಟ್ಕೊ ಆಗ ಯಾರೂ ಏನೂ ಅನ್ನೋಕೆ ಬರೋಲ್ಲ. ನೋಡು ಎಷ್ಟು ಚನ್ನಾಗಿ ಕಾಣ್ತೀಯಾ. 'ಇಟ್ರೆ ತೊಟೆ ಪುಟ್ಟಕ್ಕ ಚಂದ' ಅಂತ ಮೆಚ್ಚುಗೆ ಮಾತಾಡ್ತಾರೆ. ಜನ ಏನು ! ಚನ್ನಾಗಿದ್ರೆ ಹಿಂದೆ-ಮುಂದೆ ಓಡಾಡ್ತಾರೆ, ಎಲ್ಲಾದ್ರೂ ಕೆಳಕ್ಕೆ ಬಿದ್ರೆ 'ಗೆದ್ರೆ ಆಡೋಕೆ ಬಂದಿದ್ದೆ, ಸೋತ್ರೆ ನೋಡೋಕೆ ಬಂದಿದ್ದೆ' ಅಂತ ಸಂದರ್ಭಕ್ಕೆ ಸರಿಯಾಗಿ ಮಾತಾಡ್ತಾರೆ. ಅದ್ಕೆ 'ನಮ್ಮ ಬುದ್ಧಿ ನಮ್ಮ ಕೈಲಿ ಇರ್ಬೇಕು' ತಿಳೀತಾ !

೧೪.೮.೨೦೦೩ – ಲೇ : ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ

■

## ೫. ಸ್ತ್ರೀವಾದಿ ಚಳುವಳಿ ಮತ್ತು ಸುಖೀ ಕುಟುಂಬ ಜೀವನ

ಸೃಜನಾತ್ಮಕ ಸಾಹಿತ್ಯವನ್ನು, ಜೀವನದ ಬಗ್ಗೆ ಕಳಕಳಿ ಇರುವ, ಓದುವ ಹವ್ಯಾಸವಿರುವ, ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುವ ಶಕ್ತಿ ಇರುವ ಯಾರಾದರೂ ಬರೆಯಬಹುದು. ಅವರು ಹೆಚ್ಚು ವಿದ್ಯಾವಂತರೇನೂ ಆಗಬೇಕಿಲ್ಲ. ಅಲ್ಲದೆ ಯಾವುದೇ ವೃತ್ತಿಯವರು ತಮ್ಮ ಜೀವನಾನುಭವಗಳನ್ನು ಅನಿಸಿಕೆಗಳನ್ನು ಸೃಜನಾತ್ಮಕ ಬರವಣಿಗೆಗಳಲ್ಲಿ ವ್ಯಕ್ತಪಡಿಸಬಹುದು. ಹಾಗಾಗಿಯೇ, ವಿವಿಧ ವೃತ್ತಿಗಳಲ್ಲಿರುವವರೂ, ಹೆಚ್ಚು ವಿದ್ಯಾವಂತರಿಲ್ಲದವರು ಸೃಜನಾತ್ಮಕ ಪ್ರಕಾರಗಳಲ್ಲಿ ಸಾಕಷ್ಟು ಕೃತಿ ರಚಿಸಿ ಪ್ರಖ್ಯಾತರಾಗಿದ್ದಾರೆ, ಆದರೆ ಉಳಿದ ಪ್ರಕಾರಗಳಿಗೆ ವಿಶಿಷ್ಟವಾದ ಜ್ಞಾನ, ಅಭ್ಯಾಸ, ಅನುಭವಗಳ ಅವಶ್ಯಕತೆ ಇರುವುದರಿಂದ ಕೆಲವರು ಮಾತ್ರ ಆ ರೀತಿಯ ಸಾಹಿತ್ಯ ರಚಿಸಲು ಸಾಧ್ಯವಾಗಿದೆ ಎಂಬುದು ನನ್ನ ಅನಿಸಿಕೆ.

ಈಗ ನಾನು ಇತ್ತೀಚಿನ ಹಾಗೂ ಬಹು ಜನಜನಿತವಾಗಿರುವ, ಜನರ ಆಸಕ್ತಿಗೆ ವಿಮರ್ಶೆಗೆ, ಟೀಕೆಗೆ ಕಾರಣವಾಗಿರುವ ಸ್ತ್ರೀವಾದಿ ಸಾಹಿತ್ಯದ ಬಗೆಗೆ ಕೆಲವು ಮಾತುಗಳನ್ನು ಹೇಳಲಿಚ್ಛಿಸುತ್ತೇನೆ. ಈ ಸ್ತ್ರೀವಾದಿ ಸಾಹಿತ್ಯವು ಇಷ್ಟು ದಿನ ರಚಿಸಿದ, ಅದರಲ್ಲೂ ಹೆಚ್ಚಾಗಿ ಸ್ತ್ರೀಯರು ರಚಿಸಿದ ಸಾಹಿತ್ಯದ ಫಲವೇ ಆಗಿದೆ. ಮಹಿಳಾ ಚಳುವಳಿ, ಮಹಿಳೆಯ ಸ್ಥಿತಿಗತಿಗಳನ್ನು ತಿಳಿಸುವ ಸಾಹಿತ್ಯ ರಚನೆ, ಸ್ತ್ರೀವಾದಿ ಸಾಹಿತ್ಯ ರಚನೆಗೆ ಮುಖ್ಯ ಕಾರಣವೆನ್ನಬಹುದು.

ಮಹಿಳೆಯು ಜಗತ್ತಿನಾದ್ಯಂತ ಶತ-ಶತಮಾನಗಳಿಂದ ತುಳಿತಕ್ಕೆ ಶೋಷಣೆಗೆ ಒಳಗಾಗಿದ್ದಾಳೆ. ಪುರುಷ ಪ್ರಧಾನ ಸಮಾಜವು ಸ್ತ್ರೀಗೆ ಯಾವ ಸ್ಥಾನವನ್ನೂ, ಅವಕಾಶವನ್ನೂ ಕೊಡದೆ, ಅವಳನ್ನು ಹಿಂದುಳಿಯುವಂತೆ ಮಾಡಿದುದು ಸತ್ಯಸ್ಯಸತ್ಯ. ಅವಳ ಹಿಂದುಳಿಕೆ, ಶಾಶ್ವತವಾಗಿ ಉಳಿಯುವಂತಹ, ಅನೇಕ ದುಷ್ಟ ಸಂಪ್ರದಾಯಗಳನ್ನು ಅನಿಷ್ಟ ರೂಢಿಗಳನ್ನು ಬೆಳೆಸಿಕೊಂಡು ಮಹಿಳೆಯನ್ನು ನಾಲ್ಕು ಕೋಣೆಯೊಳಗಿನ ಬಂಧಿಯನ್ನಾಗಿಸಿತು. ಆಕೆಯ ವಿಚಾರ ಶಕ್ತಿ ಬೆಳೆಯಲಾಗಲೀ, ಪ್ರತಿಭೆಯ ಉಪಯೋಗಕ್ಕಾಗಲಿ ಆಸ್ಪದವಿಲ್ಲದೆ, ಆಕೆ ಸತ್ವಹೀನಳಂತೆ, ಯಾವುದೇ ರೀತಿಯ ತಿಳಿವಳಿಕೆಯಾಗಲೀ, ಶಕ್ತಿ-ಸಾಮರ್ಥ್ಯಗಳಾಗಲೀ ಇಲ್ಲವೆಂಬಂತೆ, ಮೊನ್ನೆ, ಮೊನ್ನಿನವರೆಗೆ ಆಕೆ ಬದುಕಬೇಕಾಗಿತ್ತು. ಪುರುಷ ಯೋಜನಾಬದ್ಧವಾಗಿ ಮಹಿಳೆ ಮುಂದೆ ಬರದಂತೆ ತಡೆಗಟ್ಟುತ್ತಾ ಬಂದ. ಮಹಿಳೆಯನ್ನು ಪುರುಷನ ಹಿಡಿತದಲ್ಲಿಟ್ಟುಕೊಳ್ಳುವ ಸಲುವಾಗಿ ಮದುವೆಯಾಗುವಾಗ ಮಹಿಳೆ ಪುರುಷನಿಗಿಂತ ವಯಸ್ಸಿನಲ್ಲಿ ಕಡಿಮೆ, ಎತ್ತರದಲ್ಲಿ ಕಡಿಮೆ (ಈಗಿನ ಕಾಲದಲ್ಲಿ ವಿದ್ಯೆಯಲ್ಲೂ ಕಡಿಮೆ) ಇರಬೇಕೆಂಬ ರೂಢಿ ಬೆಳೆಸಿದೆ.

# ೬. ನಾನೇಕೆ ಬರೆಯುತ್ತಿದ್ದೇನೆ

**ಯಾ**ವುದೇ ಕೆಲಸ ಮಾಡಬೇಕಾದರೂ ಒಂದು ಉದ್ದೇಶ ಅಥವಾ ಒಂದು ಕಾರಣವಿದ್ದೇ ಇರುತ್ತದೆ. ಹಾಗೆಯೇ ನಾನು ಬರೆಯುತ್ತಿರುವುದಕ್ಕೂ ಒಂದು ಕಾರಣವಿದ್ದೇ ಇದೆ. ಆದರೆ ಆ ಕಾರಣ ಅಥವಾ ಉದ್ದೇಶ ಯಾವುದು ಎಂದು ನಾನಿದುವರೆವಿಗೂ ಯೋಚಿಸಿರಲೇ ಇಲ್ಲ. ಏಕೆಂದರೆ ಬರೆಯಬೇಕೆನ್ನಿಸಿದಾಗ ಬರೆದು ಬಿಡುತ್ತಿದ್ದೆ. ಮೊದಮೊದಲು ಮನಸ್ಸಿನ ಭಾವನೆಗಳು ತೀವ್ರವಾಗಿ ಅವುಗಳನ್ನು ಬರೆಯುವವರೆಗೂ ಸಮಾಧಾನವಾಗುತ್ತಿರಲಿಲ್ಲವಾಗಿ ಬರೆಯುತ್ತಿದ್ದೆ. ಬರೆದುದನ್ನು ಪತ್ರಿಕೆಗಳಿಗೆ ಕಳಿಸಬೇಕೆಂದಾಗಲೀ, ಪುಸ್ತಕರೂಪದಲ್ಲಿ ಪ್ರಕಟಿಸಬೇಕೆಂದಾಗಲೀ ಒಬ್ಬ ಸಾಹಿತಿ ಎನ್ನಿಸಿಕೊಳ್ಳಬೇಕೆಂದಾಗಲೀ, ಬರೆದು ಜನಪ್ರಿಯತೆ ಅಥವಾ ಸ್ಥಾನಮಾನ ಗಳಿಸಬೇಕೆಂಬ ಪ್ರಜ್ಞೆಯಾಗಲೀ ಎಂದೂ ಬಂದುದಿಲ್ಲ. ಅಂತಹ ಯಾವ ಯೋಚನೆಗಳೂ ಇಲ್ಲದೆ ಬರೆಯುತ್ತಲ್ಲೇ ಬಂದಿದ್ದೇನೆ.

ಸಮಾಜಕ್ಕೆ ಆಸಕ್ತಿ ಇರುವ ಅನೇಕ ವಿಷಯಗಳಿರುತ್ತವೆ. ಜನರು ಆ ಬಗ್ಗೆ ತಮತಮಗೆ ಸರಿಕಂಡ ರೀತಿಯಲ್ಲಿ ಯೋಚಿಸುತ್ತಾರೆ. ಆ ವಿಷಯಗಳನ್ನು ವರ್ತಮಾನ ಪತ್ರಿಕೆಗಳಲ್ಲಿ, ಚರ್ಚೆಗಳಲ್ಲಿ ನಾನು ತಿಳಿದುಕೊಂಡಾಗ ನಾನೂ ಅದಕ್ಕೆ ಸ್ಪಂದಿಸುತ್ತೇನೆ. ಆ ವಿಷಯಗಳ ಬಗ್ಗೆ ನನ್ನ ಮನಸ್ಸಿನಲ್ಲಿ ನನಗೆ ಗೊತ್ತಿಲ್ಲದೆಯೇ ಚರ್ಚೆ ವಿಚರ್ಚೆಗಳು ನಡೆಯುತ್ತಿರುತ್ತವೆ. ಅಂತರಂಗದಲ್ಲಿ ಆ ಬಗ್ಗೆ ಯೋಚಿಸಿ, ಯೋಚಿಸಿ ಆ ವಿಷಯಗಳ ಬಗ್ಗೆ ನನ್ನದೇ ಆದ ಅಭಿಪ್ರಾಯಕ್ಕೆ ಬರುತ್ತೇನೆ. ಆಗ ಮನಸ್ಸಿನಲ್ಲಿ ನನ್ನ ಅನಿಸಿಕೆಗಳನ್ನು ಬೇರೆಯವರೊಡನೆ ಹಂಚಿಕೊಳ್ಳಬೇಕೆನ್ನಿಸುತ್ತದೆ. ಹಾಗೆ ಮಾಡುವತನಕ ಮನಸ್ಸಿನಲ್ಲಿ ಥಳಪಡಿಕೆ ಹಾಗಾಗಿ ಮನಸ್ಸಿನಲ್ಲಿ ಹೊಳೆದ ವಿಚಾರಗಳನ್ನೇ ಬರೆದುಬಿಡುತ್ತೇನೆ. ಒಮ್ಮೆ ಬರೆದ ಮೇಲೆ ಆ ವಿಷಯಗಳು ಮನಸ್ಸಿನಲ್ಲಿದ್ದೇ ಕಾಡುವುದಿಲ್ಲ. ಆ ಬರಹಗಳು ತುಂಬಾ ಉಪಯುಕ್ತ ಎಂದು ನನಗನ್ನಿಸಿದಾಗ ಪತ್ರಿಕೆಗಳಿಗೆ ಕಳಿಸುತ್ತೇನೆ. ಉಳಿದವರೂ ಈ ದಿಶೆಯಲ್ಲಿ ಯೋಚಿಸಲಿ ಸರಿಯೆನ್ನಿಸಿದರೆ ಒಪ್ಪಲಿ ಎನ್ನುವ ಅಭಿಪ್ರಾಯ ನನ್ನದು.

ಉದಾಹರಣಾರ್ಥವಾಗಿ ಹೇಳುವುದಾದರೆ ಇಂಗ್ಲಿಷ್ ಮಾಧ್ಯಮದ ಶಾಲೆಗಳ ಬಗ್ಗೆ ಸಮಾಜ ಹಾಗೂ ಪಾಲಕರಿಗೆ ಜಿಜ್ಞಾಸೆ. ನಾನೂ ಕೂಡ ಈ ಶಾಲಾ ಶಿಕ್ಷಣಕ್ಕೆ

ಸಂಬಂಧಿಸಿದ ಕ್ಷೇತ್ರದಲ್ಲಿ ದುಡಿಯುತ್ತಿರುವುದರಿಂದ ಶಾಲಾಮಟ್ಟದಲ್ಲಿ ಆ ಬಗೆಗಿನ ಸಮಸ್ಯೆ ಅನುಕೂಲ-ಅನಾನುಕೂಲ, ಲಾಭ-ನಷ್ಟ ಇವುಗಳ ಪರಿಚಯವಿದೆ. ಹಾಗಾಗಿ ಆ ಕ್ಷೇತ್ರದ ನನ್ನ ಅನುಭವ, ಅಭ್ಯಾಸ, ತಿಳುವಳಿಕೆಯ ಪರಿಣಾಮವಾಗಿ ತೀವ್ರವಾದ ಅಂಶಗಳು ನನ್ನಲ್ಲಿ ಮೂಡಿಬಂದವು. ನಂತರ ಆ ಬಗ್ಗೆ ಒಂದು ಲೇಖನ ಬರೆದು ಸಂಯುಕ್ತ ಕರ್ನಾಟಕಕ್ಕೆ ಪ್ರಕಟನೆಗಾಗಿ ಕಳಿಸಿದೆ. ಈ ಲೇಖನ ಬರೆದ ಕಾರಣ ಸ್ಪಷ್ಟ.

ಅನೇಕ ಪಾಲಕರು ತಮ್ಮ ಮಕ್ಕಳನ್ನು ಯಾವ ಮಾಧ್ಯಮಕ್ಕೆ ಕಳಿಸಬೇಕು. ಶಾಲೆಯಲ್ಲಿ ಯಾವ ಮಾಧ್ಯಮದಲ್ಲಿ ಕಲಿಸಿದರೆ ಒಳ್ಳೆಯದೆಂದು ಕೇಳುತ್ತಿರುತ್ತಾರೆ. ಕೆಲವರಿಗೆ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಸಿದರೆ ಹೆಚ್ಚು ಪ್ರಯೋಜನ ಎಂದು ತಿಳಿದು ಕಳಿಸಿ, ಕೈಸುಟ್ಟುಕೊಂಡವರಿದ್ದಾರೆ. ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯುವುದು ಕಷ್ಟವೆಂದು ಕನ್ನಡ ಮಾಧ್ಯಮಕ್ಕೆ ಕಳಿಸಿ, ಪಶ್ಚಾತ್ತಾಪಪಟ್ಟುಕೊಂಡವರಿದ್ದಾರೆ. ಹಾಗಾಗಿ ಪಾಲಕರಿಗೆ ತಮ್ಮ ಮಕ್ಕಳನ್ನು ಯಾವ ಮಾಧ್ಯಮದ ಶಾಲೆಗೆ ಕಳಿಸಿದರೆ, ಅವರು ಶಿಕ್ಷಣದಲ್ಲಿ ಚನ್ನಾಗಿ ಮುಂದುವರಿಯಬಲ್ಲರೆಂಬುದನ್ನು ತಿಳಿದುಕೊಳ್ಳಲು ತುಂಬಾ ಆಸಕ್ತಿ. ಇದನ್ನು ದಿನನಿತ್ಯ ಕಾಣುತ್ತಿದ್ದ ನನ್ನಲ್ಲಿಯೇ ವಿಚಾರ ಮಂಥನವಾಗಿ ಯಾರಿಗೆ ಯಾವ ಮಾಧ್ಯಮ ಎಂಬ ಒಂದು ಲೇಖನ ಬರೆದು 'ಸುಧಾ' ಪತ್ರಿಕೆಗೆ ಕಳಿಸಿದ್ದೆ. ಅನೇಕ ಸಾರಿ ನನ್ನ ಬರೆಯುವಿಕೆಗೆ ಕಾರಣಗಳು ಇಂತಹವು ಈ ರೀತಿಯಾದ ಕಾರಣಗಳಿಂದ ಕೆಲವೊಂದು ಸಾರಿ ಬರೆದರೆ ಕೆಲವು ವೇಳೆ ಯಾವುದೋ ಒಂದು ಸಣ್ಣ ಕಾರಣ ನನ್ನ ತಲೆಯಲ್ಲಿ ವಿಚಾರಗಳ ಸುಳಿಯನ್ನೇ ಎಬ್ಬಿಸಿಬಿಡುತ್ತದೆ. ತಕ್ಷಣ ಆ ಬಗ್ಗೆ ಬರೆಯಬೇಕೆನ್ನಿಸಿ ಬರೆದು ಬಿಡುತ್ತೇನೆ. ಆದರೆ ಎಷ್ಟೋ ಸಾರಿ, ಹಾಗೆ ಬರೆಯಬೇಕೆನ್ನಿಸಿದ ಕ್ಷಣದಲ್ಲಿ ಬರೆಯಲು ಸಮಯವಿರುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಬಹಳ ಒತ್ತಾಯದಿಂದ ಆ ವಿಚಾರಗಳನ್ನು ಮನಸ್ಸಿನಿಂದ ಹೊರಹಾಕುತ್ತೇನೆ. ಹೀಗೆ ಎಷ್ಟೋ ಬಾರಿ ನನ್ನ ಎಷ್ಟೋ ಹೊಸ ವಿಚಾರಗಳು ಬೆಳಕು ಕಾಣದೇ ಕತ್ತಲಲ್ಲಿ ಕರಗಿದುದುಂಟು. ಆದರೆ ಬರೆಯಲು ಅವಕಾಶವಾಗಿ ಬರೆದಿಟ್ಟ ಲೇಖನಗಳೂ ಅನೇಕ. ಹೀಗೆ ಬರೆದ ಒಂದು ಲೇಖನ, 'ಮಗುವಿಗೆ ಹೆಸರೇನಿಡಬೇಕು?' ನನ್ನ ವಿದ್ಯಾರ್ಥಿಯೊಬ್ಬಳ ಹೆಸರು 'ಸುಶಲಾ' ಎಂದು. ಆ ಹೆಸರು ನನ್ನ ಕಿವಿಗೆ ಬೀಳುತ್ತಲೇ ವಿಚಾರಗಳ ಸುರುಳಿಯೇ ತಲೆಯಲ್ಲಿ ಬಿಚ್ಚಿಕೊಂಡಾಗ ಆ ಲೇಖನ ಬರೆದು ಸುಧಾ ಪತ್ರಿಕೆಗೆ ಕಳಿಸಿದ್ದೆ. ನಮ್ಮಲ್ಲಿ ಚಿಕ್ಕವರಿದ್ದಾಗ ಭಾವನೆಗಳು ಮೊದಲಿನಂತೆಯೇ ಇರುವುದಿಲ್ಲ. ಅದರಲ್ಲಿ ಅನೇಕ ಪರಿವರ್ತನೆಗಳಾಗುತ್ತವೆ. ಅದೇ ತರಹದ ಒಂದು ಸನ್ನಿವೇಶಕ್ಕೆ ಚಿಕ್ಕವಯಸ್ಸಿನಲ್ಲಿದ್ದ ಪ್ರತಿಕ್ರಿಯೆ ಒಂದಾದರೆ ಇಂದಿನ ಪರಿಸ್ಥಿತಿಯಲ್ಲಿ ಇನ್ನೊಂದು. ಇದನ್ನು ಯೋಚಿಸಿದಾಗ ಎಷ್ಟೊಂದು ಅಜಗಜಾಂತರವೆನ್ನಿಸಿ, 'ದೃಷ್ಟಿ ಪರಿವರ್ತನೆ' ಎಂಬ ಲೇಖನ ಬರೆದಿದ್ದೆ. ಅದೂ

ಸುಧಾದಲ್ಲಿ ಪ್ರಕಟವಾಗಿತ್ತು. ಹೀಗೆ ೧೯೭೦ ರಿಂದ ೧೯೮೦ ರ ಸುಮಾರಿನಲ್ಲಿ ಬಹಳಷ್ಟು ಲೇಖನಗಳನ್ನು ಬರೆದಿದ್ದೇವೆ. ಬಹಳಷ್ಟು 'ಸುಧಾ'ದಲ್ಲಿ ಪ್ರಕಟವಾಗಿವೆ.

ನನಗಿರುವ ಬರೆಯುವ ಹವ್ಯಾಸ ಈಚಿನದೇನಲ್ಲ. ನಾನು ಹೈಸ್ಕೂಲಿನಲ್ಲಿ ಓದುತ್ತಿರುವಾಗಲೇ, ನನಗರಿವಿಲ್ಲದೇ ನನ್ನ ತಲೆಯಲ್ಲಿ ಅನೇಕ ವಿಚಾರಗಳು ಮೂಡುತ್ತಿದ್ದರೂ, ನಾನಾ ಕಡೆ ಗಮನವನ್ನೇ ಕೊಡುತ್ತಿರಲಿಲ್ಲ. ಆದರೆ ರಾತ್ರಿ ನಿದ್ದೆ ಬಂದಮೇಲೂ ಆ ವಿಷಯಗಳು ತಲೆತುಂಬಾ ಕಾಡಿ ಎಚ್ಚರವಾಗಿ ಬಿಡುತ್ತಿತ್ತು. ಆಗ ನಿದ್ದೆಯ ತೊಂದರೆ ತಪ್ಪಿಸಿಕೊಳ್ಳಲೇಸುಗ, ಮನಸ್ಸಿನಲ್ಲಿ ಬಂದ ವಿಚಾರಗಳನ್ನೆಲ್ಲಾ ಗೀಚುತ್ತಿದ್ದೆ. ನಂತರ ಶಾಂತವಾಗಿ ನಿದ್ದೆ ಬರುತ್ತಿತ್ತು. ರಾತ್ರಿ ಬರೆದ ಹಾಳೆಗಳು ಬೆಳಗ್ಗೆ ಎಲ್ಲೋ ಕಸದೊಡನೆ ಕೂಡಿ ಹೊರಗೆ ಹೋಗುತ್ತಿದ್ದವು. ಏನು ಬರೆದಿದ್ದೆನೆಂದು ನಾನು ಒಂದು ದಿನವೂ ತಿರುಗಿ ಓದುತ್ತಿರಲಿಲ್ಲ. ಬರೆದ ಬರಹಗಳನ್ನೊಂದನ್ನು ತೆಗೆದಿರಿಸಿಯೂ ಇಲ್ಲ. ಬರಹದ ಮಹತ್ವ ತಿಳಿದ ಈಗ, ಅವನ್ನೆಲ್ಲಾ ತೆಗೆದಿರಿಸಬೇಕಿತ್ತು ಎನ್ನಿಸುತ್ತದೆ. ಇಷ್ಟೆಲ್ಲಾ ಬರೆಯುವ ಹವ್ಯಾಸವಿದ್ದೂ, ಯಾವುದಾದರೊಂದು ವಿಷಯವಾಗಿ ಬರೆಯಬೇಕೆಂದುಕೊಂಡು ಏನನ್ನೂ ಬರೆಯಲಿಲ್ಲ ನನ್ನ ಬರೆಯುವ ಹವ್ಯಾಸದ ಬಗ್ಗೆ ಬೌದ್ಧಿಕವಾಗಿ ಚಿಂತಿಸಲೇ ಇಲ್ಲ. ಹಾಗಾಗಿ ಬರುಬರುತ್ತಾ ಮನಸ್ಸಿಗೆ ವಿಚಾರಗಳು ಹೊಳೆಯುವುದು ಬರೆಯುವುದು ಕ್ರಮೇಣ ಕಡಿಮೆಯಾಗುತ್ತಾ ಹೋಯ್ತು. ಆದರೆ ಕಾಲೇಜಿಗೆ ಓದಲು ಹೋದಾಗ, ಅಲ್ಲಿ ಹುಡುಗಿಯರೆಲ್ಲಾ ಸೇರಿ ಕೈಬರಹದ ಪತ್ರಿಕೆಯೊಂದನ್ನು ಹೊರಡಿಸುತ್ತಿದ್ದೆವು. ಆಗ ಸ್ನೇಹಿತೆಯರೆಲ್ಲಾ ಒತ್ತಾಯಿಸುತ್ತಿದ್ದರಾಗಿ ಕಥೆಯನ್ನೋ ಕವಿತೆಯನ್ನೋ ಬರೆದುಕೊಡುತ್ತಿದ್ದೆ.

ನನಗೀಗ ನನ್ನಲ್ಲಿದ್ದ ಸಾಹಿತ್ಯಿಕ ಆಸಕ್ತಿಯನ್ನು, ಬರವಣಿಗೆಯ ಶಕ್ತಿಯನ್ನು ಗುರುತಿಸಿಕೊಂಡು, ಏನನ್ನಾದರೂ ಸಾಧಿಸಬೇಕೆಂದು ಸಾಹಿತ್ಯ ಕ್ಷೇತ್ರದಲ್ಲಿ ಕೃಷಿ ಮಾಡುತ್ತಾ ಬಂದಿದ್ದರೆ, ವಿಪುಲವಾದ ಸಾಹಿತ್ಯವನ್ನೂ ರಚಿಸಬಹುದಾಗಿತ್ತೇನೋ ಎಂದು ಅನೇಕ ಸಾರಿ ಬಹಳ ಪಶ್ಚಾತ್ತಾಪಪಟ್ಟುಕೊಂಡಿದ್ದೇನೆ. ನಾನು ಚಿಕ್ಕವಳಿದ್ದಾಲೇ ಯಾರಾದರೂ ಈ ದೈವದ ದೇಣಿಗೆಯನ್ನು ಗುರುತಿಸಿ ಪ್ರೋತ್ಸಾಹಿಸಿದ್ದಿದ್ದರೆ, ಮಾರ್ಗದರ್ಶನ ಮಾಡಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಈಗಲೂ ಹಳಹಳಿಸುತ್ತೇನೆ. ಆಗಿನ ಪರಿಸರದಲ್ಲಿ ನಾನಿದ್ದ ಸಣ್ಣ ಊರಲ್ಲಿ ಕಲಿಯಲು ಕಳಿಸುತ್ತಿದ್ದದ್ದೇ ಒಂದು ದೊಡ್ಡ ವಿಷಯವಾಗಿತ್ತು. ಹಾಗಿರುವಾಗ ನನ್ನಲ್ಲಿದ್ದ ಸಾಹಿತ್ಯಿಕ ಪ್ರತಿಭೆ ಗುರುತಿಸಿ ಪ್ರೋತ್ಸಾಹಿಸುವ ವಿಷಯ ಹಿರಿಯರ ತಲೆಯಲ್ಲೂ ಬರಲು ಅಸಾಧ್ಯ. ಸಾಹಿತ್ಯಿಕ ಆಸಕ್ತಿ ಗುರುತಿಸಿ, ಕನ್ನಡ ಸಾಹಿತ್ಯಾಭ್ಯಾಸಕ್ಕೆ ಕಳಿಸಿದ್ದರೂ ನನಗೆ ಬಹಳ ಪ್ರೋತ್ಸಾಹವಾಗುತ್ತಿತ್ತು. ಹಾಗಾಗಲಿಲ್ಲವಾಗಿ, ನನ್ನ ಗೆಳತಿಯರು ಆರಿಸಿಕೊಂಡ ಇತಿಹಾಸ, ಅರ್ಥಶಾಸ್ತ್ರ, ಮನಶ್ಶಾಸ್ತ್ರ ಮುಂತಾದ ವಿಷಯಗಳನ್ನು

ಕಾಲೇಜಿನಲ್ಲಿ ಅಭ್ಯಾಸ ಮಾಡಿದೆ. ಹಾಗೆ ನೋಡಿದರೆ ನಾನು ಕನ್ನಡ ಭಾಷೆಯನ್ನಾಗಲೀ, ಸಾಹಿತ್ಯವನ್ನಾಗಲೀ ಅಭ್ಯಾಸ ಮಾಡಿದುದು ಆರನೆಯ ತರಗತಿಯವರೆಗೆ ಮಾತ್ರ ನಂತರ ಸಂಸ್ಕೃತವನ್ನು ಎರಡನೆಯ ಭಾಷೆಯಾಗಿ ತೆಗೆದುಕೊಂಡುದರಿಂದಲೂ, ಇಂಗ್ಲಿಷ ಮಾಧ್ಯಮದಲ್ಲಿ ಕಲಿತುದರಿಂದಲೂ, ನಂತರ ಕನ್ನಡ ಕಲಿಯುವ ಅಥವಾ ಬರೆಯುವ ಅವಕಾಶವೇ ಇಲ್ಲದೆ, ಬರೆಯುವ ಹವ್ಯಾಸ ಕ್ರಮೇಣ ಕಡಿಮೆಯಾಗುತ್ತಾ ಸಾಗಿತು.

ಸಾಹಿತಿಯಾದವರನ್ನೂ ವಿವಾಹವಾದುದರಿಂದ ಮನೆಯಲ್ಲಿ ಸಾಹಿತ್ಯಿಕ ವಾತಾವಾವರಣ ಉಂಟಾದರೂ ಮನೆಯ ಕೆಲಸ, ನೌಕರಿ, ನಿಭಾವಣೆ ಇವುಗಳ ಮಧ್ಯೆ ಸಾಹಿತ್ಯಿಕ ಆಸಕ್ತಿ ಕುದರಲು ಸಾಧ್ಯವಾಗಲಿಲ್ಲ. ಹಾಗಾಗಿ ಯಾವ ಸಾಹಿತ್ಯವನ್ನೂ ರಚಿಸಲಿಲ್ಲ. ಆದರೆ ವಿವಾಹವಾದ ಹೊಸತರಲ್ಲಿ ಬರೆದ ಪತ್ರಗಳು ಸಾಹಿತ್ಯಿಕವಾಗೇ ಇದ್ದುದರಿಂದ ನಮ್ಮವರು ಒಂದಲ್ಲ ಒಂದು ದಿನ ಅವುಗಳನ್ನು ಸಂಪಾದಿಸಿ ಪ್ರಕಟಿಸಬೇಕೆಂದು ಹೇಳುತ್ತಿದ್ದಾರೆ.

ವಿವಾಹದ ನಂತರ ಬಳ್ಳಾರಿಯಲ್ಲಿದ್ದಾಗ ಒಮ್ಮೆ ಬಸವ ಜಯಂತಿಯ ಕಾರ್ಯಕ್ರಮಕ್ಕಾಗಿ ಭಾಷಣಕ್ಕಾಗಿ ನನ್ನನ್ನು ಆಮಂತ್ರಿಸಿದ್ದರು. ಆಗ ಭಾಷಣ ಮಾಡುವ ರೂಢಿ ಇಲ್ಲದಿದ್ದ ನಾನು ಎಷ್ಟು ಒಲ್ಲೆನೆಂದರೂ ಬಿಡಲಿಲ್ಲ. ಹಾಗಾಗಿ ಭಾಷಣಕ್ಕೆ ಸಿದ್ಧತೆಗೆ ಪ್ರಾರಂಭಿಸಿದೆ. ಎಷ್ಟು ವಿಚಾರ ಮಾಡಿಕೊಂಡರೂ ಆತ್ಮವಿಶ್ವಾಸ ಉಂಟಾಗಲಿಲ್ಲ. ವಿಷಯಗಳೆಲ್ಲಾ ಕಲಸುಮೇಲೋಗರವಾಗಿಬಿಡುತ್ತಿದ್ದವು. ಕೊನೆಗೆ ಭಾಷಣದಲ್ಲಿ ಹೇಳಬೇಕೆಂದಿದ್ದ ವಿಷಯಗಳನ್ನು ವ್ಯವಸ್ಥಿತವಾಗಿ ಬರೆದೆ. ಆಗ ನಾನು ಮಾತಾಡಬೇಕೆಂದಿದ್ದ ವಿಷಯಗಳು ಪರಿಪೂರ್ಣತೆಯನ್ನು ಪಡೆದು ಬಂದಿದ್ದವು. Reading makes a ready man and writing makes a perfect man ಎನ್ನುವ ಮಾತು ಸತ್ಯವೆನ್ನಿಸಿತು. ಆ ಭಾಷಣ ಲೇಖನ ರೂಪ ತಾಳಿತು.

ನನ್ನ ಬರಹ ಮುಖ್ಯವಾಗಿ ಧಾರವಾಡಕ್ಕೆ ಬಂದಮೇಲೆ ಬೆಳೆಯಿತು ಎನ್ನಬಹುದು. ೧೯೬೩ನೆಯ ಇಸವಿಯಲ್ಲಿ ಬಿ.ಎಡ್. ಕಾಲೇಜಿಗೆ ಸೇರಿದಾಗ. 'ನನ್ನ ಸ್ವಭಾವಕ್ಕೊಂದು ಕ್ಷಕಿರಣ' ಎಂಬ ಒಂದು ಲೇಖನ ಬರೆದಿದ್ದೆ. ವರ್ಷದ ಕೊನೆಯಲ್ಲಿ ಕಾಲೇಜ್ ಮ್ಯಾಗಜಿನ್‌ಗೆ ಲೇಖನ ಕೊಡಬೇಕೆಂದು ಕೇಳಿದಾಗ ಅದೇ ಲೇಖನ ಕೊಟ್ಟೆ. ಆ ನಂತರ ಎಷ್ಟು ತಿಂಗಳಾದ ಮೇಲೆ ಒಮ್ಮೆ ಡಾ॥ ಆರ್.ಸಿ.ಹಿರೇಮಠರ ಮನೆಗೆ ಹೋಗಿದ್ದೆವು. ಅವರ ಮನೆಯಲ್ಲಿ ನನ್ನ ಕಾಲೇಜಿನ ಮ್ಯಾಗಜೀನ್ ಇತ್ತು, ಅದರಲ್ಲಿದ್ದ ನನ್ನ ಲೇಖನ ಕುತೂಹಲದಿಂದ ಓದಿದ್ದರಂತೆ. ಲೇಖನದ ಬಗ್ಗೆ ಬಹಳ ಪ್ರಶಂಸಿಸಿ ಮೆಚ್ಚುಗೆಯ ಮಾತುಗಳನ್ನಾಡಿದರು. ಆಗ ನನಗೊಂದು ರೀತಿಯ ಉತ್ಸಾಹ ಮೂಡಿತು. ವಿಶ್ವವಿದ್ಯಾಲಯ ಮಟ್ಟದ, ಅದರಲ್ಲೂ

ಕನ್ನಡ ವಿಭಾಗದ ಮುಖ್ಯಸ್ಥರಾದ ವಿದ್ವಾಂಸರೊಬ್ಬರು ಆಡಿದ ಮೆಚ್ಚುಗೆಯ ಮಾತುಗಳು ನನ್ನಲ್ಲಿ ಬರೆಯುವ ಉತ್ಸಾಹವನ್ನು ಆತ್ಮವಿಶ್ವಾಸವನ್ನು ಮೂಡಿಸಿದವು. ಜೊತೆಗೆ ನಮ್ಮ ಯಜಮಾನರೂ ಸಾಹಿತಿಗಳೂ ಆಗಿರುವುದರಿಂದ ಮನೆಯಲ್ಲೂ ಸಾಹಿತ್ಯದ ಅಭಿರುಚಿಗೆ ಪೋಷಕವಾದ ವಾತಾವರವಣವಿದ್ದು ಬರೆಯುವುದಕ್ಕೆ ಹೆಚ್ಚಿನ ಚಾಲನೆ ದೊರೆತಂತಾಯ್ತು. ಅಲ್ಲಿಂದ ಮುಂದೆ ನನಗೆ ಯಾವುದಾದರೂ ವಿಷಯವಾಗಿ ಆಳವಾದ ಯೋಚನೆ ಬಂದಾಗ ಅದು ಲೇಖನವಾಗಿ ಮೂಡುತ್ತದೆ.

ಶಾಲೆಗಳಲ್ಲಿ ಇಂಗ್ಲಿಷಿನ ಸ್ಥಾನದ ಬಗ್ಗೆ ಬಹಳಷ್ಟು ವಿವಾದಗಳು ಸ್ವಾತಂತ್ರ ಬಂದಾಗಿನಿಂದಲೂ ಇದೆ. ಬಿ.ಎಡ್. ಕಾಲೇಜಿನಲ್ಲಿ ನಾನು, ಮಾಧ್ಯಮಿಕ ಶಾಲೆಯಲ್ಲಿ ಇಂಗ್ಲಿಷನ್ನು ಬೋಧಿಸುವ ಪದ್ಧತಿಯ ಬಗ್ಗೆ ಕಲಿಸುತ್ತಿರುವುದರಿಂದ, ಇಂಗ್ಲಿಷ ಭಾಷೆ ಏಕೆ ಬೇಕು? ಎಷ್ಟು ಬೇಕು ಎನ್ನುವ ಬಗೆಗೆ, ಇಂಗ್ಲಿಷ್ ಭಾಷೆಯ ಉಪಯೋಗ ಹಾಗೂ ಮಹತ್ವ ಇವುಗಳ ಬಗ್ಗೆಯೂ ಹೇಳಬೇಕಾಗುತ್ತದೆ. ಹಾಗಾಗಿ ಆ ಬಗ್ಗೆ ಸಾಕಷ್ಟು ಅಭ್ಯಾಸ ಮಾಡಿದ್ದೆ, ಚರ್ಚೆ ಮಾಡಿದ್ದೆನಾಗಿ 'ಇಂಗ್ಲಿಷ್ ಭಾಷೆ ಯಾರಿಗೆ ಏಕೆ, ಎಷ್ಟು' ಎಂಬ ಲೇಖನವನ್ನು ಸುಮಾರು ಇಪ್ಪತ್ತು ವರ್ಷಗಳ ಹಿಂದೆಯೇ ಬರೆದಿದ್ದೆ. ಅದು ಸುಧಾದಲ್ಲಿ ಪ್ರಕಟಗೊಂಡಿತ್ತು. ಆನಂತರ ಶಿಕ್ಷಣ ಸಲ್ಲಾಪ, ಯಾರಿಗೆ ಯಾವ ಮಾಧ್ಯಮ, ಗ್ರಾಮೀಣ ಮಹಿಳೆಯರಿಗೆ ಶಿಕ್ಷಣ, ಮಹಿಳೆಯ ಮುನ್ನಡೆ, ಮಕ್ಕಳಿಗೆ ಆಟಿಕೆಗಳು ಮುಂತಾದ ಶಿಕ್ಷಣಕ್ಕೆ ಸಂಬಂಧಿಸಿದ ಅನೇಕ ಲೇಖನಗಳನ್ನು ಬರೆದಿದ್ದೇನೆ. ಅಲ್ಲದೆ, ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಿಸಿದ, ಸಾಮಾಜಿಕ ಸಮಸ್ಯೆಗಳನ್ನೊಳಗೊಂಡ ಲೇಖನಗಳನ್ನು ಬರೆದಿರುವೆ. ಅವೆಲ್ಲಾ ಸುಧಾ, ವನಿತಾ, ಪ್ರಜಾಮತ, ಕರ್ಮವೀರ ಮೊದಲಾದ ನಿಯತಕಾಲಿಕೆಗಳಲ್ಲೂ, ವಿಶ್ವವಿದ್ಯಾಲಯದ ಜರ್ನಲ್‌ಗಳಲ್ಲಿ, ಸ್ಮರಣಸಂಚಿಕೆಗಳಲ್ಲಿ ಪ್ರಕಟವಾಗಿವೆ. ಕೆಲವು ಕಥೆಗಳನ್ನು ಕವನಗಳನ್ನು ಬರೆದಿರುವೆನಾದರೂ ಪತ್ರಿಕೆಗಳಿಗೆ ಕಳಿಸಿರಲಿಲ್ಲ. ಈಗ ಕಳಿಸಬೇಕೆಂದುಕೊಂಡಿರುವೆ.

ಆಕಾಶವಾಣಿಯುಲ್ಲೂ ಸಹ ಸರೋಜಿನಿ ನಾಯ್ಡುರವರ ಬಗ್ಗೆ, ಕಸ್ತೂರಿಬಾಯಿಯವರನ್ನು ಕುರಿತು ಅಲ್ಲದೆ ಪೂರ್ವ ಪ್ರಾಥಮಿಕ ಶಿಕ್ಷಣ, ಮಕ್ಕಳ ದಿನಾಚರಣೆ, ಪ್ರತಿಭಾವಂತ ಮಕ್ಕಳ ಶಿಕ್ಷಣ, ಮಕ್ಕಳಿಗೆ ಪಾಕೆಟ್ ಮನಿ ಕೊಡಬೇಕೆ ಬೇಡವೆ? ಕುಟುಂಬದವರ ಆಹಾರದ ಬಗ್ಗೆ ಗೃಹಿಣಿಯ ಪಾತ್ರ ಮುಂತಾದ ವಿಚಾರಗಳ ಬಗ್ಗೆಯೂ ಬರೆದ ಲೇಖನಗಳು ಬಿತ್ತರಿಸಲ್ಪಟ್ಟಿವೆ.

ವಿಶ್ವವಿದ್ಯಾಲಯದವರು ಮಹಿಳಾವರ್ಷದಲ್ಲಿ ಪ್ರಕಟಿಸಿದ ಪುಸ್ತಕಕ್ಕೆ ಲೇಖನ ಕೇಳಿದರಾಗಿ ಶಿಕ್ಷಣ ಕ್ಷೇತ್ರದಲ್ಲಿ ಮರೆಯಲಾಗದ ಮಹಿಳೆಯರು ಎಂಬ ಲೇಖನ ಬರೆದೆ. ವಿಶ್ವ ಕನ್ನಡ ಸಮ್ಮೇಳನ ಸಂದರ್ಭದಲ್ಲಿ ಕೇವಲ ಕಥೆಗಾರ್ತಿಯರ ಕಥೆಗಳನ್ನೊಳಗೊಂಡ ಪುಸ್ತಕವು ಪ್ರಕಟನೆಯಾಯ್ತು. ಅದರ ಸಂಪಾದಕೀಯರಾದ

ಶ್ರೀಮತಿ ವೀಣಾ ಶಾಂತೇಶ್ವರರು ನನಗೆ ಕಥೆ ಬರೆದುಕೊಡಲು ಕೇಳಿದಾಗ 'ಹಸಿರು ಸೀರೆ' ಎಂಬ ಕಥೆಯನ್ನು ಬರೆದೆ. ಶಿಕ್ಷಣ ತಜ್ಞ ಎಂ.ಪಿ. ಜಾಲಿಯವರ ಸ್ಮರಣ ಸಂಚಿಕೆಗೆ ಲೇಖನ ಕೇಳಿದಾಗ 'ಭಾಷಾ ಕಲಿಕೆಯಲ್ಲೂ ಆಡುಭಾಷೆಯ ಮಹತ್ವ' ಎಂಬ ಲೇಖನ ಬರೆದೆ. ವಿಶ್ವವಿದ್ಯಾಲಯದ 'ಮಾನವಿಕ ಭಾರತೀಯ ಸಂಪಾದಕರಿಂದ ಲೇಖನ ಬೇಕೆಂದು ಪತ್ರ ಬಂದಾಗ, ಮಕ್ಕಳ ಬೆಳವಣಿಗೆಯಲ್ಲಿ ಪಾಲಕರಿಗೆ ಸಹಾಯಕವಾಗುವ ಮಾಹಿತಿ ನೀಡುವ ಸಂಶೋಧನ ಲೇಖನ ಒಮದನ್ನು ಅನುವಾದಿಸಿ ಇಟ್ಟಿದ್ದೆ. ಅದೇ 'ಬಾಲಾಪರಾಧ ಒಂದು ಆಧುನಿಕ ವಿವೇಚನೆ' ಪ್ರಜಾಮತ ಪತ್ರಿಕೆಯ ಸಂಪಾದಕರ ಕೇಳಿಕೆಯ ಮೇರೆಗೆ, 'ವೀರಶೈವ ಧರ್ಮ, ಸಂಪ್ರದಾಯ ಮತ್ತು ವೈಶಿಷ್ಟ್ಯ'ಗಳನ್ನು ಕುರಿತಾದ ಪರಿಚಯಾತ್ಮಕ ಲೇಖನ ಬರೆದುಕೊಟ್ಟೆ. ಈಗ ಸಮಾಜದಲ್ಲಿ ಅನೇಕ ಬದಲಾವಣೆಗಳಾಗಿವೆ. ಜನರಿಗೆ ಮಠಗಳ ಬಗ್ಗೆ ಸ್ವಾಮಿಗಳ ಬಗ್ಗೆ ಮೊದಲಿನ ಜನರಿಗಿದ್ದ ಭಾವನೆಗಳು ಉಳಿದಿಲ್ಲ. ಈ ಕಾಲದಲ್ಲಿಯೂ ಸ್ವಾಮಿಗಳು ಹಾಗೂ ಮಠಗಳು ಬದಲಾದ ಸಮಾಜಕ್ಕೆ ಉಪಯೋಗವಾಗುವಂತಹ ರೀತಿಯಲ್ಲಿ ಕಾರ್ಯಾಚರಣೆಗಳನ್ನು ಹಮ್ಮಿಕೊಂಡರೆ ಇಂದಿನ ಪೀಳಿಗೆಯವರೂ ಮಠ ಹಾಗೂ ಸ್ವಾಮಿಗಳ ಬಗ್ಗೆ ಗೌರವದಿಂದ ನಡೆದುಕೊಳ್ಳಲು ಸಾಧ್ಯವಿದೆ ಎನ್ನಿಸಿ, ನನ್ನ ವಿಚಾರಗಳನ್ನೆಲ್ಲಾ ಒಂದು ಲೇಖನರೂಪದಲ್ಲಿ ಬರೆದೆ. ಆ ಲೇಖನ 'ಮಠಗಳಿಗೊಂದು ನೀಲನಕ್ಷೆ' ಎಂದು. ಅದು ಕೊಟ್ಟೂರು ಸ್ವಾಮಿ ಮಠದಿಂದ ಹೊರಡಿಸುವ 'ಹೇಮಕೂಟ' ಎಂಬ ಪತ್ರಿಕೆಯಲ್ಲಿ ಪ್ರಕಟವಾಯ್ತು. ಗದುಗಿನ ತೋಂಟದಾರ್ಯ ಜಗದ್ಗುರುಗಳು, 'ವೀರಶೈವ ಗಣ್ಯರು' ಎಂಬ ಮಾಲಿಕೆಯಲ್ಲಿ ಅನೇಕ ವೀರಶೈವ ದಾನಿಗಳ, ಪ್ರತಿಭಾನ್ವಿತರ, ಸಮಾಜೋದ್ಧಾರಕರ, ಶಿಕ್ಷಣ ತಜ್ಞರ ಅಲ್ಲದೆ .... ಕ್ಷೇತ್ರಗಳಲ್ಲಿ ಹೆಸರಾಂತ ಸೇವೆ ಮಾಡಿದವರ ಜೀವನ ಚರಿತ್ರೆಗಳನ್ನು ಬರೆಸಿ ಪ್ರಕಟಿಸುತ್ತಿದ್ದಾರೆ. ಆ ಮಾಲಿಕೆಯಲ್ಲಿ ಪತ್ರೆ ಶ್ರೀ.ಕೆ. ಚನ್ನವೀರಪ್ಪಯ್ಯನವರ ಬಗೆಗೆ ಬರೆಯುವ ಜವಾಬ್ದಾರಿಯನ್ನು ನನಗೆ ವಹಿಸಿದರು. ಹಾಗಾಗಿ ಆ ವಿಚಾರಗಳನ್ನೊಳಗೊಂಡ ಒಂದು ಚಿಕ್ಕ ಪುಸ್ತಕ ಬರೆದೆ. ಹುಬ್ಬಳ್ಳಿಯ ಮೂರು ಸಾವಿರ ಮಠದ ಜಗದ್ಗುರುಗಳು ಸಜ್ಜಲಗುಡ್ಡದ ಶರಣಮ್ಮನವರ ಜೀವನ ಚರಿತ್ರೆಯನ್ನು ಚಿಕ್ಕ ಹೊತ್ತಿಗೆಯ ರೂಪದಲ್ಲಿ ಹೊರತರಲು ಯೋಚಿಸಿ, ಅದರ ಬರವಣಿಗೆಯ ಕೆಲಸವನ್ನು ನನಗೆ ವಹಿಸಿದರು. ಹಾಗಾಗಿ ಅದೊಂದು ಪುಸ್ತಕ ನನ್ನ ಹೆಸರಿನಲ್ಲಿ ಪ್ರಕಟವಾಯ್ತು. ಮಯೂರದಲ್ಲಿ 'ಅಕ್ಕ ಬೇಸ್ತು ಬಿದ್ದಳು', ನಡೆದಾಗ ಭಯ ನೆನೆಸಿದಾಗ ನಗು' ಎಂಬ ನಗೆ ಬರಹಗಳನ್ನು ಬರೆದಿರುವೆ. ಕಾದೆ 'ಅಂದು-ಇಂದು' ಮುಂತಾದ ಲಘು ಬರಹಗಳನ್ನು ಸುಧಾದಲ್ಲಿ ಪ್ರಕಟವಾಗಿವೆ.

ಇದಲ್ಲದೆ ಅನೇಕ ಜರ್ನಲ್‌ಗಳಿಗೆ, ಸಂಭಾವನಾ ಗ್ರಂಥಗಳಿಗೆ ನಮ್ಮ ಕಾಲೇಜಿನ ಜರ್ನಲ್‌ಗಳಿಗೆ ಲೇಖನ ಬರೆಯಬೇಕಾದ ಅನಿವಾರ್ಯ ಪ್ರಸಂಗಗಳು ಬಂದಾಗ ನನ್ನನ್ನು ಬರೆಯುವಂತೆ ಮಾಡಿದೆ. ನಮ್ಮ ಕಾಲೇಜಿನ ಹಳೇ ವಿದ್ಯಾರ್ಥಿ ಒಕ್ಕೂಟದಿಂದ ಪ್ರಕಟವಾದ Educationists of the western world and educationists of the easter world ಎಂಬ ಗ್ರಂಥಗಳಿಗೂ ಲೇಖನಗಳನ್ನು ಬರೆದಿರುವೆ. ಶಿಕ್ಷಕರ ತರಬೇತಿ ಕಾಲೇಜಿನಿಂದ ಪ್ರಕಟವಾಗುವ 'ಜೀವನ ಶಿಕ್ಷಣ' ನಿಯತ ಕಾಲಿಕೆಗೂ ಲೇಖನ ಕೊಟ್ಟಿರುವೆ.

ಹೀಗೆ ಅನೇಕ ಬಾರಿ ನನ್ನ ವಿಚಾರಗಳನ್ನು ವ್ಯಕ್ತಪಡಿಸುವ ಸಲುವಾಗಿ ನಾನು ಹೆಚ್ಚಾಗಿ ವೈಚಾರಿಕ ಲೇಖನಗಳನ್ನು ಬರೆದಿದ್ದೇನೆ. ಅಲ್ಲದೆ ಆಕಾಶವಾಣಿಯವರು, ವಿಶ್ವವಿದ್ಯಾಲಯದವರು, ಸಂಭಾವನ ಗ್ರಂಥಗಳ ಸಂಪಾದಕರು ಮುಂತಾದವರು ತಮಗೆ ಬೇಕಾದ ವಿಷಯಕೊಟ್ಟು ಆ ಬಗ್ಗೆ ಲೇಖನ ಬರೆಯಲು ಕೇಳಿದುದರಿಂದ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಲೇಖನಗಳನ್ನು ಬರೆದಿರುವೆ. ಈಚೀಚೆಗೆ ನನ್ನ ಮನಸ್ಸಿನಲ್ಲಿ ಮಥನಗೊಂಡ ವಿಚಾರಗಳು ಸಮಾಜದಲ್ಲಿ ನಡೆದ ಘಟನೆಗಳು ನ್ನ ಮನಸ್ಸಿನಾಳದಲ್ಲಿ ಘಾಶಿಗೊಳ್ಳುತ್ತ ಕಥೆ-ಕವನಗಳ ವಿಷಯವಾಗುತ್ತವೆ.

ಅನೇಕ ಸಾರಿ ಲೇಖನ ಬರೆದುಕೊಡಲು ಯಾರಾದರೂ ಕೇಳಿದಾಗ ನನಗೆ ಬಹಳ ಸಾರೆ ಬರೆಯಲು ಆಗುವುದಿಲ್ಲ. ಏಕೆಂದರೆ ಮನಸ್ಸಿನಲ್ಲಿ ತಾವಾಗಿಯೇ ಮೂಡಿಬಂದ ವಿಚಾರಗಳನ್ನು ಬರೆಯುವ ಸ್ವಭಾವ ನನ್ನದು. ಆದರೆ ಸಾಹಿತ್ಯದ ಶಕ್ತಿ ಇದ್ದವರಿಗೆ ಬರೆಯಬೇಕಾದ ಅವಕಾಶಗಳು ಒತ್ತಾಯಗಳು ಬಂದಾಗ ಮನಸ್ಸಿಲ್ಲದಿದರೂ ಬರೆಯಲು ಕೂತರೆ ಸಾಹಿತ್ಯ ತಾನೇ ರಚನೆಯಾಗುತ್ತಾ ಹೋಗುತ್ತದೆ. ಅಂತಹ ಅವಕಾಶಗಳಿಲ್ಲದಾಗ ನನ್ನಂತಹವರು ಬರೆಯಲು ಹೋಗುವುದೇ ಇಲ್ಲಿದೇನೋ ಹಾಗೆ ಆಕಾಶವಾಣಿಯ ಕಾಂಟ್ರಾಕ್ಟ್‌ಗಳ ಕಾರಣ ಅನೇಕ ಉತ್ತಮ ಲೇಖನಗಳನ್ನು ಬರೆಯಲು ಹೊಸ ವಿಚಾರಗಳನ್ನು ಓದಲು ಕಾರಣವಾಯಿತು.

ಶಾಲೆಗಳಲ್ಲಿ ಇಂಗ್ಲಿಷ್ ಸ್ಥಾನದ ಬಗ್ಗೆ ಬಹಳಷ್ಟು ವಿವಾದಗಳು ಎಂದಿನಿಂದಲೂ ಇವೆ. ನಾನು ಬಿಎಡ್ ಕಾಲೇಜಿನಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಇಂಗ್ಲಿಷ್ ಬೋಧಿಸುವ ಪದ್ಧತಿಯನ್ನು ಬೋಧನೆ ಮಾಡುವುದರಿಂದ, ಇಂಗ್ಲಿಷ್ ಭಾಷೆ ಏಕೆ ಬೇಕು, ಎಷ್ಟು ಕಲಿಯಬೇಕು, ಶಿಕ್ಷಣ ಕ್ಷೇತ್ರದಲ್ಲಿ, ಜೀವನದಲ್ಲಿ ಇಂಗ್ಲಿಷ್ ಭಾಷೆಯ ಉಪಯೋಗ, ಮಹತ್ವವನ್ನು ಬೋಧಿಸುವ ಕಾರಣ ಆ ಬಗ್ಗೆ ಸಾಕಷ್ಟು ಅಭ್ಯಾಸ ಮಾಡಿದ್ದೆನಾಗಿ, "ಇಂಗ್ಲಿಷ್ ಭಾಷೆ ಯಾರಿಗೆ, ಏಕೆ, ಎಷ್ಟು" ಲೇಖನವನ್ನು ಸುಮಾರು ೨೦ ವರ್ಷಗಳ ಹಿಂದೆ ಬರೆಸಿದ್ದ 'ಸುಧಾ' ಪತ್ರಿಕೆಯಲ್ಲಿ ಪ್ರಕಟವಾಯಿತು. 'ಶಿಕ್ಷಣಸಲ್ಲಾಪ',

ಯಾರಿಗೆ ಯಾವ ಮಾಧ್ಯಮ, ಮಹಿಳೆಯ ಮುನ್ನಡೆ, ಗ್ರಾಮೀಣ ಮಹಿಳೆಯರಿಗೆ ಶಿಕ್ಷಣ, ಅಲ್ಲದೇ ಇನ್ನೂ ಅನೇಕ ಶಿಕ್ಷಣ ಸಂಬಂಧವಾದ ಲೇಖನಗಳನ್ನು ಬರೆದೆ ಬಹಳಷ್ಟು ಲೇಖನಗಳು ಸುಧಾ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಆಕಾಶವಾಣಿಯವರಿಗಾಗಿ 'ಮಕ್ಕಳ ಕಥೆಗಳು', 'ಮಕ್ಕಳ ದಿನಾಚರಣೆ' ಪ್ರತಿಭಾವಂತ ಮಕ್ಕಳಿಗಾಗಿ ಶಿಕ್ಷ, ಮಕ್ಕಳಿಗೆ ಪಾಕೆಟ್‌ಮನಿ ಕೊಡಬೇಕೆ ಬೇಡವೆ ಮುಂತಾದ ಅನೇಕ ಲೇಖನಗಳು ಆಕಾಶವಾಣಿಯಲ್ಲಿ ಪ್ರಸಾರಗೊಂಡಿವೆ.

■



ಏಕಮಾತ್ರ ಪುತ್ರ ಡಾ. ಶಿವಪ್ರಸಾದರ ಮದುವೆಯ ಸಂಭ್ರಮದಲ್ಲಿ ಶ್ರೀ ಪತ್ರೆ ಸದಾಶಿವನ್, ಶ್ರೀಮತಿ ಶೈಲಜಾ, ಶ್ರೀ ಪತ್ರೆ ದೇವದತ್ತ, ಶ್ರೀಮತಿ ಜ್ಯೋತಿ ದೇವದತ್ತ ಬಂಧುಗಳೊಂದಿಗೆ...



ಏಕಮಾತ್ರ ಪುತ್ರ ಡಾ. ಶಿವಪ್ರಸಾದರ ಮದುವೆಯ ಸಂಭ್ರಮದಲ್ಲಿ ಶ್ರೀ ಪತ್ರೆ ಸದಾಶಿವನ್, ಶ್ರೀಮತಿ ಶೈಲಜಾ, ಬಂಧುಗಳೊಂದಿಗೆ....



ಏಕಮಾತ್ರ ಪುತ್ರ ಡಾ. ಶಿವಪ್ರಸಾದರ ಮದುವೆಯ ಸಂಭ್ರಮದಲ್ಲಿ ಶ್ರೀಮತಿ ಲಲಿತಾಂಬರವರು ಹಾಗೂ ಶ್ರೀ ವೃಷಭೇಂದ್ರಸ್ವಾಮಿ ಅವರ ಮದುವೆಯ ವಾರ್ಷಿಕೋತ್ಸವದಲ್ಲಿ ದಂಪತಿಗಳು

## ಅನುಬಂಧ–೨

### i) ಮದುವೆಯ ಆಹ್ವಾನ ಪತ್ರ

ಶ್ರೀಮತಿ ಲಲಿತಾಂಬ ಮತ್ತು ಡಾ॥ ವೃಷಭೇಂದ್ರಸ್ವಾಮಿಯವರ
ಮದುವೆಯ ಕರೆಯೋಲೆ

**ಸೊನ್ನದ ಮುರುಡಿ ಮಠದ ಶರಣಪ್ಪಯ್ಯ**
(ಎಂ.ಬಿ. ಅಯ್ಯನಹಳ್ಳಿ, ಕೂಡ್ಲಿಗಿ ತಾ॥ ಬಳ್ಳಾರಿ ಜಿಲ್ಲಾ)

ಮತ್ತು

**ಎನ್.ಎಂ. ಶಿವಲಿಂಗಪ್ಪಯ್ಯ**
(ಉಬ್ರಾಣಿ ಮಠ, ಬೀರೂರು, ಚಿಕ್ಕಮಗಳೂರು ಜಿಲ್ಲಾ)

**ಸಹಾ ಮಾಡುವ ವಿಜ್ಞಾಪನೆಗಳು**

ಸ್ವಸ್ತಿ ಶ್ರೀ ಶಾಲಿವಾಹನಶಕ ೧೮೭೮ನೇ ದುರ್ಮುಖಿ ನಾಮ ಸಂವತ್ಸರದ ವೈಶಾಖ ಶುದ್ಧ ೩ನೇ ಭಾನುವಾರ (೧೩.೫.೧೯೫೬) ಮಧ್ಯಾಹ್ನ ೧೨.೩೦ಕ್ಕೆ ಸಲ್ಲುವ ಸಿಂಹ ಲಗ್ನದ ಶುಭಾಂಶದ ಶುಭ ಮುಹೂರ್ತದಲ್ಲಿ

ಕೈ॥ ಸೊನ್ನದ ಮುರುಡಿ ಮಠದ ಕೊಟ್ರಪ್ಪಯ್ಯನವರ ಪುತ್ರ,

**ಚಿ॥ ಎಸ್. ಎಂ. ವೃಷಭೇಂದ್ರಸ್ವಾಮಿ, ಎಂ.ಎ,**

ಮತ್ತು ಬೀರೂರು ಉಬ್ರಾಣಿ ಮಠದ ಶ್ರೀಕಂಠಶರ್ಮರವರ ಪುತ್ರಿ,

**ಚಿ॥ ಸೌ॥ ಲಲಿತಾಂಬ, ಬಿ.ಎ.,**

ಇವರ ವಿವಾಹವು ಬೀರೂರಿನಲ್ಲಿರುವ ವಧುವಿನ ಗೃಹದಲ್ಲಿ ನಡೆಯಲು ಗುರುಹಿರಿಯರು ನಿಶ್ಚಯಿಸಿರುತ್ತಾರೆ. ಈ ಶುಭ ಮುಹೂರ್ತಕ್ಕೆ ತಾವು ಆಗಮಿಸಬೇಕಾಗಿ ವಿನಂತಿ.

ಮುಹೂರ್ತ ೧೨.೩೦

ಆರತಿ ಅಕ್ಷತೆ ೬.೩೦

ಇತಿ ನಿಮ್ಮ
ಎಸ್, ಎಂ. ಶರಣಪ್ಪಯ್ಯ
ಎನ್.ಎಂ. ಶಿವಲಿಂಗಪ್ಪಯ್ಯ

ಎಂ.ಬಿ. ಆಯ್ಯನಹಳ್ಳಿಯಲ್ಲಿ ಆರತಿ–ಅಕ್ಷತೆ: ೧೬–೫–೫೬ ಸಂಜೆ ೬ಕ್ಕೆ

**S.M. SARANPPAIAH**
(M.B. AyyanaHalli, Kudligi Tq. Bellary Dist)

AND

**N.M. SHIVALINGAPPAIAH**
(Ubrani Mutt, Birur)

Present compliments and request the pleasure of your company on the occasion of the marriage of

**Chi. S.M. Vrushabhendra Swamy** M.A.,

With

**Chi. Sow. Lalithamba** B.A.,
(Daughter of Sri. U.S.Sreekanta Sharma, Birur)

On Sunday the 13th May 1956 at the Bride's Residence at Birur

**MURUTHAM 12.30 P.M.**

**RECEPTION 6.30 P.M**

Reception at M.B. Ayyanahalli on 16-5-56 at 6 P.M.

ಪ್ರೇಮಶ್ರುತಿ ಜೀವಸ್ವರ ಮೇಳನದಿಂ ಶಿವಗೀತ,
ನಡೆವುದಲಾನಿರಂತರಂ ವಿಧಿಚಿರಹರ್ಷೋದ್ಭೂತಂ.
ಇದಕ್ಕೊಂದದ ಬಾಳಿಲ್ಲವು, ಒಂದುವನಕ ಬಿಡುವಿಲ್ಲವು

ಸ್ವಚ್ಛಂದವನುಳಿದೀ ಶ್ರುತಿಗಳವಡುವುದೆ ಪುರುಳಿನಿರವು,
ತಾನ್ ತನಗಿದು ಎಂದೆನ್ನುವ ಬಾಳೊಲುಮೆಯ ಶ್ರುತಿಗೂಡದು
ರಾಗದ ಭೋಗದ ದುಃಖದ ಸಂಸ್ಕಾರಕೆ ಮೈಗೊಡುವುದು.

– ಪು.ತಿ.ನ.
("ಅಹಲ್ಯೆ")

**ii) ಸುತ್ತೂರು ಶ್ರೀಗಳ ಶುಭ ಹಾರೈಕೆ, (ಕ್ರಿ. ಶ. ೨೦೦೧)**

WITH THE BEST COMPLIMENTS OF : RELATIVES AND FRIENDS

*ಮಾನ್ಯ ಶ್ರೀ ವೃಷಭೇಂದ್ರಸ್ವಾಮಿಯವರಿಗೆ,*
ನೀವು ಬರೆದ ೪–೩–೨೦೦೧ ರ ಪತ್ರ ಹಾಗೂ ಆಹ್ವಾನ ಪತ್ರಿಕೆ ತಲುಪಿದೆ,

ಸಾಹಿತ್ಯ ಕ್ಷೇತ್ರದ್ಲಲಿ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿಯವರ ಸೇವೆ ಶ್ಲಾಘನೀಯ. ಅವರು ಎಪ್ಪತ್ತು ಸಂವತ್ಸರಗಳನ್ನು ಪೂರೈಸಿರುವುದನ್ನು ಪುಸ್ತಕಗಳ ಬಿಡುಗಡೆ ಮೂಲಕ ಆಚರಿಸುತ್ತಿರುವುದು ಅವರ ಸಾಹಿತ್ಯಾಸಕ್ತಿಯನ್ನು ಪ್ರತಿಬಿಂಬಿಸುತ್ತದೆ ಹಾಗೂ ಮಹಿಳೆ ಹಾಗೂ ಮಕ್ಕಳ ಸಾಹಿತ್ಯದ ವಾರ್ಷಿಕ ಪುರಸ್ಕಾರಕ್ಕಾಗಿ ಕ.ಸಾ.ಪ ಗೆ 'ದತ್ತಿ ನಿಧಿ' ಸಮರ್ಪಿಸಿರುವುದು ಔಚಿತ್ಯಪೂರ್ಣವಾಗಿದೆ. ಅವರಿಗೆ ಭಗವಂತನು ದೀರ್ಘ ಆಯುರಾರೋಗ್ಯವನ್ನು ಕರುಣಿಸಲೆಂದು ಹಾರೈಸುತ್ತೇವೆ.

ಶುಭಾಶಯಗಳೊಡನೆ,

೨೩.೦೩.೨೦೦೧

ಇಂತು,
ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿ
(ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು
ಜಗದ್ಗುರು ಶ್ರೀ ವೀರಸಿಂಹಾಸನ ಮಠ, ಸುತ್ತೂರು,
ನಂಜನಗೂಡು ತಾಲ್ಲೂಕು
ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಠ,
ಮೈಸೂರು ೫೭೦ ೦೦೪

**iii) ಬಳ್ಳಾರಿಯ ಬಾಲ್ಯದ ಗೆಳೆಯ ಗಾಳಿ ಚನ್ನಪ್ಪನ ಮನದಾಸೆ**

*ಇಂದು ೧೩.೮.೨೦೦೮ ರಂದು ವೃಷಭಾತ್ಮಜೆ ಲಲಿತಾಂಬ ಇವರನ್ನು*

*ನೆನೆವ ದಿನ*

ಮರೆತೆನೆಂದರೆ ಮರೆಯಲಾದೀತೇ ನಮ್ಮ ನೆಚ್ಚಿನ ತಂಗಿ ಲಲಿತೆಯನ್ನು.

ಇಂದಿನ ಮೂರು ನೂರಾ ಅರವತ್ತು ದಿವಸಗಳು ಕಳೆದರೂ, ಮೂರು ನೂರಾ ಅರವತ್ತು ವರ್ಷಗಳಿಗೂ ಮೇಲ್ಪಟ್ಟು ನಮ್ಮೆಲ್ಲರ ನೆನೆಪಿನಂಗಳದಲ್ಲಿ ಸದಾ ವಿಹರಿಸುತ್ತಿರಲಿ ಎಂಬುದೇ ನನ್ನ ಹಾಗೂ ನನ್ನ ಮನೆಯೊಡತಿಯ ಹೆಬ್ಬಯಕೆ. ಲಲಿತಾಂಬ ರಚಿಸಿದ "ಸಜ್ಜಲ ಶ್ರೀ". ಅದರಲ್ಲಿಯ ಕೊನೆ ಪುಟಗಳಲಿ ಶಿವಶರಣೆ ಶರಣಮ್ಮನವರು ಅಂತಿಮ ಸಮಯದಲ್ಲಿ ಅಲ್ಲಿ ಸೇರಿದ ಶರಣರ ಸಂಕುಲ ಹರಿಸಿದ್ದು ಕಣ್ಣೀರಿನ ಕಾಲುವೆಯಲ್ಲಿ ಒಂದು ಕಡಲಾಗಿ ಮಾರ್ಪಟ್ಟಿತು ಇದನ್ನು ಲಲಿತಾಂಬ ಇವರು ತಮ್ಮ ಅಂತರಾಳದಿಂದ ಆರಿಸಿ ಹೊರತೆಗೆದ ಶಬ್ದಗಳ ಜೋಡಣೆಯನ್ನು ಓದುತ್ತಿದ್ದಾಗ ನಾನು ಅತ್ತೆ, ಅಳುವು ಒಂದೇ ಅಲ್ಲ, ಅಬ್ಬರಿಸಿ, ಅಬ್ಬಬ್ಬರಿಸಿ ಅತ್ತೆ. ಇದು ನನ್ನ ಊಹೆಯಲ್ಲ ಉತ್ಪ್ರೇಕ್ಷೆಯಲ್ಲ ಇದು ನಿಜಾಂಶ.

ಲಲಿತಾಂಬಳ ಆತ್ಮವು ತಂಪಿನಂಗಳದಲ್ಲಿ ಸದಾ ನೆಲಸಲೆಂದೇ ನಮ್ಮ ಮನದಾಸೆ.

ಇತೀ

ವೃಷಭನ ಆತ್ಮೀಯ ಸಖ

ಸಹಿ/-

೧೩.೮.೨೦೦೮

(ಗಾಳಿ ಚನ್ನಪ್ಪ)

೨೨-ವಿದ್ಯಾಗಿರಿ,ಕ್ಲಬ್ ರಸ್ತೆ

ಬಳ್ಳಾರಿ-೩

**iv) ಪ್ರೀತಿಯ ನಾದಿನಿ ಚಿ ॥ ಪ್ರಮಿಳಾ ಷಣ್ಮುಖ ಸ್ವಾಮಿ : ಸ್ಮರಣೆ**

ಲಲಿತಾಂಬ ವೃಷಭೇಂದ್ರಸ್ವಾಮಿ ನಡೆದು ಬಂದ ದಾರಿಯ ಒಂದು ತುಣುಕು ನೋಟ ಮತ್ತು ಅವರ ಸ್ಮರಣೆ

ಮೇಣದ ಬತ್ತಿ ಹಚ್ಚಿದಾಗ ಅದರ ಬೆಳಕನ್ನು ಚೆಲ್ಲಿ ತನಗೆ ತಿಳಿಯದಂತೆ ಕರಗಿ, ಕರಗಿ ನೀರಾಗಿ ಹರಿದು ಕೊನೆಗೆ ನಂದಿ ಹೋಗುತ್ತದೆ. ಹಾಗೆಯೇ ಲಲಿತಾಂಬ ಲತೆಯಾಗಿ, ಹೂವಾಗಿ, ಕಾಯಾಗಿ, ಹಣ್ಣು, ಹಣ್ಣಾಗಿ ಕೊನೆಗೆ ಶಿವನ ಪಾದಸೇರಿದರು.

ನಮ್ಮ ಮಾವನವರಾದ ಲಿಂ॥ ಉಬ್ರಾಣಿ ಮಠದ ಶ್ರೀಕಂಠಶರ್ಮರು ಮಗಳ ಪ್ರತಿಭೆಯನ್ನು ಬಾಲ್ಯದಲ್ಲೇ ಗುರ್ತಿಸಿ, ಧೈರ್ಯ, ಪ್ರೋತ್ಸಾಹ ತುಂಬಿ ಓದಿಸಿ ಚಿಕ್ಕಮಗಳೂರು ಜಿಲ್ಲೆಗೆ ಪ್ರಥಮ ಮಹಿಳಾ ಪದವೀಧರೆ ಆಗುವಂತೆ ಮಾಡಿದರು. ಬಿ.ಎಡ್ ಮಾಡಿಸಿ, ಕಡೂರಲ್ಲಿ ಶಿಕ್ಷಕಿಯಾಗಿಸಿದರು. ಶಿಲ್ಪಿ ಒಂದು ಕಲ್ಲನ್ನು ಕೆತ್ತಿ

ಕಡೆದು ಸುಂದರ ಮೂರ್ತಿಯನ್ನು ಮಾಡಿದಂತೆ ನಮ್ಮ ಮಾವನವರು ದಿವಂಗತ ಶ್ರೀಕಂಠಶರ್ಮರು ತಮ್ಮ ಮಗಳಿಗೆ ವಿದ್ಯಾಬುದ್ಧಿಯನ್ನು ಕಲಿಸಿ ಒಳ್ಳೆ ಸುಸಂಸ್ಕೃತರನ್ನಾಗಿ ಮಾಡಿದ ಹೆಮ್ಮೆ ಅವರಿಗೆ ಸಲ್ಲಬೇಕು. ಹೆಣ್ಣು ಮಕ್ಕಳನ್ನು ಹೊರಗೆ ಕಳಿಸಿ ಓದಿಸದೆ ಇದ್ದ ಕಾಲದಲ್ಲಿ, ಓದಿಸಿ ಕನ್ನಡ, ಇಂಗ್ಲೀಷ್, ಹಿಂದಿ, ಸಂಸ್ಕೃತ ಚತುರ್ ಭಾಷೆಯಲ್ಲಿ ಪ್ರವೀಣೆಯಾಗಿಸಿದರು ಎಂದರೆ ತಪ್ಪಾಗಲಾರದು. ತಮ್ಮ ಕರ್ತವ್ಯದಂತೆ ಮಗಳಿಗೆ ಸರಿಸಮಾನರಾದ ವರನನ್ನು ಹುಡುಕಿ ಪ್ರೊಫೆಸರ್ ವೃಷಭೇಂದ್ರಸ್ವಾಮಿಯವರಿಗೆ ಕೊಟ್ಟು ಲಗ್ನ ಮಾಡಿದರು. ಲಲತಾಂಬರವರು ಸೊನ್ನದ ಮುರುಡಿ ಮಠದ ಸೊಸೆಯಾಗಿ, ಗೃಹಿಣಿಯಾಗಿ, ಕರ್ನಾಟಕ ವಿಶ್ವವಿದ್ಯಾನಿಲಯದ ಬಿ.ಎಡ್. ಕಾಲೇಜಿನಲ್ಲಿ ಶಿಕ್ಷಕಿಯಾಗಿ, ಸಾವಿರಾರು ವಿದ್ಯಾರ್ಥಿಗಳಿಗೆ ಗುರುವಾದರು. ಸದ್ಗುಣ ಸಂಪನ್ನನಾದ ಒಬ್ಬನೇ ಮಗನಿಗೆ ಜನ್ಮಕೊಟ್ಟು ದೊಡ್ಡ ವಿಜ್ಞಾನಿಯಾಗಿ ಮಾಡಿದರು. ಉಬ್ರಾಣಿಮಠದ ಮತ್ತು ಪತ್ರೆಯವರ ಕುಟುಂಬಕ್ಕೆ ಬೆಸಿಗೆ ಹಾಕಿ ಅನುಪಮಳನ್ನು ಸೊಸೆಯಾಗಿ ಮಾಡಿಕೊಂಡರು ಪ್ರೀತಿಯ ಪುತ್ಥಳಿ ಶರ್ವಾಣಿಗೆ ಅಜ್ಜಿಯಾದರು.

ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂಬ ನಾಣ್ನುಡಿಯನ್ನು ಸುಳ್ಳಾಗಿಸಿ ಲಲಿತಾಂಬ ತಂದೆಗೆ ಬಹಳಷ್ಟು ಜೀವನದಲ್ಲಿ ನೆರವಾದರು" ತಂಗಿಯರಿಗೆಲ್ಲಾ ವರಗಳನ್ನು ಹುಡುಕಿ ಲಗ್ನಕ್ಕೆ ನೆರವಾದರು.

ತಮ್ಮಂದಿರ ಮತ್ತು ಅವರ ಮಕ್ಕಳ ಭವಿಷ್ಯಕ್ಕೆ ಬಹಳಷ್ಟು ನೆರವಾದರು. ಅವರೆಲ್ಲರ ಏಳಿಗೆಗೆ ಅಕ್ಕಳಾಗಿ, ತಾಯಿಯಾಗಿ, ಗುರುವಾಗಿ ಮಾರ್ಗದರ್ಶನ ಮಾಡಿದರು. ಯಾರೇ ಬಂಧು–ಬಾಂಧವರು, ವಿದ್ಯಾರ್ಥಿಗಳು ಕಷ್ಟ ಎಂದು ಬೇಡಿ ಬಂದವರಿಗೆ ಸಹಾಯ ಮಾಡಿದರು. ಸಾಹಿತ್ಯ ಲೋಕಕ್ಕೆ ಅನೇಕ ಕೊಡುಗೆಗಳನ್ನು ಕೊಟ್ಟು, ಒಳ್ಳೆಯ ಲೇಖಕಿ ಅದರು. ಹೀಗೆ ತೆರೆಯ ಮರೆಯಲ್ಲಿ ಒಳ್ಳೆಯ ಕಾರ್ಯವನ್ನು ಮಾಡುತ್ತ ಬಹುರೂಪಿಯಾಗಿ ಉತ್ತುಂಗದ ಶಿಖರವನ್ನು ಏರಿ, ಚೇತನ ಮಯಿಯಾಗಿ ತುಂಬು ಜೀವನವನ್ನು ನಡೆಸಿದರು. ವಿಧಿಗೆ ಅವರ ಚೇತನವನ್ನು ನೋಡಿ ಸಹಿಸಲಾಗಲಿಲ್ಲವೇನೋ, ಕೊನೆಗೆ ವಾಸಿಯಾಗದ ಖಾಯಿಲೆಗೆ ಗುರಿಯಾಗಿ ನೊಂದು, ಬೆಂದು ಬಹಳಷ್ಟು ತಿಂಗಳುಗಳನ್ನೇ ನೋವಿನಲ್ಲಿ ಕಳೆದರು. ಕೊನೆಯ ಆಸೆಯಂತೆ ಮಗನನ್ನು ಡೆಲ್ಲಿಯಿಂದ ಬೆಂಗಳೂರಿನಲ್ಲಿ ವಾಸಿಸುವಂತೆ ಮಾಡಿ ಕೊನೆ ಉಸಿರೆಳೆದರು.

ನನ್ನ ಪ್ರೀತಿಯ ಅತ್ತಿಗೆಗೆ ಸಹಸ್ರ ನಮನಗಳು.

(ಪ್ರಮೀಳಾ ಸ್ವಾಮಿ)

೧೦.೮.೨೦೦೭

– ಶ್ರೀಮತಿ ಪ್ರಮೀಳಾ ಷಣ್ಮುಖಸ್ವಾಮಿ, ಬೀರೂರು

## v) ತಂಗಿ ಶ್ರೀಮತಿ ಸುಕನ್ಯಾ ಸದಾಶಿವ ಅವರ ಹಾರೈಕೆ : ವಜ್ರ ಮಹೋತ್ಸವ

ಗಿರಿಜಾ ಶ್ರೀಕಂಠಶರ್ಮರ ಪುತ್ರಿಯಾಗಿ ಬಂದೆ.
ಭಾರತ ಮಾತೆಯ ಹೆಮ್ಮೆಯ ಮಗಳಾದೆ.
ತವರಿಗೆ ಶ್ರೇಯಸ್ಸು ಬಯಸಿ ನೆರವಾದೆ,
ಸೊನ್ನದ ಮನೆತನದ ಸೊಸೆಯಾದೆ.
ಪತಿಗೆ ಸರಿಸಮಾನ ಸತಿಯಾದೆ.
ಕೊಟ್ಟ ಮನೆ ಹುಟ್ಟಿದ ಮನೆ ಎರಡಕ್ಕೂ
ಹೆಮ್ಮೆ ಪಡುವಂಥ ಹೆಸರಾದೆ.
ನೀನು ನಿಷ್ಠುರ ನುಡಿ ನುಡಿದು ದಾರಿತೋರಿದೆ.
ಇದ ಅರಿತು ನಡೆದವರು
ಬದುಕಿನಲಿ ನಲಿದು ಬಾಳುತಿಹರು.
ನಿನ್ನ ಬಳಗ ಅಪಾರ, ನೀನು ಸ್ನೇಹಮಯಿ.
ಎಪ್ಪತ್ತೈದು ಸಂವತ್ಸರಗಳಲಿ ಕಂಡುದೆಷ್ಟೋ?
ಅಲ್ಲಿಹ ಮಿತ್ರ ಶತೃಗಳೆಷ್ಟೋ?
ನೋವು ನಲಿವು ಸುಖ ದುಃಖ ಮಾನ ಅಪಮಾನ
ಸಹನೆ ಅಸಹನೆ ಧೈರ್ಯ ಅಧೈರ್ಯಗಳೆಷ್ಟೋ?
ನೀನು ಬರೆದ ಕಥೆ ಕವನಗಳೆಷ್ಟೋ?
ಇದ ಓದಿ ಕಥೆ ಕವನಗಳು ಬರೆದರು ಹಲವರು
ಕೋಗಿಲೆ ಹಾಡುತ್ತದೆಂದು ಕಾಗೆ ಹಾಡಲಾದೀತೆ?
ಆದರೂ ಮೆಟ್ಟನಿಂತೆ ದಿಟ್ಟೆಯಾಗಿ.
ಭದ್ರತೆಯು ನೀನಾದೆ ಲಲಿತಾಸಹಸ್ರನಾಮದೊಲು.
ಸರ್ವರ ನೋವು ನಲಿವಿಗೆ ಅಪದ್ಬಂಧುವಾದೆ.
ಸರ್ವರ ಶ್ರೇಯಸ್ಸು ಬಯಸಿದೆ ಬದುಕಲು ನೆರವಾದೆ.
ನಿಮ್ಮದು ಮಧುರ ದಾಂಪತ್ಯ
ಅದರ ಫಲ 'ಶಿವಪ್ರಸಾದ'
ಅವನಿಂದು ಹೆಮ್ಮೆಯ ವಿಜ್ಞಾನಿ
'ಶಿವಪ್ರಸಾದ'ನ ಸಂಗಾತಿ
ಮನೆ ಬೆಳಗಲೆಂದು ಬಂದವನ ಸತಿ 'ಅನುಪಮ'
ಮನೆ ಮನ ಬೆಳಗುವ ನಂದಾದೀಪ
ಅವರ ಪ್ರೀತಿಯ ಪುತ್ಥಳಿ ಪುತ್ರಿ 'ಶರ್ವಾಣಿ'.

ನಿನ್ನ ತನು ಮನ ಧನ ಸಂತೋಷ ಸಂಭ್ರಮ ಶರ್ವಾಣಿ.
ನಿನ್ನ ಮನೆಯ ಕಲಶ ಶರ್ವಾಣಿ.
ಚಿಕ್ಕ-ಚೊಕ್ಕ ಸುಂದರ ಸಂಸಾರ ನಿನ್ನದಕ್ಕ.
ಅದರ ಕೀರ್ತಿ ಅನುಪಮ ಅಪಾರ.
ಇಂದು ನಿನ್ನ ವಜ್ರಮಹೋತ್ಸವ
ಎಲ್ಲ ಕೂಡಿಹರಿಲ್ಲಿ ಸಂಭ್ರಮದಿ
ನನ್ನದಿದು ಶುಭ ಹಾರೈಕೆ ಶತವರ್ಷ ನೆಮ್ಮದಿಯ ಬಾಳು
ಬಾಳೆಂದು.

ಸೋದರಿ

೨೩-೮-೨೦೦೫ ಸುಕನ್ಯ ಸದಾಶಿವ

### vi) ಶ್ರೀ.ಜಿ. ನಾರಾಯಣ ಮತ್ತು ಲಲಿತಾಂಬಾ ಪತ್ರ ವ್ಯವಹಾರ

ಹಿರಿಯರಾದ ಮಾನ್ಯ ಜಿ. ನಾರಾಯಣ ಅವರಿಗೆ ವಂದನೆಗಳು ತಮ್ಮಪತ್ರ ಬಂದಿದೆ. ತಮ್ಮ ಮೇಲೆ ನಾನು ಕೋಪಗೊಳ್ಳುವುದೇ! ಹಾಗೇನಿಲ್ಲ. ನನ್ನ ಲೇಖನ ನಿಮ್ಮ ದೃಷ್ಟಿಯಲ್ಲಿ ಪ್ರಕಟನೆಗೆ ಯೋಗ್ಯವೆ ಎಂದು ತಿಳಿದುಕೊಳ್ಳುವ ಆಸೆಯಿಂದ ಬರೆದೆ ಅಷ್ಟೆ. ನಮ್ಮ ಲೇಖನಗಳು ನಮಗೆ ಚೆನ್ನಾಗಿವೆ ಎನ್ನಿಸುವುದು ಸಹಜವಲ್ಲವೆ? 'ಹೆತ್ತವರಿಗೆ ಹೆಗ್ಗಣ ಮುದ್ದು' ಎಂಬ ಗಾದೆಯ ಮಾತಿನಂತ ನಾವು ಬರೆದ (ಹೆತ್ತ)ಲೇಖನ ನಮಗೆ 'ಚಂದ' ಎನ್ನಿಸುತ್ತದೆ. ಆದರೆ ಬೇರೆಯವರಿಗೆ ಅದಿರುವ ಸ್ವರೂಪದಲ್ಲೇ ಕಾಣಿಸುತ್ತದೆ.

ಸಂಪಾದಕರ ಕಷ್ಟಗಳೆಲ್ಲಾ ನನಗೆ ಗೊತ್ತು; ಅದರಲ್ಲಿ ನಾನು ಕೆಲವು ಲೇಖನಗಳನ್ನು ಓದಿದಾಗ ನೀವು ಹೇಳಿದಂತೆ 'ಹಾಸ್ಯ: ಎಲ್ಲಿದೆ ಎಂದು ಹುಡುಕಾಡಬೇಕಾಗಿತ್ತು. ಅಥವಾ ಆ ಲೇಖನಗಳನ್ನು ನಾನು ಹೆತ್ತವಾಗಿದುದರಿಂದ ಹಾಗೆ ಕಾಣಿಸಿದವೋ ತಿಳಿಯದು. ನನ್ನ ಲೇನಗಳಲ್ಲಿ ಪೂರ್ಣ ಹಾಸ್ಯವಿರುವುದಿಲ್ಲ. ವ್ಯಕ್ತಿಯಲ್ಲಿರುವ ಅಥವಾ ಸಮಾಜದಲ್ಲಿರುವ ದೋಷಗಳನ್ನು ಹಾಸ್ಯವೆನಿಸುವ ರೂಪದಲ್ಲಿ ತೋರಿಸುವುದು ಅದನ್ನು ಓದಿದ ಅಂತಹವರಿಗೆ, ಸ್ವಲ್ಪ ಅಳುಕೂ ಆಗಬೇಕು ಎನ್ನವುದು ಉದ್ದೇಶವಷ್ಟೆ. ಅಲ್ಲಿ ನವುರಾದ ಹಾಸ್ಯವಾಗುತ್ತದೆ ಅಷ್ಟೆ 'ಸವೆದ ಯಂತ್ರ' ಎಂಬ ಕವನ (ಹಿಂದೆ ಕಳುಹಿಸಿದ್ದು)ದಲ್ಲಿ ಹಾಸ್ಯವಷ್ಟೇ ಪ್ರಾಮುಖ್ಯವಾಗಿತ್ತು ಬೇರು ಅಷ್ಟೆ. ಇರಲಿ, ನನಗೆ ಪ್ರಕಟವಾಗೇ ತೀರಬೇಕೆಂಬ ಹಠವೇನಿಲ್ಲ. ಹೇಗೆ ಸಾಧ್ಯವೇ ಇಲ್ಲದ ಈ ಕಾಲದಲ್ಲಿ 'ಬರಹದಲ್ಲಿ ತರುವುದು ಹೇಗೆ ಸಾಧ್ಯ? ಹಾಸ್ಯ ಹೋಗಿ ವಿಡಂಬನವಾಗಬಹುದು; ವ್ಯಂಗ್ಯವಾಗಬಹುದು

ಅಥವಾ ಟೀಕೆಯೇ ಆಗಬಹುದು. ಇರಲಿ,

ನನ್ನ Bio- dataವನ್ನು ಎರಡು ಸಾರಿ ಕಳಿಸಿದ್ದೇನೆ ಅಂದರೂ ನಿಮ್ಮ ದೃಷ್ಟಿಗೆ ಅದು ಬಾರದಿದ್ದಲ್ಲಿ ತಿಳಿಸಿದರೆ ಕೊರಿಯರ್‌ನಲ್ಲಿ ಕಳಿಸುವೆ. 'ವಿನೋದ'ದ ಬರಹಗಾರ್ತಿ ಎಂಬುದು ಹೆಮ್ಮೆಯ ವಿಷಯವಲ್ಲವೆ? ತಮ್ಮ ಆರೋಗ್ಯ ಉತ್ತಮಗೊಂಡಿದೆಯೆಂದು ಭಾವಿಸಿರುವೆ. ಉತ್ತಮಗೊಳ್ಳಲಿ ಎಂದು ಹಾರೈಸುವೆ; ತಮ್ಮಂತಹ ಸರಳ ಸಜ್ಜನಿಕೆಯ ಜನ ಬಹಳಷ್ಟು ಕಾಲ, ಕಿರಿಯಪೀಳಿಗೆಗೆ ಉದಾಹರಣೆಯಾಗಿ ಕಾಣುತ್ತಿರಬೇಕು ವಂದನೆಗಳು.

ತಮ್ಮ ಆಶೀರ್ವಾದಾಕಾಂಕ್ಷಿ
ಲಲಿತಾಂಬ ವೃಷಭೇಂದ್ರಸ್ವಾಮಿ

**vii) ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ ಅವರಿಗೆ ವಂದನೆಗಳು,**

ತಾವು ಕ್ಷೇಮವೆಂದು ಭಾವಿಸಿದ್ದೇವೆ. ಸಿಟ್ಟು ಮಾಡಿಕೊಂಡು ತಾವು ಬರೆದ ಪತ್ರ (೨೬-೩-೨೦೦೨) ಸೇರಿತು. ವಿನೋದ ಕೇವಲ ೩೨ ಪುಟದ ಸಣ್ಣ ಮಾಸಪತ್ರಿಕೆ. ಒಂದು ಸಂಚಿಕೆಗೆ ೧೦-೧೨ ಲೇಖನ ಬೇಕಾಗುತ್ತವೆ. ೨೦-೨೫ ಲೇಖನಗಳು ಬರುತ್ತವೆ. ಕೆಲವರು ಹೊಸಬರು, ಕೆಲವರು ಹಳಬರು ಬರೆದು ಕಳುಹಿಸುತ್ತಾರೆ. ಕೆಲವರು ೫-೬ ಪುಟಗಳು ಬರೆಯುತ್ತಾರೆ. ಅವುಗಳಲ್ಲಿ ಹಾಸ್ಯ ಎಲ್ಲಿದೆ ಎಂಬುದನ್ನು ಹುಡುಕಬೇಕಾಗುತ್ತದೆ. ಹೀಗೆ ಲೇಖನ ಆಯ್ಕೆಮಾಡುವುದರಲ್ಲಿ ನಾನಾ ಸಮಸ್ಯೆಗಳಿರುತ್ತವೆ. ಕೆಲವು ಸಂದರ್ಭಗಳಲ್ಲಿ ಒಳ್ಳೆಯ ಲೇಖನವಾಗಿದ್ದರೂ ಸ್ಥಳಾಭಾವದಿಂದ ತಡವಾಗಿ ಪ್ರಕಟವಾಗುತ್ತವೆ. ಕೆಲವು ಸಂದರ್ಭದಲ್ಲಿ ಪ್ರಕಟವಾಗದೆ ಹೋಗುಬಹುದು. ಆ ಕಾರಣದಿಂದ ಲೇಖಕರು ತಮ್ಮ ಲೇಖನದ ಮತ್ತೊಂದು ಪ್ರತಿಯನ್ನು ತಯಾರು ಮಾಡಿಟ್ಟುಕೊಳ್ಳಬೇಕಾಗುತ್ತದೆ. ಇಂಥ ನಾನಾ ಸಮಸ್ಯೆಗಳು ಸಂಪಾದಕನಿಗಿರುತ್ತವೆ. ಆದ್ದರಿಂದ ಸಂಪಾದಕರ ಸಮಸ್ಯೆಗಳನ್ನು ತಾವು ಅರಿತುಕೊಂಡು ಸಹಕರಿಸಬೇಕಾಗಿ ಕೋರುತ್ತೇನೆ.
ನನ್ನ ಆರೋಗ್ಯ ಸರಿಯಿಲ್ಲದಿರುವುದರಿಂದ ತಮ್ಮ ವ್ಯಕ್ತಿ ಮಾಹಿತಿಯನ್ನು ನಾನಿನ್ನು ನೋಡಿಲ್ಲ. ಅದು ನನ್ನ ಕಣ್ಣಿಗೆ ಬೀಳದಿದ್ದರೆ ಪುನಃ ತಮಗೆ ಪತ್ರ ಬರೆದು ಅದನ್ನು ತರಿಸಿಕೊಂಡು ಲೇಖಕರ ಪರಿಚಯ ಗ್ರಂಥದಲ್ಲಿ ಖಂಡಿತ ಪ್ರಕಟಿಸಲಾಗುವುದು. ತಾವು ಎಲ್ಲ ಬಲ್ಲವರು, ದಯವಿಟ್ಟು ಬೇಸರಪಟ್ಟುಕೊಳ್ಳಬಾರದಾಗಿ ವಿನಂತಿ ಮಾಡಿಕೊಳ್ಳುತ್ತೇನೆ. ಪ್ರೊ ವೃಷಭೇಂದ್ರಸ್ವಾಮಿ ಅವರಿಗೆ ದಯವಿಟ್ಟು ನನ್ನ ನಮಸ್ಕಾರ ತಿಳಿಸಿ.
ವಂದನೆಗಳು,

ತಮ್ಮ ವಿಶ್ವಾಸಿ
ಜಿ. ನಾರಾಯಣ
ಸಂಪಾದಕ 'ವಿನೋದ'
ಬೆಂಗಳೂರು

viii) ಡಾ ॥ ಆರ್.ಸಿ.ಹಿರೇಮಠ. ಕುಲಪತಿಗಳು ಕ.ವಿ.ವಿ. ಧಾರವಾಡ, ಸಿದ್ಧಾರೂಢ, ಇವರ ಪತ್ರ

ಆತ್ಮೀಯರಾದ ಡಾ. ಎಸ್.ಎಮ್. ವೃಷಭೇಂದ್ರಸ್ವಾಮಿ ಹಾಗೂ
ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿಯರಲ್ಲಿ ವಂದನೆಗಳು.

ಈ ಕಾಗದ ತಂದ ವೇ. ಮೂ. ಬಸವಯ್ಯ ಶಾಸ್ತ್ರಿಗಳು ನನ್ನ ತಮ್ಮ. ಇವರು ಗದುಗಿನಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಕಾರ್ಯನಿರ್ವಹಿಸಿ ನಿವೃತ್ತರಾಗಿ ಗದುಗಿನಲ್ಲಿ ನೆಲೆಸಿ ಸಾರ್ವಜನಿಕ ಸೇವಾಕಾರ್ಯದಲ್ಲಿ ನಿರತರಾಗಿರುವರು. ೬–೭ ವರ್ಷಗಳ ಹಿಂದೆ ಇವರು ಒಂದು ಸೊಸಾಯಿಟಿ ಸ್ಥಾಪಿಸಿ ಮಹಿಳಾ ಬಿ.ಎಡ್. ಕಾಲೇಜು ಪ್ರಾರಂಭಿಸಬೇಕೆಂದು ವಿಶ್ವವಿದ್ಯಾಲಯಕ್ಕೆ ಅರ್ಜಿಸಲ್ಲಿಸಿದ್ದರು ವಿಶ್ವವಿದ್ಯಾಲಯ ಶಿಫಾರಸು ಮಾಡಿದ್ದರೂ ಸರಕಾರ ಆಗ ಅನುಮತಿ ನೀಡಿರಲಿಲ್ಲ. ಆದರೆ ಅನಂತರದ ೮–೧೦ ಕಾಲೇಜಿಗೆ ಅನುಮತಿ ಕೊಟ್ಟಿದ್ದರು. ಈ ಆಧಾರದ ಮೇಲೆ ಇವರು ಹೈಕೋರ್ಟಿಗೆ ಹೋಗಿ ಈಗ ನ್ಯಾಯಗೆದ್ದುಕೊಂಡು ಬಂದಿದ್ದಾರೆ, ಈಗ ವಿಶ್ವವಿದ್ಯಾಲಯದ ಮತ್ತೆ L.I.C. ಕಳಿಸಿ ವರದಿ ಪಡೆದು ಸರಕಾರಕ್ಕೆ ಕಳಿಸಬೇಕಾಗುತ್ತದೆ. ಅನುಮತಿ ನೀಡಲೇಬೇಕೆಂದು ಹೈಕೋರ್ಟಿನ ಆದೇಶವಿದೆ. ಹೀಗಾಗಿ ಈ ಕಾಲೇಜು ಈ ಜಿಲ್ಲಾದಲ್ಲಿ ಆರಂಭವಾಗಲೇ ಬೇಕು.

ಅದಕ್ಕೆ ಒಬ್ಬ ಮಹಿಳೆಯರನ್ನೇ ಪ್ರಿನ್ಸಿಪಾಲರನ್ನಾಗಿ ನಿಯಮಿಸಬೇಕೆಂದೂ ಅದಕ್ಕೆ ಅವರನ್ನು ನಿಮ್ಮ ಕಡೆಗೆ ಕಳಿಸಿದ್ದೇನೆ. ನಿಮಗೆ ಸ್ವಲ್ಪ ತೊಂದರೆಯಾಗಬಹುದೇನೋ ಆದರೆ ಒಂದು ಮಹಿಳಾ ಬಿ.ಎಡ್ ಕಾಲೇಜು ನಿಮ್ಮಿಂದ ಆರಂಭವಾಯಿತೆಂಬ ಸಂಗತಿ ಇತಿಹಾಸವಾಗುತ್ತದೆ. ಕಾರಣ ವಿಚಾರಿಸಿ ಒಪ್ಪಿಗೆ ನೀಡಬೇಕಾಗಿ ಬಿನ್ನಹ.

ಇಂತು ನಿಮ್ಮ
ಆರ್. ಸಿ. ಹಿರೇಮಠ
ಧಾರವಾಡ

[ನಿವೃತ್ತಿಯ ನಂತರ ಈ ಬೇಡಿಕೆ ಒಪ್ಪಿಕೊಳ್ಳಲಾರದ ಆರೋಗ್ಯದ ಅಸಹಾಯಕತೆ ತಿಳಿಸಿ, ಬೇಡವೆಂದು ತಿಳಿಸಿದರು.]

ix) ಏಕ ಮಾತ್ರ ಪುತ್ರನ ಮದುವೆಯ ಕರೆಯೋಲೆ

You are cordiallyy invited for the
Marriage of our son

**SHIVA PRASAD**
with
**ANUPAMA**

(Daughter of Smt & Sri Patre Sadashivan, Birur)
at Patre Channaveerappaiah Kalyana Mandira,
Birur - 277 1163
and

**Reception at 6.30 P.M**

**Smt. Lalithamba**
**Sri. Vrushabhendra Swamy**

Reception at **'Shivaprasad'** Kalyana Nagar,
Dharwad-580 007.
on Sunday, April 19, 1997 at 6.30 P.M

**x) ಕುವೆಂಪು ಅವರ ಮಗಳು, ಶ್ರೀಮತಿ ತಾರಿಣಿ ಚಿದಾನಂದಗೌಡ ಅವರ ಪತ್ರ**

ಹಿರಿಯರಾದ ಸನ್ಮಾನ್ಯ ವೃಷಭೇಂದ್ರಸ್ವಾಮಿ ಮತ್ತು ಮಾ॥ ಶ್ರೀ ಲಲಿತಾಂಬ ಅವರಿಗೆ–ನಮಸ್ಕಾರಗಳು

ನಿಮ್ಮೆಲ್ಲರಿಗೂ ಯುಗಾದಿಯ ಶುಭಾಶಯಗಳು. ನಿಮ್ಮ ಪತ್ರ ತಲುಪಿತು. ನೋಡಿ ತುಂಬಾ ಸಂತೋಷವಾಯಿತು. ನನ್ನ ಬರವಣಿಗೆ ಕುರಿತು ಒಳ್ಳೆಯ ಮಾತುಗಳನ್ನು ಬರೆದಿರುವಿರಿ, ಎಲ್ಲವೂ ಶ್ರೀ ಕುವೆಂಪು ಅನುಗ್ರಹ ಎಂದು ತಿಳಿದಿರುವೆನು. ತಂದೆಯವರನ್ನು ಅರ್ಥಮಾಡಿಕೊಳ್ಳಲು ಈ ಪುಸ್ತಕ ನೆರವಾದರೆ ಅದೇ ನನಗೆ ಸಂತೋಷ.

ಅನೇಕ ಜನ ಹಿತೈಷಿಗಳು "ಮಗಳು ಕಂಡ ಹೇಮಾವತಿ ಕುವೆಂಪು" ಪುಸ್ತಕದ ಮೂಲಕ ನಮ್ಮ ತಾಯಿಯವರ ಪರಿಚಯ ಕನ್ನಡಿಗರಿಗೆ ಮಾಡಿಕೊಡಬೇಕೆಂದು ಸೂಚಿಸಿದ್ದಾರೆ. ಇದನ್ನು ಬರೆಯಲು ಅವಶ್ಯಕವಾದ ಮಾಹಿತಿಗಳನ್ನು ಕಲೆಹಾಕುತ್ತಿರುವೆನು.

ನಿಮ್ಮ ಪತ್ರದ ಸ್ಫೂರ್ತಿ, 'ಲಲಿತಾಂಬಾ' ಬರಹ ನನ್ನದು–ಎಂದು ಬರೆದಿರುವಿರಿ,

ಹಿರಿಯಕ್ಕ ಲಲಿತಾಂಬ ಅವರಿಗೆ ದೇವರು ಮಂಗಳವನ್ನುಂಟು ಮಾಡಲಿ ಧಾರವಾಡಕ್ಕೆ ಬಂದಾಗ ತಮ್ಮನ್ನು ಭೇಟಿಯಾಗುತ್ತೇವೆ.

ಇನ್ನೊಮ್ಮೆ ಯುಗಾದಿಯ ಶುಭಾಶಯಗಳೊಂದಿಗೆ

ಇಂತಿ
ತಾರಿಣಿ ಚಿದಾನಂದ

ಮಾವಿನ ಬೇವಿನ ತೋರಣ ಕಟ್ಟು
ಬೇವು ಬೆಲ್ಲಗಳನೊಟ್ಟಿಗೆ ಕುಟ್ಟು
ಜೀವನವೆಲ್ಲಾ ಬೇವೂಬೆಲ್ಲ
ಎರಡೂ ಸವಿವನೆ ಕಲಿಮಲ್ಲ. – ಕುವೆಂಪು

**xi) ಕರ್ನಾಟಕದ ಮಹಿಳೆಯರು** : ಆಧುನಿಕ ಕನ್ನಡ ಲೇಖಕಿಯರು ಪ್ರ: ಎನ್.ಎಂ.ಕೆ. ಆರ್. ವಿ. ಮಹಿಳಾ ಕಾಲೇಜು, ಜಯನಗರ, ಬೆಂಗಳೂರು – ೫೬೦ ೦೧೧. ೧೯೯೩.

೧೮೬. ಪ್ರೊ. ಲಲಿತಾಂಬ ಯು.ಎಸ್.
'ಶಿವಪ್ರಸಾದ', ಕಲ್ಯಾಣನಗರ, ೮ನೆಯ ತಿರುವು,
ಧಾರವಾಡ – ೫೮೦ ೦೦೭

ಚಿಕ್ಕಮಗಳೂರು ಜಿಲ್ಲೆಯ ಬೀರೂರಿನಲ್ಲಿ ಇವರು ೨೩–೮–೧೯೩೦ ರಂದು ಜನಿಸಿದರು. ಎಂ.ಎಡ್., ಡಿ.ಟಿ.ಇ ಪದವೀಧರರು. ಧಾರವಾಡ ಕರ್ನಾಟಕ ವಿಶ್ವವಿದ್ಯಾನಿಲಯದ ನಿವೃತ್ತ ಪ್ರವಾಚಕರಿವರು. 'ಶ್ರೀಮತಿ ಲಲಿತಾಂಬ ವೃಷಭೇಂದ್ರ ಸ್ವಾಮಿ' ಎಂಬ ಕಾವ್ಯನಾಮದಿಂದ ಪ್ರಜಾವಾಣಿ, ಪ್ರಜಾಮತ, ಮಯೂರ, ಕರ್ಮವೀರ ಮುಂತಾದ ನಾಡಿನ ಜನಪ್ರಿಯ ಪತ್ರಿಕೆಗಳಲ್ಲಿ ಇವರ ಲೇಖನಗಳು ಕಂಡುಬರುತ್ತಿವೆ. ವಿನೋದ ಪತ್ರಿಕೆಯಲ್ಲಿಯೂ ಕೆಲವು ಲೇಖನಗಳು ಪ್ರಕಟಗೊಂಡಿವೆ. ಇವರು ಸುಮಾರು ೧೦ ಪುಸ್ತಕಗಳನ್ನು ಹೊರತಂದಿದ್ದಾರೆ. ಉತ್ತರ ಕರ್ನಾಟಕದ ಆಕಾಶವಾಣಿಯಲ್ಲಿ ಭಾಷಣ, ಚಿಂತನ ಮುಂತಾದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ. ಸುಮಾರು ೧೨ ಸಂಪಾದಿತ ಗ್ರಂಥಗಳಿಗೆ ಪ್ರಬುದ್ಧ ಲೇಖನಗಳನ್ನು ಬರೆದಿದ್ದಾರೆ. ಪ್ರಕಾಶನಕ್ಕೆ ಅಣಿಯಾಗಿರುವ ಎಂಟು ಪುಸ್ತಕಗಳಲ್ಲಿ ಇವರ ಉತ್ತಮ ವಿಚಾರ ಲಹರಿಯ ಲೇಖನಗಳು ಸೇರ್ಪಡೆಯಾಗಿವೆ. 'ಪ್ರಸಾದ ಪ್ರಕಾಶನ'ದ ಸಂಸ್ಥಾಪಕಿಯಾಗಿ ಕನ್ನಡ ಸಾಹಿತ್ಯ ಸಂವರ್ಧನೆಗೆ ಕಾರಣರಾಗಿದ್ದಾರೆ. ವಿವಿಧ ಸಂಸ್ಥೆಗಳಲ್ಲಿ ದಾನ ದತ್ತಿ ಕೊಡುಗೆಗಾಗಿ ಇಡುಗಂಟನ್ನು ಇಟ್ಟಿದ್ದಾರೆ.

["ವಿನೋದ – ವಿಶೇಷ ಸಂಚಿಕೆ – ಸಂ. ಶ್ರೀ. ಜಿ. ನಾರಾಯಣ, ಬೆಂಗಳೂರು

## ಸ್ಮರಣಾಂಜಲಿ

### ಲಲಿತವಹ ಲಲಿತಾಂಬಾ

ಲಲಿತವಹ ಕನ್ನಡದಿ
ಲಲಿತಾಂಬ ಕಟ್ಟಿದಿರಿ
ಸುಲಲಿತದ ಕಥೆಗಳನು
ಸುಲಭದಲಿ ನೀವು

ಮಕ್ಕಳಿಗೆ ಮಾರ್ಗದರ್ಶಕವಾದೆ ಮನಬುಗುವ
ಪತ್ರ ಲೇಖನ ಮಾಲೆ ಪೋಣಿಸಿದಿರಿ

ಸರ್ವಜನ ಶಾಲೆಯಲಿ ಸಹ ಶಿಕ್ಷಕಿಯು ಆಗಿ
ಸಾರ್ಥಕದ ಸೇವೆಯನು ಸಲ್ಲಿಸಿದಿರಿ
ವಿಶ್ವವಿದ್ಯಾಲಯದ ಶಿಕ್ಷಣ ಮಹಾವಿದ್ಯಾಲಯದ
ಶಿಕ್ಷಣವ ನೀಡಿದಿರಿ ಶಿಕ್ಷಕರಿಗೆ

ವೃಶಭ ನಾಮದ ಬಸವ ಸ್ವಾಮಿಗಳ ಕೈಹಿಡಿದು
ನಡೆಸಿದಿರಿ ಜೋಕೆಯಲಿ ತೂಕ ತಪ್ಪದಲೆ

ಶಿವ ಪ್ರಸಾದವ ನೀಡಿ ಸಂತೋಷ ಪಡಿಸಿದಿರಿ
ಬಂಧು ಬಳಗಕ್ಕೆಲ್ಲ ವಂದನೆ ತಂದು

ಇಂದು ಎಪ್ಪತ್ತು ಆರಕ್ಕೈವತ್ತು ಕೂಡಿಸಾಕ
ನೂರ ಇಪ್ಪತ್ತೈದು ನಿಮಗಾಗಲಿ
ಹಾರೈಸುವೆನು ನಾನು ಎದುರು ಮನೆ ಸುಬ್ರಾಯ
ಶುಭವ ಕೋರುತ ನಿಮಗೆ ಸೌಭಾಗ್ಯವ

ಎಸ್. ಬಿ. ನಾಯಕ.

■

ಪ್ರೊ. ಯು. ಎಸ್. ಲಲಿತಾಂಬ
ವೃಷಭೇಂದ್ರಸ್ವಾಮಿ
ಜನನ : 23-8-1930 ಲಿಂಗೈಕ್ಯ : 13-8-2007

॥ ಶ್ರೀ ಕೊಟ್ಟೂರು ಗುರುಬಸವೇಶ್ವರಾಯ ನಮಃ ॥

ಆತ್ಮೀಯರೇ,

**ಪ್ರೊ. (ಶ್ರೀಮತಿ) ಯು. ಎಸ್. ಲಲಿತಾಂಬ ವೃಷಭೇಂದ್ರಸ್ವಾಮಿ**

ವಿಶ್ರಾಂತ ಪ್ರವಾಚಕರು, ಕ. ವಿ. ವಿ. ಶಿಕ್ಷಣ ಮಹಾವಿದ್ಯಾಲಯ, ಧಾರವಾಡ
ಇವರು ದಿ. 13-8-2007ರಂದು ಸ್ವಗೃಹದಲ್ಲಿ ಲಿಂಗೈಕ್ಯರಾದ ಪ್ರಯುಕ್ತ ಅವರ

# ಪುಣ್ಯಸ್ಮರಣೋತ್ಸವವನ್ನು

**ಶ್ರೀ. ನಿ. ಪ್ರ. ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು**

ಶ್ರೀ ತೋಂಟದಾರ್ಯ ಮಠ, ಡಂಬಳ – ಗದಗ ಇವರ ಸನ್ನಿಧಿಯಲ್ಲಿ
ಭಾನುವಾರ, ದಿ. 2-9-2007ರಂದು ಬೆಳಿಗ್ಗೆ 10 ಗಂಟೆಗೆ ಧಾರವಾಡದ ಸ್ವಗೃಹದಲ್ಲಿ ನೆರವೇರಿಸುತ್ತೇವೆ.
ತಾವು ಕುಟುಂಬ ಸಮೇತ ಬನ್ನಿರಿ.

ಡಾ. ಎಸ್. ಎಂ. ವೃಷಭೇಂದ್ರಸ್ವಾಮಿ
ಡಾ. ಎಸ್. ಎಂ. ಶಿವಪ್ರಸಾದ
ಶ್ರೀಮತಿ ಅನುಪಮಾ ಕು. ಶರ್ವಾಣಿ,
ಉಬ್ರಾಣಿಮಠ ಬೀರೂರು,
ಸೊನ್ನದ ಮುರುಡಿಮಠ ಎಂ.ಬಿ.ಅಯ್ಯನ ಹಳ್ಳಿ
ಮತ್ತು ಪತ್ರೆ ಬಂಧುಗಳು, ಬೀರೂರು

ಮನೆ ವಿಳಾಸ
'ಶಿವಪ್ರಸಾದ'
8ನೆಯ ಕ್ರಾಸ್, ಕಲ್ಯಾಣ ನಗರ, ಧಾರವಾಡ-7
ಫೋನ : (0836) 2448570
ಮೊಬೈಲ್ : 9880552352, 9900606963

## ಅನುಬಂಧ – iii

# ಶ್ರದ್ಧಾಂಜಲಿ

[ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ. ಅವರ ಪುಣ್ಯ ಸ್ಮರಣೋತ್ಸವ]

೨-೯-೨೦೦೭

ಧಾರವಾಡ

(ಈ ಸಂದರ್ಭದಲ್ಲಿ ಬಂದ ಶ್ರದ್ಧಾಂಜಲಿ ಪತ್ರ ಸಮೂಹ)

ಶ್ರದ್ಧಾಂಜಲಿ

ಜನನ : ೨೩.೮.೧೯೩೦ ಲಿಂಗೈಕ್ಯ : ೧೩. ೮. ೨೦೦೭

ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ

ದಿವ್ಯಸಾನಿಧ್ಯ :

ನಿ.ಜ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಡಂಬಳ – ಗದಗ

ವಚನ ಸಂಗೀತ : ಜಂಗಮಶೆಟ್ಟಿ ಸಹೋದರಿಯರು

ದಿ. ೨-೯-೨೦೦೭ ಭಾನುವಾರ ಸಮಯ ೧೦-೦೦- ಗಂಟೆ

ಸ್ಥಳ : ಸಮುದಾಯ ಭವನ – ಕಲ್ಯಾಣನಗರ,

೫ನೇ ಅಡ್ಡ ರಸ್ತೆ ಧಾರವಾಡ – ೭

ಸ್ಮರಣೆ, ಸಂಗೀತ ಹಾಗೂ ಪ್ರಸಾದಕ್ಕೆ ಎಲ್ಲರಿಗೂ ಸ್ವಾಗತ

ದೂರವಾಣಿ : ೨೪೪೮೫೭೦ – ೦ – ೯೮೮೦೫೫೨೩೫೨

–ಬಂಧು ಮಿತ್ರರು

ಸಂಪಾದಕರು

ಶಾಂತಾ ಇಮ್ರಾಪುರ



೮೦. ಶ್ರೀಮತಿ ಲಲಿತಾಂಬ ಅವರ ಪುಣ್ಯಸ್ಮರಣೀಯ ಶ್ರದ್ಧಾಂಜಲಿ ಸಮಾವೇಶದಲ್ಲಿ ಶ್ರೀ ತೋಂಟದಾರ್ಯ ಜಗದ್ಗುರುಗಳ ಸಾನಿಧ್ಯ ಅಧ್ಯಕ್ಷತೆ ಶ್ರೀಮತಿ ಪತ್ರೆ ಶೈಲಜಾ ಸದಾಶಿವ



ಶ್ರದ್ಧಾಂಜಲಿ ಸಮಾವೇಶದಲ್ಲಿ ಡಾ. ಶಿವಪ್ರಸಾದ ಡಾ. ಶಿವಪ್ರಕಾಶ್,
ಶ್ರೀ ಎಸ್.ಎಂ. ಆನಂದ ಹಾಗೂ ಮುಂತಾದ ಬಂಧು ಮಿತ್ರರು



ಶ್ರದ್ಧಾಂಜಲಿ ಸಮಾವೇಶದಲ್ಲಿ ಭಾಗವಹಿಸಿದ ಶ್ರೀ ಪತ್ರೆ ಸದಾಶಿವನ್
ಶ್ರೀ ರಾಜಣ್ಣ ಶ್ರೀ ವ್ಹಿ.ಆರ್. ಮಾಳೇಕೊಪ್ಪಮಠ ಮುಂತಾದ ಗಣ್ಯರು
ಹಾಗೂ ಅಭಿಮಾನಿಗಳು



ಶ್ರದ್ಧಾಂಜಲಿ ಸಮಾವೇಶದಲ್ಲಿ ಪೂಜ್ಯ ಜಗದ್ಗುರು ತೋಂಟದಾರ್ಯ ಶ್ರೀಗಳಿಂದ ಪುಷ್ಪಾರ್ಪಣೆ ಡಾ. ಶಿವಪ್ರಸಾದ, ಶ್ರೀಮತಿ ಅನುಪಮಾ ಶಿವಪ್ರಸಾದ ಹಾಗೂ ಶ್ರೀಮತಿ ಸ್ವರ್ಣಲತಾ ವಸಂತ



ಶ್ರದ್ಧಾಂಜಲಿ ಸಮಾವೇಶದಲ್ಲಿ ಶ್ರೀಮತಿ ಅನುಪಮಾ ಶಿವಪ್ರಸಾದರವರಿಂದ ಪುಷ್ಪಾರ್ಪಣೆ



'ಶಿವಪ್ರಸಾದ' ಮನೆಯಲ್ಲಿ ಲಿಂ. ಲಲಿತಾಂಬ ಅವರ ನಿತ್ಯ ಸ್ಮರಣೆ -
ನಿತ್ಯ ಪೂಜೆ

# ಶ್ರದ್ಧಾಂಜಲಿ

೧. ಡಾ. ಶಾಂತಾ ಇಮ್ರಾಪೂರ. ಧಾರವಾಡ
೨. "ಲಲಿತಾಂಬಾ ಇನ್ನಿಲ್ಲ – ಸಂಯುಕ್ತ ಕರ್ನಾಟಕ ಹುಬ್ಬಳ್ಳಿ ವರದಿ
೩. ಶ್ರೀ ಸಿದ್ಧಗಂಗಾಶ್ರೀಗಳ ಸಂದೇಶ
೪. ಗದಗ ಶ್ರೀ ತೋಂಟದಾರ್ಯಶ್ರೀಗಳ ಸಾಂತ್ವನ
೫. ಹೊನ್ನಾಳಿ ಶ್ರೀಗಳ ಆಶೀರ್ವಾದ
೬. ಶ್ರೀ ಸಿದ್ಧರಾಮ ಸ್ವಾಮಿಗಳು – ಬೆಳಗಾಂವಿ
೭. ಶ್ರೀ ಶಿವಯೋಗಿಶ್ರೀಗಳು – ಧಾರವಾಡ
೮. ಜಸ್ಟೀಸ್ ವ್ಹಿ.ಎಸ್.ಮಳೀಮಠ – ಬೆಂಗಳೂರು
೯. ಡಿ.ಸಿ. ಶ್ರೀ ಕಂಠಪ್ಪ, ಸಂಸದರ, ಸ್ಮರಣೆ
೧೦. ಡಾ.ಎಸ್.ಎಸ್. ಕಟಗಿಹಳ್ಳಿ ಮಠ, ಬೆಂಗಳೂರು
೧೧. ಶ್ರೀ ಪತ್ರೆ ರಾಜಶೇಖರ, ಬೆಂಗಳೂರು
೧೨. ಶ್ರೀ. ನ. ವಜ್ರಕುಮಾರ, ಧಾರವಾಡ
೧೩. ಡಾ. ಎಂ.ಎಂ.ಜೋಶಿ, ಹುಬ್ಬಳ್ಳಿ
೧೪. ಡಾ. ಎಸ್. ಕೆ. ಜೋಶಿ, ಧಾರವಾಡ
೧೫. ಡಾ. ದಿನಬಂಧು ಹಳ್ಳಿಕೇರಿ, ಹುಬ್ಬಳ್ಳಿ
೧೬. ಶ್ರೀ. ವಿ. ಆರ್. ಮಾಳೆಕೊಪ್ಪ ಮಠ, ಗದಗ
೧೭. ಶ್ರೀ. ಅನ್ನದಾನಯ್ಯ ಪುರಾಣಿಕ, ಬೆಂಗಳೂರು
೧೮. ಶ್ರೀ ಗೋ.ರು.ಚೆನ್ನಬಸಪ್ಪ, ಬೆಂಗಳೂರು
೧೯. ಶ್ರೀಮತಿ ಎಸ್.ಕೆ.ರಮಾದೇವಮ್ಮ, ಬೆಂಗಳೂರು
೨೦. ಡಾ. ಜಿ.ಎಸ್.ಉಪಾಧ್ಯ, ಮುಂಬಯಿ
೨೧. ಶ್ರೀ ಆರೂರ ಲಕ್ಷ್ಮಣಶೇಟ್, ಹುಬ್ಬಳ್ಳಿ

೨೨. ಶ್ರೀ ರುದ್ರನಾಥ ಕಲ್ಯಾಣಶೆಟ್ಟಿ, ನರಗುಂದ
೨೩. ಶ್ರೀ ಯೋಗಿ ಅಚ್ಯುತಾಶ್ರಮ, ಹಂಪಿ
೨೪. ಶ್ರೀ ಮುರುಘರಾಜೇಂದ್ರ ಪ್ರೌಢಶಾಲೆ, ಬೀರೂರು
೨೫. ಕೆ. ಎಂ. ವಿಶ್ವನಾಥ ಮತ್ತು ಗೌರಮ್ಮ, ಜಗಳೂರು
೨೬. ಡಾ. ಬಸವರಾಜ ಪುರಾಣಿಕ, ಬೆಂಗಳೂರು
೨೭. ಡಾ. ಪಂಡಿತರಾಧ್ಯ, ಬೆಂಗಳೂರು
೨೮. ವಿದ್ವಾನ್ ಎಂ.ಎಸ್.ಬಸವರಾಜಯ್ಯ, ಮೈಸೂರು
೨೯. ಶ್ರೀಮತಿ ಜಯಶ್ರೀ ದಂಡೆ, ಕಲಬುರ್ಗಿ
೩೦. ಶ್ರೀಮತಿ ಶೈಲಜಾ ಹೆಚ್.ಟಿ., ಮೈಸೂರು
೩೧. ಶ್ರೀ ಉಳವೀಶ ಹುಲೆಪ್ಪನವರ ಮಠ, ಬೆಳಗಾವಿ
೩೨. ಶ್ರೀ ಬಾ. ಸದಾಶಿವಪ್ಪ, ಹರಪನಹಳ್ಳಿ
೩೩. ಪ್ರೊ ಶಿವಲಿಂಗಾರಾಧ್ಯ, ಬೆಂಗಳೂರು
೩೪. ಆರ್.ಕೆ.ಹಿರೇಮಠ, ಹುಬ್ಬಳ್ಳಿ
೩೫. ಡಾ. ಬಿ.ಎ.ವಿವೇಕ ರೈ, ಮೈಸೂರು
೩೬. ಡಾ. ಎ. ಸದಾಶಿವಯೋಗಯ್ಯ, ಮೈಸೂರು
೩೭. ಶ್ರೀ ಜಯದೇವಪ್ಪ ಜೈನಕೇರಿ, ಶಿವಮೊಗ್ಗ
೩೮. ಪ್ರಿ. ಬಿ.ಬಿ.ನಾಡಗೌಡ, ವಿಜಾಪುರ
೩೯. ಶ್ರೀಮತಿ ತಾರಿಣಿ ಮತ್ತು ಡಾ. ಚಿದಾನಂದಗೌಡ, ಮೈಸೂರು
೪೦. ಶ್ರೀ ಪಂಚಾಕ್ಷರಿ ಮಾಸ್ತರ
೪೧. ಬಿ.ಎಂ.ಚಂದ್ರಶೇಖರಯ್ಯ, ಬೆಂಗಳೂರು
೪೨. ಡಾ. ಬಿ.ಎ.ಸನದಿ
೪೩. ಡಾ.ಗೌ. ಉಮಾಪತಿ ಶಾಸ್ತ್ರಿ
೪೪. ಕೆ.ಎಸ್.ಗಾರ್ವಾಡ್, ಹುಬ್ಬಳ್ಳಿ
೪೫. ಶ್ರೀ ವಕೀಲ ಬಸವರಾಜ, ಹಾವೇರಿ
೪೬. ಶ್ರೀಮತಿ ಶಾರದಮ್ಮ, ಬೀರೂರು
೪೭. ಡಾ. ಎಸ್. ವಿದ್ಯಾಶಂಕರ, ಬೆಂಗಳೂರು

೪೮. ಶ್ರೀ ಶ್ರೀಗಳು ಹಿರೇಮಠ, ಹೊನ್ನಾಳಿ

೪೯. ಶ್ರೀಮತಿ ಲೀಲಾ ಕೇಸರಿ, ದಾವಣಗೆರೆ

೫೦. ಶ್ರೀ ರಾಜಶೇಖರ ಮತ್ತು ಪತ್ನಿ (ತಂತಿವರ್ತಮಾನ), ಬೆಂಗಳೂರು

೫೧. ಶ್ರೀ ಆರ್. ಕೆ. ಹಿರೇಮಠ, ಹುಬ್ಬಳ್ಳಿ

೫೨. ಡಾ. ಅ. ನಂಜಪ್ಪ, ಬೆಂಗಳೂರು

೫೩. ಶ್ರೀ ನಿರಂಜನ ವಾಲಿಶೆಟ್ಟರ್, ಹುಬ್ಬಳ್ಳಿ

೫೪. ಶ್ರೀ ಜಗದೀಶ ಗುಡಗುಂಟಿ

೫೫. ಶ್ರೀ ಜಾಗಟಗೇರಿ ಸದ್ಯೋಜಾತಪ್ಪ, ಕೊಟ್ಟೂರ

೫೬. ಶ್ರೀ ಗೊಗ್ಗ ಚನ್ನಬಸವರಾಜ, ಹೊಸಪೇಟೆ

೫೭. ಶ್ರೀ ವೆಂಕಟರಾಮನ್, ನವದೆಹಲಿ

೫೮. ಶ್ರೀ ಬಸವರಾಜ ಮಾಳಿಗೇರ, ಧಾರವಾಡ

..............ಮತ್ತು ಇತರರು

## (೧) ಆದರ್ಶ ಗೃಹಿಣಿ, ಪ್ರಸಿದ್ಧ ಲೇಖಕಿ, ಜನಪ್ರಿಯ ಅಧ್ಯಾಪಕಿ ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ : ಒಂದು ಪುಣ್ಯ ಸ್ಮರಣೆ

– ಡಾ. ಶ್ರೀಮತಿ ಶಾಂತಾ ಇಮ್ರಾಪುರ, ಧಾರವಾಡ

ಆದರ್ಶ ಶಿಕ್ಷಕಿಯಾಗಿ, ವೈಚಾರಿಕ ಲೇಖಕಿಯಾಗಿ ತಮ್ಮ ಬದುಕು-ಬರಹಗಳಲ್ಲಿ ಉನ್ನತ ಮೌಲ್ಯಾದರ್ಶಗಳನ್ನು ಎತ್ತಿ ಹಿಡಿದವರು ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ, ಉನ್ನತ ಶಿಕ್ಷಣ ಮತ್ತು ಉದ್ಯೋಗ ಕ್ಷೇತ್ರದಲ್ಲಿ ಮಹಿಳೆಯರ ಪ್ರವೇಶ ಅತ್ಯಂತ ವಿರಳವಾಗಿದ್ದ ಸ್ವಾತಂತ್ರ್ಯ ಪೂರ್ವದ ಕಾಲದಲ್ಲಿ (೧೯೪೭) ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಬಿ.ಎ. ಪದವಿ, ನಂತರ ಕರ್ನಾಟಕ ವಿಶ್ವವಿದ್ಯಾಲಯದಿಂದ ಬಿ.ಎಡ್., ಎಂ.ಎಡ್, ಪದವಿ ಪಡೆದು, ಶಿಕ್ಷಕಿ ವೃತ್ತಿಯನ್ನಾಯ್ದುಕೊಂಡ ಪ್ರತಿಭಾವಂತರು. ಪ್ರೊ. ಲಲಿತಾಂಬಾ ವೃಷಭೇಂದ್ರಸ್ವಾಮಿ ಅವರು ೨೩/೮/೧೯೩೦ ರಲ್ಲಿ ಚಿಕ್ಕಮಂಗಳೂರು ಜಿಲ್ಲೆಯ ಸಣ್ಣ ಗ್ರಾಮ ಬೀರೂರಿನಲ್ಲಿ ಪ್ರತಿಷ್ಠಿತ ಕುಟುಂಬದಲ್ಲಿ ಹುಟ್ಟಿದ ಅವರು ತಮ್ಮ ಜಿಲ್ಲೆಗೆ ಮೊದಲಿಗರಾಗಿ ಎಸ್.ಎಸ್. ಎಲ್. ಸಿ. ಉತ್ತೀರ್ಣರಾದರು. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾಗಿರುವ ಸಹೃದಯ ವಿದ್ವಾಂಸ ಪ್ರೊ. ವೃಷಭೇಂದ್ರಸ್ವಾಮಿಯವರೊಂದಿಗೆ ವಿವಾಹವಾಗಿ (೧೯೫೭) ಧಾರವಾಡಕ್ಕೆ ಬಂದ ಲಲಿತಾಂಬಾ ಅವರು ಕರ್ನಾಟಕ ವಿಶ್ವವಿದ್ಯಾಲಯದ ಶಿಕ್ಷಣ ಮಹಾವಿದ್ಯಾಲಯದಲ್ಲಿ ಅಧ್ಯಾಪಕಿಯಾಗಿ ಮೂರು ದಶಕಗಳ ಕಾಲ ಸೇವೆ ಸಲ್ಲಿಸಿದರು, ದಿ. ೧೩/೮/೨೦೦೭ ಶ್ರಾವಣ ಸೋಮವಾರ, ಧಾರವಾಡದ ಕಲ್ಯಾಣನಗರದ ತಮ್ಮ ಮನೆ 'ಶಿವಪ್ರಸಾದ'ದಲ್ಲಿ ಲಿಂಗೈಕ್ಯರಾದರು. ಅವರ ಏಕ ಮಾತ್ರ ಪುತ್ರ ಡಾ॥ ಎಸ್. ಎಂ. ಶಿವಪ್ರಸಾದ – ಪ್ರಸಿದ್ಧ ವಿಜ್ಞಾನಿ, ಸೊಸೆ ಅನುಪಮಾಮ ಮೊಮ್ಮಗಳು, ಕು. ಶರ್ವಾಣಿ ಮತ್ತು ಅಪಾರ ಬಂಧು-ಬಳಗ-ಮಿತ್ರ-ವಿದ್ಯಾರ್ಥಿಗಳನ್ನು ಅಗಲಿದ್ದಾರೆ. ಶ್ರೀಮತಿಯವರು ಬಳ್ಳಾರಿ ಜಿಲ್ಲೆ ಅಯ್ಯನ ಹಳ್ಳಿಯ ಸೊನ್ನದ ಮುರಡಿಮಠ 'ಸಂಸ್ಕೃತಿ', ಬೀರೂರು ಉಬ್ರಾಣಿಮಠದ 'ಸದಾಚಾರ' ಮತ್ತು ಬೀರೂರು ಪತ್ರೆ ಮನೆತನದ 'ಸಂಪತ್ತಿನ' ಸಮರಸ ಸಮಭಾವದ ಪ್ರತಿಮೂರ್ತಿಯಾಗಿ, ಸದಾಚಾರ ಸಂಪನ್ನೆಯಾಗಿದ್ದರು. ಕಥೆ-ಕಾದಂಬರಿಗಳ ಮೂಲಕ ಮಹಿಳೆಯರು ಸಾಹಿತ್ಯ ಕ್ಷೇತ್ರ ಪ್ರವೇಸಿಸುತ್ತಿದ್ದ ೭೦ರ ದಶಕದಲ್ಲಿ, ವೈಚಾರಿಕ ಪ್ರಬಂಧ ಮತ್ತು ಚಿಂತನ ಪರ ಲೇಖನಗಳ ಮೂಲಕ ಬರವಣಿಗೆ ಆರಂಭಿಸಿದ ಅವರು ಕಥೆ, ಕವನ, ರೂಪಕ, ಮಕ್ಕಳ ಸಾಹಿತ್ಯ, ಜೀವನ ಚರಿತ್ರೆ, ಶಿವಶರಣರ ವಚನವ್ಯಾಖ್ಯಾನ, ಮಹಿಳಾಪರ ಸಾಹಿತ್ಯ ಹೀಗೆ ವಿವಿಧ ಪ್ರಕಾರಗಳಲ್ಲಿ ಕೃತಿ ರಚಿಸಿದರು. ಶಿಕ್ಷಣ, ಸಾಹಿತ್ಯ ಮತ್ತು ಸಾಮಾಜಿಕ ಚಿಂತನೆಗೆ ಸಂಬಂಧಿಸಿದ ಹಲವಾರು ಲೇಖನಗಳಲ್ಲಿ ತಾವು ನಂಬಿದ್ದ

ಮೌಲ್ಯಾದರ್ಶನಗಳನ್ನು ಕುರಿತು ವಿವರವಾಗಿ ಚರ್ಚಿಸಿದ್ದಾರೆ. ಸ್ತ್ರೀಸಮುದಾಯದ ಜಾಗೃತಿಗೆ ವಿಶೇಷ ಪ್ರಯತ್ನ ಮಾಡಿರುವರು.

**ಸಾಹಿತ್ಯ-ಸಂಸ್ಕೃತಿ ಸೇವೆ**

೧೯೬೪ ರಲ್ಲಿ ಬರವಣಿಗೆ ಪ್ರಾರಂಭಿಸಿದ ಲಲಿತಾಂಬಾ ಅವರ ಅನೇಕ ಲೇಖನಗಳು ನಾಡಿನ ಪ್ರಮುಖ ಪತ್ರಕೆಗಳಾದ ಸುಧಾ, ತರಂಗ, ಮಯೂರ, ತುಷಾರ, ಕರ್ಮವೀರ, ವನಿತಾ, ಸಂಯುಕ್ತ ಕರ್ನಾಟಕ ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ವಿವಿಧ ಪ್ರಕಾರಗಳಿಗೆ ಸಂಬಂಧಿಸಿದ ೧೨ ಕೃತಿಗಳನ್ನು ಪ್ರಕಟಿಸಿರುವರು 'ಸಜ್ಜಲಗುಡ್ಡದ ಶರಣಮ್ಮ'ನವರು, 'ಪತ್ರೆ ಚನ್ನವೀರಪ್ಪಯ್ಯನವರು', 'ಶಿವಶರಣೆಯರು', ಇತ್ಯಾದಿ ಚರಿತ್ರಾತ್ಮಕ ಕೃತಿಗಳಾದರೆ, 'ಮನದ ಮಲ್ಲಿಗೆ', 'ರಚನಾತ್ಮಕ ಚಿಂತನೆಗಳು', ವೈಚಾರಿಕ ಪ್ರಬಂಧ ಸಂಕಲನಗಳು. 'ಮುನಿದೆ ಏಕಮ್ಮಾ ನೆಲದಾಯಿ', 'ಹಣತೆ ಹಚ್ಚಿ ಹುಡುಕುತಿರುವೆ' ಕವನಸಂಕಲನಗಳು, ಬೇರೊಂದು ಮರವೆರಡು (ಸಣ್ಣ ಕತೆ) ಮತ್ತು ಆಕಾಶವಾಣಿ ರೂಪಕಗಳು ಲಲಿತಾಂಬಾ ಅವರ ಸೃಜನಶೀಲ ಪ್ರತಿಭೆಯ ಫಲಶ್ರುತಿಗಳಾಗಿವೆ.

**ಶಿಕ್ಷಣ ಸಾಹಿತ್ಯ ಚಿಂತಕಿ**

ಪ್ರೊ. ಲಲಿತಾಂಬಾ ಶಿಕ್ಷಣಕ್ಕೆ ಸಂಬಂಧಿಸಿದ ಮೌಲಿಕ ಕೃತಿಗಳನ್ನು ರಚಿಸಿರುವುದು ವಿಶೇಷ ಸಂಗತಿ. ಮಕ್ಕಳ ಮಾನಸಿಕ- ಬೌದ್ಧಿಕ ಒಟ್ಟಾರೆ ವ್ಯಕ್ತಿತ್ವ ನಿರ್ಮಾಣಕ್ಕೆ ಪೂರಕವಾದ ವಿಚಾರಗಳನ್ನು ಕಥೆಗಳ ಮೂಲಕ-ಪತ್ರಗಳ ಮೂಲಕ ನಿರೂಪಿಸುವ 'ಪುಟ್ಟನಿಗೆ ಹಿತೈಷಿಯ ಪತ್ರಗಳು', 'ಕಿವಿಗೊಟ್ಟು ಕೇಳಿ ಮನಗೊಟ್ಟು ಮಾಡು ಮಗುವೇ' ಮತ್ತು 'ಮಕ್ಕಳ ಶಿಕ್ಷಣ ಚಿಂತನೆ' ಮುಂತಾದ ಪುಸ್ತಕಗಳು ಮಕ್ಕಳ ಸಾಹಿತ್ಯಕ್ಕೆ ಸಂಬಂಧಿಸಿದ ಉಪಯುಕ್ತ ಕೊಡುಗೆಗಳಾಗಿವೆ.

ಶರಣ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದ್ ಅವರು ಶರಣಧರ್ಮ-ಸಂದೇಶವನ್ನು ಶ್ರೀಸಾಮಾನ್ಯರಿಗೂ ತಲುಪಿಸುವ ಆಶಯಉಳ್ಳವರಾಗಿದ್ದರು. ತಮ್ಮ ಬೋಧನೆ-ಭಾಷಣಗಳಲ್ಲಿ ಶಿವಶರಣರ ಆದರ್ಶಗಳನ್ನು ಬಿಂಬಿಸುತ್ತಿದ್ದ ಶ್ರೀಮತಿಯವರು 'ವಚನಾಂಜಲಿ' (ಆಯ್ದ ೧೭೪ ವಚನಗಳ ವ್ಯಾಖ್ಯಾನ) ಮಾನವೀಯತೆ, ವಿಶ್ವಧರ್ಮ ಮೌಲ್ಯಾಧಾರಿತ ಚಿಂತನೆಗಳನ್ನು ಪರಿಚಯಿಸಿರುವುದು ಅವರ ಸಾಮಾಜಿಕ ಕಾಳಜಿಗೆ ನಿದರ್ಶನ; ಇದೊಂದು ಲಲಿತಾಂಬ ಅವರ ಅತ್ಯಂತ ಜನಪ್ರಿಯ ಕೃತಿಯಾಗಿದೆ.

**ಸ್ತ್ರೀಪರ ಕಾಳಜಿಯ ಲೇಖಕಿ : ಪರಂಪರೆ ಮತ್ತು ಪ್ರಗತಿ ಸಾಧಕಿ**

ಸ್ತ್ರೀಶಿಕ್ಷಣ, ಸ್ತ್ರೀಸಮಾಜ, ಸ್ತ್ರೀಸ್ವಾತಂತ್ರ್ಯ-ಸ್ವಾವಲಂಬನೆ ಇತ್ಯಾದಿ ಆಧುನಿ

ಮಹಿಳಾ ಸಮಾಜಕ್ಕೆ ಸಂಬಂಧಿಸಿರುವ ಅವರ ಲೇಖನಗಳಲ್ಲಿ ಅವರ ಮಹಿಳಾಪರ ಕಳಜಿ ಸ್ಪಷ್ಟವಾಗಿವೆ. ಕುಟುಂಬ ಮತ್ತು ಉದ್ಯೋಗದ ಇಬ್ಬಗೆಯ ಹೊಣೆಗಾರಿಕೆಗಳ ದ್ವಂದ್ವದಲ್ಲಿ ನೆಲೆಸಿರುವ ದುಡಿವ ಮಹಿಳೆಯರ ಸಮಸ್ಯೆಗಳನ್ನು ಕುರಿತು ಚಿಂತನೆ ನಡೆಸಿರುವ ಅವರು ಸ್ತ್ರೀಯರಿಗೆ ಶಿಕ್ಷಣ-ಉದ್ಯೋಗದ ಅಗತ್ಯವನ್ನು ಬೆಂಬಲಿಸಿದ್ದಾರೆ. ಯುವಜನಾಂಗದಲ್ಲಿ ನೈತಿಕತೆ, ಮೌಲ್ಯನಿಷ್ಠೆ ಶ್ರಮಸಂಸ್ಕೃತಿಯನ್ನು ಪ್ರತಿಪಾದಿಸಿದ್ದಾರೆ. ಹೆಣ್ಣಿನ ಪ್ರತಿಭೆ-ಸೃಜನಶೀಲತೆಗಳು ಮನೆಗೆಲಸದಲ್ಲಿ ಮುರುಟದೆ ಸಶಕ್ತ-ಪ್ರಜ್ಞಾವಂತ ಜನಾಂಗದ ನಿರ್ಮಾಣಕ್ಕೆ ವಿನಿಯೋಗವಾಗಬೇಕೆನ್ನುವ ಆಶಯ ಹೊಂದಿದ್ದ ಅವರು ಪರಿಸರ ರಕ್ಷಣೆ, ಪ್ರಜಾಪ್ರಭುತ್ವ, ರಾಷ್ಟ್ರಪ್ರೇಮ, ವಿಶ್ವಸಮಾಜ, ಸಾಮಾಜಿಕ ಶಾಂತಿ ಕುರಿತು ಬರೆದಿರುವ ಲೇಖನಗಳಲ್ಲಿ, ಕವಿತೆಗಳಲ್ಲಿ ಅವರ ಸಾಮಾಜಿಕ ಸಂವೇದನೆ, ಮೌಲ್ಯನಿಷ್ಠೆ ವ್ಯಕ್ತವಾಗಿದೆ. ಸರ್ವರಿಗೂ ಶಿಕ್ಷಣ ಲಭ್ಯಬಾಗಬೇಕೆನ್ನುವುದು ಅವರ ಬಯಕೆ. ಶಾಂತಿಯುತ ಸಮಾಜ ಬಲಿಷ್ಠರಾಷ್ಟ್ರ ಅವರ ಗುರಿಯಾಗಿತ್ತು.

**ಉದಾರ ದಾನಿಗಳು : ಶಿಕ್ಷಣ-ಸಂಸ್ಕೃತಿ ಪ್ರೇಮಿಗಳು**

ಆರ್ಥಿಕ ಕಾರಣದಿಂದಾಗಿ ಶಿಕ್ಷಣದಿಂದ ವಂಚಿತರಾಗುವ ಬಡಮಕ್ಕಳ ಶಿಕ್ಷಣಕ್ಕಾಗಿ ಮೈಸೂರಿನ ಸುತ್ತೂರು ಮಠಕ್ಕೆ ಒಂದು ಲಕ್ಷ ರೂಪಾಯಿ ದೇಣಿಗೆಯನ್ನು ನೀಡಿದ ಪ್ರೊ. ಲಲಿತಾಂಬಾ ಅವರ ನಾಡಿನ ಅನೇಕ ಸಾಹಿತ್ಯಿಕ ಸಂಘ ಸಂಸ್ಥೆಗಳಿಗೆ ಉದಾರವಾಗಿ ದತ್ತಿಗಳನ್ನು ನೀಡಿದ್ದಾರೆ. ಮಹಿಳಾ ಸಾಹಿತ್ಯ ಮತ್ತು ಮಕ್ಕಳ ಸಾಹಿತ್ಯವನ್ನು ಪ್ರೋತ್ಸಾಹಿಸಲು ಉತ್ತರ ಕರ್ನಾಟಕ ಲೇಖಕಿಯರ ಸಂಘಕ್ಕೆ ಶರಣಸಾಹಿತ್ಯ ಚಿಂತನ ಮತ್ತು ಪ್ರಸಾರಕ್ಕಾಗಿ ಅಖಿಲ ಭಾರತದ ಶರಣಸಾಹಿತ್ಯ ಪರಿಷತ್ತಿಗೆ, ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಸಂಸ್ಥಾನಮಠಕ್ಕೆ ದತ್ತಿಗಳನ್ನು ನೀಡಿರುವರು. 'ಸಾಹಿತಿ ದಂಪತಿ'ಗಳ ಸನ್ಮಾನಕ್ಕಾಗಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದತ್ತಿ ನಿಧಿ ಸ್ಥಾಪಿಸಿದ್ದಾರೆ. ೧೯೫೮ರಲ್ಲಿ ಸ್ಥಾಪನೆಯಾದ ಉತ್ತರ ಕರ್ನಾಟಕ ಲೇಖಕಿಯರ ಸಂಘದ ಸಂಸ್ಥಾಪಕ ಸದಸ್ಯರಾಗಿ, ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದ ಲಲಿತಾಂಬಾ ಅವರು ನಾಡಿನ ಅನೇಕ ಸಾಹಿತ್ಯಿಕ-ಸಾಂಸ್ಕೃತಿಕ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಬಂಧ ಹೊಂದಿದ್ದರು. ಶ್ರೀಮತಿಯವರ 'ವಚನಾಂಜಲಿ'ಗೆ ಕಾವ್ಯಾನಂದ ಪ್ರಶಸ್ತಿ, 'ಮಕ್ಕಳ ಶಿಕ್ಷಣ, ಚಿಂತನೆ'ಗೆ ಮಾತೋಶ್ರೀ ರತ್ನಮ್ಮ ಹೆಗ್ಗಡೆ ಪ್ರಶಸ್ತಿ, ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತಿನಿಂದ 'ಕದಳಿಶ್ರೀ' ಪುರಸ್ಕಾರಗಳನ್ನು ಪಡೆದುಕೊಂಡಿದ್ದರು. ಪ್ರಸಾದ ಪ್ರಕಾಶನದ ಸಂಸ್ಥಾಪಕಿಯೂ ಆಗಿದ್ದರು. ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ ಅವರು. ಇದೇ ಆಗಸ್ಟ್ ೨೩ ಕ್ಕೆ ೭೮ ವರ್ಷದ ಹುಟ್ಟುವನ್ನಾಚರಿಸಿಕೊಳ್ಳುವ ಸಂಭ್ರಮದಲ್ಲಿದ್ದಾಗಲೇ ದೈವಾಧೀನರಾದರು.(೧೩-೮-೨೦೦೭) ದಿ. ೨/೯/೨೦೦೭ರಂದು ಅವರ 'ಪುಣ್ಯಸ್ಮರಣೆ' ಧಾರವಾಡದ ಕಲ್ಯಾಣ ನಗರದ ಸಮುದಾಯ ಭವನ'ದಲ್ಲಿ

ನೆರವೇರುವುದು. ಇಂಥ ಆದರ್ಶ ಮಹಿಳೆಗೆ ಇದೊಂದು ಶ್ರದ್ಧಾಂಜಲಿ ಮತ್ತು ಅವರ ಸಾಧನೆಗಳ ಪುಣ್ಯಸ್ಮರಣೆ. ಆಧುನಿಕ ಕಾಲದ ಮಹಿಳೆಯರಿಗೆ ಸ್ಫೂರ್ತಿಚೇತನ.

[ವಿಳಾಸ : "ಶಿವಪ್ರಸಾದ" ಕಲ್ಯಾಣ ನಗರ, ೮ನೇ ಕ್ರಾಸ್, ಧಾರವಾಡ – ೫೮೦ ೦೦೭ ದೂರವಾಣಿ (೦೮೩೬)– ೨೭೪೪೪೮೫೭೦]

(೨) ಸಾರ್ಥಕ್ಯ ಸಾಹಿತ್ಯಿಕ ಬದುಕು ಬಾಳಿಕ ಮಹಿಳಾ ಸಹಿತಿ ಶ್ರೀಮತಿ ಲಲಿತಾಂಬಾ ವೃಷಭೇಂದ್ರಸ್ವಾಮಿ ಇನ್ನಿಲ್ಲ.

(ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ–ಪ್ರಕಟಿತ ಲೇಖನ)

ಪ್ರಾಚೀನ ಕನ್ನಡ ಸಾಹಿತ್ಯೋದ್ಯಾನದಲ್ಲಿ, ಮಧ್ಯಯುಗೀನ ಕನ್ನಡ ಸಾಹಿತ್ಯದ ತಿರುಳಿನಲ್ಲಿ, ಹಾಗೂ ಆಧುನಿಕ ಕನ್ನಡ ಸಾಹಿತ್ಯದ ಹರವಿನಲ್ಲಿ ವಿಹಂಗಮಿಸಿದ, ಘನತೆವೆತ್ತ ಸಾಹಿತಿ ಹಾಗೂ ಪ್ರಾಧ್ಯಾಪಕಿ ಶ್ರೀಮತಿ ಲಲಿತಾಂಬಾ ವೃಷಭೇಂದ್ರಸ್ವಾಮಿ ಅವರು ಮೃದ್‌ಗಂಧದ ತವರೂರಾದ ಧಾರವಾಡದಲ್ಲಿ ಪರಂಧಾಮಗೈದರು (ದಿ ೧೩.೮.೦೭) withdrawal of the socsoulial from the body, ಜೀವನ ಅಂತಿಮ ಸಾಹಸ.

ಉತ್ತರ ಕರ್ನಾಟಕ ಲೇಖಕಿಯರ ಸಂಘ, ಧಾರವಾಡ ಸ್ಥಾಪನಾ ಅಧ್ಯಕ್ಷರಾದ ಲಲಿತಾಂಬಾ ಅವರು, ಹಿರಿಯ ಸಾಹಿತಿ ಹಗೂ ಕ.ವಿ.ವಿ. ಯ ಪ್ರಾಧ್ಯಾಕರಾದ ಡಾ॥ ವೃಷಭೇಂದ್ರಸ್ವಾಮಿಯವರ ಪತ್ನಿ. ಪತಿಯವರಂತೆಯೇ ಸಾಹಿತ್ಯ ಸೇವೆಯಲ್ಲಿ ಹೆಸರು ಪಡೆದ ಹಿರಿಯ ಜೀವಿ ಲಲಿತಾಂಬಾ. ಒಳ್ಳೆಯ ವಾಗ್ಮಿ; ಪ್ರಭಾವಿ–ವೈಚಾರಿಕ ಮಹಿಳೆ, ಹಾಗೂ ಮೇಲಾಗಿ ಶಿಕ್ಷಣ ಪ್ರಿಯೆ–ಮಹಿಳೆಯರಿಗಾಗಿ.

ಹಾಗೆ ನೋಡಿದಲ್ಲಿ ಶಿಕ್ಷಣವೇ ಅವರ ಉಸಿರಾಗಿತ್ತು. ಕರ್ನಾಟಕದ ಖ್ಯಾತ ಯುನಿವರ್ಸಿಟಿ ಪಬ್ಲಿಕ್ ಸ್ಕೂಲ್ ಧಾರವಾಡದಲ್ಲಿ, ಅತ್ಯಂತ ನಿಷ್ಠೆಯ ಶಿಕ್ಷಕಿಯಾಗಿ ಮುಖ್ಯಸ್ಥೆಯಾಗಿ, ನಂತರ ಕರ್ನಾಟಕ ವಿ.ವಿ.ವಿ.ಯ ಬಿ.ಎಡ್.ಕಾಲೇಜಿನ ಪ್ರಾಧ್ಯಾಪಕಿ ಹಾಗೂ ಪ್ರವಾಚಕರಾಗಿ ಮಹಿಳಾ ಜನಪ್ರಿಯ ಮಾರ್ಗದರ್ಶಕರಾಗಿ ಕಾರ್ಯ ನಿಭಾಯಿಸಿದರು.

ಅವರ ಬದುಕು 'ಬಿಗ್ ಆ್ಯಂಡ್ ಬೋಲ್ಡ್' ಸ್ಪಷ್ಟ ಹಾಗೂ ನೇರ ನುಡಿ. ಅವರ ಸಾಹಿತ್ಯಿಕ ಕೃತಿಗಳೂ ಹಲವಾರು. 'ವಚನಾಂಜಲಿ', 'ಶಿಕ್ಷಣ ಚಿಂತನೆಗಳು', 'ಮಕ್ಕಳಿಗೆ ಹಿತೈಷಿಯ ಪತ್ರಗಳು', 'ಸಜ್ಜಲಗುಡ್ಡದ ಶರಣಮ್ಮ', 'ಪತ್ರೆ ಚೆನ್ನವೀರಪ್ಪಯ್ಯನ ಹಾಗೂ ನೂರಾರು ಚಿಂತನಪರ ಲೇಖನಗಳು.

ಪ್ರೊ. ಲಲಿತಾಂಬಾ ಹಾಗೂ ಡಾ. ವೃಷಭೇಂದ್ರಸ್ವಾಮಿ ಅವರದು ಅನ್ಯೋನ್ಯ

ದಾಂಪತ್ಯ ಬದುಕು. ಇಬ್ಬರೂ ಹೆಸರಾಂತ ಸಾಹಿತಿಗಳು. ಪ್ರಾಯಶಃ ಇಂಥ ದಂಪತಿಗಳು ಸಿಗುವುದು ವಿರಳ. ಒಬ್ಬನೇ ಮಗ ಆತನೂ ಹೆಸರಾಂತ ವಿಜ್ಞಾನಿ. ಆತನು ೬–೭ ವರುಷದ ಬಾಲಕನಿದ್ದಾಗ ಬಹಳ ತುಂಬ ಚೂಟಿ ಎಂದು ಇನ್ನೊಬ್ಬ ಹಿರಿಯ ಸಾಹಿತಿ ಡಾ|| ಚೆನ್ನಕ್ಕ ಪಾವಟೆ ಅಂದಿನ ಕಳೆದ ದಿನಗಳನ್ನು ನೆನಪಿಸುತ್ತಾರೆ. ಲಲಿತಾಂಬಾ ಅವರು ಯುನಿವರ್ಸಿಟಿ ಪಬ್ಲಿಕ್ ಸ್ಕೂಲಿನಲ್ಲಿ ಪಾಠ ಕಲಿಸುತ್ತಿದ್ದಾಗ, ಕ್ಲಾಸಿನಲ್ಲಿ ಬಂದು ಟೀಚರ್ ಕುರ್ಚಿಯ ಹಿಂದೆ ನಿಂತಿರುತ್ತಿದ್ದನಂತೆ. ಟೀಚರ್ ಲಲಿತಾಂಬಾರ ಶಿಷ್ಯೆ ಹಾಗೂ ಶ್ರೀಮತಿ ಲಲಿತಾಂಬ ಚೆನ್ನಕ್ಕನವರ 'ಟೀಚರ್ ಇದು ಡಾ|| ಚೆನ್ನಕ್ಕ ಅವರ ನೀಡಿದ ಮುಗ್ಧ ಬಾಲಕನ ಚಿತ್ರಣ.

'ಚಕ್ಕ ಚಕ್ಕನೆ ಹೊಳೆದು ಬಿಳಿಮೋಡಗಳ ಮುಸುಕು
ಹೊಕ್ಕು ಫಕ್ಕನೆ ಮತ್ತೆ ಹೊರಗೆ ಬಂದು,
ನಕ್ಕು ನಗಿಸುತ್ತಲಿವ ಅಕ್ಕರದ ನೋಟಕರ
ಚಿಕ್ಕ ಮಕ್ಕಳ ಆಟ ಸ್ಮೃತಿಗೆ ತಂದು,

ಇಷ್ಟು ಸಾಕು. ಬದುಕಿನ ಸಾರ್ಥಕ್ಯದಲ್ಲಿ ಜೀವಿಸಿದ ಶ್ರೀಮತಿ ಲಲಿತಾಂಬರ ಆತ್ಮಕ್ಕೆ ದೇವ ಶಾಂತಿ ನೀಡಲಿ, ಇದು ನನ್ನ ಶ್ರದ್ಧಾಂಜಲಿ.

ಡಾ|| ಎಸ್.ಕೆ. ಜೋಶಿ
೬೦ ಸಿಲ್ವರ್ ಆರ್ಚರ್ಡ್
ಧಾರವಾಡ–೧

(೩) ಶ್ರೀ ಶಿವಕುಮಾರ ಸ್ವಾಮಿಗಳು ಸಿದ್ಧಗಂಗಾಮಠ, ತುಮಕೂರು

**ಶ್ರೀಗಳ ಶೋಕ ಸಂದೇಶ**

ಸನ್ಮಾನ್ಯ ಡಾ|| ಎಸ್. ಎಂ. ವೃಷಭೇಂದ್ರಸ್ವಾಮಿ ಅವರೇ,

ನಿಮ್ಮ ಧರ್ಮಪತ್ನಿಯವರು ಲಿಂಗೈಕ್ಯರಾದುದನ್ನು ತಿಳಿದು ತುಂಬಾ ದುಃಖವಾಯಿತು. ನಿಮ್ಮ ಯಶಸ್ಸಿನ ಶಿವಚೈತನ್ಯವೇ ಆಗಿದ್ದ ತಾಯಿಯವರು ಗುರುಲಿಂಗ ಜಂಗಮದಲ್ಲಿ ಭಕ್ತಿ ಶ್ರದ್ಧೆಯುಳ್ಳವರಾಗಿದ್ದುದನ್ನು ಬಲ್ಲೆವು. ನಿಮ್ಮ ಹಾಗೆಯೇ ಸಾಹಿತ್ಯ ಲೋಕದಲ್ಲಿ ಖ್ಯಾತನಾಮರಾಗಿ ಮನೆಯ ಪರಿಸರವನ್ನು ಶರಣ ಸಂಸ್ಕೃತಿಯ ಮಂಗಳಮಯವನ್ನಾಗಿಸಿಕೊಂಡಿದ್ದವರಾಗಿದ್ದರು. "ಸತಿ – ಪತಿಗಳೊಂದಾದ ಭಕ್ತಿ" ಯನ್ನು ಜೀವನದುದ್ದಕ್ಕೂ ಕಾಪಾಡಿಕೊಂಡು ಬಂದ ತಾಯಿಯವರ ಅಗಲಿಕೆಯಿಂದ ನಿಮಗಾಗಿರುವ ನೋವನ್ನು, ನಿಮ್ಮ ಕುಟುಂಬದ ಸದಸ್ಯರೆಲ್ಲರಿಗಾಗಿರುವ ದುಃಖವನ್ನು

ಸಹಿಸುವ ಶಕ್ತಿಯನ್ನು ಹಾಗೂ ಲಿಂಗೈಕ್ಯರ ಆತ್ಮಕ್ಕೆ ಚಿರಶಾಂತಿಯನ್ನ ಬಸವಾದಿ ಶರಣರು ದಯಪಾಲಿಸಲೆಂದು ಹಾರೈಸುತ್ತೇವೆ.

ಶ್ರೀ ಶ್ರೀ ಶಿವಕುಮಾರಸ್ವಾಮಿಗಳು
ಶ್ರೀ ಸಿದ್ಧಗಂಗಾಮಠ
ತುಮಕೂರು.

(೪) ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು
ಎಡೆಯೂರು ಶ್ರೀ ಜಗದ್ಗುರು ತೋಂಟದಾರ್ಯಮಠ, ಡಂಬಳ-ಗದಗ

ಇವರ ಸಾಂತ್ವನ ಸಂದೇಶ

ನಿಮ್ಮ ಶ್ರೀಮತಿ ಲಲಿತಾಂಬಾ ತಾಯಿ ಇವರು ಲಿಂಗೈಕ್ಯರಾದ ವಿಷಯ ಪತ್ರಿಕೆಯಿಂದ ತಿಳಿದು ವ್ಯಥೆಯಾಯಿತು.

ಪತಿ-ಪತ್ನಿ ಒಂದು ಬಂಡಿಯ ಎರಡು ಗಾಲೆಗಳು. ಒಂದು ಗಾಲಿ ಕಳಚಿದರೆ ಬಂಡಿ ಉಪಯೋಗಕ್ಕೆ ಬರುವುದಿಲ್ಲ. ಇಳಿವಯಸ್ಸಿನಲ್ಲಿ ಪತಿಗೆ ಪತ್ನಿಯ ಅವಶ್ಯಕತೆ ತುಂಬಾ ಅಗತ್ಯ. ಈ ವೇಳೆಯಲ್ಲಿ ಗೆಳತಿಯಾಗಿ, ತಾಯಿಯಾಗಿ ಗಂಡನ ಸೇವೆ ಮಾಡುವದು ನೋಡಿದಾಗ ನಿಜವಾದ ದಾಂಪತ್ಯದ ಸೊಗಸನ್ನು ಕಾಣಬಹುದಾಗಿದೆ. ಇಂತಹ ಪರಿಸ್ಥಿತಿಯಲ್ಲಿ ನಿಮ್ಮನ್ನು ಹಾಗೂ ನಿಮ್ಮ ಮಕ್ಕಳನ್ನು ಬಿಟ್ಟು ಹೋಗಿರುವುದು ಅನ್ಯಾಯವಾಯಿತು.

ಜಾತಸ್ಯ ಮರಣಂ ಧ್ರುವಂ ಎನ್ನುವದಂತೆ ಶಿವನಿಚ್ಛೆಗೆ ಉಪಾಯವಿಲ್ಲ. ಮೃತ ಆ ತಾಯಿಯ ಆತ್ಮಕ್ಕೆ ಬಸವಾದಿ ಪ್ರಮಥರು ಚಿರಶಾಂತಿಯನ್ನಿ, ಅವರಅಗಲಿಕೆಯಿಂದ ನಿಮಗಾಗಿರುವ ಅಸಹನೀಯ ದುಃಖವನ್ನು ಮಕ್ಕಳು - ಮೊಮ್ಮಕ್ಕಳ ನೆನಪಿನಲ್ಲಿ ಮರೆಯುವಂತಾಗಲೆಂದು ಸಾಂತ್ವನ ಆಶೀರ್ವಾದ ನೀಡಲಾಗಿದೆ.

(೫) ಶ್ರೀ ಷ|| ಬ್ರ|| ಒಡೆಯರ್ ಚಂದ್ರಶೇಖರ ಶಿವಾಚಾರ್ಯ
ಮಹಾಸ್ವಾಮಿಗಳವರ ದಿವ್ಯ ಹಿರೇಕಲ್ಮಠ ಹೊನ್ನಾಳಿ

ಆತ್ಮೀಯರೂ ಹಗೂ ನಮ್ಮ ಪೂರ್ವಾಶ್ರಮದ ವಿದ್ಯಾಗುರುಗಳು ಆದ ಡಾ|| ಎಸ್. ಎಂ. ವೃಷಭೇಂದ್ರಸ್ವಾಮಿ ಇವರಿಗೆ ಮಾಡುವ ಶುಭಾಶೀರ್ವಾದಗಳು.

ತಮ್ಮ ಧರ್ಮಪತ್ನಿಯಾದ ಶ್ರೀಮತಿ ಲಲಿತಾಂಬ ಅವರು ಲಿಂಗೈಕ್ಯರಾದ ವಿಷಯ ತಿಳಿದಿರಲಿಲ್ಲ. ಇಂದು ತಮ್ಮ ಪತ್ರದಿಂದ ತಿಳಿದು ತುಂಬಾ ವಿಷಾದವೆನಿಸಿತು.

ಶಿವನಿಚ್ಛೆಯನ್ನು ಮೀರುವಂತಿಲ್ಲ. ಅವರ ಆತ್ಮಕ್ಕೆ ಭಗವಂತ ಚಿರಶಾಂತಿಯ ನ್ನೀಯಲೆಂದು ಈ ಮೂಲಕ ಹಾರೈಸಲಾಗಿದೆ.

ಸಾಹಿತಿಗಳು, ಲೇಖಕರು ವಾಗ್ಮಿಗಳು ಆಗಿದ್ದ ಶ್ರೀಮತಿ ಲಲಿತಾಂಬ ಅವರು ಈ ಹಿಂದೆ ಪುರದ ಮಠದ ಪ್ರಕಾಶನದಿಂದ ಪ್ರಕಟವಾದ ಪುಸ್ತಕಗಳಲ್ಲಿ 'ಮನದ ಮಲ್ಲಿಗೆ' ಎಂಬ ಪುಸ್ತಕ ಇವರ ಕೊಡಿಗೆಯಾಗಿತ್ತು. ಎಂಬ ವಿಷಯವನ್ನು ನಾವು ಮರೆಯುವಂತಿಲ್ಲ. ತಮ್ಮ ಅಪೇಕ್ಷೆಯಂತೆ ಅವರು ಬರೆದ ಪುಸ್ತಕವನ್ನು ತಮಗೆ ಕಳುಹಿಸಿರುತ್ತೇನೆ. ಅವರ ವಾರ್ಷಿಕ ಪುಣ್ಯಾರಾಧನೆಗೆ ಶುಭಾಶೀರ್ವಾದಗಳು .

ಇತ್ಯಾಶಿಷಃ
ಒಡೆಯರ್ ಚಂದ್ರಶೇಖರ ಶಿವಾಚಾರ್ಯರು
ಹಿರೇಕಲ್ಮಠ-ಹೊನ್ನಾಳಿ, ದಾವಣಗೆರೆ ಜಿಲ್ಲೆ.

## (೬) ಲಲಿತಾಂಬಗೆ ಪೂಜ್ಯರ, ಹಿರಯರ, ಅಭಿಮಾನಿಗಳ, ಶಿಷ್ಯರ ಶ್ರದ್ಧಾಂಜಲಿಯ ಪುಷ್ಪಾಂಜಲಿ

### ಶ್ರೀ ಸಿದ್ಧರಾಮ ಸ್ವಾಮಿಗಳು – ಬೆಳಗಾವಿ

ಶಿಕ್ಷಣ ಕ್ಷೇತ್ರದ ಒಂದು ನಕ್ಷತ್ರ –ಶ್ರೀ ಸಿದ್ಧರಾಮಸ್ವಾಮಿಗಳು. ನಾಗನೂರುಮಠ ಬೆಳಗಾವಿ

ಮಾತೋಶ್ರೀ ಲಲಿತಾಂಬ ಸತತ ಅಧ್ಯಯನಶೀಲರು. ವಿದ್ಯಾರ್ಥಿವತ್ಸಲರು ಆಗಿದ್ದರು. ಅವರು ಬಸವಾದಿ ಶಿವಶರಣರ ಮೌಲ್ಯಗಳಲ್ಲಿ ಅಚಲ ವಿಶ್ವಾಸವುಳ್ಳವರಾಗಿದ್ದರು. ಬಹುಮುಖ ಪ್ರತಿಭೆಯ ಆದರ್ಶಮಾತೆ ಲಲಿತಾಂಬ ಅವರ ನಿಧನದಿಂದಾಗಿ ಶೈಕ್ಷಣಿಕ ಕ್ಷೇತ್ರದ ಜಾಜ್ವಲ್ಯಮಾನ ನಕ್ಷತ್ರವೊಂದು ಕಣ್ಮರೆಯಾದಂತಾಗಿದೆ. ಪರಶಿವೇಚ್ಛೆಗೆ ವಿಧಿ ಇಲ್ಲ. ಲಿಂಗೈಕ್ಯ ಮತೋಶ್ರೀ ಲಲಿತಾಂಬ ಅವರ ಆತ್ಮಕ್ಕೆ ಚಿರಶಾಂತಿಯನ್ನು ಬಸವಾದಿ ಶಿವಶರಣರು ದಯಪಾಲಿಸಲಿ ಎಂದು ಪ್ರಾರ್ಥಿಸುವೆ.

ಶರಣು

## (೭) ಶ್ರೀ ನಿ. ಪ್ರ. ಶಿವಯೋಗಿ ಅಪ್ಪಗಳ ಧಾರವಾಡ

### ಆಶೀರ್ವಚನ

ದಿನಂಕ ೧೩–೮–೨೦೦೭ ರಂದು ತಮ್ಮ ಶ್ರೀಮತಿಯವರಾದ ಲಲಿತಾಂಬ ತಾಯಿಯವರು ಲಿಂಗೈಕ್ಯರಾದ ಸುದ್ಧಿ ತಿಳಿದು ವಿಷಾದವಾಯಿತು. ಸದ್ಗುಣಶೀಲರಾದ ಶ್ರೀಮತಿಯವರು ಉತ್ತಮ ಲೇಖಕಿಯರಾಗಿದ್ದರಲ್ಲದೆ, ಆದರ್ಶ ಗೃಹಣಿಯರಾಗಿದ್ದರು.

ಇವರ ಆದರ್ಶ ಜೀವನ ಮುಂದಿನ ಜನಾಂಗಕ್ಕೆ ಮಾರ್ಗದರ್ಶನವಾಗಿರಲಿ ಹಾಗೂ ಇವರ ಆತ್ಮಕ್ಕೆ ಚಿರಶಾಂತಿ ಲಭಿಸಲೆಂದು ಶ್ರೀ ಮಹಾಶಿವಯೋಗಿಗಳವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ಆಶೀರ್ವಾದಗಳು
ಶ್ರೀ ಶಿವಯೋಗಿ ಸ್ವಾಮಿಗಳು

**8) 'Rich Contribution to literature.'**

**Dr. Justice V.S. Malimath**

***Former***
***Chief Justice of Karnataka & Kerala***
*Chairman, Central Administrative Tribunal*
*Member, National Human Rights Commission*
*Chairman, Committee on Reforms of Criminal Justice System, Bangalore*

**To,**
**Dear Sri Vrushabhendraswamy,**

I am shocked to hear about the sad demise of your gracious wife Smt. Lalithamba. My Heartfelt condolences on your bereavement. You have lost the most loving and ideal wife. This loss can never be filled and you will miss her every minute and at every step. You have to learn to derive comfort in living with her precious memories. Sister had lot of affection and regard for me. She has conveyed them ind black and white in her article about me in 'Satyam Shivam Sundaram'. My wife adored her. She earned name and fame by her rich contribution as a teacher and literary person.

It is God's will and we the mortals have no option

but to accept his verdict. The good deeds which she has done has earned for her a pride of place in Kailasa.

I am with you at this hour of catastrophe and join you in praying for her soul to rest in peace in Kailasa.

Sincerely yours,
V.S. Malimath

9) ಆತ್ಮೀಯ ಸಹಪಾಠಿ– ಪುಣ್ಯಮಯಿ ತಾಯಿ

ಶ್ರೀ ಡಿ.ಸಿ ಶ್ರೀಕಂಠಪ್ಪ–ಪಾರ್ಲಿಮೆಂಟ್ ಸದಸ್ಯರು ಚಿಕ್ಕಮಂಗಳೂರು

ಆತ್ಮೀಯರೇ,

ಪ್ರೊ (ಶ್ರೀಮತಿ) ಯು.ಎಸ್. ಲಲಿತಾಂಬ ವೃಷಭೇಂದ್ರಸ್ವಾಮಿ, ವಿಶ್ರಾಂತ ಪ್ರವಾಚಕರು, ಕ.ವಿ.ವಿ.ಶಿಕ್ಷಣ ಮಹಾವಿಶ್ವವಿದ್ಯಾಲಯ, ಧಾರವಾಡ ಇವರು ದಿನಾಂಕ ೧೩.೮.೨೦೦೭ರಂದು ಲಿಂಗೈಕ್ಯರಾದ ವಿಷಯ ತಿಳದು ಮನಸ್ಸಿಗೆ ತುಂಬಾ ವಿಷಾದವಾಯಿತು. ಈ ಸಂಬಂಧದ ಪುಣ್ಯ ಸ್ಮರಣೋತ್ಸವವನ್ನು ದಿ.೨–೯–೨೦೦೭ರಂದು ನಡೆಸಲಿದ್ದು ಆ ದಿನದಂದು ನಾನು ದಹಲಿಯಲ್ಲಿ ಇರಬೇಕಾಗುವ ಸಂದರ್ಭವಿರುವುದರಿಂದ ತಮ್ಮ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಆಗುತ್ತಿಲ್ಲ. ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಭಗವಂತನು ಕರುಣಿಸಲಿ ಎಂದು ಪ್ರಾರ್ಥಿಸುತ್ತೇನೆ.

ವಂದನೆಗಳೊಂದಿಗೆ.

ತಮ್ಮ ವಿಶ್ವಾಸಿ,
ಡಿ.ಸಿ. ಶ್ರೀಕಠಪ್ಪ

ಕುಂಕುಮ ಸೌಭಾಗ್ಯವತಿಯ ಅಗಲಿಕೆ ಅಘಾತಕಾರಿಯಾದರು ಅವರಿಗೆ ಪುಣ್ಯ ಪ್ರಸಂಗ

10) – ಡಾ. ಎಸ್. ಎಸ್. ಕಟಗಿಹಳ್ಳಿಮಠ, ಬೆಂಗಳೂರು

ಪ್ರಿಯ ಮಿತ್ರರಾದ ಸನ್ಮಾನ್ಯ ಡಾ॥ ವೃಷಭೇಂದ್ರ ಸ್ವಾಮಿಗಳವರಿಗೆ :

ಶರಣರಿಗೆ ಶರಣು ಶರಣಾರ್ಥಿಗಳು ತಾವು ಮೊನ್ನೆ ದಿವಸ ದೂರವಾಣಿಯಲ್ಲಿ ತಮ್ಮ ಧರ್ಮಪತ್ನಿಯವರು ಲಿಂಗೈಕ್ಯರಾದದ್ದನ್ನು ತಿಳಿಸಿದ್ದು ಕೇಳಿ ನನಗೆ ದಿಗ್ಭ್ರಮೆಯಾಗಿ ಬಹಳ ದುಃಖಿತವಾದೆನು. ನನಗೆ ಇಷ್ಟು ದುಃಖವಾದ ಮೇಲೆ ತಮಗೂ ತಮ್ಮ ಮನೆಯವರಿಗೆಲ್ಲರಿಗೂ ಎಷ್ಟು ದುಃಖವಾಗಿರಬಹುದು ಎಂಬುದನ್ನು ನನಗೆ

ತಿಳಿದುಕೊಳ್ಳಲು ಅಸಾಧ್ಯವಾಯಿತು. ಹೀಗೆ ನಾನು ದುಃಖದ ಬಗ್ಗೆ ವಿಚಾರ ಮಾಡುವಾಗ ಒಂದು ಸಣ್ಣ ಬಿಳಿ ಗೆರೆಯು ಕಂಡಿತು. ಅದೇನೆಂದರೆ ನಿಮ್ಮ ಧರ್ಮಪತ್ನಿಯವರು ಲಿಂಗೈಕ್ಯರಾದ ದಿವಸ ಶ್ರಾವಣಮಾಸದ ಸೋಮವಾರ ಪ್ರತಿಪದ ಅಂಥ ಶುಭ ಮುಹೂರ್ತದಲ್ಲಿ ಲಿಂಗೈಕ್ಯರಾದದ್ದು ಅವರು ಪುಣ್ಯವಂತರು ಅಷ್ಟೆ ಅಲ್ಲದೆ ಕುಂಕುಮ ಸೌಭಾಗ್ಯವತಿಯಾಗಿ ಲಿಂಗೈಕ್ಯರಾದವರು ಇದರ ಅರಿವು ನನಗೆ ಮೂಡಿದಾಗ ನನಗೆ ಸ್ವಲ್ಪ ದುಃಖ ಕಡಿಮೆಯಾಯಿತು.

ತಮ್ಮ ಪತ್ನಿಯವರ ಆರೋಗ್ಯ ಸರಿಇಲ್ಲದಿದ್ದಾಗ ತಾವು ತಮ್ಮ ಆದ್ಯ ಕರ್ತವ್ಯ ಎಂದೂ ತಿಳಿದು ಅವರಿಗೆ ಸಾಧ್ಯವಿದ್ದ ಎಲ್ಲಾ ಸೇವೆಯನ್ನು ಮಾಡಿದಿರಿ. ನೀವು ಅವರಿಗೆ ಮಾಡಿದ ಸೇವೆಯನ್ನು ದೇವರು ಖಂಡಿತವಾಗಿಯೂ ದಾಖಲಿಸುತ್ತಾನೆ. ಈಗ ನಾನು ತಿಳಿಯಪಡಿಸುವ ಒಂದೇ ಮಾರ್ಗ ಎಂದರೆ ಮೃತರ ಆತ್ಮಕ್ಕೆ ಚಿರಶಾಂತಿ ನೀಡಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

**11) Patre S. Rajashekhar**

Coffee Planter

Life is a devine River

**-Sri Patre S. Rajashekhar & Family**
Birur- Bangalore.

Dear Sri. **Pro. Vrushabendra Swamy,**

Dear Sri. **Prof. Shivaprasad, Anupama and Sherdvani,**

We are all indeed sad that dear Lalitambakka is no longer with us. We can never forget her soft spoken words when ever we met her. We still vividly remember how she single handedly prepared a wonderful lunch, when we first visited your home in Dharwad. She showered her affection to us. She was an endearing lady to all those who met her. She lives on in our hearts for ever. She continues to live with us in her thought provoking books and stories. She was aghast at the way younger generation's tilt towards

the west, disregarding our own vales and traditions. She had sent out a strong message to the parents and teachers on how to save our youth from calamity in her inimitable book. "puttanige Hitaisheya Patragalu".

Life is a great mystery. We are here for a moment and then we are gone for ever. We are all mortals and none can escape the laws of Nature. Hold fast to your cherished memories of the past. We do not have words to console you, but we all share your loss. It is said that time is a great healer and we hope that you will overcome your grief in course of time.

The Tamil Classic, 'Tirukural' explains life in these words:

Life is a like a river which begins it's journey high up on the mountains as a spring. The spring becomes a river, as it moves down the hills on to the plains. The water in the river is constantly changing, yet it appears the same to the onlooker. As the river finally meets the sea, it feels sad by thinking that it's journey is over. But in reality, the river had neither a beginning nor an end. As the gentle rays of the sun bring up water vapour from the sea in the form of clouds to fall as rain on the mountain top, and to begin the flow of spring again. So, the cycle is complete. Likewise, soul is indestructible and eternal.

You all have to take comfort in the words of English poet, John Donne who says,

"All mankind is of one author, and is
One Volume. When one man dies, one
Chapter is not thrown out of the book, but

Translated into better language, and
Every Chapter must be translated:
God employs several translators, some pieces
Are translated by age, some by
Sickness, some by accident, some by war,
Some by justice, but God's hand is in every
Translation and his hand shall bind up all of
Our scatterd leaves again, for that library where
Every book shall lie open to one another".

Let me comfort you with the words of Robert Louis Stevenson who writes:

She is not dead, this mother, not dead,
But in the path we mortals tread.
Gone some few, trifling steps ahead
And nearer to the end;
So that you too once past the bend,
Shall meet again, as to face this mother"

Mrs. Lalita and the family join me in praying the Almighty to grant you and your families, courage and fortitude to bear this irreparable loss.

May the departed soul rest in Peace.

with our Deepest Sympathies,

[P.S. We did receive your letter and the invitation for the memorial service but we regret that we were unable to join you. But we will be with you in spirit and pray for the departed soul.]

## ೧೨) ಆತ್ಮಶಾಂತಿಗೆ ಶ್ರೀಮಂಜುನಾಥಸ್ವಾಮಿ ಕರುಣಿಸಲಿ

–ನ. ವಜ್ರಕುಮಾರ
ಕಾರ್ಯದರ್ಶಿ, ಜನತಾ ಶಿಕ್ಷಣ ಸಮಿತಿ, ಧಾರವಾಡ

ತಮ್ಮ ಧರ್ಮಪತ್ನಿಯವರಾದ ಪ್ರೊ. ಲಲಿತಾಂಬ ಅವರು ಇತ್ತೀಚೆಗೆ ಲಿಂಗೈಕ್ಯರಾದ ಸುದ್ದಿ ಕೇಳಿ ಬಹಳೇ ದುಃಖವಾಯಿತು. ಅವರು ಅತ್ಯಂತ ಮೇಧಾವಿ ಶಿಕ್ಷಕರು, ಸಮಾಜ ಸೇವಕರು ಮತ್ತು ಹೆಸರಾಂತ ಲೇಖಕಿಯಾಗಿದ್ದರು. ಅವರ ಪುಣ್ಯ ಸ್ಮರಣೋತ್ಸವ ಇಟ್ಟುಕೊಂಡಿದ್ದೀರಿ. ಕಾರ್ಯಕ್ರಮದಲ್ಲಿ ಶ್ರೀ. ನಿ.ಪ್ರ.ಜಗದ್ಗುರು ತೋಂಟದ ಸಿದ್ಧಲಿಂಗಮಹಾಸ್ವಾಮಿಗಳ ಸಾನಿಧ್ಯವು ಆಗಲಿದ ಆತ್ಮಕ್ಕೆ ಚಿರಶಾಂತಿಯನ್ನು ತಂದುಕೊಡುವಲ್ಲಿ ಸಂದೇವಿಲ್ಲ.

ದಯವಿಟ್ಟು ತಾವುಗಳು ತಮ್ಮ ಬಳಗದವರು ಶಾಂತಿ ಸಮಾಧಾನ ಹೊಂದುವಂತೆ ಶ್ರೀ ಮಂಜುನಾಥ ಸ್ವಾಮಿಯು ಕರುಣೆ ತೋರಲಿ ಎಂದು ಕೇಳಿಕೊಳ್ಳುವೆನು.

ತಮ್ಮವನಾದ

ನ.ವಜ್ರಕುಮಾರ, ಕಾರ್ಯದರ್ಶಿ

## ೧೩) ಶಿವಾಧೀನತೆ ಸೃಷ್ಟಿಕ್ರಿಯೆ

ಡಾ॥ ಎಂ.ಎಂ. ಜೋಶಿ, ನೇತ್ರತಜ್ಞರು, ಹುಬ್ಬಳ್ಳಿ

ತಮ್ಮ ಧರ್ಮ ಪತ್ನಿ ಶ್ರೀಮತಿ ಲಲಿತಾಂಬಾರವರು ಶಿವಾಧೀನರಾದ ದುಃಖದ ವಿಷಯ ತಿಳಿದಿದೆ. ಸೃಷ್ಟಿಯ ಅಗು ಹೋಗುಗಳಲ್ಲಿ ಜರುಗುತ್ತಿರುವ ಕ್ರಿಯೆಗಳಾದ ಹುಟ್ಟು ಸಾವುಗಳ ಬಗ್ಗೆ ನಮಗೆ ಏನನ್ನೂ ಮಾಡಲು ಸಾಧ್ಯವಿಲ್ಲ.

ದಿನಾಂಕ : ೦೨–೦೯–೨೦೦೭ ರಂದು ಶ್ರೀಮನ್ನಿರಂಜನ ಪ್ರಣವಸ್ವರೂಪಿ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ಜರುಗುತ್ತಲಿರುವ ಪುಣ್ಯಸ್ಮರಣೋತ್ಸವದ ಆಮಂತ್ರಣ ತಲುಪಿದೆ. ಅಂದಿನ ದಿವಸ ಡಾ. ಜಾಯದೆಯವರ ವಿಷಯವಾಗಿ ನಮ್ಮಲ್ಲಿ ಆಯುರ್ವೇದ ಕಾಲೇಜಿನಲ್ಲಿ ಇರುವ ಕಾರ್ಯಕ್ರಮಕ್ಕೆ ಅಧ್ಯಕ್ಷನಾಗಲು ಒಪ್ಪಿಕೊಂಡಿರುವುದರಿಂದ ತಮ್ಮಲ್ಲಿಗೆ ಬರಲು ಸಾಧ್ಯವಾಗುತ್ತಿಲ್ಲ ಕ್ಷಮಿಸಿರಿ.

ಇಂತಿ ತಮ್ಮ ವಿಶ್ವಾಸಿ
ಎಂ. ಎಂ. ಜೋಶಿ

೧೪) ಅನ್ಯೋನ್ಯ ದಾಂಪತ್ಯ ನಿಮ್ಮದು

ಡಾ॥ ಎಸ್.ಕೆ. ಜೋಶಿ
ಧಾರವಾಡ

ಮಾನ್ಯ ಡಾ॥ ವೃಷಭೇಂದ್ರಸ್ವಾಮಿ ಅವರಿಗೆ ನಮನಗಳು.

ಬಾಳ ಸಂಗಾತಿಯಾಗಿ, ಬಾಳಿನುದ್ದಕ್ಕೂ ನಡೆದ ನಿಮ್ಮ ಧರ್ಮಪತ್ನಿ ಶ್ರೀಮತಿ ಲಲಿತಾಂಬಾ ಅವರು ಇನ್ನಿಲ್ಲದ ಸುದ್ದಿ ಪತ್ರಿಕೆಗಳ ಮಾಧ್ಯಮದಿಂದ ತಿಳಿಯಿತು. ಆಗ, ಇತಿಹಾಸ ವಿಚಾರ ಸಂಕಿರಣವೊಂದರಲ್ಲಿ ಮೈಸೂರಿನಲ್ಲಿದ್ದೆ.

ಬಹಳ ದುಃಖದ ಸುದ್ದಿ ಪ್ರೊಫೆಸರ್ ಅವರೇ! ಪ್ರಸಿದ್ಧ ಲೇಖಕಿ, ಒಳ್ಳೆಯ ಶಿಕ್ಷಕಿ, ಮೇಲಾಗಿ ಕರ್ನಾಟಕದ ಮಹಿಳೆಯರಿಗಾಗಿ ಹಗಲಿರುಳು ಪರಿಶ್ರಮಿಸಿದ ಮಹಿಳಾಗ್ರಹಣಿ. ಇದಲ್ಲದೆ, ನಿಮ್ಮಿಬ್ಬರ ಅನ್ಯೋನ್ಯ ದಾಂಪತ್ಯ ಜೀವನವು ಇನ್ನೊಬ್ಬರಿಗೆ ಆದರ್ಶ ಎನ್ನುವುದರಲ್ಲಿ ಎರಡು ಮಾತಿಲ್ಲ.

"ಬಾ ಅಲ್ಲಿ ಕಡಲಲ್ಲಿ ತೆರೆ ತೆರೆಯನೊಡೆವಲ್ಲಿ
ನೀರ್ ಬುರುಗು ಬಿಡುವಲ್ಲಿ ಮೀಯೋಣ ಬಾ
ತೆಪ್ಪವೋ ತಾರಿಯೋ ಹರಿಗೋಲೋ ಹಡಗವೊ
ತೆರೆ-ತೊರೆ-ತೊಟ್ಟಿಲನೇರೋಣ ಬಾ", ಎಂದು
ತಮ್ಮನ್ನು ಕರೆಯುತ್ತ ಸುಮಂಗಲೆಯಾಗಿ, ಮೊದಲೇ
ಹೊರಟು ಹೋದರು ಲಲಿತಾಂಬ ಅವರು.
ಅವರನ್ನುಕಳೆದು ಕೊಂಡ ನಿಮ್ಮ ಮನ ಎಷ್ಟೊಂದು ಮಮ್ಮಲ
ಮರುಗುತ್ತಿರಬಹುದು! ಅಗಲಿಕೆಯನ್ನು ಭರಿಸುವ ಶಕ್ತಿಯನ್ನು
ಈಗ ತಮಗೆ ನೀಡಲಿ. ಲಲಿತಾಂಬರ ಆತ್ಮಕ್ಕೆ ಶಾಂತಿ ನೀಡಲಿ.

೧೫) ಸಾಮಾಜಿಕ -ಶಾಹಿತ್ಯ ಲೋಕದ ಧ್ರುವತಾರೆ

ಡಾ॥ ದೀನಬಂಧು ಜಿ. ಹಳ್ಳಿಕೇರಿ
ಹುಬ್ಬಳ್ಳಿ

ತಮ್ಮ ಜೀವನ ಸಂಗಾತಿ, ನಮಗೆಲ್ಲ ಮಾತೃಸ್ವರೂಪಿಗಳೂ ಕನ್ನಡ ಸಾಹಿತ್ಯಲೋಕವನ್ನು ಬೆಳಗಿದ ಪೂಜ್ಯನೀಯ ಮತೋಶ್ರೀ ಲಲಿತಾಂಬಾಅವರು ನಿಧನರಾದದ್ದು ತಿಳಿದು ಅತ್ಯಂತ ದುಃಖವಾಯಿತು. ಎಲ್ಲವೂ ಭಗವಂತನ ಇಚ್ಛೆ, ಉಪಾಯವಿಲ್ಲ. ಅಗಲಿದ ಆತ್ಮಕ್ಕೆ ಪಠಮಾತ್ಮನು ಚಿರಶಾಂತಿಯನ್ನೀಯಲಿ ಹಾಗೂ ಹಿರಿಯರ ಅಗಲುವಿಕೆಯಿಂದಾದ ಅಪಾರವಾದ ದುಃಖವನ್ನು ಸಹಿಸುವ ಧೈರ್ಯ ಹಾಗೂ ಶಕ್ತಿಯನ್ನು ದಯಪಾಲಿಸಲೆಂದು ಅನನ್ಯವಾಗಿ ಪ್ರಾರ್ಥಿಸುವೆ.

ಕರ್ನಾಟಕ ಸಾಮಾಜಿಕ ಹಾಗೂ ಸಾಹಿತ್ಯಲೋಕದ ಧ್ರುವತಾರೆಯನ್ನು

ಕಳೆದುಕೊಂಡು ಬಡವಾಗಿದೆ. ಆ ಸ್ಥಾನವನ್ನು ತುಂಬುವದು ಅತ್ಯಂತ ಕಷ್ಟ!

ಎಲ್ಲ ಬಂಧು ಬಾಂಧವರಿಗೂ ಮಕ್ಕಳಿಗೂ ಮೊಮ್ಮಕ್ಕಳಿಗೂ ನಮ್ಮೆಲ್ಲ ಹಳ್ಳಿಕೇರಿ ಕುಟುಂಬದವರ ಸಾಂತ್ವನಪರವಾದವನ್ನು ತಿಳಿಸಿರಿ.

೧೬) ಅಭಿಮಾನಿ ಸಹೋದರರ ಆತ್ಮೀಯ ಸಾಂತ್ವನ.

– ಎ.ಆರ್. ಮಾಳಕೊಪ್ಪಮಠ, ಗದಗ

ಆತ್ಮೀಯ ಬಂಧುಗಳಾದ ಡಾ॥ ವೃಷಭೇಂದ್ರಸ್ವಾಮಿಗಳು, ಧಾರವಾಡ

ತಮ್ಮ ಧರ್ಮಪತ್ನಿಯರಾದ ಶ್ರೀಮತಿ ಲಲಿತಾಂಬ ಅವರು ಶಿವಾಧೀನರಾದ ಸುದ್ಧಿ ತಿಳಿಯಿತು, ಅಂದು ಊರಲ್ಲಿ ಇಲ್ಲದ ಕಾರಣ ಬರಲು ಆಗದಕ್ಕೆ ತಾವು ಕ್ಷಮಿಸುವಿರೆಂದು ಆಶಿಸಿದ್ದೇನೆ.

ನಡುವೆ ಅಳಿಯಂದಿರಾದ ಶ್ರೀ ರವಿಂದ್ರನಾಥ ಮತ್ತು ಮನೆಯವರ ಜತೆ ಅವರನ್ನು ಕಾಣಲು ನಾವು ಬಂದಿದ್ದೆವು, ಇದ್ದದರಲ್ಲಿ ಚೆನ್ನಾಗಿ ಇದ್ದು ಬಹಳ ಸಂತೋಷದಿಂದ ಮಾತನಾಡಿದ್ದು ನಮಗೆಲ್ಲ ನೆಮ್ಮದಿ ಆಯಿತು, ಈಗ ಅಗಲುವಿಕೆಯಿಂದ ಕೊಡ್ಡ ಅಘಾತವಾಯಿತು.

ನೀವು ಬಹಳ ತಿಳುವಳಿಕೆಯ ಯಜಮಾನರು, ಜಗತ್ತನ್ನು, ಸಮಾಜವನ್ನು ನೋಡಿದ್ದೀರಿ ಇದೆಲ್ಲ ಪ್ರಕೃತಿಯ ನೇಮ, ಬಂಡಿಯ ಗಾಲಿ ಮುರಿಯಿತೆಂದರೆ ಬದುಕು ವಿಚಿತ್ರ ಆಗುತ್ತದೆ. ಅಂದು ನೀವು ಹೇಳಿದ್ದಿರಿ ಮಗನು ಬೆಂಗಳೂರಿಗೆ ಮನೆ ಮಾಡಿ ನಮ್ಮನ್ನು ಅಲ್ಲೇ ಇರಲು ಕರೆಯುತ್ತಿದ್ದಾನೆ ಅಂದಿರಿ ! ತಾವು ಬೇಜಾರು ಮಾಡಿಕೊಳ್ಳದೇ ಉತ್ಸಾಹದಿಂದ ಇರಲು ಪ್ರಯತ್ನ ಮಾಡುವದು ಅನಿವಾರ್ಯ ಓದು, ಟಿ.ವಿ, ಸಂಗೀತ, ಸಾಹಿತ್ಯ, ನಿಮ್ಮ ಮಗ, ಸೊಸೆ, ಮೊಮ್ಮಗಳು ನೆಮ್ಮದಿಯ ವಾತಾವರಣ ತರಲೆಂದು ಆಶಿಸಿದ್ದೇನೆ. ಮತ್ತೆ ತಮ್ಮನ್ನು ಕಾಣುತ್ತೇನೆ.

ಅಕ್ಕನವರ ಪವಿತ್ರ ಆತ್ಮಕ್ಕೆ ನಮನಗಳು

೧೭) ಶ್ರೀ ಅನ್ನದಾನಯ್ಯ ಪುರಾಣಿಕ್

ಸೋದರಿಯವರ ಸಾವಿನ ಸುದ್ಧಿ ತಿಳಿದು ಅಪಾರ ದುಃಖವಾಯಿತು. ಪತಿಗೆ ತಕ್ಕ ಸತಿಯಾಗಿ, ಪರಿಣಿತ ಪ್ರಾಧ್ಯಾಪಕಿಯಾಗಿ, ಪ್ರತಿಭಾವಂತ ಸಾಹಿತಿಯಾಗಿ, ಶರಣಜೀವಿಯಾಗಿ ಅವರು ಸಲ್ಲಿಸಿದ ಬಹುಮುಖ ಸೇವೆಯು ಪ್ರಶಂಸನಾರ್ಹವಾದುದು; ಪರಶಿವನ ಪಾದವನ್ನು ಸೇರಿರುವ ಮಹಾ ಮಾತೆಗೆ ಚಿರಶಾಂತಿಯನ್ನು ಕೋರುವುದು ಔಪಚಾರಿಕ. ಅವರ ಪವಿತ್ರಾತ್ಮಕ್ಕೆ ಅನಂತ ನಮನಗಳು. ಶಿವಶರಣಾರಾಧನೆ. ಪೂಜ್ಯರ ಸನ್ನಿಧಿಯಲ್ಲಿ ಸುಗಮವಾಗಿ ನೆರವೇರಲೆಂದು ಮನಸಾರೆ ಹಾರೈಸುವೆ.

೧೮) ಸಹಪಾಠಿ ಸೋದರಿಗೆ ಶ್ರದ್ಧಾಂಜಲಿ

– ಶ್ರೀ ಗೊ.ರು. ಚೆನ್ನಬಸಪ್ಪ
ಬೆಂಗಳೂರು

ಸೋದರಿ ಲಲಿತಾಂಬಾ ಅವರ ಪುಣ್ಯಸ್ಮರಣೆಯ ಕರೆಯೋಲೆ ಇಂದು (೩.೯.೨೦೦೭) ತಲುಪಿತು. ನೋಡಿದ ಕ್ಷಣದಲ್ಲಿ ಕಣ್ಣು ಹನಿ ತುಂಬಿದವು. ನನ್ನ ಪ್ರೌಢಶಾಲೆಯ ವಿದ್ಯಾರ್ಥಿ ಜೀವನದ ನೆನಪಾಯಿತು. ಆಗ ಬೀರೂರಿನಲ್ಲಿ ಅದೇ ಪ್ರಥಮವಾಗಿ ಪ್ರೌಢಶಲೆ ಆರಂಭ. ಇಡೀ ನಮ್ಮ ತರಗತಿಗೆ ಲಲಿತಾಂಬಾ ಮತ್ತು ಸರೋಜ ಎಂಬ ಇಬ್ಬರೇ ವಿದ್ಯಾರ್ಥಿನಿಯರು.

ನನಗೆ ಲಲಿತಾಂಬಾ ಅವರ ತೌರುಮನೆಯವರ ನಿಕಟ ಪರಿಚಯವಿತ್ತು. ಅವರು ನಿಮ್ಮೊಡನೆ ಸುಂದರ ಬದುಕನ್ನು ನಡೆಸಿ ಹೋಗಿದ್ದಾರೆ. ಕೊನೆಗಾಲದಲ್ಲಿ ಅವರು ಅಸ್ವಸ್ಥತೆಯಿಂದ ನರಳಿದ್ದು ದುಃಖದ ಸಂಗತಿ.

ಏನಿದ್ದರೂ 'ವಿದಿ' ಗೆ ಅಧೀನರಾಗಿರುವ ನಾವೆಲ್ಲ ಎಲ್ಲವನ್ನೂ ಸಮಾಧಾನ ಚಿತ್ತದಲ್ಲಿ ಸ್ವೀಕರಿಸಬೇಕು.

೧೯) ಸಹಪಾಠಿಗೆಳತಿ – ಒಳ್ಳೆಯ ಜೀವ

– ಶ್ರೀಮತಿ ಎಸ್.ಕೆ. ರಮಾದೇವಮ್ಮ
ಬೆಂಗಳೂರು

ನಮಸ್ಕಾರಗಳು ಶ್ರೀಮತಿ ಲಲಿತಾಂಬರವರು ಇತ್ತೀಚೆಗೆ ನಿಧನರಾದ ವಿಷಯ ತಿಳಿದು ತುಂಬಾ ಬೇಸರವಾಯ್ತು. ಈಗ ಸ್ವಲ್ಪದಿನಗಳಿಂದ ಲಲಿತಾಂಬರವರ ಬಗ್ಗೆಯೇ ಯೋಚಿಸುತ್ತಿದ್ದೆ. ಹುಬ್ಬಳ್ಳಿಗೆ ಹೋದರೆ ಖಂಡಿತ ಭೇಟಿ ಮಾಡಬೇಕೆಂದು ಕೊಂಡೆ ಫೋನ್ ಮಾಡಿದರೆ, ಅವರಿಗೆ ಹುಷಾರಿಲ್ಲದೆ ಇರುವುದರಿಂದ ತೊಂದರೆಯಾಗಬಹುದೆಂದುಕೊಂಡು ಸುಮ್ಮನಾಗುತ್ತಿದ್ದೆ. ನನ್ನ ಪರಿಷತ್‌ನಲ್ಲಿ ದತ್ತಿ ಪುರಸ್ಕಾರದ ಕಾರ್ಯಕ್ರಮವಿತ್ತು. ತಮ್ಮನ್ನು ಅಲ್ಲಿ ಭೇಟಿಯಾಗಬಹುದೆಂಬ ಆಸೆಯಿಂದ ಹೋದೆ. ಅಲ್ಲಿಗೆ ಹೋದಾಗ ಲಲಿತಾಂಬರವರ ನಿಧನದ ವಾರ್ತೆ ತಿಳಿಯಿತು. ಮನಸ್ಸಿಗೆ ತುಂಬಾ ಆಘಾತವಾಯಿತು. ಅಷ್ಟು ಒಳ್ಳೆಯ ಜೀವ ಇನ್ನು ಹೆಚ್ಚು ಕಾಲ ಇರಬೇಕಿತ್ತು. ಆ ದೇವರೇ ನಿಮಗೆ ದುಃಖವನ್ನು ಸಹಿಸುವ ಶಕ್ತಿ ಕೊಡಬೇಕು.

ಈ ಕಾಲದಲ್ಲಿ ಗಾಳಿ ಮಾಡುತ್ತೇನೆಂದರೆ ಏನೂ ಆಗುವುದಿಲ್ಲ. ಯಾವುದಾದರೂ ಆಸೆಯಿದ್ದರೆ ಶಿಕ್ಷಣ ಮಾಡಬೇಕು. ಅದಕ್ಕೇ ನನಗೆ ಅವರನ್ನು ಭೇಟಿಯಾಗುವ ಅವಕಾಶ ಸಿಗಲಿಲ್ಲ. ಅವರ ನೆನಪು ಸದಾ ಮನಸ್ಸಿನಲ್ಲಿರುತ್ತದೆ.

ಧೈರ್ಯ ತಂದುಕೊಳ್ಳಿ ಹೆಚ್ಚಿಗೆ ಬರೆಯಲಾರೆ.

## ೨೦) ನಾಡು–ನುಡಿ–ಸಂಸ್ಕೃತಿ ಪುರೋಭಿವೃದ್ಧಿ ಚಿಂತನೆ

–ಡಾ॥ ಜಿ.ಎಸ್. ಉಪಾಧ್ಯ
ಮುಂಬಯಿ ವಿಶ್ವವಿದ್ಯಾಲಯ,
ಮುಂಬಯಿ

ಲಲಿತಾಂಬ ಅವರ ನಿಧನದ ಸುದ್ದಿ ತಿಳಿದು ಬಹಳ ಬೇಸರವಾಯಿತು. ಶಿಕ್ಷಣ ತಜ್ಞರಾಗಿ ಕನ್ನಡ ನಾಡು–ನುಡಿ–ಸಂಸ್ಕೃತಿಯ ಪುರೋಭಿವೃದ್ಧಿಗೆ ತಮ್ಮನ್ನು ಅರ್ಪಿಸಿಕೊಂಡಿದ್ದ ಅವರ ನಿಧನದಿಂದ ತುಂಬಲಾರದ ನಷ್ಟವಾಗಿದೆ.

## ೨೧) ಪ್ರೀತಿಯ ಹಿರಿಯಕತೆಗಾರ್ತಿ

– ಶ್ರೀ ಆರೂರ ಲಕ್ಷ್ಮಣ ಶೇಟ್, ಹುಬ್ಬಳ್ಳಿ

ಇದು ನೋವಿನ ಕ್ಷಣ. ಸಾಂತ್ವನದ ಮಾತುಗಳು ಕೂಡ ಸಮಾಧಾನ ತುರುವಲ್ಲಿ ಸೋಲುವ ಕ್ಷಣ. ಬಾಳ ಸಂಗಾತಿಯನ್ನು ಕಳದುಕೊಂಡು ಹಲುಬುತ್ತಿರುವ ನಿಮ್ಮ ಎದೆ ತುಂಬ ತಲ್ಲಣ ಮನೆ – ಮನ ಭಣಭಣ.

ಸಾಹಿತ್ಯಕ್ಷೇತ್ರದಲ್ಲಿ ಬಲು ಎತ್ತರಕ್ಕೆ ಏರಿದ್ದ – ನಿಮ್ಮ ಉತ್ತುಂಗತೆ, ಉಲ್ಲಸ, ಉತ್ಸಾಹಗಳಿಗೆ ಕಾರಣಕರ್ತೆಯಾಗಿದ್ದ – ನಮ್ಮೆಲ್ಲರ ಪ್ರೀತಿಯ ಹಿರಿಯ ಕತೆಗಾರ್ತಿ, ಸೋದರಿ ಲಲಿತಾಂಬ ಅಸ್ತಮಿಸಿದ್ದು ಎಲಲರ ಮನದಲ್ಲು ಅನಾಥ ಭಾವ ತುಂಬಿದೆ. ನಾವೆಲ್ಲ ನಿಮ್ಮೊಂದಿಗಿದೆವು; ಮುಂದೆಯೂ ಇರುತ್ತೇವೆ.

ನಿಮ್ಮ ಅನುಭವ, ಅನುಭಾವ, ವಚನಗಳ ಪಚನ, ಅಧ್ಯಯನ ತುಂಬಿದ ಆನಂದ, ಸಾಹಿತ್ಯ ಸರಸ್ವತಿ ದರ್ಶಿಸಿದ ಸತ್ಯ, ಸಾಂಸ್ಕೃತಿಕ ಚಟುವಟಿಕೆಗಳು ಚಿತ್ರ ಭಿತ್ತಿಯಲ್ಲಿ ಮೂಡಿಸಿದ ಚಿತ್ತಾರ, ಶಿಷ್ಯವರ್ಗ ಕಟ್ಟಿಕೊಟ್ಟ ಪ್ರೀತಿ.... ಎಲ್ಲವೂ ಮೇಳೈಸಿ, ನಿಮಮ ನೋವು ನೀಗಿಸಿ, ಹಿಡಿದೆತ್ತಿ ಗೆಲ್ಲಿಸುವ ಭರವಸೆ ನ್ನನಲ್ಲಿದೆ.

ನಿಮ್ಮಂತಹ ಸಾತ್ವಿಕ, ಸಜ್ಜನ ಸಾಹಿತಿ ಬಾಳಿನ ಈ ತಿರುವಿನಲ್ಲಿ ಧೃತಿಗೆಡದೆ ಜಯಿಸುವ ಬಗೆಗೆ ನಾವೆಲ್ಲ ಆಶಾವಾದಿಗಳಾಗಿದ್ದೇವೆ. ಮತ್ತೆ ಸೇರೋಣ; ಎದೆಯಾಳದ ಭಾವನೆಗಳನ್ನು ಹಂಚಿಕೊಳ್ಳೋಣ.

ನಿಮ್ಮ ಸಹಧರ್ಮಿಣಿಯ ಆತ್ಮಕ್ಕೆ ಶಾಂತಿ ಕೋರುತ್ತೇನೆ.

## ೨೨) ಮಹಿಳಾ ಸಾಹಿತಿಗಳ ಸಂಘಟಕಿ

– ಶ್ರೀ ರುದ್ರನಾಥ ಕಲ್ಯಾಣಶೆಟ್ಟಿ
ನರಗುಂದ

ಪತ್ರಿಕೆಯಲ್ಲಿ ತಮ್ಮ ಸಹಧರ್ಮಿಣಿಯವರಾದ ಲಲಿತಾಂಬಾತಾಯಿಯವರು ಲಿಂಗೈಕ್ಯರಾದ ಸುದ್ದಿ ಓದಿ ತುಂಬಾ ಆಘಾತವಾಯಿತು.

ತಮ್ಮ ಜೀವನದುದ್ದಕ್ಕೂ ಸಾಹಿತ್ಯ ಮತ್ತು ಮಹಿಳಾ ಸಾಹಿತಿಗಳ ಸಂಘಟನೆಗಾಗಿ ಅಹರ್ನಿಶೆ ದುಡಿದ ಅವರು ಇಲ್ಲವಾದುದು ನಾಡಿಗೆ ತುಂಬಿಬಾರದ ಹಾನಿಯಾಗಿದೆ.

ಅವರ ಅಗಲಿಕೆಯ ನೋವು ಸಹಿಸುವ ಶಕ್ತಿಯನ್ನು ಶರಣ ಬದುಕನ್ನು ಬದುಕಿದ ತಮಗೂ ತಮ್ಮ ಪುತ್ರನಿಗೂ ಹಾಗು ಕುಟುಂಬದ ಎಲ್ಲರಿಗೂ ನೀಡಲೆಮದು ಆ ಶರಣರನ್ನು ಪ್ರಾರ್ಥಿಸುವೆ.

**23) Blessings of Yogi Acayuta**

Dear Sri Vrushabendra Swamy.

Due to the confersion in the communication, the blunder in the condalence message,in highly regretted.

may sri yogi Achyuta bless yyou with long lig\fe to serve the society and shree chyutashirama, in a memorable manner.

we play ljf Achyuta to bless the peparted soul with eternal peace, and provide salce and coverage to bear the heavy loss with caurage, to the bereaved family.

**೨೪) ಸದಾಸ್ಮರಣೀಯ ಉತ್ಕೃಷ್ಟ ಸೇವೆ**

ಮುಖ್ಯೋಪಾಧ್ಯಾಯರು ಮತ್ತು ಸಿಬ್ಬಂಧಿ.
ಶ್ರೀ ಜಗದ್ಗುರು ಮಲ್ಲಿಕಾರ್ಜುನ ಮುರುಘರಾಜೇಂದ್ರ ಪ್ರೌಢಶಾಲೆ
ಬೀರೂರು – ಚಿಕ್ಕಮಂಗಳೂರು ಜಿಲ್ಲೆ

ನಿಮ್ಮ ಧಮ್ಪತ್ನಿಯವರಾದ ಪ್ರೊ. ಯು. ಎಸ್. ಲಲಿತಾಂಬವೃಷಭೇಂದ್ರಸ್ವಾಮಿ, ಲಿಂಗೈಕ್ಯರಾದ ವಿಷಯ ತಿಳಿದು ನಮ್ಮ ಸಿಬ್ಬಂಧಿ ವರ್ಗದವರೆಲ್ಲರಿಗೂ ಮನಸ್ಸಿತೆ ತುಂಬ ಖೇಧವಾಗಿದೆ. ನಿಮ್ಮ ಶ್ರೀಮತಿಯವರು ಕರ್ನಾಟಕ ವಿಶ್ವವಿದ್ಯಾನಿಲಯ ಶಿಕ್ಷಣ ಮಹಾವಿದ್ಯಾಲಯ ಧಾರವಾಡದಲ್ಲಿ ಪ್ರವರ್ಚಕರಾಗಿ, ಶಿಕ್ಷಣತಜ್ಞರಾಗಿ ಮತ್ತು ಉತ್ತಮ ಸ್ಮರಣೀಯವಾಗಿದ್ದ ಇಂದಿನ ಪೀಳಿಗೆಯು ನೆನೆಯುವಂತಾಗಿದೆ.

ನಿಮ್ಮ ಧರ್ಮಪತ್ನಿಯವರ ಆತ್ಮಕ್ಕೆ ಆ ಭಗವಂತನು ಶಾಂತಿಯನ್ನು ಕರುಣಿಸಲೆಂದು ಈ ಪುಣ್ಯ ಸ್ಮರಣೋತ್ಸವದ ದಿನದಂದು ಪ್ರಾರ್ಥಿಸುತ್ತೇವೆ.

೨೫) ಧಾರವಾಡದ ದಿವ್ಯಚೇತನ

–ಡಾ ಕೆ.ಎಂ. ವಿಶ್ವನಾಥ ಮತ್ತು ಶ್ರೀಮತಿ ಗೌರಮ್ಮ
ಜಗಳೂರು ದಾವಣಗೆಯೆ ಜಿಲ್ಲೆ

ತರುವಾಯ ತಮ್ಮ ಶ್ರೀಮತಿಯವರು ಕೈಲಾಸವಾಸಿಯಾದ ವಿಚಾರ ತಿಳಿದು ತುಂಬಾ ದುಃಖವಾಗಿದೆ. ಹಿರಿಕಿರಿಯರಲ್ಲಿ, ದೀನದಲಿತರಲ್ಲಿ, ಭೇದಭಾವಗಳಿಲ್ಲದೆ ನಿರ್ವಂಚನೆಯಿಂದ ಎಲ್ಲರಲ್ಲೂ ಒಂದಾಗಿ ಬೆರೆತು ಸಫಲ, ಸಾರ್ಥಕ, ಸುಧೀರ್ಘ ಬಾಳ್ವೆಯನ್ನು ಸಾಗಿಸಿದ ಧಾರವಾಡದ ದಿವ್ಯ ಚೇತನವಾಗಿರುವುದು ಬಹಳ ಬೇಸರ ಹಾಗೂ ತುಮಬಲಾರದ ನಷ್ಟವಾಗಿದೆ.

ನಿಮ್ಮ ಶ್ರೀಮತಿಯವರು ಅವರಾಡುತ್ತಿದ್ ಉತ್ತಮ ಮಾತುಗಳು ಸ್ವಷ್ಟನುಡಿಗಳು ನಮಗೆ ತುಂಬಾ ಸ್ಫೂರ್ತಿಯನ್ನು ನೀಡಿದ್ದವು. ಸಾಮಾಜಿಕ ಜನ ಜೀವನದಲ್ಲಿ, ಧಾರವಾಡದ ಸಮಗ್ರ ಚಟುವಟಿಕೆಗಳಲ್ಲಿ, ವಿದ್ಯಾಸಂಸ್ಥೆಗಳಲ್ಲಿ, ಒಂದಲ್ಲ ಹಲವಾರು ಅನೇಕಾನೇಕ ಕ್ಷೇತ್ರಗಳಲ್ಲಿ ಮುಂದಾಗಿ ದುಡಿದು ಎಲ್ಲರಿಗೂ ಅನುಕರಣೀಯ ಹಾಗೂ ಅನುಸರಣೀಯರಾಗಿ ಬಾಳುಬೆಳಗಿಸಿದವರು.

ನಿಮ್ಮ ಶ್ರೀಮತಿಯವರ ಆದರ್ಶಗಳ ಹಾದಿಯಲ್ಲಿ ನಾವೆಲ್ಲರೂ ನಡೆಯುವಂತೆ ಅನುಗ್ರಹಿಸಲೆಂದು ಬೇಡುವೆವು.

೨೬) ಧೈರ್ಯ–ಧೃತಿಗಳ ಸಂಗಮ

– ಡಾ॥ ಬಸವರಾಜ ಪುರಾಣಿಕ
– ಡಾ॥ ವಿಮಲಾ ಪುರಾಣಿಕ ಬೆಂಗಳೂರು

ಪೂಜ್ಯ ಲಲಿತಕ್ಕನವರ ನಿಧನ ನಮ್ಮೆಲ್ಲರಿಗೆ ಅಪಾರ ನೋವು ಉಂಟು ಮಾಡಿದೆ. ಲಲಿತೆಯ ಕೋಮಲತೆ ಮತ್ತು ಕಮನೀಯ ತೆಯ ಜೊತೆಗೆ ಅಂಬೆಯ ಧೈರ್ಯ ಧೃತಿಗಳ ಸಂಗಮವಾಗಿದ್ದ ಆಕೆ ನಿಮ್ಮ 'ಸಹೃದಯ' ಬದುಕಿಗೆ ಬಂದದ್ದು, ತಂದದ್ದು, ಸಂದದ್ದು ಎಲ್ಲವೂ ಅಗತ್ಯ. ನಾವು ಅನೇಕ ಸಲ ಅವರ ಹಿತೋರ್ಷ ಕಕ್ಕುಲತೆ ಮತ್ತು ಆತಿಥ್ಯಗಳಲ್ಲಿ ಸಾಲುಗೊಂಡಿದ್ದು ನಮ್ಮ ನೆನಪಿನಲ್ಲಿ ಸದಾ ಉಳಿದಿದೆ.

ನಿಮಗೆ ಆಗಿರುವ ಒಂದು 'ಶೂನ್ಯತೆ'ಯ ಅರಿವು ನಿಮಗಿದೆ ಐವತ್ತೊಂದು ವರ್ಷಗಳ ಒಡನಾಡಿತನವು ಒಂದು ಕ್ಷಣದಲ್ಲಿ ಒಂಟಿತನ್ನಕೆ ಕುಂಟಿತವಾದಾಗ ಉಂಟಾಗುವ ಘೋರ. ಅಷ್ಟೋರಗಳನ್ನು ನಾನು ಊಹಿಸಬಲ್ಲೆ. ಅದನ್ನು ಶಿವನ ಪ್ರಾಣದವೆಂದು ––––– ನಿಮ್ಮ ಮನೋಧರ್ಮ ಇನ್ನೊಂದು ಘೋ––––– ಎಂದು ಹಾರೈಸುತ್ತ ಈ ಕಾಗದ ಮುಗಿಸುತ್ತಿದ್ದೇನೆ.

## ೨೭) ಮೆನಗೆ ಮಹಾಲಕ್ಷ್ಮಿ ಲಲಿತಕ್ಕ

ಡಾ॥ ಪಂಡಿತಾರಾಧ್ಯ, ಬೆಂಗಳೂರು

ಲಲಿತಕ್ಕನವರ ಪುಣ್ಯ ಸ್ಮರಣೋತ್ಸವದ ವಿಷಯ ತಿಳಿಯಿತು. ಕಳೆದ ಕೆಲವು ತಿಂಗಳಿನಲ್ಲಿ ಆರೋಗ್ಯದ ತೊಂದರೆ ಅನುಭವಿಸಿ, ಕೊನೆಗೆ ಚಿರನಿದ್ರೆಯಲ್ಲಿ ಮುಳುಗಿದರು. ಮನಸ್ಸಿಗೆ ಬಹಳ ದುಃಖವಾಯಿತು.

ಹಿರಿಯರಿಗೆ ರಕ್ಷಕಿಯಾಗಿ–

ಬೀರೂರಿನಲ್ಲಿ ಶರ್ಮರು ಮತ್ತು ಅಕ್ಕಮ್ಮನವರಿಎ ಎಲ್ಲಾ ರೀತಿಯಲ್ಲೂ ರಕ್ಷಣೆ ಒದಗಿಸಿದರು.

ಕರಿಯರಿಗೆ ತಾಯಿಯಾಗಿ: ಊರಿನ ಮತ್ತು ತವರೂರಿನ ಮನೆಯ ಕಿರಿಯರಿಗೆ ತಾಯಿಯಾದರು

ಮಕ್ಕಳಿಗೆ ಶಿಕ್ಷಕಿಯಾಗಿ: ತವರು ಮನೆಯ ತಮ್ಮಂದಿರು, ತಂಗಿಯವರೆಲ್ಲರಿಗೂ ವಿದ್ಯಾದಾನ ಮಾಡಿದರು.

ರೋಗಿಗಳಿಗೆ ದಾನಿಯಾಗಿ : ಅಕ್ಕಮ್ಮನವರ ಅನಾರೋಗ್ಯದ ದಿನಗಳಲ್ಲಿ ಸೇವೆ ಮಾಡಿದರು

ಸೋಗಿನವರಿಗೆ ಭೈರವಿಯಾಗಿ : ಮನೆಯಲ್ಲಿ ಸೋಮಾರಿಗಳಿಗೆ ಎದುರು ನಿಂತರು.

ಪತಿಗೆ ಶಾಂತಲೆ : ಪತಿ ವಿಷ್ಣುವರ್ಧನನಿಗೆ ನಿಜವಾಗಿಯೂ ಶಾಂತಲೆಯಾಗಿ ಶಾಂತಿ ಸುಖ ಜೀವನದುದ್ದಕ್ಕೂ ಕೊಟ್ಟರು.

ನುಡಿದಂತೆ ನಡೆದು ಮಹಾಲಕ್ಷ್ಮಿ ಎನಿಸಿ ಜೀವನ ಮುಗಿಸಿದರು.

## ೨೮) ಕಂಪುಳ್ಳ ಕುಸುಮದಂಥ ಮುತ್ತೈದೆ

ವಿದ್ವಾನ್ ಎಂ. ಎಸ್. ಬಸವರಾಜಯ್ಯ
ಮೈಸೂರು.

ನಿಮ್ಮ ಸಹಧರ್ಮಚಾರಿಣಿಯವರಾದ ಪ್ರೊ॥ ಯು. ಎಸ್. ಲಲಿತಾಂಬಾ ಅವರು ನಿಮ್ಮನ್ನು ನೆರಳಿನಂತೆ ಹಿಂಬಾಲಿಸಿಕೊಂಡು, ನಿಮ್ಮ ಬಾಳಿಗೆ ಸಹಕಾರ ನೀಡುತ್ತಾ ಶಾಂತಿ–ಸ್ಫೂರ್ತಿ–ಆನಂದಗಳನ್ನುಂಟುಮಾಡಿ, ಹೊಯ್‌ಕಯ್ಯಾಗಿ, ಜೀವನದಲ್ಲಿ ಸಿಂಹಿಣಿಯಂತೆ ಬಾಳಿ, ಸಿಂಹದ ಮರಿಯಂತಹ ಕುಲದೀಪಕ ಸುಪುತ್ರನನ್ನು ಪಡೆದು, ಆ ಪುತ್ರನನ್ನು ರಾಷ್ಟ್ರದ ಉನ್ನತ ಹುದ್ದೆಗೆ ಅರ್ಹನೆನಿಪಂತೆ ಅಣಿಮಾಡಿ,

ರಾಷ್ಟ್ರಸೇವೆಯಲ್ಲಿರಿಸಿ, ಪತಿಯ –ಪುತ್ರನ–ಪುತ್ರನ ಕುಟುಂಬ ವರ್ಗದ ಹಿತವನ್ನೂ ಅಭ್ಯುದಯುವನ್ನೂ ಸಾಧಿಸಿ, ಆದರ್ಶಗೃಹಿಣಿಯಾಗಿ, ಉನ್ನತಮಟ್ಟದ ಆದರ್ಶಶಿಕ್ಷಕಿಯಾಗಿ, ಉತ್ತಮಲೇಖಕಿಯಾಗಿ, ಲೇಖಕಿಯರಿಗೆ ಪ್ರೇರಕಗಳಾಗಿ, ಅನಾಥಮಕ್ಕಳಿಗೆ ಕೊಡುಗೈ ದಾನಿಯಾಗಿ, ಶರಣಪಥಗಾಮಿನಿಯಾಗಿ ಪರಿಪೂರ್ಣಬಾಳುವೆ ಮಾಡಿ, ಶ್ರೀ ಸರ್ವಜಿತ್ಸಂವತ್ಸರದ ಶುಭಶ್ರಾವಣಮಾಸದ ಶುಭ ಶುಕ್ಲಪಕ್ಷದ ಶುಭಸೋಮ (ಶಿವನ)ವಾರದ ದಿವಸ ಪತಿಯ ಸಾನ್ನಿಧ್ಯದಲ್ಲಿ ಮುತ್ತೈದೆಯಾಗಿ ಶ್ರೀಶಿವನ ಕೃಪೆಪಡೆದು ಲಿಂಗೈಕ್ಯಳಾಗಿರುವುದು ಆಕೆಯ ಧನ್ಯಜೀವನವನ್ನು, ಸಾರ್ಥಕ ಜೀವನನ್ನು ಸೂಚಿಸುತ್ತದೆ.

"ಕಂಪುಳ್ಳ ಕುಸುಮವದು ಕೈಜಾರಿ ಬಿದ್ದರೂ
ಕೈಯು ಗಮ–ಗಮಿಸುವುದು ಸಹಜ ಮಲ್ತೆ॥"

## ೨೯) ಪ್ರೊ. ಲಲಿತಾಂಬ ಆತ್ಮಾಕ್ಕೆ ಸಂತಿ ದೊರಕಲಿ

– ಡಾ॥ ಜಯಶ್ರೀ ದಂಡೆ, ಕಲಬುರ್ಗಿ

ಶ್ರೀಮತಿ ಲಲಿತಾಂಬಾ ಅವರು ಲಿಂಗೈಕ್ಯರಾದರೆಂಬ ವಿಷಯ ಕೇಳಿ ದುಃಖವಾಯಿತು. ದೇವರು ಅವರ ಆತ್ಮಕ್ಕೆ ಶಾಂತಿ ಕೊಡಲಿ ಎಂದು ಪ್ರಾರ್ಥಿಸುವೆವು. ತಮಗೆ ದುಃಖವನ್ನು ಸಹಿಸಿಕೊಳ್ಳುವ ಶಕ್ತಿಯನ್ನು ನೀಡಲಿ ಎಂದು ಪ್ರಾರ್ಥಿಸುತ್ತೇವೆ.

## ೩೦) ತಮ್ಮ ದುಃಖದಲ್ಲಿ ಸಹಭಾಗಿಗಳು ನಾವು

– ಶ್ರೀಮತಿ ಶೈಲಜಾ ಹೆಚ್. ಟಿ
ಶ್ರಿಮತಿ ಗೌರಮ್ಮ ತಿಪ್ಪೇರುದ್ರಸ್ವಾಮಿ
ಮೈಸೂರು

ಇಂದಿನ ವಿಜಯಕಾರ್ನಟಕ ಪತ್ರಿಕೆಯಲ್ಲಿ ತಮ್ಮ ಶ್ರೀಮತಿಯವರು ದೈವಾಧೀನರಾದ ಸುದ್ದಿ ಓದಿ ದುಃಖಿತರಾದೆವು. ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ಭಗವಂತನು ತಮಗೆ ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ

ತಮ್ಮ ಶ್ರೀಮತಿಯವರ ಆತ್ಮಕ್ಕೆ ಚಿರಶಾಂತಿಯನ್ನು ಕೋರುತ್ತೇವೆ.

ತಮ್ಮ ದುಃಖದಲ್ಲಿ ನಾವೆಲ್ಲಾ ಸಹಭಾಗಿಗಳಾಗಿದ್ದೇವೆ. ನಮ್ಮ ತಾಯಿಯವರೂ ತಮಗೆ ದುಃಖಸಹಿಸುವ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸಿದ್ದಾರೆ.

೩೧) ನನಗೆ ಕಲಿಸಿದ ಮಹಾಗುರುಮಾತೆ

– ಶ್ರೀ ಉಳವೀಶ ಹುಲೆಪ್ಪನವರಮಠ
ಬೆಳಗಾಂವಿ.

ತಾಯಿ ಲಲಿತಾಂಬಾ ಅವರ ಪುಣ್ಯತಿಥಿ ಆಚರಿಸೆ ನಿಮಿತ್ತ ತಾವು ಬರೆದ ಪತ್ರ ತಲುಪಿತು. ಮನಸ್ಸಿಗೆ ತುಂಬಾ ನೋವಾಯಿತು. ಅವರು ಧಾರವಾಡದ ಬಿ. ಇಡಿ. ಕಾಲೇಜಿನಲ್ಲಿ ಪ್ರಾಧ್ಯಾಪಕಿ ಎನಿಸಿದ್ದವರು. ನನಗೆ ಕಲಿಸಿದ ಮಹಾ ಗುರುಮಾತೆಯಾಗಿದ್ದರು. ಅವರ ಅಗಲಿಕೆಯಿಂದ ತುಂಬಾ ದುಃಖವಾಗಿದೆ.

ಸುಸಂಸ್ಕೃತ, ವಿದ್ಯಾವಂತ, ಆದರ್ಶ ದಂಪತಿಗಳಾಗಿದ್ದ ತಮಗೂ ಅವರ ಅಗಲುವಿಕೆ ಆಘಾತವನ್ನುಂಟು ಮಾಡಿತು. ತಮಗೆ ಆ ಆಘಾತವನ್ನು ಸಹಿಸುವ ಶಕ್ತಿಯನ್ನು ಭಗವಂತ ಕೊಡಲಿ. ಅವರ ಆತ್ಮಕ್ಕೆ ಶಾಂತಿಯನ್ನು ಕೊಡಲಿ ಎಂದು ಬೇಡಿಕೊಳ್ಳುತ್ತೇವೆ.

೩೨) ದುಃಖ ತಡೆದುಕೊಳ್ಳಿ

– ಕುಂ.ಬಾ. ಸದಾಶಿವಪ್ಪ

ಶ್ರೀಮತಿ ಲಲಿತಾಂಬ ಅವರ ಸಾವಿನ ಸುದ್ದಿ ಕೇಳಿದೆನು. ನಮಗೇ ದುಃಖವಾಯಿತು. ನಿಮಗೆಷ್ಟುದುಃಖವಾಗಿಯಿತೆಂದು ತಿಳಿಯದು. ನಿಮಗೆ ದುಃಖವನ್ನು ತಡೆದುಕೊಳ್ಳುವ ಅನುಗ್ರಹ ದೇವರು ದಯಪಾಲಿಸಲಿ ಎಂದು (ಭಗವಂಥ) ಪ್ರಾರ್ಥಿಸುತ್ತ ಅಮ್ಮನ ಆತ್ಮಕ್ಕೆ ಶಾಂತಿ ಉಂಟಾಗಲೂ ಬೇಡಿರುವೆನು. ಇಷ್ಟರಲ್ಲಿಯೇ ಬಂದು ತಮ್ಮನ್ನು ಕಾಣುವೆನು.

ಸ್ಮರಣೀಯ ಸೇವೆ

ತಮ್ಮ ಶ್ರೀಮತಿಯವರು ಲಿಂಗೈಕ್ಯರಾದುದು ನನಗೆ ನಿನ್ನೆ ತಿಳಿಯಿತು. ತಮ್ಮ ತೀವ್ರವಾದ ದುಃಖ ಸಂತಾಪಗಳಲ್ಲಿ ನಾನು ಭಾಗಿಯಾಗಿರುವೆ. ತಮಗೆ ದುಃಖ ಸಹಿಸುವ ಶಕ್ತಿಯನ್ನು ದಯಪಾಲಿಸಿ ಅವರು ಸಾಹಿತ್ಯ, ಶಿಕ್ಷಣ ಕ್ಷೇತ್ರಕ್ಕೆ ಸಲ್ಲಿಸಿದ್ದ ಸೇವೆ ಸ್ಮರಣೀಯವಾಗಿದೆ.

೩೩) ನಾನು ಚಿಕ್ಕವನು – ನಿಮಗೆಂಥ ಸಾಂತ್ವನ

– ಪ್ರೊ. ಶಿವಲಿಂಗಾರಾಧ್ಯ
ಬೆಂಗಳೂರು

ಮಾ॥ ಲಲಿತಕ್ಕ ನವರು ಶಿವಾಧೀನರಾದ ವಿಚಾರ ತಿಳಿದು ಅತೀವ ದುಃವಾಯ್ತು

ನಿಮಗೆ–ಹಿರಿಯರಿಗೆ ಸಾಂತ್ವನ ಹೇಳಲು ಚಿಕ್ಕವನು. ನಿಮಗೂ ಹಾಗೂ ಚಿ॥ ಪ್ರಸಾದಗೂ ದುಃಖತಡೆದುಕೊಳ್ಳುವ ಶಕ್ತಿ ಪರಮಾತ್ಮನು ನೀಡಲಿ ಎಂದು ಬೇಡುವೆ.

## ೩೪) ಲಲತಾಂಬಾ ದೇವರಿಯವರು ಪರಂಧಾಮ

– ಆರ್. ಕೆ. ಹಿರೇಮಠ

ಹುಬ್ಬಳ್ಳಿ

ಶ್ರೀಮತಿ ಲಲಿತಾಂಭಾ ಯಿಯವರ ಪರಂಧಾಮವಾದರು ಎಂಬ ಸುದ್ದಿ, ಸಂಯುಕ್ತಕರ್ನಾಟಕದಿಂದ ತಿಳಿಯಿತು. ಅವರ ಆತ್ಮಕ್ಕೆ ಶಾಂತಿ ದೊರೆಯಲೆಂದು ಹಾರೈಸುವೆ.

## ೩೫) ಕುಲಪತಿ ರೈಗಳ ಸಾಂತ್ವಾನ

ಡಾ. ಎಸ್. ಎಂ. ವೃಷಭೇಂದ್ರಸ್ವಾಮಿಯವರಿಗೆ

ಮಾನ್ಯರೆ,

ಪ್ರೊ. (ಶ್ರೀಮತಿ) ಯು. ಎಸ್. ಲಲಿತಾಂಬಾ ವೃಷಭೇಂದ್ರಸ್ವಾಮಿ ಅವರು ೧೩.೦೮.೨೦೦೭ರಂದು ಲಿಂಗೈಕ್ಯರಾದ ವಿಷಯ ತಿಳಿದು ಬಹಳ ದುಃಖ ಉಂಟಾಯಿತು. ತತ್ಸಂಬಂಧವಾದ ಪುಣ್ಯ ಸ್ಮರಣೋತ್ಸವವನ್ನು ದಿನಾಂಕ : ೦೨.೦೯.೨೦೦೭ರಂದು ಏರ್ಪಡಿಸಿರುವುದು ಸರಿಯಷ್ಟೆ. ಕಛೇರಿ ಕಾರ್ಯ ಒತ್ತಡದಿಂದ ಸದರಿ ಪುಣ್ಯ ಸ್ಮರಣೋತ್ಸವದಲ್ಲಿ ಖುದ್ದಾಗಿ ಪಾಲ್ಗೊಳ್ಳಲು ಸಾಧ್ಯವಾಗಲಿಲ್ಲವೆಂಬ ಅಂಶವನ್ನು ತಮ್ಮ ಗಮನಕ್ಕೆ ತರಬಯಸುತ್ತೇವೆ. ಮೃತರ ಆತ್ಮಕ್ಕೆ ಶಾಂತಿ ಕೋಡುತ್ತಾ, ಅವರ ಕುಟುಂಬ ಸದಸ್ಯರುಗಳಿಗೆ ಅವರು ಲಿಂಗೈಕ್ಯರಾದ ಪ್ರಯುಕ್ತ ಉಂಟಾಗಿರುವ ದುಃಖವನ್ನು ಭರಿಸಲು ಶಕ್ತಿ ನೀಡುವಂತೆ ಪ್ರಾರ್ಥಿಸುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ,

ಬಿ.ಎ. ವಿವೇಕ ರೈ

ಕುಲಪತಿ, ಕ.ರಾ.ಮು.ವಿ.ವಿ. ಮೈಸೂರು

೩೬) ಪುಣ್ಯಜೀವಿ ಅಮ್ಮನ ಸ್ಮರಣೆ

ಡಾ|| ಎ. ಸದಾಶಿವಯೋಗಯ್ಯ
ಮೈಸೂರು

ಆತ್ಮೀಯ ಮಿತ್ರೂ, ಸಹ ಪಾಟಿಗಳೂ ಆದ ಪ್ರೊ. ವೃಷಭೇಂದ್ರಸ್ವಾಮಿಗಳಿಗೆ ಶಿವಯೋಗಿಯು ಮಾಡುವ ವಂದನೆಗಳು.

ತಮ್ಮ ಧರ್ಮಪತ್ನಿ ಶ್ರೀಮತಿ ಪ್ರೊ. ಲಲಿತಾಂಬಾ ಅವರ ಶಿವಗಣಾರಾಧನೆಯ ವಿಷಯ ೨.೯.೨೦೦೭ರಂದು ನಡೆಯುವದಾಗಿ ತಿಳಿಯಿತು. ಲಿಂಗೈಕ್ಯರಾದ ಪುಣ್ಯ ಸ್ಮರಣೋತ್ಸವಕ್ಕೆ ತಮ್ಮ ಯಲ್ಲಾ ಬಂದು ಮಿತ್ರರು ಬಂದು ದುಃಖದ ಕಡಲಲ್ಲಿ ಭಾಗಿಯಾಗಿ ತಮ್ಮ ದುಃಖದ ಭಾರವನ್ನು ಕಡಿಮೆ ಮಾಡುತ್ತಾರೆ.

ಎಲ್ಲರೂ ಪುಣ್ಯಸ್ಮರಣೋತ್ಸವದಲ್ಲಿ ಭಾಗವಹಿಸಿ ಲಿಂಗೈಕ್ಯರ ಆತ್ಮಕ್ಕೆ ಶಾಂತಿ ಕೋರುವ ಕಾರ್ಯದಲ್ಲಿ ನಾನೂ ಭಾಗಿಯಾಗಿರುವೆ.

ಭಗವಂತನು ನಿಮಗೆ ಅವರ ಅಗಲುವಿಕೆಯಿಂದಾಗಿರುವ ದುಃಖವನ್ನು ಸಹಿಸಲು ಶಕ್ತಿ ಕೊಡಲಿ ಎಂದು ಬೇಡುತ್ತೇನೆ.

೩೭) ದಾಂಪತ್ಯ ಜೀವನ ಮಾದರಿ

ಜಯದೇವಪ್ಪ ಜೈನಕೇರಿ,
ಶಿವಮೊಗ್ಗ

ತಮ್ಮ ಶ್ರೀಮತಿಯವರು ನಿಧನರಾದ ಸುದ್ಧಿ ತಿಳಿದು ಆಘಾತವಾಯಿತು. ಸುದೀರ್ಘ ದಾಂಪತ್ಯ ಜೀವನನ್ನು ನಡೆಸಿ ನಿಡುಗಾಲದಲ್ಲಿ ಸಂಗಾತಿಯನ್ನು ಕಳೆದುಕೊಂಡ ತಮಗೆ ಅವರ ಅಗಲಿಕೆಯ ನೋವನ್ನು ತಡೆದುಕೊಳ್ಳುವ ಶಕ್ತಿಯನ್ನು ದಯಾಮಯನು ನೀಡಲೆಂದು ಪ್ರಾರ್ಥಿಸುತ್ತೇನೆ.

ಯಶಸ್ವಿ ಪತ್ನಿಯಾಗಿ, ಪ್ರವಾಚಕಿಯಾಗಿ, ಸಾಹಿತಿಯಾ ನೀ ಎಲ್ಲರ ಪ್ರೀತಿ ವಿಶ್ವಾಸ ಗೌರವ ಗಳಿಸಿದ ಲಲಿತಾಯಿ ಅವರ ಆತ್ಮಕ್ಕೆ ಶಾಂತಿಯನ್ನು ಕೋರುವ ಸ್ಮರಣೋತ್ಸವ ನಡೆಯಲೆಂದು ಪೂಜ್ಯ ಗದಗ ಶ್ರೀಗಳ ಸಾನಿಧ್ಯದಲ್ಲಿ ೨.೯.೨೦೦೭ರಂದು ನಡೆಯಲೆಂದು ಆಶಿಸುತ್ತೇವೆ. ಬಸವಾದಿ ಶರಣರ ಕೃಪೆ ನಿಮ್ಮನ್ನು ಮುನ್ನಡೆಸಲಿ

## ೩೮) ಅಕ್ಕನವರ ಆತ್ಮಕ್ಕೆ ಶಾಂತಿ ದೊರೆಯಲಿ

ಬಿ. ಬಿ. ನಾಡಗೌಡ,
ವಿಜಾಪುರ

ಅಕ್ಕನವರ ಶಿವಗಣಾರಾಧನೆಯ ಪತ್ರ ಬರುವವರೆಗೆ ಈ ಆಘಾತಕಾರಕ ಸುದ್ಧಿ ನನಗಿರಲಿಲ್ಲ. ಓದಿದ ಒಮ್ಮೆಲೇ 'ಅಯ್ಯೋ' ! ಎಂದೆ.

ಲಲಿತಕ್ಕನವರು ನಿಮ್ಮ ಮನ. ಮನೆ ಶೂನ್ಯ ಮಾಡಿ ದೇವರೆಡೆಗೆ ಹೋದುದು ನಿಮಗೆ ತಡೆಯಲಾಗದ ದುಃಖ ತಂದಿರುವುದು ಸಹಜ. ಮನುಷ್ಯಮಾತ್ರರಿಗೆಲ್ಲ ಸಾವು ಅನಿವಾರ್ಯ. ನಾವೆಲ್ಲರೂ ಒಂದಿಲ್ಲದಿನ್ನೊಂದು ದಿನ ಹಿಂದು ಮುಂದಾಗಿ ಹೋಗಲೇಬೇಕಲ್ಲವೇ? ಎಂದು ಸಮಾಧಾನ ತಂದುಕೊಳ್ಳಬೇಕು. ಮನುಷ್ಯರೆಲ್ಲರೂ ನೀರಮೇಲಣ ಗುರುಳೆಗಳು ; ಹಾವಿನ ಬಾಯಕಪ್ಪೆಗಳ. ನನಗಿಂತ ಹೆಚ್ಚು ಬಲ್ಲವರಾದ ನಿಮಗೆ ಹೆಚ್ಚು ಹೇಳಲಾರೆ.

ಅಕ್ಕನವರ ಆತ್ಮಕ್ಕೆ ಶಾಂತಿಯನ್ನು, ನಿಮಗೆ ತಾಳ್ಮೆಯನ್ನು ಆ ಪರಮಾತ್ಮ ಕೊಡಲೆಂದು ಬೇಡುವೆ.

## ೩೯) ಹೃದಯ ತುಂಬಿದ ಹರಕೆ

ಕುವೆಂಪು ಮಗಳು, ತಾರಿಣಿ, ಅಳಿಯ ಡಾ॥ ಚಿದಾನಂದ ಗೌಡ ಅವರು.

ಶ್ರೀಮತಿ ಲಲಿತಾಂಬ ಅವರು ಶಿವೈಕ್ಯರಾದದ್ದು ತಿಳಿದು ತುಂಬಾ ದುಃಖವಾಯಿತು. ಸರ್ವಶಕ್ತನಾದ ಭಗವಂತನು ಅವರ ಆತ್ಮಕ್ಕೆ ಮುಕ್ತಿಯನ್ನು ಶಾಂತಿಯನ್ನು ನೀಡಲೆಂದು ಪ್ರಾರ್ಥಿಸುತ್ತೇನೆ. ನಿಮಗೂ ಮಕ್ಕಳಿಗೂ ಬಂಧುಗಳಿಗೂ ಕಷ್ಟವನ್ನು ಸಹಿಸುವ ಶಕ್ತಿಯನ್ನು ಕೊಡಲೆಂದು ಪ್ರಾರ್ಥಿಸುತ್ತೇನೆ.

ನಿಮ್ಮ ಆರೋಗ್ಯ ಹೇಗಿದೆ ? ನಿಮ್ಮೊಡನೆ ಯಾರಿದ್ದಾರೆ ಈಗ? ನೀವೂ ನಿಮ್ಮ ಶ್ರೀಮತಿ ಅವರು ಶಿವಮೊಗ್ಗೆಯ ಶಂಕರಘಟ್ಟಕ್ಕೆ ಬಂದು ನಮ್ಮೊಡನೆ ಸ್ವಲ್ಪ ಸಮಯ ಕಳೆದದ್ದು ; ಮಗಳು ಪ್ರಾರ್ಥನಾ, ಮೊಮ್ಮಗ ಸ್ಮಯನನ್ನು ಹರಸಿಹೋದದ್ದು ನಮ್ಮ ಪುಣ್ಯ. ಸ್ಮಯನಿಗೆ ನೀವು ಪ್ರೀತಿಯಿಂದ ಕೊಟ್ಟಿರುವ ಹೊದಿಕೆ ಬಹಳ ಇಷ್ಟಪಡುತ್ತಿದ್ದ. ಪ್ರಾರ್ಥನೆ ಅದನ್ನು ಯು. ಎಸ್. ಎ. ಗೆ ತೆಗೆದುಕೊಂಡು ಹೋದಳು. ಈಗಲೂ ಸ್ಮಯ ತಾನು ಮಲಗುವಾಗಲೆಲ್ಲ ಆ ಹೊದಿಕೆಯೇ ಬೇಕೆಂದು ತಂದು ಪಕ್ಕದಲ್ಲಿ ಇಟ್ಟುಕೊಳ್ಳುವನಂತೆ.

ನನ್ನ ಪುಸ್ತಕ ಶ್ರೀಮತಿ ಸಾವಿತ್ರಮ್ಮ ಹಾಗೂ ಶ್ರೀಮತಿ ಶಾಂತಾದೇವಿ ಮಾಳವಾಡರು ಓದಲು ಆಸಕ್ತಿ ತೋರುತ್ತಿದ್ದರು. ಆದರೆ ಪು... ಹೊರ ಬಂದಾಗ

ಅವರೇ ಇರಲಿಲ್ಲವೆಂದು ತುಂಬಾ ಬೇಸರವಾಗಿತ್ತು. ಆದರೆ ಲಲಿತಾಂಬ ಅಕ್ಕನವರು ಓದುವಂತಾಗಿದ್ದು ನನ್ನ ಭಾಗ್ಯವೆಂದುಕೊಂಡೆ. ನೀವಿಬ್ಬರು. ಬರೆದ ಕಾಗದವನ್ನು ಜೋಪಾನವಾಗಿ ಇಟ್ಟುಕೊಂಡಿರುವೆನು. ಶ್ರೀಗುರು ಎಲ್ಲರಿಗೂ ಶಾಂತಿಯನ್ನು ದಯಪಾಲಿಸಲಿ.

ಇಂತಿ ನಮಸ್ಕಾರಗಳು
ತಾರಿಣಿ ಚಿದಾನಂದ

ಆತ್ಮೀಯರಿಗೆ ವಂದನೆಗಳು. ಒಮ್ಮಿಂದೊಮ್ಮೆ ಜೀವನದಲ್ಲಿ ಹೀಗೆ ಅಮೂಲ್ಯ ನಿಧಿಯನ್ನು ಕಳೆದುಕೊಂಡ ತಮಗೆ ಈ ತುಂಬಲಾರದ ನಷ್ಟವನ್ನು ಧೈರ್ಯವಾಗಿ ಎದುರಿಸುವ ಶಕ್ತಿಯನ್ನು ಪರಮಾತ್ಮನು ನೀಡಲಿ ಎಂದು ಹಾರೈಸುತ್ತೇನೆ. ಶ್ರೀಮತಿ ಲಲಿತಾಂಬ ಅವರ ಆತ್ಮಕ್ಕೆ ಪರಶಿವನು ಚಿರಶಾಂತಿಯನ್ನು ಅನುಗ್ರಹಿಸಲಿ ಎಂದು ಹಾರೈಸುತ್ತೇನೆ. ತಮ್ಮ ಮಗ, ಸೊಸೆ, ಮೊಮ್ಮಗಳಿಗೆ ತಾವೇ ಧೈರ್ಯ ತುಂಬಬೇಕಾಗಬಹುದು. ಎಲ್ಲರಿಗೂ ದೇವರು ಶಕ್ತಿಯನ್ನು ಕೊಡಲಿ.

ಇಂತಿ ವಂದನೆಗಳೊಡನೆ
ಕೆ. ಚಿದಾನಂದ ಗೌಡ

## ೪೦) ಶ್ರೀಮತಿ ಲಲಿತಾಂಬರ ಪಾದಕ್ಕೆ ಶ್ರದ್ಧಾಂಜಲಿ

ಪತ್ರ ಬರೆಯಲು ಕಾರಣ ನಿನ್ನೆ ರಾತ್ರಿ ತಮ್ಮ ಧರ್ಮಪತ್ನಿಯವರು ಲಿಂಗೈಕ್ಯರಾದ ವಿಷಯ ತಿಳಿದು ನಮಗೆ ಬಹಳ ದುಃಖವಾಯಿತು ಇರಲಿ ಅವರ ಪುಣ್ಯಾರಾಧನೆಯ ದಿವಸ ನನ್ನ ಪರವಾಗಿ ಅವರ ಪಾದಕ್ಕೆ ಶ್ರದ್ಧಾಂಜಲಿ ಅರ್ಪಿಸಿರಿ ಎಂದು ನನ್ನ ಬೇಡಿಕೆ ಇದೆ. ಇದೇ ಸಂದರ್ಭದಲ್ಲಿ ಇನ್ನೊಂದು ವಿಚಾರವೇನೆಂದರೆ ಈ ಕಾರ್ಯಕ್ರಮಕ್ಕೆ ಗದಗದ ಜಗದ್ಗುರುಗಳಾದ ತೋಂಟದಾರ್ಯ ಮಠ ಇವರು ಬರುವದು ನನಗೆ ಬಹಳೇ ಸಂತೋಷ ತಂದಿದೆ. ನಿಮ್ಮದು ಈ ವೇಳೆಯಲ್ಲಿ ದರ್ಶನದ ಲಾಭ ನನಗೆ ಸಿಗುತ್ತಿತ್ತು.

ಇಂತಿ
ಪಂಚಾಕ್ಷರಿ ಮಾಸ್ತರ

## ೪೧) ತಮ್ಮನ ಸಾಂತ್ವನ

ಪೂ॥ ಅಣ್ಣನವರಿಗೆ ನಮಸ್ಕಾರಗಳು,

ಮಾ॥ ಶ್ರೀ॥ ಅತ್ತಿಗೆಯವರ ಪುಣ್ಯಸ್ಮರಣೋತ್ಸವದ ಪತ್ರ ಕೈಸೇರಿದೆ, ವಂದನೆಗಳು.

ಆ ಪರಾತ್ಪರನು ಲಿಂಗೈಕ್ಯರ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲಿ ಎಮದು ನಾವೆಲ್ಲರೂ ಹಾರೈಸುತ್ತೇವೆ.

ಇತಿ ನಿಮ್ಮ
ಬಿ. ಎಂ. ಚಂದ್ರಶೇಖರಯ್ಯ
ಬೆಂಗಳೂರು

೪೨) ಕವಿಮಿತ್ರ ಸನದಿಯ ಹಳಹಳಿ

ಆತ್ಮೀಯರಾದ ಡಾ॥ ವೃಷಭೇಂದ್ರಸ್ವಾಮಿ

ಅವರಿಗೆ ನಮನಗಳು.

ಈ ಹೊತ್ತು ಧಾರವಾಡದಿಂದ ಶ್ರೀಕೃಷ ಪಾಟೀಲರು ಫೋನ್ ಮಾಡಿದಾಗ ನಿಮ್ಮ ಮನೆಯವರು ತೀರಿಕೊಂಡ ಸಮಾಚಾರ ತಿಳಿಸಿದರು. ಕೇಳಿ ತುಂಬಾ ಕಳವಳವಾಯಿತು. ನೀವು ಒಬ್ಬೊಂಟಿಯಾಗಿರಬೇಕಾದ ಅನಿವಾರ್ಯಸ್ಥಿತಿಯನ್ನು ನೆನೆಸಿಕೊಂಡು ಜೀವನ ಹಳಹಳಿಸಿತು. ಬದುಕಿನ ವಿವಿಧ ಘಟ್ಟಗಳಿಗೆ ನಾವು ತಲೆಗೊಡಲೇ ಬೇಕು. ಈ ಸಂದರ್ಭದಲ್ಲಿ ನಿಮಗಾದ ಅಪಾರ ದುಃಖದಲ್ಲಿ ನಾವು ಸಹ ಭಾಗಿಗಳಾಗಿರುತ್ತೇವೆ. ಮೃತರ ಆತ್ಮಕ್ಕೆ ದೇವರು ಶಾಂತಿ ನೀಡಲೆಂದು ಪ್ರಾರ್ಥಿಸುತ್ತೇನೆ.

– ಡಾ॥ ಬಿ. ಎ. ಸನದಿ

೪೩) ಶ್ರೀ ಕೊಟ್ಟೂರು ಗುರು ಬಸವನ ಕೃಪೆ

ಆತ್ಮೀಯ ಬಂಧು ಮತ್ತು ಸನ್ಮಿತ್ರರಾದ

ಡಾ॥ ಎಸ್. ಎಂ. ವೃಷಭೇಂದ್ರಸ್ವಾಮಿ, ಧಾರವಾಡ

ಶ್ರೀಮತಿ ಲಲಿತಾಂಬ ಅವರಿ ಶಿವೈಕ್ಯರಾದ ವಿಷಯ ತಿಳಿದು ವಿಷಾದವೆನಿಸಿತು ಅವರು ನಿಮ್ಮ ಸಾರಸ್ವತ ಜೀವನನ್ನು ಲಲಿತವಾಗಿ ರೂಪಿಸಿದ ಮಹಾಶಕ್ತಿಯಾಗಿದ್ದರು. ಅವರ ಅಗಲಿಕೆಯಿಂದ ಬಂಧು ಮಿತ್ರರೆಲ್ಲರಿಗೆ, ವಿಶೇಷವಾಗಿ, ನಿಮಗೆ ಆದ ಸಂತಾಪದಲ್ಲಿ ನಮಗೆಲ್ಲ ಸಮ ಪಾಲು. ಕೊಟ್ಟೂರ ಶ್ರೀ ಗುರುಬಸವ ಸ್ವಾಮಿ ಅವರ ಆತ್ಮಕ್ಕೆ ಚಿರಶಾಂತಿ ನೀಡಲೆಂದು ಪ್ರಾರ್ಥನೆ.

ನಿಮ್ಮ ವಿಶ್ವಾಸಿ
ಗೌ.ಮ. ಉಮಾಪತಿ ಶಾಸ್ತ್ರಿ
ಧರ್ಮಸ್ಥಳ

೪೪) ವಚನಾಂಜಲಿಯ ಗೌರವ

ಕೆ.ಎಸ್. ಗಾರ್ವಾಡ್ ಹಿರೇಮಠ
ಭೂಮರೆಡ್ಡಿ ಕಾಲೇಜು

ಪರಮ ಪೂಜ್ಯ ಗುರುಗಳ ಚರಣಕಮಲಗಳಿಗೆ ಗಜೇಂದ್ರಗಡದಿಂದ ಗಾರವಾಡ ಹಿರೇಮಠ ಮಾಡ್ವ ಅನೇಕ ಶಿರಸಾಷ್ಟಾಂಗ ಪ್ರಣಾಮಗಳು. ಬಹು ದಿನಗಳ ನಂತರ ತಮಗೆ ಪತ್ರ ಬರೆಯುತ್ತಿರುವೆನು. ದಯವಿಟ್ಟು ಕ್ಷಮಿಸಿರಿ. ನಾನು ಧಾರವಾಡಕ್ಕೆ ಬಂದಾಗ ಮನೆಯಲ್ಲಿ ತಮ್ಮ ಭೇಟಿಯೂ ಸಾಧ್ಯವಾಗಲಿಲ್ಲ. ಎಸ್. ಎಸ್ ಎಲ್. ಸಿ. ಪರೀಕ್ಷೆಯ ಉತ್ತರ ಪತ್ರಿಕೆಗಳ ಮೌಲ್ಯ ಮಾಪನ ಕಾರ್ಯಕ್ಕೆ ಇದೇ ದಿನಾಂಕ ೧೫.೪.೧೯೯೭ ದಿಂಧ ೨೪.೪.೧೯೯೭ರ ವರೆಗೆ ಹುಬ್ಬಳ್ಳಿಗೆ ಬಂದಾಗ ಮೂರುಸಾವಿರ ಮಠದಲ್ಲಿ ಬಸವಜಯಂತಿ ಕಾರ್ಯಕ್ರಮದಲ್ಲಿ ತಮ್ಮನ್ನು ಮತ್ತು ಮಠೋಶ್ರೀಯವರನ್ನು ಕಂಡು ಹರ್ಷವಾಯಿತು. ಆದರೆ ತಾವು ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದಾಗ ಮತ್ತು ನಂತರ ತಮ್ಮನ್ನು ಕಂಡು ಮಾತನಾಡುವ ಮತ್ತು ಆಶೀರ್ವಾದ ಪಡೆಯುವ ಧೈರ್ಯವಾಗಲಿಲ್ಲ. ಕ್ಷಮಿಸಿರಿ.

ಅಂದಿನ ಕಾರ್ಯಕ್ರಮದಲ್ಲಿ ಪ್ರೇಕ್ಷಕನಾಗಿ ಭಾಗವಹಿಸುವ ಅವಕಾಶ ಆಕಸ್ಮಿಕವಾಗಿ ಸಿಕ್ಕಿದ್ದು ನನ್ನ ಅದೃಷ್ಟವೆಂದೇ ಭಾವಿಸಿದ್ದೇನೆ. ಬಹುದಿನಗಳ ನಂತರ ತಮ್ಮ ಮತ್ತು ಮಾತಾಜಿಯವರ ಭಾಷಣ ಕೇಳುವ ಅವಕಾಶ ಸಿಕ್ಕಿತು.

೪೫) ವಚನಾಂಜಲಿಯ ಸತ್‌ಪ್ರಭಾವ

"ವಚನಾಂಜಲಿ" ಗ್ರಂಥವು ಪೂಜ್ಯರಿಂದ ಬಿಡುಗಡೆಯಾದ ಮೇಲೆ ಮಾತಾಜಿಯವರು ತಮ್ಮ ಅಮೋಘ ಭಾಷಣದಲ್ಲಿ, ನನ್ನ ಮನದ ಆಳದಲ್ಲಿ ಉಳಿದುದು, "ದಿನಕ್ಕೊಂದು ವಚನವನ್ನು ತಿಳಿ ಎನ್ನುವ ಅಂಶ. ವಚನಗಳ ಬಗ್ಗೆ ಅಷ್ಟೇನೂ ತಿಳಿಯದ ನನಗೆ ದಿನಕ್ಕೊಂದು ವಚನಗಳನ್ನುತಿಳಿಯುವ ಹಂಬಲ ಮೂಡಿತು. ಜೊತೆಗೆ ಶಿವಪೂಜೆಯ ಜೊತೆ-ಜೊತೆಯಾಗಿ ವಚನಗಳನ್ನು ತಿಳಿಯಲು ವಚನಾಂಜಲಿಯನ್ನು ಖರೀದಿಸಲು ಅಂದೇ ಮಠದಲ್ಲಿ ಪ್ರಯತ್ನಿಸಿ, ಕೊನೆಗೆ ದಿನಾಂಕ : ೨೨.೪.೧೯೯೭ರಂದು ಪುಸ್ತಕವನ್ನು ಪಡೆಯುವದರಲ್ಲಿ ಯಶಸ್ವಿಯಾದೆ. ಜೊತೆಗೆ ಮನೆಯಲ್ಲಿಯ ನನ್ನ ಶ್ರೀಮತಿ ರು.ಸೌ. ಸರೋಜಾ ಪುತ್ರ ಕುಮಾರ, ವಿನೋದ ೭ನೇ ತರಗತಿ, ಸುಪುತ್ರಿ ಕು. ಅಶ್ವಿನಿ ೪ನೇ ತರಗತಿ ಇವರೆಲ್ಲರೂ ಆಸಕ್ತಿಯಿಂದ ದಿನಾಲು ಒಂದೊಂದು ವಚನಗಳ ಬಗ್ಗೆ ತಿಳಿಯುತ್ತಿದ್ದೇವೆ. ವಚನಗಳ ವಿವರಣೆಯನ್ನೂ ಕೊಟ್ಟಿರುವದರಿಂದ ನನಗೆ ಶುಲಭವಾಗಿ ತಿಳಿ ಹೇಳಲು ಸಾಧ್ಯವಾಗಿದೆ. ಗ್ರಂಥಕರ್ತೃಗಳಾದ ಮಾತಾಜಿಯವರಿಗೆ ನನ್ನ ಹೃದಯ ಪೂರ್ವಕ

ಅಭಿನಂದನೆಗಳನ್ನು ದಯವಿಟ್ಟು ತಿಳಿಸಿರಿ. ಇನ್ನು ತಮ್ಮ ಕಂಚಿನ ಕಂಠದ ಭಾಷಣ ಬೇಗನೇ ಮುಗಿಯಿತಲ್ಲ ಎಂಬ ಭಾವನೆ ಮೂಡಿತು. ಶರಣಸಾಹಿತ್ಯ, ಬಸವ ಪ್ರಮಥರ ಬಗ್ಗೆ, ವೀರಶೈವ ಧರ್ಮದ ಬಗ್ಗೆ ಡಾ॥ ರಾಧಾಕೃಷ್ಣನ್ ಮತ್ತು ಇಟಲಿಯ ಪ್ರವಾಸಿಕನ ಅಭಿಪ್ರಾಯಗಳನ್ನು ಮತ್ತು ನ್ಯಾಯಮೂರ್ತಿಗಳಾಗಿದ್ದ ಡಾ॥ ಗಜೇಂದ್ರಗಡಕರ್‌ರವರ ಬಸವಣ್ಣನವರ ವಚನಗಳ ಬಗ್ಗೆ ಅಭಿಪ್ರಾಯಗಳು, ಧರ್ಮಪ್ರಚಾರ-ಇಸ್ಲಾಂ-ಕ್ರೈಸ್ತ-ಸಂಸಾರದಲ್ಲಿದ್ದು ಸ್ವರ್ಗಪಡೆಯುವ ಮಾರ್ಗಸೂಚಿಸುವ ಏಕೈಕ ಧರ್ಮ, ವೀರಶೈವ ಧರ್ಮ, ಇವೆಲ್ಲವುಗಳ ಸಾರವನ್ನು ತಾವು ಮನಮುಟ್ಟುವಂತೆ ನಿರೂಪಿಸಿದಿರಿ. ಆದರೆ ಒಂದು ನನಗೆ ಕೊರತೆ ಎನ್ನಿಸಿದ್ದು ತಮ್ಮ ಭಾಷಣಕ್ಕೆ ಇನ್ನಷ್ಟು ವೇಳೆ ಕೊಟ್ಟಿದ್ದರೆ ಚೆನ್ನಿತ್ತು. ಭಾಷಣ ಬೇಗನೇ ಮುಗಿಯಲು ಎನ್ನುವ ಭಾವನೆ ಮೂಡಿತು. ತಮಗೆ ಸಹಸ್ರ – ಸಹಸ್ರ ಪ್ರಣಾಮಗಳು. ತಮ್ಮ ಆಶೀರ್ವಾದದಿಂದ ನಾನು ಸೌಖ್ಯವಾಗಿದ್ದೇನೆ. ಮಾತಾಜಿಯವರಿಗೆ ನನ್ನ & ನನ್ನ ಕುಟುಂಬದ ಶಿ.ಸಾ ನಮಸ್ಕಾರಗಳನ್ನು ತಿಳಿಸಿರಿ ಬಿಡುವು ಇದ್ದರೆ ಉತ್ತರಿಸಿ.

ಇಂತಿ

ನಿಮ್ಮ ಶಿಷ್ಯ

ವಿದ್ಯಾರ್ಥಿ ಮಿತ್ರ ವಕೀಲ ಬಸವರಾಜ, ಹಾವೇರಿ – ವಿನಂತಿ

ಶ್ರೀಯುತ ಡಾ॥ ಎಸ್. ಎಮ್. ವೃಷಭೇಂದ್ರಸ್ವಾಮಿ "ಶಿವಪ್ರಸಾದ ನಿಲಯ" ಎಂಟನೇ ಕ್ರಾಸ್ ಕಲ್ಯಾಣ ನಗರ ಧಾರವಾಡ ಇವರಿಗೆ,

ಶ್ರೀಯುತರೇ ನಿಮ್ಮ ಶ್ರೀಮತಿಯವರಾದ ಪ್ರೊ॥ ಯು.ಎಸ್. ಲಲಿತಾಂಬಾ ವೃಷಭೇಂದ್ರಸ್ವಾಮಿ ಇವರು ದಿನಾಂಕ ೧೩.೮.೨೦೦೭ರಂದು ಲಿಂಗೈಕ್ಯರಾದ ನಿಮಿತ್ತ ಪುಣ್ಯ-ಉತ್ಸವವನ್ನು ಇಂದು ದಿನಾಂಕ ೦೨.೦೯.೨೦೦೭ ರಂದು ಆಚರಿಸುತ್ತಿರುವ ನಿಮಗೂ ಮತ್ತು ನಿಮ್ಮ ಸರ್ವ ಬಂಧು ಬಳಗದವರಿಗೂ ಶ್ರೀಮತಿ ಲಲಿತಾಂಬಾ ಇವರು ನಿಮ್ಮನ್ನಗಲಿರುವ ದುಃಖವನ್ನು ಭರಿಸಲು ಆ ದೇವರು ಆಶೀರ್ವದಿಸಲಿ ಎಂದು ಹಾರೈಸುತ್ತೇವೆ ಮತ್ತು ಅಗಲಿದ ಶ್ರೀಮತಿ ಲಲಿತಾಂಬಾ ಅಮ್ಮನವರ ಆತ್ಮಕ್ಕೆ ಚಿರಶಾಂತಿ ನೀಡಲೆಂದು ಆ ದಯಾಮಯ ಭಗವಂತನಲ್ಲಿ ಬೇಡಿಕೊಳ್ಳುತ್ತೇವೆ.

ಇಂತೀ ನಿಮ್ಮ ಹಿತೈಷಿ

ಬಸವರಾಜ

## ೪೬) ಶಿಷ್ಯೆ – ಸೋದರಿ ಶಾರದಮ್ಮನ ವಿನಂತಿ

ಪ್ರೊ. ಡಾ. ಎಸ್. ಎಂ. ವೃಷಭೇಂದ್ರಸ್ವಾಮಿಯವರಿಗೆ,

ತೀ॥ ಅಣ್ಣನವರಿಗೆ ನನ್ನ ಭಕ್ತಿ ಪೂರ್ವಕವಾದ ನಮಸ್ಕಾರಗಳು ನಿಮ್ಮ ದುಃಖ ತನವಾದ ಜೀವನದಲ್ಲಿ ನಾನು ಸಹ ದುಃಖಿತಳಾಗಿದ್ದೇನೆ. ನಿಮಗೆ ಸಮಾಧಾನ ಹೇಳುವಷ್ಟು ಶಕ್ತಳಲ್ಲ. ಆದರೆ ನನ್ನ ಸಮಾಧಾನಕ್ಕೆ ಪತ್ರ ಬರೆಯುತ್ತಿದ್ದೇನೆ. ಸಂಗಾತಿಯನ್ನು ಕಳೆದುಕೊಂಡ ಜೀವನಕ್ಕೆ ಸಮಾಧಾನ ಸಿಕ್ಕಬೇಕದರೆ ಸದಾ ಅವರ ಚಿರಸ್ಮರಣೀಯವಾದ ಸವಿನೆನಪುಗಳು, ಹಿತವಾದ ನುಡಿಗಳು, ಜ್ಞಾನದ ಮಾತುಗಳು, ಮುತ್ತಿನಂಥ ನಗು, ನಿಮಗೆ ಚೇತನ ಶಕ್ತಿ ಕೊಡಲಿ ಎಂದು ನಾನು ದೇವರಲ್ಲಿ ಪ್ರಾರ್ಥಿಸುತ್ತೇನೆ.

ಅಂದು ಪತ್ರೆಯವರ ಮನೆಯಲ್ಲಿ ಲಲಿತಕ್ಕನವರನ್ನು ಭೇಟಿಯಾಗಲು ಹೆದರಿದ್ದೆನು. ಕಾರಣ ಅವರ ಆರೋಗ್ಯ ನೋಡಿ ನನಗೆ ಬರುವ ದುಃಖವನ್ನು ಹೇಗೆ ತಡೆದುಕೊಳ್ಳುವುದು ಎಂದು. ಆದರೆ ಅವರೇ ಹೇಳಿದರು. ಶಾರದಾ ನಿನ್ನ ಜೀವನದಲ್ಲಿ ಇಂಥಹ ಸೊಸೆ ಸಿಕ್ಕಬಾರದಿತ್ತು. ನಿನ್ನ ಚೆಂದವಾದ ಸಂಸಾರಕ್ಕೆ ಎಂಥಹ ಪರಿಸ್ಥಿತಿಯಾಯಿತು ಎಂದು, ಅವರೇ ನನ್ನ ಬಗ್ಗೆ ಚಿಂತಿಸಿದರು. ಆ ದಿನದ ಮಾತಿನಲ್ಲಿ ಎಂಥಹ ಸಮಾಧಾನವಿತ್ತು. ಅಂತಹ ಗುಣ ಎಲ್ಲರಿಗೂ ಬರಲು ಸಾಧ್ಯವೇ ಇಲ್ಲ. ಧಾರವಾಡ ಎಂದರೆ ನನಗೆ ಲಲಿತಕ್ಕ ಇದ್ದಾರೆ ಎಂದು ಎಲ್ಲಾ ಸಮಾರಂಭಕ್ಕೆ ಬರುತ್ತಿದ್ದೆ. ಈಗ ನನಗೆ ಧಾರವಾಢವೇ ಇಲ್ಲವೇನೋ ಅನ್ನಿಸುತ್ತಿದೆ. ಆದರೆ ಇಷ್ಟು ಬೇಗ ಅವರ ಜೀವನ ಮುಕ್ತಿ ಪಡೆಯುತ್ತದೆ ಎಂದು ಭಾವಿಸಿರಲಿಲ್ಲ.

ಅವನು ಸ್ವರ್ಣಾಳಹತ್ತಿರ ಹೇಳಿಕಳಿಸಿದ್ದರು. ಶಾರದಳಿಗೆ ವಸಂತನಲ್ಲಿಯೇ ಸುರೇಶನನ್ನು ಕಾಣು ಎಂದು ತಿಳಿಸು. ಅದೇ ರೀತಿ ನಾವುಗಳು ಎಲ್ಲರೂ ಸಹ ನಿಮ್ಮಲ್ಲಿಯೇ ಲಲಿತಕ್ಕನವರ ಆದರ್ಶವಾದ ಗುಣಗಳನ್ನು ಕಾಣುವುದು ಎಂದು ಭಾವಿಸುತ್ತೇವೆ.

ಜೀವನದಲ್ಲಿ ಮಾನವನಿಗೆ ಎಂಥಹ ಕಷ್ಟ ಬಂದರೂ. ಸಮಾಧಾನ ಹೇಳುವುದಕ್ಕೆ ಸಾಕಷ್ಟು ವಿಷಯಗಳು ಸಿಕ್ಕುತ್ತವೆ. ಆದರೆ ಆತ್ಮೀಯರ ಅಗಲಿಕೆಯ ನೋವು ಅನುಭವಿಸುವವರ ಆತ್ಮಕ್ಕೆ ಮಾತ್ರ ಗೊತ್ತು ; ಅವರ ಕೊನೆಯ ದರ್ಶನ ಮಾಡುವುದಕ್ಕೆ ನನಗೆ ಭಾಗ್ಯವಿಲ್ಲದಂತಾಯಿತು.

ಅವರು ನಮಗೆ ಪಾಠ ಮಾಡುವಾಗ ನಮಗೆ ಒಂದು ನೀತಿ ಕತೆ ಹೇಳಿದ್ದರು ಅದನ್ನು ಆ ದಿನ ಪಾಠ ಮಾಡುವಾಗ ನಾನು ಮಕ್ಕಳಿಗೆ ಆ ಕತೆಯನ್ನು ಹೇಳಿ ಅಳಲು ಪ್ರಾರಂಭಿಸಿದೆ. ಏಕೆ ಎಂದು ಎಲ್ಲಾ ಮಕ್ಕಳು ಕೇಳಿದಾಗ ನನ್ನ ಗುರುಗಳು

ಈ ದಿನ ನಮ್ಮನ್ನು ಬಿಟ್ಟು ಹೋದರು. ಅವರು ಹೇಳಿದ ನೀತಿ ಮಾತ್ರ ನಾನು ಮರೆಯಲಾರೆ ಎಂದು ಹೇಳಿ ಅವರೆಲ್ಲರನ್ನೂ ಮನೆಗೆ ಕಳಿಸಿ ವ್ಯಥೆ ಪಟ್ಟೆನು. ಇದೇ, ರೀತಿ, ಎಷ್ಟು ಜನಕ್ಕೆ ಮಾರ್ಗದರ್ಶನ ತೋರಿದ್ದಾರೆ. ಜೀವನಕ್ಕೆ ದಾರಿಮಾಡಿದ್ದಾರೆ. ಒಂದೇ, ಎರಡೇ, ಹೇಳಲು ಸಾಧ್ಯವಿಲ್ಲ. ಬರೆದರೇ ಆದರ್ಶವಾದ ಕಾದಂಬರಿಯೇ ಆದೀತು. ನಿಜವಾಗಿಯೂ ಅವರ ಬಕುಕು ಸಾರ್ಥಕವಾದದ್ದು. ದೇವರಂಥಹ ಪತಿ, ಮುತ್ತಿನಂಥಹ ಮಗ, ಮಾಣಿಕ್ಯದಂಥಹ ಸೊಸೆ, ಚಿನ್ನದಂಥಹ ಮೊಮ್ಮಗಳನ್ನು ಪಡೆದು ಸೌಭಾಗ್ಯವತಿಯಾಗಿ ಮುಂದಿನ ಲೋಕಕ್ಕೆ ಹೋಗಿದ್ದಾರೆ. ಅವರ ಆತ್ಮಕ್ಕೆ ಪರಮಾತ್ಮನು ಸದ್ಗತಿಯನ್ನು ಕೊಡಲಿ, ನಿಮಗೂ ಮತ್ತು ಮಗ ಸೊಸೆ ಮೊಮ್ಮಗಳಿಗೂ ಪರಮಾತ್ಮ ಸಹನ ಶಕ್ತಿ ಕೊಡಲಿ ಎಂದು ನನ್ನ ಎರಡು ನುಡಿಯನ್ನು ಸಮಾಧಾನಕ್ಕೆ ಬರೆದಿದ್ದೇನೆ. ನಿಮ್ಮಂಥಹ ಮೇಧಾವಿಗಳಿಗೆ, ಅನುಭವಿಗಳಿಗೆ ಬರೆಯುವ ಸಾಮರ್ಥ್ಯವಿಲ್ಲದಿದ್ದರೂ ಲಲಿತಕ್ಕನವರ ನೆನಪು ಬರೆಯಿಸಿದೆ. ತಪ್ಪಿದ್ದರೆ ಕ್ಷಮಿಸಿ

ಇತಿ. ನಿಮ್ಮ ನೊಂದಿರುವ ಸೋದರಿ
ಎಂ. ಎಚ್. ಶಾರದಾ ಆರಾಧ್ಯ
ಬೀರೂರು

೪೭) ವಿದ್ಯಾರ್ಥಿಮಿತ್ರ ಸಂಪಾದಕ ಶಿಷ್ಯನ ಸಾಂತ್ವನ

ಪೂಜ್ಯ ಗುರುಗಳಲ್ಲಿ ವಿದ್ಯಾಶಂಕರನ ವಂದನೆಗಳು

ಅಕ್ಕನವರು ಲಿಂಗೈಕ್ಯರಾದ ಸುದ್ದಿ ನನ್ನ ಪಾಲಿಗೆ ನಂಬಲಾಗದ ಮಾತು. ಅವರ ಚಿತ್ರ ನನ್ನ ಕಣ್ಣ ಮುಂದಿದೆ. ಅವರ ಮಾತು ನನ್ನ ಕಿವಿಯಲ್ಲಿ ನಿನದಿಸುತ್ತಿದೆ. ಅವರ ಅಕ್ಕರೆಯ ಆತಿಥ್ಯದ ಸವಿ ನನ್ನ ನಾಲಿಗೆ ಸದಾ ನೆನಪಿಸುತ್ತಿದೆ. ಅವರ ಕೊನೆಯ ದಿನಗಳಲ್ಲಿ ಪಟ್ಟ ಪಾಡು ನನಗೆ ಕೆಟ್ಟ ಕನಸಿನಂತಿದೆ. ಅಂತಹ ಅಕ್ಕನವರನ್ನು ಕಳೆದುಕೊಂಡ ನನಗೆ ಸಾವು ಎಷ್ಟು ಕ್ರೂರವಾದದ್ದೆನಿಸುತ್ತದೆ. ಒಳ್ಳೆಯ ಜೀವಗಳನ್ನೇ ಹುಡುಕಿಕೊಂಡು ಹೋಗುವ ಅದರ ಲೀಲೆ ಕಂಡು ಬೇಸರವಾಗುತ್ತದೆ. ನಿಮ್ಮ ಪಾಲಿಗೆ ಅವರು ಹೆಂಡತಿಯಷ್ಟೇ ಆಗಿರದೆ ಒಳ್ಳೆಯ ಗೆಳತಿ – ಮಾರ್ಗದರ್ಶಿ ಎಲ್ಲವೂ ಆಗಿದ್ದರು. ಅರ್ಧಾಂಗಿ ಎನ್ನುವ ಮಾತಿನಲ್ಲಿ ಸತ್ಯವಿದೆ. ಅವರು ನಿಮ್ಮ ಸರ್ವಸ್ವವೂ ಆಗಿದ್ದರು. ಸುಖ-ದುಃಖವನ್ನು ಸಮಾನವಾಗಿ ಹಂಚಿಕೊಂಡರು. ಪತಿಯ ಪ್ರತಿಭೆಯನ್ನು ಸಮಾಜ-ಸರಕಾರ ಗುರುತಿಸಲಿಲ್ಲವೆನ್ನುವ ನೋವು ಅವರನ್ನು ಕಾಡಿತ್ತು. ನನ್ನ ಬಳಿ ಅವರು ಅದನ್ನು ಆತ್ಮೀಯವಾಗಿ ಹೇಳಿಕೊಂಡಿದ್ದರು. ನನಗೂ ಅದು ಮರೆಯಲಾಗದ ನೆನಪು. ನನ್ನ ಪ್ರೀತಿಯ ಗುರುಗಳಿಗೆ ಸಲ್ಲಬೇಕಾದ ಗೌರವ ದೊರೆಯಲಿಲ್ಲವೆನ್ನುವ ಚಿಂತೆ ನನಗೆ ಈ ಕ್ಷಣದಲ್ಲೂ ಕಾಡಿದೆ. ನನ್ನ

ನೋವನ್ನು ಮಿತ್ರರಲ್ಲಿ ಹೇಳಿಕೊಂಡದ್ದೂ ಉಂಟು. ನಿಮಗೆ ಅವರ ಅಗಲಿಕೆಯ ನೋವು ಯಾರೂ ಭರಿಸಲಾಗದು. ನಿಮ್ಮ ಓದು-ಬರವಣಿಗೆ ಅವರಿಗೆ ಪ್ರಿಯವಾದುದು. ಅದರಲ್ಲಿ ತನ್ಮಯರಾಗಿ ಅದರ ನೆನಪನ್ನು ಸ್ವಲ್ಪಕಾಲವಾದರೂ ಮರೆಯಿರಿ.

ನಿಮ್ಮ ಸುಖ-ದುಃಖಗಳಲ್ಲಿ ನಿಮ್ಮ ಶಿಷ್ಯ ನಿಮ್ಮ ಬಳಿ ಇದ್ದಾನೆ. ಭಗವಂತ ನಿಮಗೆ ಅಕ್ಕನವರ ಅಗರಿಕೆಯ ಸಂಕಟವನ್ನು ತಡೆದುಕೊಳ್ಳುವ ಶಕ್ತಿಯನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆ.

ವಂದನೆಗಳು,
ನಿಮ್ಮ ಡಾ॥ ಎಸ್. ವಿದ್ಯಾಶಂಕರ,
ಸಂಪಾದಕರು "ಸ್ವಪ್ನಲೋಕ"
ಬೆಂಗಳೂರು.

## ೪೪) ಹಿರೇಕಲ್ಮಠ-ಹೊನ್ನಾಳಿ ಶ್ರೀಗಳ ಕೃಪೆ

ಡಾ॥ ಎಸ್. ಎಂ. ವೃಷಭೇಂದ್ರಸ್ವಾಮಿಯವರು ಧಾರವಾಡ ಇವರಿಗೆ ಮಾಡುವ ಆಶೀರ್ವಾದಗಳು. ಸಾಹಿತಿಗಳು, ಉತ್ತಮ, ಕಥೆ, ಕವನ ಲೇಖಕರು ಆಗಿದ್ದ ತಮ್ಮ ಧರ್ಮ ಪತ್ರಿಯವರು ಲಿಂಗೈಕ್ಯರಾದ ವಿಷಯ ಪತ್ರಿಕೆಯಿಂದ ತಿಳಿದು ತುಂಬಾ ವಿಷಾದವೆನಿಸಿತು. ಶಿವನಿಚ್ಛೆಯನ್ನು ಮೀರುವಂತಿಲ್ಲ. ಲಿಂಗೈಕ್ಯರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನೀಯಲೆಂದು ಹಾರೈಸಲಾಗಿದೆ.

ಇತ್ಯಾಶಿಷ
ಒ.ಚ. ಶಿವಾಚಾರ್ಯರು
ದಿವ್ಯ ಸಾನಿಧ್ಯದಿಂದ
ಹಿರೇಕಲ್ಮಠ

## ೪೯) ದಾವಣಗೆರೆ ಕೇಸರಿ ಸೋದರಿಯರ ವಿನಂತಿ

ಡಾ॥ ಎಸ್. ಎಂ. ವೃಷಭೇಂದ್ರಸ್ವಾಮಿಯವರಿಗೆ ನಮಸ್ಕಾರಗಳು

ಈಗ ನಾಲ್ಕೈದು ದಿನಗಳ ಹಿಂದೆ ನನಗೆ ಗೊತ್ತಾದ ಸಂಗತಿ ಶ್ರೀಮತಿ ಲಲಿತಾಂಬಾ ಇನ್ನಿಲ್ಲವೆಂದು ತಿಳಿದು ತುಂಬಾ ಬೇಸರವಾಯಿತು. ಈ ಅಕಾಲಿಕ, ಆಕಸ್ಮಿಕ ನಿಧನದಿಂದ ನೀವು ಮಗ, ಸೊಸೆ ಎಷ್ಟು ಘಾಸಿಗೊಳಗಾಗಿದ್ದೀರಿ ಎಂದು ಊಹಿಸಬಲ್ಲೆ.

ಲಿಂಗೈಕ್ಯರಾಗಿರುವ ಶ್ರೀಮತಿ ಲಲಿತಾಂಬ ಅವರ ಆತ್ಮಕ್ಕೆ ಭಗವಂತನು ಚಿರಶಾಂತಿಯನ್ನು ನೀಡಲೆಂದು ಪ್ರಾರ್ಥಿಸುತ್ತೇವೆ.

ನಿಮ್ಮ ವಿಶ್ವಾಸದ,
ಲೀಲಾ ಕೇಸರಿ
ನಿರ್ಮಲಾ ಕೇಸರಿ

೫೦) ಬೆಂಗಳೂರು ರಾಜಣ್ಣನವರ ತಂತಿವರ್ತಮಾನ

To,

**CNDC DR. S.M. VRUSHABENDRA SWAMY**
SHIVPRASAD 8TH CROSS KALYANNAGAR
DHARWAD - 7

**MY DEEPEST CONDOLENCE**

FROM,

**DR. S.N. RAJESHWAR FAMILY**

೫೧) ಸಮ ದುಃಖಿ ಮಿತ್ರರ ಸಾಂತ್ವನ

ಪರಮಪೂಜ್ಯ ಡಾ|| ವೃಷಭೇಂದ್ರಸ್ವಾಮಿ ಆರ್.ಕೆ. ಹಿರೇಮಠಸ್ವಾಮಿಗಳವರ ಸನ್ನಿಧಿಗಳ ೧೬೬ ರೇಣುಕಾಪೂಜ್ಯರೆ, ವಿಷಯ ; ಪ್ರೊ. ಲಲಿತಾಂಬ ತಾಯಿಯವರು ಸಾಹಿತಿ ಅವರಿಗೋಕುಲರುಗಲೀಗೆ ನಗರ ಸ್ಮರಣೆಯೆ ಕಾರ್ಯಕ್ರಮ. ಹುಬ್ಬಳ್ಳಿ ಕಲ್ಯಾಣನಗರದ ಸಮುದಾಯ ಭವನದಲ್ಲಿ ನಡೆಯಲಿದೆ ೨ ಎಂದು ತಿಳಿವು ದುಃಖದ ಮಡುವಿನಲ್ಲಿರುವಿರಿ ಆದರೂ ತಾಯಿಯವರ ಆತ್ಮ ಅವರು ಬರೆದ ಸಾಹಿತ್ಯ ಕವನ ಸಂಗ್ರಹದಲ್ಲಿದೆ ಅದರ ಪಾರಾಯಣಕ್ಕಾಗಿ ಅವರು ಬರೆದ ಸಾಹಿತ್ಯದ ಪ್ರತಿಗಳನ್ನು ಕಳಿಸಿರಿ ಅವರ ಸ್ಮರಣೆಗೆ ಅವಕಾಶ ಮಾಡಿಕೊಡಿರಿ ಅವರ ಪುಸ್ತಕಗಳು ಮನೆಯಲ್ಲಿದ್ದರೆ ಮೊನ್ನೆ ನನ್ನ ಸತಿಯು ತೀರಿದಳು ನಾನೊಬ್ಬನೆ ಮನೆಯಲ್ಲಿ ಮಕ್ಕಳೆಲ್ಲ ದೂರ. ಸಮಾಧಾನ ಮಾಡಿಕೊಳ್ಳಲು ಪ್ರಾರ್ಥನೆ.

ತಮ್ಮ ಆರ್. ಕೆ. ಹಿರೇಮಠ
ಹುಬ್ಬಳ್ಳಿ

೫೨) ಡಾ॥ ನಂಜಪ್ಪನವರ ಪತ್ರ

ದಿ. ೧೩.೮.೨೦೦೭ ರಂದು ದೈವಾಧೀನರಾದ ನಿಮ್ಮ ಅರ್ಧಾಂಗಿನಿ, ಜೀವನ ಸಂಗಾತಿ ಶ್ರೀಮತಿ ಲಲಿತಾಂಬ ಅವರ ಆತ್ಮಕ್ಕೆ ಚಿರ ಶಾಂತಿಯನ್ನು ಕರುಣಿಸಲೆಂದು ಆ ಸರ್ವಶಕ್ತ ಪರಮಾತ್ಮನನ್ನು ವಿನಮ್ರವಾಗಿ ಕೋರುತ್ತೇವೆ.

ಡಾ॥ ಅ.ನಂಜಪ್ಪ
ಬೆಂಗಳೂರು.

೫೩) ನಿರಂಜನ ವಾಲಿಶೆಟ್ಟರ ವಿನಂತಿ ಪತ್ರ

ಆದರಣೀಯ ಪ್ರೊ. ವೃಷಭೇಂದ್ರಸ್ವಾಮಿ ಅವರಿಗೆ, ನಮಸ್ಕಾರಗಳು. ಶಿವಗಣಾರಾಧನೆ ಕಾರ್ಯಕ್ರಮ ಅರ್ಥಪೂರ್ಣವಾಗಿ ಜರುಗಿರಲು ಸಾಕು. ನನ್ನ ಗುರುಮಾತೆಗೆ ಚಿರಶಾಂತಿ ಲಭಿಸಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

ಈದಿನ ಒಂದು. ಘಟನೆಯನ್ನು ಇಲ್ಲಿ ಸ್ಮರಿಸುತ್ತಿದ್ದೇನೆ. ಚದುರಂಗರ ಪತ್ನಿತೀರಿಕೊಂಡಿದ್ದರು. ಶ್ರೀ ಹಾ. ಮಾ. ನಾಯಕರು ಮಾತನಾಡಿಸಲು ಹೋಗಿದ್ದ ಸಂದರ್ಭ. ಚದುರಂಗರು ಹೇಳಿದರಂತೆ. ನಾಯಕರೆ, ಈ ಶರೀರದಲ್ಲಿ ಸುಖದ ಬುಗ್ಗೆ ಇರುವಂತೆ ದುಃಖದ ಬುಗ್ಗೆಯೂ ಇದೆ. ಅದು ಸಹಜವಾಗಿಯೇ ಉಪಶಮನಗೊಳ್ಳುತ್ತದೆ. ಕಾಲವೇ ಅದಕ್ಕೆ ಮುಲಾಮನ್ನು ಸವರುತ್ತದೆ. ಸರ್, ಈ ಸಂದರ್ಭದಲ್ಲಿ ನಾನು ಏನು ಹೇಳಬಲ್ಲೆ. ಚದುರಂಗರು ಹೆಳಿದಂತೆ ಕಾಲವೇ ನಮ್ಮ ನೋವನ್ನು ಮಾಗಿಸಬೇಕು !

ಕೇವಲ ಎರಡು ದಿನಗಳಿಂದ ಮತ್ತೆ ಮೂತ್ರಕೋಶದ ಕಲ್ಲು ತೊಂದರೆ ಕೊಡುತ್ತಿದೆ, ಒಮ್ಮೆ ಶಸ್ತ್ರಚಿಕಿತ್ಸೆ ಆಗಿದೆಯಲ್ಲ. ಡಾಕ್ಟರ್‌ರು ಇನ್ನೊಮ್ಮೆ ಬೇಡ ಅಂತಿದ್ದಾರೆ. ಕೇವಲ ಬಾಹ್ಯ ಉಪಚಾರ ಮಾಡಿಕೊಳ್ಳಬೇಕು. ನಿನ್ನೆ ಸಂಪೂರ್ಣವಾಗಿ ನನ್ನ ಮನಸ್ಸು ಕಲ್ಯಾಣನಗರದಲ್ಲಿಯೇ ಇತ್ತು. ಶ್ರೀ ಪಾಟೀಲ ಪುಟ್ಟಪ್ಪನವರು ಬಂದಿದ್ದರಲ್ಲವೇ?

ಆಗಲಿ. ಮತ್ತೆ ಭೇಟಿ ಮಾಡುತ್ತೇವೆ. ಡಾ॥ ಪಾಪು ಅವರ ಬಗೆಗೆ ಬರಹ ನಡೆದಿದೆ, ಇದೇ ದಿ. ೧೬ರ ಹೊತ್ತಿಗೆ ಪೂರ್ಣ ಬರಹ ಮುಗಿಸುತ್ತೇನೆ. ಇಂತಿ ಅನೇಕ ಸಾಂತ್ವನಗಳು.

ನಿಮ್ಮ ನಿರಂಜನ

೫೪) ಶ್ರೀ ಜಗದೇಶ ಗುಡಗುಂಟಿಯವರ ಸಾಂತ್ವನ

To,

**DEAR PROF. VRUSHABENDRA SWAMIJI,**

I am much grived to know that our beloved "Akka" Prof. (Smt) U.S. Lalitamba left for heavenly abode on 13.08.2007

My wife and children join me to pray "Shri Shiva" to bestove on Akka Lalithamba an eternal peace and give you and your son Dr. S. M. Shivaprasad and others of the family, strength to bear the grief.

I feel much unfortunate to miss the occastion to pay my love and respects to the departed soul of AKKa Lalithamba on the day of "Smarnotsav" as I was in Bangalore / Chennai for about a week on urgent official matter.

We all now vividly remember and chew the great occasions met with Akka Lalithamba and about her great personality.

೫೫) ಶ್ರೀ ಜಾಗಟಗೇರ ಸಹೋಜಾತಪ್ಪನವರ ಪತ್ರ

ಪ್ರಿಯ ಶ್ರೀ ವೃಷಭೇಂದ್ರ ಸ್ವಾಮಮಿಜಿ ಶರಣು

ಇಳಿವಯಸ್ಸಿನಲ್ಲಿ ನಿಮ್ಮ ಅರ್ಧಾಂಗಿಯನ್ನು ಅಗಲಿರುವ ದುಃವನ್ನು ಭರಿಸುವ ಶಕ್ತಿಯನ್ನು ಮೃತರ ಆತ್ಮಕ್ಕೆ ಸದ್ಗತಿಯನ್ನು ಕರುಣಿಸಲೆಂದು ಶ್ರೀ ಜಗದ್ಗುರು ರೇಣುಕರನ್ನು ಪ್ರಾರ್ಥಿಸುವ

ನಿಮ್ಮವನೇ

ಸದ್ಯೋಜಾತ. ಮಿ। ಮ। ಜಾ

### ೫೬) ಶ್ರೀ ಗೊಗ್ಗ ಚನ್ನಬಸವರಾಜ - ಹೊಸಪೇಟೆ ಇವರ ಓಲೆ

Dear Mr. Shivaprasad,

I have received your letter Dated 25.8.2007 requesting me to attend the "Smaranotsav" on 2nd Sept 2007 on the occasion of sad demise of your beloved mother professor (Smt) U.S. Lalithamba.

I pray ALMIGHTY GOD to give you sufficient courage to face this irreparable loss of sad demise of your mother.

Please convey my heart-felt condolences to all the members of the bereaved family.

MAY HER soul rest in peace.

Yours Sincerely,
**GOGGA CHANNA BASAVARAJ**

### 57) Sri Venkataramana's Condolence

Dear Sir,

We are extremely grieved at the sad demise of Prof. Lalithamba on 13th Aug 07.

We regret to miss the opportunity to be at the gathering tomorrow.

With regards,
Sincerly
**Venkataramana F/o Laximikant**
Hyderbad

೫೮) ಶ್ರೀ ಬಸವರಾಜ ಮಾಳಿಗೇರ – ಅವರ ಸಾಂತ್ವನ

ಮಾನ್ಯರೇ,

ನಿಮ್ಮ ಪ್ರೀತಿಯವರಿಗೆ ಪ್ರೊ. ಯು. ಎಸ್. ಲಲಿತಾಂಬ ಅವರ ಲಿಂಗೈಕ್ಯರಾದ ನಿಮಿತ್ತ 'ಸ್ಮರಣೋತ್ಸವ' ಇಟ್ಟುಕೊಂಡಿರವಿರಿ ಲಿಂಗೈಕ್ಯರಿಗೆ ಶ್ರೀ ಪರಮಾತ್ಮ ಶಾಂತಿ ಕರುಣಿಸಲಿ. ಉತ್ಸವ ಸಾಂಗವಾಗಲಿ

ತಮ್ಮ
ಬಸವರಾಜ ಮಾಳಿಗೇರ,
ಧಾರವಾಡ

## ಲಿಂ. ಪ್ರೊ. ಶ್ರೀಮತಿ ಲಲಿತಾಂಬ ಅವರ ಪುಣ್ಯಸ್ಮರಣೋತ್ಸವ

ದಿ॥ ೨-೯-೨೦೦೭ರಂದು ಲಿಂ॥ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ ಅವರ ಶ್ರದ್ಧಾಂಜಲಿ ಸಮಾವೇಶ, ಧಾರವಾಡ ಕಲ್ಯಾಣನಗರ 'ಸಮುದಾಯ ಭವನ'ದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠ, ಗದಗ, ಇವರ ನೇತೃತ್ವದಲ್ಲಿ, ಶ್ರೀಮತಿ ಶೈಲಜಾ ಪತ್ರೆ ಅವರ ಅಧ್ಯಕ್ಷತೆಯಲ್ಲಿ ನೆರವೇರಿತು. ಅನೇಕ ಗಣ್ಯ ಮಾನ್ಯ ಸಾಹಿತಿಗಳು, ಅಭಿಮಾನಿಗಳು, ಬಂಧುಗಳು, ವಿದ್ಯಾರ್ಥಿಗಳು ನೂರಾರು ಸಂಖ್ಯೆಯಲ್ಲಿ ಭಾಗವಹಿಸಿ, ದಿವಂಗತರಿಗೆ ಶ್ರದ್ಧಾಂಜಲಿ ಸಲ್ಲಿಸಿದ್ದು ಒಂದು "ಸಾಹಿತ್ಯ-ಸಹೃದಯ ಸಮಾವೇಶ" ಆಗಿದ್ದುದು ಒಂದು ವಿಶೇಷ. ಶ್ರೀ ಶ್ರೀ ಜಗದ್ಗುರುಗಳು, ಶ್ರೀಮತಿ ಲಲಿತಾಂಬಾ ಅವರ ಭಾವಚಿತ್ರಕ್ಕೆ ಪುಷ್ಪಮಾಲೆ ಅರ್ಪಿಸಿ, ದೀಪ ಬೆಳಗಿಸಿ, ಶ್ರೀಮತಿಯವರ ಜೀವನ-ಸಾಹಿತ್ಯ-ಸಾಧನೆಯ ಗುಣಗಾನ ಮಾಡಿದರು, ಶ್ರೀಮತಿ ಜಯದೇವಿ ಜಂಗಮಶೆಟ್ಟಿ ಅವರ ತಂಡದಿಂದ ವಚನ ಗಾಯನ ನೆರವೇರಿತು, ಪ್ರೊ. ಶಾಂತಾ ಇಮ್ರಾಪುರ, ಪ್ರೊ. ಹುಸೇನ್ ಬಿ ಬೀಳಗಿ, ಶ್ರೀ ಪಾಟೀಲ ಪುಟ್ಟಪ್ಪ, ಶ್ರೀ ರಮೇಶ ಸಿದ್ಧಾಂತಿ ಮುಂತಾದವರು ದಿವಂಗತರ ಪುಣ್ಯ ಸ್ಮರಣೆ ಮಾಡಿದರು. ಮಹಿಳಾ ಲೋಕಕ್ಕೇ ಆದರ್ಶಪ್ರಾಯರೆಂದೂ, ಆದರ್ಶ ಶಿಕ್ಷಕಿ ಎಂದೂ, ಗಣ್ಯ ಸಾಹಿತಿ ಹಾಗೂ ವಿಚಾರವಾದಿ ಮಹಿಳೆ ಎಂದು ಮುಂತಾಗಿ ವರ್ಣಿಸಿದರು. ಪತಿ ಡಾ॥ ವೃಷಭೇಂದ್ರಸ್ವಾಮಿ, ಮಗ ಡಾ॥ ಶಿವಪ್ರಸಾದ, ಮಂಗಳೂರಿನ ಬಂಧು ಡಾ॥ ಶಿವಪ್ರಕಾಶ ಮತ್ತು ಶ್ರೀಮತಿ ಶೈಲಜ ಪತ್ರೆ ಮುಂತಾದ ಬಂಧುಗಳು, ತಮ್ಮ ಹೃದಯ ತುಂಬಿದ ಶ್ರದ್ಧಾಂಜಲಿ ಅರ್ಪಿಸಿದರು, ಡಾ॥ ಬಾಳಣ್ಣ ಸೀಗೇಹಳ್ಳಿ, ಶ್ರದ್ಧಾಂಜಲಿ ಸಂದೇಶಗಳನ್ನು ಓದಿದರು, ಪ್ರೊ. ಉಮಾಕಾಂತ, ಪ್ರೊ. ಎಂ.ಐ.ಸವದತ್ತಿ, ಡಾ॥ ಎಂ.ಎಂ.ಕಲಬುರ್ಗಿ, ಪ್ರೊ. ಬಿ.ಸಿ.ಜವಳಿ ಮುಂತಾದ ನೂರಾರು ಅಭಿಮಾನಿಗಳು ಭಾಗವಹಿಸಿದ್ದರು. ಪತ್ರಿಕಾ ವರದಿಗಾರರೂ, ಟಿ.ವಿ.ಮಾಧ್ಯಮದವರು, ಸಾರ್ವಜನಿಕರು, ಮಕ್ಕಳು, ಮಹಿಳೆಯರು ಭಾಗವಹಿಸಿದ್ದ ಈ ಶ್ರದ್ಧಾಂಜಲಿ ಒಂದು ಶೋಕ ಸಭೆಯಾಗದೆ, "ಸಾಹಿತ್ಯ ಸಂಸ್ಕೃತಿ ಸಮಾವೇಶ"ವೇ ಅದುದು ಒಂದು ವಿಶೇಷ: ಡಾ॥ ಡಿ.ಎಂ. ಹಿರೇಮಠರು ಸಭೆಯ ನಿರೂಪಣೆ ಮಾಡಿದರು.

*(ಒಂದು ವರದಿ)*

## i) Asia / Pacific

Who's Who

Vrushabhendra Swamy, (Ms) Lalithamba; BA., BED, MEd, DTE; Writer; August 23, 1930 Birur (Karnataka); M. S.M. Vrushabhendra Swamy, ones; Educ Mysore and Karnatak Univs, Central Inst of English & Foreign Languages, Hyderabad; Retd Reader, Univ College of Education, Dharwad; President, Uttara Karnataka Lekhakiyara Sangh, Hubli - Dharwad 1992-94; ex-Chairperson: Univ College of Education Union, Jayadev Taiyi High School, Dharwad; Member: All Karnakatka Lady Writers Asscn, Bangalore, Betterment Com, Kalyan Nagar Women Asscn, Dharwad; ex-Member, Akkana Balaga, Dharwad; ex-Supervisor, Univ Primary School, Dharwad; publs--sajjalaguddada Sharanamma Navaru; Patre Channa Veerappaiah (1986), Manada Mallige (1994); and several articles published in various newspapers/periodicals; Address 'Shivaprasad' Kalyanagar, 8th Cross, Dharwad-580 007, India.

## ಪ್ರೊ. (ಶ್ರೀಮತಿ) ಲಲಿತಾಂಬ ವೃಷಭೇಂದ್ರಸ್ವಾಮಿ
## ಇವರ
## ವ್ಯಕ್ತಿ–ಸೇವೆ–ಸಾಧನೆಯ ಮಾಹಿತಿ

ಹೆಸರು : ಪ್ರೊ. (ಶ್ರೀಮತಿ) ಲಲಿತಾಂಬ ವೃಷಭೇಂದ್ರಸ್ವಾಮಿ ಬಿ. ಎಡ್., ಎಂ.ಎಡ್., ಡಿ.ಟಿ.ಇ.

'ಶಿವಪ್ರಸಾದ' ಕಲ್ಯಾಣನಗರ; ಲನೇ ಕ್ರಾಸ್, ಧಾರವಾಡ–೫೮೦ ೦೦೭. ದೂರವಾಣಿ – ೦೮೩೬–೨೪೪೮೫೭೦

ಹುಟ್ಟಿದ ದಿನ : ೨೩–೦೮–೧೯೩೦ ಲಿಂಗೈಕ್ಯ : ೧೩–೦೮–೨೦೦೭

ಜನ್ಮಸ್ಥಳ : ಬೀರೂರು – ಚಿಕ್ಕಮಗಳೂರು ಜಿಲ್ಲೆ

ತಂದೆ–ತಾಯಿ : ಲಿಂ॥ ಶ್ರೀ ಶ್ರೀಕಂಠಶರ್ಮ ಉಬ್ರಾಣಿಮಠ – ಲಿಂ॥ ಶ್ರೀಮತಿ ಗಿರಿಜಾಂಬ.

ಶಿಕ್ಷಣ : ಬಿ.ಎ. (ಮಹಾರಾಜ ಕಾಲೇಜು, ಮೈಸೂರು)
ಬಿ.ಎಡ್., ಎಂ.ಎಡ್. (ಕ. ವಿಶ್ವವಿದ್ಯಾಲಯ, ಧಾರವಾಡ)
ಡಿ.ಟಿ.ಇ; (ಸೆಂಟ್ರಲ್ ಇನ್ಸ್ಟಿಟ್ಯೂಟ್ ಆಫ್ ಇಂಗ್ಲಿಷ್, ಹೈದರಾಬಾದ)

ಉದ್ಯೋಗ : ನಿವೃತ್ತ ಪ್ರವಾಚಕರು, ಕರ್ನಾಟಕ ವಿಶ್ವವಿದ್ಯಾಲಯ ಶಿಕ್ಷಣ ಮಹಾವಿದ್ಯಾಲಯ, ಧಾರವಾಡ (ಶಿಕ್ಷಣ ಕ್ಷೇತ್ರದ ವಿವಿಧ ಹಂತಗಳಲ್ಲಿ (೧೯೫೩–೧೯೯೦) ೩೭ ವರ್ಷಗಳ ಸೇವೆ.

ಪತಿ : ಡಾ. ಎಸ್. ಎಂ. ವೃಷಭೇಂದ್ರಸ್ವಾಮಿ ಎಂ.ಎ. ಪಿ.ಎಚ್‌ಡಿ

(ನಿವೃತ್ತ) ಮುಖ್ಯಸ್ಥರು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೫೮೦ ೦೦೩.

ಮಕ್ಕಳು : ಡಾ. ಎಸ್. ಎಂ. ಶಿವಪ್ರಸಾದ ಎಂ.ಎಸ್.ಸಿ. ಪಿ.ಎಚ್‌ಡಿ

ವಿಜ್ಞಾನಿ – National Physical Laboratory
(N.P.L New Delhi)

Present : Scientist at Dr. C.N.R. Rao Guidence
J.N.C.A.S.R Science Institute, Jakkur Post Office,
B'lore - 560 064.

ಸೊಸೆ : ಶ್ರೀಮತಿ ಅನುಪಮಾ ಪ್ರಸಾದ – ಮೊಮ್ಮಗಳು ಕು। ಶರ್ವಾಣಿ

ಶ್ರೀಮತಿ ಲಲಿತಾಂಬಾ ಅವರ ಗೌರವ ಸೇವೆಗಳು:-

* ಸಂಸ್ಥಾಪಕ ಸದಸ್ಯೆ, ಉತ್ತರ ಕರ್ನಾಟಕ ಲೇಖಕಿಯರ ಸಂಘ – ಹುಬ್ಬಳ್ಳಿ-ಧಾರವಾಡ.
* ಆಜೀವ ಸದಸ್ಯೆ, ಉತ್ತರ ಕರ್ನಾಟಕ ಲೇಖಕಿಯರ ಸಂಘ (ಹುಬ್ಬಳ್ಳಿ-ಧಾರವಾಡ
* ಆಜೀವ ಸದಸ್ಯೆ, ಅಖಿಲ ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.
* ಸಂಸ್ಥಾಪಕಿ, ಪ್ರಸಾದ ಪ್ರಕಾಶನ, ಧಾರವಾಡ
* ೧೯೯೨ರಲ್ಲಿ ದಾನಚಿಂತಾಮಣಿ ಅತಿಮಬ್ಬೆ ಆಯ್ಕೆ ಸಮಿತಿ ಸದಸ್ಯೆ (ಸರಕಾರದ ನೇಮಕಾತಿ)
* ೧೯೮೦ರಲ್ಲಿ ಒಂಬತ್ತನೆಯ ತರಗತಿಯ ಇಂಗ್ಲಿಷ ಪಠ್ಯಪುಸ್ತಕ ನಿರ್ಮಾಣ ಸಮಿತಿಯ ಸದಸ್ಯೆ (ಶಿಕ್ಷಣ ಇಲಾಖೆಯಿಂದ)
* ದಿಲ್ಲಿಯಲ್ಲಿ ೧೯೮೪ರಲ್ಲಿ ನಡೆದ ದೆಹಲಿ 'ಕನ್ನಡಿಗ' ಪತ್ರಿಕೆಯವರು ನಡೆಸುತ್ತಿರುವ ರಾಷ್ಟ್ರೀಯ ಕನ್ನಡ ಸಮ್ಮೇಳನದ ಮಹಿಳಾ ಗೋಷ್ಠಿಯ ಅಧ್ಯಕ್ಷೆ.
* ಹುಬ್ಬಳ್ಳಿಯ ಮೂರು ಸಾವಿರ ಮಠದಲ್ಲಿ ನಡೆದ ಉ.ಕ. ಮಹಿಳಾ ಸಾಹಿತ್ಯ ಸಮ್ಮೇಳನ: (ಮೊದಲನೆಯದು) ಮಹಿಳಾ ಗೋಷ್ಠಿಯ ಅಧ್ಯಕ್ಷತೆ – ೧೯೮೫ರಲ್ಲಿ
* ಬಳ್ಳಾರಿಯಲ್ಲಿ ನಡೆದ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾ ಗೋಷ್ಠಿಯಲ್ಲಿ ಭಾಷಣ.
* ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾ॥ ಅಯ್ಯನ ಹಳ್ಳಿಯಲ್ಲಿ ನಡೆದ ಶರಣ ಸಾಹಿತ್ಯ ಸಮ್ಮೇಳನದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳ ಉದ್ಘಾಟನೆ.

* ಬೆಂಗಳೂರಿನ ಜಂಗಮ ಮಠ ನಡೆಸಿದ ಶರಣ ಸಮ್ಮೇಳನದ ಶರಣೆಯರ ಗೋಷ್ಠಿಯ ಅಧ್ಯಕ್ಷತೆ.

* ಧಾರವಾಡದ 'ಅಚನಿರಸಿಕರಂಗ'ದ ಪ್ರಥಮ ವಾರ್ಷಿಕೋತ್ಸವ ಸಂದರ್ಭದಲ್ಲಿ ನಡೆದ ಮಹಿಳೆಯ ಸಾಹಿತ್ಯ-ಸಾಧನೆಗಳ ಗೋಷ್ಠಿಯ ಅಧ್ಯಕ್ಷೆ - ೨೦೦೧.

* ಬೆಳಗಾಂವಿಯಲ್ಲಿ ನಡೆದ 'ಕದಳಿ' ಮಹಿಳಾ ಸಮಾವೇಶದಲ್ಲಿ 'ಗೋಷ್ಠಿ' ಅಧ್ಯಕ್ಷತೆ. (೮-೧೨-೨೦೦೩)

ದಾನ - ದತ್ತಿ - ಕೊಡುಗೆ :

* ಅಖಿಲ ಕರ್ನಾಟಕ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೫,೦೦೦/-ರೂ. ದಂಪತಿಗಳದತ್ತಿ (ಪ್ರತಿ ವರ್ಷ ಕನ್ನಡ ಸಾಹಿತ್ಯದಲ್ಲಿ ವಿಶೇಷ ಸಾಧನೆ ಮಾಡಿರುವ "ದಂಪತಿ"ಗಳಿಗೆ "ಸಾಹಿತ್ಯ ದಂಪತಿ" ಪುರಸ್ಕಾರ ನೀಡಿ ಗೌರವಿಸುವುದಕ್ಕಾಗಿ ದತ್ತಿ).

* ಉತ್ತರ ಕರ್ನಾಟಕ ಲೇಖಕಿಯರ ಸಂಘ, ಧಾರವಾಡ ಇವರಲ್ಲಿ ೫೦೦೦/-ರೂಗಳ ದತ್ತಿ. (ಪ್ರತಿವರ್ಷ ಶ್ರೇಷ್ಠ ಮಹಿಳಾ ಸಾಹಿತ್ಯ ಕೃತಿಗಳಿಗೆ ಪುರಸ್ಕಾರ ನೀಡುವ ಉದ್ದೇಶಕ್ಕಾಗಿ)

* ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರಲ್ಲಿ ದಂಪತಿಗಳ ರೂ.೧೦,೦೦೦/- ದತ್ತಿ. (ಧಾರವಾಡ - ಬಳ್ಳಾರಿ - ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಶರಣ ಸಾಹಿತ್ಯ ಚಿಂತನ ಕುರಿತು ಭಾಷಣ ಕಾರ್ಯಕ್ರಮ ವ್ಯವಸ್ಥೆಗಾಗಿ)

* ಎಚ್.ಎಫ್. ಕಟ್ಟೀಮನಿ ಸ್ಮಾರಕ ಮಕ್ಕಳ ಪುಸ್ತಕ ಸಹಾಯ ನಿಧಿಗೆ ಕಾಣಿಕೆ ರೂ.೧೦,೦೦೦/-

* ಕರ್ನಾಟಕ ವಿಧ್ಯಾವರ್ಧಕ ಸಂಘ ಧಾರವಾಡ, ದತ್ತಿನಿಧಿ - ಮಕ್ಕಳ ಪ್ರತಿಭಾ ಪುರಸ್ಕಾರ ಕಾರ್ಯಕ್ರಮಕ್ಕಾಗಿ.

* ಧಾರವಾಡದ ವಿವೇಕಾನಂದ ರಾಮಕೃಷ್ಣಾಶ್ರಮದ ಕಟ್ಟಡದ ನಿಧಿಗೆ ರೂ.೬,೦೦೦/-

* ಕಲ್ಯಾಣ ನಗರದ "ಸಮುದಾಯ ಭವನ"ಕ್ಕೆ ರೂ.೫,೦೦೦/- ದೇಣಿಗೆ

* ಬೀರೂರು ವೀರಭದ್ರಸ್ವಾಮಿ ದೇವಸ್ಥಾನಕ್ಕೆ ಭಕ್ತಿದಾನ ರೂ. ೧೦,೦೦೦/-

* ಧಾರವಾಡ ಗಣಪತಿ ದೇವಸ್ಥಾನಕ್ಕೆ ಕಾಣಿಕೆ ರೂ.೧೦,೦೦೦/- ಧಾರವಾಡ ಜಂಗಮನ ಕಟ್ಟಡ ನಿಧಿಗೆ ರೂ.೧೦,೦೦೦/-

* ಶ್ರೀ ಜಗದ್ಗುರು ಕೊಟ್ಟುರು ಸ್ವಾಮಿ ಸಂಸ್ಥಾನ ಮಠ ಹೊಸಪೇಟೆ-ಬಳ್ಳಾರಿ ಶರಣ ಸಾಹಿತ್ಯ ಪ್ರಸಾರ - ಪ್ರಸಾರಕ್ಕಾಗಿ ರೂ.೧೦,೦೦೦/- ದಂಪತಿಗಳ ದತ್ತಿ.

* ಶ್ರೀ ಸುತ್ತೂರು ಸಂಸ್ಥಾನ, ಮೈಸೂರು ಇವರ ಬಡಮಕ್ಕಳ ವಿದ್ಯಾಸೇವೆಗಾಗಿ ರೂ. ೧,೦೦,೦೦೦-೦೦/- ದತ್ತಿ.

ಲೇಖನಗಳ ಕೊಡುಗೆ :

* ಮೊದಲನೆಯ ಮಹಿಳಾ ವರ್ಷದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾದ 'ಮಹಿಳೆ ಸಮಸ್ಯೆಗಳು - ಸಾಧನೆಗಳು' ಎಂಬ ಪುಸ್ತಕಕ್ಕೆ ಮರೆಯಲಾರದ ಮಹಿಳೆಯರು ಎಂಬ ಲೇಖನ. ೧೯೭೬

* ಮೈಸೂರಲ್ಲಿ ನಡೆದ ವಿಶ್ವ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ಪ್ರಕಟವಾದ 'ಮಹಿಳೆಯರ ಸಣ್ಣ ಕಥೆಗಳು' ಪುಸ್ತಕದಲ್ಲಿ -'ಹಸಿರು ಸೀರೆ' ಎಂಬ ಕಥೆ ಪ್ರಕಟ.

* ರಾಯಚೂರಿನ ಎಂ.ಪಿ.ಜಾಲಿಯವರ ಸ್ಮರಣ ಸಂಚಿಕೆಗೆ ಲೇಖನ.

* ಬಸವರಾಜ ಕಟ್ಟೀಮನಿಯವರ ಸ್ಮರಣ ಸಂಪುಟಕ್ಕೆ ಲೇಖನ.

* ವಿ.ವಿ. ಶಿಕ್ಷಣ ಮಹಾವಿದ್ಯಾಲಯದಿಂದ ಪ್ರಕಟವಾಗಿತ್ತಿದ್ದ ಬುಲೆಟಿನ್‌ಗೆ ಅನೇಕ ಶೈಕ್ಷಣಿಕ ಲೇಖನಗಳು.

* ಪ್ರಜಾಮತ ವಿಶೇಷ ಸಂಚಿಕೆಗೆ ವೀರಶೈವ ಸಂಪ್ರದಾಯ ವಿವಾಹ ವೈಶಿಷ್ಟ್ಯ ಮತ್ತು ಸಮಾಜ ಎಂಬ ಲೇಖನಗಳು.

* ವಿ.ವಿ ಶಿಕ್ಷಣ ಮಹಾವಿದ್ಯಾಲಯದಿಂದ ಪ್ರಕಟವಾದ Western Educators & Eastern Educators ಎಂಬ ಪುಸ್ತಕಕ್ಕೆ ಲೇಖನಗಳು.

* ಬಾದಾಮಿಯ ವೀರ ಪುಲಕೇಶಿ ಕಾಲೇಜಿನ ವಜ್ರಮಹೋತ್ಸವ ಗ್ರಂಥಕ್ಕೆ ಲೇಖನ.

* ಶ್ರೀಮಾಮನಿಯವರ "ಗುಡದೂರ ಶಿವಚೇತನ" (ಸಜ್ಜಲ ಗುಡ್ಡದ ಶರಣಮ್ಮನವರ ಜೀವನ ಚರಿತ್ರೆ) ಗ್ರಂಥಕ್ಕೆ ಮುನ್ನುಡಿ.

* ಬೆಳಗಾವಿಯ ಶರಣೆಯರ ರವಿದೇವಿ-ಸುಗ್ಗಲಾದೇವಿಯರ ಅಮೃತ ಮಹೋತ್ಸವ ಗ್ರಂಥಕ್ಕೆ ಲೇಖನ.

* ಅಕ್ಕನ ಬಳಗ ಬೆಳಗಾವಿ 'ಶಿವಶರಣೆಯರ ಚರಿತಾಮೃತ'ಕ್ಕೆ ಲೇಖನ.

* ಬೀರೂರಿನಲ್ಲಿ ನಡೆದ ರಂಭಾಪುರಿ ಜಗದ್ಗುರುಗಳ ಒಂಬತ್ತನೆಯ ದಸರಾ ಮಹೋತ್ಸವ ಮತ್ತು ಭಾವೈಕ್ಯ ಧರ್ಮ ಸಮ್ಮೇಳನದಲ್ಲಿ ಪ್ರಕಟವಾದ "ಧರ್ಮ ಸೌರಭ" ಸಂಚಿಕೆಗೆ ಲೇಖನ.

* ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ "ಸಂವೇದನೆಗೆ" ಲೇಖನ.

* ಬೆಂಗಳೂರಿನ ಜಿ.ನಾರಾಯಣ ಅವರ "ವಿನೋದ" ಪತ್ರಿಕೆಗೆ ಲೇಖನಗಳು

**ಪತ್ರಿಕೆಗಳ ಲೇಖನಗಳು :**

ಸುಧಾ, ತುಷಾರ, ವನಿತಾ, ಕರ್ಮವೀರ, ಮಯೂರ, ಲೇಖಕಿ, ಮಂಜುವಾಣಿ, ಪ್ರಜಾಜ್ಯೋತಿ, ಪರಂಜ್ಯೋತಿ, ಸಂಯುಕ್ತ ಕರ್ನಾಟಕ, ಕನ್ನಡಮ್ಮ, ಹೇಮಕೂಟ, ಮಹಾಮನೆ, ವಿವೇಕ ಹಂಸ, ವಿಶಾಲ ಕರ್ನಾಟಕ, ದೀಪಾವಳಿ ಸಂಚಿಕೆಗಳು, ಗೋಕಾಕ್ ಪತ್ರಿಕೆ, ಕ.ವಿ. ವಿದ್ಯಾಲಯದಿಂದ ಪ್ರಕಟವಾಗಿತ್ತಿದ್ದ ಮಾನವಿಕ ವಿಜ್ಞಾನ, ಬೆಂಗಳೂರಿನ ವಿನೋದ ಮುಂತಾದ ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟವಾಗಿವೆ.

**ಆಕಾಶವಾಣಿ :**

ಈಗ ೩೫ ವರ್ಷಗಳಿಂದ ಧಾರವಾಡದ ಆಕಾಶವಾಣಿಯಲ್ಲಿ ಚಿಂತನೆ-ಚರ್ಚೆ-ಭಾಷಣ-ಸಣ್ಣ ಕಥೆಗಳು, ರೂಪಕಗಳು ಬಿತ್ತರಿಸಲ್ಪಟ್ಟಿವೆ. ಹೊಸಪೇಟೆ ಆಕಾಶವಾಣಿಯವರು ೧೯೯೫ ನಡೆದ, ಜಿಲ್ಲಾ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ವಿಶೇಷ ಸಂದರ್ಭದಲ್ಲಿ ವಿಶೇಷ ಸಂದರ್ಶನ ಬಿತ್ತರಿಸಿದ್ದರು. ಮಡಿಕೇರಿ ಆಕಾಶವಾಣಿ ವಚನಾಂಜಲಿ ಗ್ರಂಥದ ಕೆಲವು ವಚನಗಳನ್ನು ಪ್ರತಿದಿನ ಬೆಳಗಿನ ಸುಪ್ರಭಾತ ಚಿಂತನವಾಗಿ ಪ್ರಸಾರ ಮಾಡಿದೆ.

**ಭಾಷಣಗಳು :**

ಉತ್ತರ ಕರ್ನಾಟಕದ ಅನೇಕ ಶಾಲೆ-ಕಾಲೇಜುಗಳಲ್ಲಿ ಮಠಗಳಲ್ಲಿ ಸಾರ್ವಜನಿಕ ಸಂಘ ಸಂಸ್ಥೆಗಳಲ್ಲಿ, ರೋಟರಿ, ಲಯನ್ಸ್ ಇನ್ನರ್ ವ್ಹೀಲ್‌ಗಳಲ್ಲಿ, ಅಕ್ಕನ ಬಳಗಗಳಲ್ಲಿ, ಧರ್ಮ, ಶಿಕ್ಷಣ, ಮಹಿಳೆ, ಸಮಾಜ ಮುಂತಾದ ವಿಶೇಯಗಳ ಬಗೆಗೆ ಹಲವಾರು ಭಾಷಣಗಳು.

ಪ್ರಕಟಿತ ಗ್ರಂಥಗಳು :

* ಸಜ್ಜಲ ಗುಡ್ಡದ ಶರಣಮ್ಮನವರು – (ಜೀವನ ಚರಿತ್ರೆ)
* ಪತ್ರೆ ಚನ್ನವೀರಪ್ಪಯ್ಯನವರು – ಸಾಧನೆ – ಕೊಡುಗೆ (ಪುಸ್ತಿಕೆ) ಗದಗಿನ ಮಠದ ಪ್ರಕಟಣೆ
* ಮನದ ಮಲ್ಲಿಗೆ – (ವೈಚಾರಿಕ ಲೇಖನಗಳು).
* ವಚನಾಂಜಲಿ – ಆಯ್ದ ಶಿವಶರಣ ವಚನಗಳ ವಿಶ್ಲೇಷಣೆ (ಕಾವ್ಯಾನಂದ ಪ್ರಶಸ್ತಿ ಬಂದಿದೆ).
* ಮುನಿದೆ ಏಕಮ್ಮ ನೆಲದಾಯಿ (ಕವನ ಸಂಗ್ರಹ)
* ಮಕ್ಕಳ ಶಿಕ್ಷಣ – ಚಿಂತನೆಗಳು – (ಪ್ರಬಂಧಗಳು) (ಮಾ॥ ಶ್ರೀ॥ ರತ್ನಮ್ಮ ಹೆಗ್ಗಡೆಯವರ ಬಹುಮಾನ ವಿಜೇತ ಕೃತಿ)
* ಪುಟ್ಟನಿಗೆ ಹಿತೈಷಿಯ ಪತ್ರಗಳು – ಮಕ್ಕಳಿಗೆ ಜೀವನ ಮೌಲ್ಯಗಳನ್ನು ಪರಿಚಯಿಸುವ ಕೃತಿ.
* ಶಿವಶರಣೆಯರು – ಜೀವನ, ಸಾಧನೆ, ವಚನ (ಸಂಶೋಧನಾತ್ಮಕ ಗ್ರಂಥ)
* ರಚನಾತ್ಮಕ ಚಿಂತನೆಗಳು – (ಪ್ರಸ್ತುತ ಸಮಾಜಕ್ಕೆ ಸಂಬಂಧಿಸಿದ ವೈಚಾರಿಕ ಲೇಖನಗಳು.)
* ಬೇರೊಂದು ಮರವೆರಡು – (ಸಣ್ಣ ಕಥೆಗಳು)
* ಕಿವಿಗೊಟ್ಟುಕೇಳಿ – ಮನವಿಟ್ಟು ಮಾಡು ಮಗುವೇ (೭೫ನೇ ವಯಸ್ಸಿನ ನೆನಪಿನ ಗ್ರಂಥ – ಮಕ್ಕಳಿಗೆ ಉಚಿತ ಸರಬರಾಜು)

ಪ್ರಕಟಿಸಲು ಸಿದ್ಧವಿರುವ ಕೃತಿಗಳು :

* ಉದಾತ್ತ ಮಹಿಳೆಯರ ಬಗ್ಗೆ ಲೇಖನಗಳು
* ಧಾರ್ಮಿಕ ವಿಷಯ ಕುರಿತಾದ ಲೇಖನಗಳು
* ವೈಚಾರಿಕ ಪ್ರಬಂಧಗಳು
* ಸಣ್ಣಕಥೆಗಳು
* ಕವನ ಸಂಗ್ರಹ

* ಮೌಲ್ಯ ಬೋಧಿಸುವ ಮಕ್ಕಳ ಕಥೆಗಳು (ಕಥೆಗಳ ಮೂಲಕ ಮಕ್ಕಳಿಗೆ ಮೌಲ್ಯ ಬೋಧನೆ)
* ಶಿಕ್ಷಣಕ್ಕೆ ಸಂಬಂಧಿಸಿದ ಲೇಖನಗಳು
* ರೂಪಕಗಳು
* ಶರಣರ ವೈಶಿಷ್ಟ್ಯ ಚಿಂತನೆಗಳು
* ಸಮಾಜದ ಸಮಸ್ಯೆಗಳಿಗೆ ಸಂಬಂಧಿಸಿದ ಲೇಖನಗಳು (ಸ್ತ್ರೀಪರವಾದ / ಶಿಕ್ಷಣ ಮಾಧ್ಯಮ / ಮಿಸಲಾತಿ / ರಾಷ್ಟ್ರಭಾಷೆ ಇ. ಇ....)
* ಆದರ್ಶ ದಂಪತಿಯ ಪ್ರೇಮಪತ್ರಗಳು
* ಪ್ರೊ. ಲಲಿತಾಂಬ "ಸಮಗ್ರ ಕೃತಿ ಸಂಪುಟ – ೧,೨,೩"

ಪ್ರಶಸ್ತಿ ಗೌರವಗಳು :

* ಕಾವ್ಯಾನಂದ ಪ್ರಶಸ್ತಿ
* ರತ್ನಮ್ಮ ಹೆಗ್ಗಡೆಯವರ ಬಹುಮಾನ
* ಮಕ್ಕಳ ಸಾಹಿತ್ಯ ಸಮ್ಮೇಳನ (ಧಾರವಾಡದಲ್ಲಿ_ ಸನ್ಮಾನ)
* ಉತ್ತರ ಕರ್ನಾಟಕ ಲೇಖಕಿಯರ ಸಂಘದಿಂದ ಸನ್ಮಾನ
* ಕದಳಿ ಮಹಿಳಾ ವೇದಿಕೆ ಮೈಸೂರು – ಇವರಿಂದ ಕದಳಿ ಶ್ರೀ ಪ್ರಶಸ್ತಿ

■



ಆದರ್ಶ ಮಹಿಳಾ ಸಾಹಿತಿ, ಶಿಕ್ಷಣ ತಜ್ಞೆ

ಡಾ॥ ಪ್ರೊ. ಲಲಿತಾಂಬ ವೃಷಭೇಂದ್ರಸ್ವಾಮಿ (ಕ.ವಿ.ವಿ. ಧಾರವಾಡ)

ಸಮಗ್ರ ಸಾಹಿತ್ಯದ ೩ ಬೃಹತ್ ಸಂಪುಟಗಳು

# "ಶಿಕ್ಷಣ – ಸಾಹಿತ್ಯ – ಸಮಾಜ – ಚಿಂತನೆಗಳ ಹೊಸದೃಷ್ಟಿ"

## ಸಂಪುಟ – ೧ ವಚನಾಂಜಲಿ – ಕಾವ್ಯಾಂಜಲಿ

ಪುಟ ೭೦೪, ಬೆಲೆ ರೂ. ೪೦೦.೦೦

ಶಿವಶರಣರ ಆಯ್ದ ೧೭೪ ವಚನಗಳ ಸರಳ ವ್ಯಾಖ್ಯಾನ, ಕಾವ್ಯಾನಂದ ಪ್ರಶಸ್ತಿ ಪಡೆದ ಕೃತಿ. ಮತ್ತು ಪ್ರೊ. ಲಲಿತಾಂಬ ಅವರ ಸೃಜನ ಶೀಲ ಕವನ – ಚುಟುಕುಗಳ ಸಂಗ್ರಹ. ಬಹು ಜನಪ್ರಿಯ ಕೃತಿ.

–ಡಾ. ಎಸ್. ವಿದ್ಯಾಶಂಕರ, ಶ್ರೀ [illegible]ದ್ದಯ್ಯ ಪುರಾಣಿಕ

## ಸಂಪುಟ – ೨ ಜೀವನ ಚರಿತ್ರೆ – ಶಿಕ್ಷಣಾಂಜಲಿ

ಪುಟ ೫೧೬, ಬೆಲೆ ರೂ. ೩೦೦.೦೦

ಶಿವಶರಣೆಯರ ಚರಿತ್ರೆ ಮತ್ತು ಶಿಕ್ಷಣದ ಬಹುಮುಖ ಸಮಸ್ಯೆಗಳ ವಿಶ್ಲೇಷಣೆ – ಸಂಸ್ಕೃತಿ ಚಿಂತನೆಗಳ ಪ್ರಬಂಧಗಳು. ಎಲ್ಲ ಭಾರತೀಯ ಭಾಷೆಗಳಿಗೆ ಭಾಷಾಂತರವಾಗ ಬಹುದಾದ ಕೃತಿ

–ನ್ಯಾ ಶ್ರೀ ವಿ.ಎಸ್.ಮಳಿಮಠ, ಡಾ. ಹಾ.ಮಾ.ನಾಯಕ

## ಸಂಪುಟ – ೩ ಕಥಾಂಜಲಿ – ಚಿಂತನಾಂಜಲಿ – ಸ್ಮರಣಾಂಜಲಿ

ಪುಟ ೫೫೦, ಬೆಲೆ. ರೂ. ೩೦೦.೦೦

ಪ್ರೊ. ಲಲಿತಾಂಬ ಅವರ ಸ್ವತಂತ್ರ ಕಥೆ, ಸಾಹಿತ್ಯ ಪ್ರಬಂಧ – ಚಿಂತನೆಗಳು ಸಂಗ್ರಹ ಮನದ ಮಲ್ಲಿಗೆ ಇ.ಇ. ಮತ್ತು ಸ್ಮರಣಾಂಜಲಿ – ಶ್ರದ್ಧಾಂಜಲಿಗಳ ಸಂಗ್ರಹ – ಜೀವನ ಸಾಧನೆಗಳ ಸಮೀಕ್ಷೆ.

–ಡಾ. ಶಾಂತಾ ಇಮ್ರಾಪುರ

೩ ಸಂಪುಟಗಳ ಒಟ್ಟು ಬೆಲೆ–ರೂ.೧೦೦೦.೦೦

ಶಿಕ್ಷಣ ಸಂಸ್ಥೆಗಳಿಗೆ ರಿಯಾಯತಿ ಬೆಲೆ ರೂ.೭೫೦.೦೦

ಪ್ರಸಾದ ಪ್ರಕಾಶನ
ಕಲ್ಯಾಣ ನಗರ, ೮ನೇ ಅಡ್ಡರಸ್ತೆ,
ಧಾರವಾಡ – ೫೮೦ ೦೦
ದೂರವಾಣಿ : ೦೮೩೬ – ೨೪೪ ೮೫೭೦